# ಮತ್ಸ್ಯ ಮಹಾಪುರಾಣ

## ಭಾಗ-2

ಪಂ. ಪಂಢರೀನಾಥಾಚಾರ್ಯ ಗಲಗಲಿ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಮತ್ಸ್ಯ ಮಹಾಪುರಾಣ ಭಾಗ-2

ಅನುವಾದ-ಲೇಖಕರು

ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014 ಫ್ಯಾಕ್ಸ್ : 0091-80-26321416

MATSYA MAHAPURANA Part - 2 of Bhagavan Sri Vedavyasa Maharshi, edited and translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 1967

Second Edition : 2004

No. of Pages : xx + 459

No. of Copies : 1,000



Price : Rs. 180 = 00

Printed at : SRI VENKATESHWARA PRINTERS
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE-560 004
Phone : 26573001

೧

# ಪ್ರಸ್ತಾವನೆ

ನಾಲ್ಕುವೇದ, ಆರುಶಾಸ್ತ್ರ, ಹದಿನೆಂಟುಪುರಾಣ. ಇದು ಭಾರತದ ಜ್ಞಾನಭಾಂಡಾರ. ಭಾರತೀಯ ಸಂಸ್ಕೃತಿಯ ರತ್ನಕೋಶ. ಹಿಂದೂಧರ್ಮದ ತವನಿಧಿ. ಸಂಸ್ಕೃತದ ಸಾರಸರ್ವಸ್ವ.

ಇವುಗಳಲ್ಲಿ ನಾಲ್ಕುವೇದಗಳು ಉಚ್ಚವರ್ಣದ ಆಧ್ಯಾತ್ಮಜೀವಿಗಳಿಗೆ ಮಾತ್ರ ಮೀಸಲು, ಆರುಶಾಸ್ತ್ರಗಳು ಪಂಡಿತ ಪ್ರಕಾಂಡರ ಸೊತ್ತು. ಶ್ರೀ ಸಾಮಾನ್ಯನ ಬಾಳನ್ನು ತಿದ್ದಿ, ಬದುಕನ್ನು ಮಿದ್ದಿ, ಬೆಳಕನ್ನು ಬೀರಿ, ದಾರಿತೋರಿ, ಪ್ರಗತಿಪಥದಲ್ಲಿ ಮುನ್ನಡೆಸುವ ಭಾರ ಪುರಾಣಗಳ ಮೇಲೆಯೇ ಇದೆ.

ಪುರಾಣಗಳು ಯಾವ ಜಾತಿಯ ಸೊತ್ತೂ ಅಲ್ಲ, ಹೆಂಗಸರು ಓದಬಾರದೆಂದಿಲ್ಲ. ಹರಿಜನರು ಕೇಳಬಾರದೆಂದಿಲ್ಲ. ಎಲ್ಲರ ಕಿವಿಗೆ ಬೀಳಬೇಕು. ಎಲ್ಲ ಹೃದಯಗಳಿಗೂ ತಿಳಿಯಬೇಕು ಎಂಬ ಉದ್ದೇಶದಿಂದಲೇ ಇವುಗಳ ನಿರ್ಮಾಣ. ಅವುಗಳ ಭಾವ ಸರ್ವರ ಉದ್ಧಾರವೇ ಈ ಪುರಾಣಗಳ ಉದ್ದೇಶ. 'ಸರ್ವೇ ಜನಾಃ ಸುಖಿನೋ ಭವಂತು' ಎಂಬುದೇ ಇವುಗಳ ಆದೇಶ. ಜಾತಿ, ಮತ, ಲಿಂಗ, ಬಣ್ಣ, ನಾಡು, ನುಡಿ ಯಾವ ಕಟ್ಟು ಕಟ್ಟಳೆಯಿಲ್ಲದೆ ಹುಟ್ಟಿದ ಜೀವ ಜಂಗುಳಿಯನ್ನೆಲ್ಲ ದಿವ್ಯಜೀವನದ ಭವ್ಯಭವಿಷ್ಯದೆಡೆಗೆ ಕರೆದೊಯ್ಯುವದೇ ಅವುಗಳ ಹೆಗ್ಗುರಿ.

ಬಾಳೊಂದು ಕಗ್ಗಾಡು. ಅದರ ವಿಷಮವೀಥಿಗಳ ಏರುಪೇರು, ತಿಟ್ಟು ತಗ್ಗುಗಳಲ್ಲಿ ಯಾರ ಬದುಕಿನ ಬಂಡಿಗಳೂ ಒಗ್ಗಾಲಿಯಾಗಿ ಮುಗ್ಗರಿಸದೇ ಉಳಿಯುವುದಿಲ್ಲ. ಆದರೂ ಈ ಎಲ್ಲ ಏಳುಬೀಳು, ಏಟಕಾಟ, ಸಾವುನೋವುಗಳು ಬೇಕಾದಷ್ಟು ಬಂದೆರಗಿದರೂ ಕಂಗೆಡದೆ, ಧೈರ್ಯಬಿಡದೆ ಧ್ಯೇಯದ ಧ್ರುವತಾರೆಯತ್ತ ದೃಷ್ಟಿಯಿಟ್ಟು ಸಹನಾಮೂರ್ತಿಗಳಾಗಿ ಮುಂದುವರಿಯಬೇಕು. ಆ ಮುಕ್ತಿಮಂದಿರದ ಸುಂದರ ನಿಲ್ದಾಣವನ್ನು ತಲುಪಿದ, ಧೀರಚೇತನಗಳ ಜೀವನಯಾತ್ರೆಯ ರೋಮಹರ್ಷಣ ವೃತ್ತಾಂತಗಳನ್ನು ಪುರಾಣಗಳು ಬಿಡಿಸಿಡುತ್ತವೆ. ಅಂಥ ದೀರ್ಘಪಯಣದ ಪಥಿಕರಾದ ನಮ್ಮೆಲ್ಲರ ಬದುಕಿಗೊಂದು ಭರವಸೆಯನ್ನು ಈ ಪುರಾಣಗಳು ಒದಗಿಸುತ್ತವೆ. ನಾವೆಲ್ಲರೂ ಊನರು ಹೀನರು ಎಂಬ ನ್ಯೂನಗಂಡದ ಗಂಡಾಂತರದಿಂದ ಪಾರುಮಾಡಿ 'ತತ್ವಮಸಿ', 'ತದಿವ ತ್ವಮಸಿ' ಆ ಪರಂಜ್ಯೋತಿಯ ಪ್ರತಿಬಿಂಬನೇ ನೀನು ಎಂದು ಆತ್ಮವಿಶ್ವಾಸವನ್ನು ಮೂಡಿಸಿ ಪ್ರತಿಯೊಬ್ಬನಲ್ಲಿಯೂ ಆ ದೈವಭಾವದ ಆವಿರ್ಭಾವ ಯಥಾಯೋಗ್ಯ ಆಗಬಲ್ಲದು ಎಂಬುದನ್ನು ಅನೇಕಾನೇಕ ದೃಷ್ಟಾಂತಗಳಿಂದ ಮನಗಾಣಿಸಿ ಕೊಡುತ್ತವೆ ಈ ಪುರಾಣಗಳು.

ಪೃಥು, ರಾಮ, ಹರಿಶ್ಚಂದ್ರ, ಹನುಮಂತ, ರಂತಿದೇವ, ಮಾಂಧಾತ, ವಸಿಷ್ಠ ವಾಮದೇವರಂಥ ದೇವ, ಮಾನವ, ಮುನಿ, ಮಹಾರಾಜರ ಆದರ್ಶಜೀವನ ದೃಷ್ಟಾಂತಗಳನ್ನು ತೋರಿಸಿ ಉದಾತ್ತ ಜೀವನದ ಧ್ಯೇಯ ಧೋರಣೆಗಳು ಎಂತಿರಬೇಕೆಂಬುದನ್ನು ತಿಳಿಸುತ್ತವೆ. ಸೌಭರಿ, ನಹುಷ, ವಿಶ್ವಾಮಿತ್ರ, ನಲ, ಯಯಾತಿ, ಮಾಂಡವ್ಯ, ಗೌತಮ, ಧರ್ಮರಾಜ ಮುಂತಾದವರ ರೋಮಾಂಚಕ ಇತಿವೃತ್ತಗಳನ್ನು ಬಿತ್ತರಿಸುತ್ತವೆ. ವಿಧಿಯು ವಿಘ್ನವಿಡ್ಡೂರಗಳನ್ನು ಒಡ್ಡಿದಾಗ ಅಥವಾ ದಾರಿ ಜಾರಿದಾಗ

ಕೂಡಲೆ ಎಚ್ಚತ್ತು ತಪ್ಪನ್ನು ತಿದ್ದಿಕೊಂಡು ಮೇಲೆದ್ದು ಸಾವರಿಸಿಕೊಂಡು ಮತ್ತೆ ಸತ್ಪಥದಲ್ಲಿ ಮುಂಬರುವ ಹದಹವಣಗಳೆಂತು ಹೇಗೆ ಎಂಬುದನ್ನೂ ಈ ಪುರಾಣ ಪ್ರಬಂಧಗಳು ತಿಳಿಸಿಕೊಡುತ್ತವೆ.

ಇದರಂತೆ ಪರಿಸರ ಪರಿಸ್ಥಿತಿ ಹಾಗೂ ಪುರಾಣಪುರುಷರು ಎಷ್ಟೇ ಎಚ್ಚರಿಕೆಯ ಗಂಟೆಬಾರಿಸಿದರೂ ಕೇಳದೆ, ಕೇಳುತನದ ಕಾಡುದಾರಿಯಲ್ಲಿ ಥಲಬಲದಿಂದ ದೈತ್ಯ ಧಾವನಗೈದ ವೇನ, ಹಿರಣ್ಯಕಶಿಪು, ರಾವಣ, ಕೀಚಕ, ದುರ್ಯೋಧನ ಮುಂತಾದ ದುರುಳ ದಾನವ ಮಾನವರ ಜೀವನದ ದುರಂತಚಿತ್ರಗಳನ್ನು ಎದ್ದುಕಾಣುವಂತೆ ಚಿತ್ರಿಸಿ ಜನರು ಅಂಥ ಅಪಮಾರ್ಗದಿಂದ ಪರಾವೃತ್ತರಾಗಿ ಸನ್ಮಾರ್ಗಗಾಮಿಗಳಾಗುವಂತೆ ಈ ಪುರಾಣಗಳು ಪ್ರಚೋದಿಸುತ್ತವೆ.

ಇದೇ ರೀತಿಯಾಗಿ ಸೀತೆ, ಸಾವಿತ್ರಿ, ಅನಸೂಯಾ, ಅರುಂಧತೀ, ಚಂದ್ರಮತೀ, ದೇವಹೂತಿ, ಸುನೀತಿ ಮುಂತಾದ ಸತೀಮಣಿಯರ ಉಜ್ವಲಜೀವನಚರಿತ್ರೆಗಳು ನಾರೀಕುಲದ ಗೌರವದ ಗೌರೀಶಿಖರಗಳಾಗಿ ಇಂದಿಗೂ ಮನುಕುಲದ ಮಹಿಳೆಯರಿಗೆಲ್ಲ ಮಾರ್ಗದರ್ಶನಮಾಡಿಸುತ್ತವೆ. ಈ ಎಲ್ಲ ಪುರಾಣಕಾಲದ ಸ್ತ್ರೀ-ಪುರುಷರು ಹಾಕಿದ ಭದ್ರಬುನಾದಿಯಮೇಲೆ ಸುಪ್ರತಿಷ್ಠಿತವಾದುದರಿಂದಲೇ ಭಾರತೀಯ ಜನಜೀವನದ ಶೀಲ, ಚಾರಿತ್ರ್ಯ, ಸದ್ಭಾವ, ಸಜ್ಜನಿಕೆ ಮುಂತಾದ ಸಂಸ್ಕೃತಿಯ ಪದರುಗಳು ಎಷ್ಟೇ ದಾಹ್ಯಾಘಾತಗಳಾದರೂ ಅಳಿಯದೇ ಉಳಿದುಕೊಂಡಿವೆ. ಇತ್ತೀಚೆಗೆ ವೈದೇಶಿಕ ಸಂಸ್ಕೃತಿ, ವಿದ್ಯೆ, ಆಚಾರ ವಿಚಾರಗಳ ಘನಿಷ್ಠ ಸಂಪರ್ಕದ ನೈಕಟ್ಯ ವೈಕಟ್ಯಗಳಿಂದಾಗಿ ಆ ಶೀಲ ಸಚ್ಚಾರಿತ್ರ್ಯದ ಭದ್ರಭಿತ್ತಿಗೆ ಅಲ್ಲಲ್ಲಿ ಬಿರುಕು ಕೊರಕು ಬಿದ್ದುದು ಕಂಡುಬರುತ್ತದೆ.

ಅದಕ್ಕಾಗಿ ಇದೇ ನಾವು ನಿಂತ ನಾಡ ನೆಲದಲ್ಲಿಯೇ ನೆಲಿಸಿ, ನಿಂತು, ನಡೆದು, ನುಡಿದು, ನಲಿದುಲಿದು ಹೋದ ಆ ಮಹಾಪುರುಷರ ಉಜ್ವಲಜೀವನದ ದೇದೀಪ್ಯಮಾನ ಘಟನಾವಳಿಗಳು, ಮಿಂಚಿನ ಕ್ಷಣಗಳು, ಮತ್ತೊಮ್ಮೆ ನಮ್ಮೆಲ್ಲರ ಕಣ್ಣೆದುರು ಸುಳಿದು ತಿಳಿದುಹೋಗುವಂತಾಗಬೇಕು. ಆಗ ಮಾತ್ರ ನಮ್ಮನಮ್ಮತನದ ಮರವುಗೆಟ್ಟ ಅರಿವು ತನ್ನ ಆತುಕ್ಕುಮುಕ್ಕು ಕಳೆದುಕೊಂಡು ಮತ್ತೊಮ್ಮೆ ಬೆಳಗಲಿಕ್ಕೆ ಅನುವಾಗುವದು. ನಾಡಿನ ಈ ನೈತಿಕ ಪುನರುತ್ಥಾನದ ಘನತರಉದ್ದೇಶವನ್ನು ಕಣ್ಣೆದುರು ಇರಿಸಿಗೊಂಡು ದೇವಭಾಷೆಯಾದ ಸಂಸ್ಕೃತದಲ್ಲಿದ್ದ ಆ ಹದಿನೆಂಟೂ ಮಹಾಪುರಾಣಗಳನ್ನು ನಮ್ಮ ನಾಡುನುಡಿಯಾದ ಕನ್ನಡದಲ್ಲಿ ಇಳಿಸುವ ಸಾಹಸವನ್ನು ಕೈ ಕೊಂಡದ್ದಾಗಿದೆ.

ಶ್ಲಿಷ್ಟಕ್ಲಿಷ್ಟವಾದ ಸಂಸ್ಕೃತದ ವಿದ್ವದ್ಗಮ್ಯ ಶೈಲಿಯಲ್ಲಿಯೇ ಹೆಚ್ಚಾಗಿ ಬಿತ್ತರಿಸಲ್ಪಟ್ಟ ಹದಿನೆಂಟು ಪುರಾಣಗಳನ್ನು ಕನ್ನಡಿಸುವ ಕಾರ್ಯ ಸುಲಭ ಸಾಧ್ಯವೇನಲ್ಲ. ಅದರಲ್ಲಿಯೂ ಮೂಲಪುರಾಣ ಪುಸ್ತಕಗಳ ಸರಿಯಾದ ನಿರ್ದುಷ್ಟ ಸಂಶೋಧಿತ ಆವೃತ್ತಿಗಳೂ ಪ್ರಕಟನೆಗಳೂ ದೊರಕುವದು ದುರ್ಲಭವಾಗಿದೆ. ಅದಕ್ಕಾಗಿ ದೇಶದ ನಾನಾಭಾಗಗಳಲ್ಲಿರುವ ಪ್ರಾಚ್ಯಗ್ರಂಥಭಾಂಡಾರಗಳಿಗೆ ಹೋಗಬೇಕಾಗುತ್ತದೆ. ಮತ್ತು ಅಲ್ಲಿಯ ಗ್ರಂಥಾಗಾರ ಅಧಿಕಾರಿಗಳ ನಿಕಟಸಂಪರ್ಕ ಬೆಳೆಸಿ ಅಲ್ಲಿಯ ಸ್ಥಳೀಯ ಪಂಡಿತರ ಸಹಕಾರ ಪಡೆದು ತಾಡವಾಲೆಯ ಗ್ರಂಥಗಳಿಂದ ಪ್ರತಿಮಾಡಿ ತರಬೇಕಾಗುತ್ತದೆ. ಹೀಗೆ ಬೇರೆಬೇರೆ ಗ್ರಂಥಾಲಯಗಳಿಂದ ನಕಲು ಮಾಡಿತಂದ ಎಲ್ಲ ಪ್ರತಿಗಳನ್ನು ಪಂಡಿತಮಂಡಲಿಯ

ಸಹಾಯದಿಂದ ಸಂಶೋಧನಮಾಡಿ ಶುದ್ಧಪ್ರತಿಯನ್ನು ಕಂಡುಕೊಂಡು ಸಿದ್ಧಗೊಳಿಸಿದ ಬಳಿಕವೇ ಭಾಷಾಂತರ ಕಾರ್ಯವನ್ನು ಕೈಕೊಳ್ಳಬೇಕಾಗುವದು. ಆದುದರಿಂದ ಈ ಕಾರ್ಯ ಬಹುದ್ರವ್ಯವ್ಯಯ ಸಾಧ್ಯವೂ, ಬಹುಕಾಲ ಶ್ರಮಸಾಧ್ಯವೂ, ಬಹುಪಂಡಿತರ ಸಹಕಾರೈಕಸಾಧ್ಯವೂ ಆಗಿರುತ್ತದೆ. ಈ ಕ್ರಮದಿಂದ ಪ್ರಯತ್ನಮಾಡಿ ನಾವು ಈಗಾಗಲೇ ಶ್ರೀ ವಿಷ್ಣುಪುರಾಣ, ಕೂರ್ಮಪುರಾಣ, ಬ್ರಹ್ಮವೈವರ್ತಪುರಾಣ, ವರಾಹಪುರಾಣ, ವಾಮನಪುರಾಣ ನಾರದಪುರಾಣ ಮೊದಲಾದ ಮಹಾಪುರಾಣ ಗ್ರಂಥಗಳನ್ನು ಸಂಶೋಧಿಸಿ, ಕನ್ನಡಿಸಿ ಕಳೆದ ವರ್ಷವೇ ಪ್ರಕಟಪಡಿಸಿದ್ದೇವೆ.

ಈಗ ಎಲ್ಲ ದೃಷ್ಟಿಯಿಂದಲೂ ಅತ್ಯುತ್ತಮವಾದ ಮತ್ಸ್ಯಮಹಾಪುರಾಣದ ಸಂಶೋಧನ, ಸರಿಯಾದ ಪಾಠಪರಿಶೋಧನ, ಶುದ್ಧ ಪಾಠನಿರ್ಧಾರಣಾದಿಗಳಿಂದ ಮೂಲ ಮತ್ಸ್ಯಪುರಾಣವನ್ನು ಬಹುಪರಿಶ್ರಮದಿಂದ ಮುದ್ರಣಕ್ಕೆ ಸಿದ್ಧಗೊಳಿಸಲಾಗಿದೆ.

ಈ ಪುರಾಣ ಪ್ರತಿಗಳನ್ನು ಸಂಶೋಧಿಸುವಾಗ ಕಲಕತ್ತೆಯ ವಂಗವಾಸಿ ಪ್ರೆಸ್ಸಿನವರು ಮುದ್ರಿಸಿದ ಮತ್ಸ್ಯಪುರಾಣ ಮತ್ತು ಪುಣೆಯ ಆನಂದಾಶ್ರಮದವರು ಪ್ರಕಟಿಸಿದ ಮತ್ಸ್ಯಪುರಾಣ ಹಾಗೂ ಕಲಕತ್ತೆಯ ಕ್ಲಾಯ್ವರೋಡಿನಲ್ಲಿ ಶ್ರೀ ಮನಸುಖರಾವ ಮೋರ ಎಂಬುವರು ಇತ್ತೀಚೆಗೆ ಪ್ರಕಟಿಸಿದ ಮತ್ಸ್ಯಪುರಾಣ ಮತ್ತು ಮೈಸೂರ ಅರಮನೆಯ ಪ್ರಕಟಣೆ ಮುಂತಾದ ಮುದ್ರಿತ ಪ್ರತಿಗಳನ್ನೂ, ಐದು ಹಸ್ತಲಿಖಿತ ಪ್ರತಿಗಳನ್ನೂ ಪಂಡಿತ ಮಂಡಲಿಯ ಸಹಾಯದಿಂದ ಸಂಶೋಧನೆ ಮಾಡಲಾಯಿತು. ಇವುಗಳಲ್ಲಿ ವಂಗವಾಸಿ ಆವೃತ್ತಿ ಮತ್ತು ಆನಂದಾಶ್ರಮದ ಆವೃತ್ತಿಗಳಲ್ಲಿ ಹಲಕೆಲವು ಪಾಠಾಂತರಗಳು ಇದ್ದರೂ ವಿಶೇಷ ವ್ಯತ್ಯಾಸವಿಲ್ಲ. ಆದರೆ ಆನಂದಾಶ್ರಮದ ಪ್ರತಿಯಲ್ಲಿ ಕೊನೆಗೆ ಕಂಡುಬರುವ ಪುರಾಣ ಶ್ರವಣದ ಫಲ ಶ್ರುತಿ ವಿಭಾಗವು ವಂಗವಾಸಿ ಪ್ರಕಟಣೆಯಲ್ಲಿ ಇರುವುದಿಲ್ಲ.

ನಾವು ಸಂಗ್ರಹಿಸಿದ ತಾಡವಾಲೆಯ ಹಸ್ತಲಿಖಿತ ಮತ್ಸ್ಯಪುರಾಣಗಳಲ್ಲಿ ಕುಂಭಕೋಣಂ ನರಹರ ಮೂರ್ತಿಯವರ *'ಕ'* ಪ್ರತಿ. ಗಾಲವ ಗ್ರಂಥ ಭಾಂಡಾರದ *'ಗ'* ಪ್ರತಿ, ಹಿಂದಿನ ರಾಮದುರ್ಗ ಸಂಸ್ಥಾನದ ಗ್ರಂಥಾಲಯದರ ಪ್ರತಿ, ನಾಸಿಕದ ದಶಗ್ರಂಥಿ ಬಾಪೂ ದೀಕ್ಷಿತರ *'ನ'* ಪ್ರತಿ, ಕಲಕತ್ತೆಯ ಕೀರ್ತಿಶೇಷ ಯತೀಂದ್ರ ವಿಮಲ ಚಕ್ರವರ್ತಿಯವರ ಮನೆಗ್ರಂಥಾಲಯದಲ್ಲಿನ *'ಯ'* ಪ್ರತಿಗಳು ಮುಖ್ಯವಾಗಿವೆ. ಇದಲ್ಲದೆ ಬೇರೆ ಬೇರೆ ಮಾಧ್ವ ಪಂಡಿತರಿಂದ ಮೂರು ಹಸ್ತಲಿಖಿತ ಮತ್ಸ್ಯಪುರಾಣ ಪ್ರತಿಗಳು ನಮಗೆ ದೊರಕಿದ್ದವು. ಅವುಗಳಲ್ಲಿ ದಕ್ಷಿಣ ಕನ್ನಡದ ಒಂದು ತುಳು ಪ್ರತಿಯು ಶುದ್ಧವಿದ್ದರೂ ಆದಿ ಅಂತ್ಯ ಶೂನ್ಯವಾಗಿ ನಡುವಿನ ೧೩೪ನೇ ಅಧ್ಯಾಯ ದಿಂದ ೨೧೦ನೇ ಅಧ್ಯಾಯದವರೆಗೆ ಮಾತ್ರವಿದೆ. ಕೇಶವ ಕುಂದರಗಿ ಎನ್ನುವವರ ಮನೆಯಲ್ಲಿಯ ಪ್ರತಿಯ ಮೇಲೆ ಮಳೆನೀರು ಬಿದ್ದು ಅಕ್ಷರಗಳೆಲ್ಲವೂ ಸಾರಿಸಿದಂತಾಗಿ ಓದಲಿಕ್ಕೆ ಬಾರದಂತಾಗಿದೆ. ಆದುದರಿಂದ ಈ ಮೂರು ಪ್ರತಿಗಳನ್ನು ಬಿಟ್ಟು ಉಳಿದ ಐದು ಹಸ್ತಪ್ರತಿಗಳನ್ನೂ ನಾಲ್ಕು ಮುದ್ರಿತ ಪ್ರತಿಗಳನ್ನೂ ಆಧರಿಸಿ ಶೋಧಿಸಿ ಶುದ್ಧಪ್ರತಿಯನ್ನು ಸಿದ್ಧಗೊಳಿಸಲಾಯಿತು.

ಒಟ್ಟು ಈ ಮತ್ಸ್ಯಪುರಾಣವು ೨೯೨ ಅಧ್ಯಾಯವಿರುತ್ತದೆ. ಹಾಗೂ ಕೊನೆಯಲ್ಲಿ ಮತ್ಸ್ಯಮಹಾಪುರಾಣ ಭಾಗ-೧, ಭಾಗ-೨ರ ನೀತಿವಾಕ್ಯ ಮತ್ತು ಸುಭಾಷಿತಗಳು ಮುದ್ರಣವಾಗಿದೆ. ಒಟ್ಟು ಪುರಾಣಗಳ ಕಾಲ ಮೀಮಾಂಸೆಯನ್ನು, ವಿಷ್ಣು, ವರಾಹ,

ವಾಮನ ಪುರಾಣಗಳಿಗೆ ನಾವು ಬರೆದ ಮುನ್ನುಡಿಯಲ್ಲಿ ಮಾಡಲಾಗಿದ್ದು ಇಲ್ಲಿ ಮತ್ತೆ ವಿಷಯವನ್ನು ಪುನರುಕ್ತಿ ಮಾಡುವದಿಲ್ಲ.

ಸಾಮಾನ್ಯವಾಗಿ ಹದಿನೆಂಟು ಪುರಾಣಗಳೂ ಭಗವದವತಾರಿಗಳಾದ ಶ್ರೀ ವೇದವ್ಯಾಸರಿಂದ ರಚಿತವಾಗಿರುತ್ತವೆ. ಮುಂದೆ ಎರಡು ಮೂರು ಸಲ ಈ ಪುರಾಣ ಗ್ರಂಥಗಳ ಪರಿಷ್ಕರಣ ನಡೆದಿದೆ. ಅದನ್ನೇ ಪಾಶ್ಚಾತ್ಯ ಸಂಶೋಧಕರು ಪುರಾಣಗಳ ನಿರ್ಮಾಣ ಕಾಲ ಎಂದು ಪರಿಗ್ರಹಿಸಿದ್ದು ಶುದ್ಧ ತಪ್ಪು. ಅವರು ಹೇಳುವಂತೆ ಎಲ್ಲ ಪುರಾಣಗಳಲ್ಲಿಯೂ ಪ್ರಕ್ಷೇಪ ವಿಕ್ಷೇಪಗಳಾದದ್ದೇನೋ ನಿಜ. ಅದೀಗ ವಿಂಗಡಿಸಲಿಕ್ಕೆ ದುಸ್ತರದಷ್ಟು ವಿಕಟವಾಗಿ ನಡೆದಿದೆ. ಪಾಶ್ಚಾತ್ಯ ಹಾಗೂ ಆಧುನಿಕ ಪೌರ್ವಾತ್ಯ ವಿಮರ್ಶಕರು ಪುರಾಣಗಳಲ್ಲಿ ಬರುವ ಧರ್ಮಶಾಸ್ತ್ರ ಭಾಗವೆಲ್ಲವೂ ಪ್ರಕ್ಷಿಪ್ತ ಎಂದು ಹೇಳುವದು ಪೂರ್ವಗ್ರಹ ದೂಷಿತವೇ ಸರಿ. "ಪುರಾಣೇ ಧರ್ಮ ನಿರ್ಣಯಃ" ಎಂಬ ಉಕ್ತಿಯನ್ನು ಅವರು ಗಮನಿಸಿದಂತೆ ಇಲ್ಲ. ಧರ್ಮಾಧರ್ಮ ನಿರ್ಣಯವೂ ಒಂದು ಪುರಾಣದ ಅಂಗ. ಆದುದರಿಂದಲೇ ಪ್ರಾಚೀನ ಧರ್ಮಶಾಸ್ತ್ರಕಾರರು ಪುರಾಣಗ್ರಂಥಗಳಿಂದ ಧಾರಾಳವಾಗಿ ಧರ್ಮಾನುಶಾಸನದಂತಿದ್ದ ಅನೇಕ ಪದ್ಯಗಳನ್ನು ಎತ್ತಿ ಉದಾಹರಿಸಿ ಧರ್ಮ ನಿರ್ದೇಶನವನ್ನು ಮಾಡಿದ್ದುಂಟು. ಆದುದರಿಂದ ಸ್ಮಾರ್ತಭಾಗ ಬಂದಿದ್ದರಿಂದ ಪುರಾಣಗಳು ಅರ್ವಾಚೀನ ಎಂದು ಹೇಳುವದು ಸೂಕ್ತವಲ್ಲ. ಸಾಮಾನ್ಯವಾಗಿ ಮಹಾಭಾರತಕ್ಕಿಂತ ಮುಂಚೆಯೇ ಭಗವಾನ್ ಶ್ರೀ ವೇದವ್ಯಾಸರಿಂದ ಹದಿನೆಂಟು ಪುರಾಣಗಳೂ ರಚಿತವಾಗಿದ್ದವು.

"ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ ॥
ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಮ್ ॥

ಸತ್ಯವತಿಯ ಪುತ್ರರಾದ ಬಾದರಾಯಣರು ಅರ್ಥಾತ್ ವೇದವ್ಯಾಸರು ಪುರಾಣವಿಷಯಗಳ ಉಪಬೃಂಹಣರೂಪವಾದ ಮಹಾಭಾರತವನ್ನು ರಚಿಸಿದರು ಎಂದು ಸ್ಪಷ್ಟ ಪ್ರಮಾಣವಿದೆ. ಆದುದರಿಂದ ಕ್ರಿಸ್ತಪೂರ್ವ ಎರಡುಸಾವಿರವರ್ಷಗಳ ಹಿಂದೆಯೇ ಎಲ್ಲ ಹದಿನೆಂಟು ಪುರಾಣಗಳ ಮೂಲ ರೂಪವು ನಿರ್ಮಾಣಗೊಂಡು ಕಾಲಾಂತರದಲ್ಲಿ ಪರಿವರ್ತನಗೊಂಡು ಈಗ ಈ ರೂಪಕ್ಕೆ ಇಳಿದಿರುತ್ತದೆ.

ಪ್ರಕೃತ ಮತ್ಸ್ಯಪುರಾಣವು ಹದಿನಾಲ್ಕು ಸಾವಿರ ಶ್ಲೋಕಾತ್ಮಕವಾಗಿದೆ. ಇದರ ವರ್ಣ್ಯವಿಷಯವನ್ನು ಇದೇ ಪುರಾಣದಲ್ಲಿ,

"ಶ್ರುತೀನಾಂ ಯತ್ರ ಕಲ್ಪಾದೌ ಪ್ರವೃತ್ತ್ಯರ್ಥಂ ಜನಾರ್ದನಃ ।
ಮತ್ಸ್ಯರೂಪೇಣ ಮನವೇ ನರಸಿಂಹಸ್ಯ ವರ್ಣನಮ್ ॥

ಅಧಿಕೃತ್ಯಾಽ ಬ್ರವೀತ್ ಸಪ್ತಕಲ್ಪವೃತ್ತಂ ಮುನೀಶ್ವರಾಃ ।
ತನ್ಮಾತ್ಸ್ಯಮಿತಿ ಜಾನೀಧ್ವಂ ಸಹಸ್ರಾಣಿ ಚತುರ್ದಶ ॥

ಕಲ್ಪದ ಆದಿಕಾಲದಲ್ಲಿ ವೇದಗಳ ಉದ್ಧಾರಕ್ಕಾಗಿ ಅವತಾರಮಾಡಿದ ಮತ್ಸ್ಯರೂಪಿ ಶ್ರೀಹರಿಯು ಶ್ರೀ ನರಸಿಂಹದೇವರ ಮಹಾಮಹಿಮೆಯನ್ನೂ ಸಪ್ತಕಲ್ಪದ ವೃತ್ತಾಂತವನ್ನೂ ಬಣ್ಣಿಸಿದ್ದಾನೆ. ಹದಿನಾಲ್ಕು ಸಾವಿರ ಪದ್ಯಗಳುಳ್ಳ ಆ ಪುರಾಣವೇ ಮತ್ಸ್ಯಪುರಾಣವೆಂದು

ತಿಳಿಯಿರಿ'' ಎಂದು ಇದರ ವಿಷಯ, ವ್ಯಾಪ್ತಿ, ವಿಸ್ತಾರಗಳನ್ನು ಅರುಹಲಾಗಿದೆ. ನಾರದಪುರಾಣದಲ್ಲಿ ಮತ್ಸ್ಯಪುರಾಣದ ವಿಷಯಾನುಕ್ರಮಣಿಕೆಯ ಪಟ್ಟಿಯೊಂದನ್ನು ಕೊಟ್ಟಿದ್ದಾರೆ. ನಾರದೋಕ್ತಮತ್ಸ್ಯ ಪುರಾಣ ವಿಷಯಸೂಚಿಗೂ ಈಗ ಉಪಲಬ್ಧವಿರುವ ಮತ್ಸ್ಯಪುರಾಣದ ವಿಷಯಾನುಕ್ರಮಣಿಕೆಗೂ ಬಹುತರ ಹೊಂದಿಕೆ ಇದ್ದರೂ ಅಲ್ಲಲ್ಲಿ ಕೊಂಚ ವ್ಯತ್ಯಾಸವೂ ಇದೆ.

ಅಥ ಮಾತ್ಸ್ಯಂ ಪುರಾಣಂ ತೇ ಪ್ರವಕ್ಷ್ಯೇ ದ್ವಿಜಸತ್ತಮ ।
ಯತ್ರೋಕ್ತಂ ಸತ್ಯಕಲ್ಪಾನಾಂ ವೃತ್ತಂ ಸಂಕ್ಷಿಪ್ಯ ಭೂತಲೇ ॥

ವ್ಯಾಸೇನ ವೇದವಿದುಷಾ ನರಸಿಂಹೋಪವರ್ಣನಮ್ ।
ಉಪಕ್ರಮ್ಯ ತದುದ್ದಿಷ್ಟಂ ಚತುರ್ದಶ ಸಹಸ್ರಕಮ್ ॥

ಮನುಮತ್ಸ್ಯಸುಸಂವಾದೋ ಬ್ರಹ್ಮಾಂಡವರ್ಣನಂ ತತಃ ।
ಬ್ರಹ್ಮದೇವಾಸುರೋತ್ಪತ್ತಿಃ ಮಾರುತೋತ್ಪತ್ತಿರೇವ ಚ ॥

ಮದನದ್ವಾದಶೀ ತದ್ವಲ್ಲೋಕಪಾಲಾಭಿಪೂಜನಮ್
ಮನ್ವಂತರ ಸದುದ್ದೇಶೋ ವೈನ್ಯರಾಜಾಭಿಷೇಚನಮ್ ॥

ಸೂರ್ಯವೈವಸ್ವತೋತ್ಪತ್ತಿರ್ಬುಧಸಂಗಮನಂ ತಥಾ
ಪಿತೃವಂಶಾನುಕಥನಂ ಶ್ರಾದ್ಧಕಾಲಸ್ತಥೈವ ಚ

ಪಿತೃತೀರ್ಥಪ್ರಚಾರಶ್ಚ ಸೋಮೋತ್ಪತ್ತಿಸ್ತಥೈವ ಚ
ಕೀರ್ತನಂ ಸೋಮವಂಶಸ್ಯ ಯಯಾತಿ ಚರಿತಂ ತಥಾ

ಕಾರ್ತವೀರ್ಯಸ್ಯ ಚರಿತಂ ಶಿಷ್ಟಂ ವಂಶಾನುಕೀರ್ತನಮ್
ಭೃಗುಶಾಪಸ್ತಥಾ ವಿಷ್ಣೋರ್ದಶಧಾ ಜನ್ಮ ಚ ಕ್ಷಿತೌ ॥

ಕೀರ್ತನಂ ಪುರುವಂಶಸ್ಯ ವಂಶೋ ಹೌತಾಶನಃ ಪರಃ ।
ಕ್ರಿಯಾಯೋಗಃ ತತಃ ಪಶ್ಚಾತ್ ಪುರಾಣಪರಿಕೀರ್ತನಮ್ ॥

ವ್ರತಂ ನಕ್ಷತ್ರಪುರುಷಂ ಮಾರ್ತಂಡಶಯನಂ ತಥಾ ।
ಕೃಷ್ಣಾಷ್ಟಮೀ ವ್ರತಂ ತದ್ವದ್ರೋಹಿಣೀಶಯನಂ ತಥಾ ॥

ತಡಾಗ ವಿಧಿ ಮಾಹಾತ್ಮ್ಯಂ ಪಾದಪೋತ್ಸರ್ಗ ಏವ ಚ ।
ಸೌಭಾಗ್ಯ ಶಯನಂ ತದ್ವದಗಸ್ತ್ಯ ವ್ರತಮೇವ ಚ ॥

ತಥಾಽನಂತ ತೃತೀಯಾ ಯಾ ರಸಕಲ್ಯಾಣಿನೀ ವ್ರತಮ್ ।
ತಥೈವಾನಂದ ಕಾರ್ಯಶ್ಚ ವ್ರತಂ ಸಾರಸ್ವತಂ ಪುನಃ ॥

ಉಪರಾಗಾಭಿಷೇಕಶ್ಚ ಸಪ್ತಮೀಶಯನಂ ತಥಾ ।
ಭೀಮಾಖ್ಯಾದ್ವಾದಶೀ ತದ್ವದನಂಗಶಯನಂ ತಥಾ ॥

ಅಶೂನ್ಯಶಯನಂ ತದ್ವತ್ ತಥೈವಾಂಗಾರಿಕ ವ್ರತಮ್ ।
ಸಪ್ತಮೀ ಸಪ್ತಕಂ ತದ್ವದ್ವಿದ್ಧೈಕದ್ವಾದಶೀವ್ರತಮ್ ॥

ಮೇರು ಪ್ರದಾನಂ ದಶಧಾ ಗ್ರಹ ಶಾಂತಿಸ್ತಥೈವ ಚ ।
ಗ್ರಹಸ್ವರೂಪಕಥನಂ ತಥಾ ಶಿವ ಚತುರ್ದಶೀ ॥

ತಥಾ ಸರ್ವ ಫಲತ್ಯಾಗಃ ಸೂರ್ಯವಾರವ್ರತಂ ತಥಾ ।
ಸಂಕ್ರಾಂತಿ ನಪನಂ ತದ್ವದ್ವಿಭೂತಿ ದ್ವಾದಶೀ ವ್ರತಮ್ ॥

ಷಷ್ಠಿವ್ರತಾನಾಂ ಮಾಹಾತ್ಮ್ಯಂ ದ್ವೀಪಲೋಕಾನುವರ್ಣನಮ್ ।
ತಥಾಂತರಿಕ್ಷಚಾರಶ್ಚ ಧ್ರುವಮಾಹಾತ್ಮ್ಯಮೇವ ಚ ॥

ಭುವನಾನಿ ಸುರೇಂದ್ರಾಣಾಂ ತ್ರಿಪುರೋದ್ಯೋತನಂ ತಥಾ ।
ಪಿತೃಪ್ರವರ ಮಾಹಾತ್ಮ್ಯಂ ಬ್ರಹ್ಮದೇವಾನುಕೀರ್ತನಂ ॥

ಪಾರ್ವತೀ ಸಂಭವಸ್ತದ್ವತ್ತಥಾ ಶಿವ ತಪೋವನಂ ।
ಅನಂಗ ದೇಹದಾಹಶ್ಚ ರತಿಶೋಕಸ್ತಥೈವಚ ॥

ಗೌರೀ ತಪೋವನಂ ತದ್ವತ್ ಶಿವೇನಾಥ ಪ್ರಸಾದನಂ ।
ಪಾರ್ವತೀ ಋಷಿ ಸಂವಾದಃ ತಥೈವೋದ್ವಾಹ ಮಂಗಲಮ್ ॥

ಕುಮಾರ ಸಂಭವಸ್ತದ್ವತ್ ಕುಮಾರ ವಿಜಯಸ್ತಥಾ ।
ತಾರಕಸ್ಯ ವಧೋ ಘೋರೋ ನರಸಿಂಹೋಪವರ್ಣನಮ್ ॥

ಪದ್ಮೋದ್ಭವವಿಸರ್ಗಸ್ತು ತಥೈವಾಂಧಕಶಾತನಮ್ ।
ವಾರಾಣಸ್ಯಾಸ್ತು ಮಾಹಾತ್ಮ್ಯಂ ನರ್ಮದಾಯಾಸ್ತಥೈವ ಚ ॥

ಪ್ರವರಾನುಕ್ರಮಸ್ತದ್ವತ್ ಪಿತೃಗಾಥಾನುಕೀರ್ತನಮ್ ।
ತಥೋಭಯಮುಖೀದಾನಂ ದಾನಂ ಕೃಷ್ಣಾಜಿನಸ್ಯ ಚ ॥

ತತಃಸಾವಿತ್ರ್ಯುಪಾಖ್ಯಾನಂ ರಾಜಧರ್ಮಸ್ತಥೈವ ಚ
ವಿವಿಧೋತ್ಪಾತ ಕಥನಂ ಗ್ರಹ ಶಾಂತಿಸ್ತಥೈವ ಚ ॥

ಯಾತ್ರಾ ನಿಮಿತ್ತ ಕಥನಂ ಸ್ವಪ್ನಮಂಗಲಕೀರ್ತನಮ್
ವಾಮನಸ್ಯ ತು ಮಾಹಾತ್ಮ್ಯಂ ವಾರಾಹಸ್ಯ ತತಃ ಪರಮ್ ॥

ಸಮುದ್ರಮಥನಂ ತದ್ವತ್ ಕಾಲಕೂಟಾಭಿಶಾತನಮ್ ॥
ದೇವಾಸುರವಿಮರ್ದಶ್ಚ ವಾಸ್ತು ವಿದ್ಯಾ, ತಥೈವ ಚ

ಪ್ರತಿಮಾಲಕ್ಷಣಂ ತದ್ವದ್ದೇವತಾಸ್ಥಾಪನಂ ತಥಾ
ಪ್ರಾಸಾದಲಕ್ಷಣಂ ತದ್ವನ್ಮಂಡಪಾನಾಂ ಚ ಲಕ್ಷಣಂ ॥

ಭವಿಷ್ಯರಾಜ್ಞಾಮುದ್ದೇಶೋ ಮಹಾದಾನಾನುಕೀರ್ತನಂ
ಕಲ್ಪಾನಾಂ ಕೀರ್ತನಂ ತದ್ವತ್ ಪುರಾಣೇऽಸ್ಮಿನ್ ಪ್ರಕೀರ್ತಿತಮ್ ॥

ಸತ್ಯಕಲ್ಪ ವೃತ್ತಾಂತವನ್ನು ಬಿತ್ತರಿಸುವ ಮತ್ಸ್ಯಪುರಾಣದ ವಿಷಯಗಳನ್ನು ಸಂಕ್ಷಿಪ್ತವಾಗಿ ಹೇಳುತ್ತೇನೆ.

ಶ್ರೀ ವೇದವ್ಯಾಸರು ಈ ಮತ್ಸ್ಯಪುರಾಣದಲ್ಲಿ ನರಸಿಂಹ ದೇವರ ವರ್ಣನೆ ಯಿಂದ ಉಪಕ್ರಮಿಸಿ ಹದಿನಾಲ್ಕು ಸಾವಿರ ಪದ್ಯಗಳಲ್ಲಿ ಅನೇಕ ವಿಷಯಗಳನ್ನು ಬಿತ್ತರಿಸಿದ್ದಾರೆ. ಮನುಮಹಾರಾಜ ಹಾಗೂ ಮತ್ಸ್ಯಾವತಾರಿ ಶ್ರೀ ಹರಿಯ ನಡುವಿನ ಸಂಭಾಷಣಾರೂಪವಾದ ಈ ಪುರಾಣದಲ್ಲಿ ಬ್ರಹ್ಮಾಂಡ ವರ್ಣನೆ, ಬ್ರಹ್ಮದೇವರ ಉತ್ಪತ್ತಿ, ನಂತರ ಅಸುರರ ಹಾಗೂ ಮರುದ್ಗಣದ ಉತ್ಪತ್ತಿ, ಮದನದ್ವಾದಶೀ ವ್ರತ, ಲೋಕಪಾಲಕರ ಪೂಜಾವಿಧಾನ, ಮನ್ವಂತರ ವರ್ಣನೆ, ಪೃಥುವಿನ ಪಟ್ಟಾಭಿಷೇಕ, ಸೂರ್ಯಮನು ವೈವಸ್ವತ ಮನುಗಳ ಉತ್ಪತ್ತಿ, ಬುಧನ ವೃತ್ತಾಂತ, ಪಿತೃವಂಶಕಥನ, ಶ್ರಾದ್ಧಕಾಲ, ಪಿತೃತೀರ್ಥ ಪ್ರಚಾರ, ಚಂದ್ರನ ಉತ್ಪತ್ತಿ, ಚಂದ್ರ ವಂಶದ ಬಣ್ಣನೆ, ಯಯಾತಿಯಚರಿತ್ರ, ಕಾರ್ತವೀರ್ಯನಚರಿತ್ರ, ಭೃಗುವಿನಶಾಪ, ವಿಷ್ಣುವಿನ ದಶಾವತಾರ, ಪುರುವಂಶ ವೃತ್ತಾಂತ, ಮತ್ತೊಂದು ಅಗ್ನಿಯ ವಂಶವಿಸ್ತಾರ, ಕ್ರಿಯಾಯೋಗ, ಪುರಾಣ ಪರಿಚಯ, ನಕ್ಷತ್ರ ಪುರುಷವ್ರತ, ಮಾರ್ತಂಡಶಯನ, ಕೃಷ್ಣಾಷ್ಟಮೀ, ರೋಹಿಣೀ ಶಯನ, ಕೆರೆ ಕಾಲುವೆ ಕಟ್ಟಿಸುವ ವಿಧಾನ. ವೃಕ್ಷಾರೋಪಣ ವಿಧಿ, ಸೌಭಾಗ್ಯಶನಯವ್ರತ, (ಗಸ್ತ) ವ್ರತ, ಅನಂತ ತೃತಿಯಾ, ಸಾರಸ್ವತವ್ರತ, ಗ್ರಹಣಸನ್ನಾ, ಸಪ್ತಮೀಶಯನ, ಭೀಮದ್ವಾದಶೀ, ಅನಾಗಶಯನವ್ರತ, ಅಶೂನ್ಯಶನಯ, ಅಂಗಾರಕವ್ರತ, ಏಳುಸಪ್ತಮೀವ್ರತ, ವಿದ್ಧೈಕಾದಶೀ ದ್ವಾದಶೀವ್ರತ, ಮೇರುದಾನ, ದಶಾಗ್ರಹಶಾಂತಿ, ಗ್ರಹಸ್ವರೂಪಕಥನ, ಶಿವಚತುರ್ದಶೀ, ಸರ್ವಫಲತ್ಯಾಗ, ಸೂರ್ಯವಾರ ವ್ರತ, ಸಂಕ್ರಾಂತಿ ಸ್ನಾನವಿಧಿ, ವಿಭೂತಿದ್ವಾದಶೀ ವ್ರತ, ಷಷ್ಠೀವ್ರತಗಳ ಮಹಿಮೆ, ದೇವತೆಗಳ ಭುವನಗಳು, ಪಿತೃಪ್ರವರ ಮಾಹಾತ್ಮ್ಯ, ಪಾರ್ವತಿಯ ಉತ್ಪತ್ತಿ ಶಇವತಪೋವನ, ಅನುಗದೇಹದಾಹ, ರತಿವಿಲಾಪ, ಗೌರೀತಪೋವನ, ಶಿವನಿಂದ ಪ್ರಸಾದನ, ಪಾರ್ವತೀ ಋಷಿ ಸಂವಾದ, ಪಾರ್ವತೀಪರಮೇಶ್ವರ ವಿವಾಹ ಮಂಗಲ, ಕುಮಾರನ ಉತ್ಪತ್ತಿ, ಸ್ಕಂದನ ವಿಜಯ, ತಾರಕಾಸುರ ಸಂಹಾರ, ನರಸಿಂಹಮಾಹಾತ್ಮ್ಯ ವರ್ಣನ, ಪುಷ್ಕರಪ್ರಾದುರ್ಭಾವ, ಪುಷ್ಕರ ಪ್ರಾದುರ್ಭಾವ ಅಂಧಕಾಸರ ನಿಗ್ರಹ, ಕಾಶಿಯ ಮಾಹಾತ್ಮೆ, ನರ್ಮದೆಯ ಮಹಿಮೆ, ಗೋತ್ರಪ್ರವರ ವಿವರಣೆ, ಪಿತೃಗಾಥಾ, ಉಭಯಮುಖೀಗೋದಾನ, ಕೃಷ್ಣಾಜಿನ ದಾನಾದಿ ವಿಧಿಫಲ ಕಥನ, ಸಾವಿತ್ರೀ ಉಪಾಖ್ಯಾನ, ರಾಜಧರ್ಮ, ವಿವಿಧ ಉತ್ಪಾತ ಕಥನ, ಗ್ರಹಶಾಂತಿ, ಪ್ರಯಾಣ ಶಕುನ ವಿವೇಚನ, ಕನಸುಗಳ ಶುಭಾಶುಭ ಫಲನಿರೂಪಣ,

ವಾಮನಾವತಾರದ ವರ್ಣನೆ, ವರಾಹಾವತಾರ ಮಾಹಾತ್ಮ್ಯ, ಸಮುದ್ರಮಥನ ವೃತ್ತಾಂತ, ಕಾಲಕೂಟ ಭಕ್ಷಣ, ದೇವದೈತ್ಯಯುದ್ಧ, ವಾಸ್ತುವಿದ್ಯಾ, ಪ್ರತಿಮೆಗಳ ಲಕ್ಷಣ, ದೇವತಾ ಮೂರ್ತಿಗಳ ಪ್ರತಿಷ್ಠೆ, ಪ್ರಾಸಾದಗಳ ಲಕ್ಷಣ, ಮಂಡಪಗಳ ಲಕ್ಷಣ, ಭವಿಷ್ಯಕಾಲದ ರಾಜರ ವಂಶಾನುಕೀರ್ತನ, ಮಹಾದಾನಗಳ ವಿಧಿವಿಧಾನ, ಕಲ್ಪಗಳ ಕೀರ್ತನ, ಮಹಾದಾನಗಳ ವಿಧಿವಿಧಾನ, ಕಲ್ಪಗಳ ಕೀರ್ತನೆ ಇವಿಷ್ಟು ವಿಷಯಗಳನ್ನು ಇಲ್ಲಿ ವಿವರಿಸಲಾಗಿದೆ.

ಮೂಲತಃ ಮತ್ಸ್ಯಪುರಾಣವು ಒಂದು ವೈಷ್ಣವ ಪುರಾಣವಾಗಿದೆ. ಇದನ್ನು ಹೇಳಿದವನು ವಿಷ್ಣುವಿನ ಅವತಾರನಾದ ಮತ್ಸ್ಯನೇ. ಮತ್ತು ಈ ಪುರಾಣದಲ್ಲಿ ಮುಖ್ಯ ಪ್ರತಿಪಾದ್ಯವಾದ ವಿಷಯ ನರಸಿಂಹನ ವರ್ಣನೆ ''ಮತ್ಸ್ಯ ರೂಪೇಣ ಮನವೇ ನರಸಿಂಹಸ್ಯ ವರ್ಣನಮ್'' ಎಂದು ಹೇಳಲಾಗಿದೆ (೫೦-೫೩) ನಾರದಪುರಾಣ ಸೂಚಿಯಲ್ಲಿಯೂ ''ವ್ಯಾಸೇನ ವೇದವಿದುಷಾ ನರಸಿಂಹೋಪ ವರ್ಣನಮ್'' ಎಂದು ಮೊಟ್ಟಮೊದಲೇ ಈ ಪುರಾಣದ ಉದ್ದೇಶದ ನಿರ್ದೇಶನವನ್ನು ಮಾಡಲಾಗಿದೆ.

ಈ ಮತ್ಸ್ಯಮಹಾಪುರಾಣದ ಪ್ರಾರಂಭದಲ್ಲಿ ಮನುಮಹಾರಾಜನು ಸಮುದ್ರದ ಒಡಲನ್ನೆಲ್ಲ ವ್ಯಾಪಿಸಿ ನಿಂತ ಮೀನ ಮೂರ್ತಿಯನ್ನು ಕಂಡು ''ನೀನು ಸಾಕ್ಷಾತ್ ವಿಷ್ಣುವೇ ಸರಿ. ಆವನ ಹೊರತು ಬೇರೆ ಯಾರಿಗೆ ಇಂಥ ವ್ಯಾಪ್ತಿ ಉಂಟು ?'' ಇಪ್ಪತ್ತು ಯೋಜನ ವಿಸ್ತಾರವಾದ ಶರೀರವು ವಿಷ್ಣುವಿನ ಹೊರತು ಬೇರೆ ಯಾರಿಗೂ ಇಲ್ಲ.

''ಅಥವಾ ವಾಸುದೇವಸ್ತ್ವಮನ್ಯ ಈದೃಕ್ಕಥಂ ಭವೇತ್'' ।
ಯೋಜನಾಯತವಿಂಶತ್ಯಾ ಕಸ್ಯ ತುಲ್ಯಂ ವಪುರ್ಭವೇತ್ ।

ಎಂದು ನುಡಿದು ವಿಷ್ಣುವಿಗೇ ಇಂಥ ಅಸಾಧಾರಣ ಸಾಮರ್ಥ್ಯ ಉಂಟೆಂದು ನಿರ್ಣಯಿಸಿದ್ದಾನೆ.

ಇದರಂತೆ ಒಂಬತ್ತನೆಯ ಅಧ್ಯಾಯದಲ್ಲಿ

ಏತೇ ಯುಗಸಹಸ್ರಾಂತೇ ವಿನಶ್ಯಂತಿ ಪುನಃ ಪುನಃ ।
ಬ್ರಹ್ಮಾದ್ಯಾ ವಿಷ್ಣು ಸಾಯುಜ್ಯಂ ಯಾತಾ ಯಾಸ್ಯಂತಿ ವೈ ದ್ವಿಜಾಃ॥

ಯುಗಸಹಸ್ರಗಳ ಕೊನೆಗೆ ನಡೆಯುವ ಪ್ರಳಯದಲ್ಲಿ ಬ್ರಹ್ಮಾದಿ ದೇವತೆ ಗಳೆಲ್ಲರೂ ಮತ್ತೆ ನಾಶಹೊಂದಿ ಕೊನೆಗೆ ಶ್ರೀವಿಷ್ಣುವಿನ ಸಾಯುಜ್ಯ ರೂಪವಾದ ಮೋಕ್ಷವನ್ನು ಹೊಂದುವರು. ಈ ವಚನದಲ್ಲಿ ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳ ಜೀವನದ ಮುಖ್ಯ ಗುರಿ ವಿಷ್ಣುವಿನ ಸಾಯುಜ್ಯ ಹೊಂದುವದೇ ಆಗಿದೆ. ಈ ಎಲ್ಲ ದೇವತೆಗಳೂ ಜನನ ಮರಣದ ಕಟ್ಟಿಗೆ ಒಳಪಟ್ಟವರೇ! ಜನನ ಮರಣಗಳಿಗೆ ಅತೀತನಾದ ಮತ್ತು ಎಲ್ಲರಿಗೂ ಮೋಕ್ಷವನ್ನು ಕರುಣಿಸುವ ಒಂದೇ ವ್ಯಕ್ತಿ ಎಂದರೆ ಶ್ರೀಮನ್ನಾರಾಯಣನೇ ಎಂದು ಈ ಪುರಾಣದಲ್ಲಿ ಸಮರ್ಥಿಸಿದ್ದಾರೆ.

ಮತ್ತು ಈ ಪುರಾಣದಲ್ಲಿ 'ಪರಮಾತ್ಮ' ಎಂಬ ವಿಶೇಷ ವಿಶೇಷಣ ಇದೆ. ಇದನ್ನು ಶ್ರೀ ವಿಷ್ಣುವಿಗೇ ಪ್ರಯೋಗಿಸಿದ್ದು ಕಂಡುಬರುತ್ತದೆ. ''ಪ್ರೋವಾಚ ಪರಮಾತ್ಮಾ ಜನಾರ್ದನಃ'' ಎಂದು ಜನಾರ್ದನನಾದ ವಿಷ್ಣುವೇ ನಿಜವಾದ 'ಪರಮ ಆತ್ಮ'. 'ಪರಚೇತನ' ಎಂದು ಸ್ಪಷ್ಟವಾಗಿ ಕಾಣಿಸಲಾಗಿದೆ. ಹೀಗೆ ಈ ಪುರಾಣದಲ್ಲಿ ಸಂದರ್ಭ ಬಂದಾಗೆಲ್ಲ ವಿಷ್ಣುವಿನ

ಪಾರಮ್ಯವನ್ನು ನಿರೂಪಿಸಲಾಗಿದೆ. ಇದರಂತೆ ಶಿವಶಕ್ತಿಯರ ಮಹಿಮಾನುವರ್ಣನೆಯಲ್ಲಿಯೂ ಈ ಪುರಾಣಕಾರರು ಅತೀವ ಶ್ರದ್ಧೆವಹಿಸಿ ಚಿತ್ತರಿಸುವದನ್ನು ಕಾಣುತ್ತೇವೆ. ಪಾರ್ವತೀ ಪರಮೇಶ್ವರರ ವಿವಾಹ ಹಾಗೂ ವಿವಾಹಪೂರ್ವದ ಸತೀದೇವಿಯ ತಪಸ್ಸು ಮುಂತಾದ ಭಾಗಗಳು ಈ ಪುರಾಣದಲ್ಲಿಯೇ ಅತ್ಯಂತ ಮನೋಹರವಾದ ಸನ್ನಿವೇಶಗಳಾಗಿವೆ. ಕಾಳಿದಾಸನು ತನ್ನ ಕುಮಾರಸಂಭವ ಕಾವ್ಯದಲ್ಲಿ ಪಾರ್ವತಿಯ ತಪ್ಪಸು, ಶಿವ ನಿಂದಾಸ್ತುತಿ, ಸಪ್ತರ್ಷಿಗಳ ಮಧ್ಯಸ್ಥಿಕೆಯಿಂದ ಶಿವಸತಿಯರ ವಿವಾಹ ಮುಂತಾದ ಇಲ್ಲಿಯ ರಸಮಯ ಸನ್ನಿವೇಶಗಳನ್ನೆತ್ತಿಕೊಂಡು ರಸಾಳ ಶೈಲಿಯಿಂದ ಮನೋಜ್ಞವಾಗಿ ಮೂಡಿಸಿದ್ದು ಕಂಡುಬರುತ್ತದೆ. ಇದರಲ್ಲಿ ಬರುವ ಪಾರ್ವತೀ ಪರಮೇಶ್ವರರ ಪ್ರಣಯ ಕಲಹವೂ, ಕಾಳಿಯು ಗೌರಿಯಾಗಿ ಮಾರ್ಪಟ್ಟು ತಪೋಬಲದಿಂದ ಅವನನ್ನು ಮೆಚ್ಚಿಸಿದ ಸಂದರ್ಭವೂ ಹೃದ್ಯವೂ ಆಸ್ವಾದ್ಯವೂ ಆಗಿವೆ. ಈ ಮತ್ಸ್ಯಪುರಾಣದಲ್ಲಿ ಬರುವ ಅನೇಕ ಧಾರ್ಮಿಕ ಅನುಶಾಸನ ವಚನಗಳು ಪ್ರಾಯಶಃ ಎಲ್ಲ ಧರ್ಮಶಾಸ್ತ್ರಕಾರರಿಗೂ ನಿಬಂಧಕಾರರಿಗೂ ಸ್ಮೃತಿಕಾರರಿಗೂ ಪ್ರೇರಕವಾಗಿ ಮಾರ್ಗದರ್ಶಕವೂ ಆಗಿವೆ.

ಮತ್ಸ್ಯಪುರಾಣದಲ್ಲಿಯ ಅನೇಕ ಪದ್ಯಗಳನ್ನು ಧರ್ಮಶಾಸ್ತ್ರೀಯ ನಿಬಂಧಕಾರರು ತಮ್ಮ ಕೃತಿಗಳಲ್ಲಿ ಹೇರಳವಾಗಿ ಉದಾಹರಿಸಿದ್ದು ಕಂಡುಬರುತ್ತದೆ. ಕೆಲವೊಂದು ನಿಬಂಧಕಾರರಂತೂ ಈ ಮತ್ಸ್ಯಪುರಾಣದೊಳಗಿನ ಒಂದೊಂದು ಅಧ್ಯಾಯಗಳನ್ನೇ ಸಾಗ್ರಸಮಗ್ರವಾಗಿ ಇಡಿಕಿಡಿಯಾಗಿ ಎತ್ತಿ ಉದಾಹರಿಸಿದ್ದಾರೆ.

ವಿಜ್ಞಾನೇಶ್ವರನು ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ತನ್ನ ಮಿತಾಕ್ಷರಾ ಎಂಬ ವ್ಯಾಖ್ಯಾನದಲ್ಲಿ ಮೂಲ ಸಂಸ್ಕೃತಭಾಷೆಯಲ್ಲಿನ ಮತ್ಸ್ಯ ಪುರಾಣದ ೯೪ನೇ ಅಧ್ಯಾಯವನ್ನು ಸಂಪೂರ್ಣವಾಗಿ ಎತ್ತಿ ಉದಾಹರಿಸಿದ್ದಾನೆ.

ಇದೇ ಯಾಜ್ಞವಲ್ಕ್ಯ ಸ್ಮೃತಿಯ ಮೇಲಿನ ಮತ್ತೊಂದು ಸುಪ್ರಸಿದ್ಧವಾದ ಅಪರಾರ್ಕ ವ್ಯಾಖ್ಯೆಯಲ್ಲಿಯೂ ಮೂಲಸಂಸ್ಕೃತಭಾಷೆಯಲ್ಲಿನ ಮತ್ಸ್ಯಪುರಾಣದ ೫೩ನೇ ಅಧ್ಯಾಯದ ಕೊನೆಯ ಪದ್ಯಗಳನ್ನು ಬಿಟ್ಟು ಉಳಿದೆಲ್ಲ ಶ್ಲೋಕಗಳೂ ಪ್ರಮಾಣತ್ವೇನ ಉದಾಹರಿಸಲ್ಪಟಿಟವೆ. ೫೮ನೇ ಅಧ್ಯಾಯವಂತೂ ಪೂರ್ತಿಯಾಗಿ ಉದಾಹರಿಸಲ್ಪಟ್ಟಿದೆ. ೧-೧೯ ಪದ್ಯ ಉಳಿದು ಮತ್ಸ್ಯಪುರಾಣದ ೫೯ನೇ ಅಧ್ಯಾಯವು ಸಮಗ್ರವಾಗಿ ಅಪರಾರ್ಕ ಟೀಕೆಯಲ್ಲಿ ಪುನರುಕ್ತವಾಗಿದೆ.

ಬಲ್ಲಾಳಸೇನನ ದಾನಸಾಗರದಲ್ಲಿ ಮತ್ಸ್ಯಪುರಾಣದ ೨೭೪-೨೭೫-೨೭೬-೨೭೭-೨೭೮-೨೭೯-೨೮೦-೨೮೧-೨೮೨-೨೮೩-೨೮೪-೨೮೫-೨೮೬-೨೮೭-೨೮೮-೨೮೯ ಇಷ್ಟು ಅಧ್ಯಾಯಗಳೂ ಇಡಿಇಡಿಯಾಗಿ ಎತ್ತಿ ಹೇಳಲ್ಪಟ್ಟಿವೆ. ಮತ್ಸ್ಯಪುರಾಣದ ೨೭೯ನೇ ಅಧ್ಯಾಯದಲ್ಲಿಯ ೧೦ನೇ ಪದ್ಯದಲ್ಲಿ 'ಗುರುಣೋಕ್ತ ಮಂತ್ರೈಃ' ಎಂದು ಇದ್ದುದನ್ನು ದಾನಸಾಗರದಲ್ಲಿ 'ಗುಡಧೇನು ಮಂತ್ರೈಃ ॥ ಎಂದು ಉಲ್ಲೇಖಿಸಿದ್ದಾರೆ. ಇದಿಷ್ಟೇ ವ್ಯತ್ಯಾಸ. ಉಳಿದೆಲ್ಲ ಅಧ್ಯಾಯಗಳು ಮತ್ಸ್ಯಪುರಾಣದಲ್ಲಿದ್ದಂತೆಯೇ ಬಲ್ಲಾಳಸೇನನಿಂದ ಪುನರುಚ್ಚರಿಸಲ್ಪಟ್ಟಿವೆ. ಇದರಂತೆ ಬಲ್ಲಾಳಸೇನನು ತನ್ನ ಕೃತಿಯಲ್ಲಿ ಒಂದೂ ಅಕ್ಷರ ವ್ಯತ್ಯಾಸವಿಲ್ಲದೇ ಮತ್ಸ್ಯಪುರಾಣದ ೯೨ನೇ ಅಧ್ಯಾಯವನ್ನು ಎತ್ತಿ ಉದಾಹರಿಸಿದ್ದಾನೆ. ಹೀಗೆ ಬಿಡಿ ಬಿಡಿಯಾಗಿ ಈ ಪುರಾಣದಿಂದ ಮಧುರ ಮಾರ್ಮಿಕವಾದ ಶ್ಲೋಕಗಳನ್ನೂ ಧರ್ಮನೀತಿ ನಿರ್ದೇಶಕ ಪದ್ಯಗಳನ್ನೂ ಎತ್ತಿ ಗೌರವದಿಂದ ಉಲ್ಲೇಖಿಸಿದ ಗ್ರಂಥಗಳಿಗೆ ಲೆಕ್ಕವಿಲ್ಲ.

ಭಾಷಾಶೈಲಿಯ ದೃಷ್ಟಿಯಿಂದ ಮತ್ಸ್ಯಪುರಾಣವು ಅತ್ಯಂತ ಸುಂದರವೂ ಭಾವಬಂಧುರವೂ ಆದ ಒಳ್ಳೇ ಕಮನೀಯ ಕಾವ್ಯದಂತೆ ಇರುತ್ತದೆ. ಉಪಮೆ, ಉತ್ಪ್ರೇಕ್ಷೆ ಶ್ಲೇಷ ಅರ್ಥಾಲಂಕಾರ, ಅನುಪ್ರಾಸ, ಮುಂತಾದ ಅಲಂಕಾರಗಳಂತೂ ಪದೇ ಪದೇ ಈ ಪುರಾಣದಲ್ಲಿ ಗೋಚರವಾಗುತ್ತವೆ. ಪುರಾಣಸಾಹಿತ್ಯದಲ್ಲಿ ಭಾಷಾ ಅಲಂಕಾರ ಶೈಲಿ, ಭಾವಬಂಧುರತೆ ಮುಂತಾದ ಸಾಹಿತ್ಯಿಕ ಗುಣಗಳ ಕಡೆಗೆ ಗಮನ ವಿರಿಸುವುದು ಕಡಿಮೆ. ಆದರೆ ರಸವತ್ತಾದ ಅಂತಹ ಸಾಹಿತ್ಯಿಕ ಶೈಲಿಯೇ ಅಪರೂಪವಾಗಿ ಇಲ್ಲಿ ಮೂಡಿ ಬಂದಿದೆ. ಈ ಮತ್ಸ್ಯಪುರಾಣವು ವಾಗರ್ಥಸಂಪೃಕ್ತಿಯ ಸೊಗಸು, ಕಾವ್ಯದ ಕಮನೀಯ ಕಾಂತಿಯಿಂದ ಕಂಗೊಳಿಸುತ್ತದೆ. ಈ ಪುರಾಣದ ಛಂದೋಬಂಧ ಸೌಂದರ್ಯ, ಭಾವಗಾಂಭೀರ್ಯ, ಶೈಲೀ ಮಾಧುರ್ಯಗಳಿಗೆ ಮೊಟ್ಟಮೊದಲಿನ ಎರಡು ಮಂಗಲಪದ್ಯಗಳೇ ಸಾಕ್ಷಿಯಾಗಿರುತ್ತವೆ.

**'ಪ್ರಚಂಡ ತಾಂಡವಾಟೋಪೇ ಪ್ರಕ್ಷಿಪ್ತಾ ಯೇನ ದಿಗ್ಗಜಾಃ ।**
**ಭವಂತು ವಿಘ್ನಭಂಗಾಯ ಭವಸ್ಯ ಚರಣಾಂಬುಜಾಃ ॥೧॥**

**ಪಾತಾಲಾದುತ್ಪತಿಷ್ಣೋರ್ಮಕರ ವಸತಯೋ ಯಸ್ಯ ಪುಚ್ಛಾಭಿಘಾತಾ-**
**-ದೂರ್ಧ್ವಂ ಬ್ರಹ್ಮಾಂಡಖಂಡವ್ಯತಿಕರ ವಿಹಿತ ವ್ಯತ್ಯಯೇನಾಪತಂತಿ ॥**

**ವಿಷ್ಣೋರ್ಮತ್ಸ್ಯಾವತಾರೇ ಸಕಲವಸುಮತೀ ಮಂಡಲಂ ವ್ಯಶ್ನುವಾನ-**
**-ಸ್ತಸ್ಯಾಸ್ಯೋದೀರಿತಾನಾಂ ಧ್ವನಿರಪಹರತಾದಶ್ರಿಯಂ ವಃ ಶ್ರುತೀನಾಮ್।**

(ಇವುಗಳ ಭಾವಾರ್ಥವನ್ನು ಈ ಪುರಾಣದ ಪ್ರಾರಂಭದ ಪುಟಗಳಲ್ಲಿ ನೋಡಬಹುದು)

ಇಲ್ಲಿಯ ನಾದ ಮಾಧುರ್ಯ, ಶಬ್ದ ಸೌಂದರ್ಯಗಳಿಂದ ಎಷ್ಟೋ ನೀರಸ ಸಂದರ್ಭಗಳೂ ಕೂಡ ರಸಮಯವಾಗಿ ಓದುಗರಿಗೆ ವಾಚನೀಯವೆನಿಸುತ್ತವೆ.

ಈ ಪುರಾಣವನ್ನು ಭಾಷಾಂತರಿಸುವ ಕಾರ್ಯಕ್ಕೆ ಮುಖ್ಯವಾಗಿ ಸಹಾಯ ಸಲ್ಲಿಸಿದ ಕೈಗಾರಿಕೋದ್ಯಮಿ ಎಲ್. ಶ್ರೀ ಹರಿಖೋಡೆ ಕುಟುಂಬಕ್ಕೆ ನಾವು ಮತ್ತೊಮ್ಮೆ ನಮ್ಮ ಕೃತಜ್ಞತೆ ಸಮರ್ಪಿಸುತ್ತೇವೆ. ಮತ್ತು ಮೊದಲಿನಿಂದ ಕೊನೆಯವರೆಗೂ ನಮಗೆ ಸಂಶೋಧನ ಪರಿವರ್ತನೆ, ಪರಿಷ್ಕರಣಾದಿಗಳಲ್ಲಿ ಸರ್ವ ವಿಧದಿಂದ ಸಹಾಯ ಸಹಕಾರಗಳನ್ನು ನೀಡಿ ಈ ಗ್ರಂಥವು ಹೊರಬರುವುದಕ್ಕೆ ಸಕಲ ವಿಧದಿಂದಲೂ ನಮ್ಮ ಬೆಂಬಲವಾಗಿ ನಿಂತು ನಮ್ಮ ಸುಖದುಃಖಗಳಲ್ಲಿ ಭಾಗಿಯಾದ ಪಂಡಿತ ಮಂಡಲಿಯವರಿಗೆ ನಮ್ಮ ಪ್ರಣಾಮಗಳನ್ನು ಸಮರ್ಪಿಸುತ್ತೇವೆ. ಅನುವಾದ ಲೇಖನ, ಲಿಪಿಕರಣಾದಿ ಕಾರ್ಯದಲ್ಲಿ ನಮಗೆ ನೆರವನ್ನಿತ್ತು ಸಹಕರಿಸಿದ ಆತ್ಮೀಯ ಜನರಿಗೆಲ್ಲ ಹಾರ್ದಿಕ ಶುಭಾಶಯಗಳನ್ನು ಕೋರುತ್ತೇವೆ.

ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯಗಲಗಲಿ**
ಹುಬ್ಬಳ್ಳಿ
ದಿನಾಂಕ 23 – 10 – 2004 ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಕವಿ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಇವರು ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತ ಪೂರ್ವವಾದ **'ನ ಭೂತೋ ನ ಭವಿಷ್ಯತಿ'** ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ವೀಕ್ಷಿಸಿ ಆ ಎಲ್ಲಾ ಭವನಗಳ

ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ, ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಉತ್ತರೋತ್ತರ ಉತ್ಕರ್ಷವನ್ನೂ, ಶ್ರೆಯಸ್ಸನ್ನೂ ಕೊಟ್ಟು ಕರುಣೆಯಿಂದ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಮತ್ಸ್ಯಪುರಾಣದ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್) ಬೆಂಗಳೂರು-560 004 ಇದರ ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮುವತ್ತಾರು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು (ಮೊಬೈಲ್ ನಂ. 36889827) ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

ಹುಬ್ಬಳ್ಳಿ — ಪಂ. ಪಂಢರೀನಾಥಾಚಾರ್ಯಗಲಗಲಿ

ದಿನಾಂಕ 23 – 10 – 2004 — ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

ಶ್ರೀ

# ಮತ್ಸ್ಯ ಮಹಾಪುರಾಣ ಭಾಗ - ೨

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ



—○—

## ಚಂದ್ರಪುಷ್ಯ ಯುತಿಯ ಘೋರ ಪರಿಣಾಮ

ಅಧ್ಯಾಯ - ೧೪೧

**ಸೂತ ಉವಾಚ :**

**"ತಾರಕಾಖ್ಯೇ ಹತೇ ಯುದ್ಧೇ ಉತ್ಸಾರ್ಯ ಪ್ರಮಥಾನ್ ಮಯಃ ।**
**ಉವಾಚ ದಾನವಾನ್ ಭೂಯೋ ಭೂಯಃ ಸ ತು ಭಯಾವೃತಾನ್ ॥**

**ಸೂತ** :- ತಾರಕನು ಹತನಾದ ಬಳಿಕ ಮಯನು ಕುಪಿತನಾಗಿ ಪ್ರಮಥರನ್ನೆಲ್ಲ ಹೊಡೆದೋಡಿಸಿ. ಭಯದಿಂದ ನಡಗುತ್ತಲಿರುವ ದಾನವರನ್ನು ಕುರಿತು ಹೀಗೆ ಹೇಳಿದನು.

"ದೈತ್ಯರೆ, ಚಂದ್ರನು ನಾಳೆ ಈ ಹೊತ್ತಿನಲ್ಲಿ ಪುಷ್ಯ ನಕ್ಷತ್ರದೊಡನೆ ಮಿಲಿತನಾಗುವನು. ಈ ಚಂದ್ರಪುಷ್ಯಯೋಗದಲ್ಲಿ ಒಂದು ಕ್ಷಣ ತ್ರಿಪುರದ ಈ ಮೂರು ಪಟ್ಟಣಗಳು ಒಂದುಗೂಡುವವು. ಈ ಚಂದ್ರ ಪುಷ್ಯ ಯುತಿಯ ಮೂಹೂರ್ತದಲ್ಲಿ ಈ ಮೂರು ಪಟ್ಟಣಗಳು ಒಗ್ಗೂಡಿದ್ದನ್ನು ಯಾವ ದೇವತಾ ಶ್ರೇಷ್ಠನು ತಿಳಿಯುವನೋ ಅವನು ಒಂದೇ ಬಾಣದಿಂದ ಈ ಇಡೀ ಪಟ್ಟಣವನ್ನು ಪುಡಿಮಾಡಬಲ್ಲನು. ಈ ನಗರವೆಂದರೆ ನಮ್ಮ ಪ್ರಾಣ, ನಮ್ಮ ಬಲ, ಆದುದರಿಂದ ನಿಮ್ಮೆಲ್ಲರ ಪ್ರಾಣಗಳನ್ನು ಪಣಕ್ಕಿಟ್ಟು ಕಾದಿರಿ. ಈ ಪುರವನ್ನು ಈಗ ಕಾಪಾಡಿರಿ. ಉಳಿದೆಲ್ಲವನ್ನು ಬಿಟ್ಟು ಈಗ ಮಹಾದೇವನ ರಥವನ್ನು ಹಿಮ್ಮೆಟ್ಟಿಸಿ. ಅವನಿಗೆ ಆ ಚಂದ್ರಪುಷ್ಯಯೋಗದ ಒಂದು ಕ್ಷಣದಲ್ಲಿ ಬಾಣ ಬಿಡಲಿಕ್ಕೂ ಅವಕಾಶ ಸಿಗದಂತೆ ಅವನ ಮೇಲೆ ಎರಗಿರಿ. ನೀವು ಹೀಗೆ ಮಾಡಿದರೆ ಮಾತ್ರ ಪುಷ್ಯಚಂದ್ರಯುತಿಗಾಗಿ ಪ್ರತೀಕ್ಷೆ ಮಾಡುತ್ತಿರುವ ದೇವತೆಗಳ ಉದ್ದೇಶವು ವಿಫಲವಾಗುವದು."

ಮಯಾಸುರನ ಕೊನೆಯ ಎಚ್ಚರಿಕೆಯ ಈ ಮಾತನ್ನು ಕೇಳಿ ದೈತ್ಯರೆಲ್ಲರೂ "ನಾವೆಲ್ಲರೂ ಶತ ಪ್ರಯತ್ನಮಾಡಿ ಶಿವನು ಆ ಕ್ಷಣದಲ್ಲಿ ಈ ಪಟ್ಟಣದ ಮೇಲೆ ಬಾಣ ಬಿಡದಂತೆ ಮಾಡುವೆವು". ಎಂದು ಆಶ್ವಾಸನೆ ಇತ್ತರು.

ಅಂದು ರಾತ್ರಿ ದೈತ್ಯ ಸೈನಿಕರು ಮನಬಂದಂತೆ ಕುಡಿದು, ಸ್ವಚ್ಛಂದ ಕಾಮವಿಹಾರಗೈದರು. ಅಂದು ರಾತ್ರಿ ತ್ರಿಪುರದ ಮೂರು ಪಟ್ಟಣಗಳಲ್ಲಿ ಎಲ್ಲಿ ನೋಡಿದಲ್ಲಿ ದೀಪೋತ್ಸವ. ಶೃಂಗಾರವೇಷ ಧರಿಸಿದ ಅಂಗನೆಯರ ಅನಂಗಕೇಳೀ, ಎಲ್ಲ ಕಡೆಗೂ ವಿವಿಧ ವಿಹಾರ, ರತಿ ವಿಲಾಸ, ಶೃಂಗಾರ ಚೇಷ್ಟೆ. ಸ್ವಚ್ಛಂದ ಸುರಾಪಾನ. ಉತ್ತೇಜಕ ಗಾಯನ. ಉನ್ಮಾದಕ ಸಂಗೀತ. ಹೀಗೆ ವಿವಿಧ ವಿಲಾಸಕೇಳಿಲಾಲಸರಾದ ದೈತ್ಯ ದಾನವರೆಲ್ಲ ಶೃಂಗಾರರಂಗಮಂಚದಲ್ಲಿ ಕಾಮಾಂಧ ಕೀಟಗಳಂತೆ ಹೊರಳಾಡುತ್ತಿರುವಾಗಲೇ ಸೂರ್ಯನು ಉದಯಾಚಲದ ಮಂಗಲ ಕಲಶಗಳಂತಿದ್ದ ಉತ್ತುಂಗ ಶೃಂಗಗಳನ್ನೆಲ್ಲ ದಾಟಿ ಆಗಸದ ಅಂಗಳಕ್ಕೆ ಕಾಲಿರಿಸಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತೊಂದನೆಯ ಅಧ್ಯಾಯ ಮುಗಿದುದು.*

—o—

## ತ್ರಿಲೋಚನನ ಬಾಣದಿಂದ ತ್ರಿಪುರದಹನ

**ಅಧ್ಯಾಯ - ೧೪೨**

**ಸೂತ ಉವಾಚ :**

**"ಉದಿತೇ ತು ಸಹಸ್ರಾಂಶೌ ಮೇರೌ ಭಾಸಾಕರೇ ರವೌ ।**
**ನನರ್ದಚಬಲಂ ಕೃತ್ಸ್ನಂ ಯುಗಾಂತ ಇವ ಸಾಗರಃ ॥**

**ಸೂತ** :- ತೇಜಸ್ಸಿನ ತವನಿಧಿಯಂತಿರುವ ಸೂರ್ಯನು ಉದಿಸಿದ ಬಳಿಕ ಸಕಲ ಸೈನ್ಯವು ಪ್ರಳಯಕಾಲದ ಪ್ರಕ್ಷುಬ್ಧ ಸಾಗರದಂತೆ ಅಬ್ಬರಿಸಿ ಬೊಬ್ಬಿರಿಯಿತು. ಇಂದ್ರನು, ಕುಬೇರ, ವರುಣ, ಮುಂತಾದ, ದೇವತಾಧುರ್ಯರೊಡನೆ ಒಡಗೂಡಿ ಪರಮೇಶ್ವರನನ್ನು ಹಿಂಬಾಲಿಸಿದನು. ಅವರನ್ನು ಹಿಂದೆ ರುದ್ರಭೀಕರವಾದ ಆಯುಧಗಳನ್ನು ಹಿಡಿದುಕೊಂಡು ದೈತ್ಯವೀರರು ಸುರಸೇನೆಯೊಂದಿಗೆ ಸಂಧಿಸಿದರು. ಆಗ ಕಲಿತನದ ಕಾದಾಟ, ಶಸ್ತ್ರಗಳ ಮಸೆದಾಟ, ಆಯುಧಗಳ ಎಸೆದಾಟ, ಎರಡೂ ಪಕ್ಷಗಳಲ್ಲಿ ನೆತ್ತರಿನ ಕಾರಂಜಿ, ಬೆಂಕಿಯ ಮಳೆ, ರುಂಡಚ್ಛೇದ, ದೇಹಭೇದ, ಪ್ರಾಣ ಹಾನಿ ಯಥಾ ಪ್ರಕಾರ ನಡೆದವು. ಅಮೃತದ ಬಾವಿಯಲ್ಲಿ ಅದ್ದಿದ್ದರಿಂದ ಮರಳಿ ಬದುಕಿ ಬಂದ ವಿದ್ಯುನ್ಮಾಲಿಗೂ, ನಂದೀಶ್ವರನಿಗೂ ಮತ್ತೆ ಘನಘೋರ ಹೋರಾಟ. ಸೇಡಿನ ಸವಾರಿ ಏರಿದ ಇಬ್ಬರೂ ಸಿಡಿಲಿನ ಮರಿಗಳಂತೆ ಪರಸ್ಪರ ಸೆಣಸಾಡಿ ಹೋರಿದರು.

ವಿದ್ಯುನ್ಮಾಲಿಯು ಗುರಿಯಿಟ್ಟು, ಅತಿ ತೀಕ್ಷ್ಣವಾದ ವಿಷಬಾಣವನ್ನು ನಂದೀಶ್ವರನ ಎದೆಯಲ್ಲಿ ನೆಟ್ಟನು. ಹಾಗೂ ಅವನ ದೇಹದ ನೆತ್ತರವೆಲ್ಲ ಬಸಿದು ಹೋಗುವಂತೆ ಮಾಡಿದನು. ಅದನ್ನು ಕಂಡು, ಕೆರಳಿ ಹೋದ ನಂದೀಶ್ವರನು ಧಾವಿಸಿ ಬಂದು, ವಿದುನ್ಮಾಲಿಯ ರಥವನ್ನು ಅನಾಮತ ಎತ್ತಿಕೊಂಡು ಮುಗಿಲಿಗೆ ಹಾರಿದನು. ಅಂತರಿಕ್ಷದಲ್ಲಿ ನಿಂತು ಆ ರಥವನ್ನು ತಲೆ ಕೆಳಗಾಗಿ ಹಿಡಿದು ಗರಗರ ತಿರುಗಿಸಿದನು. ಕುದುರೆಗಳು ಜೋತಾಡಿ, ಸಾರಥಿ ನೇತಾಡಿ, ಮಣ್ಣುಮುಕ್ಕಿದ ಬಳಿಕ ವಿದ್ಯುನ್ಮಾಲಿಯು ನೆಲಕ್ಕೆ ಅಭಿಮುಖವಾಗಿ ಬೀಳ ತೊಡಗಿದನು. ಭೂಮಿಗೆ ಬೀಳುವಾಗಲೇ ಆ ಭೀಕರ ದೈತ್ಯನು ಶಕ್ತ್ಯಾಯುಧವನ್ನು ತೆಗೆದು ನಂದೀಶ್ವರನ ಮೇಲೆ ಪ್ರಯೋಗಿಸಿದನು. ಆಗ ನಂದಿಯು ಚಪಲತನದಿಂದ ಅದರ ಹೊಡೆತ ತಪ್ಪಿಸಿಕೊಂಡು ಅದೇ ಶಕ್ತ್ಯಾಯುಧವನ್ನು ತನ್ನ ಕೈಗೆ ತೆಗೆದುಕೊಂಡು ತನ್ನ ವೈರಿಗೆ ತಿರುಗಿಸಿದನು. ಅದರಿಂದ ವಿದ್ಯುನ್ಮಾಲಿಯ ಕವಚವು ಸೀಳಿ, ಎದೆ ಹೋಳಾಗಿ ರಕ್ತಕಾರುತ್ತ ಹತನಾಗಿ ಬಿದ್ದನು.

ವಿದ್ಯುನ್ಮಾಲಿಯ ಪುನರ್‌ಮರಣದಿಂದ ಅತ್ಯಂತ ಕ್ರುದ್ಧನಾದ ಮಯಾಸುರನು ಕಾಲಾಂತಕನಾಗಿ ಪ್ರಮಥರನ್ನೆಲ್ಲ ವಧಿಸತೊಡಗಿದನು. ಅವನ ಉಗ್ರವಾದ ರಣವಿಕ್ರಮವನ್ನು ತಾಳದೆ, ಪ್ರಮಥರು ಕಂಗೆಟ್ಟರು. ಅನೇಕರು ಎದೆಯಲ್ಲಿ ಮಯನ

ಬಾಣಗಳು ನಾಟಿ ಸಮುದ್ರದಲ್ಲಿ ಬಿದ್ದರು. ಇದನ್ನು ಕಂಡು ಇಂದ್ರ, ಯಮ, ಕುಬೇರ ಮುಂತಾದ ಸುರಶ್ರೇಷ್ಠರು ಮಯಾಸುರನ ಮೇಲೆ, ಹಾಗೂ ಅವನ ಸಂಗಡಿಗರ ಮೇಲೆ, ಬಾಣಗಳನ್ನು ಪ್ರಯೋಗಿಸಿ ಹಿಮ್ಮೆಟ್ಟಿಸಿದರು. ದೇವವೀರರ ಪ್ರಬಲ ಪ್ರಹಾರಗಳನ್ನು ತಾಳದೇ ಅಸುರರು ಮತ್ತೆ ತ್ರಿಪುರ ಪಟ್ಟಣದಲ್ಲಿ ಸೇರಿಕೊಂಡರು.

ಈ ಸಮಯದಲ್ಲಿ, ಚಂದ್ರ ಹಾಗೂ ಪುಷ್ಯ ನಕ್ಷತ್ರಯೋಗ ಸಮಯವು ಸನ್ನಿಹಿತವಾಯಿತು. ಪುಷ್ಯ ಚಂದ್ರರ ಮಿಲನ ಮುಹೂರ್ತಕ್ಕೆ ಸರಿಯಾಗಿ ತ್ರಿಪುರದ ಮೂರು ಪಟ್ಟಣಗಳು ಒಂದುಗೂಡಿದವು. ಅದನ್ನು ಕಂಡು, ಮೂರು ಲೋಕಗಳ ಅಧಿಪತಿಯಾದ ಮೂರುಗಣ್ಣಿನ ಮಹಾದೇವನು ವಿಷ್ಣು, ಸೋಮ, ಅಗ್ನಿ ಎಂಬ ತ್ರಿದೇವತಾಮಯ ಬಾಣವನ್ನು ಮೂರು ವಿಧವಾಗಿ ಮಯಾಸುರನ ಆ ಮೂರು ಪಟ್ಟಣಗಳ ಮೇಲೆ ಪ್ರಯೋಗಿಸಿದನು. ಬಾಣವು ಬಿಲ್ಲನ್ನು ಬಿಟ್ಟುಹೋದ ಬಳಿಕ ಮಹಾ ಕರುಣಾಶಾಲಿಯಾದ ಮಹಾದೇವನಿಗೆ ಬಹಳ ಕೆಡುಕೆನಿಸಿತು. ''ಅಯ್ಯೋ! ನನ್ನ ಭಕ್ತನಾದ ಮಯಾಸುರನು ಮರಣ ಹೊಂದುವನಲ್ಲಾ.'' ಎಂದು ಭಕ್ತ ವತ್ಸಲನಾದ ಭಗವಂತನು ಕನಲಿದನು. ಶಿವನ ಈ ನುಡಿಯನ್ನು ಕೇಳಿ ನಂದೀಶ್ವರನು ಮಯನನ್ನು ಕುರಿತು ''ಮಯಾಸುರ, ಈ ತ್ರಿಪುರ ಪಟ್ಟಣಕ್ಕೆ ವಿನಾಶಕಾಲ ಒದಗಿ ಬಂದಿದೆ. ನನ್ನ ಮಾತನ್ನು ಕೇಳು. ನೀನು ವಾಸಿಸಿದ ಮನೆಯೊಂದಿಗೆ ನೀನು ಈ ಪಟ್ಟಣ ಬಿಟ್ಟು ಓಡಿಹೋಗು.'' ಎಂದು ಎಚ್ಚರಿಕೆಯನ್ನು ನೀಡಿದನು.

ಶಿವಭಕ್ತನಾದ ಮಯಾಸುರನು ನಂದಿಯ ಮಾತು ಕೇಳಿ ತ್ರಿಪುರವನ್ನು ಬಿಟ್ಟು ಓಡಿ ಹೋದನು. ಪರಮೇಶ್ವರನ ಆ ಬಾಣವು ಆ ಮೂರು ನಗರಗಳನ್ನು ಕಾಡ್ಗಿಚ್ಚು ಎಲೆದಿಣ್ಣೆಗಳನ್ನು ಸುಡುವಂತೆ 'ಪುರುಪುರು' ಸುಟ್ಟುಹಾಕಿತು. ಆ ತ್ರಿಪುರ ನಗರದಲ್ಲಿ ಇದ್ದ ಸಹಸ್ರಾರು ಭವ್ಯ ಭವನಗಳು, ಅಲ್ಲಿರುವ ಪರಸ್ಪರ ಆಲಿಂಗಿಸಿಕೊಂಡು ಪ್ರೇಮಾಲಾಪಗೈಯುವ ನಲ್ಲನಲ್ಲೆಯರು, ತಾಯಿಯ ತೊಡೆಯ ಮೇಲಿರುವ ಚಿಕ್ಕಮಕ್ಕಳು, ಹೊಂದಾವರೆಗಳಿಂದ ಸುಂದರವಾಗಿ ಕಾಣುವ ಸರೋವರಗಳು, ಗಿಡಬಳ್ಳಿಗಳಿಂದ ತೊನೆದು ತೂಗಾಡುವ ವನೋಪವನಗಳು ಅರೆಚಣದಲ್ಲಿ ಭವನ ಬಾಣಾಗ್ನಿಯಿಂದ ಬೆಂದು ಬೂದಿಯಾಗಿ ಬಿದ್ದವು. ಹೀಗೆ ಪರಮೇಶ್ವರನ ಬಾಣದ ಬೆಂಕಿಗೆ ಆಹುತಿಯಾಗಿ ದುರ್ಗಮವಾದ ತ್ರಿಪುರವೆಲ್ಲವೂ ಮಣ್ಣುಗೂಡಿಹೋಯಿತು.

ಆದರೆ, ನಂದಿಯ ಮುನ್ಸೂಚನೆಯಂತೆ, ಮಯಾಸುರನು ತನ್ನ ದಿವ್ಯವಾದ ಮನೆಯನ್ನು ತನ್ನೊಡನೆಯೇ ಎತ್ತಿಕೊಂಡು ತ್ರಿಪುರ ಬಿಟ್ಟು ಓಡಿಹೋದದ್ದರಿಂದ ಅವನ ಭವ್ಯವಾದ ಭವನವು ಸುರಕ್ಷಿತವಾಗಿಯೇ ಉಳಿದಿತ್ತು. ಇದನ್ನು ತಿಳಿದು ದೇವೇಂದ್ರನು ಮಯನ ಆ ಮನೆಗೂ ಕೂಡ ''ಈ ಮಯಗೃಹವು ಬೆಂಕಿಯಂತೆ, ಬೇಯುತ್ತಲಿದ್ದು, ಯಾರಿಗೂ ವಾಸಿಸಲು ಬಾರದಂತಾಗಲಿ. ಮತ್ತು ಅಸ್ಥಿರವೂ ಅಪಾಯಕಾರಕವೂ, ಭಯಜನಕವೂ ಆಗಲಿ'' ಎಂದು ಶಾಪಕೊಟ್ಟನು.

**ಋಷಿಗಳು** :- "ಪೂಜ್ಯರೆ, ಮಯನು ತನ್ನ ಮನೆಯೊಂದಿಗೆ ಓಡಿಹೋದ ಬಳಿಕ, ಅವನ ಹಾಗೂ ಅದರ ಗತಿ ಏನಾಯಿತು ? ಎಂಬುದನ್ನು ತಿಳಿಸಬೇಕು.

**ಸೂತ** :- ಮಯಾಸುರನ ಮನೆಯೇನೋ ನಾಶವಾಗದೇ ಉಳಿದಿದ್ದಿತು. ಆದರೆ ತನ್ನ ಆ ದಿವ್ಯಮನೆಯನ್ನು ಎಲ್ಲಿ ಇರಿಸಬೇಕೆಂಬುದೇ ಅವನಿಗೆ ಒಂದು ದೊಡ್ಡ ಸಮಸ್ಯೆ ಆಯಿತು. ಅವನು ಮನೆ ಮಾಡಿದಲ್ಲೆಲ್ಲ ದೇವತೆಗಳ ಭಯವು ಅವನಿಗೆ ತಪ್ಪಿರಲಿಲ್ಲ. ಅವನು ಕೆಲವು ದಿನ ಧ್ರುವಮಂಡಲದ ಪರಿಸರದಲ್ಲಿ ಆ ಮನೆಯೊಂದಿಗೆ ವಾಸಿಸಿದ್ದ. ಅಲ್ಲಿ ದೇವತೆಗಳಿಂದ ಅಪಾಯವನ್ನು ಕಂಡು ಅಲ್ಲಿಂದ ಬೇರೆ ಲೋಕಕ್ಕೆ ಹಾರಿಹೋದನು. ಅಲ್ಲಿಯೂ ಅವನಿಗೆ '**ಅಪ್ತೋರ್ಯಾಮ**' ಎಂಬ ದೇವತೆಗಳು ನೆಲೆಸಿದ್ದು ಕಂಡು ಬಂದಿತು. ಹೀಗೆ ದೇವತೆಗಳ ಭಯವಿಲ್ಲದಲ್ಲಿ ಇರಬೇಕೆಂಬ ಆಶೆಯು ಕೈಗೂಡದಿದ್ದಾಗ ಭಕ್ತವತ್ಸಲನಾದ ಪರಮೇಶ್ವರನು ಮಯನಿಗಾಗಿ ಒಂದು ಪ್ರತ್ಯೇಕ ಮನೆಯನ್ನೇ ನಿರ್ಮಿಸಿಕೊಟ್ಟನು. ಅನಂತರ ದೇವೇಂದ್ರನು ಅವನಿಗೆ ಯಾವ ಉಪದ್ರವ ಕೊಡದೆ ಸುಮ್ಮನಾದನು. ದೇವೇಂದ್ರನು ಮಹಾದೇವರನ್ನು ಭಕ್ತಿಯಿಂದ ಪೂಜಿಸಿದನು.

ತ್ರಿಪುರ ವಿಜಯವನ್ನು ಸಾಧಿಸಿದ್ದಕ್ಕಾಗಿ ದೇವತೆಗಳೆಲ್ಲರೂ ಬ್ರಹ್ಮದೇವರನ್ನೂ ಮಹಾದೇವರನ್ನೂ ನಮಸ್ಕರಿಸಿದರು. ಈಶ್ವರನ ಬಾಣದಿಂದ ಸುಟ್ಟು ಸಮುದ್ರದಲ್ಲಿ ಬೂದಿಯಾಗಿ ಬಿದ್ದ ತ್ರಿಪುರವೆಂಬ ಮೂರು ಪಟ್ಟಣಗಳ ಅವಶೇಷಗಳನ್ನು ಸಾಗರದ ಜಲದಲ್ಲಿ ನೋಡಿ ಸಂತೋಷಪಟ್ಟರು. ರುದ್ರವಿಜಯದ ಈ ಉಪಾಖ್ಯಾನವನ್ನು ಪಠಿಸಿದವರಿಗೂ, ಕೇಳಿದವರಿಗೂ ಪರಮೇಶ್ವರನು ಸ್ವತಃ ವಿಜಯವನ್ನು ಕರುಣಿಸುವನು. ಶ್ರಾದ್ಧಕಾಲದಲ್ಲಿ ಪಾರಾಯಣಮಾಡಿದರೆ ಪಿತೃಗಳ ಪ್ರೀತಿ ಸಂಪಾದಿಸಿ ಕೊಂಡಂತೆ. ತ್ರಿಪುರದಹನದ ಕತೆ ಪರಮಮಂಗಳಕರ, ಪುಣ್ಯಪ್ರದ, ಸಂತಾನದಾಯಕ. ಇದನ್ನು ಓದಿದವರಿಗೂ, ಕೇಳಿದವರಿಗೂ ಅನಂತಪುಣ್ಯ ಲಭಿಸುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತೆರಡನೆಯ ಅಧ್ಯಾಯ ಮುಗಿದುದು.*

—o—

## ಚಂದ್ರನ ಕಲೆಗಳನ್ನು ಪಾನಮಾಡುವ ಪಿತೃಗಳು ಮತ್ತು ದೇವತೆಗಳು

ಅಧ್ಯಾಯ - ೧೪೩

**ಋಷಿಯ ಉವಾಚಃ**

**"ಕಥಂ ಗಚ್ಛತ್ಯಮಾವಾಸ್ಯಾಂ ಮಾಸಿಮಾಸಿದಿವಂ ನೃಪಃ ।**
**ಐಲಃ ಪುರೂರವಾಃ ಸೂತ ತರ್ಪಯೇತ ಕಥಂ ಪಿತೃನ್ ।**
**ಏತದಿಚ್ಛಾಮಹೇ ಶ್ರೋತುಂ ಪ್ರಭಾವಂ ತಸ್ಯ ಧೀಮತಃ ॥**

**ಋಷಿಗಳು** :- ಸೂತಮುನಿಗಳೇ, ಇಲೆಯ ಮಗನಾದ ಪುರೂರವ ರಾಜನು ಪ್ರತಿ ತಿಂಗಳು ಅಮಾವಾಸ್ಯಾದಿನ ಸ್ವರ್ಗಕ್ಕೆ ಹೋಗುತ್ತಿದ್ದನಂತೆ. ಅದು ಹೇಗೆ ಸಾಧ್ಯವಾಯಿತು ? ಅವನು ಪಿತೃಗಳನ್ನು ಹೇಗೆ ತೃಪ್ತಿಗೊಳಿಸಿದನು ? ಮಹಾಮೇಧಾವಿಯಾದ ಆ ಪುರೂರವ ಮಹಾರಾಜನ ಪ್ರಭಾವವನ್ನು ಕೇಳಬೇಕೆಂದು ಬಯಸಿದ್ದೇವೆ. ತಿಳಿಸಿರಿ.

**ಸೂತ** :- ಪುರೂರವನ ಮಹಿಮೆಯನ್ನು ವಿವರವಾಗಿ ಹೇಳುವೆನು ಕೇಳಿರಿ. ಪಿತೃಗಳಿಗೆ ಅಮೃತದೊರಕುವದು, ತೃಪ್ತಿಉಂಟಾಗುವದು ಚಂದ್ರನಿಂದಲೇ. ಪಿತೃಗಳಲ್ಲಿ ಸೌಮ್ಯ, ಬರ್ಹಿಷದ, ಕಾವ್ಯ, ಅಗ್ನಿಷ್ವಾತ್ತ ಎಂದು ನಾಲ್ಕು ಪ್ರಭೇದಗಳು.

ಸೂರ್ಯ, ಚಂದ್ರರು ನಕ್ಷತ್ರಮಾರ್ಗದಲ್ಲಿ ಸಂಚರಿಸುತ್ತ ತಿಂಗಳಿಗೊಮ್ಮೆ ಅಮಾವಾಸ್ಯೆಯ ದಿನ ಒಂದು ಮಂಡಲದಲ್ಲಿ ಕೂಡಿರುವರು. ಆ ಸಮಯದಲ್ಲಿ ಪುರೂರವ ರಾಜನು ತನ್ನ ಮಾತಾಮಹನಾದ ಸೂರ್ಯನನ್ನೂ ಪಿತಾಮಹನಾದ ಚಂದ್ರನನ್ನೂ ನೋಡಲು ಅಲ್ಲಿಗೆ ಹೋಗುವನು. ಪುರೂರವನ ತಾಯಿ ಇಲಾದೇವಿ. ಅವಳ ತಂದೆ ವೈವಸ್ವತನು. ಆ ಮನುವಿನ ತಂದೆಯೇ ಸೂರ್ಯ. ಹೀಗೆ ಪುರೂರವನಿಗೆ ತಾಯಿಯ ಕಡೆಯಿಂದ ಸೂರ್ಯನು ಮಾತಾಮಹ. ಪುರೂರವನ ತಂದೆ ಬುಧ. ಬುಧನ. ತಂದೆ ಚಂದ್ರ. ಹೀಗೆ ಚಂದ್ರನು ಪುರೂರವನಿಗೆ ತಂದೆಯ ಮುಖಾಂತರ ಪಿತಾಮಹ ಎನಿಸುವನು. ಆದುದರಿಂದಲೇ ಅವನು ತನ್ನ ಮಾತಾಮಹ ಪಿತಾಮಹರಾದ ಸೂರ್ಯ ಚಂದ್ರರಿಬ್ಬರನ್ನೂ ಅಮಾವಾಸ್ಯೆಯ ದಿನ ದರ್ಶನಮಾಡಿಕೊಂಡು, ಪೂಜಾಕಾಲವನ್ನು ಪ್ರತೀಕ್ಷಿಸುತ್ತಿರುವನು. ಆ ಕಾಲ ಬಂದಾಗ ಸೂರ್ಯನು ಚಂದ್ರನನ್ನು ಕೂಡುವನು. ಆಗ ಚಂದ್ರಮಂಡಲದಿಂದ ಅಮೃತವು ಸ್ರವಿಸುವದು. ಮಾಸಿಕಶ್ರಾದ್ಧಮಾಡುವ ಅಪೇಕ್ಷೆಯಿಂದ ಪುರೂರವನು ಕಾಯ್ದುಕೊಂಡಿದ್ದು, ಆ ಕಾಲವು ಪ್ರಾಪ್ತವಾದಾಗ ಚಂದ್ರನನ್ನೂ ಪಿತೃದೇವತೆಗಳನ್ನೂ ಪೂಜಿಸುವನು.

ಅಮಾವಾಸ್ಯೆಯು ಚಂದ್ರದರ್ಶನದಿಂದ ಕೂಡಿದ್ದರೆ 'ಸಿನೀವಾಲಿ', ಕೂಡದಿದ್ದರೆ 'ಕುಹೂ' ಎಂದು ಕರೆಯಲ್ಪಡುವದು. ಪುರೂರವನು ಪಿತೃತರ್ಪಣ ಪ್ರಾರಂಭದಲ್ಲಿ ಚಂದ್ರ-ಸೂರ್ಯರನ್ನು ಧ್ಯಾನಮಾಡಿ, ಪ್ರತೀಕ್ಷೆ ಮಾಡುತ್ತಿರುವಾಗಲೇ ಚಂದ್ರನಿಂದ ಅಮೃತರೂಪವಾದ ಸ್ವಧಾನ್ನವು ಹದಿನೈದು ಭಾಗಗಳಾಗಿ ಸ್ರವಿಸುವದು.

ಆ ಚಂದ್ರನಿಂದ ಹರಿಯುವ ಮಧುವಿನಿಂದಲೇ ಅವನು ಪಿತೃಗಳಿಗೆ ತಿಲಾಂಜಲಿ ಕೊಡುವನು. ಅದರಿಂದ ನಾಲ್ಕುವಿಧವಾದ ಪಿತೃಗಳು ಪ್ರೀತರಾಗುವರು. ಜ್ಞಾನಿಗಳು ಅಗ್ನಿಯನ್ನು ''ಋತು'' ಎಂದು ಕರೆಯುವರು. ಋತುಗಳು ಸಂವತ್ಸರದಿಂದ ಹುಟ್ಟಿದವು. ಋತುಗಳಿಂದ ಅರ್ಧಮಾಸಗಳು ಜನಿಸಿದವು. ಆ ಅರ್ಧಮಾಸಗಳೆಂದರೆ ಅನ್ನಪ ಪಿತೃಗಳೇ. ಪರಿವತ್ಸರದಿಂದ ಜನಿಸಿದ ಋತುಗಳೂ ಮಾಸಗಳೂ ಪಿತಾಮಹರು ಎನಿಸುವರು. ಸಂವತ್ಸರ ಪರಿವತ್ಸರ ಮೊದಲಾದ ಪಂಚವಿಧ ವರ್ಷಗಳಿಗೆ ಅಭಿಮಾನಿಗಳಾಗಿರುವ ದೇವತೆಗಳು ಪ್ರಪಿತಾಮಹರು.

ಚಂದ್ರನ ಅಮೃತಕಲೆಯಿಂದ ತೃಪ್ತಿಪಡೆಯುವ ಪಿತೃಗಳಲ್ಲಿ ಬರ್ಹಿಷದ, ಕಾವ್ಯ, ಅಗ್ನಿಷ್ವಾತ್ತ ಎಂಬ ಮೂರು ಗುಂಪುಗಳಿವೆ. ಗೃಹಸ್ಥರಾಗಿ ಅಗ್ನಿಹೋತ್ರವಿಟ್ಟು ಯಜ್ಞಯಾಗಗಳನ್ನು ಮಾಡುವವರು ಬರ್ಹಿಷದರು: ''ಅಷ್ಟಕ'' ಎಂಬ ಶ್ರಾದ್ಧದ ಅಭಿಮಾನಿ ಪಿತೃಗಳು ಕಾವ್ಯ ಎನಿಸುವರು. ಗೃಹಸ್ಥರಾಗಿ ಐದೂ ಯಜ್ಞಯಾಗಮಾಡಿದವರು ಅಗ್ನಿಷ್ವಾತ್ತರು.

ವರ್ಷಗಳು ವತ್ಸರ ಸಂವತ್ಸರ ಪರಿವತ್ಸರ ಇಲಾವತ್ಸರ ಅನುವತ್ಸರ ಎಂದು ಐದು ಬಗೆಯಾಗಿವೆ. ಇವುಗಳಿಗೆಲ್ಲ ಅನುಕ್ರಮವಾಗಿ ರುದ್ರ, ಅಗ್ನಿ, ಸೂರ್ಯ, ಚಂದ್ರ, ವಾಯುಗಳು ಅಭಿಮಾನಿ ದೇವತೆಗಳಾಗಿದ್ದಾರೆ. ಚಂದ್ರನು ಇವುಗಳಲ್ಲಿ ನೆಲೆಸಿ ಅಮೃತ ಸಿಂಚನ ಮಾಡುವನು. ಅವನು ಸುರಿಸಿದ ಅಮೃತರಸಕ್ಕೆ ಸೋಮ ಎಂದು ಹೆಸರಿರುವದರಿಂದ ಅದನ್ನು ಪಾನಮಾಡುವ ಪಿತೃಗಳಿಗೆ 'ಸೋಮಪ' ಎಂದು ಹೆಸರು ಬಂದಿದೆ.

ಇದರಂತೆ ದೇವತೆಗಳು ಹದಿನೈದು ದಿನ ಚಂದ್ರನಲ್ಲಿರುವ ಅಮೃತವನ್ನು ಪಾನಮಾಡುವರು. ಅದರಿಂದ ಬರಿದಾದ ಚಂದ್ರಮಂಡಲವನ್ನು ತನ್ನ 'ಸುಷುಮ್ನಾ' ಎಂಬ ಕಿರಣದಿಂದ ದಿನದಿನಕ್ಕೆ ರಸಪೂರ್ಣವಾಗುವಂತೆ ಪುಷ್ಟಿಗೊಳಿಸುವನು. ಹೀಗೆ ಶುಕ್ಲಪಕ್ಷದಲ್ಲಿ ಬೆಳೆದು ಕೃಷ್ಣಪಕ್ಷದಲ್ಲಿ ಅವನ ಕಲೆಗಳು ಕ್ಷಯಿಸುತ್ತವೆ. ಹೀಗೆ ಚಂದ್ರನು ಪಿತೃಗಳ ಹಾಗೂ ದೇವತೆಗಳ ತೃಪ್ತಿಗೆ ಕಾರಣನಾಗಿ ಅಮೃತಮಯ ಎನಿಸುವನು.

ಅವನ ಅವಯವ ರೂಪವಾದ ಮಾಸ ಹಾಗೂ ಪಕ್ಷಗಳು ಪರ್ವಸಂಧಿಗಳಿಂದ ಒಂದಕ್ಕೊಂದು ಹೊಂದಿಕೊಂಡು ಇವೆ. ಶುಕ್ಲಪಕ್ಷ ಹಾಗೂ ಕೃಷ್ಣಪಕ್ಷ ಎಂದು ಅರ್ಧಮಾಸದಲ್ಲಿ ಎರಡು ವಿಧ, ಪೂರ್ಣಿಮೆ ಹಾಗೂ ಅಮಾವಾಸ್ಯಗಳು ಪರ್ವಸಂಧಿಗಳೆಂದು ಕರೆಯಲ್ಪಡುವವು. ಹುಣ್ಣಿಮೆ 'ಅನುಮತಿ', ರಾಕಾ' ಎಂದು ಎರಡು ವಿಧ. ಹುಣ್ಣಿಮೆ ಸಂಜೆ ಎರಡು ಲವಗಳ ಕಾಲಕ್ಕೆ ಅನುಮತಿ ಅನ್ನುವರು. ಅಪರಾಹ್ನದಲ್ಲಿ ಅದೇ ಎರಡು ಲವಗಳ ಕಾಲ 'ರಾಕಾ' ಎನಿಸುವದು. ಹುಣ್ಣಿಮೆ ದಿನ ಸೂರ್ಯನು ಕ್ರಾಂತಿವೃತ್ತದ ಸಂಪಾತದ ಸ್ಥಾನದಲ್ಲಿಯೂ, ಚಂದ್ರನು ವಿಷವವೃತ್ತದ ಸಂಧಿಸ್ಥಾನದಲ್ಲಿಯೂ ಇರುವನು. ಅವರಿಬ್ಬರೂ ಅಂದು ಪರಸ್ಪರ ಎದುರು ಬದುರಾಗಿ ಒಬ್ಬರನ್ನೊಬ್ಬರು ನೋಡುತ್ತಿರುವರು.

ಈ ಕ್ರಾಂತಿವೃತ್ತ ವಿಷವವೃತ್ತದ ಸಂಪಾತದಲ್ಲಿ ಹಗಲು ಅಪರಾಹ್ನ ಕಾಲದಲ್ಲಿ ಇವರಿಬ್ಬರ ಈ ನಿರೀಕ್ಷೆ ನಡೆಯುತ್ತದೆ. ಅಂದು ಚಂದ್ರನು ಪೂರ್ಣರೂಪದಿಂದ ಇರುವದರಿಂದ ಆ ತಿಥಿಗೆ 'ಪೂರ್ಣಿಮೆ' ಎಂದು. ಪಿತೃದೇವತೆಗಳು ಅಮೃತಪ್ರಾಶನ ಮಾಡಿ

ಅನುಮತಿಸುವದರಿಂದ 'ಅನುಮತಿ' ಎಂದೂ ಹೆಸರು. ಅಂದು ಚಂದ್ರನು ತನ್ನ ಅಕ್ಷಯ ಕಾಂತಿಯಿಂದ ಎಲ್ಲರನ್ನೂ ರಂಜಿಸುವ ಕಾರಣ 'ರಾಕಾ' ಎಂದು ಆ ದಿನವನ್ನು ಕರೆಯುತ್ತಾರೆ.

ಕೃಷ್ಣಪಕ್ಷದ ಹದಿನೈದನೇ ದಿನದ ಇರುಳು ರವಿ. ಚಂದ್ರರು ಏಕ ನಕ್ಷತ್ರದಲ್ಲಿ **'ಅಮಾ'** ಎಂದರೆ 'ಕೂಡಿ ವಾಸಿಸುವರು' ಎಂಬ ಕಾರಣದಿಂದ ಆ ತಿಥಿಗೆ **'ಅಮಾವಾಸ್ಯೆ'** ಎಂದು ಹೆಸರು ಬಂದಿದೆ. ಅವರಿಬ್ಬರೂ ಪರಸ್ಪರ ದರುಶನಮಾಡಿ ಕೊಳ್ಳುವದರಿಂದ ಆ ದಿನಕ್ಕೆ 'ದರ್ಶ' ಎಂದೂ ಸಂಜ್ಞೆಯುಂಟು. ಅಮಾವಾಸ್ಯೆಯ ದಿನದಲ್ಲೂ ಹಾಗೂ ಮಿಕ್ಕ ಸಂಧಿಕಾಲಗಳಲ್ಲೂ ಎರಡೆರಡು ಲವ ಪ್ರಮಾಣದ ಕಾಲಗಳನ್ನೂ ಪರ್ವಕಾಲವೆಂದು ತಿಳಿಯಬೇಕು. **'ಕುಹೂ'** ಎಂಬ ಎರಡು ಅಕ್ಷರಗಳನ್ನು ಉಚ್ಚಾರ ಮಾಡುವ ಕಾಲವೇ ಪರ್ವಕಾಲದ ಪರಿಮಿತಿ.

ಅಮಾವಾಸ್ಯೆಯು ಮಧ್ಯಾಹ್ನದಿಂದ ಆರಂಭವಾಗಿ ಆ ಅರ್ಧದಿನ ಹಾಗೂ ರಾತ್ರಿಯಲ್ಲಿಯೂ ಪ್ರವರ್ತಿಸಿದರೆ ಅದು **'ನಷ್ಟಚಂದ್ರ'** ಎಂದರೆ ಚಂದ್ರದರ್ಶನವಿಲ್ಲದ ಅಮಾವಾಸ್ಯಾ ಎನಿಸಿಕೊಳ್ಳುವದು. ಅದಕ್ಕೆ **'ಕುಹೂ'** ಎಂಬ ಸಂಜ್ಞೆ. ಆಗ ಚಂದ್ರನು ಸೂರ್ಯಬಿಂಬದಲ್ಲಿ ಸೇರಿ ಮರುದಿನ ಅವನೊಡನೆಯೇ ಉದಯ ಹೊಂದುವನು. ಎರಡು ಲವಗಳ ಕಾಲ ಹೀಗೆ ಶುಕ್ಲ ಪಕ್ಷ ಪ್ರತಿಪದೆಯ ದಿನ ಸಮಾಗಮ ಹೊಂದಿ ಮಧ್ಯಾಹ್ನದಲ್ಲಿ ಚಂದ್ರನು ಸೂರ್ಯನಿಂದ ಬೇರೆ ಆಗುವನು. ಒಂದು ಕಲೆಯೂ ಕಾಣದಂತೆ ಚಂದ್ರನು ಕ್ಷೀಣನಾದರೆ ಅಮಾವಾಸ್ಯೆಯ ದಿನ ಪರ್ವಕಾಲವು ಹಗಲಿನಲ್ಲಾಗುವದು. ಆ ದಿನ ಸೂರ್ಯನು ಅಮಾವಾಸ್ಯಾ ತಿಥಿಯನ್ನು ಹಗಲಿನಲ್ಲಿಯೇ ಪ್ರವೇಶಿಸುವನು. ಕೋಗಿಲೆಯು 'ಕುಹೂ' ಎಂದು ಕೂಗುವದಕ್ಕೆ ತಗಲುವ ಸಮಯದಷ್ಟೇ ಪರಿಮಿತಿಯಿದ್ದ ಪರ್ವಕಾಲದ ಸಂಬಂಧವಿದ್ದ ಕಾರಣ ಆ ಅಮಾವಾಸ್ಯೆಗೆ **'ಕುಹೂ'** ಎಂದು ಹೆಸರು ಬಂದಿದೆ. ಅಮಾವಾಸ್ಯೆಯ ದಿನ ಚಂದ್ರಕಲೆಯ ದರ್ಶನವಾಗುವಷ್ಟು ಕಾಲಕ್ಕೆ **'ಸಿನೀವಾಲೀ'** ಎನ್ನುವರು. ತನ್ಮೂಲಕವಾಗಿ ಆ ತಿಥಿಗೂ **'ಸಿನೀವಾಲಿ'** ಎಂಬ ಹೆಸರು ಬಂದಿತು.

ಹೀಗೆ ಈ ಎಲ್ಲ ಪರ್ವಸಂಧಿಗಳೂ ಎರಡು ಲವ ಪ್ರಮಾಣ ಉಳ್ಳದ್ದಾಗಿರುವವು. ಚಂದ್ರನು ಶುಕ್ಲಪಕ್ಷದಲ್ಲಿ ಬೆಳೆಯುತ್ತ ಹದಿನೈದುದಿನಗಳಲ್ಲಿ ಪೂರ್ಣವಾಗುವನು. ದಿನಕ್ಕೊಂದರಂತೆ ಅವನಲ್ಲಿ ಹದಿನೈದು ಕಲೆಗಳು ತುಂಬುವವು. ಮುಂದೆ ಕೃಷ್ಣ ಪಕ್ಷದಲ್ಲಿ ಒಂದೊಂದೇ ಕ್ಷಯಿಸುವವು. ವೃದ್ಧಿಕ್ಷಯಗಳಿಗೆ ಗುರಿಯಾಗುವ ಚಂದ್ರನ ಕಲೆಗಳು ಈ ಹದಿನೈದು ಮಾತ್ರ. ಹದಿನಾರನೇಯದು ಅಲ್ಲವೆಂದು ತಿಳಿಯಬೇಕು.

ಚಂದ್ರನ ಕಲೆಗಳನ್ನು ಪಾನಮಾಡಿ ಅಪ್ಯಾಯನ ಹೊಂದುವ ಪಿತೃಗಳು ಆರ್ತವ, ಪಂಚಾಬ್ದ ಮುಂತಾದ ಹೆಸರುಗಳಿಂದ ಪ್ರಸಿದ್ಧರಾಗಿದ್ದಾರೆ. ಇನ್ನು ಮುಂದೆ ಶ್ರಾದ್ಧ ಭೋಕ್ತೃಗಳು ಎನಿಸಿದ ಪಿತೃಗಳ ಬಗ್ಗೆ ಹಾಗೂ ಅವರ ಗತಿ ಹಾಗೂ ಮಹಿಮೆ ಮತ್ತು ಶ್ರಾದ್ಧದ ಫಲ ಮುಂತಾದವುಗಳ ವಿಷಯವಾಗಿ ವಿವರಿಸುತ್ತೇನೆ ಕೇಳಿರಿ.

ಲೌಕಿಕರಾದ ಪಿತೃಗಳು ದೇವತೆಗಳನ್ನು ಪಿತೃಗಳನ್ನು ಆಶ್ರಯಿಸಿ ತಮ್ಮ ಧರ್ಮಕರ್ಮಗಳ ಅನುಷ್ಠಾನದಿಂದ ಸದ್ಗತಿಯನ್ನು ಪಡೆಯುತ್ತಾರೆ. ವರ್ಣಾಶ್ರಮ ಧರ್ಮಗಳನ್ನು ಅನುಸರಿಸಿ ಶಾಸ್ತ್ರೋಕ್ತ ವಿಧಿನಿಷೇಧಗಳನ್ನು ಪಾಲಿಸಿ,

ಆ ಚಂದ್ರನಿಂದ ಹರಿಯುವ ಮಧುವಿನಿಂದಲೇ ಅವನು ಪಿತೃಗಳಿಗೆ ತಿಲಾಂಜಲಿ ಕೊಡುವನು. ಅದರಿಂದ ನಾಲ್ಕುವಿಧವಾದ ಪಿತೃಗಳು ಪ್ರೀತರಾಗುವರು. ಜ್ಞಾನಿಗಳು ಅಗ್ನಿಯನ್ನು "ಋತು" ಎಂದು ಕರೆಯುವರು. ಋತುಗಳು ಸಂವತ್ಸರದಿಂದ ಹುಟ್ಟಿದವು. ಋತುಗಳಿಂದ ಅರ್ಧಮಾಸಗಳು ಜನಿಸಿದವು. ಆ ಅರ್ಧಮಾಸಗಳೆಂದರೆ ಅನ್ನಪ ಪಿತೃಗಳೇ. ಪರಿವತ್ಸರದಿಂದ ಜನಿಸಿದ ಋತುಗಳೂ ಮಾಸಗಳೂ ಪಿತಾಮಹರು ಎನಿಸುವರು. ಸಂವತ್ಸರ ಪರಿವತ್ಸರ ಮೊದಲಾದ ಪಂಚವಿಧ ವರ್ಷಗಳಿಗೆ ಅಭಿಮಾನಿಗಳಾಗಿರುವ ದೇವತೆಗಳು ಪ್ರಪಿತಾಮಹರು.

ಚಂದ್ರನ ಅಮೃತಕಲೆಯಿಂದ ತೃಪ್ತಿಪಡೆಯುವ ಪಿತೃಗಳಲ್ಲಿ ಬರ್ಹಿಷದ, ಕಾವ್ಯ, ಅಗ್ನಿಷ್ವಾತ್ತ ಎಂಬ ಮೂರು ಗುಂಪುಗಳಿವೆ. ಗೃಹಸ್ಥರಾಗಿ ಅಗ್ನಿಹೋತ್ರವಿಟ್ಟು ಯಜ್ಞಯಾಗಗಳನ್ನು ಮಾಡುವವರು ಬರ್ಹಿಷದರು: "ಅಷ್ಟಕ" ಎಂಬ ಶ್ರಾದ್ಧದ ಅಭಿಮಾನಿ ಪಿತೃಗಳು ಕಾವ್ಯ ಎನಿಸುವರು. ಗೃಹಸ್ಥರಾಗಿ ಐದೂ ಯಜ್ಞಯಾಗಮಾಡಿದವರು ಅಗ್ನಿಷ್ವಾತ್ತರು.

ವರ್ಷಗಳು ವತ್ಸರ ಸಂವತ್ಸರ ಪರಿವತ್ಸರ ಇಲಾವತ್ಸರ ಅನುವತ್ಸರ ಎಂದು ಐದು ಬಗೆಯಾಗಿವೆ. ಇವುಗಳಿಗೆಲ್ಲ ಅನುಕ್ರಮವಾಗಿ ರುದ್ರ, ಅಗ್ನಿ, ಸೂರ್ಯ, ಚಂದ್ರ, ವಾಯುಗಳು ಅಭಿಮಾನಿ ದೇವತೆಗಳಾಗಿದ್ದಾರೆ. ಚಂದ್ರನು ಇವುಗಳಲ್ಲಿ ನೆಲೆಸಿ ಅಮೃತ ಸಿಂಚನ ಮಾಡುವನು. ಅವನು ಸುರಿಸಿದ ಅಮೃತರಸಕ್ಕೆ ಸೋಮ ಎಂದು ಹೆಸರಿರು ವದರಿಂದ ಅದನ್ನು ಪಾನಮಾಡುವ ಪಿತೃಗಳಿಗೆ 'ಸೋಮಪ' ಎಂದು ಹೆಸರು ಬಂದಿದೆ.

ಇದರಂತೆ ದೇವತೆಗಳು ಹದಿನೈದು ದಿನ ಚಂದ್ರನಲ್ಲಿರುವ ಅಮೃತವನ್ನು ಪಾನಮಾಡುವರು. ಅದರಿಂದ ಬರಿದಾದ ಚಂದ್ರಮಂಡಲವನ್ನು ತನ್ನ 'ಸುಷುಮ್ನಾ' ಎಂಬ ಕಿರಣದಿಂದ ದಿನದಿನಕ್ಕೆ ರಸಪೂರ್ಣವಾಗುವಂತೆ ಪುಷ್ಟಿಗೊಳಿಸುವನು. ಹೀಗೆ ಶುಕ್ಲಪಕ್ಷದಲ್ಲಿ ಬೆಳೆದು ಕೃಷ್ಣಪಕ್ಷದಲ್ಲಿ ಅವನ ಕಲೆಗಳು ಕ್ಷಯಿಸುತ್ತವೆ. ಹೀಗೆ ಚಂದ್ರನು ಪಿತೃಗಳ ಹಾಗೂ ದೇವತೆಗಳ ತೃಪ್ತಿಗೆ ಕಾರಣನಾಗಿ ಅಮೃತಮಯ ಎನಿಸುವನು.

ಅವನ ಅವಯವ ರೂಪವಾದ ಮಾಸ ಹಾಗೂ ಪಕ್ಷಗಳು ಪರ್ವಸಂಧಿಗಳಿಂದ ಒಂದಕ್ಕೊಂದು ಹೊಂದಿಕೊಂಡು ಇವೆ. ಶುಕ್ಲಪಕ್ಷ ಹಾಗೂ ಕೃಷ್ಣಪಕ್ಷ ಎಂದು ಅರ್ಧಮಾಸದಲ್ಲಿ ಎರಡು ವಿಧ, ಪೂರ್ಣಿಮೆ ಹಾಗೂ ಅಮಾವಾಸ್ಯೆಗಳು ಪರ್ವಸಂಧಿಗಳೆಂದು ಕರೆಯಲ್ಪಡುವವು. ಹುಣ್ಣಿಮೆ 'ಅನುಮತಿ', ರಾಕಾ' ಎಂದು ಎರಡು ವಿಧ. ಹುಣ್ಣಿಮೆ ಸಂಜೆ ಎರಡು ಲವಗಳ ಕಾಲಕ್ಕೆ ಅನುಮತಿ ಅನ್ನುವರು. ಅಪರಾಹ್ನದಲ್ಲಿ ಅದೇ ಎರಡು ಲವಗಳ ಕಾಲ 'ರಾಕಾ' ಎನಿಸುವದು. ಹುಣ್ಣಿಮೆ ದಿನ ಸೂರ್ಯನು ಕ್ರಾಂತಿವೃತ್ತದ ಸಂಪಾತದ ಸ್ಥಾನದಲ್ಲಿಯೂ, ಚಂದ್ರನು ವಿಷವವೃತ್ತದ ಸಂಧಿಸ್ಥಾನದಲ್ಲಿಯೂ ಇರುವನು. ಅವರಿಬ್ಬರೂ ಅಂದು ಪರಸ್ಪರ ಎದುರು ಬದುರಾಗಿ ಒಬ್ಬರನ್ನೊಬ್ಬರು ನೋಡುತ್ತಿರುವರು.

ಈ ಕ್ರಾಂತಿವೃತ್ತ ವಿಷವವೃತ್ತದ ಸಂಪಾತದಲ್ಲಿ ಹಗಲು ಅಪರಾಹ್ನ ಕಾಲದಲ್ಲಿ ಇವರಿಬ್ಬರ ಈ ನಿರೀಕ್ಷೆ ನಡೆಯುತ್ತದೆ. ಅಂದು ಚಂದ್ರನು ಪೂರ್ಣರೂಪದಿಂದ ಇರುವದರಿಂದ ಆ ತಿಥಿಗೆ 'ಪೂರ್ಣಿಮೆ' ಎಂದು. ಪಿತೃದೇವತೆಗಳು ಅಮೃತಪ್ರಾಶನ ಮಾಡಿ

ಅನುಮತಿಸುವದರಿಂದ 'ಅನುಮತಿ' ಎಂದೂ ಹೆಸರು. ಅಂದು ಚಂದ್ರನು ತನ್ನ ಅಕ್ಷಯ ಕಾಂತಿಯಿಂದ ಎಲ್ಲರನ್ನೂ ರಂಜಿಸುವ ಕಾರಣ 'ರಾಕಾ' ಎಂದು ಆ ದಿನವನ್ನು ಕರೆಯುತ್ತಾರೆ.

ಕೃಷ್ಣಪಕ್ಷದ ಹದಿನೈದನೇ ದಿನದ ಇರುಳು ರವಿ. ಚಂದ್ರರು ಏಕ ನಕ್ಷತ್ರದಲ್ಲಿ **'ಅಮಾ'** ಎಂದರೆ 'ಕೂಡಿ ವಾಸಿಸುವರು' ಎಂಬ ಕಾರಣದಿಂದ ಆ ತಿಥಿಗೆ **'ಅಮಾವಾಸ್ಯೆ'** ಎಂದು ಹೆಸರು ಬಂದಿದೆ. ಅವರಿಬ್ಬರೂ ಪರಸ್ಪರ ದರುಶನಮಾಡಿ ಕೊಳ್ಳುವದರಿಂದ ಆ ದಿನಕ್ಕೆ 'ದರ್ಶ' ಎಂದೂ ಸಂಜ್ಞೆಯುಂಟು. ಅಮಾವಾಸ್ಯೆಯ ದಿನದಲ್ಲೂ ಹಾಗೂ ಮಿಕ್ಕ ಸಂಧಿಕಾಲಗಳಲ್ಲೂ ಎರಡೆರಡು ಲವ ಪ್ರಮಾಣದ ಕಾಲಗಳನ್ನೂ ಪರ್ವಕಾಲವೆಂದು ತಿಳಿಯಬೇಕು. **'ಕುಹೂ'** ಎಂಬ ಎರಡು ಅಕ್ಷರಗಳನ್ನು ಉಚ್ಚಾರ ಮಾಡುವ ಕಾಲವೇ ಪರ್ವಕಾಲದ ಪರಿಮಿತಿ.

ಅಮಾವಾಸ್ಯೆಯು ಮಧ್ಯಾಹ್ನದಿಂದ ಆರಂಭವಾಗಿ ಆ ಅರ್ಧದಿನ ಹಾಗೂ ರಾತ್ರಿಯಲ್ಲಿಯೂ ಪ್ರವರ್ತಿಸಿದರೆ ಅದು **'ನಷ್ಟಚಂದ್ರ'** ಎಂದರೆ ಚಂದ್ರದರ್ಶನವಿಲ್ಲದ ಅಮಾವಾಸ್ಯಾ ಎನಿಸಿಕೊಳ್ಳುವದು. ಅದಕ್ಕೆ **'ಕುಹೂ'** ಎಂಬ ಸಂಜ್ಞೆ. ಆಗ ಚಂದ್ರನು ಸೂರ್ಯಬಿಂಬದಲ್ಲಿ ಸೇರಿ ಮರುದಿನ ಅವನೊಡನೆಯೇ ಉದಯ ಹೊಂದುವನು. ಎರಡು ಲವಗಳ ಕಾಲ ಹೀಗೆ ಶುಕ್ಲ ಪಕ್ಷ ಪ್ರತಿಪದೆಯ ದಿನ ಸಮಾಗಮ ಹೊಂದಿ ಮಧ್ಯಾನ್ಹದಲ್ಲಿ ಚಂದ್ರನು ಸೂರ್ಯನಿಂದ ಬೇರೆ ಆಗುವನು. ಒಂದು ಕಲೆಯೂ ಕಾಣದಂತೆ ಚಂದ್ರನು ಕ್ಷೀಣನಾದರೆ ಅಮಾವಾಸ್ಯೆಯ ದಿನ ಪರ್ವಕಾಲವು ಹಗಲಿನಲ್ಲಾಗುವದು. ಆ ದಿನ ಸೂರ್ಯನು ಅಮಾವಾಸ್ಯಾ ತಿಥಿಯನ್ನು ಹಗಲಿನಲ್ಲಿಯೇ ಪ್ರವೇಶಿಸುವನು. ಕೋಗಿಲೆಯು 'ಕುಹೂ' ಎಂದು ಕೂಗುವದಕ್ಕೆ ತಗಲುವ ಸಮಯದಷ್ಟೇ ಪರಿಮಿತಿಯಿದ್ದ ಪರ್ವಕಾಲದ ಸಂಬಂಧವಿದ್ದ ಕಾರಣ ಆ ಅಮಾವಾಸ್ಯೆಗೆ **'ಕುಹೂ'** ಎಂದು ಹೆಸರು ಬಂದಿದೆ. ಅಮಾವಾಸ್ಯೆಯ ದಿನ ಚಂದ್ರಕಲೆಯ ದರ್ಶನವಾಗುವಷ್ಟು ಕಾಲಕ್ಕೆ **'ಸಿನೀವಾಲೀ'** ಎನ್ನುವರು. ತನ್ಮೂಲಕವಾಗಿ ಆ ತಿಥಿಗೂ **'ಸಿನೀವಾಲಿ'** ಎಂಬ ಹೆಸರು ಬಂದಿತು.

ಹೀಗೆ ಈ ಎಲ್ಲ ಪರ್ವಸಂಧಿಗಳೂ ಎರಡು ಲವ ಪ್ರಮಾಣ ಉಳ್ಳದ್ದಾಗಿರುವವು. ಚಂದ್ರನು ಶುಕ್ಲಪಕ್ಷದಲ್ಲಿ ಬೆಳೆಯುತ್ತ ಹದಿನೈದುದಿನಗಳಲ್ಲಿ ಪೂರ್ಣವಾಗುವನು. ದಿನಕ್ಕೊಂದರಂತೆ ಅವನಲ್ಲಿ ಹದಿನೈದು ಕಲೆಗಳು ತುಂಬುವವು. ಮುಂದೆ ಕೃಷ್ಣ ಪಕ್ಷದಲ್ಲಿ ಒಂದೊಂದೇ ಕ್ಷಯಿಸುವವು. ವೃದ್ಧಿಕ್ಷಯಗಳಿಗೆ ಗುರಿಯಾಗುವ ಚಂದ್ರನ ಕಲೆಗಳು ಈ ಹದಿನೈದು ಮಾತ್ರ. ಹದಿನಾರನೇಯದು ಅಲ್ಲವೆಂದು ತಿಳಿಯಬೇಕು.

ಚಂದ್ರನ ಕಲೆಗಳನ್ನು ಪಾನಮಾಡಿ ಅಪ್ಯಾಯನ ಹೊಂದುವ ಪಿತೃಗಳು ಅರ್ತವ, ಪಂಚಾಬ್ದ ಮುಂತಾದ ಹೆಸರುಗಳಿಂದ ಪ್ರಸಿದ್ಧರಾಗಿದ್ದಾರೆ. ಇನ್ನು ಮುಂದೆ ಶ್ರಾದ್ಧ ಭೋಕ್ತೃಗಳು ಎನಿಸಿದ ಪಿತೃಗಳ ಬಗ್ಗೆ ಹಾಗೂ ಅವರ ಗತಿ ಹಾಗೂ ಮಹಿಮೆ ಮತ್ತು ಶ್ರಾದ್ಧದ ಫಲ ಮುಂತಾದವುಗಳ ವಿಷಯವಾಗಿ ವಿವರಿಸುತ್ತೇನೆ ಕೇಳಿರಿ.

ಲೌಕಿಕರಾದ ಪಿತೃಗಳು ದೇವತೆಗಳನ್ನು ಪಿತೃಗಳನ್ನು ಆಶ್ರಯಿಸಿ ತಮ್ಮ ಧರ್ಮಕರ್ಮಗಳ ಅನುಷ್ಠಾನದಿಂದ ಸದ್ಗತಿಯನ್ನು ಪಡೆಯುತ್ತಾರೆ. ವರ್ಣಾಶ್ರಮ ಧರ್ಮಗಳನ್ನು ಅನುಸರಿಸಿ ಶಾಸ್ತ್ರೋಕ್ತ ವಿಧಿನಿಷೇಧಗಳನ್ನು ಪಾಲಿಸಿ,

ಧರ್ಮಕರ್ಮಗಳಲ್ಲಿ ಶ್ರದ್ಧಾಳುಗಳಾಗಿ ವಿಹಿತಕಾರ್ಯ ಮಾಡುವವರ ವಿಷಯದಲ್ಲಿ ಪಿತೃದೇವತೆಗಳು ಪ್ರಸನ್ನರಾಗುತ್ತಾರೆ. ಬ್ರಹ್ಮಚರ್ಯ, ತಪಸ್ಸು, ಯಜ್ಞ, ಪುತ್ರೋತ್ಪತ್ತಿ, ಶ್ರಾದ್ಧ, ಪಾಠಪ್ರವಚನ, ಅನ್ನದಾನ ಈ ಏಳು ಸತ್ಕಾರ್ಯಗಳನ್ನು ಬದುಕಿ ಇರುವವರೆಗೂ ಮಾಡುವ ಮಹನೀಯರು **'ಕೂಷ್ಮಪ' ಸೋಮಪ'** ಮುಂತಾದ ಪಿತೃ ಹಾಗೂ ದೇವತೆಗಳೊಡನೆ ಕೂಡಿ ಸ್ವರ್ಗಲೋಕದಲ್ಲಿ ಆನಂದಪಡೆಯುವರು. ಪುತ್ರ, ಪೌತ್ರಾದಿಗಳಿಂದ ಕೂಡಿ, ಶ್ರದ್ಧೆಯಿಂದ ಶ್ರಾದ್ಧ ಮಾಡುವವರು ಪಿತೃದೇವತೆಗಳ ಅನುಗ್ರಹಕ್ಕೆ ಪಾತ್ರರಾಗಿ ದಿವ್ಯಗತಿಯನ್ನು ಹೊಂದುವರು. ಬಂಧುಗಳು, ವಂಶಜರು, ಕೊಡುವ ತಿಲತರ್ಪಣ, ಶ್ರಾದ್ಧದ ಹವಿಸ್ಸನ್ನು ಭುಂಜಿಸುತ್ತ ಮನುಷ್ಯ ಪಿತೃಗಳು ಚಂದ್ರಲೋಕದಲ್ಲಿ ಇರುವವರು. ವರ್ಣಾಶ್ರಮ ಧರ್ಮಗಳನ್ನು ಬಿಟ್ಟು ಕರ್ಮಭ್ರಷ್ಟರಾದವರು ಮಾತ್ರ ಮರಣಾನಂತರ ಪ್ರೇತಗಳಾಗಿ ಯಮಲೋಕದಲ್ಲಿ ಘೋರ ಯಾತನೆಗಳನ್ನು ಅನುಭವಿಸುತ್ತಾ ಭಯಂಕರ ಅಸಹ್ಯವಾದ ದುಃಖಗಳನ್ನು ಭೋಗಿಸುವರು. ಶಾಲ್ಮಲಿ, ವೈತರಣಿ, ಕುಂಭೀಪಾಕ, ಅರ್ಧವಾಲುಕ, ಅಶಿಪತ್ರವನ ಮುಂತಾದ ಘೋರನರಕಗಳಲ್ಲಿ ತಮ್ಮ ದುಷ್ಕರ್ಮಗಳಿಗನುಸಾರವಾಗಿ ದುಃಖಿಸುವರು.

ಹೀಗೆ ಲೋಕಾಂತರದಲ್ಲಿಯಾಗಲಿ, ನರಕಗಳಲ್ಲಿಯೇ ಆಗಲಿ ನರಿ, ನಾಯಿ, ನರ, ಸುರ, ಅಸುರ ಮುಂತಾದ ಜನ್ಮಗಳಲ್ಲಿಯೇ ಆಗಲಿ ಎಲ್ಲಿಯೇ ಇದ್ದರೂ ಅವರ ವಂಶಜರು ಶ್ರಾದ್ಧಮಾಡಿ ತರ್ಪಣಕೊಟ್ಟರೆ ಪಿತೃಗಳು ಇದ್ದಲ್ಲಿಯೇ ಆನಂದಿತರಾಗುವರು. ತರ್ಪಣ ಕೊಟ್ಟ ನೀರು ಎಳ್ಳು ಹಾಗೂ ಶ್ರಾದ್ಧಾನ್ನಗಳು ಆಯಾ ಜನ್ಮದ ಆಹಾರವಾಗಿ ಪಿತೃಗಳಿಗೆ ಇದ್ದಲ್ಲಿ ಒದಗಿ ಬಂದು ಪರಮ ಸಂತೋಷವನ್ನು ಹಾಗೂ ಪೂರ್ಣ ತೃಪ್ತಿಯನ್ನೂ ಕೊಡುತ್ತವೆ.

ಶ್ರಾದ್ಧಕ್ಕೆ ನ್ಯಾಯಮಾರ್ಗದಿಂದ ಸಂಪಾದಿಸಿದ ದ್ರವ್ಯವನ್ನೇ ಉಪಯೋಗಿಸಬೇಕು. ಅದನ್ನು ಕೂಡಾ ಸತ್ಪಾತ್ರದಲ್ಲಿಯೇ ಉಪಯೋಗಿಸಬೇಕು. ಹಿಂಡುಹಿಂಡು ಆಕಳುಗಳಿದ್ದರೂ ಕರುವು ತನ್ನ ತಾಯಿಯನ್ನು ಗುರುತಿಸಿ ಹೋಗುವಂತೆ ಶ್ರಾದ್ಧದಲ್ಲಿ ಕೊಟ್ಟ ಅನ್ನ ಅಥವಾ ಅನ್ನಾದಿ ವಸ್ತುಗಳು ಬೇರೆಯವರಿಗೆ ಹೋಗದೆ, ಉದ್ದಿಷ್ಟರಾದ ಪಿತೃಗಳಿಗೇ ಹೋಗುತ್ತವೆ. ಅಂತಹ ಶಕ್ತಿಯು ಶ್ರಾದ್ಧಮಂತ್ರ ಹಾಗೂ ಯಜಮಾನನ ಶ್ರದ್ಧೆಗೆ ಇದೆ. ''ಶ್ರದ್ಧೆಯಿಂದಲೇ ನಡೆಸುವ ಕರ್ಮವಾದ ಇದಕ್ಕೆ ಶ್ರಾದ್ಧವೆಂದು ಹೆಸರು'' ಎಂದು ಮನುಸ್ಮೃತಿಕಾರರು ಹೇಳಿದ್ದಾರೆ. ಪಿತೃಗಳಿಗೆ ಕೃಷ್ಣಪಕ್ಷವೇ ಹಗಲು, ಶುಕ್ಲಪಕ್ಷವೇ ನಿದ್ರೆಯ ಕಾಲವಾದ ರಾತ್ರಿ ಎಂದು ದಿವ್ಯಜ್ಞಾನಿಯಾದ ಸನತ್‌ಕುಮಾರರು ಹೇಳಿದ್ದಾರೆ. ಪಿತೃಗಳು ದೇವತಾಸ್ವರೂಪರು. ದೇವತೆಗಳು ಪಿತೃಸ್ವರೂಪರು. ಹಾಗೂ ಅವರಿಬ್ಬರೂ ಪಿತೃಸ್ವರೂಪರಾಗಿದ್ದಾರೆ. ಪಂಚಾಬ್ದ ಋತು, ಅರ್ಧಮಾಸ ಎಂಬ ರೂಪದಿಂದಲೂ ಪಿತೃಗಳು, ದೇವಪಿತೃಗಳು ಇದರಂತೆ ಮನುಷ್ಯಪಿತೃಗಳೂ ಉಂಟು. ಇವರನ್ನು 'ಪಿತ, ಪಿತೃ, ಪಿತಾಮಹ' ಎಂದು ಹೇಳುವರು. ಈ ಸೃಷ್ಟಿಯು ಸನಾತನ ಹಾಗೂ ಪುರಾತನವಾಗಿದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತಮೂರನೆಯ ಅಧ್ಯಾಯ ಮುಗಿದುದು.*

—o—



ಸಪ್ತರ್ಷಿಗಳು ಹಾಗೂ ಮನು ಮಹಾರಾಜನನ್ನು ಪ್ರಳಯ ಸಾಗರದಲ್ಲಿ ತೇಲಿಸುತ್ತಿರುವ ಮತ್ಸ್ಯಾವತಾರಿ ಶ್ರೀಹರಿ

## ಮನ್ವಂತರಗಳ ಕಾಲಮಾನ ಮತ್ತು ಯುಗಧರ್ಮ | ಅಧ್ಯಾಯ - ೧೪೪

**ಋಷಿಯ ಉವಾಚಃ**

**ಚತುರ್ಯುಗಾನಿ ಯಾನಿ ಸ್ಯುಃ ಪೂರ್ವೇ ಸ್ವಾಯಂಭುವೇಽಂತರೇ ।**
**ಏಷಾಂ ನಿಸರ್ಗಂ ಸಂಖ್ಯಾಂ ಚ ಶ್ರೋತುಮಿಚ್ಛಾಮಿ ವಿಸ್ತರಾತ್ ॥**

**ಋಷಿಗಳು** :- ಹಿಂದಿನ ಸ್ವಾಯಂಭುವ ಮನ್ವಂತರದಲ್ಲಿ ಚತುರ್ಯುಗಗಳು ಕಳೆದವಷ್ಟೇ ! ಅವುಗಳ ಲಕ್ಷಣವನ್ನೂ, ಪ್ರಮಾಣವನ್ನೂ, ಪರಿಮಾಣವನ್ನೂ ವಿಸ್ತಾರವಾಗಿ ಕೇಳಬೇಕೆಂದು ನನ್ನ ಇಚ್ಛೆ.

**ಸೂತ** :- ಲೌಕಿಕ ಪ್ರಮಾಣದಿಂದ ಮನುಷ್ಯ ಮಾನದ ವರ್ಷದ ಅವಧಿಯನ್ನು ನಿರೂಪಿಸಿ ಅದರ ಮೂಲಕ ಚತುರ್ಯುಗಗಳ ಪ್ರಮಾಣವನ್ನು ಹೇಳುತ್ತೇನೆ.

ಹದಿನ್ನೈದುಸಲ ಕಣ್ಣಿನ ರೆಪ್ಪೆಬಡೆಯಲು ಹಿಡಿಯುವಷ್ಟು ಸಮಯಕ್ಕೆ ಒಂದು ಕಾಷ್ಠ ಎನ್ನುವರು. ಇಂಥ ಮೂವತ್ತು ಕಾಷ್ಠಗಳೆಂದರೆ ಒಂದು ಕಲೆ. ಮೂವತ್ತು ಕಲೆ ಎಂದರೆ ಒಂದು ಮೂಹೂರ್ತ. ಮೂವತ್ತು ಮುಹೂರ್ತಗಳಿಗೆ ಒಂದು ದಿನ. ಮೂವತ್ತು ದಿನಗಳೆಂದರೆ ಒಂದು ತಿಂಗಳು. ಮನುಷ್ಯ ಮಾನದ ಒಂದು ತಿಂಗಳು ಎಂದರೆ ಪಿತೃಮಾನದಲ್ಲಿ ಒಂದು ದಿವಸ. ಮನುಷ್ಯ ಮಾನದ ಮೂವತ್ತು ತಿಂಗಳೆಂದರೆ ಪಿತೃಗಳಿಗೆ ಒಂದು ತಿಂಗಳು. ಮನುಷ್ಯ ಮಾನದ ಮುನ್ನೂರು ಅರವತ್ತು ತಿಂಗಳಾದರೆ ಪಿತೃಗಳಿಗೆ ಒಂದು ವರ್ಷ.

ಮಾನವರ ನೂರು ವರ್ಷಗಳು ಪಿತೃಗಳ ಮೂರು ವರ್ಷ ಮೇಲೆ ಹತ್ತು ತಿಂಗಳಿಗೆ ಸಮ. ಮಾನವರ ಮೂವತ್ತು ದಿನಗಳಲ್ಲಿ ಹದಿನ್ನೈದು ದಿನ ಶುಕ್ಲಪಕ್ಷ. ಹದಿನ್ನೈದು ದಿನ ಕೃಷ್ಣಪಕ್ಷ. ಕೃಷ್ಣಪಕ್ಷವು ಅವರ ಹಗಲು. ಶುಕ್ಲಪಕ್ಷವು ಅವರ ರಾತ್ರಿ. ಇದು ಮನುಷ್ಯ ಮತ್ತು ಪಿತೃಗಳ ಕಾಲಮಾನ.

ಇಂಥ ಮನುಷ್ಯ ಮಾನದ ಒಂದು ವರ್ಷವೆಂದರೆ ದೇವತೆಗಳಿಗೆ ಒಂದು ಹಗಲಿರುಳು ಕೂಡಿದ ಪೂರ್ಣ ದಿನ. ಉತ್ತರಾಯಣವೇ ದೇವತೆಗಳ ಹಗಲು. ದಕ್ಷಿಣಾಯಣ ರಾತ್ರಿ. ಮಾನವರ ಮೂವತ್ತು ವರ್ಷಗಳೆಂದರೆ ದೇವತೆಗಳಿಗೆ ಒಂದು ತಿಂಗಳು. ಮಾನವರ ನೂರು ವರ್ಷಗಳು ದೇವತಾಮಾನದ ಮೂರು ತಿಂಗಳುಗಳ ಮೇಲೆ ಹತ್ತು ದಿನಗಳಿಗೆ ಸಮ. ಮಾನವ ಮಾನದಲ್ಲಿ ಮೂರುನೂರಾ ಅರವತ್ತು ವರ್ಷಗಳೆಂದರೆ ದೇವಮಾನದಲ್ಲಿ ಒಂದು ವರ್ಷ. ಮನುಷ್ಯ ಪ್ರಮಾಣದ ಮೂರು ಸಾವಿರ ಮೂವತ್ತು ವರ್ಷಗಳೆಂದರೆ ಸಪ್ತರ್ಷಿಗಳ ಒಂದು ವರ್ಷ. ಮನುಷ್ಯ ಪ್ರಮಾಣದ ಒಂಭತ್ತು ಸಾವಿರ ತೊಂಭತ್ತು ವರ್ಷಗಳಿಗೆ ಒಂದು ಧ್ರುವ ಸಂವತ್ಸರ ಎನ್ನುವರು. ಇದೇ ಮಾನವ ಮಾನದ ಮೂವತ್ತಾರು ಸಾವಿರ ವರ್ಷಗಳೂ ದೇವಮಾನದ ಒಂದು ನೂರು ವರ್ಷಕ್ಕೆ ಸಮಾನವಾಗಿವೆ. ಮನುಷ್ಯರ ಮೂರು ಲಕ್ಷ ಅರವತ್ತು ಸಾವಿರ ವರ್ಷಗಳು ಪೂರ್ತಿಯಾದಾಗ ದೇವತೆಗಳ ಒಂದುಸಾವಿರ ವರ್ಷವಾಗುತ್ತವೆ.

ಯುಗಗಳು ನಾಲ್ಕು, ಕೃತ, ತ್ರೇತಾ, ದ್ವಾಪರ ಮತ್ತು ಕಲಿ. ಇವು ಒಂದಾದ ಮೇಲೊಂದು ಕ್ರಮವಾಗಿ ಬರುತ್ತವೆ. ಕೃತಯುಗದ ಅವಧಿ ದೇವಮಾನದ ನಾಲ್ಕು ಸಾವಿರ ವರ್ಷ. ಸಂಧ್ಯಾ ಕಾಲವು ನಾಲ್ಕು ನೂರು ವರ್ಷ. ಸಂಧ್ಯಾಂಶವೂ ಅಷ್ಟೆ. ತ್ರೇತಾಯುಗದ ಪ್ರಮಾಣ ಮೂರು ಸಾವಿರ ವರ್ಷ. ಅದರ ಸಂಧ್ಯಾಕಾಲ ಸಂಧ್ಯಾಂಶಗಳು ಮುನ್ನೂರು ವರ್ಷ. ದ್ವಾಪರಯುಗದ ಪರಿಮಿತಿ ಎರಡು ಸಾವಿರ ವರ್ಷ. ಅದರ ಸಂಧ್ಯಾಕಾಲ ಸಂಧ್ಯಾಂಶ ಕಾಲ ಸೇರಿ ಒಟ್ಟು ನಾನೂರು ವರ್ಷ. ಕೊನೆಯದಾದ ಕಲಿಯುಗವು ಒಂದು ಸಾವಿರ ವರ್ಷದ ಅವಧಿಯುಳ್ಳದ್ದು. ಅದರ ಸಂಧ್ಯಾಕಾಲ ನೂರು ವರ್ಷ. ಈ ನಾಲ್ಕು ಯುಗಗಳ ಅವಧಿಯು ಒಟ್ಟು ಹನ್ನೆರಡು ಸಾವಿರ ವರ್ಷ.

ಯುಗಗಳ ಪರಿಮಾಣವನ್ನು ದೇವಮಾನದಲ್ಲಿ ಈವರೆಗೆ ತಿಳಿಸಿದೆ. ಮನುಷ್ಯ ಮಾನದಲ್ಲಿ ಸಂಧ್ಯಾ, ಸಂಧ್ಯಾಂಶ ಸೇರಿ ಕೃತಯುಗ ಒಟ್ಟು ಹದಿನೇಳುಲಕ್ಷ ಇಪ್ಪತ್ತೆಂಟು ಸಾವಿರ ವರ್ಷ. ತ್ರೇತಾಯುಗ ಹನ್ನೆರಡು ಲಕ್ಷ ತೊಂಭತ್ತಾರು ಸಾವಿರ ವರ್ಷ. ದ್ವಾಪರ ಯುಗ ಎಂಟು ಲಕ್ಷ ಅರವತ್ತು ನಾಲ್ಕು ಸಾವಿರ ವರ್ಷ. ಕಲಿಯುಗದ ಅವಧಿಯು ಮಾನವೀಯ ಮಾನದಿಂದ ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರ್ಷದಷ್ಟಾಗುತ್ತದೆ. ಈ ನಾಲ್ಕೂ ಯುಗಗಳು ಕೂಡಿ ಒಂದು ಚತುರ್ಯುಗ ಎನಿಸುವದು.

ಇಂಥ ಚತುರ್ಯುಗಗಳು ಎಪ್ಪತ್ತೊಂದು ಸಲ ತಿರುಗಿದರೆ ಒಂದು ಮನ್ವಂತರ ಕಾಲ ಪೂರ್ತಿಯಾಗುವದು. ಮನುಷ್ಯರ ಮಾನದಲ್ಲಿ ಒಂದು ಮನ್ವಂತರ ಕಾಲವೆಂದರೆ ಮೂವತ್ತೊಂದು ಕೋಟಿ, ಹತ್ತುಲಕ್ಷ, ಮೂವತ್ತೆಂಟು ಸಾವಿರದ ಎಂಟುನೂರ ಎಂಭತ್ತು ವರ್ಷ ಆರುತಿಂಗಳ ಆಗುವದು. ದೇವಮಾನದಲ್ಲಿ ಒಂದು ಮನ್ವಂತರವೆಂದರೆ ಒಂಭತ್ತು ಲಕ್ಷ ನಲವತ್ತಾರು ಸಾವಿರ ವರ್ಷ. ಎಪ್ಪತ್ತೊಂದು ಇಂಥ ಚತುರ್ಯುಗಗಳು ಒಂದು ಮನ್ವಂತರದ ಅವಧಿ ಕಾಲವಾಗಿದೆ. ಇಂಥ ಹದಿನಾಲ್ಕು ಮನ್ವಂತರಗಳಿಗೆ ಒಂದು ಕಲ್ಪ ಎನ್ನುವರು. ಆ ನಂತರ ಸಂಪೂರ್ಣ ಪ್ರಳಯವಾಗುವದು. ಅದಕ್ಕೆ ಮಹಾಪ್ರಳಯ ಎಂದು ಹೆಸರು. ಆ ಮಹಾಪ್ರಳಯವು ಎರಡು ಕಲ್ಪಗಳ ಕಾಲ ಪರ್ಯಂತ ಪ್ರವೃತ್ತವಾಗುವದು.

ಹಿಂದೆ ತ್ರೇತಾಯುಗದ ಪ್ರಸ್ತಾಪ ಬಂದಾಗ ಋಷಿಗಳ ವಂಶ ವರ್ಣನೆಯಲ್ಲಿ ನಿರತನಾದ ನಾನು ಹೇಳದೆ ಬಿಟ್ಟ ವಿಷಯಗಳನ್ನು ಈಗ ತಿಳಿಸುವೆನು ಕೇಳಿರಿ. ತ್ರೇತಾಯುಗದ ಆದಿಯಲ್ಲಿ ಸಪ್ತರ್ಷಿ ಮೊದಲಾದ ಮುನಿಗಳೂ ಮತ್ತು ಮನುಗಳೂ ಬ್ರಹ್ಮದೇವರ ವೇದೋಕ್ತ ಧರ್ಮಗಳನ್ನು ಜಗತ್ತಿಗೆ ಉಪದೇಶಿಸಿದರು. ಸ್ವಾಯಂಭುವ ಮನು ವರ್ಣಾಶ್ರಮ ಆಚಾರಗಳನ್ನೂ, ಸ್ಮಾರ್ತ ಧರ್ಮವನ್ನೂ ಹೇಳಿದನು. ಸಪ್ತರ್ಷಿಗಳೂ ಆ ಸ್ವಾಯಂಭುವ ಮನುವೂ ಅತಿಶಯ ತಪಸ್ಸು ಮಾಡಿದ್ದರಿಂದ ಅನೇಕ ಮಂತ್ರಗಳು ಬೇರೆಯವರ ಉಪದೇಶವಿಲ್ಲದೇ ಸ್ವಯಂ ತಾವಾಗಿಯೇ ಭಾಸವಾದವು. ಮೊದಲನೆಯ ಕಲ್ಪದಲ್ಲಿ ದೇವತೆಗಳಿಗೆ ಅವೇ ಮಂತ್ರಗಳು ಪ್ರತಿಭಾಸವಾಗಿದ್ದವು. ಸಹಸ್ರಾರು ಕಲ್ಪಗಳಿಂದ ಮಂತ್ರಸಿದ್ಧಿ ಪಡೆದ ಅಪರೋಕ್ಷಜ್ಞಾನಿಗಳಾದ ಬ್ರಹ್ಮರ್ಷಿಗಳ ದಿವ್ಯ ಪ್ರತಿಭೆಗೆ ಅಪೌರುಷೇಯವಾದ ವೇದಮಂತ್ರಗಳು ಅದೇ ಅದೇ

ಆನುಪೂರ್ವಿಯಲ್ಲಿ ಮತ್ತೆ ಮತ್ತೆ ಗೋಚರವಾಗುತ್ತಿರುತ್ತವೆ. ಹೀಗೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ನಾಲ್ಕು ವೇದಮಂತ್ರಗಳನ್ನು ಸಪ್ತರ್ಷಿಗಳು ತಮ್ಮ ದಿವ್ಯ ದೃಷ್ಟಿಯಿಂದ ಕಂಡರಿದು ಜನರಿಗೆ ಉಪದೇಶಿಸಿದರು. ಸ್ಮೃತಿ, ಧರ್ಮಗಳನ್ನು ಮನುಮಹಾರಾಜನು ಹೇಳಿದನು. ಧರ್ಮಾಚರಣೆಗೆ ಅತಿ ಮುಖ್ಯ ಪ್ರಮಾಣ ಎನಿಸಿದ ವೇದಗಳು ತ್ರೇತಾಯುಗದ ಪ್ರಾರಂಭದಲ್ಲಿ ಒಂದೇ ವೇದರಾಶಿಯಾಗಿ ಇದ್ದವು. ಮುಂದೆ ಜನರ ಆಯುಷ್ಯವು ಕಡಿಮೆ ಕಡಿಮೆಯಾಗುತ್ತ ಬಂದುದರಿಂದ ಆ ವೇದರಾಶಿಯನ್ನೆಲ್ಲ ಅಧ್ಯಯನ ಮಾಡುವದು ಒಂದು ಜನ್ಮದಲ್ಲಿ ಅಶಕ್ಯವೆಂದು ಬಗೆದು ದ್ವಾಪರಯುಗದಲ್ಲಿ ನಾಲ್ಕು ವಿಧವಾಗಿ ವ್ಯಾಸರು ವಿಂಗಡಿಸಿದರು. ಹೀಗೆ ವಿಂಗಡಿಸಲ್ಪಟ್ಟ ಚತುರ್ವೇದಗಳನ್ನೇ ತಪಸ್ವಿಗಳು ಬಹು ಪರಿಶ್ರಮದಿಂದ ಹಗಲಿರುಳು ಅಧ್ಯಯನ ಮಾಡುತ್ತಲಿರುವರು.

ಸೃಷ್ಟಿಯ ಆದಿ ಕಾಲದಲ್ಲಿ ಬ್ರಹ್ಮದೇವರು ಉಪದೇಶಿಸಿದ ಸಾಂಗವೇದಗಳಿಂದ ಜನರು ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನೂ ಆಚಾರ ವಿಚಾರಗಳನ್ನೂ ಅರಿತುಕೊಂಡು ಅದರಂತೆ ನಡೆಯಬೇಕು. ಯಜ್ಞಯಾಗಾದಿಗಳನ್ನು ಯಥೋಕ್ತವಾಗಿ ಆಚರಿಸಬೇಕು. ಸತ್ಕಾರ್ಯಗಳನ್ನು ಮಾಡುವದೇ ಕ್ಷತ್ರಿಯರ ಯಜ್ಞ ಲೋಕೋಪಕಾರಕ್ಕಾಗಿ ಸಾಧನ ಸಲಕರಣೆಗಳನ್ನು ಒದಗಿಸುವದು ವೈಶ್ಯರ ಯಜ್ಞ. ಸಮಾಜ ಸೇವೆಯೇ ಶೂದ್ರರ ಯಜ್ಞ. ಬ್ರಾಹ್ಮಣರಿಗೆ ಜಪಯಜ್ಞ. ತ್ರೇತಾಯುಗದಲ್ಲಿ ಈ ನಾಲ್ಕು ವರ್ಣದವರೂ ತಮ್ಮ ತಮ್ಮ ಧರ್ಮಕರ್ಮಗಳನ್ನು ತಪ್ಪದೇ ಮಾಡುತ್ತಿದ್ದರು. ಈ ಎಲ್ಲ ವರ್ಣದವರು ಉಚ್ಚ ವರ್ಣದವರನ್ನು ಅನುಸರಿಸುತ್ತಿದ್ದರು. ಈ ವರ್ಣಾಶ್ರಮ ವ್ಯವಸ್ಥೆಯೆಲ್ಲವೂ ಆಗಲೇ ಬ್ರಹ್ಮದೇವರಿಂದ ಏರ್ಪಡಿಸಲ್ಪಟ್ಟಿತು. ಬ್ರಹ್ಮದೇವರ ಮಾನಸಪುತ್ರರಾದ ಮಹರ್ಷಿಗಳು ವೇದಮಂತ್ರಗಳನ್ನು ಕಂಡುಹಿಡಿದು ಬ್ರಹ್ಮನ ಅಣತಿಯಂತೆ ಯಜ್ಞ ಸಂಸ್ಥೆಯನ್ನು ಪ್ರಾರಂಭಿಸಿದರು.

ಸ್ವಾಯಂಭುವ ಮನ್ವಂತರದಲ್ಲಿ ಯಾಮ, ಶುಕ್ಲ, ಜಯ, ವಿಶ್ವಸೃಜ ಮುಂತಾದ ದೇವತೆಗಳು ಇಂದ್ರನನ್ನು ಮುಂದೆ ಮಾಡಿಕೊಂಡು ಅನೇಕ ಯಜ್ಞಗಳನ್ನು ನಡೆಸಿದರು. ಸತ್ಯ, ಜಪ, ತಪ, ದಾನ, ಮೊದಲಾದ ಧರ್ಮದ ಮೂಲಭೂತ ತತ್ವಗಳು ಕಣ್ಮರೆಯಾಗಿ ಅಧರ್ಮವು ಶಾಖೋಪಶಾಖೆಯಿಂದ ಕವಲೊಡೆದು ಬೆಳೆದಾಗ ಯೋಗಿಗಳೂ ಬ್ರಹ್ಮಜ್ಞಾನಿಗಳೂ ದೇವದೂತರಾಗಿ ಅವತರಿಸಿ ಧರ್ಮಸ್ಥಾಪನೆ ಮಾಡುವರು. ತ್ರೇತಾಯುಗದ ರಾಜರು ಕೂಡ ಸಿಂಹಸತ್ವರು. ಅವರ ತೋಳುಗಳು ಆಲದ ಮರದ ಟೊಂಗೆಯಷ್ಟು ಉದ್ದ. ಚಕ್ರ, ರಥ, ರತ್ನ, ನಾರಿ, ನಿಧಿ, ಆನೆ, ಕುದುರೆ ಈ ಏಳು ಸಪ್ತ ರತ್ನಗಳು ಪ್ರತಿಯೊಬ್ಬರಾಜನಲ್ಲಿಯೂ ಸಮೃದ್ಧವಾಗಿ ಇರುತ್ತಿದ್ದವು.

ಎಲ್ಲ ಮನ್ವಂತರಗಳಲ್ಲಿ ಹಿಂದೆ ಜನಿಸಿದ ಚಕ್ರವರ್ತಿಗಳೆಲ್ಲರೂ ವಿಷ್ಣುವಿನ ಅಂಶಸಂಭೂತರು. ಧರ್ಮ, ಅರ್ಥ, ಕಾಮ, ಕೀರ್ತಿ, ವಿಜಯ ಇವುಗಳನ್ನು ಎಲ್ಲ ರಾಜರು ಸಮನಾಗಿ ಸಂಪಾದಿಸಬೇಕು. ವೇದೋಕ್ತ, ಧರ್ಮಾಚರಣೆ, ತಪಸ್ಸು, ಪ್ರಭುಶಕ್ತಿಗಳಿಂದ ಯೋಗ್ಯರಾದ ರಾಜರು ಋಷಿಗಳಂತಿರುವ ತಮ್ಮ ಮಹಿಮೆಯ

ಪ್ರಭಾವದಿಂದ ಋಷಿಗಳನ್ನೂ ಮೀರಿಸಬಲ್ಲರು. ತ್ರೇತಾಯುಗದ ರಾಜರು ಸುಸ್ವರೂಪಿಗಳು. ವಿಶಾಲಹಣೆ, ಶ್ಯಾಮಸುಂದರ ಶರೀರ, ಸದ್ವಂಶದಲ್ಲಿ ಜನನ, ಇಂದ್ರಿಯ ನಿಗ್ರಹ, ನೀಳತೋಳು, ಸಿಂಹದ ಹೆಗಲು, ಕೈಗಳಲ್ಲಿ ಶಂಖರೇಖೆ, ಚಕ್ರ, ಮತ್ಸ್ಯ, ಪದ್ಮರೇಖೆಗಳು. ಭೂಮಿ, ಆಕಾಶ, ಪಾತಾಳ, ಬೆಟ್ಟ, ಬಯಲು, ಬಾನು, ಮುಂತಾದ ಕಡೆಗಳಲ್ಲೆಲ್ಲ ಸ್ವೇಚ್ಛಾ ಸಂಚಾರ, ಎಂಬತ್ತೈದು ಸಾವಿರವರುಷ ಆಯುಷ್ಯ. ಇವು ಆ ಕಾಲದ ರಾಜರ ಸಾಮಾನ್ಯ ಲಕ್ಷಣಗಳು. ಯಾಗ, ದಾನ, ತಪಸ್ಸು, ಸತ್ಯ ಇವು ಆ ಕಾಲದ ಧರ್ಮಗಳು. ಆ ತ್ರೇತಾಯುಗದಲ್ಲಿ ಜನರೆಲ್ಲರೂ ಹೃಷ್ಟರು-ಪುಷ್ಟರು. ರೋಗರಹಿತರು ಭೋಗಸಹಿತರು. ವೇದಾನುಸಾರಿಗಳು, ಸಂತಾನ ಸಂಪದ ಸೌಭಾಗ್ಯಸಮೃದ್ಧರು ಆಗಿದ್ದರು. ತ್ರೇತಾಯುಗದ ಸಂಧ್ಯಾಕಾಲದಲ್ಲಿ ಇದರ ಕಾಲು ಭಾಗ ಧರ್ಮವು ರೂಢಿಯಲ್ಲಿತ್ತು. ಅದರ ಕಾಲಭಾಗದಷ್ಟು ಸಂಧ್ಯಾಂಶ ಕಾಲದಲ್ಲಿ ಇತ್ತು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಯಜ್ಞದಲ್ಲಿ ಪಶುಹಿಂಸೆ ಸರ್ವಥಾ ವರ್ಜ್ಯ | ಅಧ್ಯಾಯ - ೧೪೫

**ಋಷಿಯ ಉವಾಚ**

**ಕಥಂ ತ್ರೇತಾಯುಗಮುಖೇ ಯಜ್ಞಸ್ಯಾಸೀತ್ಪ್ರವರ್ತನಂ ।**
**ಪೂರ್ವೇ ಸ್ವಾಯಂಭುವೇ ಸರ್ಗೇ ಯಥಾವತ್ಪ್ರಬ್ರವೀಹಿ ನಃ ॥**

**ಋಷಿಗಳು :-** ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಕೃತಯುಗ ಅನಂತರ ತ್ರೇತಾಯುಗವು ಪ್ರಾರಂಭವಾದಾಗ ಯಜ್ಞವು ಹೇಗೆ ಪ್ರವರ್ತಿಸಿತು ? ಇದನ್ನು ಸರಿಯಾಗಿ ನಮಗೆ ವಿವರಿಸಿರಿ. ಕೃತಯುಗದ ಅನಂತರ ತ್ರೇತಾಯುಗದಲ್ಲಿ ಔಷಧಿ ವನಸ್ಪತಿಗಳು ಜನಿಸಿ ಮಳೆಬೆಳೆಗಳಿಂದ ಜನರ ಜೀವನ ವೃತ್ತಿ ಏರ್ಪಟ್ಟ ಬಳಿಕ ವರ್ಣಾಶ್ರಮ ವ್ಯವಸ್ಥೆಯನ್ನು ಏರ್ಪಡಿಸಿ, ವೇದಮಂತ್ರಗಳಿಂದ ಯಜ್ಞವನ್ನು ಹೇಗೆ ಪ್ರಾರಂಭಿಸಿದರು ?

**ಸೂತ :-** ಮೊಟ್ಟ ಮೊದಲು ದೇವೇಂದ್ರನು ಸಕಲ ಸಾಧನ ಸಲಕರಣೆಗಳನ್ನು ಸಜ್ಜುಗೊಳಿಸಿ ದೇವತೆಗಳ ಜೊತೆಗೆ ಅಶ್ವಮೇಧಯಾಗವನ್ನು ಪ್ರಾರಂಭಿಸಿದನು. ಆಗ ಎಲ್ಲ ಮಹಾ ಮಹರ್ಷಿಗಳು ಅಲ್ಲಿ ಆಗಮಿಸಿದರು. ಋತ್ವಿಜರು ಕರ್ಮಗಳನ್ನು ನೆರವೇರಿಸಿದರು. ಹೋತೃಗಳು ಯಜ್ಞಕುಂಡದಲ್ಲಿ ಹವಿಸ್ಸುಗಳನ್ನು ಹೋಮ ಮಾಡಿದರು. ಸಾಮವೇದಿಗಳು ಇಂಪಿನಿಂದ ಗಾನಮಾಡಿದರು. ಅಧ್ವರ್ಯುಗಳು ಮೇಲೆ ವ್ಯವಸ್ಥಾಪಕರಾಗಿ ಸುತ್ತಲೂ ಓಡಾಡಿದರು. ಯಜ್ಞಶಾಲೆಯ ನಟ್ಟನಡುವೆ ಅನೇಕ ಪಶುಗಳನ್ನು ಕೊಲ್ಲಲಾಯಿತು. ದೇವತೆಗಳು ತಮ್ಮ ತಮ್ಮ ಯಜ್ಞ ಭಾಗಗಳನ್ನು ಸ್ವೀಕರಿಸಲು ಎದ್ದು ನಿಂತರು.

ಅಧ್ವರ್ಯುಗಳ ಆಹ್ವಾನದ ಮೇರೆಗೆ ಮಂತ್ರೋಚ್ಚಾರಣೆಗಾಗಿ ಎಲ್ಲ ಋಷಿಮುನಿಗಳು ಅಲ್ಲಿ ಉಪಸ್ಥಿತರಾದರು. ಯಜ್ಞ ವೇದಿಕೆಯಲ್ಲಿ ನಡೆದ ಪಶು ಹಿಂಸೆ

ಕಂಡು ಅವರೆಲ್ಲ ದಿಗಿಲುಗೊಂಡರು. ಯಜಮಾನನಾದ ಇಂದ್ರನನ್ನು ಕುರಿತು. ಅವರು ಪ್ರಶ್ನೆ ಮಾಡಿದರು. ''ಇದೇ ಏನು ನಿನ್ನ ಯಜ್ಞ ವಿಧಿ ? ಧರ್ಮಾಭಿಲಾಷೆಯಿಂದ ಯಜ್ಞಕರ್ಮವನ್ನು ಕೈಕೊಂಡ ನೀನು ಘೋರವಾದ ಹಿಂಸಾ ರೂಪ ಅಧರ್ಮವನ್ನು ಮಾಡುತ್ತಿರುವೆ. ದೇವರಾಜನೇ, ಯಜ್ಞದಲ್ಲಿ ಪಶುಹತ್ಯೆಯ ನವೀನ ಉಪಕ್ರಮವು ನಿನ್ನಿಂದ ಪ್ರಾರಂಭಿಸಲ್ಪಟ್ಟಿದೆ. ಈ ಹಿಂಸೆ ಅತ್ಯಂತ ಅಧರ್ಮ, ಯಜ್ಞದಲ್ಲಿ ಪಶುಗಳನ್ನು ಕೊಲ್ಲುವದು ಧರ್ಮದ್ರೋಹ, ಹಿಂಸೆಯು ಎಂದಾದರೂ ಧರ್ಮವಾಗುವದೆ ? ಅತ್ಯಂತ ಕ್ರೂರ ಅಧರ್ಮಕ್ಕೆ ನೀನು ಧರ್ಮದ ಹೆಸರನ್ನು ಕೊಡುತ್ತಲಿರುವೆ. ನಿನಗೆ ಇಷ್ಟವಿದ್ದರೆ ಶಾಸ್ತ್ರೋಕ್ತ ವಿಧಿಯಿಂದ ಸರಿಯಾದ ಕ್ರಮದಲ್ಲಿ ಯಜ್ಞ ರೂಪ ಧರ್ಮ ಕಾರ್ಯವನ್ನು ನೆರವೇರಿಸು. ವೇದೋಕ್ತವಾದ ಯಜ್ಞಕ್ಕಾಗಿ ವಿಹಿತವಾದ ಧಾನ್ಯ ಹಾಗೂ ಕಂದ ಮೂಲ ಫಲಗಳಿಂದ ಹೋಮಮಾಡಿ ಭಗವದಾರಾಧನೆಯನ್ನು ಮಾಡು. ಯಜ್ಞವು ಯಾವಾಗಲೂ ಅಹಿಂಸಾ ರೂಪವಾದುದು. ಅದರಿಂದ ಧರ್ಮ, ಅರ್ಥ, ಕಾಮಗಳು ಸಿದ್ಧಿಸುವವು. ಪೂರ್ವಕಾಲದಲ್ಲಿ ಬ್ರಹ್ಮದೇವರು ಇಂತಹ ಅಹಿಂಸಾ ಪ್ರಧಾನವಾದ ಯಜ್ಞವನ್ನೇ ಪ್ರಾರಂಭಿಸಿ ಜಗತ್ತಿಗೆ ಮಾರ್ಗದರ್ಶನ ಮಾಡಿದ್ದಾರೆ.''

ತತ್ವಾರ್ಥಗಳ ರಹಸ್ಯ ತಿಳಿದು, ಧರ್ಮ ಮರ್ಮಜ್ಞರಾದ ಮಹಾನುಭಾವರಾದ ಮಹರ್ಷಿಗಳು ಹೀಗೆ ಹೇಳಿದರೂ ಕೂಡಾ ಗರ್ವಾಂಧನಾದ ದೇವೇಂದ್ರನು ಅವರ ಮಾತಿಗೆ ಒಪ್ಪಲಿಲ್ಲ.

ಆ ಯಜ್ಞಮಂಟಪದಲ್ಲಿ ಯಜಮಾನನಾದ ಇಂದ್ರನಿಗೂ ಶಾಸ್ತ್ರ ಮರ್ಮಜ್ಞರಾದ ದೇವತೆಗಳಿಗೂ ವಾದ ವಿವಾದ ನಡೆಯಿತು. ''ಯಜ್ಞವನ್ನು ಮಾಡುವದು ಯಾವುದರಿಂದ ? ಧಾನ್ಯಗಳಿಂದಲೊ ? ಪಶುಗಳಿಂದಲೊ ?'' ಈ ವಿವಾದದಿಂದ ಯಾವ ನಿಷ್ಕರ್ಷೆಯೂ ಆಗಲಿಲ್ಲ. ಇಂದ್ರನು ತನ್ನ ಹಠ ಬಿಡಲಿಲ್ಲ. ಅದರಿಂದ ತತ್ವದರ್ಶಿಗಳಾದ ಮಹರ್ಷಿಗಳಿಗೆ ಬಹಳ ವಿಷಾದವಾಯಿತು. ಕೊನೆಗೆ ಇಬ್ಬರೂ ಕೂಡಿ ಗಗನಚಾರಿಯಾದ ಉತ್ತಾನಪಾದನ ಮಗ ವಸುರಾಜನನ್ನು ಕೇಳಿದರು. ''ವಸುರಾಜಾ, ಯಜ್ಞಾನುಷ್ಠಾನದ ಕ್ರಮವೇನು ? ಹೋಮವನ್ನು ಯಾವುದರಿಂದ ಮಾಡಬೇಕು ?

ಆಗ ವಸುರಾಜನು ವೇದ ಶಾಸ್ತ್ರಗಳ ಪ್ರಮಾಣ ವಚನಗಳ ಬಲಾಬಲಗಳನ್ನು ಪರಿಶೀಲಿಸದೇ ಹೀಗೆ ಉತ್ತರ ಕೊಟ್ಟನು. ''ಯಜ್ಞದಲ್ಲಿ ಯಥಾಶಕ್ತಿ ಸಂಪಾದಿಸಿದ ಪಶುಗಳಿಂದಲೂ ಕಂದ ಮೂಲ ಫಲಗಳಿಂದಲೂ ಹೋಮವನ್ನು ಮಾಡಬೇಕು. ಯಜ್ಞವೆಂದರೆ ಪಶುಹತ್ಯೆ ಆಗಬೇಕಾದುದೆ, ಎಂದು ನಾನು ತಿಳಿದುಕೊಂಡಿದ್ದೇನೆ. ದೀರ್ಘಕಾಲ ತಪಸ್ಸು ಮಾಡಿ ತಾರಕಾದಿ ಮಹಾಮಂತ್ರಗಳನ್ನು ಕಂಡು ಹಿಡಿದ ಮಹರ್ಷಿಗಳ ಅಭಿಪ್ರಾಯವೂ ಕೂಡಾ ಯಜ್ಞದಲ್ಲಿ ಪಶು ಹಿಂಸೆ ವಿಹಿತವಾಗಿದೆ, ಎಂಬ ಅಭಿಪ್ರಾಯವನ್ನೇ ಸೂಚಿಸುತ್ತದೆ. ನನಗೆ ನಾನು ತಿಳಿದುಕೊಂಡಂತೆ ಶಾಸ್ತ್ರಗಳ ಅಭಿಪ್ರಾಯವನ್ನು ಮುನಿಗಳ ಭಾವವನ್ನು ನಿಮಗೆ ತಿಳಿಸಿದ್ದೇನೆ. ನೀವು ಹೇಳುವ ಯಜ್ಞದಲ್ಲಿ ಪಶುಹಿಂಸೆಯನ್ನು ನಿಷೇಧಿಸುವ ವಚನಗಳು ಸಾವಕಾಶ ವಚನಗಳೆಂದು ನನಗೆ ತೋರುವದು. ಅದೇ ನಿರವಕಾಶ ಪ್ರಮಾಣವೆಂದು ನಿಮಗೆ ಅನಿಸಿದರೆ ನೀವು ಹಾಗೆ ಮಾಡಬಹುದು.''

ವಸುರಾಜನ ಈ ಧರ್ಮ ವಿರೋಧಿಯಾದ ನಿರ್ಣಯ ಕೇಳಿ ಮುನಿಗಳಿಗೆ ಕೋಪ ಬಂದಿತು. ಮುಂದಾಗುವದನ್ನೆಲ್ಲ ಮುಂಚಿತವಾಗಿ ಕಂಡು ಆ ಮಹಾಮುನಿಗಳು "ನೀನು ಕೂಡಲೇ ಅಧಃಪತಿತನಾಗು" ಎಂದು ಶಾಪಕೊಟ್ಟರು. ಮಹಾಮುನಿಗಳ ಶಾಪದಿಂದ ಅಂತರಿಕ್ಷ ಸಂಚಾರಿಯಾದ ವಸುರಾಜನು ಒಮ್ಮೆಲೆ ರಸಾತಲಕ್ಕೆ ಇಳಿದನು. ಧರ್ಮವಿರುದ್ಧ ನಿರ್ಣಯದಿಂದ ಊರ್ಧ್ವಲೋಕವಾಸಿಯಾದ ಅವನು, ಭೂಮಿಗಿಂತ ಕೆಳಗೆ ಅಧೋಲೋಕದಲ್ಲಿ ವಾಸಮಾಡಬೇಕಾಯಿತು.

ಇದರ ಮೇಲಿಂದ ತಿಳಿದು ಬರುವದೇನೆಂದರೆ ಧರ್ಮದ ಗತಿಯು ಸೂಕ್ಷ್ಮ. ಜಟಿಲವಾದ ಧರ್ಮದ ವಿಷಯದಲ್ಲಿ ಎಂತಹ ಪಂಡಿತನೇ ಆದರೂ ಧರ್ಮದ ರಹಸ್ಯವನ್ನು ಅರಿತು ಸಂಪ್ರದಾಯ ಬಲ್ಲ ಹತ್ತು ಪಂಡಿತರನ್ನು ವಿಚಾರಿಸದೆ ಏಕಾಕಿಯಾಗಿ ನಿರ್ಣಯ ಕೈಕೊಳ್ಳಬಾರದು. ಸ್ವಾಯಂಭುವ ಮನು ಅಥವಾ ಮಹಾನುಭಾವರಾದ ಋಷಿ ಮುನಿ ದೇವತೆಗಳ ಹೊರತು ನಿಜವಾದ ಧರ್ಮದ ಮರ್ಮವನ್ನು ತಿಳಿಯಲು ಉಳಿದವರಿಗೆ ಶಕ್ಯವಿಲ್ಲ. ಪೂರ್ವಕಾಲದಲ್ಲಿ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡ ಮಹಾ ಮಹರ್ಷಿಗಳು ಯಜ್ಞದಲ್ಲಿ ಹಿಂಸೆಯನ್ನು ಸರ್ವಥಾ ಮಾಡಬಾರದೆಂದು ನಿಷೇಧಿಸಿದ್ದಾರೆ.

**ತಸ್ಮಾನ್ನ ಹಿಂಸಾ ಯಜ್ಞೇ ಸ್ಯಾದ್ಯದುಕ್ತಮೃಷಿಭಿಃ ಪುರಾ**
**ಋಷಿಕೋಟಿ ಸಹಸ್ರಾಣಿ ಸ್ವೈಸ್ತಪೋಭಿರ್ದಿವಂ ಯಯುಃ**

ಆದುದರಿಂದ ತತ್ವಜ್ಞಾನಿಗಳಾದ ಮುನಿಗಳ ದೃಷ್ಟಿಯಲ್ಲಿ ಶಾಸ್ತ್ರದ ನಿರ್ಣಯ ವೆಂದರೆ ಯಜ್ಞದಲ್ಲಿ ಹಿಂಸೆಯನ್ನು ಮಾಡಕೂಡದು. ಅಹಿಂಸಾ ಪ್ರಧಾನವಾದ, ಯಜ್ಞ ರೂಪವಾದ ತಪೋನುಷ್ಠಾನದಿಂದ ಪೂರ್ವಕಾಲದಲ್ಲಿ ಕೋಟಿ ಕೋಟಿ ಋಷಿಗಳು ಸ್ವರ್ಗವನ್ನು ಪಡೆದಿದ್ದಾರೆ.

**ತಸ್ಮಾನ್ನ ಹಿಂಸಾಂ ಯಜ್ಞೇಷು ಪ್ರಶಂಸಂತಿ ಮಹರ್ಷಯಃ ।**
**ಉಂಛಂ ಮೂಲಂ ಫಲಂ ಶಾಕಮುದಪಾತ್ರಂ ತಪೋಧನಾಃ ॥**

ಇದನ್ನೆಲ್ಲಾ ತಿಳಿದು ಮಹರ್ಷಿಗಳು ಹಿಂಸಾಪ್ರಧಾನವಾದ ಯಜ್ಞವನ್ನು ಎಂದೂ ಹೊಗಳುವದಿಲ್ಲ. ಹಕ್ಕಲಾರಿಸಿದ ಧಾನ್ಯದ ಕಾಳು, ಹಣ್ಣು, ಕಾಯಿ, ಗಡ್ಡೆ, ಗೆಣಸು, ಮುಂತಾದವುಗಳಿಂದ ಯಜ್ಞಮಾಡಿ, ಯಥಾ ಶಕ್ತಿ, ಜಲಪಾತ್ರ ಅನ್ನಪಾತ್ರಗಳನ್ನೂ ದಾನದಕ್ಷಿಣೆಗಳನ್ನೂ ಕೊಟ್ಟು ಹೋಮಮಾಡಿ. ಮಹರ್ಷಿಗಳೆಲ್ಲರೂ ಪೂರ್ವಕಾಲದಲ್ಲಿ ಸ್ವರ್ಗಾದಿ ದಿವ್ಯಲೋಕಗಳಲ್ಲಿ ಪ್ರತಿಷ್ಠೆಯನ್ನು ಪಡೆದಿದ್ದಾರೆ. ಯಜ್ಞಗಳನ್ನು ಅನುಷ್ಠಾನ ಮಾಡುವದು ಇದೊಂದು ದೊಡ್ಡ ಧರ್ಮಕಾರ್ಯ ಎಂಬ ಭಾವನೆಯಿಂದ ತಾನೆ ! ಧರ್ಮ ಎಂದರೆ ಪ್ರಾಣಿದಯೆ. ಬ್ರಹ್ಮಚರ್ಯ ತಪಸ್ಸು, ಶಮ, ದಮ, ಮುಂತಾದ ಧರ್ಮಕಾರ್ಯಗಳೆಲ್ಲವೂ ದಯಾಮೂಲಕವೇ ಆಗಿವೆ. ಅದ್ರೋಹ, ಅಲೋಭ, ಭೂತಾನುಕಂಪಾ, ಮುಂತಾದ ಮುಖ್ಯ ಧರ್ಮಗಳೆಲ್ಲವೂ ಯಜ್ಞದಲ್ಲಿ ಪಶು ಹಿಂಸೆಮಾಡುವದರಿಂದ ಹಾಳಾಗಿ ಹೋಗುವವು. ಯಜ್ಞದ

ನೆವದಿಂದ ಮೂಕ ಪ್ರಾಣಿಗಳ್ನು ಕೊಂದ ಬಳಿಕ ಅದು ಅದ್ರೋಹ ಎಂತಾಗುವದು ? ಪಶುಹತ್ಯೆಯು ಪ್ರಾಣಿದ್ರೋಹವಲ್ಲವೆ ? ಸ್ವರ್ಗ, ಸುಖದ ಲೋಭ ಮತ್ತು ಮಾಂಸ ಭಕ್ಷಣದ ಲೋಭದಿಂದ, ಪಶುಹತ್ಯೆಯನ್ನು ಕೈಕೊಂಡರೆ ಅಲೋಭವೆಲ್ಲಿ ಉಳಿಯಿತು ? ಇದರಂತೆ ಪಶು ಹಿಂಸೆಯಿಂದ ಭೂತಾನುಕಂಪೆ, ಕ್ಷಮೆ, ಶಮ, ದಯಾ ಶೌಚ ಅಂದರೆ ಪಾವಿತ್ರ್ಯ ಮುಂತಾದ ಎಲ್ಲ ಧರ್ಮಗಳು ಹೇಳ ಹೆಸರಿಲ್ಲದೆ ಹಾಳಾಗಿ ಹೋಗುವವು. ಆದುದರಿಂದ ಯಜ್ಞವು ಅಹಿಂಸಾತ್ಮಕವಾದುದು. ದ್ರವ್ಯಗಳಿಂದಲೇ ಮಂತ್ರ ಪೂತವಾಗಿ ಆಚರಿಸಲ್ಪಡಬೇಕು. ಇಂತಹ ಹಿಂಸೆಯನ್ನು ಸಂಪೂರ್ಣ ವರ್ಜಿಸಿದ, ಯಾವ ಪ್ರಾಣಿಗಳಿಗೂ ದ್ರೋಹ ಬಗೆಯದಿರುವ, ಶಾಸ್ತ್ರೋಕ್ತವಾದ ಯಜ್ಞ, ತಪಸ್ಸು, ಭಗವದರ್ಪಣ ಬುದ್ಧಿಯಿಂದ ಮಾಡಿದ ಕರ್ಮಾನುಷ್ಠಾನ ವೈರಾಗ್ಯ ಮತ್ತು ಭಕ್ತಿಯುತವಾದ ಜ್ಞಾನ ಇವು ಐದು ಸದ್ಗತಿಯ ಸಾಧನಗಳು ಆಗಿರುತ್ತವೆ.''

ಇದು ದೇವೇಂದ್ರನ ಯಜ್ಞದಲ್ಲಿ ನಡೆದ ವಾಕ್ಯಾರ್ಥ ವಿವಾದದಲ್ಲಿ ಮಹರ್ಷಿಗಳು ಸಾರಿದ ಮಹತ್ವದ ನಿರ್ಣಯವಾಗಿದೆ. ಇದಕ್ಕೆ ವ್ಯತ್ಯಾಸವಾಗಿ ವಸುರಾಜನು ನಿರ್ಣಯವನ್ನು ಕೊಟ್ಟಿದ್ದರಿಂದ ಮುನಿಗಳೆಲ್ಲರೂ ಅವನ ಮಾತನ್ನು ಅಲ್ಲಗಳೆದು ನಿಜವಾದ ಧರ್ಮರಹಸ್ಯವನ್ನು ಮೇಲೆ ಹೇಳಿದಂತೆ ಘೋಷಣೆಮಾಡಿ ತಮ್ಮತಮ್ಮ ತಪೋವನಗಳಿಗೆ ಹೊರಟು ಹೋದರು.

ಋಷಿಗಳು ಹೋದ ಬಳಿಕ ದೇವತೆಗಳು, ಆ ಯಜ್ಞವನ್ನು ಪೂರ್ತಿಗೊಳಿಸಿದರು. ಇದನ್ನು ನೋಡಿ, ಅನೇಕ ಜನ ಬ್ರಾಹ್ಮಣರು, ಋಷಿಗಳು ತಪಸ್ಸನ್ನು ಕೈಕೊಂಡು ಸಿದ್ಧಿಪಡೆದರು. ಪುರೂರವ, ಉತ್ತಾನಪಾದ, ಧ್ರುವ, ಮೇಧಾತಿಥಿ, ಸುದಾಮ, ವಿರಜಸ, ಪ್ರಾಚೀನ ಬರ್ಹಿ, ಪರ್ಜನ್ಯ, ಹರ್ವಿಧಾನ ಮುಂತಾದ ರಾಜರು ತೀವ್ರ ತಪೋನುಷ್ಠಾನದಿಂದ ಸಿದ್ಧಿಪಡೆದು, ಸದ್ಗತಿ ಹೊಂದಿದರು ಮೊದಲು ಬ್ರಹ್ಮದೇವರಾದರೂ ತಪಸ್ಸನ್ನು ಮಾಡಿಯೇ ಈ ಪ್ರಪಂಚವನ್ನು ಸೃಷ್ಟಿಸಿದರು. ಬರಿಯಜ್ಞದಿಂದ ಇಂತಹ ಮಹತ್ಕಾರ್ಯ ಮಾಡಲು ಆಗುವದಿಲ್ಲ. ಆದುದರಿಂದ ಯಜ್ಞಯಾಗಕ್ಕಿಂತ ತಪೋನುಷ್ಠಾನವೇ ಉತ್ತಮವಾದುದು. ಯಜ್ಞಗಳು ತಪೋಮೂಲಕ ವಾಗಿಯೇ ಫಲಪ್ರದವಾಗುವವು. ಸರ್ವಸಾಧನಗಳ ಮೂಲವೆಂದರೆ ತಪಸ್ಸು.

ಸ್ವಾಯಂಭುವ ಮನ್ವಂತರದಲ್ಲಿ ಹೀಗೆ ಪ್ರಾರಂಭವಾದ ಯಜ್ಞಯಾಗ ಪ್ರಕ್ರಿಯೆ ಯುಗಯುಗಾಂತರಗಳಿಂದ ನಡೆದುಕೊಂಡು ಬಂದಿರುತ್ತದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತೈದನೆಯ ಅಧ್ಯಾಯ ಮುಗಿದುದು.*

—o—

## ದ್ವಾಪರಯುಗದ ವಿಧಿವಿಧಾನ

**ಅಧ್ಯಾಯ - ೧೪೬**

**ಸೂತ ಉವಾಚ :**

**ಅತ ಊರ್ಧ್ವಂ ಪ್ರವಕ್ಷ್ಯಾಮಿ ದ್ವಾಪರಸ್ಯ ವಿಧಿಂ ಪುನಃ ।**
**ತತ್ರ ತ್ರೇತಾಯುಗೇ ಕ್ಷೀಣೇ ದ್ವಾಪರಂ ಪ್ರತಿಪದ್ಯತೇ ॥**

**ಸೂತ** :- ಇನ್ನು ಮೇಲೆ, ದ್ವಾಪರಯುಗದ ವಿಧಾನವನ್ನು ಹೇಳುತ್ತೇನೆ. ತ್ರೇತಾಯುಗವು ಮುಗಿದ ಬಳಿಕ ದ್ವಾಪರಯುಗದ ಪ್ರಾರಂಭ. ಆ ಯುಗದ ಮೊದ ಮೊದಲು ತ್ರೇತಾಯುಗದ ಸಿದ್ಧಿಸತ್ವಗಳೇ ಊರ್ಜಿತದಲ್ಲಿ ಇರುವವು. ವರುಷಗಳು ಉರುಳಿದಂತೆ ಅವೆಲ್ಲವೂ ಕ್ರಮದಿಂದ ಹ್ರಾಸವಾಗುತ್ತ ದ್ವಾಪರಯುಗದ ಕೊನೆಯಲ್ಲಿ ನಾಶವಾಗುತ್ತವೆ. ಪ್ರಜೆಗಳಲ್ಲಿ ಬರಬರುತ್ತ ಲೋಭ, ಭೀತಿ, ವರ್ತಕರಲ್ಲಿ ಕಲಹ, ಸಂಶಯ, ಕರ್ಮ ವೈಪರೀತ್ಯ, ಕೊಲೆ, ಸುಲಿಗೆ, ಗರ್ವ, ಅಶಾಂತಿ, ಕ್ಷಯ ಮುಂತಾದ ರಜೋಗುಣ, ತಮೋಗುಣ, ಅಧರ್ಮಗಳು ಹೆಚ್ಚುತ್ತ ಹೋಗುವವು. ಅಧರ್ಮಕ್ಕೆ ಕೃತಯುಗದಲ್ಲಿ ಅವಕಾಶವಿಲ್ಲ. ತ್ರೇತಾಯುಗದಲ್ಲಿ ಅದು ಹೆಜ್ಜೆಯಿರಿಸಿ ದ್ವಾಪರಯುಗ ಕೊನೆಕೊನೆಗೆ ಬೆಳೆಯುತ್ತಾ ಹೋಗುವದು. ಕಲಿಯುಗದಲ್ಲಿ ಅದರ ಸಂಪೂರ್ಣ ವಿಕಾಸ. ವರ್ಣಾಶ್ರಮ ಸಾಂಕರ್ಯಕ್ಕೂ ದ್ವಾಪರಯುಗದಲ್ಲಿಯೇ ಪ್ರಾರಂಭ. ಶ್ರುತಿ, ಸ್ಮೃತಿಗಳಲ್ಲಿ ಭಿನ್ನಾಭಿಪ್ರಾಯ ಕಂಡು ಜನರಿಗೆ ನಿಶ್ಚಿತ ಜ್ಞಾನ ಆಗದೇ ಹೋಗುವದು. ಧರ್ಮ ರಹಸ್ಯ ತಿಳಿಯದೆ, ದೃಷ್ಟಿ ಭೇದ ಅಭಿಪ್ರಾಯ ಭೇದದಿಂದ ಜನರಲ್ಲಿ ಅನೈಕ್ಯಮತ್ಯ, ವಿರೋಧ, ವಿರಸ, ವಿಗ್ರಹ ಮುಂತಾದ ಅನರ್ಥಕ್ಕೆ ನಾಂದಿಯಾಗುವದು. ಒಂದೇ ಶಬ್ದರಾಶಿಯಾಗಿದ್ದ ವೇದವು ದ್ವಾಪರಯುಗದಲ್ಲಿ ವಿಭಾಗಿಸಲ್ಪಟ್ಟು ಋಷಿ ವಂಶದವರು ಅವುಗಳಿಗೆಲ್ಲ ಬೇರೆ ಬೇರೆ ಅರ್ಥವನ್ನು ಹೇಳುವರು. ಹಿಂದಿನ ಮಹರ್ಷಿಗಳು ಸ್ವರ, ಕ್ರಮ, ಭೇದದಿಂದ ಬ್ರಾಹ್ಮಣ ಗ್ರಂಥಗಳನ್ನು ಸೇರಿಸಿಕೊಂಡು ಋಗ್, ಯಜು, ಸಾಮ, ಈ ಮೂರು ವೇದಗಳ ಸಂಹಿತೆಗಳನ್ನು ಸಂಗ್ರಹಿಸಿದರು. ಕಲ್ಪಸೂತ್ರ, ಭಾಷ್ಯಗಳನ್ನು ಅದರ ರಹಸ್ಯಾರ್ಥ ಪರಿಜ್ಞಾನಕ್ಕಾಗಿ ಪ್ರಚುರಗೊಳಿಸಿದರು. ಮುಂದೆ ಕಾಲಕ್ರಮದಿಂದ ಪ್ರಾಚೀನರ ಅಭಿಪ್ರಾಯವನ್ನು ವಿರೋಧಿಸಿ ಕೆಲವರು ವೇದ, ಮಂತ್ರಗಳಿಗೆ ಬೇರೆ ಅರ್ಥ ಹೇಳಿ ಹೊಸ 'ದರ್ಶನ'ಗಳನ್ನು ಪ್ರಚಾರದಲ್ಲಿ ತಂದರು.

ವ್ಯಾಸರು ವೇದ ವಿಭಾಗ ಮಾಡಿದ ಬಳಿಕ ಒಂದೇ ಆಗಿದ್ದ ಯಜುರ್ವೇದವು ಕವಲೊಡೆದು ಶುಕ್ಲ ಯಜುರ್ವೇದ, ಕೃಷ್ಣ ಯಜುರ್ವೇದವೆಂದು ಇಬ್ಬಗೆಯದಾಯಿತು. ಇವುಗಳ ಪ್ರತಿಪಾದ್ಯ ಅರ್ಥದಲ್ಲಿ ಕೆಲವು ಕಡೆ, ಸಂವಾದ, ಸಮಾಖ್ಯೆ, ಸಾಮರಸ್ಯಗಳಿದ್ದರೂ ಅನೇಕ ಸ್ಥಳಗಳಲ್ಲಿ ಭಿನ್ನಾಭಿಪ್ರಾಯ, ವಿರೋಧಗಳು ತೋರುವದುಂಟು.

ಯಜುರ್ವೇದದ ಅರ್ಥವನ್ನು ವಿವರಿಸುವದಕ್ಕಾಗಿ ಬೋಧಾಯನ, ಆಪಸ್ತಂಭ, ಸತ್ಯಾಷಾಢ, ಕಾತ್ಯಾಯನ ಮುಂತಾದ ಮಹರ್ಷಿಗಳು ಬೇರೆ ಬೇರೆ ಸೂತ್ರಗಳನ್ನು ರಚಿಸಿದರು. ಇದರಂತೆ ಸಾಮವೇದ ಅಥರ್ವಣ ವೇದಗಳಲ್ಲಿಯೂ ಅನೇಕ ಬೇರೆ ಬೇರೆ ಸೂತ್ರಗಳ ರಚನೆಯಾಗಿ ವೈಕಲ್ಪಿಕ ಅರ್ಥಗಳಿಗೆ ಅವಕಾಶವಾಯಿತು. ಹೀಗೆ ದ್ವಾಪರ ಯುಗದಲ್ಲಿ, ಅನೇಕ ಜ್ಞಾನಿಗಳು ಜನಿಸಿ ಒಬ್ಬರಿಗಿಂತ ಒಬ್ಬರು ಬುದ್ಧಿವಂತರಾಗಿ ವಿವಿಧ ಶಾಸ್ತ್ರ, ಸೂತ್ರಗಳನ್ನು, ಭಾಷ್ಯಗಳನ್ನು, ವ್ಯಾಖ್ಯೆಗಳನ್ನು ರಚಿಸಿದ್ದರಿಂದ ಮೂಲ ವೇದದ ಅರ್ಥವೇ ಜನರಿಗೆ ದುರ್ಬೋಧವಾಗಿ ಸಂಶಯಕ್ಕೆ ಆಸ್ಪದವಾಗುವದು. ಕಲಿಯುಗದಲ್ಲಿಯಂತೂ ವೇದಗಳು ಕೊನೆ ಕೊನೆಗೆ ಲುಪ್ತವಾಗುವ ಪ್ರಸಂಗ ಬರುವದು. ಹೀಗೆ ವೈದ್ಯ, ಜ್ಯೋತಿಷ್ಯ, ಅರ್ಥಶಾಸ್ತ್ರ, ಧರ್ಮಶಾಸ್ತ್ರ ಮುಂತಾದ ಎಲ್ಲ ಧಾರ್ಮಿಕ ಸಾಹಿತ್ಯದಲ್ಲೂ ಇದೇ ಹಾಡು. ಹೀಗೆಯೇ ಅಭಿಪ್ರಾಯ ಭೇದ, ದರ್ಶನಭೇದ, ಪ್ರಸ್ಥಾನಭೇದ, ವಿರೋಧ, ವಿಸಂವಾದಗಳು ಬೆಳೆಯುವವು.

ಶಾಸ್ತ್ರದಲ್ಲಿಯ ಅಭಿಪ್ರಾಯಭೇದವು ಧರ್ಮದ ದೃಷ್ಟಿಯಲ್ಲಿಯೂ, ಧರ್ಮಾಚರಣೆಯಲ್ಲಿಯೂ, ಆಚಾರ-ವಿಚಾರಗಳ ಭೇದ ವಿರೋಧಗಳಿಗೆ ಕಾರಣವಾಗಿ ಪರಸ್ಪರ ದ್ವೇಷಾಸೂಯೆಗಳಲ್ಲಿ ಪರ್ಯವಸಾನವಾಗುವದು. ಆಗ ಮಾನವರ ಪೂರ್ಣಾಯುಷ್ಯ, ಎರಡು ಸಾವಿರ ವರ್ಷ ಪರ್ಯಂತ ಇರುವದು. ದ್ವಾಪರ ಯುಗವು ಮುಗಿದ ಬಳಿಕ ಅದರ ಸಂಧ್ಯಾಕಾಲವು ಆರಂಭವಾಗುವದು. ಆ ಸಂಧಿಕಾಲದಲ್ಲಿ ಯುಗಧರ್ಮವು ಅದರ ಕಾಲುಭಾಗ ಉಳಿದಿರುವದು. ಅದರ ಮುಂದಿನ ಸಂಧ್ಯಾಂಶದಲ್ಲಿ ಅದಕ್ಕಿಂತಲೂ ಕಡಿಮೆಯಾಗಿ ಸಂಧ್ಯಾಕಾಲದ ಕಾಲುಭಾಗ ಮಾತ್ರ ಇರುವದು. ಈ ಸಂಧ್ಯಾಂಶ ಕಾಲದಲ್ಲಿಯೇ ಕಲಿಯುಗದ ಲಕ್ಷಣಗಳೆಲ್ಲ ಹೊಳಹು ಹಾಕುವವು.

ಹಿಂಸೆ, ಕಳವು, ಸುಳ್ಳು, ಮಾಯೆ, ಡಂಭಾಚಾರಗಳೇ ಕಲಿ ಕಾಲದ ಯುಗಧರ್ಮಗಳಾಗಿರುತ್ತವೆ. ವೇದೋಕ್ತವಾದ ವರ್ಣಾಶ್ರಮ ಧರ್ಮಗಳು ಕ್ರಮೇಣ ಹ್ರಾಸ ಹೊಂದಿ ಕೊನೆಗೆ ನಾಶವಾಗುವವು. ತ್ರಿವರ್ಣಗಳಲ್ಲಿಯೂ ಧರ್ಮಲೋಪ. ಜನರಿಗೆ ಉಪಜೀವನಕ್ಕೆ ಕಷ್ಟ. ಅತಿವೃಷ್ಟಿ, ಅನಾವೃಷ್ಟಿ, ರೋಗ, ಶಿಶುಮರಣ, ಅಕಾಲಮರಣ, ತೇಜೋಹಾನಿ, ಅತ್ಯಾಸೆ, ಅಸತ್ಯ, ದುರಾಶೆ, ಅನಾಚಾರ ಇವೆಲ್ಲವೂ ಕಲಿಯುಗದಲ್ಲಿ ಎಲ್ಲೆಡೆಯಲ್ಲಿಯೂ ಪ್ರಾಮುಖ್ಯವಾಗಿ ತೋರಿಬರುವವು. ಬ್ರಾಹ್ಮಣರು ವೇದಾಭ್ಯಾಸ ಬಿಟ್ಟು ಧರ್ಮದಲ್ಲಿ ಶ್ರದ್ಧೆಯಿಲ್ಲದೆ ಸ್ವಾರ್ಥಪರರಾಗುವರು. ಕ್ಷತ್ರಿಯರು ಯಜ್ಞ ಯಾಗಗಳನ್ನು ಬಿಟ್ಟು ಪ್ರಜಾರಕ್ಷಣೆ ಮಾಡದೆ ಸುಖ ಲೋಲುಪರಾಗುವರು. ಶೂದ್ರರೆ, ಹೆಚ್ಚಾಗಿ ರಾಜ್ಯಾಧಿಕಾರಗಳನ್ನು ಗಿಟ್ಟಿಸಿಕೊಂಡು ಉಳಿದ ವರ್ಣದವರನ್ನು ಪೀಡಿಸುವರು. ಅನೇಕ ಶೂದ್ರರು ಕಾವಿಬಟ್ಟೆ ಉಟ್ಟು ಸನ್ಯಾಸಿಗಳಾಗುವರು. ಕೆಲವರು ಕಾಪಾಲಿಕರ ವೇಷ, ಹಲವರು ದೇವದೂತರೆಂದು ತೋರಿಸಿಕೊಂಡು ವೇದಶಾಸ್ತ್ರಗಳನ್ನು ಕಲಿತು ಹಗಲು ಸದಾಚಾರಿಗಳಾಗಿ ರಾತ್ರಿ ಮನಬಂದಂತೆ ವರ್ತಿಸಿ, ಜನರನ್ನು ಮೋಸ ಮಾಡುವರು.

ಶೂದ್ರ ರಾಜರು ಅಶ್ವಮೇಧಾದಿ ಯಜ್ಞಗಳನ್ನು ಮಾಡಿ, ಸ್ತ್ರೀಹತ್ಯೆ-ಗೋಹತ್ಯೆಗಳನ್ನು ನಿರಾತಂಕವಾಗಿ ನಡೆಸುವರು. ಇದರಿಂದ ಜನರಲ್ಲಿ ದುಃಖ, ಅಲ್ಪಾಯುಷ್ಯ, ಕ್ಷಾಮ, ಅಧರ್ಮದಲ್ಲಿ ಅಭಿನಿವೇಶ, ರೋಗ ಮುಂತಾದ ಉಪದ್ರವಗಳಿಂದ ಪ್ರಜಾಕ್ಷೋಭೆಯಾಗುವದು.

ಹೀಗೆ ಹಿಂದಿನ ಕಲಿಯುಗದ ಸಂಧ್ಯಾಂಶದಲ್ಲಿ ಧರ್ಮದ ಅವನತಿಯಾಗಿ ಅಧರ್ಮವು ತುಂಬಿ ಹಬ್ಬಿದಾಗ ಭೃಗುವಂಶದ ಚಂದ್ರಕುಲದ ಪ್ರಮತಿ ಎಂಬ ಮಹಾಪುರುಷನು ಧರ್ಮದ್ರೋಹಿಗಳನ್ನೆಲ್ಲಾ ಶಿಕ್ಷಿಸಿದನು. ಸ್ವಾಯಂಭೂ ಮನ್ವಂತರದ ಕಲಿಯುಗದ ಸಂಧ್ಯಾಂಶ ಭಾಗದಲ್ಲಿ ಈ ಪ್ರಮತಿಯು ಧನುರ್ಧಾರಿಯಾಗಿ ಮೂವತ್ತು ವರುಷ ಭೂಮಂಡಲವೆಲ್ಲಾ ಸುತ್ತಿ ಧರ್ಮಧ್ವಂಸಕ್ಕೆ ಕಾರಣರಾದ ಮ್ಲೇಂಛರನ್ನು ಸಂಹರಿಸಿದನು. ಸ್ವಾರ್ಥಿಗಳೂ, ವೇದ ವಿದ್ರೋಹಿಗಳೂ ಆದ ಶೂದ್ರ ರಾಜರನ್ನೂ ಅಧಾರ್ಮಿಕರಾದ ಉತ್ತರದೇಶ, ಮಧ್ಯಪ್ರದೇಶದ ಉಳಿದ ಎಲ್ಲ ದುಷ್ಟ ದೊರೆಗಳನ್ನೂ ನಿರ್ನಾಮಮಾಡಿದನು. ಅದರಂತೆ ಪೂರ್ವ-ಪಶ್ಚಿಮ ನಾಡಿನಲ್ಲಿ ನೆಲೆಸಿದ ಹಾಗೂ ವಿಂಧ್ಯ ಪರ್ವತದ ಆಚೆ-ಈಚೆ ದಕ್ಷಿಣ ದೇಶದಲ್ಲಿ ವಾಸಿಸಿದ ದ್ರವಿಡ, ಸಿಂಹಳ, ಆಂಧ್ರ, ತುಷಾರ, ಬರ್ಬರ ಮುಂತಾದವರನ್ನು ಸಂಹರಿಸಿ, ಎಲ್ಲ ಧರ್ಮಕಂಟಕರ ಹುಟ್ಟನ್ನೇ ಅಡಗಿಸಿಬಿಟ್ಟನು. ಶ್ರೀಹರಿಯೇ ಹಿಂದಿನ ಕಲಿಯುಗದಲ್ಲಿ ಪ್ರಮತಿಯ ರೂಪದಿಂದ ಅವತರಿಸಿ, ತನ್ನ ಮೂವತ್ತೆರಡನೆಯ ವರ್ಷದೊಳಗಾಗಿ ಭೂಮಿಯಲ್ಲಿ ಇದ್ದ ಅಧರ್ಮನಿರತರಾದ ಸಕಲ ದುರ್ಜನರನ್ನು ನಾಶಮಾಡಿ, ತಾನು ತನ್ನ ಸರ್ವ ಸೇನಾಸಮೇತನಾಗಿ ಗಂಗಾ-ಯಮುನಾ ಸಂಗಮ ತೀರ್ಥದಲ್ಲಿ ಜಲಸಮಾಧಿಯಿಂದ ದೇಹ ತ್ಯಾಗಮಾಡಿದನು. ಆ ಪ್ರಮತಿಯು ಈಗ ಮನುಕುಲದ ನೃದೇವನ ಮನೆಯಲ್ಲಿ ಜನಿಸಿರುವನು.

ಪ್ರತಿಯೊಂದು ಕಲಿಯುಗದ ಸಂಧ್ಯಾಂಶದಲ್ಲಿಯೂ ಇಂತಹ ಧರ್ಮವಿಪ್ಲವ ಹಾಗೂ ಅರಾಜಕತೆ, ದೇವದ್ವೇಷ, ವೇದವಿರೋಧ, ಅನಾವೃಷ್ಟಿ, ವರ್ಣಸಾಂಕರ್ಯ ಮಾಂಸಾಹಾರ, ಅನ್ನಾನ್ನಗತಿ, ದಿಗಂಬರ ವೃತ್ತಿ, ಪ್ರಜಾಕ್ಷೋಭೆ, ಪರಸ್ಪರ ಹೋರಾಟ, ಸಾಮೂಹಿಕ ಕಗ್ಗೊಲೆ, ಧರ್ಮಲೋಪವೇ ಮೊದಲಾದ ಅನರ್ಥಗಳೆಲ್ಲವೂ ಆಗಿಯೇ ಆಗುವವು. ಹಿಂದಿನ ಮನ್ವಂತರದ ಕಲಿಯುಗದಲ್ಲಿ ಇದೇ ಹಾಡು.

ಹೀಗೆ ದೇವ-ಮಾನವರ ಒಂದುನೂರು ವರುಷ ಎಂದರೆ ಮಾನವ ಮಾನದ ಮೂವತ್ತಾರು ಸಾವಿರ ವರ್ಷ ಕಳೆದ ಬಳಿಕ ಜನರೆಲ್ಲ ಹೊಟ್ಟೆ ಬಟ್ಟೆಗಳಿಗಿಲ್ಲದೆ ಕಂಗೆಟ್ಟು ಬಹುದುಃಖ ಪಟ್ಟ ಬಳಿಕ ಕಲಿಯುಗದ ಸಂಧ್ಯಾಂಶವು ಪ್ರಾರಂಭವಾಗುವದು. ಅವರು ಕೂಡ ದೇವ ಮಾನದ ಒಂದು ನೂರು ವರುಷ ಹೀಗೆಯೇ ಕಷ್ಟಪಟ್ಟು ತೊಳಲಿ ಬಳಲಿ, ದುಃಖ ದಗ್ಧರಾಗಿ ಸತ್ತ ಬಳಿಕ ಕೃತಯುಗವು ಪ್ರಾರಂಭವಾಗುವದು. ಆ ಬಳಿಕ ಹೊಸ ಸೃಷ್ಟಿ ಪ್ರಾರಂಭ, ಹಿಂದಿನ ಸಂಧ್ಯಾಂಶದಲ್ಲಿ ಅಳಿದುಳಿದ ಗಂಡು ಹೆಣ್ಣು ಜಾತಿಯ ಚಿಕ್ಕಮಕ್ಕಳಿಂದ ಹೊಸಯುಗದ ನಾಂದಿಯಾಗುವದು. ಹಿರಿಯರೆಲ್ಲರೂ ಸತ್ತುಹೋಗಿ ಕೇವಲ ಚಿಕ್ಕಚಿಕ್ಕ ಮಕ್ಕಳು ಮಾತ್ರ ಉಳಿಯುವರು. ಅವರೇ ಕೃತಯುಗದ ಪ್ರಜೆಗಳಾಗಿ

ಮುಂದೆ ಶಾಸ್ತ್ರೋಕ್ತವಾಗಿ ದಾಂಪತ್ಯಜೀವನ ನಡೆಸಿ, ವಂಶಾಭಿವೃದ್ಧಿ ಮಾಡುವರು. ಅವರೆಲ್ಲರೂ ರಾಗದ್ವೇಷಗಳನ್ನು ತೊರೆದು, ಜ್ಞಾನ ಭಕ್ತಿ ವೈರಾಗ್ಯ ಪಡೆದು, ಧರ್ಮವಿರುದ್ಧವಾದ ಅರ್ಥ ಕಾಮಗಳನ್ನು ಬಳಸಿಕೊಂಡು ಧರ್ಮಸಾಧನೆ ಮಾಡುತ್ತಲೇ ಸೃಷ್ಟಿಯನ್ನು ಅಭಿವೃದ್ಧಿಪಡಿಸುವರು. ಅವರಲ್ಲಿ ಅನೇಕರು ಬ್ರಹ್ಮಜ್ಞಾನಿಗಳು ಸಿದ್ಧ ಪುರುಷರು ಇರುವರು. ಅವರೆಲ್ಲರೂ ಜನರಕಣ್ಣಿಗೆ ಕಾಣದಂತೆ ಜಗತ್‌ಕ್ಷೇಮಕ್ಕಾಗಿ ಏಕಾಂತದಲ್ಲಿ ನಿಂತು ತಪೋನುಷ್ಠಾನಗೈಯುವರು. ಇಲ್ಲಿಯೇ ಇದ್ದ ಸಿದ್ಧರೂ ಸಾಧಕರೂ ಸಪ್ತಋಷಿಗಳಿಂದ ಒಡಗೂಡಿ ಕೃತಯುಗದಲ್ಲಿ ಸಂಭೂತರಾಗಿರುವ ನಾಲ್ಕುವರ್ಣದ ಜನರಿಗೆ ವರ್ಣಾಶ್ರಮಾಚಾರ ಧರ್ಮ ಉಪದೇಶಿಸುತ್ತಾರೆ.

ಹೊಸ ಸೃಷ್ಟಿಯ ಪ್ರಾರಂಭ ಕಾಲದಲ್ಲಿ ಸ್ಮಾರ್ತ, ಶ್ರೌತ ಧರ್ಮಗಳನ್ನು ಉಪದೇಶಿಸಿ, ಸನಾತನ ವೈದಿಕ ಸಂಸ್ಕೃತಿ ಸಂಪ್ರದಾಯ ಆಚಾರ ವಿಚಾರಗಳನ್ನೆಲ್ಲ ಅನೂಚಾನವಾಗಿ ಪ್ರಚುರಗೊಳಿಸಿ, ಪ್ರಚಾರಮಾಡುವದು ಸಪ್ತಋಷಿಗಳ ಕರ್ತವ್ಯವಾಗಿದೆ. ಅದಕ್ಕಾಗಿಯೇ ಕೃತಯುಗದಲ್ಲಿ ಅವರ ಅವತಾರ.

ಕಾಡಿನಲ್ಲಿ ಕಿಚ್ಚಿನಿಂದ ಹುಲ್ಲು ಸುಟ್ಟು ಹೊಂದರೂ ಮಳೆ ಆದ ಬಳಿಕ ಅದರ ಅಡಿಯಲ್ಲಿಯೇ ಹೊಸ ಹಸಿರು ಕುಸುರೊಡೆಯುವಂತೆ ಒಂದು ಯುಗ ಕಳೆದ ಕೂಡಲೇ ಅದರ ಬೆನ್ನ ಹಿಂದೆಯೇ ಯುಗಾಂತರವು ಪ್ರವರ್ತಿತವಾಗುವದು. ಹೀಗೆ ಮನ್ವಂತರವು ಮುಗಿಯುವವರೆಗೆ ಯುಗಚಕ್ರಗಳು ಒಂದಾದ ಮೇಲೆ ಒಂದು ಮುನ್ನಡೆಯುತ್ತಲೇ ಇರುವವು.

ಹೀಗೆ ಕೃತ, ತ್ರೇತಾ, ದ್ವಾಪರ, ಕಲಿ ಈ ನಾಲ್ಕುಯುಗಗಳು ಒಂದು ಸುತ್ತನ್ನು ಮುಗಿಸಿದರೆ ಅದು ಚತುರ್ಯುಗವೆನಿಸುವದು ಇಂತಹ ಚತುರ್ಯುಗಗಳು ಎಪ್ಪತ್ತೊಂದು ಸಲ ತಿರುಗಿದರೆ ಒಂದು ಮನ್ವಂತರ ಪೂರ್ತಿಯಾಗುವದು. ಎಲ್ಲ ಮನ್ವಂತರದಲ್ಲಿಯೂ ಭಿನ್ನಭಿನ್ನಸ್ವಭಾವದ ಜೀವರಾಶಿಗಳ ಉತ್ಪತ್ತಿ, ಬೆಳವಣಿಗೆ, ಉಳಿವು, ಅಳಿವು, ನೋವು, ನಲಿವು, ಸ್ಥಿತಿ, ಗತಿ, ಎಲ್ಲವೂ ಯಥಾಪ್ರಕಾರ ನಡೆಯುವದು. ದೇವ, ದಾನವ ಮಾನವ, ಯಕ್ಷ, ರಕ್ಷ, ಪಿಶಾಚ, ಪಶು, ಪಕ್ಷಿ, ಕ್ರಿಮಿ, ಕೀಟ, ಜೀವ, ಜಂತು, ಮುಂತಾದ ಎಲ್ಲ ಪ್ರಾಣಿಗಳ ಸ್ವಭಾವ, ಸ್ವರೂಪ ಅವಸ್ಥೆ, ಅನುಭವಗಳು ಅವರವರ ಕರ್ಮಾನುಸಾರವಾಗಿ ಪರಮಾತ್ಮನ ಸಂಕಲ್ಪದಂತೆ ನಡೆಯುವವು. ಹೀಗೆ ಈವರೆಗೆ ನಾನು ನಿಮಗೆ ನಾಲ್ಕು ಯುಗಗಳ ಲಕ್ಷಣ ಹೇಳಿದೆನು. ಈ ಯುಗಸ್ವಭಾವ ಅನುಸರಿಸಿ ಮನ್ವಂತರಗಳ ಕಾಲ ಚಕ್ರವು ತಿರುಗುತ್ತಲೇ ಇರುವದು. ಇನ್ನೂ ಬೇರೆ ಕಲ್ಪದಲ್ಲಿನ ಮನ್ವಂತರಗಳ ಸಮಾಚಾರವನ್ನು ತಿಳಿಸುವೆನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾನಲವತ್ತಾರನೆಯ ಅಧ್ಯಾಯ ಮುಗಿದುದು.*

—o—

# ಹದಿನಾಲ್ಕು ಮನ್ವಂತರಗಳ ಸ್ಥಿತಿಗತಿ

ಅಧ್ಯಾಯ - ೧೪೭

**ಸೂತ ಉವಾಚ :**

**ಮನ್ವಂತರಾಣಿ ಯಾನಿ ಸ್ಯುಃ ಕಲ್ಪೇಕಲ್ಪೇ ಚತುರ್ದಶ ।**
**ವ್ಯತೀತಾನಾಗತಾನಿ ಸ್ಯುರ್ಯಾನಿ ಮನ್ವಂತರೇಷ್ವಿಹ ॥**

**ಸೂತ** :- ಪ್ರತಿಯೊಂದು ಹಿಂದು ಮುಂದಿನ ಕಲ್ಪದಲ್ಲಿ ಬರುವ ಹದಿನಾಲ್ಕು ಮನ್ವಂತರಗಳನ್ನು, ಪ್ರತಿಯೊಂದು ಯುಗದ ಸ್ಥಿತಿಯನ್ನು, ಆಗ ಜನಿಸಿದ ಜೀವಿಗಳ ಬದುಕಿನ ಬಗೆಯನ್ನು ವಿವರಿಸಿ, ಇನ್ನು ಮುಂದೆ ಹೇಳುವೆನು ಕೇಳಿರಿ.

ಸಂಧ್ಯೆ ಹಾಗೂ ಸಂಧ್ಯಾಂಶಗಳನ್ನು ಬಿಟ್ಟು ಯುಗ ಪ್ರಮಾಣವು ಎಷ್ಟಿರುವದೋ ಅಷ್ಟು ವರುಷ ಆ ಯುಗದ ಮನುಷ್ಯರ ಆಯುಷ್ಯ ಪ್ರಮಾಣ ಅದರಷ್ಟೇ ಇರುವದು. ಆದರೆ ಕಲಿಯುಗದ ಪ್ರಾಣಿಗಳ ಆಯುಷ್ಯ ಮಾತ್ರ ಪರಮಾವಧಿ ನೂರು ವರುಷ, ಅದರ ಒಳಗೆ ಸಾಯುವವರೆ ಹೆಚ್ಚು. ಕೃತಯುಗದಲ್ಲಿ ದೇವ, ಮಾನವ, ಯಕ್ಷ, ರಾಕ್ಷಸರು ಆಕಾರ ಆಳತೆ ಎತ್ತರದಲ್ಲಿ ಸಮಾನರಾಗಿಯೇ ಇರುವರು. ದೇವತೆಗಳಲ್ಲಿ ಎಂಟು ಗಣದವರು ಮಾತ್ರ. ತೊಂಬತ್ತಾರು ಅಂಗುಲ ಎತ್ತರ. ಕೃತಯುಗದಲ್ಲಿ ದೇವಮಾನವರ ಎತ್ತರ ಎಪ್ಪತ್ತೆರಡು ಅಂಗುಲ. ಕಲಿಯುಗದಲ್ಲಿ ದೇವತೆಗಳ ಎತ್ತರ ನಲವತ್ತೊಂಭತ್ತು ಅಂಗುಲ, ದೈತ್ಯರದು ಎಂಬತ್ನಾಲ್ಕು ಅಂಗುಲ. ಆಕಳು, ಆನೆ, ಕೋಣ, ಮೊದಲಾದ ಪಶು ಹಾಗೂ ಮರಬಳ್ಳಿಗಳ ಪ್ರಮಾಣವು ಕೂಡ ಕಲಿಯುಗದಲ್ಲಿ ಕ್ರಮೇಣ ಕಡಿಮೆಯಾಗುತ್ತ ಬರುವದು. ಪಶುಗಳಲ್ಲಿ ಹಸು, ಆಡು, ಕುದುರೆ, ಆನೆ, ಪಕ್ಷಿ ಹಾಗೂ ಮೃಗಗಳು ಯಜ್ಞಾರ್ಹವಾದ ಪವಿತ್ರ ಪ್ರಾಣಿಗಳೆಂದು ಭಾವಿಸಲ್ಪಟ್ಟಿದ್ದವು. ಯಜ್ಞದಲ್ಲಿ ಉಪಯೋಗಿಸಲ್ಪಟ್ಟ ಪಶುಗಳು ಸತ್ತ ಬಳಿಕ, ಸ್ವರ್ಗದಲ್ಲಿ ದಿವ್ಯಭೋಗಗಳನ್ನು ಅನುಭವಿಸುತ್ತ ಸುಖದಿಂದ ಇರುವವು.

ಇನ್ನು ಮುಂದೆ ಶಿಷ್ಟ ಮತ್ತು ಸಾಧುಗಳಾದ ಮಹಾತ್ಮರ ಲಕ್ಷಣ ಹೇಳುವೆನು. ಬ್ರಹ್ಮನನ್ನು ಅರಿತವರು ಬ್ರಾಹ್ಮಣರು. ವೇದಪ್ರಾಮಾಣ್ಯವಾದಿಗಳಾದ ಇಂತಹ ಬ್ರಾಹ್ಮಣರಿಗೆ ಸಜ್ಜನರು ಸಾಧುಗಳೆಂದು ಹೆಸರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಈ ಮೂರು ವರ್ಣದವರು ವೇದೋಕ್ತವಾದ ಕರ್ಮಗಳನ್ನು ಮಾಡಲು ಅಧಿಕಾರಿಗಳಾಗಿದ್ದಾರೆ. ಧರ್ಮವು ಎರಡು ವಿಧ. ಸಾಮಾನ್ಯ ಧರ್ಮ, ವಿಶೇಷ ಧರ್ಮ ಎಂದು. ಈ ಮೇಲಿನ ಮೂರು ವರ್ಣದವರಿಗೆ ಸಾಮಾನ್ಯ ವಿಶೇಷ ಎರಡೂ ವಿಧವಾದ ಧರ್ಮಗಳನ್ನು ಆಚರಿಸಲು ಅರ್ಹತೆ ಇದೆ. ಇವರನ್ನು ಬಿಟ್ಟು ಶೂದ್ರ ಹಾಗೂ ವರ್ಣಬಾಹ್ಯ ಜನರಿಗೆ ಮಾತ್ರ ಅಧ್ಯಯನ, ಅಧ್ಯಾಪನ, ಯಜನ, ಯಾಜನ ಮುಂತಾದ ವಿಶೇಷ ಧರ್ಮಗಳಲ್ಲಿ ಅಧಿಕಾರವಿಲ್ಲ. ಆದರೆ ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಪರೋಪಕಾರ ಮುಂತಾದ ಸಾಮಾನ್ಯ ಧರ್ಮಗಳಲ್ಲಿ ಎಲ್ಲರಿಗೂ ಸಮಾನವಾದ

ಅಧಿಕಾರವಿದೆ. ಶ್ರುತಿ ಎಂದರೆ ವೇದ, ಹಾಗೂ ಸ್ಮೃತಿ ಎಂದರೆ ಋಷಿಗಳು ಬರೆದ ಗ್ರಂಥಗಳು. ಈ ಧರ್ಮಗ್ರಂಥಗಳಲ್ಲಿ ಹೇಳಿದಂತೆ ನಡೆಯುವದು 'ಜ್ಞಾನಧರ್ಮ' ಎನಿಸುವದು. ಈ ಶ್ರುತಿ, ಸ್ಮೃತಿಗಳಲ್ಲಿ ನಿರೂಪಿಸಿದಂತೆ ವರ್ಣಾಶ್ರಮ ಧರ್ಮಗಳನ್ನು ಪಾಲಿಸುವ ಮನುಷ್ಯರು ಮುಂದೆ ಸ್ವರ್ಗಾದಿ ಸದ್ಗತಿಗಳನ್ನು ಪಡೆಯುತ್ತಾರೆ.

ಆಶ್ರಮ ಧರ್ಮಗಳನ್ನು ಸರಿಯಾಗಿ ಪಾಲಿಸುವವರು ಸಾಧು ಎನಿಸುವರು. ಬ್ರಹ್ಮಚಾರಿಯು ಗುರುಗಳ ಸೇವೆಮಾಡಿ ವಿದ್ಯೆಗಳಿಸಬೇಕು. ಅವನ ವಿದ್ಯೆ ಗಳಿಸಿದರೆ ಸಾಧು. ತನ್ನ ವಂಶವನ್ನು ಅಭಿವೃದ್ಧಿಗೊಳಿಸಿ, ಉಳಿದ ಆಶ್ರಮದವರಿಗೆ ಎಂದರೆ ಬ್ರಹ್ಮಚಾರಿ, ಸನ್ಯಾಸಿ ಮುಂತಾದವರಿಗೆ ಬದುಕಲು ಅವಕಾಶ ಮಾಡಿಕೊಡುವ ಗೃಹಸ್ಥನು ಸಾಧು. ಕಾಡಿನಲ್ಲಿ ತಪಂಗೈದು ಸಿದ್ಧಿ ಪಡೆಯಲು ಪ್ರಯತ್ನಿಸುವ ವಾನಪ್ರಸ್ಥಾಶ್ರಮಿಯು ಸಾಧುವು. ಯೋಗಸಾಧನೆಯಿಂದ ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳಲು ಹವಣಿಸುವ ಸನ್ಯಾಸಿ ಸಾಧುವು.

ಧರ್ಮ ಎಂದರೆ ಧರ್ಮಾಚರಣೆ ಎಂದು ಅರ್ಥ. ಇದು ಕ್ರಿಯಾವಾಚಿ. ಆತ್ಮೋದ್ಧಾರಕ್ಕೆ ಸಾಧನವಾದ ಕರ್ಮವೇ ಧರ್ಮ. ಶ್ರೇಯಸ್ಸಿಗೆ ಬಾಧಕವಾದ ಕರ್ಮ ಅಧರ್ಮ. ಇದು ಭಗವಂತನು ಹೇಳಿದ ಧರ್ಮದ ವ್ಯಾಖ್ಯೆ.

**ಧರ್ಮೋ ಧರ್ಮಗತಿಃ ಪ್ರೋಕ್ತಃ ಶಬ್ದೋ ಹ್ಯೇಷ ಕ್ರಿಯಾತ್ಮಕಃ ।**
**ಕುಶಲಾಕುಶಲಂ ಕರ್ಮ ಧರ್ಮೋಽಧರ್ಮೋಽಬ್ರವೀತ್ಪ್ರಭುಃ ॥**

ಇದರಂತೆ ದೇವತೆಗಳು, ಪಿತೃಗಳು ಮನುಷ್ಯ ಜಾತಿಯಲ್ಲಿ ಹುಟ್ಟಿದ ಋಷಿಗಳು 'ಇದು **ಧರ್ಮ**'ವೆಂದು ಹೇಳಿದರೆ ಧರ್ಮ. 'ಅಲ್ಲ' ಎಂದರೆ **ಅಧರ್ಮ.** ಮೌನ ಮೂರ್ತಿಗಳಾದ ಅವರು ಬಾಯಿ ತೆರೆದು ಹೇಳಿದ್ದೇ ಧರ್ಮ ಎಂದು ತಿಳಿಯಬೇಕು. ಈ ಅಭಿಪ್ರಾಯವು ಈ ಕೆಳಗಿನ ಪದ್ಯದಿಂದ ಸ್ಪಷ್ಟವಾಗುತ್ತದೆ.

**ಅಥ ದೇವಾಶ್ಚ ಪಿತರ ಋಷಯಶ್ಚೈವ ಮಾನುಷಾಃ ।**
**ಅಯಂ ಧರ್ಮೋಹ್ಯಯಂ ನೇತಿ ಬ್ರುವತೇ ಮೌನಮೂರ್ತಿನಾ ॥**

ಶಾಸ್ತ್ರದಲ್ಲಿ ಧರ್ಮಶಬ್ದದ ನಿಷ್ಪತ್ತಿಯನ್ನು ಹೀಗೆ ಹೇಳಿದ್ದಾರೆ.

**ಧರ್ಮೇತಿ ಧಾರಣೇ ಧಾತುರ್ಮಹತ್ವೇ ಚೈವಮುಚ್ಯತೇ ।**
**ಆಧಾರಣೆ ಮಹತ್ವೇ ವಾ ಧರ್ಮಃ ಸ ತು ನಿರುಚ್ಯತೇ ॥**

'ಧೃ ಧಾರಣೇ, ಮಹತ್ವೇಚ' ಎಂಬ ಧಾತುವಿನಿಂದ ಧರ್ಮ ಎಂಬ ಶಬ್ದವು ನಿಷ್ಪನ್ನವಾಗಿದೆ. 'ಧೃ'. ಧಾತುವು ಧಾರಣಾರ್ಥ ಹಾಗೂ ಮಹತ್ವಾರ್ಥದಲ್ಲಿ ಇದ್ದುದರಿಂದ ಅಧೋಗತಿಗೆ ಇಳಿಯದಂತೆ ಜನರನ್ನೆಲ್ಲ ಎತ್ತಿಹಿಡಿಯುವ ಅಸಾಧಾರಣ ಮಹಿಮೆ ಉಳ್ಳದ್ದೇ ಧರ್ಮವೆಂಬ ಅರ್ಥದಲ್ಲಿ ಪ್ರಯುಕ್ತ ವಾಗಿರುತ್ತದೆ. ಧರ್ಮವು ಇಷ್ಟಾರ್ಥವನ್ನು ಸಾಧಿಸಿಕೊಡುತ್ತದೆ. ಈ ಧರ್ಮವನ್ನು ಹೇಗೆ ಆಚರಿಸಬೇಕೆಂಬುದನ್ನು ಗುರುಗಳು ಉಪದೇಶಿಸಿ ತೋರಿಸಿಕೊಡುತ್ತಾರೆ. ಅನಿಷ್ಟಫಲವಾದ ಅಧರ್ಮವನ್ನು

ಗುರುಗಳು ಉಪದೇಶಿಸುವದಿಲ್ಲ. ಧರ್ಮೋಪದೇಶಕರಾದ ಗುರುಗಳಿಗೆ 'ಆಚಾರ್ಯ' ಎಂದು ಹೆಸರು. ಆಶೆಯಿಲ್ಲದೆ ಅಹಂಕಾರ ವರ್ಜಿತರಾಗಿ, ಆತ್ಮವನ್ನು ಅರಿತು ವಿನಯದಿಂದ ಧರ್ಮೋಪದೇಶ ಮಾಡುವ ಜ್ಞಾನವೃದ್ಧರಿಗೆ 'ಆಚಾರ್ಯ' ಎಂದು ಅನ್ವರ್ಥಕವಾದ ಹೆಸರು. ಇಂತಹ ಆಚಾರ್ಯರು ವೇದಶಾಸ್ತ್ರಗಳಿಗೆ ಅನುಸಾರವಾಗಿ ಉಪದೇಶಿಸಿದ ಆಚಾರವಿಚಾರಗಳು ಧರ್ಮ ಎನಿಸುತ್ತದೆ. ಮದುವೆ ಮಾಡಿಕೊಂಡು, ಸ್ಥಾಲೀಪಾಕ, ಯಜ್ಞಯಾಗ ನಡೆಯಿಸುವದು, ಶ್ರೌತಧರ್ಮ, ಯಮ, ನಿಯಮಗಳನ್ನು ಪಾಲಿಸಿ ವರ್ಣಾಶ್ರಮ ಆಚಾರ ಪಾಲಿಸುವುದು 'ಸ್ಮಾರ್ತ'ಧರ್ಮ ಎನಿಸುತ್ತದೆ. ಶ್ರೌತ ಧರ್ಮಗಳನ್ನು ತಮ್ಮ ಹಿಂದಿನ ಹಿರಿಯರಿಂದ ಕೇಳಿಕೊಂಡು ಸಪ್ತರ್ಷಿಗಳು ಜಗತ್ತಿಗೆ ಉಪದೇಶ ಮಾಡಿದರು. ಹಿಂದಿನ ಮನ್ವಂತರದಲ್ಲಿ ಪ್ರಚಾರದಲ್ಲಿದ್ದ ಧರ್ಮಗಳನ್ನು ತನ್ನ ಸ್ಮರಣಶಕ್ತಿಯಿಂದ ನೆನಪಿಗೆ ತಂದುಕೊಂಡು ಮಹಾಜ್ಞಾನಿಯಾದ ಮನು ಮಹಾರಾಜನು ಉಪದೇಶಿಸಿದ್ದು ಸ್ಮಾರ್ತಧರ್ಮ ಎನಿಸಿದೆ. ಈ ಎರಡು ವಿಧವಾದ ಧರ್ಮಗಳನ್ನು ಅನುಸರಿಸುವದೇ ಶಿಷ್ಟಾಚಾರ.

ಪ್ರತಿಯೊಂದು ಮನ್ವಂತರಗಳಲ್ಲಿ ನಾಶವಾಗದೆ, ಚಿರಂಜೀವಿಗಳಾಗಿ ಜನರಿಗೆಲ್ಲ ಉಪದೇಶಮಾಡುತ್ತಲಿರುವ ಸಪ್ತರ್ಷಿಗಳು ಹಾಗೂ ಮನುಮಹಾರಾಜನು ಶಿಷ್ಟ ಎನಿಸುವರು. ಇಂತಹ ಶಿಷ್ಟರು ತಮ್ಮ ನಡೆನುಡಿಗಳಿಂದ ಪ್ರಚಾರದಲ್ಲಿ ತಂದ ಆಚಾರವಿಚಾರಗಳು ಆದರ್ಶ ಧರ್ಮವಾಗಿರುತ್ತವೆ. ಹೀಗೆ ಅನಾದಿಕಾಲದಿಂದ ಪ್ರತಿ ಮನ್ವಂತರದಲ್ಲೂ ಹಿಂದೆ ಹಿಂದಿನ ಮನ್ವಂತರದ ಸದಾಚಾರ ಸತ್‌ಸಂಪ್ರದಾಯಗಳನ್ನು ಅನೂಚಾನವಾಗಿ ಈ ವಿಶಿಷ್ಟ ಮನು ಸಪ್ತರ್ಷಿಗಳೆಂಬ ಶಿಷ್ಟರು ಆಚರಿಸುತ್ತ ಬರುವದರಿಂದ ಈ ಶಿಷ್ಟಾಚಾರವು ಶಾಶ್ವತ ಧರ್ಮವಾಗಿದೆ. ದಾನ, ಸತ್ಯ, ತಪಸ್ಸು, ಲೋಕಾನುಕರಣ, ವಿದ್ಯೆ, ಯಜ್ಞ, ಉಪಾಸನೆ, ಇಂದ್ರಿಯನಿಗ್ರಹ ಇವು ಎಂಟು ಶಿಷ್ಟಾಚಾರದ ಲಕ್ಷಣಗಳಾಗಿವೆ.

ಧರ್ಮದ ಮುಖ್ಯ ಅಂಗಗಳಾದ ಸತ್ಯ, ತಪಸ್ಸು, ಯಜ್ಞ ಮುಂತಾದವುಗಳ ಲಕ್ಷಣವನ್ನು ಹೇಳುತ್ತೇನೆ. ಇದ್ದುದು ಇದ್ದಂತೆ, ಕಂಡದ್ದು ಕಂಡಂತೆ, ಮರೆಮಾಚದೆ ಸ್ಪಷ್ಟವಾಗಿ ಹೇಳುವದೇ ಸತ್ಯ. ಅದು ಎಲ್ಲ ಪ್ರಾಣಿಗಳಿಗೆ ಹಿತಕರವಾದದ್ದಿರಬೇಕು. ಬ್ರಹ್ಮಚರ್ಯ, ತಪಸ್ಸು, ಮೌನ, ಉಪವಾಸ ಇವು ತಪಸ್ಸಿನ ಲಕ್ಷಣಗಳು. ವೇದ ಮಂತ್ರಗಳಿಂದ ಋತ್ವಿಜರು, ದ್ರವ್ಯ, ದಕ್ಷಿಣೆಗಳಿಂದ ಕೂಡಿ ಲೋಕ ಕ್ಷೇಮಕ್ಕಾಗಿ ಮಾಡುವ ಅಗ್ನಿಕಾರ್ಯವು ಯಜ್ಞ ಎನಿಸುವದು. ಎಲ್ಲ ಪ್ರಾಣಿಗಳ ಬಗೆಗೆ ತನಗೆ ಹಿತವಾದುದು ಅವರಿಗೂ ಹಿತ. ತನಗೆ ಅಹಿತವಾದುದು. ಅವರಿಗೂ ಅಹಿತ ಎಂದು ತಿಳಿದು ಮನಃಪೂರ್ವಕವಾಗಿ ಪರೋಪಕಾರಮಾಡುವದು ದಯೆ. ಎಲ್ಲ ಧರ್ಮಗಳಲ್ಲಿ ಈ ದಯೆಯೇ ಅತ್ಯಂತ ಶ್ರೇಷ್ಠ. ಹೆರವರು ಹೊಡೆದರೆ ತಿರುಗಿ ಹೊಡೆಯದೆ, ಬೈಯ್ದರೂ ಸಿಟ್ಟಿಗೇಳದೆ, ಮನಸ್ಸಿನಲ್ಲಿಯೂ ಕಿಂಕರಮಾಡಿಕೊಳ್ಳದೆ, ಪರರ ದೌರ್ಜನ್ಯವನ್ನೆಲ್ಲಾ ಸ್ಥೈರಣೆಯಿಂದ ಸಹಿಸಿಕೊಳ್ಳುವದು ತಾಳ್ಮೆ ಅಥವಾ ಕ್ಷಮಾಗುಣ. ಪರಕೀಯರ ಒಳ್ಳೆಯ ವಸ್ತು ದೊರೆತಾಗ ಅದು ಪರದ್ರವ್ಯವೆಂಬ ಬುದ್ಧಿಯಿಂದ

ತೆಗೆದುಕೊಳ್ಳದಿರುವದು ಅಲೋಭ. ಹೆಣ್ಣಿನ ರಾಗ ಭೋಗಗಳ ವಿಷಯದಲ್ಲಿ ಮಾತನ್ನೇ ಆಡದೆ, ಮನಸ್ಸಿನಿಂದ ಕೂಡಾ ಮಹಿಳೆಯರ ಬಗ್ಗೆ ಯೋಚಿಸದೇ ಜಿತೇಂದ್ರಿಯತನದಿಂದ ಇರುವದು ಬ್ರಹ್ಮಚರ್ಯಎನಿಸುವದು. ಇದಕ್ಕೆ **'ಶಮ'** ಎಂತಲೂ ಹೆಸರು. ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ವಿಷಯ ಸುಖದ ಕಡೆಗೆ ಲಕ್ಷ್ಯ ಕೊಡದಿರುವದು **ದಮ.** ನ್ಯಾಯಮಾರ್ಗದಿಂದ ತಾನು ಸಂಪಾದಿಸಿದ ಮತ್ತು ತನಗೆ ಅತ್ಯಂತ ಪ್ರಿಯವಾದ ಪದಾರ್ಥವನ್ನು ಯೋಗ್ಯನೂ ಸುದ್ಗುಣಿಯೂ ಆದ ಮನುಷ್ಯನಿಗೆ ಕೊಡುವದು ದಾನ. ವೇದ ಹಾಗೂ ಸ್ಮೃತಿಗಳಲ್ಲಿ ಹೇಳಿದ, ಶಿಷ್ಟಾಚಾರದಿಂದ ಬೆಳೆದು ಬಂದ, ಜ್ಞಾನಿಗಳಿಗೆ ಸಮ್ಮತವಾದ, ವರ್ಣಾಶ್ರಮ ವಿಹಿತವಾದ ಸದಾಚಾರವೇ **ಧರ್ಮ.** ಕಷ್ಟದಲ್ಲಿ ಕುಗ್ಗದೆ, ಇಷ್ಟದಲ್ಲಿ ಹಿಗ್ಗದೇ ಪ್ರೇಮ, ದ್ವೇಷ, ವಿಷಾದ, ತಾಪ ಮುಂತಾದ ವಿಕಾರಗಳಿಂದ ದೂರನಾಗಿರುವದು **ವೈರಾಗ್ಯ.** ತಾನು ಹಿಂದೆ ಮಾಡಿದ ಹಾಗೂ ಮುಂದೆ ಮಾಡಲಿರುವ ಸರ್ವಕರ್ಮಗಳ ಫಲದ ಆಸೆ ಬಿಟ್ಟು ಪರಮಾತ್ಮನಲ್ಲಿ ಸಮರ್ಪಿಸಿ, ಆ ಕರ್ಮದಿಂದ ಬರುವ ಸುಖ ದುಃಖಗಳಿಂದ ವಿಚಲಿತನಾಗದೆ, ನಿಷ್ಕಾಮ ಬುದ್ಧಿಯಿಂದ ತನ್ನ ತನ್ನ ಕರ್ತ್ಯವ್ಯ ಕರ್ಮ ಮಾಡುತ್ತಲಿರುವದು **ಸನ್ಯಾಸ** ಎನಿಸುವದು.

ಹಿಂದಿನ ಸ್ವಾಯಂಭುವ ಮನ್ವಂತರದಲ್ಲಿ ಧರ್ಮದ ರಹಸ್ಯವನ್ನು ಅರಿತು ತತ್ವಜ್ಞಾನಿಗಳಾದ ಮಹರ್ಷಿಗಳು ಧರ್ಮದ ಅಂಗಗಳಾದ ಸತ್ಯ, ತಪಸ್ಸು, ದಯಾ ಮುಂತಾದವುಗಳ ಲಕ್ಷಣವನ್ನು ಮೇಲೆ ಹೇಳಿದ ರೀತಿಯಲ್ಲಿ ನಿಷ್ಕರ್ಷಿಸಿ ಹೇಳಿದ್ದಾರೆ.

ಇನ್ನು ಮನ್ವಂತರದ ವಿಧಿ, ಚಾತುರ್ಹೋತ್ರ, ಚಾತುರ್ವರ್ಣಗಳನ್ನು ಹೇಳುತ್ತೇನೆ, ಅವಾಂತರ ಪ್ರಳಯ ಮುಗಿದ ಬಳಿಕ ಪ್ರತಿ ಮನ್ವಂತರದ ಪ್ರಾರಂಭದಲ್ಲಿ ಬ್ರಹ್ಮದೇವರು ಋಗ್ವೇದ, ಯಜುರ್ವೇದ, ಸಾಮವೇದ ಮುಂತಾದ ಮಂತ್ರಗಳನ್ನು ದೇವತಾ ಸಹಿತವಾದ ಋಷಿಗಳಿಗೆ ಉಪದೇಶಿಸುತ್ತಾರೆ. ಜ್ಞಾನಕಾಂಡ, ಕರ್ಮ ಕಾಂಡಗಳು ಪ್ರತಿಮನ್ವಂತರದಲ್ಲಿಯೂ ಬ್ರಹ್ಮದೇವರಿಂದ ಮತ್ತೆ ಪ್ರವರ್ತಿತವಾಗುವವು. ಅದರಂತೆ ಮನ್ವಂತರದ ಆದಿಯಲ್ಲಿ ಉಗ್ರತಪಸ್ಸನ್ನು ಮಾಡಿದ ಬ್ರಹ್ಮರ್ಷಿಗಳಿಗೆ ಹಿಂದಿನ ಮನ್ವಂತರದಲ್ಲಿ ಪ್ರಚಾರದಲ್ಲಿದ್ದ ಮಂತ್ರಗಳು ಜ್ಞಾನಗೋಚರವಾಗುವವು. ಈ ಋಷಿಗಳಿಗೆ ಪ್ರಣವಮಂತ್ರದ ಜಪದಿಂದ ತತ್‌ಪ್ರತಿಪಾದ್ಯನಾದ ಗುಣ ಪರಿಪೂರ್ಣ ನಾರಾಯಣನ ಅನುಗ್ರಹದಿಂದ ಮಂತ್ರದೃಷ್ಟಿಮೂಡಿ ವೇದದರ್ಶನವಾಗುವದು. ಇನ್ನು **'ಋಷಿ'** ಶಬ್ದದ ವ್ಯಾಖ್ಯೆಯನ್ನು ಋಷಿಗಳ ಲಕ್ಷಣ ಕರ್ತ್ಯವ್ಯಗಳನ್ನು ಹೇಳುತ್ತಾರೆ.

**ಋಷತೇ ಪರಮಂ ಯಸ್ಮಾತ್ಪರಮರ್ಷಿಸ್ತತಃ ಸ್ಮೃತಃ ।**
**ಗತ್ಯರ್ಥಾದೃಷತೇರ್ಧಾತೋರ್ನಾಮ ನಿಷ್ಪತ್ತಿಕಾರಣಂ ।**
**ಯಸ್ಮಾದೇಷ ಸ್ವಯಂಭೂತಸ್ತಸ್ಮಾಚ್ಚ ಋಷಿತಾ ಮತಾ ॥**

ಪ್ರಳಯಕಾಲ ಮುಗಿದ ಬಳಿಕ ಹೊಸಸೃಷ್ಟಿಯನ್ನು ಪ್ರಾರಂಭಿಸಿ ಮೊದಲು ತನ್ನ ಬುದ್ಧಿಯಿಂದ ಸ್ಥೂಲದೃಷ್ಟಿಗೆ ಗೋಚರವಾಗದ ಪರಮಾತ್ಮನನ್ನು ಮೂಲ ಪ್ರಕೃತಿ ಹಾಗೂ ಚೇತನಾಚೇತನ ರಾಶಿಗೆಲ್ಲ ನಿಯಾಮಕನಾದವನೆಂದೂ ಪರಾತ್ಪರನೆಂದೂ ತಿಳಿದದ್ದರಿಂದ ಬ್ರಹ್ಮದೇವರು ಋಷಿ ಎನಿಸಿದನು. ಗತ್ಯರ್ಥಕವಾದ ಈ ಋಷಿ ಶಬ್ದವು

**"ಋಷಿ ಗತೌ"** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಮೊದಲನೆಯ ಋಷಿ ಚತುರ್ಮುಖ ಬ್ರಹ್ಮದೇವರು. ಅವರ ಮಾನಸಪುತ್ರರು ಪರಮಾತ್ಮನೇ ಎಲ್ಲರಿಗಿಂತಲೂ ಮಹಾನ್-ಮಿಗಿಲಾದವ ಎಂದು ತಿಳಿದು ಶ್ರೀ ಹರಿಯ ಮಹತ್ವವನ್ನು ಅರಿತದ್ದರಿಂದ ಅವರು **ಮಹರ್ಷಿ**. ಈ ಮಹರ್ಷಿಗಳಿಗೆ ಅನೇಕ ಜನ ಮಾನಸಪುತ್ರರೂ ಔರಸಪುತ್ರರೂ ಜನಿಸಿದರು, ಅವರಿಗೆ "ಋಷಿ" ಎಂಬ ಸಂಜ್ಞೆ ಬಂದಿತು. ಈ ಋಷಿಗಳು ಸ್ತ್ರೀ ಸಂಪರ್ಕದಿಂದ ಪಡೆದ ಮಕ್ಕಳಿಗೆ **ಋಷೀಕ** ಎಂದು ಹೆಸರು. ಈ ಋಷೀಕರ ಮಕ್ಕಳು ಋಷಿಪುತ್ರರು. ಇವರು ತಮ್ಮ ಹಿರಿಯರಿಂದ ಭಗವದ್ ತತ್ವಗಳನ್ನು ತಿಳಿದಿದ್ದರಿಂದ **ಶೃತರ್ಷಿ** ಎಂದು ಕರೆಯಲ್ಪಟ್ಟರು.

ಭೃಗು, ಮರೀಚಿ, ಅತ್ರಿ, ಅಂಗಿರಸ, ಕ್ರತು, ಮನು, ದಕ್ಷ, ವಶಿಷ್ಠ, ಪುಲಸ್ತ್ಯ, ಪುಲಹ, ಇವರು ಹತ್ತು ಜನರು ಬ್ರಹ್ಮದೇವರು ಮಾನಸ ಪುತ್ರರು. ಬ್ರಹ್ಮಜ್ಞಾನಿಗಳಾದ ಇವರಿಗೆ ಈಶ್ವರ, ಮಹರ್ಷಿ ಎನ್ನುತ್ತಾರೆ. ಈ ಮಹರ್ಷಿಗಳ ಮಕ್ಕಳು ಋಷಿಗಳು ಎಂದು ಹಿಂದೆ ಹೇಳಿದೆ ಅಷ್ಟೆ ! ಅವರ ಹೆಸರು :- ಕಾವ್ಯ, ಬೃಹಸ್ಪತಿ, ಕಶ್ಯಪ, ಚ್ಯವನ, ಉತಥ್ಯ, ವಾಮದೇವ, ಅಗಸ್ತ್ಯ, ಕೌಶಿಕ, ಕರ್ದಮ, ವಾಲಖಿಲ್ಯ, ವಿಶ್ರವಸ, ಶಕ್ತಿವರ್ಧನ, ಇವರೆಲ್ಲರೂ ತಮ್ಮ ತಪೋಬಲದಿಂದ ಬ್ರಹ್ಮಜ್ಞಾನ ಪಡೆದಿದ್ದರಿಂದ ಮತ್ತು ಹಿಂದಿನ ಮಹರ್ಷಿಗಳ ಸಂತಾನವಾದುದರಿಂದ ಋಷಿಗಳೆಂದು ಪ್ರಖ್ಯಾತರಾದರು.

ಮುಂದೆ ಈ ಋಷಿಗಳು ಮದುವೆ ಮಾಡಿಕೊಂಡು, ಸ್ತ್ರೀ ಸಂಬಂಧದಿಂದ ಪಡೆದ ಮಕ್ಕಳು ಋಷೀಕರು. ವತ್ಸರ, ನಗಹೂ, ಭರದ್ವಾಜ, ವೀರ್ಯವಾನ್. ದೀರ್ಘತಮಸ್, ಶರದ್ವಾನ್, ವಾಜಶ್ರವ, ಸುಚಿಂತ, ಶ್ಯಾವ, ಪರಾಶರ, ಶೃಂಗಿ, ಶಂಭಪಾತ, ಮಹಾರಾಜನಾದ ವೈಶ್ರವಣ. ಇವರೆಲ್ಲರೂ ಋಷೀಕರು. ಸತ್ಯನಾಮಕನಾದ ಪರಮಾತ್ಮನ ಸರ್ವಕರ್ತತ್ವವನ್ನು ತಿಳಿದು ಸ್ವಷ್ಟ್ರಾದಿಕರ್ತೃತ್ವೇನ ಉಪಾಸನೆಮಾಡಿ ಇವರೆಲ್ಲರೂ ಋಷಿತ್ವವನ್ನು ಸಂಪಾದಿಸಿದರು. ಹೀಗೆ ಋಷಿಕುಲದಲ್ಲಿ ಪ್ರಮುಖರಾದ ಈಶ್ವರ ಅಥವಾ ಮಹರ್ಷಿ ಋಷಿ ಮತ್ತು ಋಷೀಕ ಈ ಮೂವರ ಬಗೆಗೆ ಹೇಳಿದಂತಾಯಿತು.

ಇವರಲ್ಲದೇ ಭಗವದನುಗ್ರಹದಿಂದ ತಪಸ್ಸಿದ್ಧರಾಗಿ ಮಂತ್ರ ದೃಷ್ಟಾರರಾದ ಮಹಾನುಭಾವರು ಮಹರ್ಷಿಗಳೆಂದು ಕರೆಯಲ್ಪಡುತ್ತಾರೆ. ಅವರಲ್ಲಿ ಭೃಗು, ಕಾಶ್ಯಪ ಪ್ರಚೇತಸ, ದಧೀಚಿ, ಆತ್ಮವಂತ, ಪೂರ್ವ, ಜಮದಗ್ನಿ, ಸಾರಸ್ವತ, ಅರ್ಷ್ಟಿಚವನ, ಓತಹವ್ಯ, ವೇಧಸ, ಅಂಗಿರಸ, ಭರದ್ವಾಜ, ಲಕ್ಷಣ, ಶ್ರುತವಾಚ, ಗರ್ಗ, ಸ್ಮೃತಿ, ಮಾಂಧಾತ, ಗುರುವೀತ, ಯುವನಾಶ್ವ, ಅಂಬರೀಷ, ಪುರುಕುತ್ಸ, ಸ್ವಸವ, ಅಸ್ವ ಹಾರ್ಯ, ವೃಷದಶ್ವ, ವಿರೂಪ, ಕಾವ್ಯ, ಮುದ್ಗಲ, ಉತಥ್ಯ, ವಾಜಿಶ್ರವಸ್, ಕರಧ್ವಂತ, ಅಪಸೌಷ, ಸುಚಿತ್ತಿ, ವಾಮದೇವ, ಋಷಿಜ, ಬೃಹಚ್ಛುಕ್ಲ, ದೀರ್ಘತಮಸ್, ಕಕ್ಷೀವಂತ ಈ ಮೂವತ್ತು ಮೂರು ಮಂದಿಯೂ ಅಂಗಿರಸ ವಂಶದಲ್ಲಿ ಪ್ರಖ್ಯಾತರಾದವರು.

ಇವರೆಲ್ಲರೂ ಮಂತ್ರಕಾರರೆಂದೂ ಪ್ರಸಿದ್ಧರಾಗಿರುವರು. ಇನ್ನು ಮುಂದೆ ಕಾಶ್ಯಪ ವಂಶದಲ್ಲಿ ಹುಟ್ಟಿದ ಮಹರ್ಷಿಗಳ ಹೆಸರನ್ನು ಹೇಳುವೆನು ಕೇಳಿ. ಕಾಶ್ಯಪ, ಸಹವತ್ಸಾರ, ನೈಧ್ರುವ, ನಿತ್ಯ, ಅಸಿತ, ದೇವಲ ಈ ಆರು ಜನರೇ ಅವರು. ಅತ್ರಿ, ಅರ್ಧಸ್ವನ,

ಶಾವಾಸ್ಯ, ಗವಿಷ್ಠರ, ಋಷಿವರ್ಯನಾದ ಕರ್ಣಕ, ತಪಸ್ಸಿದ್ಧನಾದ ಪೂರ್ವಾತಿಥಿ ಈ ಆರೂ ಜನರೂ ಅತ್ರಿವಂಶೋದ್ಭವರು. ಮಂತ್ರಕಾರರಾದ ಮಹರ್ಷಿಗಳು. ವಸಿಷ್ಠ, ಶಕ್ತಿ, ಪರಾಶರ, ಇಂದ್ರಪ್ರಮತಿ. ಭರದ್ವಸು. ಮಿತ್ರಾವರುಣ, ಕುಂಡಿನ ಈ ಏಳು ಮಂದಿ ಮಹರ್ಷಿಗಳೂ ವಸಿಷ್ಠ ವಂಶೋದ್ಭವರು.

ಗಾಧಿಪುತ್ರನಾದ ವಿಶ್ವಾಮಿತ್ರ, ಬಲಶಾಲಿಯಾದ ದೇವರಾತ, ವಿದ್ವಾಂಸನಾದ ಮಧುಚ್ಛಂದ, ಋಷಿವರ್ಯನಾದ ಅಘಮರ್ಷಣ, ಅಷ್ಟಕ, ಲೋಹಿತ, ಭೃತಕೀಲ, ಮಾಂಬುಧಿ, ದೇವಶ್ರವಸ್, ದೇವರತ, ಅತೀ ಪ್ರಾಚೀನನೆನಿಸಿದ ಧನಂಜಯ ಶಾಲಂಕಾಯನ, ಮಹಾತೇಜಸ್ವಿಯಾದ ಈ ಹದಿಮೂರು ಜನರೂ ಕುಶಿಕನ ಸಂತತಿಯಲ್ಲಿ ಹುಟ್ಟಿದವರು. ಸಕಲ ವೇದಾಂಗ ಪಾರಂಗತರು.

ಇಂದ್ರಬಾಹು, ದೃಢದ್ಯುಮ್ನ, ಅಗಸ್ತ್ಯ ಎಂಬ ಮೂವರು ಅಗಸ್ತ್ಯ ವಂಶೋದ್ಭವರು, ಬಹು ಕೀರ್ತಿವಂತರು, ಬ್ರಹ್ಮವಾದಿಗಳು, ಸೂರ್ಯಪುತ್ರನಾದ ಮನು, ಇಲಾಪುತ್ರನಾದ ಪುರೂರವಸ್ ಈ ರಾಜರಿಬ್ಬರೂ ಕ್ಷತ್ರಿಯರಲ್ಲಿ ಮಂತ್ರಕರ್ತರೆಂದು ಪ್ರಖ್ಯಾತರಾಗಿರುವರು.

ಭಲಂದಕ, ಸಂಕಿಲ, ವಾಶಾಸ್ವ, ಎಂಬ ಮೂವರು ಮಂತ್ರಕಾರರು ವೈಶ್ಯವರ್ಣದವರಲ್ಲಿ ಹುಟ್ಟಿದವರು. ಇವರು ಬಹು ಪ್ರಸಿದ್ಧರು.ಮೇಲೆ ಹೇಳಿದ ತೊಂಭತ್ತೆರಡು ಮಂದಿ ಮಹರ್ಷಿಗಳೂ ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಅವುಗಳನ್ನು ಲೋಕಕ್ಕೆ ಉಪದೇಶಿಸಿದರು.

ಈಗ ಹೇಳಿದ ಮಂತ್ರಕಾರರಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಎಲ್ಲರೂ ಸೇರಿದ್ದಾರೆ. ಇವರು ಋಷಿಗಳ ಪುತ್ರರು. ಋಷೀಕರೆಂದು ಇವರ ಹೆಸರು. ಇವರನ್ನು ಋಷಿಪುತ್ರರೆನ್ನುವರು. ಅವರಿಗೆ ಶ್ರುತರ್ಷಿಗಳೆಂಬ ಪ್ರಖ್ಯಾತಿಯಿದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತೇಳನೆಯ ಅಧ್ಯಾಯ ಮುಗಿದುದು.*

—o—

## ದಿತಿಯ ತಪಸ್ಸು, ವಜ್ರಾಂಗನ ಜನನ

ಅಧ್ಯಾಯ - ೧೪೮

**ಋಷಿಯ ಉವಾಚ :**

**ಕಥಂ ಮತ್ಸ್ಯೇನ ಕಥಿತಸ್ತಾರಕಸ್ಯ ವಧೋ ಮಹಾನ್ ।**
**ಕಸ್ಮಿನ್ ಕಾಲೇ ವಿನಿವೃತ್ತಾ ಕಥೇಯಂ ಸೂತನಂದನ ॥**

**ಋಷಿ** :- ಸೂತಕುಮಾರ, ಮತ್ಸ್ಯಾವತಾರಿಯಾದ ಶ್ರೀ ಹರಿಯು ತಾರಕಾಸುರನ ಸಂಹಾರದ ಕತೆಯನ್ನು ನಿರೂಪಿಸಿದುದು ಎಂತು ? ಈ ತಾರಕ ವಧೆಯು ಎಂದು ನಡೆಯಿತು ? ಇದನ್ನೆಲ್ಲ ನಿಮ್ಮ ಮುಖದಿಂದ ಕೇಳಬೇಕೆಂದು ನಮ್ಮ ಅಭಿಲಾಷೆ. ಮೀನು ರೂಪಿಯಾದ ಜನಾರ್ದನನಿಗೆ ಮನುಮಹಾರಾಜನು ಜೊಂಡಿನ ಪುಡಿಯಲ್ಲಿ ಕುಮಾರಸ್ವಾಮಿಯು ಹೇಗೆ ಹುಟ್ಟಿದನು, ಎಂದು ಪ್ರಶ್ನೆ ಕೇಳಿದಾಗ ಸರ್ವಜ್ಞ ಚೂಡಾಮಣಿಯಾದ ಆ ಮೀನು ಮೂರುತಿಯು ಇಂತು ಆ ಕತೆಯನ್ನು ಬಿತ್ತರಿಸಿದನು.

**ಮತ್ಸ್ಯ** :- ಹಿಂದೆ ವಜ್ರಾಂಗ ಎಂಬ ಓರ್ವ ವೀರದೈತ್ಯ. ಅವನ ಮಗ ತಾರಕ ಮಹಾಬಲಿಷ್ಠ. ಅವನ ಹೊಡೆತ ತಾಳಲಾರದೇ ತತ್ತರಿಸಿ ಹೋದರು ಸುರಪುರ ನಿವಾಸಿಗಳು. ಸ್ವರ್ಗ ಬಿಟ್ಟು ಓಡಿ ಹೋದ ದೇವತೆಗಳೆಲ್ಲರೂ ಬ್ರಹ್ಮ ದೇವರಲ್ಲಿ ಮೊರೆ ಇಟ್ಟರು. ಆಗ ಆ ವಾಣೀಪತಿಯು "ದೇವತೆಗಳೇ, ಬೆದರದಿರಿ ಶಿವಪಾರ್ವತಿಯರ ಪ್ರತಾಪಿ ಪುತ್ರನಾದ ಕುಮಾರನು ಆ ತಾರಕಾಸುರನನ್ನು ಸಂಹರಿಸುವನು" ಎಂದು ಸಮಾಧಾನ ಪಡಿಸಿದನು.

ಕೆಲಕಾಲ ಕಳೆದ ಬಳಿಕ ಶಂಕರ, ಗಿರಿಜೆಯ ಪ್ರಾಯ ತುಂಬಿದ ಚೆಲುವಿನ ದೇಹವನ್ನು ಕಂಡು ಆ ರೂಪಸಿರಿಗೆ ಮಾರುಹೋದ ಕೂಡಲೇ ಅವನ ಶಕ್ತಿಪಾತವಾಯಿತು. ಅದನ್ನು ಬೆಂಕಿಯ ಬಾಯಿಯಲ್ಲಿ ಬಿಟ್ಟ. ಅಗ್ನಿಯ ಮುಖಾಂತರ ಆ ರುದ್ರ ರೇತಸ್ಸು ದೇವತೆಗಳಿಗೆ ತಲುಪಿತು. ಆದರೆ ಅದನ್ನು ಜೀರ್ಣಿಸುವದು ಅವರಿಗೂ ಕಠಿಣವಾಯಿತು. ಅಲ್ಲಿಂದ ಹೊರಬಿದ್ದ ಅದು ಗಂಗಾತಟಾಕದಲ್ಲಿಯ ಹುಲ್ಲುಗಾವಲಿನ ಮೇಲೆ ಬಿದ್ದಿತು. ಆ ಹಚ್ಚಹಸಿರಿನ ಬಯಲು ಬಸರಿನಲ್ಲಿ ಬಿದ್ದ ಭವಾನೀಪತಿಯ ತೇಜಸ್ಸಿನಿಂದ ಸ್ಕಂದನ ಉತ್ಪತ್ತಿಯಾಯಿತು. ಬಾನಿನಿಂದ ಬುವಿಗೆ ಭಾಸ್ಕರನೇ ಬಂದು ಬಿದ್ದಂತಿತ್ತು ಆ ಕೂಸಿನ ಕಾಂತಿ. ಆ ಮಗು ಹುಟ್ಟಿ ಏಳು ದಿನವಾದಾಗ ತಾರಕಾಸುರನನ್ನು ಸಂಹಾರ ಮಾಡಿತು.

**ಋಷಿಗಳು** :- ಏಳು ದಿನದ ಕೂಸು ಕ್ರೂರ ರಕ್ಕಸನಾದ ತಾರಕನನ್ನು ಕೊಂದಿತೇ ? ಇದು ಅತ್ಯಾಶ್ಚರ್ಯ. ಹಾಗಿದ್ದರೆ ಈ ಕುಮಾರನ ಕತೆ ಕೌತುಕ ಪೂರ್ಣವಾದ ಪ್ರೇರಮಣೀಯವೂ ಆಗಿರಬೇಕು. ಕೇಳುವವರ ಪಾಪ ಪ್ರಶಮಣವಾಗುವದಂತೂ ಇದ್ದೇ ಇದೆ. ಈಗ ಸಂಕ್ಷೇಪದಲ್ಲಿ ದಿಗ್ದರ್ಶನ ಮಾಡಿದ ಆ ಕತೆಯನ್ನು ನಮಗೆ ವಿಸ್ತಾರವಾಗಿ ನಿರೂಪಿಸಿರಿ. ಆ ವಜ್ರಾಂಗ ಯಾರು ? ಕುಮಾರಸ್ವಾಮಿ ಅಥವಾ ಆ ಷಣ್ಮುಖನು ಹೇಗೆ ಜನಿಸಿದನು ? ಇದನ್ನು ನಮಗೆ ತಿಳಿಸಿರಿ.

**ಸೂತ** :- ದಕ್ಷ ಪ್ರಜಾಪತಿಯು ಬ್ರಹ್ಮದೇವರ ಮಾನಸಪುತ್ರ. ವೀರಿಣಿ ಅವನ ಮಡದಿ. ಅವಳಲ್ಲಿ ಅವನಿಗೆ ಅರವತ್ತು ಜನ ಹೆಣ್ಣುಮಕ್ಕಳು. ಅವರಲ್ಲಿ

ಹತ್ತು ಹೆಣ್ಣುಮಕ್ಕಳನ್ನು ಧರ್ಮನಿಗೂ, ಹದಿಮೂರು ಕನ್ಯೆಯರನ್ನು ಕಶ್ಯಪನಿಗೂ, ಇಪ್ಪತ್ತೇಳು ಚೆಲುವೆಯರನ್ನು ಚಂದ್ರನಿಗೂ, ನಾಲ್ವರನ್ನು ಅರಿಷ್ಟ ನೇಮಿಗೂ, ಬಾಹುಕ ಕುಮಾರ, ಅಂಗೀರಸ ಮತ್ತು ಕೃಶಾಶ್ವ ಈ ಮೂವರಿಗೆ ಇಬ್ಬಿಬ್ಬರು ಕನ್ಯೆಯರನ್ನು ಮದುವೆ ಮಾಡಿಕೊಟ್ಟನು.

ದಕ್ಷ ಕುಮಾರಿಯರಾದ ಆದಿತಿ, ದಿತಿ, ದನು, ವಿಶ್ವಾ, ಅರಿಷ್ಟಾ, ಸುರಭಿ, ಸುರಸಾ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರು, ಮುನಿ ಈ ಹದಿಮೂರು ಮುಗುದೆಯರು ಕಶ್ಯಪಮುನಿಯ ಕೈಹಿಡಿದು ಲೋಕಮಾತೆಯರು ಎನಿಸಿದರು. ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಈ ಹದಿಮೂರು ಕಶ್ಯಪ ಕಾಂತೆಯರ ಸಂತಾನವೇ. ಇಂದ್ರ, ಉಪೇಂದ್ರ, ಪೂಷ, ಆದಿತ್ಯ ಮೊದಲಾದ ದೇವತೆಗಳೆಲ್ಲರೂ ಕಶ್ಯಪ ಕುಟುಂಬಿನಿಯಾದ ಆದಿತಿ ದೇವಿಯ ಮಕ್ಕಳು. ಹಿರಣ್ಯ ಕಶ್ಯಪು ಮುಂತಾದ ದೈತ್ಯರು ದಿತಿಯ ಸಂತಾನ. ದನುವಿನ ಮಕ್ಕಳೇ ದಾನವರು. ಸುರಭಿಯ ಸಂತತಿಯೇ ಹಸು ಪಶುಗಳು. ಗರುಡ ಮುಂತಾದ ಹಕ್ಕಿಗಳು ವಿನತೆಯ ಮಕ್ಕಳು. ಹಾವುಗಳು ಕದ್ರುವಿನ ಸಂತತಿ. ದಿತಿಯ ಪುತ್ರನಾದ ಹಿರಣ್ಯಕಶ್ಯಪು ಇಂದ್ರನನ್ನು ಗೆದ್ದು ದೇವತೆಗಳಿಗೆಲ್ಲ ಅರಸನಾದನು. ಮೂರುಲೋಕದ ಸಾರ್ವಭೌಮ ಎನಿಸಿದ. ಇಂಥ ಮಹಾ ಬಲಿಷ್ಠನಾದ ಆ ದಾನವ ದೊರೆಯನ್ನು ನರಸಿಂಹರೂಪಿ ನಾರಾಯಣ ಸಂಹರಿಸಿದ. ಉಳಿದ ದೈತ್ಯರನ್ನೂ ಉಳಿದ ದೇವತೆಗಳು ವಧಿಸಿದರು. ತನ್ನ ಮಕ್ಕಳ ಅಕಾಲ ಮರಣದಿಂದ ದಿತಿದೇವಿಗೆ ದುಃಖವಾಗಿ ಪತಿಯನ್ನು ಪ್ರಾರ್ಥಿಸಿದಳು. ''ಇಂದ್ರನನ್ನು ಸಂಹರಿಸಬಲ್ಲ ಬಲಿಷ್ಠ ಪುತ್ರನನ್ನು ಕರುಣಿಸಿರಿ'' ಎಂದು ದೀನಳಾಗಿ ವರ ಬೇಡಿದಳು.

ಅವನ ದೀನ ಪ್ರಾರ್ಥನೆ ಕೇಳಿ ಕರುಣೆದುಂಬಿದ ಕಶ್ಯಪರು ಅವಳಿಗೆ ಹೀಗೆ ಹೇಳಿದರು. ''ಸಾವಿರ ವರ್ಷ ಕಷ್ಟಪಟ್ಟು ಈ ವ್ರತವನ್ನು ಅನುಷ್ಠಾನ ಮಾಡು. ಅಂದರೆ ಮಾತ್ರ ನಿನ್ನ ಇಷ್ಟದಂತೆ ಬಲಿಷ್ಠನಾದ ಮಗನು ಜನಿಸುವನು.''

ಛಲದಂಕಳಾದ ದಿತಿ ಪತಿಯ ಮಾತಿನಂತೆ ಸಾವಿರ ವರ್ಷಗಳವರೆಗೆ ನಿಷ್ಠುರ, ನಿಯಮಬದ್ಧಳಾಗಿ ಕಶ್ಯಪರು ನಿರ್ದೇಶಿಸಿದ ಕಠೋರವ್ರತವನ್ನು ಎಲ್ಲಿಯೂ ಲೋಪಬಾರದಂತೆ ಆಚರಿಸಿ ಪೂರ್ತಿಗೊಳಿಸುವದರಲ್ಲಿದ್ದಳು. ಈ ಸಂದರ್ಭವನ್ನು ಗಮನಿಸಿ ದೇವೇಂದ್ರನು ಮೊದಲೇ ಬಂದು ಅವಳ ಸೇವೆಗೈಯ್ದನು. ಸಂತೋಷ ಪಡಿಸಿದನು. ಸಾವಿರ ವರ್ಷ ಪೂರ್ತಿಯಾಗಲು ಹತ್ತು ವರ್ಷ ಉಳಿದಿತ್ತು. ತುಂಬು ಬಸಿರಿ ದಿತಿ ಪ್ರಸನ್ನಳಾಗಿ, ಇಂದ್ರನಿಗೆ 'ಸುರರಾಜ, ಬೇಗನೆ ನಿನಗೆ ಒಬ್ಬ ಸಹೋದರ ಜನಿಸುವನು. ಮೂರು ಲೋಕದ ಆಧಿಪತ್ಯವನ್ನು ನೀನು ಅವನೊಡನೆ ಅನುಭವಿಸು' ಎಂದು ಹೇಳಿದಳು. ಅಂದು ಏಕೋ ದಿತಿಗೆ ಭಾರೀ ನಿದ್ದೆ. ಬಿಚ್ಚಿದ ಕೂದಲು ಕಟ್ಟಲಿಕ್ಕೂ ಅವಕಾಶವಾಗಲಿಲ್ಲ. ಅವಳ ನೀಳುಗೂದಲು ಕಾಲಿಗೆ ತಾಕುತ್ತಿತ್ತು. ಕೆದರಿದ ಕೇಶಕಲಾಪಗಳು ಕಾಲಿಗೆ ತಾಕುತ್ತಿದ್ದಂತೆಯೇ ಒರಗಿಬಿಟ್ಟಳು. ಅವಳಲ್ಲಿ ಲೋಪವನ್ನೇ ಕಾಣಲು ಸಾವಿರಕಣ್ಣುಗಳಲ್ಲಿ ಎಣ್ಣೆಹಾಕಿಕೊಂಡು ನಿರುಕಿಸುತ್ತಿದ್ದ ಇಂದ್ರನಿಗೆ ಇಷ್ಟೇ ಸಾಕಾಯಿತು. ತಲೆಗೂದಲು ಪಾದಕ್ಕೆ ತಾಕಿಸಿ ಮಲಗಿದ ದಿತಿಯ ಗರ್ಭದಲ್ಲಿ

ಸೂಕ್ಷ್ಮರೂಪದಿಂದ ಒಳಹೊಕ್ಕು. ವಜ್ರದಿಂದ ಗರ್ಭಪಿಂಡವನ್ನು ಒಡೆದ. ಒಂದರಲ್ಲಿ ಏಳು. ಆ ಏಳರಲ್ಲಿ ಮತ್ತೆ ಏಳು ಏಳು. ಹೀಗೆ ದಿತಿಯ ಗರ್ಭ ನಲವತ್ತೊಂಬತ್ತು ಹೋಳುಗಳಾದವು. ಹೀಗೆ ತನ್ನ ಗರ್ಭಪಿಂಡ ಒಡೆದು ನುಚ್ಚು ನೂರಾದಬಳಿಕ ತಾಯಿಗೆ ಎಚ್ಚರ. ಏಳುವದರೊಳಗಾಗಿ ತನ್ನ ಬಸಿರೆಲ್ಲ ಏಳು ಏಳು. ನಲವತ್ತೊಂಭತ್ತು ಹೋಳು. ತನ್ನ ಸಂಕಲ್ಪವೆಲ್ಲ ಹಾಳು. ''ಅಯ್ಯೋ ! ನನ್ನ ಮಗುವನ್ನು ಕೊಲ್ಲಬೇಡ'' ಎಂದು ಕೂಗಿದಳು. ಇಂದ್ರನ ಮೇಲೆ ರೇಗಿದಳು.

ಆಗ ಇಂದ್ರ ಹೊರಗೆ ಬಂದ. ಕೈಮುಗಿದು ಹೇಳಿದ ''ತಾಯೀ, ಹಗಲು ನಿದ್ದೆ ನಿಷಿದ್ಧ. ನಿನ್ನ ವ್ರತಭಂಗವಾಯಿತು. ಮೇಲೆ ಮುಡಿಕಟ್ಟದೇ ಮಲಗಿದೆ, ಕೇಶಪಾಶಗಳನ್ನು ಅಂಗಾಲಿನಿಂದ ಒದೆಯುತ್ತ ಮಲಗಿದೆ. ಇವೆರಡೂ ಅಧರ್ಮ. ಅದರಿಂದ ವ್ರತಭಂಗ, ಅದಕ್ಕೆ ನನಗೆ ನಿನ್ನ ಉದರದಲ್ಲಿ ಪ್ರವೇಶಿಸಲು ಅವಕಾಶವಾಗಿ ನಿನ್ನ ಗರ್ಭ ಪಿಂಡವನ್ನು ಹೊಕ್ಕು ನಾನು ನಲವತ್ತೊಂಭತ್ತು ತುಂಡುಗಳನ್ನಾಗಿಮಾಡಿ ಕತ್ತರಿಸಿದ್ದೇನೆ. ಅವರೆಲ್ಲರೂ ನನ್ನ ದೇವಗಣದಲ್ಲಿ ಸೇರಲಿ. ನಿನ್ನ ಆಜ್ಞೆಯಂತೆ ಅಮರಾವತಿಯಲ್ಲಿ **'ಮರುದ್ಗಣ'** ಎಂದು ಹೆಸರಾಗಿ ನನ್ನೊಡನೆ ಸ್ವರ್ಗ ಸುಖವನ್ನು ಅನುಭವಿಸಲಿ'' ಎಂದು ಹೇಳಿ ಸುರಪತಿಯು ಸ್ವರ್ಗಕ್ಕೆ ನಡೆದನು. ಇಂದ್ರನ ಮಾತಿಗೆ 'ಅಸ್ತು' ಎಂದು ಹೇಳಿ ಅವನನ್ನು ಬೀಳ್ಕೊಟ್ಟ ಬಳಿಕ ದಿತಿಗೆ ಮನಸ್ಸಿನಲ್ಲಿ ಏನೋ ಒಂದು ಕಳವಳ. ತನ್ನ ಮಕ್ಕಳನ್ನು ಕೊಂದ ಸವತಿಯ ಮಗ ಶಚೀಪತಿಯನ್ನು ಇಲ್ಲದಂತೆ ಮಾಡಬೇಕೆಂದು ತಾನು ಕೈಕೊಂಡ ವ್ರತ ವಿಫಲವಾಯಿತು. ಎಂದು ಅವಳ ಎದೆಗೆ ತಳಮಳ. ಸಾವಿರ ವರ್ಷದ ತನ್ನ ವ್ರತ ವ್ಯರ್ಥವಾಯಿತೆಂದು ಕಡು ದುಃಖ.

ಇಷ್ಟಾದರೂ ಅವಳು ತನ್ನ ಛಲ ಬಿಡಲಿಲ್ಲ. ಪತಿಯ ಬಳಿಗೆ ಬಂದು ತನ್ನ ವ್ಯಥೆ, ಕಥೆಯನ್ನೆಲ್ಲ ತೋಡಿಕೊಂಡಳು. ''ನೀವು ಹೇಳಿದ ವ್ರತ ವೃಥಾ ಆಯಿತು. ಪ್ರಿಯಕರ, ಈಗಲಾದರೂ ನನ್ನ ಮೇಲೆ ದಯೆದೋರಿರಿ. ಇಂದ್ರನನ್ನು ಗೆಲ್ಲುವ ಪುತ್ರನನ್ನು ಕರುಣಿಸಿರಿ.'' ಎಂದು ಅಂಗಲಾಚಿದಳು.

ಕಶ್ಯಪರು ಮಡದಿಯ ಅಳಲನ್ನು ಕಂಡು ಕರಗಿ ಹೇಳಿದರು. ''ಹತ್ತು ಸಾವಿರ ವರ್ಷ ಮತ್ತೆ ತಪಸ್ಸುಮಾಡು. ನೀನು ಬಯಸಿದಂಥ ಮಗ ಹುಟ್ಟುವನು.'' ದಿತಿ ಸ್ವಭಾವದಿಂದ ಚಂಡಿ. ಸೇಡಿನ ಕಿಡಿ ಕಿಚ್ಚಾಗಿತ್ತು ಅವಳ ಮನದಲ್ಲಿ, ಕೂಡಲೇ ಕಾಡಿಗೆ ಓಡಿದಳು. ಸಮಾಧಿಗೂಡಿದಳು. ಘೋರತಪಮಾಡಿದಳು. ಅದರ ಫಲವಾಗಿ ವಜ್ರದೇಹದ ವೀರಪುತ್ರನನ್ನು ಹೆತ್ತಳು. ಹುಟ್ಟಿದೊಡನೆ ಶಸ್ತ್ರಾಸ್ತ್ರ ಪಾರಂಗತನಾಗಿ ''ತಾಯಿ, ಏನು ಅಪ್ಪಣೆ ?''ಎಂದು ಕೇಳಿದ ಆ ವೀರ ಕುಮಾರ. ದಿತಿಗೆ ಹಿಡಿಸಲಾರದ ಹಿಗ್ಗು, ''ಮಗು, ನಿನ್ನ ಅಣ್ಣಂದಿರನ್ನೆಲ್ಲ ಕೊಂದು ಹಾಕಿದ್ದಾನೆ ನನ್ನ ಆ ಸವತಿಯ ಮಗ ಇಂದ್ರ. ಅವನನ್ನು ಸಂಹರಿಸಿ ನೀನು ಅದರ ಸೇಡು ತೀರಿಸು'' ಎಂದು ಅಪ್ಪಣೆಗೈದಳು.

ದಿತಿಯ ಮಗ ಕಡುಗಲಿ. ಅವನ ಮೈ ವಜ್ರಕ್ಕಿಂತ ಬಿರುಸು. ವಜ್ರಾಂಗ ಎಂದೇ ಹೆಸರು ಅವನಿಗೆ. ತಾಯಿ ಹೇಳುವದೊಂದೇ ತಡ. ಇಂದ್ರನನ್ನು ತನ್ನ ಪಾಶದಿಂದ ಬಿಗಿದು ಎಳೆದು ತಂದ. ಕೆರಳಿದ ಹುಲಿ ಚಿಕ್ಕ ಚಿಗರೆಯನ್ನು ಎಳೆದು ತಂದದ್ದಕ್ಕಿಂತ ಹಗುರಾಗಿತ್ತು ಈ ಇಂದ್ರನ ಆನಯನ ಅವನಿಗೆ.

ದೇವೇಂದ್ರನನ್ನು ಬಂಧಿಸಿ ಬಂಧಿಯನ್ನಾಗಿ ಮಾಡಿಕೊಂಡು, ತಾಯಿ ತಂದೆ ಕುಳಿತಲ್ಲಿ ಐತಂದ. ಇಂದ್ರನ ಬಂಧನವನ್ನು ಕೇಳಿ ಬ್ರಹ್ಮದೇವರು ಅಲ್ಲಿಗೆ ಧಾವಿಸಿ ಬಂದರು. ಕಶ್ಯಪರಿಗೆ ತಮ್ಮ ಪ್ರೀತಿಯ ಮಗನ ಈ ಪಾಶ ಬಂಧನವನ್ನು ನೋಡಿ ಕೆಡುಕೆನಿಸಿತು. ಬ್ರಹ್ಮ ಹಾಗೂ ಕಶ್ಯಪರು ಕೂಡಿ ವಜ್ರಾಂಗನಿಗೆ ಹೇಳಿದರು - ''ಮಗು, ಈ ದೇವೇಂದ್ರನನ್ನು ಬಿಟ್ಟುಬಿಡು. ಇವನನ್ನು ಬಿಗಿದು ಕಟ್ಟಿದ್ದರೆ ನಿನಗಾಗುವ ಲಾಭವೇನು ? ಇವನು ಇನ್ನು ಮೇಲೆ ಇದ್ದರೂ ಸತ್ತಂತೆಯೇ. ನಿನ್ನ ಕೈದಿಯಾದ ಇವನು ಈಗ ನಮ್ಮ ನುಡಿಯಿಂದ ಬಿಡುಗಡೆ ಹೊಂದುತ್ತಾನೆ. ಇದು ಸುರಸಮ್ರಾಟನಾದ ಆ ದೇವನಿಗೆ ದೊಡ್ಡ ಅವಮಾನ. ದೊಡ್ಡವರಿಗೆ ಅಪಮಾನಕ್ಕಿಂತ ಮಿಗಿಲಾದ ಮರಣವಾವದಿದೆ ! ಇವನನ್ನು ಈಗ ಬಿಟ್ಟು ಬಿಟ್ಟರೆ ನಮಗೂ ಗೌರವ ಸಲ್ಲಿಸಿದಂತಾಗುವದು. ನಮ್ಮ ಮಾತಿನಿಂದ ಬದುಕಿ ಬಿಡುಗಡೆ ಹೊಂದಿದ ಇವನೂ ಮೃತಪ್ರಾಯನಾಗುವನು. ನಿನ್ನ ಕೀರ್ತಿಯು ಇಮ್ಮಡಿಸುವದು. ಸೆರೆ ಸಿಕ್ಕಿದ ಶತ್ರುವನ್ನು ಕರುಣೆಯಿಂದ ಮುಕ್ತನನ್ನಾಗಿ ಮಾಡುವದು ಮಹಾತ್ಮರ ಲಕ್ಷಣ. ಆದುದರಿಂದ ಮಹಾನುಭಾವನಾದ ನೀನು ಇಂದ್ರನನ್ನು ಬಿಟ್ಟುಬಿಡು.''

ವಜ್ರಾಂಗನು ತಂದೆ ಹಾಗೂ ಜಗತ್‌ಪಿತಾಮಹನಾದ ಬ್ರಹ್ಮ ಇವರಿಬ್ಬರ ಮಾತನ್ನು ಕೇಳಿ ಕೈ ಮುಗಿದು ನುಡಿದನು. ''ನನಗೆ ಈ ದೇವೇಂದ್ರನ ಬಂಧನದಿಂದ ಪ್ರಯೋಜನವಿಲ್ಲ. ತಾಯಿಯ ಆಜ್ಞೆಯಿಂದ ನಾನು ಇವನನ್ನು ಹಿಡಿದು ತಂದಿದ್ದೇನೆ. ಆದರೆ ನೀವು ನಮ್ಮ ತಂದೆ. ಇವರು ಸುರಾಸುರರಿಗೆಲ್ಲ ಅಧಿದೇವತೆ. ನನಗೆ ತಂದೆಯ ತಂದೆ (ಅಜ್ಜ). ನಿಮ್ಮಿಬ್ಬರ ಮಾತನ್ನು ಮೀರಿ ನಾನು ನಡೆಯಲಾರೆ. ಇದೋ ನಿಮ್ಮ ಅಪ್ಪಣೆಯಂತೆ ಸುರರಾಜನನ್ನು ಬಿಟ್ಟುಬಿಟ್ಟೆ. ಆದರೆ, ಪಿತಾಮಹ, ನನಗೆ ಈಗ ತಪಸ್ಸನ್ನು ಆಚರಿಸಬೇಕೆಂದು ಅಭಿಲಾಷೆ ಉತ್ಪನ್ನವಾಗಿದೆ. ತಮ್ಮ ಅನುಗ್ರಹದಿಂದ ನನ್ನ ತಪಶ್ಚರ್ಯವು ನಿರ್ವಿಘ್ನವಾಗಿ ನಡೆಯಲಿ.''

ಆಗ ಬ್ರಹ್ಮದೇವರು ''ವತ್ಸಾ, ನೀನು ನನ್ನ ಮಾತನ್ನು ನಡೆಸಿದೆ. ಶಚೀಪತಿಯನ್ನು ಮುಕ್ತಗೊಳಿಸಿದೆ. ನನಗೆ ಸಂತೋಷವಾಯಿತು. ನಿನ್ನ ಜನ್ಮವು ಸಫಲವಾಯಿತು'' ಎಂದು ಹೇಳಿ ಅಲ್ಲಿಯೇ ತಾವರೆಗಣ್ಣಿನ ತರುಣಿಯೊಬ್ಬಳನ್ನು ನಿರ್ಮಿಸಿ ವಜ್ರಾಂಗನಿಗೆ ಕೊಟ್ಟನು. ಅವಳ ಹೆಸರು ವರಾಂಗಿ. ಹೆಸರಿಗೆ ತಕ್ಕಂತಿತ್ತು ಅವಳ ರೂಪಕಾಂತಿ. ವೀರ ವಜ್ರಾಂಗನು ಅಂತಹ ಸೌಂದರ್ಯ ರಾಶಿಯಂತಿದ್ದ ಪತ್ನಿಯನ್ನು ಪಡೆದು ಸಂತುಷ್ಟನಾಗಿ ತಪಸ್ಸಿಗೆ ತೆರಳಿದನು.

ಸುರುವಾಯ್ತು ಕ್ರೂರ ರಕ್ಕಸನ ಘೋರ ತಪಸ್ಸು. ಆಗಸಕ್ಕೆ ನೀಡಿದ ನೀಳ್ದೋಳು, ಭೂಮಿಯ ಬೆನ್ನಿಗೆ ತಾಕಿದ ಉಂಗುಟ. ಸೂರ್ಯ ಮಂಡಲದಲ್ಲಿ ನೆಟ್ಟದೃಷ್ಟಿ. ಒಂಟಿಗಾಲಿನ ನಿಲುವು. ಸುತ್ತಲೂ ದಕ್ಷಿಣಾ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ ಎಂಬ ಐದು ಉರಿಯುವ ಅಗ್ನಿಗಳು. ನಟ್ಟನಡುವೆ ಆಚಲದಂತೆ ನಿಶ್ಚಲವಾಗಿ ನಿಂತ ವಜ್ರಾಂಗ. ಹೀಗೆ ಪಂಚಾಗ್ನಿ ಮಧ್ಯದಲ್ಲಿ ವಜ್ರಾಂಗನ ತಪಸ್ಸು ಎಷ್ಟೋ ದಿನ ಸಾಗಿತು. ಅನಂತರ ಚಳಿಗಾಲ ಬಂದಾಗ ನೀರಿನೊಳಗೆ ಅವಿತುಕೊಂಡು

ಜಲಸಮಾಧಿಯಲ್ಲಿಯೇ ಅವನ ತಪಸ್ಸು. ಹೀಗೆ ಸಾವಿರಾರು ವರುಷ ಎಡೆಬಿಡದೆ, ಅತ್ಯುಗ್ರವಾದ ತಪಸ್ಸನ್ನು ಆ ದಾನವನು ನಡೆಸಿದ.

ಇತ್ತ ವಜ್ರಾಂಗನ ಮಡದಿಯಾದ ವರಾಂಗಿಯೂ ಕೂಡ ದಾರುಣ ತಪಸ್ಸನ್ನು ಕೈಕೊಂಡಳು. ಮುನಿವೃತ್ತಿಯಲ್ಲಿ ಹರೆಯದ ಮೈಸಿರಿ ಸೂಸುವ ಆ ಹುಡುಗೆಯು ಕೈಕೊಂಡ ಉಗ್ರ ತಪೋನುಷ್ಠಾನವನ್ನು ಕಂಡು ಆಶ್ರಮದ ಮುನಿಗಳಿಗೆಲ್ಲ ಅಚ್ಚರಿ. ದೇವತೆಗಳಿಗೆಲ್ಲಾ ಗಾಬರಿ. ಸ್ವಯಂ ಇಂದ್ರನು ವರಾಂಗಿಯ ತಪಸ್ಸನ್ನು ಕೆಡಿಸಬೇಕೆಂದು ಪ್ರಯತ್ನಿಸಿದ. ಕೋತಿಯ ರೂಪದಿಂದ ಬಂದು, ಅವಳ ಕಮಂಡಲವನ್ನು ಕಸಿದ. ಕೃಷ್ಣಾಜಿನವನ್ನು ಹರಿದ, ಕೊಡ ಒಡೆದ, ತಂಬೂರಿಯನ್ನು ಮುರಿದ, ಮತ್ತೊಮ್ಮೆ ಆಡಿನ ರೂಪದಿಂದ ಬಂದು ಜಡೆಗಟ್ಟಿದ ಕೂದಲಿಗೆ ಬಾಯಿ ಹಾಕಿ ಅಲುಗಾಡಿಸಿದ, ಹಾವಾಗಿ ಕಾಲುಗಳಿಗೆ ಸುತ್ತಿ ಎಳೆದಾಡಿದ, ಹೀಗೆ ಬಗೆ ಬಗೆಯಿಂದ ಕಾಡಿಸಿ, ಪೀಡಿಸಿ, ಅವಳ ಆಶ್ರಮವನ್ನೆಲ್ಲ ಹೊಲಸು ಮಾಡಿದ. ಏನಾದರೂ ಅವಳು ತನ್ನ ತಪಸ್ಸನ್ನು ಬಿಡಲಿಲ್ಲ. ಈ ಕ್ಷುದ್ರ ಉಪದ್ರವಗಳಿಂದ ಕಂಗೆಡಲಿಲ್ಲ.

ಹೀಗೆ ದೈತ್ಯ ದಂಪತಿಗಳ ದೀರ್ಘ ದಾರುಣವಾದ ತಪೋನುಷ್ಠಾನಕ್ಕೆ ಪ್ರಸನ್ನನಾಗಿ ಬ್ರಹ್ಮದೇವರು ಅಲ್ಲಿಗೆ ಬಂದು ''ದಿತಿ ಕುಮಾರಾ, ಏಳು, ಏಳು, ನೀನು ಬೇಡಿದ್ದನ್ನು ನೀಡುವೆ. ಕೇಳಿದ್ದನ್ನು ಕೊಡುವೆ, ಏಳು'' ಎಂದರು.

ಆಗ ವಜ್ರಾಂಗನು ಮೇಲೆದ್ದು ಆ ಹಂಸವಾಹನನಿಗೆ ಸಾಷ್ಟಾಂಗ ವಂದಿಸಿ ಬೇಡಿಕೊಂಡ. ''ಭಗವನ್, ನನಗೆ ಈ ದೈತ್ಯಭಾವವು ಬೇಡವಾಗಿದೆ. ನನ್ನ ಈ ಅಸುರ ಪ್ರಕೃತಿ ಅಳಿಯಲಿ. ನನ್ನ ತಮೋಗುಣವೆಲ್ಲ ಕಳೆಯಲಿ. ನನಗೆ ಮುಂದೆ ಪುಣ್ಯಲೋಕಗಳು ದೊರಕಲಿ. ತಪಶ್ಚರ್ಯದಲ್ಲಿ ನನ್ನ ಈ ಆಸಕ್ತಿ ಅವಿಚಲವಾಗಿರಲಿ. ನನ್ನ ಈ ದೇಹ ಇರುವವರೆಗೂ ತಪಸ್ಸಿನ ಬಗ್ಗೆ ಈ ಗೌರವ ಭಾವನೆ ಉಳಿಯಲಿ.''

'ಹಾಗೇ ಆಗಲಿ' ಎಂದು ನುಡಿದು ಆ ದಾನವನು ಬೇಡಿದ ವರವನ್ನು ನೀಡಿ ಸತ್ಯಲೋಕಕ್ಕೆ ಪಯಣಿಸಿದ ವಾಣೀಪತಿ. ತಪಸ್ಸಿದ್ಧಿ ಪಡೆದು, ಸಂತಸ ತುಂಬಿದ ವಜ್ರಾಂಗನಿಗೆ ಅಂದು ಹಸಿವೆ ಎನಿಸಿತು. ಎಷ್ಟೋ ವರುಷಗಳ ಮೇಲೆ ಆಹಾರದ ಅಪೇಕ್ಷೆಯು ಅವನಿಗೆ ಆಯಿತು. ಅವನು ಆಶ್ರಮದ ಒಳಗೆ ನಡೆದ. ತನ್ನ ಪ್ರಾಣ ಪ್ರೇಯಸಿಯಾದ ವರಾಂಗಿಯನ್ನು ಅರಸುಗಣ್ಣಿನಿಂದ ಅರಿಸಿದ. ಆದರೆ ಎಲ್ಲಿಯೂ ಕಾಣಲಿಲ್ಲ. ಅವನ ಹೃದಯದರಸಿ ತನ್ನ ಪ್ರಾಣಪ್ರಿಯೆಯನ್ನು ನೋಡುವ ತವಕ ಹಸಿವೆಗಿಂತ ಹೆಚ್ಚಾಗಿದ್ದರಿಂದ ಕಾಡಿನಲ್ಲಿ ಹುಡುಕತೊಡಗಿದ. ಒಂದು ಮರದ ಹಿಂಬದಿಯಲ್ಲಿ ಅವನ ಕನಸಿರಂಭೆ ಅಂಗೈ ಮೇಲೆ ತನ್ನ ಮುಖವನ್ನಿರಿಸಿ ಕುಳಿತಿದ್ದಳು. ಕಣ್ಣಿನಿಂದ ಧಾರಾಕಾರ ನೀರು. ಮುಖದಲ್ಲಿ ದುಃಖದ ದಟ್ಟ ಕಪ್ಪು ಛಾಯೆ. ಮಡದಿಯ ಈ ಸಂತಪ್ತ ಮುದ್ರೆ ಕಂಡು ವಜ್ರಾಂಗನಿಗೆ ಕೋಪ, ತಾಪ, ಕರುಣೆ, ಪ್ರೀತಿ ಎಲ್ಲ ಭಾವಗಳು ಒಮ್ಮೆಲೆ ಉಕ್ಕೇರಿದಂತಾದವು. ಅವನು ಅವಳ ಬಳಿ ಸಾಗಿ ಮೆಲ್ಲುಲಿಯಿಂದ ಸಂತೈಸುತ್ತ ''ಪ್ರಿಯೆ, ನಿನಗೆ ಅಪಕಾರ ಮಾಡಿದವರು ಯಾರು ? ಅವನಿಗೆ ಯಮಲೋಕ ಕಾಣುವ ಆತುರವಾಗಿರಬೇಕು. ಅವನ ಹೆಸರು ಹೇಳು. ಈಗಲೇ ಅವನನ್ನು ಹೇಳಹೆಸರಿಲ್ಲದಂತೆ

ಮಾಡುವೆನು. ಅಥವಾ ನಿನಗೆ ಯಾವುದಾದರೂ ಪದಾರ್ಥದ ಅಪೇಕ್ಷೆಯಿದೆಯೆ ? ನಿನ್ನ ಇಷ್ಟವೇನು ? ಬಂದಕಷ್ಟವೇನು ? ಏನೇ ಇದ್ದರೂ ನಿನ್ನ ಬಾಯಿಂದ ಬರುವಷ್ಟರಲ್ಲಿಯೇ ಪೂರ್ಣಗೊಳಿಸುವೆನು. ಬೇಗ ಹೇಳು'' ಎಂದು ಹೇಳಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾನಲವತ್ತೆಂಟನೆಯ ಅಧ್ಯಾಯ ಮುಗಿದುದು.*



ತಾರಕಾಸುರನ ಜನನ

ಅಧ್ಯಾಯ - ೧೪೯

**ವರಾಂಗಿ ಉವಾಚ**

**''ತ್ರಾಸಿತಾಸ್ಮ್ಯಪವಿದ್ಧಾಸ್ಮಿ ತಾಡಿತಾಪೀಡಿತಾಪಿಚ ।**
**ಕ್ರೌರ್ಯೇಣ ದೇವರಾಜೇನ ನಷ್ಟನಾಥೇವ ಭೂರಿಶಃ ॥**

**ವರಾಂಗಿ** :- ಕ್ರೂರ ಸ್ವಭಾವದ ದೇವರಾಜನು ನನ್ನನ್ನು ಹೊಡೆದ, ಬಡಿದ, ಕಾಡಿದ, ಪೀಡಿಸಿದ, ಬಳಲಿಸಿದ, ಪರಿಪರಿಯಿಂದ ಹಿಂಸಿಸಿ, ಹೆದರಿಸಿ, ತಿರಸ್ಕರಿಸಿದ. ನಿನ್ನಂತಹ ಸರ್ವಸಮರ್ಥನಾದ ಪ್ರಭು ನನಗೆ ಪತಿಯಾಗಿದ್ದರೂ ನಾನು ಅನಾಥಳಂತೆ ಬಗೆಬಗೆಯ ಬವಣೆ ಪಡಬೇಕಾಯಿತು. ನೀನು ತಪಸ್ಸಿಗೆ ಕುಳಿತಿದ್ದರಿಂದ ನನ್ನನ್ನು ಕೇಳುವವರೇ ಇಲ್ಲದಂತಾಗಿತ್ತು. ನನ್ನ ಕಡುದುಃಖದ ಕಡಲಿಗೆ ಕೊನೆಯೇ ಇಲ್ಲ. ಇನ್ನು ಆ ದಾರುಣ ದುಃಖವನ್ನು ತಾಳಲಾರದೆ, ಬಾಳಲಾರದೆ, ಜೀವಬಿಡಬೇಕೆಂದು ನಾನು ಈ ಕಾಡಿನಲ್ಲಿ ಸಾಯಲು ಸಿದ್ಧಳಾಗಿ ಬಂದು ಕುಳಿತಿದ್ದೆ. ಸುದೈವದಿಂದ ಈಗ ನನ್ನ ಪ್ರಾಣ ಕಾಂತನಾದ ನಿನ್ನ ದರುಶನವಾಯಿತು. ಇನ್ನು ನನ್ನ ಬನ್ನಗಳೆಲ್ಲ ಹಿಂಗಿದಂತೆ. ದುರ್ದೆಶೆ ಕೊನೆಗೊಂಡಿತು, ನಾಥಾ ಈ ದುಃಖ ಶೋಕಗಳೆಂಬ ಸಮುದ್ರದಿಂದ ನನ್ನನ್ನು ತಾರಣಮಾಡಿ ಪಾರುಗಾಣಿಸಬಲ್ಲ ಒಬ್ಬ ತಾರಕ ಮಗನನ್ನು ಕರುಣಿಸು.''

ಪತ್ನಿಯ ಈ ನುಡಿಯನ್ನು ಕೇಳಿ ವಜ್ರಾಂಗನಿಗೆ ಕಡುಕೋಪ ಬಂದಿತು. ಕಣ್ಣು ಕೆಂಪಡರಿತು. ಆಗಲೆ ದೇವತೆಗಳ ದೊರೆಯಾದ ಇಂದ್ರನನ್ನು ನಿಗ್ರಹಿಸುವ ಸಾಮರ್ಥ್ಯವೂ ಅವನಲ್ಲಿತ್ತು. ಆದರೂ ಅವನು ಆಗಲೇ ಸೇಡಿನ ಸಿಡಿಲುಗುದುರೆಯ ಸವಾರಿ ಏರದೆ, ಮತ್ತೆ ಇನ್ನೂ ಉಗ್ರ ತಪಸ್ಸು ಮಾಡಬೇಕೆಂದು ಸಂಕಲ್ಪಿಸಿದನು. ಅವನ ಈ ಘೋರ ಸಂಕಲ್ಪವನ್ನು ಅರಿತು ಸತ್ಯ ಲೋಕಾಧಿಪತಿಯಾದ ಚತುರ್ಮುಖನು ಅಲ್ಲಿಗೆ ಬಂದು, ಕೇಳಿದನು ''ವತ್ಸಾ, ದೀರ್ಘಕಾಲದ ತಪೋವ್ರತದ ನಂತರ ನಿನಗೆ ಆಹಾರವನ್ನು ಸ್ವೀಕರಿಸಬೇಕೆಂದು ಇಚ್ಛೆಯಾಗಿತ್ತು. ಊಟ ಮಾಡಬೇಕೆಂದು ಹೊರಟ ನೀನು, ಮತ್ತೇಕೆ ತಪಸ್ಸಿಗೆ ಇಳಿದೆ ?

**ವಜ್ರಾಂಗ** :- ಪಿತಾಮಹ, ನೀನು ವರಕೊಟ್ಟು ಬಳಿಕ ನಾನು ಊಟ ಮಾಡಬೇಕೆಂದು ಎದ್ದೆ. ಆಶ್ರಮದ ಒಳಗೆ ಬಂದು ನೋಡಿದಾಗ ಮಡದಿಯನ್ನು ಕಾಣದೆ ಅತ್ತಿತ್ತ ಹುಡುಕಾಡಿದೆ. ನಾನು ತಪಸ್ಸಿಗೆ ಕುಳಿತಾಗ ದೇವೇಂದ್ರನು ಬಂದು ಅವಳನ್ನು ವಿಚಿತ್ರ ರೀತಿಯಿಂದ ಹಿಂಸೆಕೊಟ್ಟು ಗೋಳಿಗೆ ಈಡುಮಾಡಿದ್ದ. ಅವನ

ಉಪಟಳವನ್ನು ತಾಳದೆ ವರಾಂಗಿಯು ಸಾಯಲು ಸಿದ್ಧಳಾಗಿದ್ದಳು. ನನ್ನನ್ನು ನೋಡಿ, ಮತ್ತೆ ದುಃಖ ಒತ್ತರಿಸಿ ಬಂದು ಅತ್ತು, ಗೋಗರೆದು, ''ಈ ದುಃಖ ಸಮುದ್ರದಿಂದ ಪಾರುಮಾಡುವ ಒಬ್ಬ ತಾರಕ ಪುತ್ರನನ್ನು ಕರುಣಿಸು'' ಎಂದು ನನ್ನನ್ನು ಬೇಡಿಕೊಂಡಳು. ಅವಳಲ್ಲಿ ನನಗೆ ಒಬ್ಬ ತಾರಕ ಪುತ್ರನಾಗಬೇಕು. ಮತ್ತು ದೇವತೆಗಳ ಮೇಲೆ ನಾನು ವಿಜಯವನ್ನು ಸಂಪಾದಿಸಬೇಕು. ಈ ಎರಡು ಉದ್ದೇಶದಿಂದ ಈಗ ಮತ್ತೆ ತಪಸ್ಸನ್ನು ಕೈಕೊಂಡಿದಿದ್ದೇನೆ.''

ವಜ್ರಾಂಗನ ಈ ನುಡಿಯನ್ನು ಕೇಳಿ ಬ್ರಹ್ಮದೇವರು ಅವನನ್ನು ಸಂತೈಸುತ್ತ ನುಡಿದರು 'ಮಗು ಇನ್ನು ನಿನ್ನ ತಪಸ್ಸು ಸಾಕು. ಇಷ್ಟು ದಿನ ಅನ್ನ ಬಿಟ್ಟದ್ದು ಸಾಲದೆ? ಇನ್ನು ಮೇಲೆ ಮತ್ತೆ ಅಂತಹ ದುಃಸಹವಾದ ದುಸ್ಸಾಹಕ್ಕೆ ಇಳಿಯಬೇಡ. ನಿನ್ನ ಭಾರ್ಯೆಯ ಬಯಕೆಯಂತೆ ನಿನಗೆ '**ತಾರಕ**' ಎಂಬ ಮಹಾ ಬಲಿಷ್ಠನಾದ ಮಗನು ಹುಟ್ಟುವನು. ಅವನು ದೇವತೆಗಳನ್ನು ಸೋಲಿಸಿ ನಿನ್ನ ಮಡದಿಯ ದುಃಖವನ್ನೆಲ್ಲ ಕಳೆಯುವನು. ಅವಳಿಗೆ ಆದ ಅಪಮಾನಕ್ಕೆ ತಕ್ಕ ಪ್ರತೀಕಾರ ಮಾಡಿ ತನ್ನ ತಾಯಿಯನ್ನು ಸಂತೋಷಪಡಿಸುವನು.''

ಬ್ರಹ್ಮದೇವರು ಕೊಟ್ಟ ಈ ಅಭಯ ವಚನವನ್ನು ಮತ್ತು ಪುತ್ರವರವನ್ನು ಕೇಳಿ ವಜ್ರಾಂಗನ ಮುಖವು ಹರ್ಷವಿಕಸಿತವಾಯಿತು. ಸಂತಸ ಉಕ್ಕುವ ಕಂಗಳಿಂದಲೇ ಅವನು ಧಾವಿಸಿ ಬಂದು ವರಾಂಗಿಗೆ ಆ ಹರ್ಷದ ವಾರ್ತೆಯನ್ನು ಅರುಹಿದನು. ದಂಪತಿಗಳಿಬ್ಬರೂ ಕೃತಕೃತ್ಯರಾಗಿ ತಮ್ಮ ತಾಣಕ್ಕೆ ತೆರಳಿದರು. ವರಾಂಗಿಯು ವಜ್ರಾಂಗನ ಜೊತೆಗೆ ವಿವಿಧ ವಿಹಾರ, ವಿಲಾಸ ಸುಖವನ್ನು ಅನುಭವಿಸಿದಳು. ಕೆಲವೇ ದಿನಗಳಲ್ಲಿ ಅವಳು ಗರ್ಭಿಣಿಯಾಗಿ ಒಂದು ಸಾವಿರ ವರುಷ ಆ ಗರ್ಭವನ್ನು ಧರಿಸಿದಳು. ಸಹಸ್ರ ವರುಷಗಳ ನಂತರ ಅವಳು '**ತಾರಕ**' ಎಂಬ ಮಗನನ್ನು ಹೆತ್ತಳು.

ನಿಜವಾಗಿಯೂ ಆ ದೈತ್ಯಪುತ್ರ ಲೋಕಭಯಂಕರ. ಅವನು ಭೂಮಿಗೆ ಬಿದ್ದ ಕೂಡಲೆ ಭೂಮಿಯಲ್ಲಿ ನಡುಗು, ಮುಗಿಲಿನಲ್ಲಿ ಗುಡುಗು, ಸಮುದ್ರ ತುಂಬ ಅಲ್ಲೋಲ ಕಲ್ಲೋಲ. ಬೆಟ್ಟ ಬಯಲುಗಳಲ್ಲಿ ತೂಗಾಟ. ಬಿರುಗಾಳಿಯ ಭೋರಾಟ. ದೇವತೆಗಳಿಗೆಲ್ಲ ಚಿಂತೆ. ಸಾಧುಸಂತರೆಲ್ಲ ಸಂತ್ರಸ್ತರಾದರು. ಕ್ಷೇಮಂಕರ ಮಂತ್ರಗಳನ್ನು ಜಪಿಸ ಹತ್ತಿದರು. ಸೂರ್ಯ ಚಂದ್ರರು ಕಂಗೆಟ್ಟರು. ಸಾಧುಸಂತರು ಕಳೆಗೆಟ್ಟರು.

ಆ ದೈತ್ಯ ಕುಮಾರನ ಈ ವಿಚಿತ್ರವಾದ ಹುಟ್ಟು ಮತ್ತು ಆ ಕಾಲದ ಶಕುನಗಳು ದೈತ್ಯದಳದವರಿಗೆಲ್ಲ ಅತ್ಯಂತ ಸಂತೋಷವನ್ನು ತಂದವು. ಎಲ್ಲರೂ ಹರ್ಷದಿಂದ ಹಿರಿಹಿರಿ ಹಿಗ್ಗಿ ನಲುವಿನಿಂದ ಕುಣಿದರು. ಒಲವಿನಿಂದ ಹಾಡಿದರು. ಅಸುರಾಂಗನೆಯರೆಲ್ಲ ಕುಣಿದಾಡಿದರು. ವರಾಂಗಿಯಂತೂ ಮಗನ ಮುಖವನ್ನು ಕಂಡು, ಹರ್ಷಪುಳಕಿತಳಾದಳು. 'ಇಂತಹ ಈ ನನ್ನ ಮಗನಿಗೆ ಇಂದ್ರನನ್ನು ಕೊಲ್ಲುವದು ಏನು ಮಹಾ....!' ಹುಟ್ಟಿದ ಕೂಡಲೆ, ಆ ತಾರಕನು ಚಂಡ ವಿಕ್ರಮನಾಗಿ ಪ್ರಚಂಡ ವೀರನೆನಿಸಿ ಎದ್ದು ನಿಂತನು. ಭೂಮಂಡಲವನ್ನೆಲ್ಲ ತಮ್ಮ ಭುಜಮಂಡಲದಿಂದ ಎತ್ತಿ ತೂಗಾಡಿಸಬಲ್ಲ ಕುಜಂಭ, ಮಹಿಷ, ಮೊದಲಾದ ಎಲ್ಲ ರಾಕ್ಷಸರು ಕೂಡಿ ಸಮಸ್ತ

ದೈತ್ಯ ಸಾಮ್ರಾಜ್ಯದ ಸಿಂಹಾಸನದ ಮೇಲೆ ಆ ತಾರಕಾಸುರನನ್ನು ಕೂಡಿಸಿ ಪಟ್ಟಾಭಿಷೇಕಗೈದರು. ಹೀಗೆ ತಾರಕಸುರನು ಮಹಾಸಾಮ್ರಾಜ್ಯದ ಅಧಿಪತಿಯಾಗಿ ಸಿಂಹಾಸನಾರೂಢನಾದ ಬಳಿಕ ದಾನವ ಧುರೀಣರನ್ನೆಲ್ಲ ಬರಮಾಡಿಕೊಂಡು ಯುಕ್ತಿಯುಕ್ತವಾದ ಈ ಮಾತುಗಳನ್ನು ನುಡಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾನಲವತ್ತೊಂಬತ್ತನೆಯ ಅಧ್ಯಾಯ ಮುಗಿದುದು.*



## ತಾರಕಾಸುರನ ಸಮರ ಸಂಭ್ರಮ

**ಅಧ್ಯಾಯ - ೧೫೦**

**ತಾರಕ ಉವಾಚ :**

**''ಶೃಣುಧ್ವಮಸುರಾಃ ಸರ್ವೇ ವಾಕ್ಯಂ ಮಮ ಮಹಾಬಲಾಃ''**
**ಶ್ರೇಯಸೇ ಕ್ರಿಯತಾಂ ಬುದ್ಧಿಃ ಸರ್ವೈಃ ಕೃತ್ಯಸ್ಯ ಸಂವಿಧೌ ॥**

**ತಾರಕ** :- ಬಲಿಷ್ಠರಾದ ದಾನವರೆ, ನನ್ನ ಮಾತನ್ನು ನೀವೆಲ್ಲರೂ ಕೇಳಿರಿ. ನೀವೆಲ್ಲರೂ ದೈತ್ಯಕುಲಕ್ಕೆ ಶ್ರೇಯಸ್ಕರವಾದ ಕಾರ್ಯವನ್ನು ಮಾಡಲು ಮನಸ್ಸನ್ನು ಮಾಡಿರಿ. ದೇವತೆಗಳು ಸಮಸ್ತ ದಾನವರ ವಂಶವನ್ನೇ ಧ್ವಂಸಮಾಡಲು ಹೊರಟಿದ್ದಾರೆ. ದೇವತೆಗಳಿಗೂ, ದೈತ್ಯರಿಗೂ ದ್ವೇಷವು ನಮ್ಮ ಜಾತಿ ಧರ್ಮವೇ ಆಗಿದೆ. ಆದುದರಿಂದ ನಾವೆಲ್ಲರೂ ದೇವತೆಗಳ ನಿಗ್ರಹಕ್ಕಾಗಿ ಈಗ ಹೊರಡೋಣ. ಆದರೆ ತಪೋಬಲವಿಲ್ಲದೇ, ಸುರರ ಸಂಗಡ, ಸಂಗ್ರಾಮದಲ್ಲಿ ಸೆಣೆಸುವದು ನಮಗೆ ಸಾಧ್ಯವಿಲ್ಲ. ಆದುದರಿಂದ ಮೊದಲು ನಾನು ಘೋರ ತಪಸ್ಸನ್ನು ಮಾಡುತ್ತೇನೆ. ಅನಂತರ ದೇವತೆಗಳನ್ನೆಲ್ಲ ಗೆದ್ದು ಮೂರು ಲೋಕಗಳನ್ನು ನಾವೇ ಆಳೋಣ. ನಾವೇ ಆ ಸೌಭಾಗ್ಯವನ್ನು ಅನುಭವಿಸೋಣ.'

ತಾರಕಾಸುರನ ಈ ನುಡಿಯನ್ನು ಕೇಳಿ, ದಾನವರೆಲ್ಲರೂ ತಲೆದೂಗಿದರು. ಅವನ ವಿಚಾರವನ್ನೆಲ್ಲ ಹೊಗಳಿ ಹಾಡಿದರು. ಅವರೆಲ್ಲರ ಅನುಮತಿ ಪಡೆದು ಅಸುರಪುರದ ಅಧಿಪತಿಯು ಪಾರಿಯಾತ್ರ ಪರ್ವತದ ಒಂದು ರಮ್ಯವಾದ ಗುಹೆಗೆ ತೆರಳಿದನು. ಅಲ್ಲಿ ಘೋರ ತಪಸ್ಸನ್ನು ಆರಂಭಿಸಿದನು. ಅಲ್ಲಿ ಕಾಡು ದಟ್ಟವಾಗಿ ಬೆಳೆದು, ನಿಬಿಡ ಗಿಡಗಳೆಲ್ಲ ಗೂಡುಗಟ್ಟಿದ್ದವು. ಬಗೆಬಗೆಯ ರತ್ನಶಾಖೆಗಳಿಂದ ಕೂಡಿದ ಕಲ್ಪವೃಕ್ಷಗಳಿಗೆ ಅದು ಬೀಡು. ಅನೇಕ ಗಿರಿಝರಿಗಳು ತಮ್ಮ ತೆರೆತುಂತುರುಗಳನ್ನು ಚಿಮುಕಿಸಿ ತಂಪುಗೈದಿದ್ದವು ಆ ಏಕಾಂತ ವನಾಂತಪ್ರಾಂತವನ್ನು.

ಅಂತಹ ವಿವಿಕ್ತ ಬನದ ಬಸಿರಿನಲ್ಲಿ ನಿರಂತರವಾಗಿ ನಡೆಯಿತು ತಾರಕಾಸುರನ ಉಗ್ರ ತಪಸ್ಸು. ಊಟವಿಲ್ಲ ನಿದ್ರೆಯಿಲ್ಲ. ವಿಶ್ರಾಂತಿಯಿಲ್ಲ. ನಿಂತಲ್ಲಿಯೇ ನಿಂತು ಪಂಚಾಗ್ನಿಗಳ ನಟ್ಟನಡುವೆ ಇದ್ದು, ಎಲೆ ತಿಂದು, ಗಾಳಿ ಕುಡಿದು ಸಾವಿರಾರು ವರುಷ ಅವನ ತಪಶ್ಚರ್ಯ ಸಾಗಿತು. ಅನುದಿನವೂ ತನ್ನ ದೇಹದಿಂದ ಮಾಂಸ, ಖಂಡಗಳನ್ನು ಕಿತ್ತಿ ಅಗ್ನಿ ಕುಂಡದಲ್ಲಿ ಹೋಮ ಮಾಡಿದನು. ಅವನ ಭಯಂಕರವಾದ ತಪಸ್ಸಿನ

ತೇಜಸ್ಸಿನಿಂದ ಸುತ್ತುಮುತ್ತಲಿನ ಪ್ರಾಣಿಗಳೆಲ್ಲ ಉರಿದು ಸತ್ತುಹೋದವು. ದೇವತೆಗಳೆಲ್ಲ ದಿಗ್ಭ್ರಾಂತರಾದರು. ಬ್ರಹ್ಮ ಧಾವಿಸಿದ ಅವನಿದ್ದಲ್ಲಿಯೇ. ಮಧುರವಾಗಿ ಮಾತನಾಡಿದ "ಮಗು, ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ಬಯಸಿದ ವರಬೇಡು, ಕೊಡುವೆ"

ಆಗ, ದೈತ್ಯಕುಲ ಧುರೀಣನಾದ ತಾರಕನು ಕೈ ಜೋಡಿಸಿ, ಬ್ರಹ್ಮದೇವರಿಗೆ ಬೇಡಿಕೊಂಡ "ದೇವಾಧಿದೇವಾ, ದೇವತೆಗಳಿಗೂ ನಮಗೂ ಜಾತಿದ್ವೇಷ. ಕ್ರೂರರಾದ ಆ ಸುರರು ಧರ್ಮ ಬಿಟ್ಟು ದೈತ್ಯರನ್ನು ಕಂಡಲ್ಲೆಲ್ಲ ಕೊಂದು ಹಾಕಿದ್ದಾರೆ. ಸಿಕ್ಕಲ್ಲೆಲ್ಲ ಸಂಹರಿಸಿದ್ದಾರೆ. ದುರವಸ್ಥೆಗೆ ಈಡಾದ ದೈತ್ಯ ವರ್ಗವನ್ನು ಉದ್ಧರಿಸಬೇಕೆಂದು ನಾನು ಈ ತಪಸ್ಸನ್ನು ಕೈಕೊಂಡಿದ್ದೇನೆ. ಯಾವ ಪ್ರಾಣಿಯೂ ನನ್ನನ್ನು ಕೊಲ್ಲಬಾರದು. ನಾನು ಯಾವ ಅಸ್ತ್ರದಿಂದಲೂ ಸಾಯಬಾರದು. ಇಂತಹ ವರವನ್ನು ನನಗೆ ಕೊಟ್ಟು, ಮೃತ್ಯುಂಜಯತ್ವನ್ನು ಕರುಣಿಸು."

**ಬ್ರಹ್ಮ:-**ದೈತ್ಯರಾಜಾ, ಇದು ಅಶಕ್ಯ. ಮರಣವೇ ಬರಬಾರದು ಎಂಬ ಮಾತು ನಿಸರ್ಗ ವಿರುದ್ಧ; ಅತ್ಯಂತ ಅಸಂಭಾವ್ಯ. ಇಂತಿಂತಹ ವಸ್ತು ಅಥವಾ ವ್ಯಕ್ತಿಗಳಿಂದ ಸಾವು ಸಂಭವಿಸಬಾರದು ಎಂದು ಬೇಕಾದರೆ ವರ ಕೇಳಿಕೋ... ? ಆಗ ತಾರಕಾಸುರನು ತಲೆತುಂಬ ಯೋಚನೆ ಮಾಡಿದ, ವಿಚಾರ ಮಾಡಿ ಕೊನೆಗೆ, 'ಏಳು ದಿನದ ಕೂಸಿನಿಂದ ತನಗೆ ಸಾವು ಬರಬೇಕು' ಎಂದು ಕೇಳಿಕೊಂಡ.

**ಬ್ರಹ್ಮದೇವರ ವರ :-** 'ತಥಾಸ್ತು' ಅತ್ತ ಸತ್ಯಲೋಕಕ್ಕೆ ಬ್ರಹ್ಮ, ಇತ್ತ ಮರ್ತ್ಯಲೋಕಕ್ಕೆ ತಾರಕ. ವಜ್ರಾಂಗನ ಪುತ್ರ ತಾರಕನ ವೈಭವದ ರಾಜ್ಯಶಾಸನ ನಡೆಯಿತು. ಲೋಕಪಾಲಕರೆಲ್ಲರೂ ಅವನ ಕಿಂಕರರು. ಸಾರ್ವಭೌಮ ಸಿಂಹಾಸನದ ಮೇಲೆ ಅವನು ಮಂಡಿಸಿದಾಗ ಅಪ್ಸರೆಯರಿಂದ ಚಾಮರ ಸೇವೆ, ಚಂದ್ರ ಸೂರ್ಯರಿಂದ ದೀಪಾರಾಧನೆ, ವಾಯುದೇವರಿಂದ ಸುಗಂಧ ವಿತರಣ.

ಒಂದು ದಿನ ದೈತ್ಯಕುಲದ ಪ್ರಮುಖರ ಸಭೆ ಕರೆದು ಹೇಳಿದ, "ನಾವೆಲ್ಲ ಬರಿ ನೆಲದ ಮೇಲೆ ನರರಂತೆ ಭೂಲೋಕ ಸಾಮ್ರಾಜ್ಯವನ್ನು ಮಾತ್ರ ಅನುಭವಿಸುತ್ತಲಿದ್ದರೆ ನಮ್ಮದೇನು ಪರಾಕ್ರಮ ? ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳದಿದ್ದರೆ ನನ್ನ ಹೃದಯಕ್ಕೆ ಶಾಂತಿಯಿಲ್ಲ. ದೇವತೆಗಳು ಸ್ವರ್ಗಲೋಕದಲ್ಲಿದ್ದು, ಯಜ್ಞಯಾಗಗಳಲ್ಲಿ ಹವಿರ್ಭಾಗಗಳನ್ನು ಮೆದ್ದು, ಸುಖ ಸಾಮ್ರಾಜ್ಯದಲ್ಲಿ ನಲಿಯುತ್ತಿದ್ದಾರೆ. ವಿಷ್ಣು ಲಕ್ಷ್ಮಿಯೊಂದಿಗೆ ಸುಖದ ಸುಪ್ಪತ್ತಿಗೆಯ ಮೇಲೆ ಲೋಲಾಡುತ್ತಿದ್ದಾನೆ. ದೇವತೆಗಳು ಅಮರಾವತಿಯ ನಂದನವನದಲ್ಲಿ ಸುರಸುಂದರಿಯರ ಜೊತೆಗೆ ಆನಂದದಿಂದ ಸ್ವಚ್ಛಂದ ವಿಹಾರಮಾಡುತ್ತಿದ್ದಾರೆ. ಅವರನ್ನು ಗೆಲ್ಲದೆ ನಾವು ಇಲ್ಲಿಯೇ ಅಲ್ಪ ತೃಪ್ತರಾಗಿ ಉಳಿದರೆ ನಮ್ಮಂತಹ ಹೇಡಿಗಳು ಯಾರು ? ನಮ್ಮ ಹಿಂದಿನ ಹಿರಿಯರನ್ನೆಲ್ಲ ಹಿಂಸೆಪಡಿಸಿದ ಆ ನಮ್ಮ ಕುಲವೈರಿಗಳನ್ನು ನಾವು ಸಂಹರಿಸದಿದ್ದರೆ ನಾವು ಬದುಕಿದ್ದರೂ ಸತ್ತಂತೆಯೇ ! ಆದುದರಿಂದ ನಾವೆಲ್ಲರೂ ಈಗ ಸಗ್ಗಕ್ಕೆ ಲಗ್ಗೆ ಇಡೋಣ. ದೇವತೆಗಳ ಮೇಲೆ ದಾಳಿಮಾಡಿ ಅಮರಾವತಿಯಿಂದ ಅವರೆಲ್ಲರನ್ನೂ ಹೊಡೆದೋಡಿಸೋಣ. ನೀವೆಲ್ಲರೂ ಯುದ್ಧಕ್ಕೆ ಸಿದ್ಧರಾಗಿರಿ. ಎಂಟುಗಾಲಿಯ ನನ್ನ ತೇರನ್ನು ಸಜ್ಜುಗೊಳಿಸಿರಿ. ದೈತ್ಯಸೇನೆಯೆಲ್ಲವೂ ಸಂಗ್ರಾಮಕ್ಕೆ ಸನ್ನದ್ಧವಾಗಿ ಹೊರಡಲಿ."

ತಾರಕ ಮಹಾರಾಜನ ಈ ಯುದ್ಧದ ಆದೇಶವನ್ನು ಕೇಳಿ ಅಪರಂಪಾರವಾದ ದೈತ್ಯ ಸೇನೆಯು ಸಿಂಹನಾದಮಾಡಿ, ಸ್ವರ್ಗದ ದಾಳಿಗಾಗಿ ಹೊರಟಿತು. ರಣವಾದ್ಯಗಳು ಭೋರ್ಗರೆದವು. ಜಂಭ, ಕುಜಂಭ ಮಹಿಷ, ಕುಂಜರ, ಮೋಘ, ಕಾಲನೇಮಿ, ಮಥನ, ಶೂಲ ಮುಂತಾದ ದಾನವ ಸೇನಾನಾಯಕರು ದೈತ್ಯ ಸೇನಾಸಾಗರವನ್ನು ಸಾಗಿಸಿಕೊಂಡು ತಾರಕಾಸುರನನ್ನು ಬೆಂಬಿಡಿದು ನಡೆದರು. ಅವರ ಮುಖ್ಯ ಸೇನಾಪತಿ, ಗ್ರಸವನ ಧ್ವಜದ ಮೇಲೆ ಮೊಸಳೆಯ ಲಾಂಛನ. ತಾರಕಾಸುರನ ಧ್ವಜ ಸುವರ್ಣಾಲಂಕೃತ. ಜಂಭನ ಧ್ವಜ ಪಿಶಾಚಮುಖಿ. ಕುಜಂಭನ ನಿಶಾನೆಯಲ್ಲಿ ಬಾಲಬೀಸುವ ಕತ್ತೆಯ ಚಿಹ್ನೆ. ಮಹಿಷಾಸುರನ ಧ್ವಜದಲ್ಲಿ ನರಿ. ಶುಂಭನ ಪತಾಕೆಯಲ್ಲಿ ಕಾಗೆ, ಸೇನಾಪತಿ ಗ್ರಸನನ ತೇರಿಗೆ ಮೂರು ಹುಲಿಗಳನ್ನು, ಜಂಭನ ತೇರಿಗೆ ನೂರು ಸಿಂಹಗಳನ್ನು ಹೂಡಿದ್ದರು. ಕುಜಂಭನ ರಥಕ್ಕೆ ಪಿಶಾಚ ಮೋರೆಯ ಕತ್ತೆಗಳನ್ನು, ಮಹಿಷಾಸುರನ ತೇರಿಗೆ ಒಂಟೆ, ಗಜಾಸುರನ ರಥಕ್ಕೆ ಕುದುರೆ, ಕಾಲನೇಮಿಯ ರಥಕ್ಕೆ ಆನೆಗಳನ್ನು ಹೂಡಿದ್ದರು. ಇನ್ನು ಕೆಲವು ದೈತ್ಯವೀರರು ಬೇರೆ ಬೇರೆ ಪ್ರಾಣಿಗಳ ಸವಾರಿಯಾಗಿ ಯುದ್ಧಕ್ಕೆ ಹೊರಟಿದ್ದರು.

ಒಂಟೆಯ ಮೇಲೆ ಜಂಭಕ, ಮೇಕೆಯ ಮೇಲೆ ಶುಂಭ ಉಳಿದ ಬೇರೆಬೇರೆ ವಾಹನಗಳ ಮೇಲೆ ಬೇರೆ ಬೇರೆ ದೈತ್ಯರು ಆರೂಢರಾಗಿ ಸಂಗ್ರಾಮಕ್ಕೆ ಅಣಿಯಾಗಿದ್ದರು.

ಈ ಸಮಾಚಾರವು ವಾಯುದೇವರ ಮುಖಾಂತರ ದೇವೇಂದ್ರನಿಗೆ ತಿಳಿಯಿತು. ಆಗ ಸುರರಾಜನು ಬೃಹಸ್ಪತ್ಯಾಚಾರ್ಯರನ್ನು ಕೇಳಿದನು. ''ಆಚಾರ್ಯ, ನಾನು ಈಗ ಏನು ಮಾಡಬೇಕು. ನೀವೇ ಮಾರ್ಗ ತೋರಿಸಿ.''

**ಬೃಹಸ್ಪತಿ :-** ದೇವರಾಜಾ, ಸಾಮ, ದಾನ, ಭೇದ, ದಂಡ ಎಂದು ನಾಲ್ಕು ಉಪಾಯಗಳುಂಟು. ನೀತಿಯ ಈ ನಾಲ್ಕು ಅಂಗಗಳಲ್ಲಿ ಈಗ ಸಾಮ, ದಾನ, ಭೇದ ಮೂರು ಉಪಾಯಗಳು ದೈತ್ಯರ ಮೇಲೆ ಸಾಗಲಾರವು. ಈಗ ಕೊನೆಯದಾದ ದಂಡೋಪಾಯವೇ ಉಚಿತವೆಂದು ನನಗೆ ತೋರುವದು.'' ಬ್ರಹಸ್ಪತ್ಯಾಚಾರ್ಯರ ಸಲಹೆಯನ್ನು ಕೇಳಿ ದೇವೇಂದ್ರನು ದೈತ್ಯಸೇನೆಯನ್ನು ಎದುರಿಸಲು ಸುರಸೇನೆಗೆಲ್ಲ ಸಿದ್ಧವಾಗಲು ಅಪ್ಪಣೆಯಿತ್ತನು. ಯಮದೇವರನ್ನು ಸೇನಾಪತಿಪೀಠದಲ್ಲಿ ಪಟ್ಟಾಭೀಷೇಕಗೈದರು. ಮಾತಲಿಯು ಹತ್ತು ಸಾವಿರ ಕುದುರೆಗಳನ್ನು ಹೂಡಿ ಶಚೀಪತಿಯ ರಥವನ್ನು ಸಿದ್ಧಪಡಿಸಿದನು. ಕೋಣವನ್ನು ಏರಿ ಯಮನು ತನ್ನ ಯಮದೂತರೊಡನೆ ಯುದ್ಧಕ್ಕೆ ಸಿದ್ಧನಾಗಿ ಬಂದನು. ಅಗ್ನಿಯು ಮೇಕೆಯ ಮೇಲೆ, ವರುಣನು ಮಹಾಸರ್ಪದ ಮೇಲೆ, ಕುಬೇರನು ರಥಾರೂಢನಾಗಿ, ಚಂದ್ರನು ಚಿನ್ನದ ತೇರನ್ನು ಹತ್ತಿಕೊಂಡು ಯುದ್ಧಕ್ಕೆ ಬಂದರು.

ರಣರಂಗದಲ್ಲಿ ಇಳಿದ ದೇವತೆಗಳು ಪೀತಾಂಬರವನ್ನು, ರಾಕ್ಷಸರು ಕೆಂಬಣ್ಣದ ಬಟ್ಟೆಗಳನ್ನು, ಯಕ್ಷರು ಕಪ್ಪುವಸ್ತ್ರಗಳನ್ನು, ರಾಕ್ಷಸರು ಹುಲಿಯ ಚರ್ಮಗಳನ್ನು ಕಿನ್ನರರು ಬಿಳಿವಸ್ತ್ರಗಳನ್ನು ಧರಿಸಿದ್ದರು. ದೇವತೆಗಳ ಆಯುಧಗಳು ಸುವರ್ಣ ವೈಢೂರ್ಯ ರತ್ನ ಖಚಿತ. ಅವರ ರಾಷ್ಟ್ರೀಯ ಧ್ವಜ ಮೊಸಳೆ. ರಾಕ್ಷಸರ ಆಯುಧಗಳು

ಕಬ್ಬಿಣದಿಂದ ಆಗಿದ್ದವು. ಹದ್ದು ಅವರ ಧ್ವಜವಾಗಿತ್ತು. ಯಕ್ಷರ ಆಯುಧಗಳು ತಾಮ್ರಮಯವಾಗಿದ್ದು ಗೂಬೆ ಅವರ ಧ್ವಜ. ರಾಕ್ಷಸರು ಹದ್ದಿನ ಗರಿಯ ಧ್ವಜ ಹಾರಿಸಿ, ಎಲುಬಿನಿಂದ ಮಾಡಿದ ಆಭರಣಗಳನ್ನು ತೊಟ್ಟು, ನೇಗಿಲ ಆಯುಧಗಳನ್ನು ಹಿಡಿದು ಯುದ್ಧಕ್ಕೆ ಸನ್ನದ್ಧರಾಗಿದ್ದರು. ಕಿನ್ನರರು ಹಂಸಧ್ವಜರಾಗಿ ಮದ್ದಾನೆಗಳನ್ನು ಏರಿ, ತೋಮರಾದಿಆಯುಧಗಳಿಂದ ಹೋರಾಟಕ್ಕೆ ಅಣಿಯಾಗಿದ್ದರು. ಯಮನ ಧ್ವಜವು ಕಬ್ಬಿಣದ ಕಂಬದ ಮೇಲೆ ಹಾರಾಡುತ್ತಿತ್ತು. ನಿರತಿಯ ಪತಾಕೆಯು ಪೀತಬಣ್ಣದಿಂದ ಹಾರಾಡುತ್ತಲಿತ್ತು. ಚಂದ್ರ ಸೂರ್ಯರ ಬಾವುಟದಲ್ಲಿ ಬಂಗಾರದ ಸಿಂಹವು ಹೊಳೆಯುತ್ತಿತ್ತು. ರತ್ನ ಕುಂಭವು ಅಶ್ವಿನಿ ದೇವತೆಗಳ ಧ್ವಜ ಲಾಂಛನ. ಚಿತ್ರರತ್ನಗಳಿಂದ ಒಪ್ಪುವ ಸುವರ್ಣಗಜವು ದೇವೇಂದ್ರನ ಪತಾಕೆಯಾಗಿತ್ತು. ಹೀಗೆ ಮೂವತ್ತು ಮೂರು ಕೋಟಿ ದೇವತೆಗಳು ''ಐರಾವತ'' ಎಂಬ ಆನೆಯನ್ನು ಆರೋಹಣ ಮಾಡಿದ ದೇವೇಂದ್ರನ ಹಿಂದೆ ದೈತ್ಯಸೇನೆಯನ್ನು ಎದುರಿಸಲು ಸಿದ್ಧವಾಗಿ ಯುದ್ಧಕ್ಕೆ ಹೊರಟರು. ಚತುರಂಗ ಸೇನೆಯಿಂದ ಒಡಗೂಡಿದ ಆ ದೇವತಾ ದಳವು ರಥ, ಆನೆ, ಕುದುರೆ, ಧ್ವಜ, ಶ್ವೇತ ಛತ್ರಗಳಿಂದ ಹೊಳೆಯುತ್ತಿತ್ತು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಐವತ್ತನೆಯ ಅಧ್ಯಾಯ ಮುಗಿದುದು.*



## ದೇವದಾನವರ ಘನಘೋರಸಂಗ್ರಾಮ

ಅಧ್ಯಾಯ - ೧೫೧

**ಸೂತ ಉವಾಚ**

**''ಸುರಾಸುರಾಣಾಂ ಸಂಮರ್ದಸ್ತಸ್ಮಿನ್ನತ್ಯಂತ - ದಾರುಣಃ ।**
**ತುಮುಲೋಽತಿ ಮಹಾನಾಸೀತ್ಸೇನಯೋರುಭಯೋರಪಿ ॥**

**ಸೂತ** :- ಅತ್ಯಂತ ಭೀಕರವಾದ ಆ ದೇವಾಸುರ ಸಂಗ್ರಾಮದಲ್ಲಿ ಎರಡೂ ಸೇನೆಗಳ ನಡುವೆ ಘನ ಘೋರವಾದ ಹೋರಾಟವು ನಡೆಯಿತು. ಉಭಯ ಸೈನಿಕರು ಬಿಲ್ಲು, ಬಾಣ, ಖಡ್ಗ, ಗದೆ, ಶಕ್ತಿ, ಶೂಲ, ಚಕ್ರ, ಅಂಕುಶ, ಬರ್ಚಿ, ಭಲ್ಲೆ, ಪ್ರಾಸ, ವಜ್ರ, ಕೊಡಲಿ, ಮುದ್ಗರ, ಅರ್ಧಚಂದ್ರ, ನಾಲೀಕ ಮುಂತಾದ ಬಗೆಬಗೆಯ ಆಯುಧಗಳಿಂದ ಒಬ್ಬರನ್ನೊಬ್ಬರು ತುಳಿದು, ತುಂಡರಿಸಿ ಹಾಕಿದರು. ನೆತ್ತರಿನ ಕೋಡಿ ಹರಿಯಿತು. ರಥಗಳು ಪುಡಿಪುಡಿಯಾಗಿ ಬಿದ್ದವು. ಆನೆ ಕುದುರೆ, ಕಾಲಾಳುಗಳು ಛಿನ್ನ ವಿಚ್ಛಿನ್ನವಾದ ದೇಹಗಳಿಂದ ರಕ್ತದ ಮಡುವಿನಲ್ಲಿ ತೇಲಾಡಿದವು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದನೂರಾಐವತ್ತೊಂದನೆಯ ಅಧ್ಯಾಯ ಮುಗಿದುದು.*



# ಶ್ರೀಹರಿಯಿಂದ ಕಾಲನೇಮಿಗೆ ಜೀವದಾನ

## ಅಧ್ಯಾಯ - ೧೫೨

**ಸೂತ ಉವಾಚ:**

**"ಅಥ ಗ್ರಸನಮಾಲೋಕ್ಯ ಯಮಃ ಕ್ರೋಧವಿಮೂರ್ಛಿತಃ ।**
**ವವರ್ಷ ಶರವರ್ಷೇಣ ವಿಶೇಷೇಣಾಗ್ನಿವರ್ಚಸಾ ॥**

**ಸೂತ :-** ಅನಂತರ ಯಮಧರ್ಮನು ಗ್ರಸನ ಎಂಬ ದೈತ್ಯ ಸೇನಾಪತಿಯನ್ನು ಕಂಡು ಕೋಪದಿಂದ ಸಂತಪ್ತನಾಗಿ ಬೆಂಕಿಯಿಂದ ಉರಿಯುವ ಅಗ್ನಿಬಾಣಗಳನ್ನು ಮಳೆಗರೆದನು. ಆಕಾಶದಲ್ಲಿ ಹಾರಿ ಬರುತ್ತಿರುವ ಯಮನ ಬಾಣಗಳನ್ನೆಲ್ಲ ಕತ್ತರಿಸಿ, ಗ್ರಸನನು ಮರು ಪ್ರಹಾರಗೈದನು. ಅವರಿಬ್ಬರಲ್ಲಿ ದಾರುಣವಾದ ಕದನವು ಮಸಗಿತು. ಜಂಭ ಕುಬೇರರಿಗೆ ಭಯಂಕರ ಹೋರಾಟವಾಯಿತು. ಕೊನೆಗೆ ಕುಬೇರನ ಗದಾಯುಧದ ಪ್ರಾಣಾಂತಿಕ ಪ್ರಹಾರಕ್ಕೆ ಜಂಭನು ಹತನಾಗಿ ನೆಲಕ್ಕೆ ಉರುಳಿದನು. ಆ ಸಿಟ್ಟಿನಿಂದ ಕುಜಂಭನು ಕೆರಳಿ, ಕುಬೇರನ ಮೇಲೆ ಘೋರವಾದ ಆಯುಧಗಳನ್ನು ಪ್ರಯೋಗಿಸಿದನು. ಆ ಅಸ್ತ್ರ ಪ್ರಯೋಗದಿಂದ ಕುಬೇರನು ಮೂರ್ಛೆಹೋಗಿ ರಣಾಂಗಣದಲ್ಲಿ ಉರುಳಿದನು. ಇದನ್ನು ನೋಡಿ ನಿರತಿಯು ಖಡ್ಗಾಸ್ತ್ರ ಸಹಿತನಾಗಿ ಕುಜಂಭನ ಸೈನ್ಯವನ್ನೆಲ್ಲ ಕತ್ತರಿಸಿ ಪ್ರತೀಕಾರ ಮಾಡಿದನು. ಇಷ್ಟರಲ್ಲಿ ಕುಬೇರನು ಮೂರ್ಛೆ ತಿಳಿದೆದ್ದು ಗರುಡಾಸ್ತ್ರವನ್ನು ಧ್ಯಾನಮಾಡಿ ದಾನವಸೈನ್ಯದ ಮೇಲೆ ಪ್ರಯೋಗಿಸಿದನು. ಉರಿಯ ತೆರೆಗಳನ್ನೇ ಉಗುಳುತ್ತ ಬರುತ್ತಲಿರುವ ಆ ಗರುಡಾಸ್ತ್ರದ ವೇಗವನ್ನು ತಾಳಲಾರದೆ ಕುಜಂಭಾಸುರ ಮೊದಲಾದ ದೈತ್ಯರು ಓಡ ತೊಡಗಿದರು. ಇದನ್ನು ಕಂಡು ಜಂಭಾಸುರನು ರೊಚ್ಚಿಗೆದ್ದು ಕುಜಂಭನನ್ನು ಹಿಂತಿರುಗಿಸಿ ಇಬ್ಬರೂ ಕೂಡಿ ಕುಬೇರನ ಮೇಲೆ ಅಬ್ಬರಿಸಿ ಏರಿ ಬಂದರು. ಮತ್ತೆ ಹಣಾ ಹಣಿ ಹೋರಾಟ. ನಿರತಿ ಕುಜಂಭರ ನಡುವೆ ನಿಕರದ ಕಾಳಗ ನಡೆಯಿತು.

ಕುಜಂಭನು ಕೋಪಾಟೋಪದಿಂದ ಆರ್ಭಟಿಸಿ ನಿರತಿಯ ಕೂದಲು ಹಿಡಿದು, ತಲೆ ಕಡಿಯಲು ಉಜ್ಜುಗಿಸಿದಾಗ ವರುಣನು ಅಲ್ಲಿಗೆ ಧಾವಿಸಿ ಬಂದು, ವರುಣ ಪಾಶದಿಂದ ಕುಜಂಭನನ್ನು ಬಂಧಿಸಿ ಗದೆಯಿಂದ ಹೊಡೆದನು. ನೆತ್ತರ ಕಾರುವ ಕುಜಂಭಾಸುರನನ್ನು ಕಂಡು ಮಹಿಷಾಸುರನು 'ಧುತ್' ಎಂದು ಅಲ್ಲಿ ಬಂದು ನಿಂತನು. ವರುಣ ಮತ್ತು ಮಹಿಷಾಸುರರ ನಡುವೆ ತುಮುಲ ನಡೆಯಿತು. ಏತನ್ಮಧ್ಯೇ ಚಂದ್ರನು ಸೋಮಾಸ್ತ್ರವನ್ನು ಪ್ರಯೋಗಿಸಿದನು. ಅದಕ್ಕೆ ವಾಯವ್ಯಾಸ್ತ್ರವನ್ನು ಸೇರಿಸಿದನು. ಅದರಿಂದ ಬಿರುಗಾಳಿ, ಹಿಮಪಾತ ಎಡೆಬಿಡದೆಸುರಿಯಿತು. ರಾಕ್ಷಸರ ಮೈಯೆಲ್ಲ ಮಂಜುಗಟ್ಟಿ, ನಡುಗುತ್ತ ಕುಳಿತು ಬಿಟ್ಟರು. ಆಗ ಕಾಲನೇಮಿಯು ಅಲ್ಲಿಗೆ ಬಂದು ದೈತ್ಯರನ್ನೆಲ್ಲ ಹುರಿದುಂಬಿಸಿ, ಅಸುರ ಮಾಯೆಯಿಂದ ಸಹಸ್ರಾರು ಸೂರ್ಯರನ್ನೇ ನಿರ್ಮಿಸಿ ಮಂಜನ್ನೆಲ್ಲಾ ಕರಗಿಸಿದನು. ಅಗ್ನ್ಯಸ್ತ್ರದಿಂದ ಎಲ್ಲೆಡೆಗೂ ಕಾವನ್ನುಂಟುಮಾಡಿ ನಿರ್ವೀರ್ಯರಾದ ದೈತ್ಯರಲ್ಲಿ ಉತ್ಸಾಹ ತುಂಬಿದನು. ಚಂದ್ರನು ಕಳೆಗುಂದಿದನು. ಇದನ್ನು

ನೋಡಿ, ಸ್ವಯಂ ಸೂರ್ಯನೆ ರಣಾಂಗಣದಲ್ಲಿ ಮುಂದುವರಿದು ಸಂಚಾರಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ದೇವ ದಾನವರ ರೂಪಗಳಲ್ಲಿ ಅದಲು ಬದಲಾಗಿ ಕಾಲನೇಮಿಗೆ ದಾನವರೆಲ್ಲರೂ ದೇವತೆಗಳಂತೆಯೇ ತೋರ ತೊಡಗಿದರು. ತನ್ನ ಸುತ್ತಮುತ್ತಲಿನ ದಾನವರೆಲ್ಲರನ್ನು ದೇವತೆಗಳೆಂದೇ ತಿಳಿದು ಭಯಂಕರವಾದ ಶಸ್ತ್ರಾಸ್ತ್ರಗಳಿಂದ ಎಲ್ಲರನ್ನು ಕಡಿದು ಕೊಚ್ಚಿ ಹಾಕಿದನು. ಆದರೆ ಸಾಯುವಾಗ ಮಾತ್ರ ಅವರೆಲ್ಲರಿಗೂ ನಿಜರೂಪ ಬರುತ್ತಿತ್ತು. ಆದರೆ ರಣರಭಸದಲ್ಲಿದ್ದ ಕಾಲನೇಮಿಗೆ ಇದಾವುದೂ ತಿಳಿಯದೆ ಅಸಂಖ್ಯ ದಾನವರನ್ನು ತನ್ನ ಕೈಯಿಂದಲೇ ಕೊಂದು ಹಾಕಿದನು. ಆಗ ನೇಮಿ ಎಂಬ ಅವನ ಅನುಚರನು ಕಾಲನೇಮಿಯ ಬಳಿಗೆಬಂದು.

"ದಾನವೇಂದ್ರ, ನಾನು ನೇಮಿ. ನನ್ನ ರೂಪವು ನಿನಗೆ ದೇವತೆಗಳಂತೆ ಕಂಡರೂ ನಾನು ನಿನ್ನ ಅನುಚರನಾದ ದೈತ್ಯ. ಸೂರ್ಯನ ಸಂಚಾರಾಸ್ತ್ರದಿಂದ ನಿನಗೆ ದೇವತೆಗಳೆಲ್ಲರೂ ದೈತ್ಯರಂತೆ ಕಾಣುತ್ತಾರೆ. ದೇವತೆಗಳು ನಿನಗೆ ಮೋಹವನ್ನುಂಟು ಮಾಡಿದರು. ನೀನೀಗ ಹತ್ತು ಲಕ್ಷ ನಿನ್ನ ದೈತ್ಯ ಸೈನಿಕರನ್ನೇ ಕಡಿದು ಒಟ್ಟಿದೆ ಈಗಲಾದರೂ ಎಚ್ಚತ್ತು ದೇವತೆಗಳ ಮೇಲೆ ನಿನ್ನ ಬಲಪ್ರಯೋಗಮಾಡು."

ನೇಮಿಯ ಈ ನುಡಿ ಕೇಳಿ ಕಾಲನೇಮಿಗೆ ಪರಿಸ್ಥಿತಿಯ ಅರಿವು. ಆಯಿತು. ಆದರೆ. ಮಾಡುವುದೇನು ? ಪ್ರಸಂಗ ಕೈ ತಪ್ಪಿ ಹೋಗಿತ್ತು. ದೇವತೆಗಳ ಮೋಸ ಕಂಡು ಬಹಳ ಕೋಪ ಬಂದಿತು. ಕೂಡಲೇ ಅವನು ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ದೇವಸೇನೆಯ ಮೇಲೆ ಪ್ರಯೋಗಿಸಿದನು. ಅದರಿಂದ ಸೂರ್ಯನು ಖಿನ್ನನಾಗಿ ಮುಂದೇನು ಮಾಡಬೇಕೆಂದು ವಿಚಾರಿಸಿದನು. ಮರುಕ್ಷಣದಲ್ಲಿಯೇ ಅವನು ಕೋಟಿ ಕೋಟಿ ರೂಪ ತೆಗೆದುಕೊಂಡು, ತನ್ನಕಿರಣಗಳ ಮುಖಾಂತರ ಬೆಂಕಿಯ ಮಳೆಯನ್ನೇ ಸುರಿಸಿದನು. ಅದರಿಂದ ದೈತ್ಯ ವೀರರೆಲ್ಲ ಸತ್ತು ಉರುಳಿದರು. ರಥಗಳು ದಗ್ಧವಾದವು. ಆನೆ, ಕುದುರೆಗಳು ಸುಟ್ಟುಹೋದವು. ಇದನ್ನು ಕಂಡು ಕಾಲನೇಮಿಯು ತನ್ನ ದಾನವ ಸೈನ್ಯದ ಮೇಲೆ ಮಳೆಗರೆಯಲು ತಾನೇ ಮೇಘರೂಪವನ್ನು ತಾಳಿ ತಣ್ಣೀರನ್ನು ಚಿಮುಕಿಸಿದನು. ಅದರಿಂದ ಸೂರ್ಯನ ಬಿಸಿಲು ಬೇಗೆಯೆಲ್ಲ ಶಾಂತವಾಗಿ ದೈತ್ಯರೆಲ್ಲರೂ ಎದ್ದು ಕುಳಿತರು ಅನಂತರ ಮೇಘರೂಪಿಯಾದ ಕಾಲನೇಮಿಯು ತನ್ನ ದೈತ್ಯ ಸೇನೆಯ ಮೇಲೆ ಹಿತಮಿತವಾಗಿ ಮಳೆಗರೆದು ದೇವಸೇನೆಯ ಮೇಲೆ ಮಾತ್ರ ಧಾರಾಕಾರವಾಗಿ ಮಳೆಯನ್ನು ಸುರಿಸ ತೊಡಗಿದನು. ಭಯಂಕರ ಬಿರುಗಾಳಿಯು ಬೀಸತೊಡಗಿತು. ಆಗ ದೇವತೆಗಳೆಲ್ಲರೂ ಚಳಿಮಳೆಯಿಂದ ಉದ್ವಿಗ್ನರಾಗಿ ತಮ್ಮ ತಮ್ಮ ರಥಗಳಲ್ಲಿ ಅವಿತುಕೊಂಡು ಕುಳಿತರು. ಆಗ ದೈತ್ಯರು ದೇವ ಸೇನೆಯ ಮೇಲೆ ಬಿದ್ದು ಎಲ್ಲರನ್ನು ತುಂಡರಿಸತೊಡಗಿದರು. ಸ್ವಯಂ ಕಾಲನೇಮಿಯು ಒಂದು ಲಕ್ಷ ಜನ ಗಂಧರ್ವರನ್ನು ಐದು ಲಕ್ಷಯಕ್ಷರನ್ನು ಮೂರು ಲಕ್ಷ ಕಿನ್ನರರನ್ನೂ, ಇನ್ನೂ ಅಸಂಖ್ಯ ದೇವತೆಗಳನ್ನು ಸಂಹರಿಸಿದನು.

ಕಾಲನೇಮಿಯ ಈ ಕದನ ಕೋಲಾಹಲವನ್ನು ಕಂಡು ಕ್ರುದ್ಧರಾಗಿ ಅಶ್ವಿನೀ ದೇವತೆಗಳು ಅವನ ಮೇಲೆ ಏರಿ ಬಂದರು. ಘೋರವಾದ ವಜ್ರಾಸ್ತ್ರವನ್ನು ಪ್ರಯೋಗಿಸಿ ಅವನ ರಥವನ್ನು ಪುಡಿಗಟ್ಟಿ, ಬಾವುಟ ಹರಿದು, ಬಿಲ್ಲು ಮುರಿದು, ಕವಚ

ಸೀಳಿ. ಚಕ್ರವನ್ನೂ ಚೂರುಚೂರು ಮಾಡಿ ಮೈತುಂಬ ಗಾಯಗಳನ್ನುಂಟು ಮಾಡಿದರು. ಮಹಾಪರಾಕ್ರಮಿಯಾದ ಕಾಲನೇಮಿಯು ಅದಕ್ಕೆ ಪ್ರತಿಯಾಗಿ ನಾರಾಯಣಾಸ್ತ್ರವನ್ನು ಬಿಟ್ಟು, ವಜ್ರಾಸ್ತ್ರವನ್ನು ಶಾಂತಗೊಳಿಸಿ, ಸಾಕ್ಷಾತ್ ಇಂದ್ರನನ್ನೇ ಸೆರೆ ಹಿಡಿಯಬೇಕೆಂದು ಏರಿ ಬಂದನು. ದೇವತೆಗಳೆಲ್ಲ ಗಾಬರಿಯಾಗಿ ಕೂಗತೊಡಗಿದರು. ಆಗ ಶ್ರೀಹರಿಯು ತನ್ನ ಭಕ್ತರಾದ ದೇವತೆಗಳಿಗೆ ಬಂದೊದಗಿದ ಸಂಕಟವನ್ನು ಕಂಡು ಅವರ ರಕ್ಷಣೆಗಾಗಿ ಧಾವಿಸಿ ಬಂದನು. ಗರುಡಾರೂಢನಾಗಿ ಆಕಾಶದಲ್ಲಿ ಹಾರಿಬರುತ್ತಿರುವ ಹರಿಯ ಕಾಂತಿವಲಯವು ದೈತ್ಯರ ಕಣ್ಣು ಕುಕ್ಕಿತು. ಅವನನ್ನು ಕಂಡು ದೇವತೆ ಹಾಗೂ ದೈತ್ಯ ಎರಡೂ ಪಕ್ಷದವರಿಗೂ ಸಂತೋಷವಾಯಿತು. ದೇವತೆಗಳಿಗೆ ನಮ್ಮ ಭಯ ಪರಿಹಾರವಾಯಿತು ಎಂಬ ಭರವಸೆಯಿಂದ ಆನಂದವಾದರೆ ದೈತ್ಯರಿಗೆ ಇನ್ನೊಂದು ರೀತಿಯಿಂದ ಹರ್ಷವಾಯಿತು. 'ದೇವತೆಗಳಿಗೆಲ್ಲ ಈ ವಿಷ್ಣುವೇ ಮೂಲಾಧಾರ, ಮುಂದಾಳು. ಇವನನ್ನು ಸೋಲಿಸಿದರೆ ದೇವತೆಗಳ ಬಲವೇ ಹಾಳಾದಂತೆ. ನಮ್ಮ ಶಕ್ತಿಯನ್ನೆಲ್ಲ ಕೇಂದ್ರೀಕರಿಸಿ ಇವನೊಬ್ಬನನ್ನು ಕೊಂದುಬಿಟ್ಟರೆ ನಮ್ಮ ಕಾರ್ಯವಾದಂತೆ' ಎಂದು ಆಲೋಚಿಸಿ ಹಿಗ್ಗಿ, ಹುರುಪಿನಿಂದ ಆ ಹರಿಯನ್ನು ಮುತ್ತಿ ಸುತ್ತಲೂ ಪ್ರಹಾರ ಮಾಡತೊಡಗಿದರು. ಹತ್ತುಜನ ದೈತ್ಯ ಸೇನಾಪತಿಗಳು ಏಕಕಾಲಕ್ಕೆ ವಿಷ್ಣುವಿನ ಮೇಲೆ ಸೂಡುಸೂಡಾಗಿ ಬಾಣ ಪ್ರಯೋಗಿಸಿದರು. ಕಾಲನೇಮಿಯು ಅರವತ್ತು, ನೇಮಿಯು ನೂರು, ಮಥನ ಎಂಭತ್ತು, ಜಂಭಕ ಎಪ್ಪತ್ತು, ಶುಂಭ ಹತ್ತು, ಬಾಣಗಳನ್ನು ಒಮ್ಮೆಲೆ ಬಿಟ್ಟು, ವಿಷ್ಣುವನ್ನು ಹೊಡೆದರು. ಆದರೆ ಮಧುಸೂಧನನು ಇವರೆಲ್ಲರ ಬಾಣಗಳನ್ನು ಕತ್ತರಿಸಿ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ಎಲ್ಲ ದೈತ್ಯರನ್ನು ಗಾಯಗೊಳಿಸಿದನು. ಆಗ ದಾನವೇಂದ್ರನಾದ ಕಾಲನೇಮಿಯು ದವಡೆ ಕಚ್ಚಿ ತನ್ನ ಅತ್ಯುಗ್ರವಾದ ಶಕ್ತ್ಯಾಯುಧವನ್ನು ಎತ್ತಿಕೊಂಡು ವಿಷ್ಣುವಿನ ಮೇಲೆ ಪ್ರಯೋಗಿಸಿದನು. ಅದರಿಂದ ಹರಿಯು ಎಡತೋಳುಗಳಿಗೆ ಪೆಟ್ಟುಹತ್ತಿ ನೆತ್ತರು ಸುರಿಯತೊಡಗಿತು. ಆಗ ಕ್ರುದ್ಧನಾದ ಅಚ್ಯುತನು ಕಾಲನೇಮಿಯಮೇಲೆ ತನ್ನ ಗದೆಯನ್ನು ಬೀಸಿದನು. ಅದರಿಂದ ದೈತ್ಯರಾಜನ ತಲೆಯ ಮೇಲಿನ ಕಿರೀಟವು ಪುಡಿಯಾಗಿ ದೇಹದ ನವರಂಧ್ರಗಳಿಂದ ರಕ್ತವು ಸೋರಿ ಮೂರ್ಛಿತನಾಗಿ ರಥದಲ್ಲಿಯೇ ಬಿದ್ದುಬಿಟ್ಟನು ಮೂರ್ಛೆ ತಿಳಿದೆದ್ದ ಬಳಿಕ ಶ್ರೀಹರಿಯು ಅವನಿಗೆ, 'ದೈತ್ಯೇಂದ್ರ, ಈಗ ನೀನು ಹಿಂದಿರುಗಿ ಹೋಗು. ಮೂರ್ಛಿತನಾದ ನಿನ್ನನ್ನು ಹೊಡೆಯಲಾರೆ. ಪ್ರಾಣದಾನ ಮಾಡಿದ್ದೇನೆ. ಇನ್ನು ಕೆಲವು ದಿನ ಬದುಕು. ಮುಂದೆ ನಾನೇ ನಿನ್ನನ್ನು ಸಂಹರಿಸುವೆನು.'

*ಶ್ರೀ ಮತ್ಸ್ಯಮಹಾಪುರಾಣದಲ್ಲಿ ನೂರಐವತ್ತೆರಡನೆಯ ಅಧ್ಯಾಯ ಮುಗಿದುದು.*

—○—

## ಹರಿಯ ಚಕ್ರದಿಂದ ದೈತ್ಯಸೇನಾಪತಿ ಗ್ರಸನನ ವಧೆ

ಅಧ್ಯಾಯ - ೧೫೩

**"ತಂ ದೃಷ್ಟ್ವಾ ದಾನವಾಃ ಕ್ರುದ್ಧಾಶ್ಚೀರುಃ ಸ್ವೈಸ್ವೈರ್ಬಲೈರ್ವೃತಾಃ ।**
**ಮಶಕಾ ಇವ ಮಾಕ್ಷೀಕ ಹರಣೇ ಸರ್ವತೋದಿಶಂ ॥**

**ಸೂತ :-** ದೈತ್ಯರನ್ನೆಲ್ಲಾ ಗೆದ್ದುನಿಂತ ಆ ಹರಿಯನ್ನು ನೋಡಿ ದಾನವರೆಲ್ಲರೂ ಕುಪಿತರಾಗಿ ಅತ್ತಿತ್ತ ಹರಿದಾಡಿದರು. ಗೂಡಿನಿಂದ ಜೇನನ್ನು ತೆಗೆದುಕೊಂಡ ಬಳಿಕ ದುಂಬಿಗಳೆಲ್ಲವೂ ಅತ್ತಿತ್ತ ಚದುರುವಂತೆ ಕಾಲನೇಮಿಯ ಪರಾಜಯದಿಂದ ದೈತ್ಯರೆಲ್ಲರೂ ಬೆದರಿ ಕಂಡಕಡೆ ಓಡತೊಡಗಿದರು. ಆಗ ನೇಮಿಯು ಮದೋನ್ಮತ್ತ ವಾದ ದೊಡ್ಡ ಆನೆಯ ಮೇಲೆ ಏರಿ ವಿಷ್ಣುವಿನ ಮೇಲೆ ಏರಿಹೋದನು. ಅವನ ಜೊತೆಗೆ ಮಥನ, ಶುಂಭ, ಗ್ರಸನ, ಮಹಿಷ ಮುಂತಾದ ದಾನವರೆಲ್ಲರೂ ಕೂಡಿ ತೀಕ್ಷ್ಣ ಆಯುಧಗಳಿಂದ ವಿಷ್ಣುವಿನ ಮೇಲೆ ಪ್ರಹಾರಗೈದರು. ಕುಪಿತನಾದ ಹರಿಯು ತನ್ನ ಯುದ್ಧಕೌಶಲ್ಯದಿಂದ ದಾನವರೆಲ್ಲರನ್ನೂ ಹೊಡೆದು ಹಿಮ್ಮೆಟ್ಟಿಸಿದನು. ಅನಂತರ ನೇಮಿಯು ವಿಷ್ಣುವಿನ ಕೈಯಲ್ಲಿರುವ ಬಿಲ್ಲನ್ನು ತನ್ನ ಭಲ್ಲಾಯುಧದಿಂದ ಕತ್ತರಿಸಿದನು. ಅವನ ಬಾಣವನ್ನು ಮಹಿಷಾಸುರನು ತುಂಡುಗೈದನು. ಆಗ ಗದಾಧರನು ತನ್ನ ಗದೆಯನ್ನು ನಿಮಿಯ ಮೇಲೆ ತೂರಿದನು. ಜಂಭ, ಮಹಿಷ, ಗ್ರಸನ ಮೂವರೂ ಸೇರಿ ಅದನ್ನು ತಡೆದರು. ಅನಂತರ ಅಚ್ಯುತನು ಬೀಸಿದ ಶಕ್ತ್ಯಾಯುಧವನ್ನು ಗಜಾಸುರನು ಆಕಾಶದಲ್ಲಿಯೇ ಹಿಡಿದು ವಿಫಲಗೊಳಿಸಿದನು. ಕೊನೆಗೆ ಆ ದಾನವಾರಿಯು ರೌದ್ರಾಸ್ತ್ರವನ್ನು ಅಭಿಮಂತ್ರಿಸಿ ದೈತ್ಯಸೇನೆಯ ಮೇಲೆ ಪ್ರಯೋಗಿಸಿದನು. ಆಗ ಗ್ರಸನನು ಬ್ರಹ್ಮಾಸ್ತ್ರ ಬಿಟ್ಟು ಅದನ್ನು ಶಾಂತಗೊಳಿಸಿದನು. ಬಳಿಕ ಹರಿಯು ಕಾಲದಂಡಾಸ್ತ್ರವನ್ನು ಬಿಟ್ಟನು. ಅದನ್ನು ಗ್ರಸನ ದೈತ್ಯನು ನಾರಾಯಣಾಸ್ತ್ರವನ್ನೂ, ನಿಮಿಯ ಚಕ್ರವನ್ನೂ, ಜಂಭನು ಇಷೀಕಾಸ್ತ್ರವನ್ನೂ, ಬಿಟ್ಟು, ಅದನ್ನು ತಡೆದರು. ಹೀಗೆ ಕಾಲ ದಂಡಾಸ್ತ್ರವು ಶಮನವಾದದ್ದನ್ನು ನೋಡಿ ಆ ಮುರಾರಿಯು ತನ್ನ ಪ್ರೀತಿಯ ಆಯುಧವಾದ ಸುದರ್ಶನ ಚಕ್ರವನ್ನೇ ದೈತ್ಯ ಸೇನಾಪತಿಯ ಕೊರಳಿಗೆ ಗುರಿಯಿಟ್ಟು ಎಸೆದನು. ಆಕಾಶದಲ್ಲಿ ಬರುವ ಆ ಕೇಶವನ ಚಕ್ರವನ್ನು ದಾರಿಯಲ್ಲಿಯೇ ತಡೆದು ತುಂಡರಿಸಬೇಕೆಂದು ದಾನವ ದಳಪತಿಗಳೆಲ್ಲರೂ ಸಂಯುಕ್ತವಾಗಿ ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿದರು. ಆದರೆ ಉಳಿದಾವ ಶಸ್ತ್ರಾಸ್ತ್ರಗಳಿಗೂ ಮಣಿಯದೇ ಆ ವಿಷ್ಣು ಚಕ್ರವು ನಿರಾತಂಕವಾಗಿ ಸಾಗಿ ಬಂದು ಗ್ರಸನಾಸುರನ ಕುತ್ತಿಗೆಯನ್ನು ಕತ್ತರಿಸಿ ಎರಡು ತುಂಡುಮಾಡಿ ಪುನಃ ಆ ನಾರಾಯಣನ ಕೈಸೇರಿತು.

*ಇತಿ ಶ್ರೀ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಾಐವತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಮಹಿಷಾಸುರ, ಶುಂಭಾಸುರರಿಗೆ ಶ್ರೀ ಹರಿಯಿಂದ ಜೀವದಾನ

ಅಧ್ಯಾಯ - ೧೫೪

**ಸೂತ ಉವಾಚ:**

**"ತಸ್ಮಿನ್ನಿನಿಹತೇ ದೈತ್ಯೇ ಗ್ರಸನೇ ಲೋಕನಾಯಕೇ ।**
**ನಿರ್ಮರ್ಯಾದಮಯುದ್ಧ್ಯಂತ ಹರಿಣಾ ಸಹ ದಾನವಾಃ ॥**

**ಸೂತ** :- ದೈತ್ಯ ನಾಯಕನಾದ ಗ್ರಸನನು ವಿಷ್ಣುವಿನ ಚಕ್ರದಿಂದ ಮರಣ ಹೊಂದಲು ದಾನವರೆಲ್ಲರೂ ದುಃಖಿತರಾಗಿ ತಮ್ಮ ಶಕ್ತಿಮೀರಿ ಹರಿಯೊಡನೆ ಹೋರಾಡಿದರು. ಪಟ್ಟಿಶ, ಮುಸಲ, ಪಾಶ, ಗದೆ, ಬಾಣ, ಖಡ್ಗ ಮುಂತಾದ ತಮ್ಮ ಆಯುಧಗಳೆಲ್ಲವನ್ನೂ ಅವನ ಮೇಲೆ ಪ್ರಯೋಗಿಸಿದರು. ಆ ಅಸುರರ ಆಯುಧಗಳನ್ನೆಲ್ಲ ತನ್ನ ಬೆಂಕಿ ಉಗುಳುವ ಬಾಣಗಳಿಂದ ನುಚ್ಚುನೂರುಮಾಡಿ ನಾಶಪಡಿಸಿ ನಗುತ್ತ ನಿಂತ ಆ ನಾರಾಯಣ.

ಹೀಗೆ ಯುದ್ಧವು ನಡೆದಾಗ ತನ್ನ ವಾಹನವಾದ ಗರುಡನಿಗೆ "ಪಕ್ಷಿರಾಜಾ, ಈ ಸಂಗ್ರಾಮದಲ್ಲಿ ನಿನಗೇನೂ ಆಯಾಸವಾಗಿಲ್ಲವಷ್ಟೆ ? ಹಾಗಿದ್ದರೆ ನನ್ನ ರಥವನ್ನು ಮಥನ ದಾನವನಿದ್ದಲ್ಲಿಗೆ ತೆಗೆದುಕೊಂಡು ನಡೆ" ಎಂದು ಹೇಳಿದನು. ಸ್ವಾಮಿಯ ಆಣತಿಯಂತೆ ಪಕ್ಷಿರಾಜನು ಅಧೋಕ್ಷಜನ ರಥವನ್ನು ಮಥನ ದೈತ್ಯನಿದ್ದೆಡೆ ನೂಕಿದನು. ತನ್ನ ಮೇಲೆ ಏರಿಬಂದ ಶ್ರೀಹರಿಯನ್ನು ನೋಡಿ ಆ ದೈತ್ಯನು ಪರಿಘಾಯುಧದಿಂದ ಬಲವಾದ ಏಟನ್ನು ತಲೆಗೆ ಹಾಕಿದನು. ಅದನ್ನು ಸಹಿಸಿಕೊಂಡು ಆ ಚಕ್ರಪಾಣಿಯು ಗದೆಯನ್ನು ಎತ್ತಿ ಮಥನ ದೈತ್ಯನ ರಥದ ಮೇಲೆ ಅಪ್ಪಳಿಸಿದನು. ಇದರಿಂದ ಆ ದೈತ್ಯನೂ ಅವನ ರಥವೂ ಜಜ್ಜಿ ಹೋದವು.

ಮಥನಾಸುರನು ಮರಣಹೊಂದಿದ್ದನ್ನು ಕಂಡು ಮಹಿಷಾಸುರನು ಅದರ ಸೇಡು ತೀರಿಸಲೆಂದು ಸೆಟೆದು ಬಂದನು. ಶೂಲಶಕ್ತಿಗಳಿಂದ ಗರುಡನನ್ನು ಹೊಡೆದು ಅವನನ್ನು ನುಂಗಬೇಕೆಂದು ಬೆಟ್ಟದಗಲ ಬಾಯಿತೆಗೆದು ಆ ದುಷ್ಟ ದೈತ್ಯನು ಮುಂದುವರಿದನು. ಅದನ್ನು ಕಂಡು ಮಾಧವನು ಆ ದೈತ್ಯನ ಬಾಯಿತುಂಬಾ ಬಾಣಗಳ್ನು ತುಂಬಿ ಒಂದು ಹೊಡೆತದಿಂದ ಮಹಿಷಾಸುರನನ್ನು ತಲೆಕೆಳಗಾಗಿ ಹೊಡೆದು ಕೆಡವಿದನು. ನೆಲದ ಮೇಲೆ ಬಿದ್ದು ಹೊರಳುವ ಆ ಮಹಿಷನನ್ನು ಕಂಡು ಮುರಾರಿಯು "ಮಹಿಷಾಸುರ, ನಿನ್ನ ಸಾವು ಒಂದು ಹೆಣ್ಣಿನ ಕೈಯಲ್ಲಿದೆ, ಅದಕ್ಕಾಗಿ ನಿನ್ನನ್ನು ಕೊಲ್ಲದೆ ಬಿಟ್ಟಿರುವೆ. ಇನ್ನು ಕೆಲಕಾಲ ಬದುಕಿ ಬಾಳು ಹೋಗು" ಎಂದು ಹೇಳಿದನು. ಅನಂತರ ಶ್ರೀ ಹರಿಯ ಮೇಲೆ ಏರಿಬಂದ ಶುಂಭ ದೈತ್ಯನಿಗೂ ಕೂಡಾ ವಿಷ್ಣುವು 'ಶುಂಭನೆ, ನೀನು ಕೂಡ ಓರ್ವ ಕುಮಾರಿಯ ಕೈಯಿಂದ ಮುಂದೆ ಸಾಯಲಿರುವೆ. ಈಗೇಕೆ ವ್ಯರ್ಥವಾಗಿ ಯುದ್ಧ ಮಾಡುವೆ" ಎಂದು ಹೇಳಿ ಅವನೊಡನೆ ಯುದ್ಧ ಮಾಡುವದನ್ನೇ ಬಿಟ್ಟು

ಬಿಟ್ಟನು. ಮಧುಸೂದನನು ಯುದ್ಧದಿಂದ ಹಿಂತಿರುಗುವಾಗ ಇದು ಒಳ್ಳೆಯ ಸಂಧಿ !' ಎಂದು ಜಂಭಾಸುರನೊಂದಿಗೆ ಶುಂಭಾಸುರನು ತನ್ನ ಪರಿಘಾಯುಧದಿಂದ ನಾರಾಯಣನ ನಡುನೆತ್ತಿಯನ್ನು ಜಜ್ಜಿದನು. ಅದರಂತೆ ನಿಮಿಯು ಗರುಡನ ತಲೆಯ ಮೇಲೆ ಪ್ರಚಂಡ ಗದಾ ಪ್ರಹಾರ ಮಾಡಿದನು. ಆಗ ವಿಷ್ಣುವೂ, ಗರುಡನೂ ನೆಲದ ಮೇಲೆ ಒರಗಿದರು. ಅದನ್ನು ನೋಡಿ ದೈತ್ಯರೆಲ್ಲರೂ ದಶದಿಕ್ಕುಗಳೂ ಗಡಚಿಕ್ಕುವಂತೆ ಜಯಘೋಷ ಮಾಡಿ ಅಬ್ಬರಿಸಿದರು. ಮತ್ತು ಜಯಭೇರಿ ಬಾರಿಸುತ್ತ, ಶಂಖ ಊದುತ್ತ ತಮ್ಮಟೆ ಬಡಿಯುತ್ತ 'ಗೆದ್ದವು' ಎಂದು ಮುನ್ನಡೆದರು. ಅನಂತರ ವಿಷ್ಣುವೂ ಗರುಡನೂ ಎಚ್ಚತ್ತು ರಣರಂಗವನ್ನು ಬಿಟ್ಟು ಪಲಾಯನ ಮಾಡಿದರು.

ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಐವತ್ತನಾಲ್ಕನೆಯ ಅಧ್ಯಾಯ ಮುಗಿದುದು



## ರಣರಂಗದಲ್ಲಿ ತಾರಕಾಸುರನ ಉರದಾಟ | ಅಧ್ಯಾಯ - ೧೫೫

**ಸೂತ ಉವಾಚ:**

**ತಮಾಲೋಕ್ಯ ಪಲಾಯಂತಂ ವಿಭ್ರಷ್ಟಧ್ವಜಕಾರ್ಮುಕಂ ।**
**ಹರಿಂದೇವಃ ಸಹಸ್ರಾಕ್ಷೋ ಮೇನೇ ಭಗ್ನಂ ದುರಾಹವೇ ॥**

**ಸೂತ** :- ಧ್ವಜ ಮುರಿದು, ಬಿಲ್ಲು ಹರಿದು, ಬಾಣ ತುಂಡಾಗಿ ಓಡಿ ಹೋಗುತ್ತಿರುವ ಲೋಕ ವಿಡಂಬಕನಾದ ವಿಷ್ಣುವನ್ನು ನೋಡಿ, ದೇವೇಂದ್ರನು ''ಹರಿಯು ಸೋತು ಬಂದಿದ್ದಾನೆ'' ಎಂದು ತಿಳಿದುಕೊಂಡನು. ದೈತ್ಯರಿಗೆಲ್ಲ ಪರಮಾನಂದ. ಭ್ರಾಂತಿಯಿಂದ ದೇವತೆಗಳಿಗೆಲ್ಲ ದಿಗ್ಭ್ರಮೆ. ದೇವೇಂದ್ರನಿಗೆ ಚಿಂತೆ, ಸಂತಾಪ, ಅವಮಾನ, ನಿರಾಶೆ ಎಲ್ಲವೂ! ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಆಗ ಅವನು ನೇರವಾಗಿ ಶ್ರೀಹರಿಯ ಬಳಿಗೆ ಬಂದು ಪ್ರಾರ್ಥಿಸಿದನು. ''ದೇವಾ, ನೀನು ಪರಾಜಿತನಾದಿ ಎಂದು ಆ ದಾನವರು ತಿಳಿದಿದ್ದಾರೆ. ಆದರೆ ನಿನಗೆ ಇದೊಂದು ವಿಡಂಬನ. ನಿನ್ನ ಈ ಲೋಕ ವಿಡಂಬನೆಯನ್ನು ಅವರೇನು ಬಲ್ಲರು ! ನೀನು ಉದಾಸೀನಮಾಡಿ ಬಿಟ್ಟದ್ದನ್ನು ಆ ದುರ್ಜನರು ತಮ್ಮ ಜಯವೇ ಎಂದು ತಿಳಿಯುತ್ತಾರೆ. ಹಿಂದೆ ಹಿರಣ್ಯಾಕ್ಷ, ಹಿರಣ್ಯಕಶಿಪುರಂಥ ವಿರಾಗ್ರೇಸರರನ್ನು ಕೊಂದು ಹಾಕಿದ ನಿನಗೆ ಈ ಅಲ್ಪದಾನವರು ಈಡೇ ? ಯುಗಯುಗಗಳಲ್ಲಿಯೂ ದೈತ್ಯ ದಾನವರನ್ನೆಲ್ಲ ಸೀಳಿ ಹಾಕುವ ಮಹಾಪ್ರಭು ನೀನೇ ತಾನೆ ? ಈಗಲೂ ನಿನ್ನ ನಿಜವಾದ ಶಕ್ತಿಯನ್ನು ತೋರಿ ದೈತ್ಯರನ್ನು ಸಂಹರಿಸಿ, ದೇವತೆಗಳನ್ನು ಸಂರಕ್ಷಿಸು.''

ಆಗ ಆ ಪರಮಾತ್ಮನು, ಆ ಸುರರಾಜನನ್ನು ಕುರಿತು ಇಂತೆಂದನು. ''ಮಹೇಂದ್ರಾ, ಈ ಎಲ್ಲ ದಾನವರನ್ನು ಸಂಹರಿಸಲು ನಾನು ಒಂದೊಂದು ಉಪಾಯವನ್ನು ಯೋಚಿಸಿ ಇಟ್ಟದ್ದೇನೆ. ಬೇರೆ ಬಗೆಯಿಂದ ಯಾರೂ ಅವರನ್ನು ಗೆಲ್ಲಲಾರರು. ಕೊಲ್ಲಲಾರರು. ಇವರಲ್ಲಿ ಕೆಲವರು ಹುಡುಗರ ಕೈಯಿಂದ. ಹಲವರು ಹೆಂಗಸರ ಕೈಯಿಂದ

ಸಾಯಬೇಕೆಂದು ವರ ಪಡೆದುಕೊಂಡಿದ್ದಾರೆ. ಜಂಭನ ವಧೆ ಮಾತ್ರ ನಿನ್ನಿಂದಲೇ ಆಗಬೇಕು. ನಾನು ನಿನ್ನ ಬೆಂಗಾವಲಿಗೆ ಇದ್ದೇನೆ. ನೀನೀಗಲೇ ಯುದ್ಧಕ್ಕೆ ಹೊರಡು, ಆ ದುಷ್ಟ ದೈತ್ಯನನ್ನು ಸಂಹರಿಸು'' ಭಗವಂತನ ಅಪ್ಪಣೆಯಂತೆ ಆ ಶಚೀಪತಿಯು ಅಪರಂಪಾರವಾದ ಅಮರಸೇನೆಯೊಂದಿಗೆ ಐರಾವತವನ್ನು ಏರಿ ಯುದ್ಧಕ್ಕೆ ಹೊರಟನು. ಎರಡು ಪಕ್ಷಗಳಲ್ಲಿಯ ಪಟುಭಟರು ಹದನವಾದ ಶಸ್ತ್ರಾಸ್ತ್ರಗಳನ್ನು ಪರಸ್ಪರ ಎಸೆದು ಮಸೆದು ಹುರುಡುಗಟ್ಟಿ ಹೋರಾಡಿದರು.

ದೈತ್ಯಸೇನೆಯಲ್ಲಿ ವೀರ ಶಿರೋಮಣಿಯಾದ ಗಜಾಸುರನು ಮದ್ದಾನೆಯ ರೂಪ ತಳೆದು ಸುರಸೈನ್ಯದ ಮೇಲೆ ಬರಸಿಡಿಲಿನಂತೆ ಎರಗಿದನು. ಸೊಂಡಿಲಿನಿಂದ ಸಹಸ್ರಾರು ಜನರನ್ನು ಎತ್ತಿ ಅಪ್ಪಳಿಸಿ, ಸಾಯಹೊಡೆದನು. ಕಾಲಿನಿಂದ ವರಿಸಿ ಎಷ್ಟೋ ಜನರನ್ನು ಕೊಂದನು. ತನ್ನ ಉದ್ದವಾದ ಸೊಂಡೆಯನ್ನು ಚಾಚಿ ಇದ್ದಲ್ಲಿಂದ ದೇವತೆಗಳನ್ನು ಹಿಂಡು-ಹಿಂಡಾಗಿ ಎತ್ತಿ ನೆಲಕ್ಕೆ ಅಪ್ಪಳಿಸಿ ಕೊಲ್ಲುತ್ತಿದ್ದನು. ರುದ್ರಗಣವನ್ನು ಅವನು ತನ್ನ ಅಸ್ತ್ರಪ್ರಹಾರದಿಂದ ಗಾಯಗೊಳಿಸಿದನು. ಅದನ್ನು ನೋಡಿ ಶಿವನು ಸಿಟ್ಟಾಗಿ ಆನೆಯ ರೂಪ ತಾಳಿದ ಆ ಗಜಾಸುರನ ಕುಂಭಸ್ಥಳಕ್ಕೆ ಒಂದು ಪ್ರಹಾರವನ್ನು ಇಟ್ಟನು. ಅದರಿಂದ ವಿಚಿತ್ರ ನೋವು ಉಂಟಾಗಿ ಆನೆಯು ನೆಲಕ್ಕೆ ಕುಸಿದು ಹೊರಳಾಡಿತು. ಮರುಕ್ಷಣದಲ್ಲಿ ಎದ್ದು ಕೋಪದಿಂದ ಕೈಲಾಸಪತಿಯ ಹೊಕ್ಕಳವನ್ನು ತನ್ನ ಕೋರೆ ದಾಡೆಯಿಂದ ಹೊಕ್ಕು ಇರಿದನು. ಮತ್ತು ಉಳಿದ ಹನ್ನೊಂದು ಗಣ ರುದ್ರರಲ್ಲಿ ಒಂಭತ್ತು ರುದ್ರರನ್ನು ಹೊತ್ತು, ಎತ್ತಿ ತಂದು, ತನ್ನ ಕಾಲಿನಿಂದ ತುಳಿದನು. ಕೋರೆಯಿಂದ ತಿವಿದನು. ಸೊಂಡೆಯಿಂದ ಬಡಿದನು. ಅದನ್ನು ನೋಡಿ, ಕೋಪೋದ್ರಿಕ್ತನಾದ ಶಂಕರನು ಓಡಿಬಂದು ಗಜಾಸುರನ ಸೊಂಡೆ ಹಿಡಿದು 'ಗರಗರ' ತಿರುಗಿಸಿ, ನೆಲದ ಮೇಲೆ ಅಪ್ಪಳಿಸಿದನು. ಅದರಿಂದ ಆ ದೈತ್ಯನು ರಕ್ತಕಾರುತ್ತ ನೆಲದ ಮೇಲೆ ಬಿದ್ದನು.

ಆಗ ಗೌರೀಪತಿಯು ಇನ್ನು ಆ ದೈತ್ಯ ದೇಹದಲ್ಲಿ ಜೀವ ಇರುವಾಗಲೇ ಧಾವಿಸಿ ಹೋಗಿ ಗಜಾಸುರನ ಮೈಮೇಲಿನ ಚರ್ಮವನ್ನೆಲ್ಲಾ ಸುಲಿದು ಉತ್ತರೀಯದಂತೆ ತನ್ನ ಮೈಮೇಲೆ ಹೊದೆದುಕೊಂಡನು. ಆ ಆನೆಯ ತೊಗಲಿನಿಂದ ಬಿಸಿ ರಕ್ತವು ಇನ್ನು ತೊಟಕುತ್ತಿತ್ತು. ಗಜಚರ್ಮವನ್ನು ಬಟ್ಟೆಮಾಡಿ ಉಟ್ಟುಕೊಂಡ ಗಂಗಾಧರನ ಆ ಭೀಷ್ಮಬಂಧುರ ರೂಪವನ್ನು ಕಂಡು ದೈತ್ಯರೆಲ್ಲರೂ ಭಯಭ್ರಾಂತರಾಗಿ ದಿಕ್ಕೆಟ್ಟು ಓಡಿಹೋದರು. ಹಲವರು ತಲೆಮರೆಸಿಕೊಂಡು ಎಲ್ಲಿಯೋ ಅಡಗಿದರು. ಕೆಲವರು ಇದ್ದಲ್ಲಿಯೇ ಎದೆ ಒಡೆದು ನೆಲದ ಮೇಲೆ ಬಿದ್ದರು.

ಇದನ್ನು ಕಂಡು ನಿಮಿಯು ಒಂದು ಮದ್ದಾನೆಯನ್ನು ಏರಿಕೊಂಡು ರಣ ವಾದ್ಯಗಳನ್ನು ಮೊಳಗಿಸುತ್ತ ದೇವಸೇನೆಯಲ್ಲಿ ನುಗ್ಗಿದನು. ಆಗ ಇಂದ್ರನಿಗೂ ನಿಮಿದಾನವನಿಗೂ ಭಯಂಕರ ಕಾಳಗವು ಏರ್ಪಟ್ಟಿತು. ಪರಾಕ್ರಮಿಯಾದ ನಿಮಿಯು ಇಂದ್ರನ ವಜ್ರಾಯುಧದ ಪ್ರಹಾರವನ್ನುಲೆಕ್ಕಿಸದೆ ತನ್ನ ಕೈಯಲ್ಲಿಯ ಉಕ್ಕಿನ ಮುದ್ಗರದಿಂದ ಐರಾವತದ ಸೊಂಟಕ್ಕೆ ಹೊಡೆದನು. ಅದರಿಂದ ಬೆಟ್ಟದಂತಿದ್ದ ಆನೆಯು ತತ್ತರಿಸಿ ನೆಲಕ್ಕೆ ಉರುಳಿತು. ಇದನ್ನು ಕಂಡು ದೂರದಲ್ಲಿದ್ದ ಕುಬೇರನು ಓಡಿ ಬಂದು,

ತನ್ನ ಗದೆಯನ್ನು ಬೀಸಿ, ನಿಮಿಗೂ ಹಾಗೂ ಅವನ ಮದ್ದಾನೆಗೂ ಒಂದೊಂದು ಏಟು ಹಾಕಿದನು. ನಿಮಿಯು ನೆತ್ತರಕಾರಿ : ಕೆಳಗೆ ಹಾರಿ ಮತ್ತೆ ಎದ್ದು ನಿಂತನು. ಆದರೆ ಅವನ ಆನೆಯು ಮಾತ್ರ ಕುಬೇರನ ಗದಾಪ್ರಹಾರ ತಾಳಲಾರದೆ ಸತ್ತು ಬಿದ್ದಿತು.

ನಿಮಿಯ ಸೋಲನ್ನು ಅವನ ಆನೆಯ ಮರಣವನ್ನು ಕಂಡು ದೇವತೆಗಳು ಹಿಗ್ಗಿ ಜಯಘೋಷ ಮಾಡುವದನ್ನು ಕಂಡು ಜಂಭಾಸುರನಿಗೆ ಪಿತ್ತ ಕೆರಳಿತು. ತುಪ್ಪಹೊಯ್ದ ಬೆಂಕಿಯಂತೆ ಉರಿದೆದ್ದು ಅವನು ದೇವಸೇನೆಯನ್ನು ಶಸ್ತ್ರಾಸ್ತ್ರಗಳಿಂದ ಸವರತೊಡಗಿದನು. ಅವನ ಅಬ್ಬರದ ಏಟುಗಳನ್ನು ತಾಳಲಾರದೆ ಸುರರೆಲ್ಲರೂ ಹಿಂಡುಹಿಂಡಾಗಿ ಹಿಮ್ಮೆಟ್ಟಿದರು. ಇದನ್ನು ಕಂಡು, ಸುರನಾಥನು ತಾನೇ ಜಂಭನೊಡನೆ ಕಾದಲು ಆಣೆಯಾಗಿ ಬಂದನು. ಪುಂಖಾನುಪುಂಖವಾಗಿ ಶರಜಾಲಗಳನ್ನು ಸುರಿಸಿದನು. ಅವೆಲ್ಲವನ್ನು ನಡುದಾರಿಯಲ್ಲಿಯೇ ಕತ್ತರಿಸಿ ಹಾಕಿದ ಜಂಭನ ಮೇಲೆ ಮತ್ತಷ್ಟೂ ಕೆರಳಿ ಆ ಸುರೋತ್ತಮನು ಅದ್ಭುತ ಶಕ್ತಿಯುಳ್ಳ ಗಂಧರ್ವಾಸ್ತ್ರವನ್ನು ಪ್ರಯೋಗಿಸಿದನು.

ಗಂಧರ್ವಾಸ್ತ್ರವು ಅಸುರ ಸೈನ್ಯದ ಮೇಲೆ ಧಾರಾಕಾರವಾಗಿ ಮಳೆ ಸುರಿಸಿ, ಎಲ್ಲ ದಾನವರೂ ಕೊಚ್ಚಿಕೊಂಡು ಹೋಗುವಂತೆ ಮಾಡಿತು. ಅದಕ್ಕೆ ಪ್ರತಿಯಾಗಿ ಜಂಭಾಸುರನು 'ಮೌಸಲಾಸ್ತ್ರ'ಗಳನ್ನು ಬಿಟ್ಟ. ಅದರಿಂದ ದೇವಸೇನೆಯ ತುಂಬ ಒನಕೆಗಳು ತೂರಿಬಂದು ಸಿಕ್ಕವರ ತಲೆಗಳನ್ನೆಲ್ಲಾ ಜಜ್ಜತೊಡಗಿದವು. ಆಗ ದೇವೇಂದ್ರನು ತ್ವಾಷ್ಟ್ರಾಯುಧವನ್ನು ಬಿಟ್ಟು, ಆ ಒನಕೆಗಳನ್ನೆಲ್ಲ ಪುಡಿಪುಡಿಮಾಡಿ ಒಗೆದನು. ಆಗ ಜಂಭನು ಶೈಲಾಸ್ತ್ರವನ್ನು ಬಿಟ್ಟು ತ್ವಾಷ್ಟ್ರಾಯುಧವನ್ನು ನಾಶಪಡಿಸಿ, ವೈರಿಗಳ ತಲೆಯ ಮೇಲೆ ಕಲ್ಲಿನ ಮಳೆಗರೆದನು. ಅದಕ್ಕೆ ಪ್ರತಿಯಾಗಿ ದೇವೇಂದ್ರನು ವಜ್ರಾಸ್ತ್ರವನ್ನು ಬಿಟ್ಟು ಆ ಪಾಷಾಣವೃಷ್ಟಿಯನ್ನು ತಡೆದನು. ಬಳಿಕ ಜಂಭನು ಐಷೀಕಾಸ್ತ್ರವನ್ನುಪ್ರಯೋಗಿಸಿ, ಇಂದ್ರನ ವಜ್ರಾಸ್ತ್ರವನ್ನು ಶಮನಗೊಳಿಸಿದನು. ಅದಕ್ಕೆ ಪ್ರತಿಯಾಗಿ ಇಂದ್ರನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದಕ್ಕೆ ಪ್ರತಿಯಾಗಿ ಜಂಭಾಸುರನ ವರುಣಾಸ್ತ್ರ, ಅದಕ್ಕೆ ಇಂದ್ರನ ವಾಯವ್ಯಾಸ್ತ್ರ ಜಂಭಾಸುರನ ಪರ್ವತಾಸ್ತ್ರ ಹೀಗೆ ಒಂದಕ್ಕೊಂದು ಪ್ರತಿಯಾಗಿ ಘೋರ ಅಸ್ತ್ರಗಳು ಮೆರೆದು ಉರಿದವು.

ದೈತ್ಯವೀರನಾದ ಜಂಭಾಸುರನು ಮುಂದೆ ದೊಡ್ಡ ಹತ್ತು ಯೋಜನ ವಿಸ್ತಾರವಾದ ಪರ್ವತದ ರೂಪ ತಾಳಿ ದೇವತೆಗಳ ಮೇಲೆ ಬೀಳಬೇಕೆಂದು ಹೊಂಚುಹಾಕಿದನು. ಅದನ್ನು ತಿಳಿದು ದೇವತೆಗಳು ನಡುಗಿದರು. ಆಗ ಸುರರಾಜನು ಬರಸಿಡಿಲನ್ನೇ ಅಸ್ತ್ರವನ್ನಾಗಿ ಮಾಡಿ ಜಂಭನ ಮಾಯಾರೂಪವನ್ನು ನಾಶಪಡಿಸಿದನು. ಆದರೂ ಜಂಭನು ಧೈರ್ಯಗೆಡದೆ, ಆನೆಯ ರೂಪದಿಂದ ದೇವಸೇನೆಯನ್ನು ಕೋರೆಯಿಂದ ಇರಿದು, ಸೊಂಡೆಯಿಂದ ಹೊಡೆದು, ಕಾಲಿನಿಂದ ತುಳಿದು ಕೊಲ್ಲಹತ್ತಿದನು. ಆಗ ದೇವೇಂದ್ರನಿಗೆ ತಟ್ಟನೆ ನರಸಿಂಹದೇವರ ನೆನಪಾಗಿ ಆ ನರಸಿಂಹ ಮಂತ್ರವನ್ನು ಪಠಿಸಿದನು. ಅದರಿಂದ ಅಲ್ಲಿಯೇ ಸಾವಿರಾರು ಸಿಂಹಗಳು ಹುಟ್ಟಿ ದೈತ್ಯರನ್ನು ಸೀಳತೊಡಗಿದವು. ಜಂಭನ ಆನೆಯ ಶರೀರವು ತಾನಾಗಿಯೇ ಅಳಿದುಹೋಯಿತು. ಆಗ ಜಂಭನು ಮಾಯಾ ಗಜದ ರೂಪ ಬಿಟ್ಟು, ಹಾವಿನ ರೂಪ

ತೆಗೆದುಕೊಂಡು ವಿಷವನ್ನು ಕಕ್ಕತೊಡಗಿದನು. ಅದಕ್ಕೆ ಪ್ರತಿಯಾಗಿ ದೇವೇಂದ್ರನು ಗರುಡಾಸ್ತ್ರವನ್ನುಪ್ರಯೋಗಿಸಿ ಆ ಸರ್ಪಮಾಯೆಯನ್ನು ಅಡಗಿಸಿದನು. ಆಗ ಜಂಭನು ಮತ್ತೆ ವಿಚಾರಮಾಡಿ, ಮಹಾರೂಪವನ್ನು ತಾಳಿದನು. ಬಾನಿನಗಲ ಬಾಯಿ ತೆರೆದು ರಾಕ್ಷಸ ರೂಪದಿಂದ ದೇವತೆಗಳನ್ನೆಲ್ಲ ನುಂಗತೊಡಗಿದನು. ಅದನ್ನು ನೋಡಿ ಇಂದ್ರನಿಗೂ ಗಾಬರಿಯಾಗಿ ಶ್ರೀಹರಿಯನ್ನು ಪ್ರಾರ್ಥಿಸಿದನು. ''ಸ್ವಾಮಿ ಇನ್ನೇನು ಮಾಡೋಣ ? ಈ ದಾನವನ ಕೈಯಿಂದ ನಾವು ಪಾರಾಗುವ ಬಗೆಯೆಂತು ?'' ಎಂದು ಕೇಳಿಕೊಂಡನು.

ಆ ಕಾಲದಲ್ಲಿ ಮಧುಸೂದನನು ಆ ಮಹೇಂದ್ರನ ಮೈಯಲ್ಲಿ ಉತ್ಸಾಹ ತುಂಬಿ ''ದೇವರಾಜಾ, ಹೇಡಿಯಂತೆ ಯುದ್ಧಬಿಟ್ಟು ಓಡಿಹೋಗಬೇಡ. ನಾರಾಯಣಾಸ್ತ್ರವನ್ನು ಪ್ರಯೋಗಿಸು' ಎಂದು ಅಪ್ಪಣೆಯಿತ್ತನು.

ಅದರಂತೆ ಆ ಸ್ವರ್ಗಾಧಿಪತಿಯು ನಾರಾಯಣಾಸ್ತ್ರವನ್ನು ಪ್ರಯೋಗಿಸಿದ ಕೂಡಲೇ ಜಂಭಾಸುರನು ರಣರಂಗವನ್ನು ಬಿಟ್ಟೇ ಓಡಿಹೋದನು. ಆಕಾಶದಲ್ಲಿ ಅಡಗಿ ಅದೃಶ್ಯನಾಗಿಯೇ ದೇವತೆಗಳ ಮೇಲೆ ಶಸ್ತ್ರಾಸ್ತ್ರಗಳ ಮಳೆ ಸುರಿಸಿ, ಅಸಂಖ್ಯ ಸುರನನ್ನು ಕೊಂದುಹಾಕಿದನು. ಈ ಅಸ್ತ್ರಗಳು ಎಲ್ಲಿಂದ, ಯಾವ ದಿಕ್ಕಿನಿಂದ ಯಾರಿಂದ ಹೇಗೆ ಬರುತ್ತವೆ ? ಎಂಬುದು ತಿಳಿಯದೆ, ಸುರೋತ್ತಮರೆಲ್ಲರೂ ತಲ್ಲಣಿಸಿ ಹೋದರು. ನೋಡಿದಲ್ಲೆಲ್ಲ ತಲೆ, ತೋಳು, ತೊಡೆ, ರುಂಡ, ಮುಂಡ, ದಂಡ, ತುಂಡು ತುಂಡಾದ ಆನೆ, ಕುದುರೆ, ಪುಡಿ ಪುಡಿಯಾದ ತೇರು, ನುಚ್ಚು ನೂರಾದ ಕವಚ ಕುಂಡಲ, ಕಿರೀಟಗಳು, ರಣಭೂಮಿಯಲ್ಲೆಲ್ಲ ಸೂರೆಯಾದವು ಹೆಣಗಳ ರಾಶಿ ಪರ್ವತಪ್ರಾಯವಾಗಿ ಬಿದ್ದು ರಕ್ತದ ಮಡುಗಳಲ್ಲಿ ಮಾಂಸದ ಕರಳುಗಳು ತೇಲಿ ಅಲ್ಲಿ ಓಡಾಡುವದೇ ಕಠಿಣವಾಯಿತು. ನರಿ ನಾಯಿಗಳಿಗೆ, ಭೂತ ಪ್ರೇತಗಳಿಗೆ ಮೃಷ್ಟಾನ್ನ ಭೋಜನ ದೊರೆಯಿತು.

ದೇವತೆಗಳ ಈ ದುರವಸ್ಥೆಯನ್ನು ಕಂಡು ಶ್ರೀಹರಿಯು ಮತ್ತೆ ಇಂದ್ರನನ್ನು ಕರೆದು ''ಇಂದ್ರ ಇನ್ನು ತಡಮಾಡಬೇಡ. ಆ ಜಂಭಾಸುರನ ಮೇಲೆ ಬ್ರಹ್ಮಾಸ್ತ್ರವನ್ನು ಬಿಡು'' ಎಂದು ಆಜ್ಞೆಯಿತ್ತನು. ಭಗವಂತನ ಅಪ್ಪಣೆಯಂತೆ ದೇವೇಂದ್ರನು ಧ್ಯಾನಮಾಡಿ ಬ್ರಹ್ಮಾಸ್ತ್ರವನ್ನು ಜಂಭಾಸುರನ ಮೇಲೆ ಪ್ರಯೋಗಿಸಿದನು. ಅದನ್ನು ಕಂಡ ಕೂಡಲೇ, ಜಂಭಾಸುರನ ಜಂಘಾಬಲವೇ ಉಡುಗಿಹೋಯಿತು. ಅವನ ಮಾಯಾಶಕ್ತಿ ಅಡಗಿ ಹೋಯಿತು. ದೇಹವೆಲ್ಲ ನಡುಗಿ ಹೋಯಿತು. ಅರೆಚಣದಲ್ಲಿ ಆ ಬ್ರಹ್ಮಾಸ್ತ್ರವು ರಕ್ತದ ಓಕುಳಿಯಾಡಿ ಆ ದುರುಳ ದಾನವನನ್ನು ಸುಟ್ಟುಹಾಕಿತು.

ದೈತ್ಯಸೇನಾಪತಿಯಾದ ಜಂಭನು ಮರಣಹೊಂದಿದ ಕೂಡಲೇ ದೈತ್ಯರೆಲ್ಲರೂ ದಿಕ್ಕುಪಾಲಾಗಿ ಓಡಿಹೋದರು. ತಾರಕಾಸುರನಿದ್ದಲ್ಲಿ ಬಂದು ತಮ್ಮ ದುರವಸ್ಥೆಯನ್ನು ಹೇಳಿಕೊಂಡರು. ಕೂಡಲೇ ಆ ದೈತ್ಯರಾಜನು ಸಾವಿರ ಗರುಡ ಪಕ್ಷಿಗಳನ್ನು ಹೂಡಿದ ತೇರನ್ನು ಏರಿಕೊಂಡು ಯುದ್ಧಕ್ಕೆ ಬಂದನು. ದೇವೇಂದ್ರನು ಲೋಕಪಾಲಕರು ಹಾಗೂ ಗಂಧರ್ವವೀರರೂ ಮತ್ತು ದೇವತಾ ಧುರೀಣರೊಂದಿಗೆ ತಾರಕಾಸುರನನ್ನು ಎದುರಿಸಿದನು. ಎಲ್ಲರೂ ಒಂಬತ್ತು ಒಂಬತ್ತು ಬಾಣಗಳನ್ನು ಆ ದೈತ್ಯೇಂದ್ರನ ಮೇಲೆ

ಎಸೆದರು. ಅವೆಲ್ಲ ಅಗ್ನಿಬಾಣಗಳನ್ನು ಗಮನಿಸದೇ ದೈತ್ಯನು ಪ್ರತಿಯಾಗಿ ತಾನೂ ಬಾಣ ಬಿಟ್ಟವರ ಪ್ರತಿಯೊಬ್ಬರ ಮೇಲೆ ಅಷ್ಟೇ ಬಾಣಗಳನ್ನು ಹೊಡೆದು ಹಿಮ್ಮೆಟ್ಟಿಸಿದನು. ಉಳಿದ ದೇವತೆಗಳು ಪುಂಖಾನುಪುಂಖವಾಗಿ ಅಸಂಖ್ಯ ಬಾಣಗಳನ್ನು ಬಿಟ್ಟರೂ ಅವು ಆ ದೈತ್ಯನ ಮೈಮುಟ್ಟಲಿಲ್ಲ. ದಾರಿಯಲ್ಲಿಯೇ ತಾರಕನು ಅವುಗಳನ್ನೆಲ್ಲ ಕತ್ತರಿಸಿ ಹಾಕಿದನು.

ತಿರುಗಿ ತಾರಕನು ಇಂದ್ರನ ಮೇಲೆ ನೂರು, ನಾರಾಯಣನ ಮೇಲೆ ಎಪ್ಪತ್ತು, ಅಗ್ನಿಯ ಮೇಲೆ ತೊಂಭತ್ತು. ವಾಯುವಿನ ತಲೆಗೆ ಹತ್ತು, ಯಮನ ತಲೆಗೆ ಹತ್ತು, ಕುಬೇರನ ಮೇಲೆ ಎಪ್ಪತ್ತು. ನಿರುತಿಯ ಮೇಲೆ ಇಪ್ಪತ್ತು ಬಾಣಗಳನ್ನು ಬಿಟ್ಟನು. ಮೂರು ಬಾಣಗಳಿಂದ ಇಂದ್ರನ ಸಾರಥಿಯಾದ ಮಾತಲಿಯನ್ನು ಬಗೆಗೆಡಸಿದನು. ಗರುಡನ ಮೈ ಸೀಳಿದನು. ವಿಷ್ಣುವಿನ ಕೈಯಲ್ಲಿಯ ಶಾರ್ಙ ಧನುಸ್ಸನ್ನು ಕಡಿದು ಕೆಳಗೆ ಕೆಡವಿದನು. ಯಮನನ್ನು ಇರಿದನು. ವರುಣನ ಬೆಳ್ಗೊಡೆಯನ್ನು ಮುರಿದನು. ವಾಯುವನ್ನು ಹಾರಿಸಿದನು. ಹರಿಯನ್ನು ಮೂರ್ಛೆಗೊಳಿಸಿದನು. ದೇವತೆಗಳ ಸೈನ್ಯವನ್ನು ಇಷ್ಟು ಭಯಂಕರವಾಗಿ ಈವರೆಗೆ ಯಾರೂ ಹೊಡೆದು ಗಾಯಗೊಳಿಸಿರಲಿಲ್ಲ.

ಇದನ್ನೆಲ್ಲ ಕಂಡು, ವಿಷ್ಣುವು ಮುಂದಾಗಿ ತಾರಕನನ್ನು ನಿಗ್ರಹಿಸಲು ಹೊರಟನು. ಬಾಣ ಬಿಟ್ಟು, ತಾರಕನ ಸಾರಥಿಯನ್ನು ಸಂಹರಿಸಿದನು. ಅದರಿಂದ ಹುರುಪುಗೊಂಡು, ಇಂದ್ರನು ಬಾಣಬಿಟ್ಟು, ತಾರಕಾಸುರಾನ ಕಿರೀಟವನ್ನು ಹಾರಿಸಿದನು. ಕುಬೇರನು ದೈತ್ಯನ ಧನುಸ್ಸಿನ ದಾರವನ್ನು ಕಡಿದನು. ಯಮನು ಅವನ ಕವಚ ಸೀಳಿದನು. ವಾಯುವು ತಾರಕನ ತೇರಿನ ಗಾಲಿಗಳನ್ನು ಪುಡಿಗೈದನು.

ದೇವೋತ್ತಮರ ಈ ಸಾಮೂಹಿಕ ಆಕ್ರಮಣ ಕಂಡು ರೊಚ್ಚಿಗೆದ್ದ ತಾರಕಾಸುರನು ಉಕ್ಕಿನ ಮುದ್ಗರವನ್ನೆತ್ತಿ ದೇವೇಂದ್ರನ ರಥದ ಮೇಲೆ ತೂರಿದನು. ಅದನ್ನು ಕಂಡು ಇಂದ್ರನು ಮಾತಲಿಯೂ ಗಾಬರಿಯಾಗಿ ರಥದಿಂದ ಧುಮುಕಿದರು. ರಥವು ಮಾತ್ರ ಪುಡಿ ಪುಡಿ ಆಯಿತು. ಇಂದ್ರ, ಅವನ ಸಾರಥಿ ಪಾರಾದರು. ಅನಂತರ ತಾರಕಾರಸುರನು 'ಪಟ್ಟಿಶ'. ಎಂಬ ಶಸ್ತ್ರದಿಂದ ವಿಷ್ಣುವಿನ ಎದೆಗೆ ಪ್ರಹರಿಸಿದನು. ಅವನು ಮೂರ್ಛೆಹೋದಂತೆ ತೋರಿಸಿದ. ಮತ್ತೊಂದು ಅಸ್ತ್ರದಿಂದ ಯಮನನ್ನು ರಥದಿಂದ ಕೆಳಗೆ ಉರುಳಿಸಿದ. ಇನ್ನೊಂದರಿಂದ ಅಗ್ನಿಯ ತಲೆಗೆ ಹೊಡೆತ ಹಾಕಿದ, ಮತ್ತೊಂದರಿಂದ ವಾಯುದೇವನನ್ನು ಎತ್ತಿ ನೆಲಕ್ಕೆ ಎಸೆದ, ಕುಬೇರನ ತಲೆಯ ಮೇಲೆ ಬಿಲ್ಲಿನ ಹಿಂಭಾಗದಿಂದ ಕುಟ್ಟಿದ.

ಮುಂದೆ ಕೆಲ ನಿಮಿಷಗಳ ಮೇಲೆ ಮೂರ್ಛೆ ತಿಳಿದೆದ್ದವರಂತೆ ನಟಿಸಿ ವಿಷ್ಣುವು ತಾರಕಾಸುರನ ಎದೆಗೆ ಮೃದುವಾಗಿ ಗುರಿಯಿಟ್ಟು ಸುದರ್ಶನ ಚಕ್ರ ಬಿಟ್ಟ. ಕಲ್ಲಿನ ಮೇಲೆ ಕಮಲವನ್ನು ಅಪ್ಪಳಿಸಿದಂತೆ ಆ ಚಕ್ರದಿಂದ ದೈತ್ಯನ ಮೈಗೆ ಏನೂ ಗಾಯವಾಗದೆ, ಆ ಚಕ್ರವೇ ಸೀಳಿ ಹೋಳಾದಂತೆ ತೋರಿತು. ಇದರಂತೆ ದೇವೇಂದ್ರನು ತಾರಕನ ಮೇಲೆ ಪ್ರಯೋಗಿಸಿದ ವಜ್ರಾಯುಧವು ಖಂಡತುಂಡಾಗಿ ಕೆಳಗೆ ಬಿದ್ದಿತು. ವಾಯುವಿನ ಅಂಕುಶ ಮುರಿಯಿತು. ಅದರಿಂದ ಸಿಟ್ಟಿಗೆದ್ದ ವಾಯುದೇವನು ಐದು ಯೋಜನ ವಿಸ್ತಾರವಾದ ಒಂದು ದೊಡ್ಡ ಬೆಟ್ಟವನ್ನೆ ಕಿತ್ತಿ ಆ ದೈತ್ಯನ ಮೇಲೆ ಈಡಾಡಿದನು. ಮಗು ಚೆಂಡನ್ನು

ಹಿಡಿದು ತೂರಾಡುವಂತೆ, ತಾರಕನು ಆ ಬೆಟ್ಟವನ್ನು ಎಡಗೈಯಿಂದ ಹಿಡಿದು ದೂರ ಬೀಸಿ ಒಗೆದನು. ಯಮದೇವರು ತೂರಿ ಒಗೆದ ಮೃತ್ಯುದಂಡವು ತಾರಕಾಸುರನ ಕೂದಲನ್ನು ಕೊಂಕಿಸಲಿಲ್ಲ. ಅಗ್ನಿಯು ಬಿಟ್ಟ ಶಕ್ತ್ಯಾಯುಧವಂತೂ ಆ ದೈತನ ಎದೆಯ ಮೇಲೆ ಹೂವಿನ ಮಾಲೆಯಂತೆ ಶೋಭಿಸಿತು. ವರುಣನು ಬೀಸಿದ ನಾಗಪಾಶವು ಅವನ ಮೈ ಮುಟ್ಟಿದ ಕೂಡಲೇ ನಾಶವಾಗಿ ಹೋಯಿತು.

ಇದರಂತೆ ಅಶ್ವಿನೀ ದೇವತೆಗಳು, ಮರುತರು, ಸಾಧ್ಯರು, ನಾಗರು, ಯಕ್ಷರು ಕಿನ್ನರರು ಗಂಧರ್ವರೆಲ್ಲರೂ ಕೂಡಿ ಅಸ್ತ್ರಪ್ರಯೋಗ ಮಾಡಿದರೂ ವಜ್ರಪರ್ವತದಂತಿದ್ದ ಅವನ ಮೈಮೇಲೆ ಒಂದೂ ನಾಟದೆ ಎಲ್ಲವೂ, ಮುರಿದು ಮುಟಿಗೆಯಾಗಿ ಮೊಂಡು ತುಂಡಾಗಿ ಬಿದ್ದು ಹೋದವು. ಅನಂತರ ಆ ದೈತ್ಯನು ತಾನೇ ರಥದಿಂದ ಕೆಳಗೆ ಧುಮುಕಿ ದೇವತೆಗಳ ಹಿಂಡಿನಲ್ಲಿ ಸಿಕ್ಕವರನೆತ್ತಿ ಕುಕ್ಕಿದನು. ಮೈಯಿಂದ ಹರಿದ ನೆತ್ತರವನ್ನು ನೆಕ್ಕಿದನು. ಸಿಕ್ಕ ಸಿಕ್ಕವರನ್ನೆಲ್ಲ ತಿಕ್ಕಿ ಮುಕ್ಕಿದನು. ಆ ದಾನವೇಂದ್ರನ ದಾರುಣ ಧಾಳಿಗೆ ತುತ್ತಾಗಿ ಇಂದ್ರ, ವಿಷ್ಣು, ವರುಣ, ಕುಬೇರ, ಮೊದಲಾದ ದೇವತೆಗಳೆಲ್ಲರೂ ಕೈಸೆರೆಯಾದರು. ಅವರೆಲ್ಲರನ್ನು ಈ ರೀತಿ ದೇವಾಧಿದೇವತೆಗಳನ್ನು ಹಗ್ಗದಿಂದ ಹೆಡಮುರಿಗೆ ಕಟ್ಟಿ, ಪುನಃ ತಾನು ರಥಾರೂಢನಾಗಿ ಜಯದುಂದುಭಿ ಮೊಳಗಿಸುತ್ತ ತಾರಕಾಸುರನು ತನ್ನ ರಾಜಧಾನಿಗೆ ನಡೆದನು.

ಪದ್ಮರಾಗಮಣಿಯ ದಿವ್ಯಸಿಂಹಾಸನದಲ್ಲಿ ಕುಳಿತು, ತನ್ನ ಎಲ್ಲ ದೈತ್ಯದಾನವರೊಂದಿಗೆ ಅವನು ವಿಜಯೋತ್ಸವವನ್ನು ಆಚರಿಸಿದನು. ಆಗ ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ನಾಗಕನ್ನಿಕೆಯರು ಕೊಂಡಾಡಿದರು. ಅವರ ಈ ಪ್ರಶಂಸಾ ಗೀತೆಗಳಿಗೆ ತಾರಕಾಸುರನು ತಲೆದೂಗಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದನೂರಾಐವತ್ತೈದನೆಯ ಅಧ್ಯಾಯ ಮುಗಿದುದು.*



## ಶಿವಪಾರ್ವತಿಯರ ಸಂಸಾರದಲ್ಲಿ ಸರಸ ವಿರಸ | ಅಧ್ಯಾಯ - ೧೫

**ಸೂತ ಉವಾಚ**

**ಪ್ರಾದುರಾಸೀತ್ಪ್ರತೀಹಾರಃ ಶುಭ್ರ ನೀಲಾಂಬುಜಾಂಬರಃ ।**
**ಸಜಾನುಭ್ಯಾಂ ಮಹೀಂಗತ್ವಾ ಪಿಹಿತಾಸ್ಯಃ ಸ್ವಪಾಣಿನಾ ॥**

**ಸೂತ:-** ತಾರಕಾಸುರನ ಆಸ್ಥಾನವನ್ನು ನೈದಿಲೆ ಬಣ್ಣದ ನೀಲಬಟ್ಟೆ ಉಟ್ಟು, ದ್ವಾರಪಾಲಕ ಒಳಗೆ ಪ್ರವೇಶಿಸಿದ. ಮಂಡೆಯೂರಿ ಮಹಾರಾಜನಿಗೆ ನಮಿಸಿದ. ಕೈದೆರಳುಗಳನ್ನು ತುಟಿಯ ತುದಿಗೆ ತಂದು, ಬಾಯಿ ಮುಚ್ಚಿಕೊಂಡು ಮೆಲ್ಲನೆ ಕುರಿತು ಅಂದ. "ಪ್ರಭು, ಕಾಲನೇಮಿಯು ಸೆರೆಸಿಕ್ಕಿದ ದೇವತೆಗಳನ್ನು ಕಟ್ಟಿತಂದು ಬಾಗಿಲಲ್ಲಿ ನಿಂತಿದ್ದಾನೆ. ಈ ಸೆರೆಯಾಳುಗಳಾದ ಸುರರನ್ನು ಎಲ್ಲಿ ಇರಿಸಬೇಕು ? ಎಂದು ಕೇಳುತ್ತಿದ್ದಾನೆ."

ಆ ಮಾತನ್ನು ಕೇಳಿ, ಆ ದೈತ್ಯರಾಜನು "ಎಲ್ಲಿ ಬೇಕಾದರೂ ಅವರು ಇರಬಹುದು. ಮೂರು ಲೋಕಗಳೂ ನನ್ನವೇ ? ಇವರೆಲ್ಲರ ಕೈಕಾಲುಗಳಿಗೆ ಕಟ್ಟಿದ ಪಾಶಗಳನ್ನು ಬಿಟ್ಟುಬಿಡಿರಿ. ನನಗೆ ಗೊತ್ತಾಗದಂತೆ ಅವರು ಎಲ್ಲಿಗೆ ಹೋಗಬಲ್ಲರು ?"

ತಾರಕಾಸುರನ ಆದೇಶದಂತೆ ದೈತ್ಯರು ದೇವತೆಗಳನ್ನು ಬಿಟ್ಟುಬಿಟ್ಟರು. ಆಗ ಖೇದಗೊಂಡ ಸುರರೆಲ್ಲರೂ ಜಗದ್ಗುರುವಾದ ಬ್ರಹ್ಮದೇವರನ್ನು ಕಾಣಲು ಸತ್ಯಲೋಕಕ್ಕೆ ತೆರಳಿದರು. ನೆಲಮುಟ್ಟಿ ನಮಸ್ಕಾರಮಾಡಿ, ಬ್ರಹ್ಮದೇವರನ್ನು ತದಂತರ್ಗತ ಪರಬ್ರಹ್ಮನನ್ನು ಸ್ತೋತ್ರಮಾಡಿದರು. "ಸರ್ವವೇದಗಳ ಸಾರವೆನಿಸಿದ ಓಂಕಾರಸ್ವರೂಪವೇ ನೀನು. ಚರಾಚರವಾದೀ ಪ್ರಪಂಚವನ್ನು ಸೃಷ್ಟಿಮಾಡಲಿಕ್ಕಾಗಿ ವಿಶ್ವವ್ಯಾಪಿಯಾದ ನೀನು ಬ್ರಹ್ಮರೂಪದಿಂದ ಅಭಿವ್ಯಕ್ತನಾದೆ. ನಿನ್ನಿಂದ ಸೃಷ್ಟಿಯಾದ ಈ ಪ್ರಪಂಚವನ್ನು ಸತ್ವಮೂರ್ತಿಯಾಗಿ ವಿಷ್ಣುರೂಪದಿಂದ ನೀನೇ ಸಂರಕ್ಷಿಸುವೆ. ಕೊನೆಗೆ ಈ ಪ್ರಪಂಚವನ್ನೆಲ್ಲ ಸಂಹರಿಸಬೇಕೆಂಬ ಇಚ್ಛೆಯಿಂದ ರುದ್ರಾವತಾರವನ್ನು ತಾಳಿ ಜಗದಂತಕನಾಗುವೆ. ಹೀಗೆ ಹರಿಹರಬ್ರಹ್ಮಾದಿ ರೂಪಗಳಿಂದ ಜಗತ್ತಿನ ಸೃಷ್ಟಿ ಸಂಹಾರ, ಸಂರಕ್ಷಣ, ಮಾಡುವ ಭಗವಂತನೇ ನಿನಗೆ ಅನಂತ ವಂದನೆಗಳು ಹೀಗೆ ಬಗೆಬಗೆಯಿಂದ ದೇವತೆಗಳು ಹೊಗಳಿ ಹಾಡಿ ಕೊಂಡಾಡಿದ ಬಳಿಕ ಬ್ರಹ್ಮದೇವರು ಸುಪ್ರಸನ್ನನಾಗಿ, ಇಂತು ನುಡಿದನು.

"ದೇವೇಂದ್ರ, ಪತಿಯಿಲ್ಲದ ಪ್ರಮದೆಯ ಮುಖದಂತೆ ನಿನ್ನ ಮುಖವು ಇಷ್ಟೇಕೆ ಕಳೆಗುಂದಿದೆ ? ನೀನು ನಿಶ್ಚೇತನನಂತಾಗಿರುವೆ. ರೋಗವಾವುದು ತಗಲಿಲ್ಲ ತಾನೆ ? ಇಷ್ಟೇಕೆ ಹೆದರಿದಂತೆ ಮಾತನಾಡುವೆ ? ವರುಣನಂತೂ ತನ್ನ ಪಾಶಗಳಿಂದಲೇ ಬದ್ಧನಾದಂತೆ ಬಾಡಿಹೋಗಿದ್ದಾನೆ. ವಾಯುದೇವಾ, ಎಷ್ಟು ಸೋತು ಹೋಗಿರುವೆಯಲ್ಲ ? ಓ... ರುದ್ರರೆ, ನಿಮ್ಮ ಕೈಯಲ್ಲಿಯ ಶೂಲ ಎದೆಯಲ್ಲಿಯ ಶೂಲಕ್ಕೆ ಸಂಕೇತವಾದಂತಿದೆ. ಸೂರ್ಯಾ, ನಿನ್ನ ಪ್ರಕಾಶವೇ ಅಡಗಿ ಹೋಗಿದೆಯಲ್ಲ ? ಹೀಗೆ ನೀವೆಲ್ಲ ದೇವತೆಗಳ ಈ ದೈನ್ಯ ಹಾಗೂ ಕಾಂತಿಹೀನತೆಗೆ ಕಾರಣವೇನು ?"

''ಬ್ರಹ್ಮದೇವರ ಈ ಮಾತುಗಳನ್ನು ಕೇಳಿ, ಎಲ್ಲ ದೇವತೆಗಳು ವಾಯುದೇವರಿಗೆ ತಮ್ಮ ಅಭಿಪ್ರಾಯವನ್ನು ವಾಣೀಪತಿಗೆ ತಿಳಿಸಲು ಬೇಡಿಕೊಂಡರು. ವಾಯುದೇವರ ಮಾತುಗಾರಿಕೆ, ಜಾಣ್ಮೆ, ಎಲ್ಲರಿಗೂ ತಿಳಿದದ್ದೆ. ಆಗ ದೇವತೆಗಳ ಅಭಿಪ್ರಾಯವನ್ನು ಅವರ ಕೋರಿಕೆಯಂತೆ ವಾಯುದೇವರು ಚತುರ್ಮುಖನಿಗೆ ತಿಳಿಸಿದರು.

''ಪಿತಾಮಹಾ, ಚರಾಚರಾತ್ಮಕವಾದ ಸರ್ವಜೀವಜಂತುಗಳ ಮನಸ್ಸಿನಲ್ಲಿ ಅಭಿಪ್ರಾಯವೇನೆಂಬುದು ನಿನಗೆ ತಿಳಿದೇ ಇದೆ. ಆದರೂ ನೀನು ಕೇಳಿದ್ದರಿಂದ ದೇವತೆಗಳು ಬಂದ ಉದ್ದೇಶವನ್ನು ತಿಳಿಸುತ್ತೇನೆ. ವಜ್ರಾಂಗದೈತ್ಯನ ಮಗನಾದ ತಾರಕಾಸುರನು ನಿನ್ನ ವರದ ಪ್ರಭಾವದಿಂದ ಅತ್ಯಂತ ಬಲಿಷ್ಠನಾಗಿ ಚರಾಚರ ವಿಶ್ವವನ್ನೇ ಧ್ವಂಸಗೈಯುತ್ತಿದ್ದಾನೆ ನೀನು ಅವನನ್ನು ಇಷ್ಟು ದುಷ್ಟನನ್ನಾಗಿ ಏಕೆ ಮಾಡಿದೆ ? ದುಷ್ಟನನ್ನು ಮಾಡಿದ ಮೇಲೆ ಎಲ್ಲರಿಗೂ ಕಷ್ಟ ಕೊಡುವಷ್ಟು ಬಲಿಷ್ಠನನ್ನಾಗಿ ಏಕೆ ಮಾಡಿದೆ ? ನಿನ್ನ ವರದ ಬಲದಿಂದ ದೇವತೆಗಳ ವಿಮಾನಗಳನ್ನೆಲ್ಲಾ ಕದ್ದಿದ್ದಾನೆ. ಸ್ವರ್ಗದ ಸುಂದರವಾದ ನಾಡನ್ನು ಕಾಡು ಕೊಂಪೆಯನ್ನಾಗಿಸಿದ್ದಾನೆ. ದೇವತೆಗಳ ವಿಹಾರಸ್ಥಳವಾದ ಮೇರುಪರ್ವತದ ಶಿಖರಗಳನ್ನೆಲ್ಲ ಮುರಿದು ಅಲ್ಲಿಯ ರತ್ನಗಳನ್ನೆಲ್ಲ ಸೂರೆಗೈದಿದ್ದಾನೆ. ನೀನು ಕೊಟ್ಟ ದೇವತೆಗಳ ಆಯುಧಗಳೆಲ್ಲವೂ ತಾರಕನ ಮೇಲೆ ಪ್ರಯೋಗಿಸಿದಾಗ ಮೊಂಡ ತುಂಡಾಗಿ ಬಿದ್ದಿವೆ. ಚಳಿ ಮಳೆಗಳಲ್ಲಿ ನಾವು ಆ ದಾನವೇಶ್ವರನ ದ್ವಾರದ ಬಳಿ ದೀನರಾಗಿ, ಕಾದುಕೊಂಡು ಕುಳಿತಿರುವೆವು.

ಆ ದೈತ್ಯರಾಜನ ಸಭೆಯಲ್ಲಿ ನಮಗೆಲ್ಲ ಕೊನೆಯ ಸ್ಥಾನ. ಅವನ ಸೇವಕರು, ತಾರಕನ ಸೇವಕರು ನಮ್ಮನ್ನೆಲ್ಲ ಅಪಹಾಸ್ಯಮಾಡುವರು. ಗಂಧರ್ವರು ಕಿನ್ನರರು ಹಗಲಿರುಳು ಅವನನ್ನೇ ಹಾಡಿ ಕೊಂಡಾಡಬೇಕಾಗಿದೆ. ಆ ದುಷ್ಟ ದಾನವನಿಗೆ ಹಿರಿಯರೆಂಬ ಗೌರವವಿಲ್ಲ. ಕಿರಿಯರೆಂಬ ಕರುಣೆಯಿಲ್ಲ. ಮೊರೆಹೊಕ್ಕವರನ್ನು ಕಾಯುವದಿಲ್ಲ. ನ್ಯಾಯ, ಸತ್ಯ, ನೇಮ, ನಿಬಂಧನೆ ಯಾವುದೂ ಅವನಿಗೆ ಇಲ್ಲ. ಇಂತಹ ನೀತಿಭ್ರಷ್ಟ, ಸ್ವಭಾವದುಷ್ಟನಾದ ತಾರಕಾಸುರನಿಗೆ ಈಗ ಮೂರುಲೋಕದ ಆಧಿಪತ್ಯವೇ ದೊರೆತಿದೆ. ಅವನ ಉಪದ್ರವದಿಂದ ನಾವೆಲ್ಲರೂ ಕಂಗೆಟ್ಟಿದ್ದೇವೆ. ಇದರ ಮೇಲೆ ತಮ್ಮ ನಿರ್ಣಯವೇ ನಮಗೆ ಪ್ರಮಾಣ.''

ದೇವತೆಗಳ ಈ ದುರವಸ್ಥೆಯನ್ನು ಕೇಳಿ ಬ್ರಹ್ಮದೇವರು ನಸುನಕ್ಕರು. ''ಈಗ ಈ ಜಗತ್ತಿನಲ್ಲಿ ಬದುಕಿದ್ದ ಯಾರೂ ತಾರಕಾಸುರನನ್ನು ಕೊಲ್ಲಲಾರರು, ಅವನನ್ನು ಸಂಹರಿಸಬಲ್ಲ ವೀರ ಇನ್ನೂ ಹುಟ್ಟಿಲ್ಲ. ಏಳು ದಿನದ ಮಗುವಿನಿಂದ ತನ್ನ ವಧೆ ಆಗಬೇಕೆಂದು ತಪಸ್ಸುಮಾಡಿ ಆ ದೈತ್ಯನು ನನ್ನನ್ನು ಕೇಳಿಕೊಂಡಿದ್ದಾನೆ. ಮಹಾದೇವನಿಂದ ಪಾರ್ವತಿಯಲ್ಲಿ ಹುಟ್ಟಲಿರುವ ಆ ಮಗುವೇ ತಾರಕಾಸುರನನ್ನು ಸಂಹರಿಸುವದು. ಆದರೆ ಆ ಮಹಾದೇವನಿಗೆ ಇನ್ನೂ ಮದುವೆಯೇ ಆಗಿಲ್ಲ. ಅವನಿಗೆ ಮಡದಿ ಆಗುವವಳು ಇನ್ನೂ ಹುಟ್ಟಿಲ್ಲ. ವರದ ಹಸ್ತಳಾಗಿ ಕೈಮೇಲೆ ಮಾಡಿಕೊಂಡು ಆ ಮಹಾತಾಯಿಯು ಹಿಮವಂತನ ಹೊಟ್ಟೆಯಿಂದ ಹುಟ್ಟಿಬರುವಳು. ಅವಳನ್ನು ಮಹಾದೇವನು ಮದುವೆ ಆಗುವನು. ಅನಂತರ ಆ ಶಿವನ ಸತಿಯಿಂದ ಸ್ಕಂದನು ಜನಿಸುವನು. ಅವನು ಯುದ್ಧಮಾಡಿ ತಾರಕಾಸುರನನ್ನು ಸಂಹರಿಸುವನು. ಅದಕ್ಕೆ

ಆಗಬೇಕಾದ ಉಪಾಯವನ್ನೆಲ್ಲ ನಾನು ಈಗಾಗಲೇ ಮಾಡಿಟ್ಟಿದ್ದೇನೆ. ನಿಮಗೆ ಈ ವಿಷಯದಲ್ಲಿ ಸಂದೇಹ ಬೇಡ. ಅದಕ್ಕೆ ಕಾಯುವದು ಮಾತ್ರ ಅನಿವಾರ್ಯ''.

ಬ್ರಹ್ಮದೇವರ ಈ ವಚನವನ್ನು ಕೇಳಿ ದೇವತೆಗಳಿಗೆ ತುಸು ಸಮಾಧಾನವಾಯಿತು. ಅವರೆಲ್ಲರೂ ನಮಸ್ಕರಿಸಿ ತಮ್ಮ ಸ್ಥಾನಗಳಿಗೆ ತೆರಳಿದರು. ದೇವತೆಗಳು ಅಲ್ಲಿಂದ ನಿರ್ಗಮಿಸಿದ ಬಳಿಕ ಲೋಕಪಿತಾಮಹ ಬ್ರಹ್ಮನು ರಾತ್ರಿಯ ಅಭಿಮಾನಿ ದೇವತೆಯಾದ ನಿಶಾದೇವಿಯನ್ನು ನೆನೆದನು. ಕೂಡಲೇ ಅವಳು ಬಂದು ಬ್ರಹ್ಮನಿಗೆ ಬಾಗಿ, ನಮಿಸಿ, ನಿಂತಳು. ಅವಳಿಗೆ ಬ್ರಹ್ಮನು ಏಕಾಂತದಲ್ಲಿ ಕೆಲವು ಮಾತುಗಳನ್ನು ಹೇಳಿದನು.

## ಕೆಂಪುಗೌರಿಯನ್ನು ಕರಿಕಾಳಿಯನ್ನಾಗಿ ಮಾರ್ಪಡಿಸು

''ನಿಶಾದೇವಿ, ಈಗ ನಿನ್ನಿಂದ ಒಂದು ದೊಡ್ಡ ದೇವತಾಕಾರ್ಯ ಆಗಬೇಕಾಗಿದೆ. ನನ್ನ ಅಪ್ಪಣೆಯಂತೆ ನೀನು ನೆರವೇರಿಸು. ಧರಾತಳದಲ್ಲಿ ತಾರಕ ದೈತ್ಯ ದೇವತೆಗಳಿಗೆ ಒಂದು ಧೂಮಕೇತು. ಅವರು ಅವನನ್ನು ಕೊಲ್ಲಲಾರರು, ಗೆಲ್ಲಲಾರರು. ದಕ್ಷನ ಮಗಳಾದ ಸತಿಯು ಹಿಂದೆ ಶಿವನ ಸತಿಯಾಗಿದ್ದಳಷ್ಟೇ ! ಕಾರಣಾಂತರದಿಂದ ಅವಳು ಕುಪಿತಳಾಗಿ ಮರಣ ಹೊಂದಿದಳು. ಪುನಃ ಅವಳು ಹಿಮಾಚಲ ಪರ್ವತದ ಪುತ್ರಿಯಾಗಿ ಮೇನೆಯ ಹೊಟ್ಟೆಯಿಂದ ಹುಟ್ಟಿ ಬರುವಳು. ದಾಕ್ಷಾಯಣಿಯ ವಿರಹದಿಂದ ಈಶ್ವರನಿಗೆ ಈಗ ಸಂಸಾರವೇ ಅಸಾರವೆನಿಸಿದೆ. ಅವನು ಈಗ ಹಿಮಗಿರಿಯ ಗುಹಾಗರ್ಭದಲ್ಲಿ ತಪಸ್ಸು ಮಾಡುತ್ತಲಿರುವನು. ಮುಂದೆ, ಆ ಪಾರ್ವತೀ ಪರಮೇಶ್ವರರು ವಿವಾಹಬಂಧನದಿಂದ ಮತ್ತೆ ಒಂದುಗೂಡುವರು. ಆ ದೇವದಂಪತಿಗಳ ವರಕುಮಾರನಾಗಿ ಕುಮಾರಸ್ವಾಮಿಯು ಅವತರಿಸುವನು. ಅವನೇ ತಾರಕಾಸುರನನ್ನು ಸಂಹರಿಸಿ ಜಗದೋದ್ಧಾರಮಾಡುವನು. ನೀನು ಪಾರ್ವತೀದೇವಿಯು ಮೇನಾದೇವಿಯ ಗರ್ಭದಿಂದ ಹುಟ್ಟುವ ಮೊದಲು ಒಂದು ಕೆಲಸ ಮಾಡಬೇಕು. ಪಾರ್ವತಿಯ ಸ್ವಾಭಾವಿಕ ಬಣ್ಣ ಬಂಗಾರದ ಬಣ್ಣ. ಆದರೆ ನೀನು ಗರ್ಭದಲ್ಲಿಯೇ ಅವಳಿಗೆ ನಿನ್ನ ಕರಿಬಣ್ಣವನ್ನು ಲೇಪಿಸಿ ಅವಳು ಕಾಳಿಯಾಗುವಂತೆ ಮಾಡು. ಇದರಿಂದ ಈಶ್ವರನು ಪ್ರಣಯ ಕಲಹದಲ್ಲಿ 'ಕರಿಕಾಂತೆ' ಎಂದು ಪರಿಹಾಸ ಮಾಡುವನು. ಅದರಿಂದ ನೊಂದುಕೊಂಡ ಶಿವೆಯು ಅವನನ್ನು ಅಂದರೆ ಶಿವನನ್ನು ಬಿಟ್ಟು ತಪಸ್ಸಿಗೆ ತೆರಳುವಳು. ತಪಸ್ಸು ಮಾಡಿ, ತನ್ನ ಸಹಜವಾದ ಸುವರ್ಣ ಕಾಂತಿಯನ್ನು ಮರಳಿ ಪಡೆಯುವಳು. ನೀನು ನಿನ್ನ ಒಂದು ರೂಪದಿಂದ ಪಾರ್ವತಿಯ ದೇಹದಲ್ಲಿಯೇ ಇದ್ದು ನಿಶಾದೇವಿ, ಏಕಾನಂಶಾ, ಮುಂತಾದ ಹೆಸರುಗಳಿಂದ ಲೋಕ ಪೂಜ್ಯಳಾಗುವೆ. ಬ್ರಹ್ಮಜ್ಞಾನಿಗಳು ನಿನ್ನನ್ನು **'ಗಾಯತ್ರಿ'**ಯೆಂದೂ, ಕ್ಷತ್ರಿಯರು **'ಊರ್ಜಿತಾಕಾರಾ'** ಎಂದೂ ವೈಶ್ಯರು **'ಭೂಹೂ'** ಎಂದೂ ಶೂದ್ರರು **'ಶೈವೀ'** ಎಂದೂ ಮುನಿಗಳು **'ಕ್ಷಾಂತಿ'** ಎಂದೂ ನಿನ್ನ ಪೂಜೆ ಮಾಡುವರು **'ದಯೆ'** ಎಂದೂ ನಿನ್ನನ್ನು ಪೂಜಿಸುವರು. ನಿನ್ನನ್ನು ಸ್ತೋತ್ರ ಮಾಡುವವರ, ಪೂಜಿಸುವವರ ಮನೋರಥಗಳೆಲ್ಲ ಪೂರ್ಣವಾಗುವವು.

ನಿಶಾದೇವಿಯು ಬ್ರಹ್ಮದೇವರ ಈ ಅಪ್ಪಣೆಗೆ ತಲೆಬಾಗಿ, ಒಪ್ಪಿಕೊಂಡು ಹಿಮಾಲಯದ ಮನೆಗೆ ನಡೆದಳು. ಆ ಪರ್ವತರಾಜನ ಪಟ್ಟದರಸಿಯಾದ ಮೇನೆಯನ್ನು ಅಂತಃಪುರದಲ್ಲಿ ಕಂಡಳು. ಮಂತ್ರಾಭಿಮಾನಿ ದೇವತೆಗಳು ಅವಳನ್ನು ಓಲೈಸುತ್ತಿದ್ದ

ರತ್ನದೀಪಗಳು. ರಕ್ಷೆಗಾಗಿ ಅಲ್ಲಲ್ಲಿ ಚೆಲ್ಲಿದ ಬಿಳಿ ಸಾಸುವೆ, ಸೇವೆಗಾಗಿ ಕೈಕಟ್ಟಿ ನಿಂತ ಚಿನ್ನದ ಗೊಂಬೆಯಂತಿದ್ದ ಚೆಲುವೆಯರು. ಅಲ್ಲಿಯೇ ಮೇಲ್ಗಡೆಗೆ ಹಂಸ ತುಪ್ಪಳದ ಹಾಸುಗೆ. ಅದರಮೇಲೆ ಬಿಳಿ ಬಣ್ಣದ ಮೇಲ್ವಾಸು. ಎಲ್ಲೆಡೆಗೂ ಗುಗ್ಗುಳು ಧೂಪಗಳ ನರುಗಂಪು, ಗಂಧ, ಕುಸುಮಗಳ ಸೂಸುವ ಸೌರಭ, ಅಲ್ಲಿದ್ದ ಗಂಡಸರಿಗೆಲ್ಲ ಮರನಿದ್ದೆ, ಹೆಣ್ಣು ಮಕ್ಕಳಿಗೆ ತೂಕಡಿಕೆ. ಅಕ್ಕಪಕ್ಕದ ಕೋಣೆಗಳಲ್ಲಿ ಗಾಢಾಲಿಂಗನದಲ್ಲಿದ್ದ ನವ ದಂಪತಿಗಳು. ನಡುಮನೆಯ ನಟ್ಟನಡುವೆ ಮಂಚದಮೇಲೆ ಮಿದುಹಾಸಿನಲ್ಲಿ ಮೇನಾದೇವಿಯು ಐದು ಮಲ್ಲಿಗೆ ತೂಕದ ಮೈಯನ್ನು ಒರಗಿಸಿ, ಕಂಗಳನ್ನು ಅರೆದೆರೆದಿದ್ದಳು. ಬ್ರಹ್ಮದೇವರ ಅಪ್ಪಣೆಯಂತೆ ವಿಭಾವರಿಯು ಗರ್ಭಿಣಿಯಾದ ಮೇನಾದೇವಿಯ ಮುಖವನ್ನು ಹೊಕ್ಕು ಅವಳ ಬಸಿರಿನಲ್ಲಿ ಇಳಿದಳು. ಪಾರ್ವತಿಯ ಅವತಾರವಾಗುವ ಮುನ್ನ ಮೇನೆಯ ಉದರದಲ್ಲಿ ಇರುವ ಆ ಜಗದಂಬೆಗೆ ತನ್ನ ಕಪ್ಪು ಮೈಬಣ್ಣವನ್ನು ಮೈ ತುಂಬ ಲೇಪಿಸಿದಳು.

## ಮೇನಾದೇವಿಯಲ್ಲಿ ಮಹಾದೇವಿಯ ಜನನ

ಮಂಗಳಮಯವಾದ ಒಂದು ಉಷಃಕಾಲದಲ್ಲಿ ಮೇನಾದೇವಿಯು ಮಹಾದೇವಿಗೆ ಜನ್ಮವಿತ್ತಳು. ಅವಳು ಹುಟ್ಟಿದ ಕೂಡಲೇ ಚರಾಚರ ಜಂತುಗಳಿಗೆಲ್ಲ ಸುಖ, ದೇವತೆಗಳಿಗೆಲ್ಲ ಸಂತಸ. ನರಕದಲ್ಲಿ ಇರುವವರಿಗೂ ಸಂತಸ. ನಕ್ಷತ್ರಗಳಲ್ಲಿ ಒಂದು ಹೊಸ ಬೆಳಕು. ಗ್ರಹ ಮಂಡಲಗಳಲ್ಲಿ ಏನೊ ಒಂದು ವಿಚಿತ್ರ ಮಿಂಚು. ಕಾಡಿನಲ್ಲಿರುವ ಗಿಡ ಬಳ್ಳಿಗಳಿಗೂ ಒಂದು ತರದ ಸೊಂಪಿಂಪು. ಹಣ್ಣು ಹಂಪಲುಗಳಲ್ಲಿ ಹೊಸ ರುಚಿ. ಹೂಗಳಲ್ಲಿ ಹೆಚ್ಚಿನ ಪರಿಮಳ. ವಾಯುವಿನ ಅಲೆ ಅಲೆಗಳಲ್ಲೂ ಎಂದೂ ಇಲ್ಲದ ಕಂಪು. ಪಚ್ಚೆ, ಪೈರು, ಸಸ್ಯ, ಶಾದ್ವಲಗಳಲ್ಲೂ ಹೊಸ ಮೆರಗು ಮುನಿಗಳ ಮನದಲ್ಲಿ ಹಿಗ್ಗು. ಇಂದ್ರ, ಹರಿ ಬ್ರಹ್ಮ, ವಾಯು, ಅಗ್ನಿ, ಮುಂತಾದ ದೇವತೆಗಳು ವಿಮಾನಗಳಿಂದ ಮುಗಿಲ ಮೇಲೆ ಬಂದು ನಿಂತು ಹಿಮಗಿರಿಯ ಮೇಲೆ ಹೂಗಳ ಮಳೆಗರೆದರು. ಮೇರು ಮಂದರ ಮೊದಲಾದ ಬೆಟ್ಟಗಳೆಲ್ಲವೂ ನದಿ ಹಾಗೂ ಸಾಗರಗಳ ಅಧಿ ದೇವತೆಗಳು ಉಳಿದ ದೇವತೆಗಳು ಆ ಪಾರ್ವತಿಗೆ ಜನ್ಮೋತ್ಸವ ಸಮಾರಂಭಕ್ಕೆ ಬಂದು ಶುಭ ಕೋರಿ ಕಾಣಿಕೆಯಿತ್ತು ತೆರಳಿದರು.

ಗಿರಿದೇವಿಗೆ ಹಾಗೂ ಅಪ್ಸರೆಯರ ಕೈ ಕೂಸಾಗಿ ಪಾರ್ವತಿ ಬೆಳೆದಳು. ಕಾಲ ಕ್ರಮದಿಂದ ರೂಪ, ಸೌಭಾಗ್ಯ, ವಿವೇಕ, ವಿನಯ, ಮುಂತಾದ ಸದ್ಗುಣಗಳಿಂದ ಅವಳು ಎಲ್ಲರಿಗೂ ಮಿಗಿಲೆನಿಸಿದಳು. ಮೂರುಲೋಕಕ್ಕೆ ಅಲಂಕಾರ ಪ್ರಾಯಳಾದಳು. ದೇವೇಂದ್ರನ ಸುಧರ್ಮಸಭೆ. ಸುರಪತಿಗೆ ದೇವರ್ಷಿ ನಾರದರ ನೆನವರಿಕೆ. ಕೂಡಲೇ ನಾರದರ ಆಗಮನ. ಅರ್ಘ್ಯ, ಪಾದ್ಯಗಳ ಸತ್ಕಾರ. ಲೋಕಾಭಿರಾಮ ಕ್ಷೇಮ ಸಮಾಚಾರದ ವಿಚಾರ. ದೇವಮುನಿಯ ಕುಶಲ ಪ್ರಶ್ನೆಗಳಿಗೆ ದೇವೇಂದ್ರನ ಉತ್ತರ.

''ದೇವರ್ಷಿಯೇ, ದಾಕ್ಷಾಯಿಣಿಯು ಈಗ ಹಿಮಾಲಯ ಪರ್ವತದ ಮಗಳಾಗಿ ಹುಟ್ಟಿದ್ದು ನಿಮಗೆ ವಿದಿತವಷ್ಟೆ ! ಈಗ ಆ ಪಾರ್ವತಿಯ ಪರಮೇಶ್ವರನೊಡನೆ ಸಮಾಗಮವನ್ನು ಹೊಂದುವಂತೆ ಮಾಡಬೇಕಾಗಿದೆ. ಇದಕ್ಕಾಗಿ ತಾವು ಬೇಗನೆ ಪ್ರಯತ್ನಿಸಬೇಕು.''

ಆ ದೇವ ಮುನಿಗೆ ಸುರವೃಂದದ ಪ್ರತಿನಿಧಿಯಾದ ಇಂದ್ರನ ಅಭಿಪ್ರಾಯವೆಲ್ಲವೂ ಗೊತ್ತು. ಕೂಡಲೇ ಅವರು ಅಲ್ಲಿಂದ ಹಿಮಾಚಲದ ಮನೆಗೆ ಬಂದರು. ಪರ್ವತರಾಜನು ದೇವಮುನಿಗೆ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ, ಲೋಕಾಭಿರಾಮವಾಗಿ "ನಿಮ್ಮ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತದಷ್ಟೇ ?" ಎಂದು ಕೇಳಿದನು. ಅದಕ್ಕೆ ನಾರದ ಮುನಿಯು ಸಂತಸದುಂಬಿ ಹೇಳಿದನು. "ಗಿರಿರಾಜಾ, ನಿನ್ನ ಪರ್ವತ ಪ್ರದೇಶವು ಬೇಕಾದಷ್ಟು ಪ್ರಶಸ್ತವಿದೆ. ದೇವ ಮುನಿಗಳ ನೆಲೆವೀಡಾದ ಇದರ ಗುಹೆಗಳು ನಿನ್ನ ಮನಸ್ಸಿನಷ್ಟೇ ವಿಶಾಲವಾಗಿದೆ. ಇಲ್ಲಿಯ ನೀರು ನಿನ್ನ ಮನಸ್ಸಿನಂತೆಯೇ ತಿಳಿ, ತಿಳಿ. ಇಂತಹ ಪವಿತ್ರ ಸ್ಥಳದಲ್ಲಿ ನಿಂತು, ನನ್ನಂತಹ ಎಷ್ಟೋ ಮುನಿಗಳು ನಿರ್ವಿಘ್ನವಾಗಿ ತಪಂಗೈಯುತ್ತಿದ್ದಾರೆ. ಹೀಗೆ ದೇವ, ಮುನಿ, ಗಂಧರ್ವ ಕಿನ್ನರ ಮುಂತಾದ ಎಲ್ಲರಿಗೂ ಸರ್ವ ಸುಖವನ್ನು ಒದಗಿಸುವ ನೀನೇ ಧನ್ಯ."

ಹೀಗೆ ಅವರೀರ್ವರೂ ಮಾತನಾಡುತ್ತ ಕುಳಿತಾಗಲೇ ಅಲ್ಲಿಗೆ ಆ ಪರ್ವತ ರಾಜನ ಪಟ್ಟದರಸಿಯಾದ ಮೇನಾದೇವಿಯು ಆಗಮಿಸಿದಳು. ಅವಳೊಡನೆ ಪಾರ್ವತಿಯೂ ಅಲ್ಲಿಗೆ ಐತಂದಳು. ಅವರಿಬ್ಬರೂ ಮಹರ್ಷಿಗೆ ನಮಸ್ಕರಿಸಿ ನಿಂತ ಬಳಿಕ ನಾರದಮುನಿ ಪಾರ್ವತಿಯನ್ನು ಮತ್ತೊಮ್ಮೆ ನಿರುಕಿಸಿದರು. ಹೊಸ ಬಗೆಯ ಕಳೆ ಕಾಂತಿಯನ್ನು ಸೂಸುವ ಅವಳ ಚೆಲುವಿನ ಶರೀರವನ್ನು ಕಂಡು, ದೇವಮುನಿಯು ಆಶ್ಚರ್ಯಗೊಂಡನು ಮತ್ತು ಅವಳಿಗೆ "ಮಗು ಇತ್ತಬಾ" ಎಂದು ಪ್ರೀತಿಯಿಂದ ಕರೆದನು. ಆಗ ಗಿರಿಜೆಯು ಅಪರಿಚಿತ ಮುನಿಯ ಹತ್ತಿರ ಬಾರದೆ ತನ್ನ ತಂದೆಯ ಕೊರಳಿಗೆ ತೋಳು ಮಾಲೆಯನ್ನು ತೊಡಿಸಿ ಅವನ ತೊಡೆಯ ಮೇಲೆ ಏರಿ ಕುಳಿತಳು. ಮೇನಾದೇವಿಯು ಸಖಿಯ ಮುಖಾಂತರ ತನ್ನ ಮಗಳ ಶರೀರ ಲಕ್ಷಣಗಳನ್ನು ತಿಳಿಸಿ ಅದರ ಮೇಲೆ ಅವಳ ಭವಿಷ್ಯವನ್ನು ತಿಳಿದುಕೊಳ್ಳಲು ಸೂಚನೆ ಕೊಟ್ಟಳು.

ಆಗ ನಾರದರು, ಮುಗುಳುನಗೆನಕ್ಕು ವಿನೋದದ ಧ್ವನಿಯಲ್ಲಿ ನುಡಿದರು. "ಕಲ್ಯಾಣಿ, ನಿನ್ನ ಮಗಳಿಗೆ ಗಂಡನೇ ಹುಟ್ಟಿಲ್ಲ. ಇವಳು ಮೇಲಾಗಿ ಲಕ್ಷಣರಹಿತಳಾಗಿದ್ದಾಳೆ. ಇವಳ ಕೈ ಯಾವಾಗಲೂ ಮೇಲ್ಮುಖವಾಗಿರುತ್ತದೆ. ಇವಳು ತನ್ನ ನೆರಳನ್ನು ನೋಡಿ ಯಾವಾಗಲೂ ಕಾಲುಗಳನ್ನು ಅಲುಗಾಡಿಸುವಳು. ಇದಕ್ಕಿಂತ ಹೆಚ್ಚಿಗೆ ಇನ್ನೇನು ಹೇಳಲಿ ?

ಮಹಾಮುನಿಯ ಈ ಮಾತು ಕೇಳಿ ಗಿರಿರಾಜನ ಧೈರ್ಯವೇ ಉಡುಗಿ ಹೋಯಿತು. ಅವನು ಗದ್ಗದಕಂಠದಿಂದ ನುಡಿದನು. 'ನಾರದರೆ, ಒಳ್ಳೆ ಕನ್ಯೆ ಹತ್ತು ಜನ ಗಂಡು ಮಕ್ಕಳಿಗೆ ಸಮಾನವೆಂದು ಶಾಸ್ತ್ರಗಳಲ್ಲಿ ಹೇಳಿದೆ. ಆದರೆ ಈ ವಾಕ್ಯದಿಂದ ಹೆಣ್ಣು ಹೆತ್ತವನಿಗೆ ಏನು ಪ್ರಯೋಜನ ? ಕನ್ಯೆಯ ತಂದೆಗೆ ದುಃಖವೇ ಹೆಚ್ಚು. ಅದರಲ್ಲಿಯೂ ಪತಿ, ಪುತ್ರರು, ಐಶ್ವರ್ಯಗಳು ಇಲ್ಲದ ದುರದೃಷ್ಟದ ಮಗಳು ಹುಟ್ಟಿದರಂತೂ ದುಃಖಕ್ಕೆ ಪಾರವೇ ಇಲ್ಲ. ನನ್ನ ಮಗಳ ಶರೀರದಲ್ಲಿ ದುರ್ಲಕ್ಷಣಗಳು ಇವೆ ಎಂದು ಹೇಳಿದೆಯಲ್ಲವೆ ? ನಾರದಾ ಮುಂದೇನು ಗತಿ ? ನನ್ನ ಸಂತಸದ ಸೆಲೆಯೇ ಬತ್ತಿ ಹೋಯಿತು. ನನ್ನ ಮಗಳ ಭವಿಷ್ಯವು ಏನೇ ಇರಲಿ ನನಗೆ ಸ್ಪಷ್ಟವಾಗಿ

ಹೇಳು. ನನ್ನ ಈ ಕನ್ಯಾ ದುಃಖವನ್ನು ಹೇಗಾದರೂ ಮಾಡಿ ಪರಿಹರಿಸು, ಅನುಗ್ರಹಿಸು, ಈ ನನ್ನ ಮಗಳ ಪತಿಯು ಇನ್ನೂ ಹುಟ್ಟಿಲ್ಲವೆಂದು ಹೇಳಿದೆ ಇದು ಹೇಗೆ ? ಸ್ಥಾವರ ಜಂಗಮಾತ್ಮಕವಾದ ಅಸಂಖ್ಯ ಪ್ರಾಣಿಗಳಿಂದ ತುಂಬಿ ತುಳುಕುವ ಈ ವಿಶ್ವದಲ್ಲಿ ನನ್ನ ಮಗಳಿಗೊಬ್ಬಳಿಗೆ ಮಾತ್ರ ಇನ್ನೂವರೆಗೆ ಗಂಡನು ಹುಟ್ಟಲಿಲ್ಲವೆ ? ಅವಳ ಕೈ ಯಾವಾಗಲೂ ಮೇಲ್ಮುಖವಾಗಿದೆ ಎಂದು ಉಸುರಿದೆ. ಯಾಚಕರ ಕೈಗಳು ಮಾತ್ರ ಹಾಗಿರಬೇಕು. ಇವಳ ಕೈಗಳು ಹಾಗೆ ಆಗಲು ಕಾರಣವೇನು ? ಮತ್ತು ನೆರಳು ನೋಡಿ ಕಾಲು ಅಲ್ಲಾಡಿಸುವದೇಕೆ ? ಈ ಎಲ್ಲ ಲಕ್ಷಣಗಳಿಂದ ಮುಂದೆ ಅವಳಿಗೆ ಶ್ರೇಯಸ್ಸು ಆಗುವುದಿಲ್ಲವೆಂಬುದನ್ನು ಕೇಳಿ ನನ್ನ ಎದೆ ಸೀಳಿಹೋಗಿದೆ. ಮುಂದೆ ಏನು ಗತಿ ?

ಶೈಲ ಸಾರ್ವಭೌಮನ ಆತುರ ಕಾತರಭಾವದ ಈ ನುಡಿ ಕೇಳಿ ನಾರದ ಮುನಿಯು ನಗುತ್ತ ಹೇಳಿದ.... ''ಪರ್ವತೇಶ್ವರಾ, ಅತ್ಯಂತ ಸಂತೋಷದ ಈ ಸಮಯದಲ್ಲಿ ನೀನು ದುಃಖದಿಂದ ದೀನನಾಗಿ ಮಾತನಾಡುತ್ತಿರುವೆ. ನಾನು ಗೂಢಾರ್ಥವಿಟ್ಟು ಅಸ್ಪಷ್ಟವಾಗಿ ಮಾತನಾಡಿದ್ದೇನೆ. ಆದರಿಂದಲೇ ನಿನಗೆ ಇಷ್ಟು ದುಃಖವಾಗಿದೆ. ಆದರೆ ನನ್ನ ಮಾತು ಸತ್ಯಭೂತವಾದದ್ದು. ಅದರ ರಹಸ್ಯಾರ್ಥವನ್ನು ಅರಿಯಬೇಕಾದದ್ದು ಅತ್ಯಗತ್ಯ. ಈ ನಿನ್ನ ಮಗಳ ಗಂಡನು ಹುಟ್ಟಿಲ್ಲ ಎಂದು ಹೇಳಿದೆನಷ್ಟೆ ! ಅದು ಅಕ್ಷರಶಃ ನಿಜ. ಅವಳಿಗೆ ಪತಿಯಾಗಬೇಕಾದವನು ಮಹಾದೇವನು ತಾನೇ ? ಅವನಿಗೆ ಹುಟ್ಟು ಎಲ್ಲಿ ? ಸಾವು ಎಲ್ಲಿ? ಎಲ್ಲ ಪ್ರಪಂಚವನ್ನು ಹುಟ್ಟಿಸುವವನೇ ಅವನು. ಜಗಜ್ಜನ್ಮಾದಿ ಕಾರಣ, ಬ್ರಹ್ಮ, ವಿಷ್ಣು, ಇಂದ್ರ, ಹಾಗೂ ಮುನಿಗಳೆಲ್ಲರೂ ಹುಟ್ಟು, ಮುಪ್ಪು, ಮರಣಗಳ ಕಟ್ಟುಪಾಡಿಗೆ ಸಿಕ್ಕವರೇ ಸರಿ. ಇವರೆಲ್ಲರೂ ಪರಮೇಶ್ವರನ ಕೈಗೊಂಬೆಗಳು. ಲೋಕಪ್ರಭುವಾದ ವಿಷ್ಣುವು ಪ್ರತಿಯುಗದಲ್ಲಿಯೂ ಬೇರೆ ಬೇರೆ ಜಾತಿಯಲ್ಲಿ ಅಪ್ರಾಕೃತ ದೇಹ ಧರಿಸುತ್ತಾನೆ.

ಆದರೆ, ಎಲ್ಲಿಯೂ ಎಂದೂ ಯಾರಿಂದಲೂ ಜನಿಸದಿರುವ ಮಹಾ ಪ್ರಭುವೆಂದರೆ ಪರಮೇಶ್ವರನು ಮಾತ್ರ. ಅವನೇ ಇವಳ ಪತಿಯಾಗುವವ. ಆದುದರಿಂದಲೇ ನಿನ್ನ ಮಗಳ ಗಂಡ ಹುಟ್ಟಿಲ್ಲ ಎಂದು ನಾನು ಹೇಳಿದೆ. ಇದು ಯಥಾರ್ಥವಷ್ಟೇ !

## ಪಾರ್ವತಿಯ ದೇಹದ ವಿಲಕ್ಷಣವಾದ ಲಕ್ಷಣಗಳು

ಇವಳ ಕೈ ಯಾವಾಗಲೂ ಮೇಲ್ಮುಖವಾಗಿದೆ ಎಂದು ನಾನು ತಿಳಿಸಿದ್ದೆ, ನಿನ್ನ ಮಗಳು ವರದ ಮಹಾದೇವಿ. ಭಕ್ತರಿಗೆ ಮೇಲ್ಮುಖ ಕೈಯಿಂದ ಸದಾ ವರಗಳನ್ನು ಕೊಡುತ್ತಿರುವಳು. ಅಂತಹ ಊರ್ಧ್ವಹಸ್ತವು ವರಪ್ರದಳಾದ ಇವಳಿಗೆ ಯೋಗ್ಯವಷ್ಟೇ ಅಲ್ಲ ಶ್ಲಾಘ್ಯವೂ ಆಗಿದೆ. ಇವಳ ಚರಣಗಳು ಛಾಯೆಯೊಡನೆ ಚಲಿಸುತ್ತವೆ ಎಂದು ಹೇಳಿದೆ. ಅದರ ರಹಸ್ಯ ಕೇಳು. ಕಮಲದಂತಿರುವ ಇವಳ ಕಾಲುಗಳು ಸ್ವಾಭಾವಿಕವಾದ ಉಗುರಿನ ಕಾಂತಿಗಳಿಂದ ಹೊಳೆಯುತ್ತಲಿವೆ. ದೇವ ದಾನವರು ಇವಳ ಪಾದಗಳಿಗೆ ತಮ್ಮ ರತ್ನ ಖಚಿತವಾದ ಕಿರೀಟವನ್ನು ತಾಗಿಸಿ ನಮಸ್ಕಾರ ಮಾಡುತ್ತಾರೆ. ಆ ಕಿರೀಟ ರತ್ನಗಳ ಕಾಂತಿ ಹಾಗೂ ಇವಳ ಚರಣ ನಖಗಳ ಕಾಂತಿ ಎರಡೂ ಕೂಡಿದಾಗ ಬಣ್ಣ ಬಣ್ಣದ ಕಾಂತಿಕಿರಣಗಳ ಸುಂದರ ಸಂಗಮವಾಗಿ ಕಾಲುಗಳು ಅಲ್ಲಾಡಿದಂತೆ ತೋರುವವು. ಅದೂಕೂಡ ಈ ಮಹಾತಾಯಿಯ ಮೇಲ್ಮೆ ಮಹಿಮೆಗಳನ್ನೇ

ಸೂಚಿಸುತ್ತದೆ. ಜಗದ್ಗುರು ಪರಮೇಶ್ವರನ ಪತ್ನಿಯಾಗುವ ಇವಳು ನಿನ್ನನ್ನೂ ನಿಮ್ಮ ಕುಲವನ್ನೂ ಉದ್ಧಾರಮಾಡಲಿಕ್ಕಾಗಿಯೇ ಮೇನೆಯ ಗರ್ಭದಿಂದ ಅವತರಿಸಿ ಬಂದಿದ್ದಾಳೆ. ಇವಳು ಬೇಗನೇ ಪರಮೇಶ್ವರನೊಂದಿಗೆ ಸಮಾಗಮ ಹೊಂದುವಂತೆ ಪ್ರಯತ್ನಮಾಡು. ಇದು ಮಹತ್ವದ ದೇವತಾಕಾರ್ಯ.''

ನಾರದರ ನಲುಮೆದುಂಬಿದ ಈ ನುಡಿಗಳನ್ನು ಆಲಿಸಿ ಗಿರಿಸಾರ್ವಭೌಮನ ಚಿಂತೆಯೆಲ್ಲವೂ ದೂರವಾಯಿತು. ಅಂತರಂಗದಲ್ಲಿ ಸಂತಸ ಉಕ್ಕೇರಿತು. ಮನಸ್ಸಿನಲ್ಲಿಯೇ ಅವನು ಮಹಾದೇವನಿಗೆ ನಮಸ್ಕರಿಸಿ ಉತ್ಸಾಹದಿಂದ ಉಸುರಿದನು-

''ಮುನಿವರ್ಯಾ, ಘೋರ ನರಕದಲ್ಲಿ ಬಿದ್ದ ನನ್ನನ್ನು ನೀನು ಇಂದು ಉದ್ಧರಿಸಿದೆ. ಪಾತಾಳದಿಂದ ನನ್ನನ್ನು ಮೇಲೆ ಎತ್ತಿ ಏಳುಲೋಕದ ಅಧಿಪತಿಯನ್ನಾಗಿ ನೀನು ಮಾಡಿದಂತಾಯಿತು. ನಿಮ್ಮಂತಹ ದೊಡ್ಡವರ ದರುಶನವು ವ್ಯರ್ಥವಾಗುವದಿಲ್ಲವೆಂದು ಕೇಳಿದ್ದೆ. ಅದು ಈಗ ನನಗೆ ಅನುಭವವಾಯಿತು. ನೀವು ಹೇಳಿದಂತೆ ದೇವತಾಕಾರ್ಯಮಾಡಲು ನಾನು ಸರ್ವದಾ ಸಿದ್ಧ.'' ಹೀಗೆ ನುಡಿದ ಶೈಲಾಧಿರಾಜನಿಗೆ ಆಶೀರ್ವಾದ ಮಾಡಿ ನಾರದರು ನೇರವಾಗಿ ಅಮರಾವತಿಗೆ ಏರಿದರು. ಇಂದ್ರನ ಅರಮನೆಯ ಒಳಸೇರಿದರು. ಇಂದ್ರನು ನುಡಿದ ಪ್ರಶ್ನೆಗೆ ಉತ್ತರವಾಗಿ ಪಾರ್ವತಿಯ ವೃತ್ತಾಂತವನ್ನೆಲ್ಲಾ ನಿವೇದಿಸಿದರು.

''ದೇವೇಂದ್ರ, ನಾನು ಮಾಡಬೇಕಾದ ಕಾರ್ಯವನ್ನೆಲ್ಲ ಮಾಡಿ ಮುಗಿಸಿದ್ದೇನೆ. ಮುಂದಿನ ಕಾರ್ಯವನ್ನು ನೀನು ಕಾಮನನ್ನು ಕರೆದು ಹೇಳು. ಅವನಿಂದ ದೇವತಾಕಾರ್ಯವು ನೇರವೇರುವಂತೆ ಮಾಡು'' ಎಂದು ಸೂಚಿಸಿದರು.

ದೇವತಾಕಾರ್ಯವನ್ನು ಸಾಧಿಸುವಲ್ಲಿ ಚತುರರಾದ ನಾರದರ ಸೂಚನೆಯಂತೆ ಇಂದ್ರನು ಮನ್ಮಥನನ್ನು ನೇಮಿಸಿದನು. ಕೂಡಲೇ ರತಿಯೊಡನೆ ಮದನನು ಅಲ್ಲಿಗೆ ಆಗಮಿಸಿದ. ಅವನನ್ನು ಕಂಡು, ದೇವೇಂದ್ರನು ಆದರದಿಂದ ತಿಳಿಸಿದ. 'ಮನ್ಮಥ' ನೀನೀಗ ಸುರವೃಂದಕ್ಕೆಲ್ಲ ಸಂತೋಷವನ್ನುಂಟುಮಾಡುವ ಒಂದು ಮಹತ್ಕಾರ್ಯವನ್ನು ಮಾಡಬೇಕು. ಈಶ್ವರನು ಪಾರ್ವತಿಯೊಡನೆ ಕೂಡುವಂತೆ ಪ್ರಯತ್ನಿಸು. ಋತುರಾಜನಾದ ವಸಂತನನ್ನು ನಿನ್ನೊಡನೆ ಕರೆದುಕೊಂಡು ಹೋಗು.''

ಮನ್ಮಥನಿಗೆ ಏನೋ ಹೆದರಿಕೆ. ನಡುಗುತ್ತ ನುಡಿದ -

''ದೇವರಾಜಾ, ಇದು ಅಸಾಧ್ಯ. ಆ ಮಹೇಶ್ವರನು ಇಂದ್ರಿಯ ವಿಕಾರಕ್ಕೆ ಒಳಗಾಗುವ ವ್ಯಕ್ತಿಯೆ ? ಇದು ನಿಮಗೂ ತಿಳಿದೇ ಇದೆ. ದೊಡ್ಡವರ ಕೋಪವಾಗಲಿ ಅನುಗ್ರಹವಾಗಲಿ ಯಾವದೂ ಸಾಮಾನ್ಯವಲ್ಲ.''

ಇಂದ್ರ ಅಂದನು. ''ಮನ್ಮಥ, ಈ ಕಾರ್ಯವನ್ನು ನಿಶ್ಚಿತವಾಗಿಯೂ ನೀನು ಸಾಧಿಸಬಲ್ಲೆ. ಒಬ್ಬೊಬ್ಬರಿಗೆ ಒಂದೊಂದರಲ್ಲಿ ಶಕ್ತಿ. ಇಕ್ಕಳ ಇಲ್ಲದಿದ್ದರೆ ಕಮ್ಮಾರನಿಗೆ ಶಕ್ತಿಯೇ ಇಲ್ಲ.ಅದೊಂದು ಇಕ್ಕಳದಿಂದ ಅವನು ಬೇಕಾದಂತಹ ವಸ್ತುವನ್ನು ಅಲುಗಾಡಿಸಬಲ್ಲ ಹಾಗೆ ಕಾಮಿನಿಯರ ಸಹಾಯದಿಂದ ಕಾಮನು ಬೇಕಾದವರ ಮನವನ್ನು ಅಲುಗಾಡಿಸಬಲ್ಲ. ಈ ವಿಷಯದಲ್ಲಿ ನನ್ನ ಮಾತನ್ನು ನಂಬು.''

ಸುರ ಸಾಮ್ರಾಟನ ಈ ಪ್ರೋತ್ಸಾಹದ ನುಡಿ ಕೇಳಿ ಕಾಮನು ಮಿತ್ರ ವಸಂತ, ಮಡದಿ ರತಿದೇವಿಯೊಡನೆ ಹಿಮಗಿರಿಯ ತಪ್ಪಲಿಗೆ ಬಂದಿಳಿದರು.

ಹಿಮಾಚಲದ ಉತ್ತುಂಗ ಶೃಂಗ. ಕ್ರೂರಮೃಗ ಹಾಗೂ ಭೀರುಪ್ರಾಣಿಗಳ ಸ್ನೇಹ ಸಂಗಮದ ರಂಗಸ್ಥಳ. ನೋಡಿದಲ್ಲೆಲ್ಲ ತಳಕು ಹಾಕಿದ ತರುಲತೆಗಳು. ಸುಂದರ ಹೂವಿನ ಹಂದರಗಳು. ಕಂಡಲ್ಲೆಲ್ಲ ಕುಸುಮಗಳ ಸುಗ್ಗಿ. ಪರಿಸರದಲ್ಲೆಲ್ಲ ಹಚ್ಚಹಸಿರು. ಈ ಹಸಿರನ್ನು ಮೇಯುವ ಶಿವನ ಎತ್ತು, ಶಾದ್ವಲದ ಮಧ್ಯದಲ್ಲಿ ಅಲ್ಲಿಯೇ ಮುಂಭಾಗದಲ್ಲಿ ಜಟಾಧಾರಿಯಾದ ಮಹೇಶ್ವರನ ಒಬ್ಬ ಪರಿಚಾರಕ. ಅವನ ಮೈತುಂಬ ಹಾವಿನ ಹರಿದಾಟ. ಕೈಯಲ್ಲಿ ಕೋಲು. ತುಸು ಮುಂದೆ ತಪೋಭಂಗಿಯಲ್ಲಿ ಮಹಾದೇವ. ಸಿಂಹದ ತೊಗಲಿನ ಹೊದಿಕೆ. ನಡುವಿನಲ್ಲಿ ಹಾವು. ಮುಡಿಯಲ್ಲಿ ಧಾರಾಕಾರವಾದ ಮತ್ತೊಂದು ಹಾವು. ಕೈ ಮಣಿಕಟ್ಟಿನಲ್ಲಿಯೂ ಕಂಕಣಾಕಾರವಾಗಿ ಮಿಡಿನಾಗರಗಳು. ಅರೆ ಮುಚ್ಚಿದ ತಾವರೆಯ ಎಸಳಿನಂತೆ ಕಾಂತಿಯುತವಾದ ಕಣ್ಣುಗಳು. ಮೂಗಿನ ನೇರಕ್ಕೆ ನೆಟ್ಟದೃಷ್ಟಿ.

ಶಿವನ ಈ ತಪೋಭಂಗಿಯನ್ನು ನೋಡಿ ಮನ್ಮಥನು ಮೆಲ್ಲಮೆಲ್ಲನೆ ಮುಂದೆ ಸರಿದ. ತಪ್ಪಲಿನ ಮರಗಳಲ್ಲಿ ತುಂಬಿಗಳ ಝೇಂಕಾರ. ಇದೇ ಸಮಯ ಸಾಧಿಸಿ ಕಾಮ ಕೈಲಾಸಪತಿಯ ಕಿವಿಯ ಮೂಲಕ ಅವನ ಮನದ ಅಂತರಾಳಕ್ಕೆ ಇಳಿದ.

ಕೂಡಲೇ ಜೇನು ಕುಡಿದು ಗಾನಮಾಡುವ ತುಂಬಿಗಳ ಝೇಂಕಾರ ಶಿವನಿಗೆ ಪ್ರಣಾಯಾಂಕುರದ ಓಂಕಾರದಂತೆ ಹಿತವೆನಿಸಿತು. ಮನಸ್ಸಿನಲ್ಲಿ ಅನುರಾಗವು ಹೊಳವು ಹಾಕಿತು. ತನ್ನ ಪ್ರೀತಿ ಪಾತ್ರಳಾದ ದಾಕ್ಷಾಯಿಣಿಯ ನೆನಪು ಒಮ್ಮೆಲೆ ಅಂತರಂಗದಲ್ಲಿ ಉದಿಸಿತು. ಕೂಡಲೇ ಅವಳು ಅದೃಶ್ಯಳಾಗಿ ಮೆಲ್ಲನೆ ಬಂದು ಅವನ ಮನದ ಮೂಲೆಯಲ್ಲಿ ನೆಲಿಸಿದಳು. ಪ್ರೇಮ ತುಂಬಿದ ಪರಮೇಶ್ವರನ ದೃಷ್ಟಿಗೆ ಅವನಿಗಾ ತಪಂಗೈಯ್ಯುತ್ತಲಿದ್ದ ಪಾರ್ವತಿಯು ದೃಷ್ಟಿಗೋಚರಳಾದಳು. ಆಗ ಕಾಮವಿಕಾರದಿಂದ ಮಹಾದೇವನ ಧ್ಯಾನಯೋಗವು ದೂರವಾಯಿತು. ತಪಸ್ಸಿನ ವಿಚಾರ ಹಿಂದಾಯಿತು. ಪ್ರೇಮವಿಚಾರ ಮುಂದಾಯಿತು. ಮನಸ್ಸಿನ ತುಂಬ ಗಿರಿಜೆಯ ಸಿರಿಸೊಬಗ ಪ್ರೇಮಕಾಮಗಳೇ ತುಂಬಿಕೊಂಡವು. ಎಲ್ಲವೂ ಒಂದು ಕ್ಷಣ ಮಾತ್ರ, ಮರುಕ್ಷಣದಲ್ಲಿ ಜಿತೇಂದ್ರಿಯನಾದ ಈಶ್ವರನಿಗೆ ಇವೆಲ್ಲವೂ ಕಾಮ ಚೇಷ್ಟೆ ಎಂದು ತಿಳಿದುಹೋಯಿತು. ಜಾರಿದ ತನ್ನ ಮನಸ್ಸನ್ನು ಮತ್ತೆ ಬಿಗಿ ಹಿಡಿದನು. ಅವನಿಗೆ ಸ್ವಲ್ಪ ಕೋಪವೂ ಬಂದಿತು. ತನ್ನ ಮನದಲ್ಲಿ ಮನೆಮಾಡಿದ ಕಾಮನನ್ನು ಅಲ್ಲಿಂದ ಓಡಿಸುವ ಸಲುವಾಗಿ ಯೋಗಮಾಯೆಯಿಂದ ಒಡಗೂಡಿದನು. ಮಹಾದೇವನ ಮಾಯೆಯ ಝಳವು ಕಾಮನಿಗೆ ತಾಕಿತು.

## ಪ್ರೇಮಕಾಮದ ಸುಳಿಯಲ್ಲಿ ಶಂಕರ

ಆದರೆ ಕಾಮನು ಇಚ್ಛಾ ಶರೀರಿ. ಅವನನ್ನು ಗೆಲ್ಲಲು ಯಾರಿಗೂ ಶಕ್ಯವಿಲ್ಲ. ಕೋಪಕ್ಕೆ ಆಶ್ರಯ ಕಾಮನೇ. ಕೂಡಲೇ ಅವನು ಮಹಾದೇವರ ಮನಸ್ಸಿನಿಂದ ಹೊರಬಿದ್ದು, ವಸಂತನೊಡನೆ ಬಟ್ಟಬಯಲಿನಲ್ಲಿ ಬಂದು ನಿಂತನು.

ಅಲ್ಲಿಯೇ ಒಂದು ಮಾಮರ, ತಂಪಿಂಪು ಸೂಸುತ್ತಿತ್ತು ತಂಗಾಳಿ. ಆ ಮಂದ ಮಾರುತನ ಮೃದು ಸ್ಪರ್ಶಕ್ಕೆ ಆ ಮಾವಿನ ಮರದ ಮಂಜರಿಯೊಂದು ಹೊಯ್ದಾಡಿತು. ಆ ಹೂವಿನ ಗೊಂಚಲವನ್ನೇ ತನ್ನ ಮೋಹನಾಸ್ತ್ರ ಮಾಡಿಕೊಂಡು ಮದನನು ಮಹಾದೇವನ ಮೇಲೆ ಎಸೆದನು. ಅದು ಶಿವನ ನಿರ್ಮಲವಾದ ಹೃದಯದಲ್ಲಿ ಬಿದ್ದು, ಧೀರ ಧೌರೇಯನಾದ ಆ ಧೂರ್ಜಟಿಯ ಮನಸ್ಸನ್ನು ಕೂಡಾ ಅಧೀರವನ್ನಾಗಿ ಮಾಡಿತು. ಶಿವನ ಎದೆಯಲ್ಲಿ ನೆಟ್ಟ ಕಾಮನ ಬಾಣ ತನ್ನ ಕೆಲಸ ಮಾಡಿತು. ಅವನ ಇಂದ್ರಿಯಗಳ ಕಟ್ಟು ಸಡಿಲಿತು. ಮನಸ್ಸಿನ ತುಂಬ ಮತ್ತೆ ಕಾಮದ ಕುಣಿತ. ಪ್ರೇಮ ಪ್ರಸಾದ. ಅದರಿಂದ ಕಾಮವಿಕಾರ. ತನ್ಮೂಲಕವಾಗಿ ಪ್ರೇಮ ಪರವಶತೆ. ಇಷ್ಟಾದರೂ ಶಿವನು ಪೂರ್ಣವಾಗಿ ಧೃತಿಗೆಡಲಿಲ್ಲ. ಕಾಮವಿಕಾರ ಅತಿಯಾಗುವದರೊಳಗಾಗಿ ಅವನ ಮತಿ ಚೇತರಿಸಿಕೊಂಡಿತು. ಅವನು ಕಣ್ತೆರೆದು ನೋಡಿದಾಗ ಎದುರಿಗೆ ಕಾಮ ನಿಂತಿದ್ದು ಕಂಡಿತು. ಒಮ್ಮೆಲೆ ಅರ್ಥವಾಯಿತು ಮಹಾದೇವನಿಗೆ ತನ್ನ ಹೃದಯದ ಹೊಯ್ದಾಟ. ಒಮ್ಮೆಲೆ ಅವನ ಮುಖವು ಸಿಟ್ಟಿನಿಂದ ಕೆಂಪಾಯಿತು. ಕಂಗಳಲ್ಲಿ ಕಿಚ್ಚಾಡಿತು. ಕೋಪ ಉದ್ರಿಕ್ತವಾದಾಗ ಅವನ ಹಣೆಯಲ್ಲಿಯ ಮೂರನೆಯ ಕಣ್ಣು ಭುಗಿಲ್ಲೆಂದಿತು. ಮುಖದಿಂದ ಹೂಂಕಾರ ಶಬ್ದವು ಹೊರಬಿದ್ದಿತು. ಹಣೆಗಣ್ಣು ಪ್ರಜ್ವಲಿಸಿ ಒಂದು ಚಣ ಕಾಮನನ್ನು ನೋಡಿದ ಕೂಡಲೇ, ಮನ್ಮಥನು 'ಪುರುಪುರು ಎಂದು ಉರಿದುಹೋದ' ಸುಟ್ಟು ಬೂದಿಯಾದ.

ದೇವತೆಗಳು ಕಿರುಚಿಕೊಂಡರು, ಕಾಮನನ್ನು ಸುಟ್ಟ ಶಿವನ ನೇತ್ರಜ್ವಾಲೆಯು ಇನ್ನೂ ಬೆಳೆಯುತ್ತಲೇ ಇತ್ತು. ಅದರಿಂದ ಉಳಿದ ಪ್ರಪಂಚವು ಸುಡಬಾರದೆಂದು ಭಗವಂತನು ತನ್ನ ಹಣೆಯ ಕುಣಿಯಲ್ಲಿಯ ಅಗ್ನಿಯನ್ನು ಮಾವು, ವಸಂತ ಋತು, ಚಂದ್ರ, ಸುಂದರ ಪುಷ್ಪ, ಭ್ರಮರ, ಕೋಗಿಲೆಯ ಕಂಠ ಇವುಗಳಲ್ಲಿ ವಿಭಾಗಿಸಿ ಇಟ್ಟನು. ಶಿವನನ್ನು ಇರಿದ ಕಾಮನ ಬಾಣವು ಅಗ್ನಿಯ ರೂಪವನ್ನು ತಾಳಿತು. ಪ್ರೇಮದಿಂದ ಕೂಡಿದ ಕಾಮಿಗಳ ಮನಸ್ಸಿನಲ್ಲಿ ನೆಲೆಸಿ ಅದು ಹಗಲಿರುಳು ಕುದಿಯುತ್ತಲೇ ಇರುತ್ತದೆ. ಅದಕ್ಕೆ ಚಿಕಿತ್ಸೆಯೇ ಇಲ್ಲ.

## ದುಃಖಿದಗ್ಧರತಿ, ಅವಳು ಮಾಡಿದ ಶಿವಸ್ತುತಿ

ಹರನ 'ಹೂಂ'ಕಾರದಿಂದ ಹಣೆಗಣ್ಣಿನ ಉರಿಗೆ ತುತ್ತಾಗಿ ಬೆಂದುಬೂದಿಯಾಗಿ ಬಿದ್ದ ಗಂಡನನ್ನು ಕಂಡು ಅವನ ಮಡದಿಯಾದ ರತಿಯು ಅತ್ತು ಗೋಗರೆದಳು. ಅವಳ ಕರುಣಾಜನಕವಾದ ದೀನ ವಿಲಾಪದಿಂದ ಮಿತ್ರ ವಸಂತನಿಗೂ ದುಃಖ ಉಕ್ಕಿ ಬಂದು ಅವನೂ ಆರ್ತನಾಗಿ ವಿಲಪಿಸಿದನು. ಶೋಕಸಾಗರದಲ್ಲಿ ಮುಳುಗಿ, ರೋದಿಸುತ್ತಿರುವ ರತಿದೇವಿಯನ್ನು ವಸಂತನೇ ಸಮಾಧಾನಪಡಿಸಿದನು. ಅನಂತರ ಆ ಶಿಳುವಳಿಕೆಯುಳ್ಳ ತರುಣ ವಯಸ್ಸಿನ ತರಳೆ ರತಿದೇವಿಯು ಮುಡಿಯಲ್ಲಿ ಚಂದ್ರನನ್ನು ಧರಿಸಿದ ಮುಕ್ಕಣ್ಣನಿಗೆ ಮೊರೆಹೋದಳು. ಸಿಹಿಮಾವಿನ ಬಳ್ಳಿಯನ್ನು ಕೈಯಲ್ಲಿ ಪವಿತ್ರಕ್ಕೆ ಪ್ರತಿಯಾಗಿ ಇಟ್ಟುಕೊಂಡಳು. ಅಂಕುಡೊಂಕಾಗಿ ಹಣೆಮಣೆಯ ಮೇಲೆ ಉರುಳಿಬಿದ್ದ ಮುಂಗುರುಳುಗಳಿಂದ ಜಟಾಪಾಶವನ್ನು ಕಟ್ಟಿದಳು. ಸುಟ್ಟುಬೂದಿಯಾದ ತನ್ನ ಪತಿ ಮದನನ ಭಸ್ಮವನ್ನು ಮೈಗೆ ಧರಿಸಿದಳು. ಮಂಡೆಯೂರಿ ನೆಲದ ಮೇಲೆ ಕುಳಿತು ಮಹಾದೇವನಿಗೆ ಹೀಗೆ ಮೊರೆಯಿಟ್ಟಳು.

ರತಿದೇವಿ ಉವಾಚ :-

ನಮಃ ಶಿವಾಯಾಸ್ತು ನಿರಾಮಯಾಯ
ನಮಃ ಶಿವಾಯಾಸ್ತು ಮನೋಮಯಾಯ ।
ನಮಃ ಶಿವಾಯಾಸ್ತು ಸುರಾರ್ಚಿತಾಯ
ತುಭ್ಯಂ ಸದಾ ಭಕ್ತಕೃಪಾಪರಾಯ ॥ ೨೬೦ ॥

ನಮೋ ಭವಾಯಾಸ್ತು ಭವೋದ್ಭವಾಯ
ನಮೋಽಸ್ತು ತೇ ಧ್ವಸ್ತಮನೋಭವಾಯ ।
ನಮೋಽಸ್ತು ತೇ ಗೂಢ-ಮಹಾವ್ರತಾಯ
ನಮೋಽಸ್ತು ಮಾಯಾಗಹನಾಶ್ರಿತಾಯ ॥ ೨೬೧ ॥

ನಮೋಽಸ್ತು ಶರ್ವಾಯ ನಮಃ ಶಿವಾಯ
ನಮೋಽಸ್ತು ಸಿದ್ಧಾಯ ಪುರಾತನಾಯ ।
ನಮೋಽಸ್ತು ಕಾಲಾಯ ನಮಃ ಕಲಾಯ
ನಮೋಽಸ್ತು ತೇ ಜ್ಞಾನ ವರಪ್ರದಾಯ ॥ ೨೬೨ ॥

ನಮೋಽಸ್ತು ತೇ ಕಾಲಕಲಾತಿಗಾಯ
ನಮೋ ನಿಸರ್ಗಾಽಮಲ ಭೂಷಣಾಯ ।
ನಮೋಽಸ್ತ್ವಮೇಯಾಂಧಕಮರ್ದಕಾಯ
ನಮಃ ಶರಣ್ಯಾಯ ನಮೋಽಗುಣಾಯ ॥ ೨೬೩ ॥

ನಮೋಽಸ್ತು ತೇ ಭೀಮ ಗುಣಾನುಗಾಯ
ನಮೋಽಸ್ತು ನಾನಾ ಭುವನಾಽದಿ ಕರ್ತ್ರೇ।
ನಮೋಽಸ್ತು ನಾನಾ ಜಗತಾಂ ವಿಧಾತ್ರೇ
ನಮೋಽಸ್ತು ತೇ ಚಿತ್ರಫಲ ಪ್ರಯೋಕ್ತ್ರೇ ॥ ೨೬೪ ॥

ಪರ್ವಾವಸಾನೇ ಹ್ಯವಿನಾಶನೇತ್ರೆ
ನಮೋಽಸ್ತು ಚಿತ್ರಾಧ್ವರಭಾಗ ಭೋಕ್ತ್ರೇ ।
ನಮೋಸ್ತು ಭಕ್ತಾಽಭಿಮತಪ್ರದಾತ್ರೇ
ನಮಃ ಸದಾ ತೇ ಭವ ಸಂಗ ಹರ್ತ್ರೇ ॥ ೨೬೫ ॥

ಅನಂತರೂಪಾಯ ಸದೈವ ತುಭ್ಯಂ
ಅಸಹ್ಯಕೋಪಾಯ ನಮೋಽಸ್ತು ತುಭ್ಯಂ ।
ಶಶಾಂಕ ಚಿಹ್ನಾಯ ಸದೈವ ತುಭ್ಯಂ
ಅಮೇಯ ಮಾನಾಯ ನಮಃಸ್ತುತಾಯ ॥ ೨೬೬ ॥

ವೃಷೇಂದ್ರ ಯಾನಾಯ ಪುರಾಂತಕಾಯ
ನಮಃ ಪ್ರಸಿದ್ಧಾಯ ಮಹೌಷಧಾಯ ।
ನಮೋಽಸ್ತು ಭಕ್ತಾಽಭಿಮತಪ್ರದಾಯ
ನಮೋಸ್ತು ಸರ್ವಾರ್ತಿಹರಾಯ ತುಭ್ಯಂ ॥ ೨೬೭ ॥

ಚರಾಚರಾಚಾರವಿಚಾರವರ್ಯ-
ಮಾಚಾರ್ಯ ಮುತ್ಪ್ರೇಕ್ಷಿತಭೂತ ಸರ್ಗಂ ।
ತ್ವಾಮಿಂದುಮೌಲಿಂ ಶರಣಂ ಪ್ರಪನ್ನ-
ಪ್ರಿಯಾಽಪ್ರಮೇಯಂ ಮಹತಾಂ ಮಹೇಶಂ ॥ ೨೬೮ ॥

ಪ್ರಯಚ್ಛ ಮೇ ಕಾಮಯಶಃ ಸಮೃದ್ಧಿಂ
ಪುನಃ ಪ್ರಭೋ ಜೀವತು ಕಾಮದೇವಃ ।
ಪ್ರಿಯಂ ವಿನಾ ತ್ವಾಂ ಪ್ರಿಯಜೀವಿತೇಷು
ತ್ವತ್ತೋ ಪರಃ ಕೋ ಭುವನೇಷ್ವಿಹಾಸ್ತಿ ॥ ೨೬೯ ॥

ಪ್ರಭುಃ ಪ್ರಿಯಾಯಾಃ ಪ್ರಸವಃ ಪ್ರಿಯಾಣಾಂ
ಪ್ರಸೀದ ಪರ್ಯಾಯಪರಾಪರಾರ್ಥಃ ।
ತ್ವಮೇವಮೇಕೋ ಭುವನಸ್ಯ ನಾಥೋ
ದಯಾಲುರುನ್ಮೂಲಿತಭಕ್ತಭೀತಿಃ ॥ ೨೭೦ ॥

**ರತಿ :-** ರೋಗ ರುಜಿನಗಳಿಂದ ದೂರನಾದ, ಜಗನ್ಮಂಗಳ ರೂಪಿಯಾದ, ಶಂಕರನಿಗೆ ನಮಸ್ಕಾರ. ಜ್ಞಾನರೂಪಿಯೂ, ದೇವಪೂಜ್ಯನೂ, ಭಕ್ತರ ಮೇಲೆ ದಯೆದೋರುವ, ಮಹಾಪ್ರಭುವೂ ಆದ ಶಂಕರನೆ, ನಿನಗೆ ನನ್ನ ವಂದನೆ. ಈ ಪ್ರಪಂಚದ ನಿರ್ಮಾಣಕ್ಕೆ ಕಾರಣನಾದ, ಕಾಮನನ್ನು ನಾಶಮಾಡಿದ, ರಹಸ್ಯವಾದ ದೊಡ್ಡ ವ್ರತವನ್ನು ಮಾಡುವ, ದುರ್ಜ್ಞೇಯವಾದ ಮಾಯೆಯಿಂದ ಒಡಗೂಡಿದ ಶಂಕರನಿಗೆ ನಮಸ್ಕಾರ. ದುಷ್ಟರನ್ನು ಧಿಕ್ಕರಿಸಿ ಶಿಷ್ಟ ಸಜ್ಜನರಿಗೆ ಕಲ್ಯಾಣವನ್ನುಂಟುಮಾಡುವ ಪುರಾತನ ಸಿದ್ಧಸ್ವರೂಪನಾದ ಕಾಲರೂಪಿ ಜ್ಞಾನಮೂರ್ತಿಗೆ, ಸಾಷ್ಟಾಂಗ ಪ್ರಣಾಮ.

ಕಾಲದ ಗತಿಯನ್ನು ಮೀರಿದ, ನೈಸರ್ಗಿಕವಾದ ದೋಷರಹಿತನಾದ, ಅಲಂಕಾರಗಳಿಂದ ಶೋಭಿಸುವ, ಅಂಧಕನನ್ನು ವಧಿಸಿದ, ನಿರ್ಗುಣನಾದ, ಶರಣಾಗತರನ್ನು ರಕ್ಷಿಸುವ, ಜ್ಞಾನವನ್ನೂ, ಬಯಸಿದ ವರವನ್ನೂ ನೀಡುವ ಶಂಕರನಿಗೆ ನಮೋನಮಃ.

ಅನೇಕ ಬ್ರಹ್ಮಾಂಡಗಳ ಆದಿಕರ್ತನಾದ, ಕರ್ಮಾನುಗುಣವಾಗಿ ಬಗೆಬಗೆಯ ಜೀವರಾಶಿಗಳಿಗೆ ಭಿನ್ನ ಭಿನ್ನ ಫಲಗಳನ್ನು ನೀಡುವ, ದುಷ್ಟ, ಭಯಂಕರನಾದ ಶಿಷ್ಟಪಾಲಕನಾದ ಶಿವನಿಗೆ ವಂದನೆ. ಎಲ್ಲವೂ ನಾಶವಾದರೂ ತಾನು ಮಾತ್ರ ನಾಶವಾಗದೆ, ಜಗನ್ನಾಯಕನಾಗಿರುವ, ವಿಧವಿಧವಾದ ಯಜ್ಞಭಾಗಗಳನ್ನು ಭೋಗಿಸುವ, ಭಕ್ತರ ಅಭೀಷ್ಟಗಳನ್ನು ಕರುಣಿಸುವ, ಸಂಸಾರದ ಪ್ರೀತಿಯನ್ನು ಕಡೆಗಣಿಸುವ,

ಚಂದ್ರಶೇಖರನಿಗೆ ನಮಿಸುವೆ. ಅನಂತರೂಪನೂ ಅಸಹ್ಯಕೋಪನೂ, ಅಗಾಧ ಜ್ಞಾನಮೂರ್ತಿಯೂ ಸರ್ವಸಂಸ್ತುತನೂ ಆದ ಚಂದ್ರಶೇಖರನಿಗೆ ಪ್ರಣಮಿಸುವೆ.

ಎತ್ತಿನ ಮೇಲೆ ಹತ್ತಿಕೊಂಡು ತ್ರಿಪುರನಾಶಗೈದ, ಭಕ್ತಿಯಿಂದ ಮೊರೆ ಹೊಕ್ಕವರಿಗೆ ಸರ್ವಾಭೀಷ್ಟಗಳನ್ನು ಪ್ರದಾನಮಾಡುವ, ಸರ್ವ ದುಃಖಗಳನ್ನು ಪರಿಹರಿಸುವ ಮಹಾಸಿದ್ಧೌಷಧಿಯಂತಿರುವ, ಹರನಿಗೆ ನನ್ನ ಪ್ರಣಾಮ. ಚರಾಚರ ಪ್ರಪಂಚದ ಆಚಾರ-ವಿಚಾರಗಳಿಗೆ ನಿರ್ದೇಶಕ ಗುರುವಾದ, ಸಂಕಲ್ಪ ಮಾತ್ರದಿಂದಲೇ ಸರ್ವಪ್ರಾಣಿಗಳ ಸೃಷ್ಟಿಯನ್ನು ಮಾಡಬಲ್ಲ, ಎಲ್ಲರಿಂದ ತಿಳಿಯಲು ಅಶಕ್ಯನಾದ, ಚಂದ್ರನನ್ನು ಜಡೆಯಲ್ಲಿ ಮುಡಿದುಕೊಂಡ, ಮಹಾತ್ಮರ ಪ್ರಿಯ ಪ್ರಭುವಾದ, ಮಹೇಶ್ವರನೇ, ನಾನು ನಿನಗೆ ಶರಣು ಬಂದಿದ್ದೇನೆ. ಪ್ರಭೂ, ನನ್ನ ಕಾಮನೆಯನ್ನು ಪೂರ್ತಿಗೊಳಿಸು, ಕೀರ್ತಿ ಬರುವಂತೆ ಮಾಡು. ಸೌಭಾಗ್ಯ ಸಮೃದ್ಧಿಯನ್ನು ನೀಡು, ದೇವಾ, ಈ ಕಾಮನು ಮತ್ತೆ ಬದುಕಲಿ. ನನ್ನ ಪ್ರಾಣಪ್ರಿಯನಾದ ಈ ಕಾಮದೇವನ ಪ್ರಾಣಗಳಲ್ಲಿ ಕರುಣೆದೋರಿ ಅವನನ್ನು ಪುನಃ ಬದುಕುವಂತೆ ಮಾಡುವ ಸಾಮರ್ಥ್ಯವುಳ್ಳವನು ನಿನ್ನ ಹೊರತು ಈ ಪ್ರಪಂಚದಲ್ಲಿ ಬೇರೆ ಯಾರಿದ್ದಾರೆ? ಮನ್ಮಥನ ಪ್ರೇಯಸಿಯಾದ ನನಗೆ, ಸ್ವಾಮಿ, ನೀನೇ ಸಂರಕ್ಷಕ. ನನ್ನ ಇಷ್ಟಾರ್ಥಗಳನ್ನು ಈಡೇರಿಸುವವನು ಕರುಣಾಳುವಾದ ನೀನೇ, ಮತ್ತು ಐಹಿಕ ಆಮುಷ್ಮಿಕ ಪ್ರಯೋಜನಗಳನ್ನು ಎಲ್ಲರಿಗೂ ಕರುಣಿಸುವ ಪರಮ ಕರುಣಾಶಾಲಿ ವಿಶ್ವನಾಥನೆಂದರೆ ನೀ ಒಬ್ಬನೇ ಅಲ್ಲವೆ? ಭಯ ಪರಿಹಾರವು ನಿನ್ನೊಬ್ಬನಿಂದ ಮಾತ್ರ ಸಾಧ್ಯ. ಇಂತಹ ನಿನಗೆ ನನ್ನ ಅನಂತಾನಂತ ವಂದನೆಗಳು.

**ಸೂತ :-** ಮನ್ಮಥನ ಮಡದಿಯಾದ ರತಿದೇವಿಯು ಈ ಸ್ತೋತ್ರವನ್ನು ಕೇಳಿ, ಶಂಕರನು ಸಂತುಷ್ಟನಾಗಿ ಅವಳನ್ನು ಸಂತೈಸುತ್ತ ಇಂತು ನುಡಿದನು. ''ಈಗ ನನ್ನ ಕಣ್ಣುರಿಯಲ್ಲಿ ಬೆಂದ ನಿನ್ನ ಪತಿ ಕಾಮನು ಬೇಗನೇ ನಿನ್ನ ಪತಿಯಾಗಿ ಬರುವನು. ಅವನ ಶರೀರದ ಕಾಂತಿಯು ಈಗಿನದಕ್ಕಿಂತ ಇಮ್ಮಡಿಸಿ ಸರ್ವಜನಮೋಹನಾಂಗ ಎನಿಸುವನು. ಅವನಿಗೆ ಇನ್ನು **'ಅನಂಗ'** ಎಂದು ಹೆಸರಾಗಿ ಜಗತ್ತಿನಲ್ಲಿ ಪ್ರಸಿದ್ಧನಾಗುವನು.''

ಮಹಾದೇವನ ಈ ಮಾತುಗಳನ್ನು ಕೇಳಿ, ಕಾಮನ ಆ ಕಾಮಿನಿಯು ಅವನಿಗೆ ಸಾಷ್ಟಾಂಗನಮಸ್ಕಾರಮಾಡಿದಳು. ಹಿಮಾಚಲ ಪರ್ವತದ ಒಂದು ರಮ್ಯ ಉಪವನಕ್ಕೆ ತೆರಳಿದಳು. ನಿರ್ಮಾನುಷವಾದ ಆ ವನಾಂತರದಲ್ಲಿ ಏಕಾಂತದಲ್ಲಿಕುಳಿತು ತನ್ನ ಕಾಂತನನ್ನು ನೆನೆದು ಅತ್ತಳು. ರಮಣೀಯವಾದ ಹಿಮಾಚಲದ ಸಾನುಕಾನುಪ್ರದೇಶದ ರಮ್ಯತೆಯನ್ನು ಕಂಡು ಅವಳಿಗೆ ಮತ್ತೆ ಮತ್ತೆ ತನ್ನ ನಲ್ಲನ ನೆನಪು. ಆ ರಮ್ಯ ಸ್ಥಳಗಳಲ್ಲಿ ತಾನು ಕಾಮನೊಡನೆ ಮಾಡಿದ ವಿಹಾರ ವಿಲಾಸಗಳ ಸ್ಮರಣೆ ಮರುಕಳಿಸಿ ಮತ್ತೆ ಮತ್ತೆ ಖಿನ್ನಳಾಗಿ ವಿಲಪಿಸುತ್ತಿದ್ದಳು. ಕಾಮನಿಲ್ಲದ ಬದುಕೇ ಅವಳಿಗೆ ಬೇಸರವಾಗಿ ಜೀವನವೇ ಭಾರವೆನಿಸಿತು. ಆತ್ಮಾರ್ಪಣೆ ಮಾಡಬೇಕೆಂದು ಅವಳ ಮನಸ್ಸು ತವಕಿಸುತ್ತಿತ್ತು. ಆದರೆ ''ನಿನ್ನ ಪತಿ ಮತ್ತೆ ಬೇಗ ನಿನ್ನ ಪ್ರಿಯಕರನಾಗಿ ಬರುವನು.

ನೀನು ಪ್ರಾಣ ಬಿಡಬೇಡ'' ಎಂಬ ಸದಾಶಿವನ ಆಜ್ಞೆಯನ್ನು ನೆನೆದುಕೊಂಡು ಅವಳು ಸಾಯುವ ವಿಚಾರವನ್ನು ತೊರೆದಳು. ಇತ್ತ ನಾರದರ ಮಾತಿನಂತೆ, ಪರ್ವತ ಸಾರ್ವಭೌಮನಾದ ಹಿಮಾಲಯನು ಪಾರ್ವತಿಯನ್ನು ಬಗೆಬಗೆಯ ಆಭರಣಗಳಿಂದ ಅಲಂಕರಿಸಿ, ಕಲ್ಪವೃಕ್ಷದ ಹೂವಿನಮಾಲೆಯನ್ನು ಮುಡಿಗೆ ಮುಡಿಸಿ, ಸಿದ್ಧವಾದ ಚೀನಾಂಬರವನ್ನು ಉಡಿಸಿ, ಸಖಿಯರೊಡನೆ, ಅವಳನ್ನು ಕರೆದುಕೊಂಡು ಹೊರಟನು. ಅನೇಕ ಶೈಲ ಶ್ರೇಣಿಗಳನ್ನು ವನೋಪವನಗಳನ್ನು ದಾಟಿ ಆ ತಂದೆ ಮಕ್ಕಳು, ರತಿದೇವಿಯು ವಿಲಪಿಸುತ್ತ ಕುಳಿತ ಹಿಮಪ್ರಸ್ಥಕ್ಕೆ ಬಂದರು. ಆ ವಿಜನ ವನಾಂತರದಲ್ಲಿ ಒಬ್ಬೊಂಟಿಗಳಾಗಿ ಕಣ್ಣೀರು ಉದುರಿಸುತ್ತ ಕುಳಿತ ಆ ನಾರೀಮಣಿಯನ್ನು ಕಂಡು ಕರುಣೆತುಂಬಿ ಹಿಮರಾಜನು ಕೇಳಿದ.

''ಕಲ್ಯಾಣಿ, ನೀನು ಯಾರು? ಯಾರ ಮಗಳು? ಯಾರ ಮಡದಿ? ಅಳುವೆ ಏಕೆ? ತ್ರಿಭುವನ ಸುಂದರಿಯಾದ ನಿನ್ನ ಕಂಗಳಿಂದ ಕಣ್ಣೀರಿನ ಕೋಡಿ ಹರಿಯಬೇಕಾದರೆ ಏನೋ ಮಹತ್ವದ ಕಾರಣವಿರಬೇಕು.'' ಹಿಮಾಲಯನ ಈ ಅಂತಃಕರಣದ ನುಡಿಯನ್ನು ಕೇಳಿ ಅವಳ ದುಃಖ ಮತ್ತೆ ಒತ್ತರಿಸಿ ಬಂದಿತು. ಅಲ್ಲಿಯೇ ಇದ್ದ ವಸಂತನೂ ಕಂಬನಿದುಂಬಿ ಕಳವಳಿಸಿ ನಿಂತನು. ಅವಳು ನಿಟ್ಟುಸಿರು ಬಿಟ್ಟು ಮೆಲ್ಲನೆ ನುಡಿದಳು.

**ರತಿ :-** ''ಮಹಾನುಭಾವರೆ, ನಾನು ಮನ್ಮಥನ ಪ್ರೇಯಸಿ. ರತಿ ನನ್ನ ಹೆಸರು. ಈ ಪರ್ವತದಲ್ಲಿ ಪರಮೇಶ್ವರನು ತಪಸ್ಸನ್ನು ಮಾಡುತ್ತಿರುವನಷ್ಟೆ ! ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡಬೇಕೆಂದು ದೇವತೆಗಳ ಆಜ್ಞೆಯಂತೆ, ನನ್ನ ಪತಿಯು ಇಲ್ಲಿಗೆ ಬಂದ. ಶಿವನ ಮನಸ್ಸನ್ನು ಕೆದಕಲು ಪ್ರಯತ್ನಿಸಿದ. ಅದರಿಂದ ಅವನಿಗೆ ವಿಪರೀತ ಕೋಪ ಬಂದು ಕಣ್ಣು ತೆರೆದನು. ಶಿವನ ಕಣ್ಣಿನ ಕಿಡಿಯಲ್ಲಿ ನನ್ನ ಪ್ರೀತಿಯ ನಲ್ಲ ಕಾಮನು ಕಮರಿಹೋದ. ಪತಿಯನ್ನು ಕಳೆದುಕೊಂಡು ಅನಾಥಳಾದ ನಾನು ಭಯ-ಭ್ರಾಂತಳಾಗಿ ಅವನನ್ನೇ ಮೊರೆಹೊಕ್ಕೆ. ಭಕ್ತಿಯಿಂದ ಸ್ತುತಿಸಿದೆ. ನನ್ನ ಸ್ತೋತ್ರದಿಂದ ಪರಿತುಷ್ಟನಾದ ಪರಮೇಶ್ವರನು 'ಕಾಮಕಾಂತೆ, ನಿನ್ನ ಈ ಹೊಗಳಿಕೆಯಿಂದ ನನಗೆ ಹರುಷವಾಗಿದೆ. ನಿನ್ನ ಕಾಮನೆಯು ಪೂರ್ಣವಾಗುವದು, ಕಾಮನೂ ಮರಳಿ ಬರುವನು. ನೀನು ಇದೀಗ ಮಾಡಿದ ನನ್ನ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿದವನು ಸಕಲ ಇಷ್ಟಾರ್ಥಗಳನ್ನು ಪಡೆಯುವನು. ಆದರೆ ನೀನು ಮಾತ್ರ ದೇಹವನ್ನು ಬಿಡಬೇಡ. ನಿನ್ನ ಪತಿಯ ಪುನರ್ಜನ್ಮವನ್ನು ಪ್ರತೀಕ್ಷಿಸುತ್ತಲಿರು' ಎಂದು ಅಪ್ಪಣೆಯಿತ್ತ.

ತೇಜೋನಿಧಿಯೆ, ಆ ಶಿವವಚನವೆ, ನನ್ನ ಬದುಕಿನ ಒಂದೇ ಒಂದಾದ ಆಶಾತಂತು. ಅದಕ್ಕಾಗಿ ಜೀವ ಹಿಡಿದಿದ್ದೇನೆ. ಆ ದೇವದೇವನ ವಚನ ಸತ್ಯವಾಗಿ ಫಲಕಾರಿ ಯಾಗುವದನ್ನೇ ಎದುರು ನೋಡುತ್ತ ಈ ದೇಹವನ್ನು ಕಾಪಾಡಿಕೊಂಡು ಇದ್ದೇನೆ.''

ರತಿದೇವಿಯು ನುಡಿದ ಈ ಮಾತುಗಳನ್ನು ಕೇಳಿ ಹಿಮವಂತನಿಗೆ ಗಾಬರಿಯಾಯಿತು. ತನ್ನ ಮಗಳ ಕೈಯನ್ನು ಹಿಡಿದು ತನ್ನ ರಾಜಧಾನಿಗೆ ಹಿಂದಿರುಗಿ ಹೋಗಿಬಿಡಲು ಅಪೇಕ್ಷಿಸಿದನು. ಆಗ ಪಾರ್ವತಿಯು ನಸುನಾಚುತ್ತ ಸಖಿಯ ಮುಖಾಂತರ ತಂದೆಗೆ ಹೇಳಿದಳು. ''ಭಾಗ್ಯಹೀನವಾದ ಈ ಶರೀರದಿಂದೇನು

ಆಗಬೇಕಾಗಿದೆ? ನನಗೆ ಈಗ ಒಂದೇ ಯೋಚನೆ. ಆ ಪರಮೇಶ್ವರನು ನನಗೆ ಪತಿಯಾಗಿ ದೊರಕುವದೆಂತು? ಆ ಸೌಭಾಗ್ಯವನ್ನು ನಾನು ಪಡೆಯುವ ಬಗೆ ಯಾವದು? ಅದಕ್ಕಾಗಿ ನನಗೆ ಈ ಒಂದು ವಿಚಾರ ಹೊಳೆಯುತ್ತಿದೆ. ಈ ಜಗತ್ತಿನಲ್ಲಿ ತಪಸ್ಸಿನಿಂದ ದೊರಕದ ವಸ್ತುವೇ ಇಲ್ಲ. ಅಸಾಧ್ಯ ವಸ್ತುಗಳೆಲ್ಲವೂ ತಪೋನುಷ್ಠಾನದಿಂದ ತಾವಾಗಿಯೇ ದೊರಕುವವು. ಸರ್ವಾರ್ಥ ಸಾಧಕವಾದ ಇಂಥ ತಪೋರೂಪ ಸಾಧನವಿದ್ದರೂ ಜನರು ವ್ಯಥಾ ದುಃಖ ಪಡುತ್ತಾರೆ. ತಪಸ್ಸನ್ನು ಮಾಡಬೇಕು. ದುಃಖ ದುರವಸ್ಥೆಗಳನ್ನು ಪಡುತ್ತ ಬದುಕುವದಕ್ಕಿಂತ ಸಾಯುವದೇ ಲೇಸು. ಇನ್ನು ಮೇಲೆ ನಾನು ಆ ಪರಮೇಶ್ವರನನ್ನು ಪಡೆಯಲಿಕ್ಕಾಗಿ ತಪಸ್ಸನ್ನು ಮಾಡುವೆ. ಯಮನಿಯಮ, ವ್ರತ, ಉಪವಾಸ, ಪೂಜೆ, ಉಪಾಸನೆಗಳಿಂದ ಈ ದೇಹವನ್ನು ಸೊರಗಿಸುವೆ. ತಪಸ್ಸಿನಿಂದ ಪರಮೇಶ್ವರನ ಪ್ರಸಾದವು ನನಗೆ ದೊರಕುವಲ್ಲಿ ಸಂದೇಹವೇ ಇಲ್ಲ.'' ಮಗಳ ಈ ದೃಢನಿರ್ಧಾರದ ನುಡಿಗಳನ್ನು ಕೇಳಿ ಪರ್ವತರಾಜನಿಗೆ ದುಃಖವಾಯಿತು. ಕಂಠವು ಬಿಗಿದು ಬಂದು ಅವನು ಸ್ನೇಹಪೂರ್ಣವಾಗಿ ನುಡಿದ.

**ಹಿಮರಾಜ** :- ''ಮಗಳೆ, ಬೇಡ, ಬೇಡ, ಇಂತಹ ಘೋರ ತಪಸ್ಸಿನ ಕಾಯಕ್ಲೇಶವನ್ನು ನಿನ್ನ ಈ ಕೋಮಲ ಶರೀರವು ತಾಳಲಾರದು. ಆಗುವದೆಲ್ಲವೂ ಆಗಿಯೇ ತೀರುವದು. ನಾವು ಬೇಡವೆಂದರೆ ಕೇಳುವದಿಲ್ಲ; ಬೇಕೆಂದರೆ ಆಗುವದಿಲ್ಲ. ನಿನ್ನ ಅದೃಷ್ಟದಲ್ಲಿ ಶಿವನೇ ಪತಿಯಾಗಬೇಕೆಂದಿದ್ದರೆ, ಅದು ನೀನು ಮನೆಯಲ್ಲಿದ್ದರೂ ಆಗುವದು. ಅದಕ್ಕೆ ತಪಸ್ಸೇಕೆ ? ಇಷ್ಟು ಕಷ್ಟಪಡುವದೇಕೆ ? ಆದುದರಿಂದ ನೀನು ಬಹು ಕಷ್ಟಸಾಧ್ಯವಾದ ಈ ತಪೋವ್ರತವನ್ನು ಈಗ ಕೈಕೊಳ್ಳುವದೇ ಬೇಡ. ಮನೆಗೆ ಹೋಗೋಣ ನಡೆ. ಇದಕ್ಕೆ ಬೇರೆ ಏನಾದರೂ ಉಪಾಯ ಮಾಡುತ್ತೇನೆ.''

## ಪಾರ್ವತಿಯ ನಿಶ್ಚಲ ಮನಸ್ಸು, ಉಗ್ರ ತಪಸ್ಸು

ತಂದೆಯು ಬಲವಂತ ಮಾಡಿದರೂ ಪಾರ್ವತಿಯು ಕೇಳಲಿಲ್ಲ. ಅವಳ ತಪೋನುಷ್ಠಾನದ ನಿರ್ಧಾರವು ಅಚಲವಾಗಿತ್ತು. ಇದರಿಂದ ಹಿಮವಂತನು ಚಿಂತಾಕ್ರಾಂತನಾಗಿ ತುಸು ಆಲೋಚಿಸಿದನು. ಕೊನೆಗೆ ಅವಳ ನಿರ್ಣಯವೇ ಸರಿಯೆಂದು ಅವನು ಹೊಗಳಿದನು. ಆಗಲೇ ಆಕಾಶವಾಣಿ ''ಉಮಾ 'ಮಗಳೇ ಬೇಡ' ಎಂದು ಪರ್ವತರಾಜನೇ ನೀನು ನಿನ್ನ ಮಗಳಿಗೆ ಹೇಳಿದೆಯಷ್ಟೆ ! ಆದುದರಿಂದ ಮುಂದೆ ಇವಳು ಭೂಲೋಕದಲ್ಲಿ **'ಉಮಾ'** ಎಂಬ ಹೆಸರಿನಿಂದ ಪ್ರಖ್ಯಾತಳಾಗುವಳು ಮತ್ತು ಬಹು ಬೇಗನೇ ತನ್ನ ಇಷ್ಟಾರ್ಥವನ್ನು ಪಡೆಯುವಳು'' ಈ ನಭೋವಾಣಿಯನ್ನು ಆಲಿಸಿ ಹಿಮವಂತನಿಗೆ ಅತ್ಯಂತ ಸಂತೋಷವಾಯಿತು. ಅವನು ಮಗಳಿಗೆ ತಪೋನುಷ್ಠಾನಕ್ಕೆ ಅನುಮತಿಯಿತ್ತು ಮನೆಗೆ ಮರಳಿದನು.

ತಂದೆಯು ಅತ್ತ ತೆರಳಿದ ಬಳಿಕ ಇತ್ತ ಆ ಪರ್ವತ ಪುತ್ರಿಯು ತನ್ನ ಇಬ್ಬರು ಗೆಳತಿಯರೊಂದಿಗೆ ಹಿಮಾಚಲದ ಎತ್ತರವಾದ ಶಿಖರವನ್ನು ಏರಿದಳು. ಅದು ದುರ್ಗಮ. ಅಲ್ಲಿ ಸಕಲವಿಧ ಫಲಪುಷ್ಪಗಳ ಸಮೃದ್ಧಿ. ಬಗೆಬಗೆಯ ಖಗ, ಮೃಗಗಳು,

ಗಿಡಗಳ ಗೊನೆ, ಗೊಂಚಲುಗಳಲ್ಲಿ ದುಂಬಿಗಳ 'ಗುಂಗುಂ' ಗಾನ, ತೊರೆ ಝರಿಗಳ ಮಂಜುಳ ನಾದ. ಅಂತರಿಕ್ಷದ ವಕ್ಷಸ್ಥಳಕ್ಕೆ ಮುತ್ತಿಡುವ ಕಲ್ಪವೃಕ್ಷಗಳು, ಅಲ್ಲಲ್ಲಿ ಗಹನ ಗುಹೆಗಳು. ಇಂಥ ಹಿಮಾಚಲದ ಉತ್ತುಂಗವಾದ ಶೃಂಗೋತ್ಸಂಗದಲ್ಲಿ ಒಂದು ಮರದ ಕೆಳಗೆ ಈ ರಾಜಕನ್ನೆಯ ತಪಸ್ಸು ಪ್ರಾರಂಭವಾಯಿತು. ಉಟ್ಟದ್ದು ನಾರುಮಡಿ, ತೊಟ್ಟದ್ದು ವಲ್ಕಲ ಕಂಚುಕ. ಸೊಂಟಕ್ಕೆ ದರ್ಭೆಯ ಒಂದು ಮೌಂಜಿ. ದಿನಕ್ಕೆ ಮೂರು ಬಾರಿ ಸ್ನಾನ. ಪ್ರತಿ ದಿನ ಬರಿ ಪಾದರಿ ಹೂವಿನ ಎಸಳಿನ ಆಹಾರ, ಹೀಗೆ ಒಂದು ನೂರು ವರುಷ ತಪಸ್ಸು. ಮುಂದಿನ ನೂರು ವರುಷ ಕೇವಲ ತರಗೆಲೆಗಳನ್ನು ತಿಂದು ತಪೋನುಷ್ಠಾನ. ಮತ್ತೆ ನೂರು ವರುಷ ಪೂರ್ಣ ಉಪವಾಸ. ನಿರಂತರ ಧ್ಯಾನ. ಅಸಂಪ್ರಜ್ಞಾತ ಸಮಾಧಿ. ಅವಳ ತಪಸ್ಸಿನ ಜ್ವಾಲೆಯಿಂದ ಪ್ರಾಣಿ ಪ್ರಪಂಚವೆಲ್ಲವೂ ಸಂತ್ರಸ್ತ.

ಮಹಾದೇವಿಯ ಈ ಉಗ್ರವಾದ ತಪಸ್ಸನ್ನು ಕಂಡು ತಲ್ಲಣಿಸಿದ ಸುರನಾಥ. ತತ್ತರಿಸಿದರು ಸಪ್ತರ್ಷಿಗಳು. ಎಲ್ಲರೂ ಗಡಬಡಿಸಿ ಸುರೇಂದ್ರಭವನಕ್ಕೆ ಐತಂದರು. ಇಂದ್ರನು ಅವರನ್ನು ಅರ್ಘ್ಯ ಪಾದ್ಯಗಳಿಂದ ಉಪಚರಿಸಿದ ಬಳಿಕ ಅವರಿಗೆ ಬಿನ್ನವಿಸಿದ. "ಪೂಜ್ಯರೆ, ತಮ್ಮಿಂದ ಒಂದು ದೊಡ್ಡ ದೇವಕಾರ್ಯದ ಆಗಬೇಕಾಗಿದೆ. ಹಿಮಗಿರಿಯಲ್ಲಿ ಪರ್ವತ ಪುತ್ರಿಯ ಘೋರ ತಪಸ್ಸು ನಡೆದಿದೆ. ನೀವು ಅವಳ ಮನೋರಥವನ್ನು ಪೂರ್ಣ ಮಾಡಿರಿ."

ಸುರೇಶ್ವರನ ಮಾತಿಗೆ ಮುನಿಗಳು ಸಮ್ಮತಿಸಿ, ಹಿಮಾಚಲಕ್ಕೆ ಬಂದಿಳಿದರು. ಪಾರ್ವತಿಯು ತಪಸ್ಸು ಮಾಡುವಲ್ಲಿ ಬಂದು, ಅಂತಃಕರಣದಿಂದ ಮಧುರವಾಗಿ ಮಾತನಾಡುತ್ತ ಅವಳನ್ನು ಕೇಳಿದರು "ಮಗಳೆ, ನಿನ್ನ ಮನಸ್ಸಿನ ಅಪೇಕ್ಷೆಯೇನು?"

ದೊಡ್ಡವರು ತಾವಾಗಿಯೇ ಇಂತಹ ತಾಣಕ್ಕೆ ಬಂದುದುದರಿಂದ ಅವಳು ತನ್ನ ಮೌನವ್ರತ ಮುರಿದೆದ್ದಳು. ಆದರೆ ಅವರ ಪ್ರಶ್ನೆಗೆ ಉತ್ತರ ರೂಪವಾಗಿ ತನ್ನ ಮನದ ಇಂಗಿತವನ್ನು ಹೇಳಲು ಅವಳಿಗೆ ಲಜ್ಜೆ ಆಯಿತು. ಆ ಲಜ್ಜೆಯಿಂದ ಮತ್ತೆ ಕೆಲಹೊತ್ತು ಮೌನ ತಾಳಿದಳು. ಶ್ರಾಂತರಾಗಿ ಆ ವನಾಂತರಕ್ಕೆ ಬಂದ ಮಹಾಮುನಿಗಳನ್ನು ಮೊದಲು ಕುಶಲ ಪ್ರಶ್ನೆ ಮಾಡಿ ಆಸನದಲ್ಲಿ ಕುಳ್ಳಿರಿಸಿ, ನಮಸ್ಕರಿಸಿ, ನಿಂತುಕೊಂಡಳು.

ಮತ್ತೆ ಮುನಿಗಳು ಅದೇ ಪ್ರಶ್ನೆ ಕೇಳಿದರು. "ನಿನ್ನ ಮನೋರಥವೇನು?" ಅವರ ಪ್ರಶ್ನೆಯ ಉತ್ತರ ಮನಸ್ಸಿನಲ್ಲಿ ಹೊಳೆದು, ಕಂಠದಲ್ಲಿ ಸುಳಿದು, ನಾಲಿಗೆಗೆ ಇಳಿದು ತುಟಿ ತಟಕ್ಕೆ ಬಂದಾಗ ಆ ಪಾರ್ವತಿಗೆ ಹೆಮ್ಮೆ ಎನಿಸಿತು. ಹರನ ಗುರುತ್ವವನ್ನು ನೆನೆದು ಅವನಲ್ಲಿಗೌರವ ಬುದ್ಧಿ ಇಮ್ಮಡಿಸಿತು. ಪರಾತ್ಪರನಾದ ಆ ಹರನನ್ನು ಹೊಂದಲಿಕ್ಕಾಗಿ ತನ್ನ ಈ ತಪಸ್ಸು ಎಂಬ ಆಶಯದಿಂದ ಹೃದಯದ ಹಿಗ್ಗೂ ಹಿಗ್ಗಿತು. ಆದರೂ ಯಾವ ಭಾವಾವೇಶವೂ ತನ್ನ ಮಾತಿನ ಅಂಚಿಗೆ ಇಳಿಯದಂತೆ ವಿನಯದ ಎಲ್ಲೆ ಮೀರದಂತೆ, ವಿನಯಾವನತಳಾಗಿ ತಲೆಬಾಗಿ, ಅವಳು ನುಡಿದಳು.

"ಪೂಜ್ಯರೆ, ಪ್ರಾಣಿಗಳ ಮನಸ್ಸಿನಲ್ಲಿ ಏನು ಇದೆ ಎಂಬುದನ್ನು ಜ್ಞಾನಿಗಳಾದ ತಾವು ತಿಳಿದಿರುವಿರಿ. ದುರ್ಲಭವಾದ ಮನೋರಥಗಳನ್ನು ಬಯಸಿ ಜೀವಿಗಳು ಇಲ್ಲದ ದುಃಖಕ್ಕೆ ಈಡಾಗುತ್ತಾರೆ. ಕೆಲವರು ಮಾತ್ರ ಭಗೀರಥ ಪ್ರಯತ್ನಗಳಿಂದ ದುರ್ಲಭವಾದ

ತಮ್ಮ ಅಭೀಷ್ಟಗಳನ್ನು ಕೂಡ ನಿರಲಸ ವೃತ್ತಿಯಿಂದ ಹೊಂದುತ್ತಾರೆ. ಆದರೆ ನನ್ನ ಬಯಕೆಯು ಮಾತ್ರ ಎಂತಹ ಪ್ರಯತ್ನದಿಂದಲೂ ಹೊಂದಲು ಅಸಾಧ್ಯವಾಗಿದೆ. ಬಂಜೆಯ ಮಗನಿಗೆ ಮುಗಿಲು ಮಲ್ಲಿಗೆಯಹಾರಹಾಕಿ, ಅಲಂಕರಿಸುವ ಅಪೇಕ್ಷೆ ನನ್ನದಾಗಿದೆ. ಮಹಾದೇವರನ್ನು ಪತಿಯನ್ನಾಗಿ ಹೊಂದಬೇಕೆಂಬ ನನ್ನ ಬಯಕೆ ಇಂತಹದೆ ಅಲ್ಲವೆ? ಅಗಮ್ಯವಾದ ಮಹಾದೇವನನ್ನು ಸಮೀಪಿಸುವುದೇ ಕಷ್ಟ. ಅದರಲ್ಲೂ ಈಗಂತೂ ಅವನು ಉಗ್ರ ತಪಸ್ಸಿನಲ್ಲಿ ನಿರತನಾಗಿದ್ದಾನೆ. ಅದರಲ್ಲೂ ಈಗ ಕಾಮನನ್ನು ಕೊಂದು ರಾಗಾನುರಾಗಗಳನ್ನು ಹೃದಯದಿಂದ ಕಿತ್ತುಹಾಕಿ ಪ್ರೇಮ ಕಾಮಗಳನ್ನು ಸುಟ್ಟುಮೆಟ್ಟಿ, ಮೇಲೆದ್ದು ನಿಂತ ಆ ಶಿವನನ್ನು ನಾನೀಗ ಮದುವೆಯಾಗಬೇಕೆಂದು ಬಯಸಿದ್ದೇನೆ. ವಿಷಯಸುಖಗಳ ಆಶೆ ಅಭಿಲಾಷೆಗಳನ್ನೇ ಸಂಪೂರ್ಣವಾಗಿ ತೊರೆದು ತಪೋನಿರತನಾದ ವಿರಕ್ತ ಶಿವನನ್ನು ನನ್ನಂತಹ ಸೊರಗಿ ಕೊರಗಿದ ಹೆಣ್ಣು ಮೆಚ್ಚಿಸಿ ಒಲಿಸಿಕೊಳ್ಳುವದು ಹೇಗೆ?'' ಪಾರ್ವತಿಯ ಈ ಮಾತುಗಳನ್ನು ಕೇಳಿ ಮುನಿಗಳಿಗೆ ಮನಸ್ಸಿನಲ್ಲಿ ಬಹಳ ಸಂತೋಷವಾಯಿತು. ಆದರೂ ಅವಳ ಸತ್ವ ಮತ್ತು ಮಾನಸಿಕ ಸ್ಥೈರ್ಯವನ್ನು ಪರೀಕ್ಷಿಸಿ ತಿಳಿದುಕೊಳ್ಳಬೇಕೆಂದು ಮುನಿಗಳು ಹೀಗೆ ಮಾತನಾಡಿದರು.

**ಋಷಿ** :- ''ಮಗಳೆ, ಈ ಲೋಕದಲ್ಲಿ ಸುಖವು ಎರಡು ವಿಧ. ವಿಷಯ ಸುಖ, ವೈರಾಗ್ಯ ಸುಖ. ವಿಷಯ ಸುಖವೆಂದರೆ: ಇಂದ್ರಿಯಗಳಿಂದ ದೇಹಕ್ಕೆ ಉಂಟಾಗುವ ಆನಂದಾನುಭವ. ವೈರಾಗ್ಯ ಸುಖವೆಂದರೆ: ವಿರಕ್ತನಾಗಿ ದೇಹದಂಡನೆಮಾಡಿ ಜಪ, ತಪ, ಯಜ್ಞ, ಯಾಗ, ಮುಂತಾದ ಸತ್ಕರ್ಮ ಅನುಷ್ಠಾನಮಾಡಿ ದೇವರ ಅನುಗ್ರಹ ಪಡೆಯುವದು. ಅದರಿಂದ ಸ್ವರ್ಗಾದಿ ಸೌಖ್ಯ ಅನುಭವಿಸುವದು. ಈ ಮಹಾದೇವನ ಸಲುವಾಗಿ ನೀನು ಕೈಕೊಂಡ ತಪಸ್ಸಿನಿಂದ ನಿನಗೆ ಎರಡೂ ಸುಖವೂ ದೊರಕದಂತಾದವು. ಮೊದಲನೆಯದಾದ ವಿಷಯ ಸುಖಾನುಭವವು ನಿನ್ನ ದೇಹಕ್ಕೆ ನಿನ್ನ ಮನದನ್ನನಾದ ಮಹಾದೇವನಿಂದ ದೊರಕುವದು ಅಶಕ್ಯ. ಸ್ವಾಭಾವಿಕವಾಗಿ ಅವನು ಭಯಂಕರ. ಅವನು ಉಟ್ಟದ್ದು ಮುಗಿಲು ಬಟ್ಟೆ. ಅವನು ವಾಸಿಸುವದು ಸುಡುಗಾಡಿನಲ್ಲಿ. ಅವನ ಕಣ್ಣುಗಳು ಕೂಡಾ ಸಮವಾಗಿಲ್ಲ, ನೋಡಲು ಹುಚ್ಚ. ಮೈ ತುಂಬಾ ಬೂದಿ. ಹೇಳಿ ಕೇಳಿ ತಿರುಕ, ಭಿಕ್ಷುಕ, ಕೈಯಲ್ಲಿ ತಲೆಬುರುಡೆ. ಮೈ ತುಂಬಾ ಹರಿದಾಡುವ ಹಾವುಗಳು. ಕೊರಳಲ್ಲಿ ಹಸಿನೆತ್ತರು ಬಸಿಯುವ ರುಂಡಗಳಮಾಲೆ. ಅವನನ್ನು ನೋಡಿದರೆ ಜಿಗುಪ್ಸೆ ಯಾರಿಗಾದರೂ ಹುಟ್ಟಬಹುದು. ಅನರ್ಥವೇ ಆಕಾರ ತಳೆದಂತೆ. ವಿಕಾರಮುಖದ ಭೀಕರಸ್ವರೂಪದ ಈ ಭಯಂಕರ ಶಂಕರನನ್ನು ಮದುವೆಯಾದರೆ ನಿನಗೆ ಶಾರೀರಿಕ ಸುಖವು ದೊರಕುವದೆಂತು? ಅವನನ್ನು ನೋಡಿದರೆ ಯಾರಿಗಾದರೂ ಹೇಸಿಕೆ ಆಗುವದು. ನಿನಗೆ ಒಳ್ಳೇ ದೇವತಾಪುರುಷನನ್ನೇ ಮದುವೆಯಾಗಬೇಕೆಂದರೆ ವಿಶ್ವರಕ್ಷಕನಾದ ವಿಷ್ಣುವಿಲ್ಲವೆ? ದೇವತೆಗಳೆಲ್ಲರೂ ಅವನ ಪಾದ ತುದಿಗೆ ತಮ್ಮ ತಲೆಯ ಮೇಲಿನ ಕಿರೀಟ ತಂದು ಇಕ್ಕುತ್ತಾರೆ. ಸ್ವರ್ಗಾಧಿಪತಿಯಾದ ಇಂದ್ರನಿಲ್ಲವೆ? ಐಶ್ವರ್ಯದ ಅಧಿದೇವತೆಯಾದ ಕುಬೇರನಿಲ್ಲವೆ? ಇಷ್ಟೆಲ್ಲ ದೊಡ್ಡ ದೊಡ್ಡ ದೇವರನ್ನು ಬಿಟ್ಟು ಈ ಬತ್ತಲೆ ಭಿಕ್ಷುಕನ ಬೆನ್ನ ಹತ್ತಲು ನಿನಗೆ ಏನಾಗಿದೆ?

## ಶಿವನದೂಷಣ, ಪಾರ್ವತಿಯ ಭಾಷಣ

ಇನ್ನು ಎರಡನೆಯ ಸುಖವಾದ ವೈರಾಗ್ಯ ಸುಖವನ್ನು ನೀನು ಹೊಂದಬಯಸಿದರೆ ಇಂತಹ ಉಗ್ರ ತಪಸ್ಸು ಅನಾವಶ್ಯಕ. ವೈರಾಗ್ಯ ಭಾವದಿಂದ ದೇಹದಂಡನೆಮಾಡಿ ಪಡೆಯಬೇಕಾದ ಜನ್ಮಾಂತರದ ಸ್ವರ್ಗಸುಖವು ನಿನಗೆ ತಾನಾಗಿ ಪ್ರಯತ್ನವಿಲ್ಲದೆ ಸ್ವಯಂಸಿದ್ಧವಾಗಿದೆ. ದೇವತೆಗಳಿಗೂ ಕೂಡ ಇಲ್ಲದ ಐಶ್ವರ್ಯವೂ ಸುಖ ಸಮೃದ್ಧಿಯೂ, ಭೋಗಭಾಗ್ಯಗಳೂ ನಿಮ್ಮ ತಂದೆಗೆ ಇವೆ. ಅದಕ್ಕಾಗಿ ನೀನು ಇಷ್ಟು ಕಷ್ಟಪಡುವುದೇಕೆ? ದೇಹ ದಂಡಿಸುವುದೇಕೆ? ಪ್ರಾಣಿಗಳಿಗೆ ಸಾಮಾನ್ಯವಾಗಿ ಅಲ್ಪಸ್ವಲ್ಪ ಅಪೇಕ್ಷಿತ ಸುಖವು ದೊರಕುವದು ಕೂಡ ಬಹಳ ಕಷ್ಟ. ಸುದೈವದಿಂದ ನಿನಗೆ ನಿನ್ನ ತಂದೆಯು ಸಕಲ ವಿಧವಾದ ಭೋಗ-ಭಾಗ್ಯಗಳ ಕರ್ತನೂ ಭೋಕ್ತೃವೂ ಆಗಿರುವಾಗ ನೀನೇಕೆ ಆ ದರಿದ್ರ ಶಿವನನ್ನು ಮೆಚ್ಚಿ ಅವನಿಗಾಗಿ ಹಂಬಲಿಸಿ, ವಿನಾಕಾರಣ ಕೊರಗುತ್ತಿರುವೆ ?. ವ್ಯರ್ಥವಾಗಿ ಸೊರಗುತ್ತಿರುವೆ?'' ಸಪ್ತರ್ಷಿಗಳ ಈ ಮಾತುಗಳನ್ನು ಕೇಳಿ ಪಾರ್ವತಿಗೆ ಬಹಳ ಕೋಪಬಂದಿತು. ಒಮ್ಮೆಲೆ ಅವಳ ಕಂಗಳಲ್ಲಿ ಕೆಂಪು ಚಿಮ್ಮಿತು. ತುಟಿಗಳು ಅದುರಿದವು. ಆದರೂ ಅವಳು ಸಂಯಮದಿಂದ ನುಡಿದಳು.

**ಪಾರ್ವತಿ** :- ''ಮೊಂಡುತನಕ್ಕೆ ನೀತಿಯುಂಟೆ? ಹಟಮಾರಿತನಕ್ಕೆ ರೀತಿಯುಂಟೆ? ಕಷ್ಟವನ್ನೇ ಅನುಭವಿಸುತ್ತೇನೆ ಎನ್ನುವವರ ಮೇಲೆ ನಿಮ್ಮದೇನಾದರೂ ನಿರ್ಬಂಧವಿದೆಯೇ? ವಿಪರೀತಾರ್ಥವನ್ನು ಬೋಧಿಸುವ ನಿಮ್ಮನ್ನು ಉಪದೇಶಮಾಡಲು ಯಾರು ನಿಯಮಿಸಿದ್ದಾರೆ? ಅಥವಾ ನಿಮ್ಮನ್ನು ಯಾರೇ ನಿಯಮಿಸಲಿ ನೀವು ನನಗೆ ಉಪದೇಶಿಸಲಿಕ್ಕೆ ಬರಬೇಡಿರಿ. ನಾನೊಬ್ಬ ಬುದ್ಧಿಯಿಲ್ಲದ ಹೆಣ್ಣು ಎಂದು ತಿಳಿದುಬಿಡಿರಿ. ಅಥವಾ ಅಯೋಗ್ಯ ಪತಿಯ ಕೈ ಹಿಡಿಯಬೇಕೆಂದು ಆಗ್ರಹ ತೊಟ್ಟ ಚಂಡಿ, ಮೊಂಡ ಮಹಿಳೆ ಎಂದಾದರೂ ಭಾವಿಸಿರಿ. ನೀವು ನನ್ನ ಬಗ್ಗೆ ವಿಚಾರಮಾಡುವದೇ ಬೇಡ. ನಾನು ಅಹಂಕಾರದ ಹೆಣ್ಣು. ಯಾರು ಏನೇ ಹೇಳಿದರೂ ನಾನು ಕೇಳಲಾರೆ. ಶಂಕರನನ್ನೇ ನಾನು ವರಿಸುವವಳು. ಆದರೆ ನೀವೆಲ್ಲರೂ ಪ್ರಜಾಪತಿಗಳಿದ್ದಂತೆ. ಎಲ್ಲವನ್ನು ಬಲ್ಲ ಬುದ್ಧಿವಂತರು ಎಂದರೆ ನೀವೇ. ಇಷ್ಟಾದರೂ ನೀವು ಆ ಜಗದೊಡೆಯನನ್ನು ಸರಿಯಾಗಿ ಅರಿಯಲಿಲ್ಲವೆಂದು ನನಗೆ ಬಹಳ ವಿಷಾದವಾಗುವದು. ನಿಜವಾಗಿಯೂ ಸರ್ವಜಗತ್ತಿನ ಈಶ್ವರನಾದ, ಹುಟ್ಟುಸಾವುಗಳನ್ನು ಮೀರಿ ನಿಂತ ಅವ್ಯಕ್ತ ಸ್ವರೂಪಿಯಾದ ಆ ಜಗತ್ಪ್ರಭುವಿನ ಮಹಾಮಹಿಮೆ ಅಪ್ರಮೇಯವೇ ಆಗಿದ್ದು ಯಾರಿಂದಲೂ ಅವನನ್ನು ಸರಿಯಾಗಿ ತಿಳಿದುಕೊಳ್ಳುವದು ಆಗುವದಿಲ್ಲ. ಇಂತಹ ಪರಾತ್ಪರನಾದ ಶಿವತತ್ವವನ್ನು ತಿಳಿಯದ ನೀವು ಮಹರ್ಷಿಗಳು ಹೇಗಾದಿರೋ ನನಗೆ ತಿಳಿಯದಂತಾಗಿದೆ. ಆ ಪರಮೇಶ್ವರನ ಯಥಾರ್ಥ ಸ್ವರೂಪವನ್ನು ಇಡಿಕಿಡಿಯಾಗಿ ಅರಿತು, ಗುರುತಿಸುವದು ಹರಿ ಬ್ರಹ್ಮಾದಿಗಳಿಗೂ ಸಾಧ್ಯವಿಲ್ಲ. ಅದು ಹೋಗಲಿ. ಆದರೆ ಕಣ್ಣಿಗೆ ಕಾಣುವದಲ್ಲವೇ ಈ ಪ್ರಪಂಚ. ಇದೆಲ್ಲವೂ ಹುಟ್ಟಿದ್ದು ಅವನಿಂದ, ಬೆಳೆದಿದ್ದು ಅವನಿಂದ, ಬದುಕಿದ್ದು ಅವನಿಂದ. ಈ ಮಾತನ್ನು ತಲೆಯಿದ್ದ ಎಲ್ಲ ಪ್ರಾಣಿಗಳೂ ಬಲ್ಲವು. ಇದನ್ನು ಕೂಡ ನೀವು ಅರಿಯದೆ ಹೋದಿರಾ? ಈ ಆಕಾಶ, ಅಗ್ನಿ, ವಾಯು, ಭೂಮಿ, ವರುಣ ಇವರೆಲ್ಲರೂ

ಯಾರಿಗೆ ಶರೀರ ಭೂತರು? ಸೂರ್ಯಚಂದ್ರರು ಯಾರ ಕಣ್ಣು? ಸುರಾಸುರರು ಯಾರ ಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಾರೆ? ಬ್ರಹ್ಮ ಇಂದ್ರ ಮೊದಲಾದ ದೇವತೆಗಳು **'ಈಶ್ವರ'** 'ಈಶ್ವರ'ನೆಂದು ಯಾರನ್ನು ಕರೆಯುತ್ತಾರೆ? ಇಂತಹ ಸರ್ವವಂದ್ಯನಾದ ಎಲ್ಲರೂ ಸ್ಪಷ್ಟವಾಗಿ ತಿಳಿದ ಮಹಾದೇವನನ್ನು ನಿಮ್ಮಂಥ ಜ್ಞಾನಿಗಳು ತಿಳಿದುಕೊಳ್ಳದಿರುವದು ಆಶ್ಚರ್ಯವೇ ಸರಿ ! ತನ್ನ ಯೋಗಬಲದಿಂದ ಈ ಪಾರ್ವತಿಯಲ್ಲಿ ವಿಕಾರವನ್ನುಂಟುಮಾಡಿ ಈ ಬ್ರಹ್ಮಾಂಡವನ್ನು ಮೂಲತಃ ನಿರ್ಮಿಸಿದವನು ಶಿವ ಶಬ್ದ ವಾಚ್ಯವಾದ ಆ ಪರಬ್ರಹ್ಮನೇ. ಬ್ರಹ್ಮದೇವರಿಗೆ ಲೋಕಕರ್ತೃತ್ವವನ್ನು ಕರುಣಿಸಿದವನು, ವಿಷ್ಣುವಿಗೆ ಜಗತ್ತಿನ ರಕ್ಷಣಾಧಿಕಾರವನ್ನು ಒಪ್ಪಿಸಿದವನು, ಉಳಿದ ಇಂದ್ರಾದಿ ದೇವತೆಗಳಿಗೆ ವಿವಿಧ ಜಗದ್ವ್ಯಾಪಾರಗಳನ್ನು ಮಾಡಲು ಆಜ್ಞೆಯಿತ್ತವನು ಆ ಭಗವಂತನೇ. ಆದುದರಿಂದ ನಾನು ಪರಾಧೀನರಾದ ಹುಟ್ಟು, ಸಾವುಗಳ ಕಟ್ಟಿಗೆ ಒಳಪಟ್ಟ ಮಿಕ್ಕ ದೇವತೆಗಳನ್ನೆಲ್ಲ ಬಿಟ್ಟು ಮುಕ್ಕಣ್ಣನನ್ನೇ ಮದುವೆಯಾಗಬೇಕೆಂದು ಸಂಕಲ್ಪಿಸಿದ್ದೇನೆ. ನಾನು ವರಿಸಿದ ವರ ದೇವ ಪ್ರವರ. ಅವನಿಗಿಂತ ಉತ್ತಮರಿಲ್ಲ. ಅವನ ಐಶ್ವರ್ಯಕ್ಕೆ ಅಂತ್ಯವಿಲ್ಲ. ಅವನ ಪ್ರಭಾವಕ್ಕೆ ಮಿತಿ ಇಲ್ಲ. ಅಂತಹ ಪರಮೇಶ್ವರನಿಗೆ ನಾನು ಶರಣು ಹೋಗಿದ್ದೇನೆ. ಅವನನ್ನೇ ಮದುವೆಯಾಗುತ್ತೇನೆ. ಇದು ನನ್ನ ದೃಢಸಂಕಲ್ಪ. ಇದರಲ್ಲಿ ಕಿಂಚಿತ್ತೂ ಕೂಡ ಎಂದಿಗೂ ಬದಲಾಗದು. ಓ ಮಾನ್ಯ ಮುನಿಗಳೇ, ನಿಮಗೆ ಈ ನನ್ನ ಸಂಕಲ್ಪ ತಪ್ಪು ಎಂದು ಎನಿಸಿದರೆ ನೀವು ಇಲ್ಲಿಂದ ಹೊರಟು ಹೋಗಬಹುದು. ಸರಿ ಎನಿಸಿದರೆ ಇಲ್ಲಿಯೇ ಇರಬಹುದು''

ಮಹಾದೇವಿಯ ಮಾತುಗಳನ್ನು ಕೇಳಿ ಋಷಿಗಳ ಕಣ್ಣುಗಳಿಂದ ಆನಂದಬಾಷ್ಪಗಳು ಉದುರತೊಡಗಿದವು. ಅವರೆಲ್ಲರೂ ಆ ತಾಯಿಯ ವಿಚಾರವನ್ನು ಆನಂದದಿಂದ ಒಪ್ಪಿಕೊಂಡು ಪರಮಸಂತೋಷದಿಂದ ಮಿದುವಾಗಿ ಮಾತನಾಡಿಸಿದರು. ಆ ಶೈಲಕನ್ಯೆಯನ್ನು ಕುರಿತು-

**ಋಷಿಗಳು:-** ''ಮಗಳೇ, ನೀನೊಂದು ಅತ್ಯದ್ಭುತ ವ್ಯಕ್ತಿ. ನಿರ್ಮಲವಾದ ಜ್ಞಾನದ ಮೂರ್ತಿಯೇ ನೀನು. ಪರಮೇಶ್ವರನಲ್ಲಿ ಗಟ್ಟಿಯಾಗಿ ಮನವನ್ನು ನೆಟ್ಟ ನೀನು ನಮ್ಮ ಮನಸ್ಸನ್ನು ಕೂಡ ನಿರ್ಮಲಗೊಳಿಸಿದೆ. ಆ ಪರಮೇಶ್ವರನ ಅತ್ಯದ್ಭುತವಾದ ಐಶ್ವರ್ಯವನ್ನೂ, ಮಹಿಮೆಯನ್ನೂ ಪಾಮರರಾದ ನಾವು ಎಂತು ತಿಳಿಯಬಲ್ಲೆವು ! ಆದರೆ ನಿನ್ನ ಮನೋನಿರ್ಧಾರದ ಸ್ಥೈರ್ಯವನ್ನು ತಿಳಿದುಕೊಳ್ಳಬೇಕೆಂಬ ತವಕದಿಂದ ನಾವು ಇಲ್ಲಿಗೆ ಬಂದೆವು. ಸುಂದರಿ, ನಿನ್ನ ಮನೋರಥವು ಬೇಗನೆ ಪೂರ್ಣವಾಗುವದು. ನೀನು ಆ ಮಹೇಶ್ವರನನ್ನು ಕೆಲವೇ ದಿನಗಳಲ್ಲಿ ಹೊಂದುವೆ. ಬಿಸಿಲು ಸೂರ್ಯನನ್ನು ಬಿಟ್ಟು ಹೋದೀತೆ? ರತ್ನಗಳ ಕಾಂತಿಯು ಆ ರತ್ನಗಳನ್ನು ಬಿಟ್ಟು ಬೇರೆ ನಿಂತೀತೆ? ಶಬ್ದವನ್ನು ಬಿಟ್ಟು ಅರ್ಥವಿರಲಾರದು. ಆದರಂತೆ ನೀನು ಮಹಾದೇವನನ್ನು ಬಿಟ್ಟು ಇರಲಾರೆ. ಇನ್ನು ನಾವು ಇಲ್ಲಿಂದ ಹೊರಡುತ್ತೇವೆ. ನಿನ್ನನ್ನು ಕೈ ಹಿಡಿದು ಕೃತಾರ್ಥಳನ್ನಾಗಿಮಾಡಲು ಅವನನ್ನು ನಾವು ಪ್ರಾರ್ಥಿಸುತ್ತೇವೆ. ನಮ್ಮ ಮನಸ್ಸಿನಲ್ಲಿಯೂ ನಿನ್ನ ವಿಚಾರವೇ ಇರುತ್ತದೆ. ನಿಮ್ಮಿಬ್ಬರ ಸಮಾಗಮದಿಂದಲೇ ನಮ್ಮ

ಸ್ವಾರ್ಥ, ಪುರುಷಾರ್ಥ, ಸರ್ವಾರ್ಥಸಿದ್ಧಿ ಆಗಲಿದೆ.'' ಹೀಗೆ ಹೇಳಿದ ಬಳಿಕ ಪಾರ್ವತಿದೇವಿಯು ಅವರನ್ನು ಅತ್ಯಾದರದಿಂದ ಸತ್ಕರಿಸಿದಳು. ಅವರು ಅಲ್ಲಿಂದ ಹೊರಟು, ಕೈಲಾಸಪತಿಯನ್ನು ಕಾಣುವದಕ್ಕಾಗಿ ಹಿಮಪ್ರಸ್ಥಕ್ಕೆ ಹೋದರು. ಗಂಗೆಯ ತರಂಗಗಳು ಅಂಗಳವನ್ನು ತೊಳೆದು ಮುತ್ತಿನ ಮಳಲು ಕಣಗಳಿಂದ ರಂಗವಲ್ಲಿ ಹಾಕಿ ಸಿಂಗರಿಸಿದ ಶಿವನ ತಪೋವನಕ್ಕೆ ಅವರು ಐತಂದರು.

ಆ ಶಿವಾಶ್ರಮದ ಬಾಗಿಲ ಬಳಿ ಬೆತ್ತ ಹಿಡಿದುಕೊಂಡು 'ವೀರಕ' ಎಂಬ ಗಣಪತಿ ನಿಂತುಕೊಂಡಿದ್ದ. ಅವನಿಗೆ ಪ್ರಭುವಿನ ದರುಶನ ಮಾಡಿಸಲು ಮುನಿಗಳು ಕೇಳಿಕೊಂಡರು. ವೀರಕನು ಒಳಗೆ ಹೋದ. ತಪಸ್ಸಮಾಧಿಯಲ್ಲಿದ್ದ ಪರಮೇಶ್ವರನು ಅದೇ ಆಗ ತನ್ನ ಸಮಾಧಿಯನ್ನು ಸಡಲಿಸಿ ಸಾಯಂಕಾಲ ಸಂಧ್ಯಾವಂದನೆಗಾಗಿ ತೆರಳಲಿದ್ದ. ವೀರಕನು ಮಂಡೆಯೂರಿ ನಮಸ್ಕರಿಸಿ ದರ್ಶನಾಕಾಂಕ್ಷಿಗಳಾದ ಸಪ್ತರ್ಷಿಗಳ ಆಗಮನವನ್ನು ತಿಳಿಸಿದ. ಈಶ್ವರನು ತನ್ನ ಹುಬ್ಬಿನ ಚಾಲನೆಯಿಂದಲೇ ಅವರನ್ನು ಒಳಗೆ ಬಿಡಲು ಅಪ್ಪಣೆಯಿತ್ತ. ಮರುನಿಮಿಷದಲ್ಲಿ ಕೃಷ್ಣಾಜಿನವನ್ನು ಹೊದ್ದುಕೊಂಡ, ಜಟಾಧಾರಿ ಮುನಿಗಳ ತಂಡವು ಸಿದ್ಧವೇದಿಕೆಯನ್ನು ಸೇರಿ ಬೊಗಸೆ ತುಂಬ ತಂದ ಕಲ್ಪವೃಕ್ಷದ ಹೂಗಳನ್ನು ಭಗವಂತನ ಅಡಿದಾವರೆಗಳಿಗೆ ಅರ್ಪಿಸಿ ನಮಸ್ಕರಿಸಿದರು. ಅವರೆಲ್ಲರೂ ಬಾಯಿತುಂಬಾ ಆ ಭಗವಂತನನ್ನು ಸ್ತುತಿಸಿದರು-

''ಪ್ರಭು ನಾವು ಧನ್ಯ ಧನ್ಯರು. ನಮ್ಮನ್ನು ಇಲ್ಲಿಗೆ ಕಳಿಸಿದ ದೇವೇಂದ್ರನು ಭಾಗ್ಯವಂತನಾಗುವನು. ನಿನ್ನ ಕರುಣಾಜಲದ ಪ್ರೋಕ್ಷಣೆಯಿಂದ ಒಬ್ಬ ಹೆಣ್ಣುಮಗಳು ತಪಸಿದ್ಧಿಯನ್ನು ಬೇಗನೇ ಪಡೆಯಲಿದ್ದಾಳೆ. ಹಿಮಗಿರಿಯ ಮಗಳಾದ ಪಾರ್ವತಿಯು ನಿನ್ನಲ್ಲೆ ಮನಸ್ಸಿಟ್ಟು ತಪಸ್ಸನ್ನು ಮಾಡುತ್ತಿರುವಳು. ನಿನ್ನ ದರುಶನದಿಂದ ನಾವು ಕೃತಾರ್ಥರಾದೆವು. ಜಗತ್ತನ್ನು ಸೃಷ್ಟಿಸಿದ ನೀನು ಅದರ ಪಾಲನದ ವಿಚಾರವನ್ನು ಸರಿಯಾಗಿ ಮಾಡಿರುತ್ತಿರುವೆ. ಆದರಿಂದ ಸುರೇಂದ್ರನ ಹಾಗೂ ನಮ್ಮ ಮನೋರಥಗಳೆಲ್ಲವೂ ಪೂರ್ಣವಾದಂತೆಯೇ. ಇಂದ್ರನ ಮಾತಿನಂತೆ ಇಲ್ಲಿಗೆ ಬಂದದ್ದು ಸಾರ್ಥಕವಾಯಿತು.'' ಅರ್ಥಗರ್ಭಿತವಾದ ಸಪ್ತರ್ಷಿಗಳ ಈ ಮಧುರ ಮಾತುಗಳನ್ನು ಕೇಳಿ ಮಹೇಶ್ವರನು ಮಂದಹಾಸಬೀರುತ್ತ ಉತ್ತರಿಸಿದನು-

**ಈಶ್ವರ** :- ''ಮಹರ್ಷಿಗಳೆ, ನೀವು ಇಂದ್ರನ ಮಾತಿನಂತೆ ನನ್ನ ಬಳಿಗೆ ಬಂದಿದ್ದೀರಿ. ಲೋಕಕ್ಷೇಮವೇ ನಿಮ್ಮ ಗುರಿ. ಪರ್ವತರಾಜನಿಗೆ ಕನ್ಯೆಯು ಹುಟ್ಟಿದ್ದನ್ನು ನಾನು ಬಲ್ಲೆ. ದೇವಕಾರ್ಯಕ್ಕಾಗಿ ನೀವೆಲ್ಲರೂ ಅತ್ಯಂತ ಆಸ್ಥೆ ಹಾಗೂ ಉತ್ಕಂಠೆಯಿಂದ ಪ್ರಯತ್ನಮಾಡುತ್ತಿದ್ದೀರಿ. ಆದರೆ ಜ್ಞಾನಿಗಳಾದವರು ಲೋಕಾರೂಢಿ ಸಂಪ್ರದಾಯಗಳನ್ನು ಬಿಡಬಾರದು. ದೊಡ್ಡವರು ಆಚರಿಸಿದಂತೆಯೇ ಉಳಿದವರೂ ಅದೇ ಪ್ರಮಾಣವೆಂದು ಅದರಂತೆ ನಡೆಯುವರು.'' ಶಿವನ ಮಾತಿನ ಮೇಲಿಂದ ಅವನ ಭಾವವನ್ನು ಅರಿತು, ಸಪ್ತರ್ಷಿಗಳು ಹಿಮಾಲಯಕ್ಕೆ ಹೋಗಿ ಅವನಿಗೆ ಹೀಗೆ ಹೇಳಿದರು.

**ಮುನಿಗಳು**:- ''ಮಹಾದೇವನು ತಾನಾಗಿಯೇ ನಿನ್ನ ಮಗಳನ್ನು ಮದುವೆಯಾಗ ಬೇಕೆಂದು ಅಪೇಕ್ಷಿಸುತ್ತಾನೆ. ಆದರೆ ಅದು ಕ್ರಮಬದ್ಧವಾಗಿ ಸಂಪ್ರದಾಯಕ್ಕೆ

ಅನುಗುಣವಾಗಿ ನಡೆಯಬೇಕೆಂದು ಅವನ ಇಚ್ಛೆ. ಆದುದರಿಂದ ನೀನು ಅಗ್ನಿಯಲ್ಲಿ ಆಹುತಿ ಅರ್ಪಿಸುವಂತೆ, ಪಾರ್ವತಿಯನ್ನು ಪರಮೇಶ್ವರನಿಗೆ ಒಪ್ಪಿಸಿ, ನಿನ್ನ ಜೀವನವನ್ನು ಪಾವನ ಮಾಡಿಕೊ. ಇದು ದೇವತಾ ಕಾರ್ಯ. ಇದರಿಂದಲೇ ಜಗದೋದ್ಧಾರ. ಇದರಿಂದ ಬರುವ ಪುಣ್ಯ ಶಾಶ್ವತ. ಆದುದರಿಂದ ಈ ಕಾರ್ಯವನ್ನು ಬೇಗ ಮಾಡಿ ಮುಗಿಸು.''

ಮುನಿಗಳು ಹೀಗೆ ನುಡಿದ ಬಳಿಕ ಹಿಮವಂತನಿಗೆ ಆನಂದೋದ್ರೇಕವಾಯಿತು. ಅವನಿಗೆ ಸಂತೋಷದ ಭರದಲ್ಲಿ ಕೊರಳು ಕಟ್ಟಿತು. ಮಾತನಾಡಲು ಬಾರದಂತಾಯಿತು. ಆಗ ಅಲ್ಲಿಯೇ ನಿಂತುಕೊಂಡ ಅವನ ಮಡದಿ ಮೇನಾದೇವಿಯು ಆ ಏಳೂ ಮಹರ್ಷಿಗಳಿಗೆ ವಂದಿಸಿ, ಚಂದ್ರಶೇಖರನ ಪಾದಾರವಿಂದಗಳನ್ನು ಅಭಿನಂದಿಸಿ, ಅರ್ಥಗರ್ಭಿತವಾದ ಮಾತುಗಳನ್ನು ಹೇಳಿದಳು.

''ಕನ್ಯಾದಾನ ಮಾಡಿಕೊಟ್ಟರೆ, ಅತ್ಯಧಿಕ ಪುಣ್ಯ ಬರುವದೆಂದು ಶಾಸ್ತ್ರಗಳೇನೋ ಸಾರುತ್ತವೆ. ಆದರೂ ಬಲ್ಲವರು ಮೊದಲು ಹೆಣ್ಣು ಹುಟ್ಟಲಿ ಎಂದು ಬಯಸುವದಿಲ್ಲ. ಯಾಕೆಂದರೆ ಹೆಣ್ಣು ಹಡೆದವರು ದುಃಖದಿಂದ ಹಣ್ಣುಹಣ್ಣಾಗುವರು. ಸೋತು ಸುಣ್ಣಾಗುವರು, ಸವೆದು ಸಣ್ಣಾಗುವರು. ಅದಕ್ಕಾಗಿಯೇ ಕನ್ಯೆ ಹುಟ್ಟುವದು ಬೇಡ ಎಂದು ಎಲ್ಲರೂ ಬಯಸುವರು. ಆ ಕನ್ಯಾಜನನದ ದುಃಖವು ಈಗ ನಮಗೆ ಬಂದಂತಾಯಿತು. ಕನ್ಯೆಯನ್ನು ಕೊಡಬೇಕಾದರೆ ವರನು ದೊಡ್ಡ ಕುಲದಲ್ಲಿ ಜನಿಸಿರಬೇಕು. ಪ್ರಾಯದ ವಯಸ್ಸು, ಸುಂದರ ರೂಪ, ಸಾಕಷ್ಟು ಐಶ್ವರ್ಯ, ಅನುರೂಪ ಜಾತಕ, ವಿನಯ, ಅನುರಾಗ ಮೊದಲಾದ ಸದ್ಗುಣಗಳು ಅವನಲ್ಲಿ ಅವಶ್ಯವಾಗಿರಬೇಕು. ಇವೆಲ್ಲ ಇದ್ದರೆ ಅಂತಹ ವರನನ್ನು ಕರೆದಾದರೂ ಕನ್ಯೆಯನ್ನು ಕೊಡಬೇಕು. ಅವನು ಬಂದು ಬೇಡದಿದ್ದರೂ ಅಡ್ಡಿಯಿಲ್ಲ. ಈಗ ನನ್ನ ಮಗಳಿಗೆ ನೀವು ಸೂಚಿಸುವ ವರನಲ್ಲಿ ಇವು ಯಾವ ಗುಣವೂ ಇಲ್ಲ. ಬರಿ ಉಗ್ರ ತಪಸ್ಸನ್ನುಮಾಡುತ್ತ ಕಾಡಿನಲ್ಲಿ ಕುಳಿತರೆ ಆ ರುದ್ರನಿಗೆ ನನ್ನ ಮಗಳನ್ನು ಹೇಗೆ ಕೊಡುವದು? ಈ ವಿಷಯದಲ್ಲಿ ಅವಳನ್ನೇ ಕೇಳಿರಿ. ಅವಳ ಅಭಿಪ್ರಾಯವನ್ನು ಕೇಳಿಕೊಂಡು ಹೇಗೆ ಮಾಡಿದರೆ ವಿಹಿತವಾದೀತು ಹಾಗೆ ಮಾಡಿರಿ.''

ಶೈಲ ರಾಜನ ಪ್ರೇಯಸಿಯು ಆಡಿದ ಮಾತುಗಳನ್ನು ಕೇಳಿ ಮುನಿಗಳು ಅವಳ ಮನಸ್ಸು ಪ್ರಸನ್ನವಾಗುವಂತೆ ಸರಸಾರ್ಥ ಸುಂದರವಾದ ಮಾತುಗಳನ್ನು ಹೇಳಿದರು. ''ಐಶ್ವರ್ಯಸಂಪನ್ನರಾದ ದೇವದಾನವರೆಲ್ಲರೂ ಶಿವನ ಅಡಿದಾವರೆಗಳನ್ನು ಎಡಬಿಡದೆ ಆರಾಧಿಸುವರು. ಇದರ ಮೇಲಿಂದ ಅವನ ಐಶ್ವರ್ಯ ಎಷ್ಟಿದೆ ಎಂಬುದನ್ನು ತಿಳಿದುಕೊ. ಅವನ ಅರ್ಥಾತ್ ಶಿವನ ರೂಪದ ವಿಷಯದಲ್ಲಿ ಹೇಳುವದೇ ಬೇಡ, ಆ ದಿವ್ಯರೂಪವನ್ನು ತನ್ನದಾಗಿಸಿಕೊಳ್ಳಬೇಕೆಂದು ನಿನ್ನ ಮಗಳು ಉಗ್ರತಪಸ್ಸನ್ನು ಆಚರಿಸುತ್ತಿದ್ದಾಳೆ. ಅವನ ಸೌಂದರ್ಯದಿಂದಲೇ ನಿನ್ನ ಮಗಳ ಮನಸ್ಸಿಗೆ ಮಹದಾನಂದ. ಅವನ ರೂಪಕ್ಕೆ ಇವಳು ಮಾರುಹೋಗಿದ್ದಾಳೆ. ಮನಸೋತಿದ್ದಾಳೆ. ಶಿವನನ್ನು ತಪಸ್ಸಿನ ಸಿದ್ಧಿಯಿಂದ ಪಡೆಯಲು ನಿನ್ನ ಮಗಳೂ ತಪಸ್ಸನ್ನಾಚರಿಸುತ್ತಿದ್ದಾಳೆ.

ಅವನ ತಪಸ್ಸಿದ್ಧಿಯೇ ಇವಳು. ಇವಳ ತಪಸ್ಸಿನ ಫಲವೇ ಅವನು. ಇಬ್ಬರ ತಪಸ್ಸೂ ಸಾರ್ಥಕವಾಗಿ ಅವಳು ಅವನನ್ನು, ಅವನು ಅವಳನ್ನು ಪಡೆದು ಕೃತಾರ್ಥರಾಗುವರು. ಇದರಲ್ಲಿ ಸಂದೇಹವಿಲ್ಲ.''

ಹೀಗೆ ಹೇಳಿ ಸಪ್ತಋಷಿಗಳು ಶೈಲರಾಜನನ್ನು ಕರೆದುಕೊಂಡು ಉಮೆಯು ತಪಂಗೈಯುವ ಠಾಣ್ಯಕ್ಕೆ ತೆರಳಿದರು. ಅಲ್ಲಿ ಅವಳನ್ನು ಕಂಡು ''ತಾಯೆ, ತಪಸ್ಸಿನಿಂದ ನಿನ್ನ ರೂಪವು ಇನ್ನೂ ರಮಣೀಯವಾಗಿದೆ. ನಿನ್ನ ಕಮನೀಯವಾದ ಕಾಯದ ಕಾಂತಿಯು ನಿಜವಾಗಿಯೂ ಚೇತೋಹಾರಿ. ಕೋಮಲಾಂಗಿ, ಇಂತಹ ದಿವ್ಯರೂಪವನ್ನು ತಪಸ್ಸಿನ ದಾರುಣತೆಯಿಂದ ಮ್ಲಾನಗೊಳಿಸಬೇಡ. ನಾಳೆ ಬೆಳಿಗ್ಗೆ ಶಂಕರನು ನಿನ್ನನ್ನು ಮದುವೆಯಾಗುವನು. ಇಂದು ಒಂದು ದಿನ ಮುಂಚಿತವಾಗಿಯೇ ಬಂದು ನಿನ್ನ ತಂದೆಯನ್ನು ಇದಕ್ಕಾಗಿ ಪ್ರಾರ್ಥಿಸಿಕೊಂಡಿದ್ದೇವೆ. ಈಗ ಅವನೊಡನೆ ಮನೆಗೆ ಹೋಗು. ನಾವು ನಮ್ಮ ನಿವಾಸಕ್ಕೆ ತೆರಳುವೆವು.''

ಮಹರ್ಷಿಗಳ ಈ ಮಾತುಗಳನ್ನು ಕೇಳಿ, ಹೇಮವತಿಗೆ ಎನಿಸಿತು. ''ನಿಜವಾಗಿಯೂ ತಪಸ್ಸಿಗೆ ಫಲವುಂಟು. ದೇವರನ್ನು ಕುರಿತು ಮಾಡಿದ ತಪಸ್ಸು ಎಂದೂ ವ್ಯರ್ಥವಾಗುವುದಿಲ್ಲ'' ಎಂದು. ಅವಳು ಸಂತಸದುಂಬಿ, ಸಂಭ್ರಮದಿಂದ ತಂದೆಯ ಮುಂದೆ ಐತಂದಳು. ಆ ಇಂದುಭೂಷಣನನ್ನು ಎಂದು ಕಾಣುವೆನು ಎಂದು ಅವಳ ಹೃದಯವು ತುಡಿಯುತ್ತಿತ್ತು. ಅಂದಿನ ರಾತ್ರಿ ಬೆಳಗಾಗುವವರೆಗೂ ಇದೇ ಯೋಚನೆ. ನಿದ್ದೆ ಬರಲೇ ಇಲ್ಲ. ಬೆಳಗಾದ ಬಳಿಕ ಉಷಃಕಾಲದಲ್ಲಿ ದೇವತಾಸ್ತ್ರೀಯರು ವಿವಾಹ ಪೂರ್ವದವಿಧಿಯ ಅಂಗವಾಗಿ ಮಾಡಬೇಕಾದ ಮಂಗಲಕಾರ್ಯಗಳನ್ನು ಪ್ರಾರಂಭಿಸಿದರು. ಮಂಗಳಾಂಗಿಯಾದ ಆ ಸರ್ವಮಂಗಳೆಗೆ ಅಭ್ಯಂಗ ಸ್ನಾನಮಾಡಿಸಿ, ಬೆಲೆಬಾಳುವ ಪಟ್ಟೆ ಪೀತಾಂಬರಗಳನ್ನು ಉಡುಸಿದರು. ಮುತ್ತು, ರತ್ನ, ಬಂಗಾರದ ಆಭರಣಗಳನ್ನು ತೊಡಿಸಿದರು. ಹೈಮಾಚಲ, ಶೃಂಗಾಂಗಣವೆಲ್ಲವೂ ಮಂಗಲಭೂಮಿಯಾಗಿ ಕಂಗೊಳಿಸಿತು. ಆರೂ ಋತುಗಳು ಮೈದಾಳಿ ಹೂಗಳ ಸುಗ್ಗಿಯನ್ನೇ ಅಲ್ಲಿ ತಂದಿರಿಸಿ ಸೇವೆಗೈದವು. ಆವಹ, ಪ್ರವಹ, ಮುಂತಾದ ವಾಯುಗಳು ನೆಲವನ್ನೇ ಗುಡಿಸಿದವು. ಮೋಡ ಪಡೆಗಳು ಪನ್ನೀರಿನ 'ಥಳಿ' ಹಾಕಿದವು. ಸಾಕ್ಷಾತ್ ಲಕ್ಷ್ಮೀದೇವಿಯೇ ಅಲ್ಲಿಗೆ ಬಂದು, ಅಲ್ಲಿಯ ದಿವ್ಯ, ಭವ್ಯ ಭವನಗಳನ್ನೆಲ್ಲ ಸುಂದರವಾಗಿ ಶೃಂಗರಿಸಿದಳು. ಎಲ್ಲ ದೇವತೆಗಳು, ಋಷಿಗಳು, ಯಕ್ಷರು, ನಾಗರು, ಗಂಧರ್ವರು, ಕಿನ್ನರರು ಶಿವಶಿವೆ ಯರ ಮದುವೆಯ ತಯಾರಿಕೆಯಲ್ಲಿ ತೊಡಗಿದರು.

ಸ್ವಯಂ ಬ್ರಹ್ಮದೇವರು ಈಶ್ವರನ ಜಟಾಜೂಟವನ್ನು ಹಿಕ್ಕಿ, ಮೃದುಗೈದು ಮುಡಿಗಟ್ಟಿ ಅಲ್ಲಿ ಚಾರು ಚಂದ್ರಕೋರವನ್ನು ಮುಡಿಸಿದನು.

ರತ್ನಖಚಿತವಾದ ಕಿರೀಟವನ್ನು ಸರ್ವಾಭರಣವನ್ನು ತಂದು ಶಿವನ ಮುಂದೆ ಹಿಡಿದನು. ಶಂಭು ಹೊದ್ದುಕೊಂಡ ಗಜಚರ್ಮಾಂಬರವು ನೆಲದ ಮೇಲೆ ಬೀಳದಂತೆ ಹಿಂದೆ ಬಂದು ಇಂದ್ರನು ಎತ್ತಿ ಹಿಡಿದನು. ಈಶ್ವರನ ವಾಹನವಾದ ಎತ್ತನ್ನು ವಾಯುವು ಅಲಂಕರಿಸಿದನು. ವರುಣನು ದಿವ್ಯವಾದ ಹೂಮಾಲೆ ತಂದು ಕೊರಳಿಗೆ ಹಾಕಿದನು.

ಸೂರ್ಯ, ಚಂದ್ರ, ಅಗ್ನಿ ಈ ಮೂವರು ಮುಕ್ಕಣ್ಣನ ಮೂರು ಕಣ್ಣುಗಳಲ್ಲಿ ಬಂದು ನಿಂತು ಅಲ್ಲಿ ಕಾಂತಿ ಹೊಮ್ಮುವಂತೆ ಮಾಡಿದರು. ಸಪ್ತಸಮುದ್ರಗಳು ತಮ್ಮ ತರಂಗಾಂತರಂಗದಲ್ಲಿ ಶಂಭುವಿನ ಪ್ರತಿಬಿಂಬವನ್ನು ಕಾಣಿಸಿ ದರ್ಪಣ ಸೇವೆಗೈದವು.

ಹೀಗೆ ಸರ್ವದೇವತೆಗಳ ಸೇವೆ ಕೈಕೊಂಡು ಶಿವನು ಎತ್ತಿನ ಬೆನ್ನ ಮೇಲೆ ಹತ್ತಿ ಪ್ರಯಾಣ ಹೊರಟನು. ಮುಂದೆ ಮಂಗಳವಾದ್ಯಗಳು ಮೊಳಗುತ್ತಿದ್ದವು. ಹಿಂದೆ ಸುರಾಸುರರೂ ಪ್ರಮಥಾದಿ ಪರಮೇಶ್ವರ ಪರಿವಾರವೆಲ್ಲವೂ ನಿಬ್ಬಣದ ಹುರುಪಿನಿಂದ ಸಡಗರದಿಂದ ಸಾಗಿತು, ಸ್ವಲ್ಪ ಹೊತ್ತಿನಲ್ಲಿ ಈ ಎಲ್ಲ ವರಪಕ್ಷದವರು ಹಿಮವಂತನ ರಾಜಧಾನಿಯನ್ನು ತಲುಪಿದರು.

ಆ ರಾಜಧಾನಿಯನ್ನು ಚಿನ್ನದ ತೋರಣ, ರನ್ನದ ಕಲಶ, ಚಿತ್ತಾರದಮಂಟಪ ಮುಂತಾದವುಗಳಿಂದ ಮನೋಹರವಾಗಿ ಅಲಂಕರಿಸಿದ್ದರು. ಪುರ ಬೀದಿಗಳಲ್ಲಿ ವರನಾದ ಹರನು ಬರುತ್ತಿರುವದನ್ನು ನೋಡಲು ಹೆಂಗಳೆಯರ ಸಂಭ್ರಮವೋ ಸಂಭ್ರಮ! ಚಂದ್ರಶಾಲೆಯ ಮೇಲುಪ್ಪರಿಗೆ, ಕಿಟಕಿ, ಬಾಗಿಲು, ಎಲ್ಲಿ ನೋಡಿದಲ್ಲೆಲ್ಲ ಚಂದ್ರಮುಖಿಯರು. ತಮ್ಮ ತಮ್ಮ ಕೈಯಲ್ಲಿಯ ಕೆಲಸಗಳನ್ನೆಲ್ಲ ಅಲ್ಲಿಯೇ ಒಗೆದು ಬಂದಿದ್ದರು. ಅಷ್ಟು ತವಕ ಅವರಿಗೆ ಭವಾನಿಯ ಪತಿಯಾದ ಭವನನ್ನು ಕಾಣಲು!

## ಶಿವಪಾರ್ವತೀ ವಿವಾಹಮಹೋತ್ಸವ

''ಅಗೋ ಆನೆಯ ತೊಗಲನ್ನು ಧರಿಸಿ, ಶಿರದಲ್ಲಿ ಚಂದ್ರನನ್ನು ಇರಿಸಿ, ಎತ್ತಿನ ಸವಾರಿಯಾಗಿ ಬರುವವನೇ ಪಾರ್ವತಿಯ ಪತಿ! ಇಂತಹ ಮೋಹನಾಂಗನನ್ನು ಮದುವೆಯಾಗಲಿರುವ ನಮ್ಮ ರಾಜಕನ್ಯೆ ಧನ್ಯೆ ಧನ್ಯಳು,'' ಎಂದು ಎಲ್ಲರೂ ಉದ್ಗಾರ ತೆಗೆಯುತ್ತಿದ್ದರು. ಅನಂತರ ವಿಶ್ವಕರ್ಮನು ಬಂದು, ಇದೇ ಹಿಮವಂತನ ಮಹಾಮಂದಿರ ಎಂದು ಮೆರವಣಿಗೆಯ ಮುಂಭಾಗದಲ್ಲಿ ಮೆಲ್ಲಡಿ ಇಡುವ ಮಹೇಂದ್ರನಿಗೆ ತಿಳಿಸಿದನು. ಶೈಲರಾಜದಂಪತಿಗಳು ಸಂಭ್ರಮದಿಂದ ಬಂದು ಬ್ರಹ್ಮಾದಿ ದೇವತೆಗಳನ್ನು ಸತ್ಕರಿಸಿದರು. ಮಹಾದೇವರನ್ನು ಹಿಮವಂತನು ಕೈಹಿಡಿದು ಒಳಗೆ ಕರೆದುಕೊಂಡು ಹೋದನು. ವರ ಪಕ್ಷದವರಿಗೆಲ್ಲರಿಗೂ ತಕ್ಕ ಮಾನ, ಮನ್ನಣೆ, ಊಟ ಉಪಚಾರ, ಉಪಹಾರ, ಆದರ ಉಡುಗೊರೆ ಮುಂತಾದವುಗಳನ್ನು ತೃಪ್ತಿಯಾಗುವಂತೆ ಮಾಡಿದನು. ಸ್ವಯಂ ಬ್ರಹ್ಮದೇವರೇ ಮಾರ್ಗದರ್ಶಕರಾಗಿ ನಿಂತು ವಿವಾಹ ಕಾರ್ಯವನ್ನೆಲ್ಲ ಸಾಂಗವಾಗಿ ಪೂರೈಸಿದರು. ಪರಮೇಶ್ವರನು ಯಾವ ವಿಧಿ ವಿಧಾನಗಳಿಗೂ ಲೋಪ ಬಾರದಂತೆ ಅಗ್ನಿಸಾಕ್ಷಿಯಾಗಿ ಪಾರ್ವತಿಯ ಕೈಹಿಡಿದು ಅವಳ ಕೊರಳಿಗೆ ಮಂಗಳಸೂತ್ರ ಕಟ್ಟಿದನು.

ಕನ್ಯಾದಾನ ಮಾಡುವವ ಪರ್ವತೇಶ್ವರನಾದ ಹಿಮಾಲಯ. ಸಾಕ್ಷಾತ್ ಮಹಾದೇವನೇ ವರ. ಲೋಕಮಾತೆಯೇ ವಧು-ಚತುರ್ಮುಖ ಬ್ರಹ್ಮನೇ ಪುರೋಹಿತ, ಸುರಾಸುರರೆಲ್ಲರೂ ವರ ಪಕ್ಷದಲ್ಲಿ ಭಕ್ತಿಯುತರಾದ ಬೀಗರು. ಅಂದ ಬಳಿಕ ಕೇಳುವದೇನು ಈ ಮದುವೆಯ ಸಂಭ್ರಮವನ್ನು! ಭೂದೇವಿಯು ಬಗೆಬಗೆಯ ಸಸ್ಯಗಳನ್ನು ಗಿಡಮೂಲಿಕೆಗಳನ್ನು ಕಾಣಿಕೆಯಾಗಿ ತಂದು ಒಪ್ಪಿಸಿದಳು. ವರುಣನು

ರತ್ನಾಭರಣಗಳನ್ನು, ಕುಬೇರನು ಬಂಗಾರದ ಅಲಂಕಾರಗಳನ್ನು ತಂದು ಒಪ್ಪಿಸಿದನು.ಇಂದ್ರನು ರತ್ನಖಚಿತವಾದ ಶ್ವೇತಛತ್ರವನ್ನು ತನ್ನ ಕೈಯಿಂದಲೇ ಚಂದ್ರಚೂಡನ ತಲೆಯ ಮೇಲೆ ಹಿಡಿದನು. ಗಂಧರ್ವರ ಗಾಯನ, ಕಿನ್ನರರ ವಾದನ, ಅಪ್ಸರೆಯರ ನರ್ತನ, ಪ್ರಮಥಗಣಗಳ ಸಂಭ್ರಮದ ಓಡಾಟ, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳ ವಿನೋದ ವಚನ ಮುಂತಾದವುಗಳಲ್ಲಿ ಅಲ್ಲಿ ನಡೆದು ವಿವಾಹವು ಒಳ್ಳೇ ವೈಭವದಿಂದ ಸಾಂಗವಾಯಿತು.

ಅಂದು ರಾತ್ರಿ ಪರಮೇಶ್ವರನು ಪಾರ್ವತಿಯೊಂದಿಗೆ ಅಲ್ಲಿಯೇ ತಂಗಿದ್ದನು. ಪ್ರಾತಃಕಾಲದಲ್ಲಿ ಪುರಂದರಾದಿ ವೃಂದಾರಕರು ಬಂದಿಗಳಾಗಿ ಸ್ತುತಿಸುತ್ತಿರುವಾಗ ಆ ತ್ರಿಪುರಾರಿಯು ಎಚ್ಚತ್ತು ಮಾವನಾದ ಹಿಮವಂತನನ್ನು ಬೀಳ್ಕೊಂಡು ಅಲ್ಲಿಂದ ಹೊರಟನು. ಮೇನೆ ಹಾಗೂ ಹಿಮವಂತ ಮತ್ತು ಅವನ ಪರಿವಾರದವರೆಲ್ಲರೂ ಗಿರಿಜೆಯ ವಿಯೋಗ ದುಃಖದಿಂದ ಕಂಬನಿದುಂಬಿ ನಿಂತರು. ಆದರೂ ಅವಳು ಕೊನೆಗೂ ತನ್ನ ಹಠವನ್ನು ಸಾಧಿಸಿಕೊಂಡು ತನ್ನ ಮನಮೆಚ್ಚಿದ ಮಹಾದೇವನನ್ನೇ ಮದುವೆಯಾಗಿ ಪತಿಗೃಹಕ್ಕೆ ಹೊರಟದ್ದಾಳೆಂದು ಸಂತಸ ತುಂಬಿದ ಸಂಭ್ರಮದಿಂದ ಅವಳನ್ನು ತಬ್ಬಿಕೊಂಡು ಬೀಳ್ಕೊಟ್ಟರು. ಆ ಬಳಿಕ ಪಾರ್ವತಿ ಪರಮೇಶ್ವರರು ಗಾಳಿಗಿಂತ ವೇಗದಿಂದ ಹೋಗುವ ನಂದೀಶ್ವರನ ವಿಶಾಲವಾದ ಪೃಷ್ಠದ ಮೇಲೇರಿ ಅಲ್ಲಿಂದ ಹೊರಟು ಮಂದರಾಚಲಕ್ಕೆ ಸಡಗರದಿಂದ ಐತಂದರು. ಹೀಗೆ ನವದಂಪತಿಗಳು ಹೊರಟುಹೋದಬಳಿಕ ಹಿಮವಂತನಿಗೆ ಬಹಳ ವ್ಯಾಕುಲತೆ ಉಂಟಾಯಿತು. ಅವನ ಬಂಧುಮಿತ್ರಪರಿವಾರದಲ್ಲಿ ಯಾರಿಗೂ ಮನಸ್ಸಿಗೆ ನೆಮ್ಮದಿಯಿಲ್ಲ.ಮಗಳ ಅಗಲುವಿಕೆಯ ದುಃಖದಿಂದ ಯಾವ ತಾಯಿ-ತಂದೆಗಳಿಗೆ ಮನಸ್ಸು ಕೊರಗಲಿಕ್ಕಿಲ್ಲ!

ಮಂದರಾಚಲಕ್ಕೆ ಬಂದ ಬಳಿಕ ಇಂದುಮೌಳಿಯು ಇಂದ್ರಾದಿ ದೇವತೆಗಳನ್ನೆಲ್ಲಾ ಉಚಿತವಾಗಿ ಉಪಚರಿಸಿ, ಸತ್ಕರಿಸಿ ಬೀಳ್ಕೊಟ್ಟನು. ಅವರೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದಬಳಿಕ ಆ ಮಹೇಶ್ವರನು ತನಗಾಗಿ ನಿರ್ಮಿತವಾದ ಒಂದು ರಮಣೀಯವಾದ ನಗರದಲ್ಲಿ ಪ್ರವೇಶಿಸಿದನು. ಅಲ್ಲಿ ಸ್ಫಟಿಕಮಯ ಗೋಪುರಗಳು ಮುಗಿಲೆತ್ತರ ಮನೋಹರವಾಗಿ ತೋರುತ್ತಿದ್ದವು. ಅಲ್ಲಿಯ ಮನೆಗಳಿಗೆಲ್ಲ ಇಂದ್ರನೀಲ ಮಣಿಗಳ ನೆಲಗಟ್ಟು. ಬಂಗಾರದ ಗೋಡೆಗಳು, ರತ್ನಮಂಟಪಗಳು ಹೊಳೆಯುತ್ತಿದ್ದವು. ಆ ದಿವ್ಯಪುರಿಯಲ್ಲಿಮಹಾದೇವನು ತನ್ನ ಮನದನ್ನೆ ಹೈಮವತಿಯೊಡನೆ ರಮ್ಯವಾದ ಉದ್ಯಾನಗಳಲ್ಲಿ ವಿಹರಿಸಿದನು. ಉಪವನಗಳಲ್ಲಿ ಕ್ರೀಡಿಸಿದನು. ಮಂಜುಲಲತಾಕುಂಜಗಳಲ್ಲಿ ಕಾಮಕೇಳೀವಿಲಾಸಗೈದನು. ಬಹುಕಾಲದವರೆಗೆ ಸಾಗಿತ್ತು ರಾಗಾನುರಾಗ ರಸಿಕರಾದ ಪಾರ್ವತೀಪರಮೇಶ್ವರರ ಸರಸ ದಾಂಪತ್ಯದ ಈ ಸಂಭೋಗ ಸಮಾರಂಭ, ಹಾಗೆಯೇ ಹಲವಾರು ವರುಷಗಳು ಮಧುಚಂದ್ರ ವಿಹಾರದ ಹೊಂಗನಸಿನ ಶೃಂಗಾರ ರಂಗಮಂಟಪದಲ್ಲಿ ವಿವಿಧ ವಿಹಾರ ವಿಲಾಸಗಳಲ್ಲಿ ಕಳೆದ ಬಳಿಕ ಪಾರ್ವತಿಯ ಮನಸ್ಸಿನಲ್ಲಿ ತನಗೊಬ್ಬ ಮಗುವು ಜನಿಸಬೇಕು ಎಂದು ಅಪೇಕ್ಷೆ ಆಯಿತು. ಅವಳು ಕೃತ್ರಿಮ ಬೊಂಬೆಗಳನ್ನಿಟ್ಟುಕೊಂಡು ಅವುಗಳನ್ನೇ ತನ್ನ ಮಕ್ಕಳೆಂದು ಭಾವಿಸಿ ಆಟವಾಡುತ್ತಿದ್ದಳು.

ಒಂದು ದಿನ ಪಾರ್ವತಿದೇವಿಯು ತನ್ನ ಮೈಗೆಲ್ಲ ಸುಗಂಧಿಎಣ್ಣೆಯನ್ನು ಪೂಸಿಕೊಂಡು, ಎರೆದುಕೊಂಡಳು. ಕೊಳೆಯಾದ ತನ್ನ ಶರೀರವು ಸ್ವಚ್ಛವಾಗಲಿ ಎಂದು ಪರಿಮಳ ದ್ರವ್ಯದಿಂದ ಕೂಡಿದ ಸ್ನಾನಚೂರ್ಣದಿಂದ ದೇಹವನ್ನು ಉಜ್ಜಿಕೊಂಡಳು. ಮಕ್ಕಳ ಹಂಬಲ ಬೆಂಬಿಡದ ಆ ಅಂಬಿಕೆಯು ತಾನು ಸ್ನಾನಮಾಡಿ ಉಳಿದ ಆ ಗಂಧ ಚೂರ್ಣ ತೆಗೆದುಕೊಂಡು ಆನೆಯ ಮುಖದ ಮಗುವನ್ನು ಮಾಡಿದಳು. ಹುಡಿಪುಡಿಗಳಿಂದ ಮಾಡಿದ ಆ ಆನೆಯ ಮೊರೆಯ ಮಗುವಿನೊಂದಿಗೆ ಎಷ್ಟೋ ಹೊತ್ತು ಆಟವಾಡಿ ಗೆಳತಿಯರೊಂದಿಗೆ ನಕ್ಕು ನಲಿದು ಸಂತಸಪಟ್ಟಳು. ಆ ಬೊಂಬೆ ಆಟ ಮುಗಿದ ಬಳಿಕ ಅದನ್ನು ಗಂಗಾನದಿಯ ನೀರಿನಲ್ಲಿ ವೈಯ್ದು ಹಾಕಿದಳು. ಗಂಗೆಯ ಒಡಲಿನಲ್ಲಿ ಆ ಗಜದಂತಹ ಮುಖವುಳ್ಳ ಮಗುವು ಬೆಳೆದು ಬಹಳ ದೊಡ್ಡದಾಯಿತು. ಜಗತ್ತನ್ನೇ ವ್ಯಾಪಿಸಿತು. ಅದನ್ನು ಗಂಗೆ ನನ್ನ ಒಡಲಿನಲ್ಲಿಬಿದ್ದು ಬೆಳೆದುದರಿಂದ 'ಇದು ನನ್ನ ಮಗು' ಎಂದಳು. ನನ್ನ ಮೈ ತೊಳೆದ ಚೂರ್ಣದಿಂದ ನಾನೇ ಮಾಡಿ ಇಟ್ಟುದರಿಂದ ಇದು ನನ್ನ ಮಗು, ಎಂದಳು ಪಾರ್ವತೀದೇವಿ. ಗಾಂಗೇಯ ಎಂದೂ ಪಾರ್ವತೀ ಪುತ್ರನೆಂದೂ ದೇವತೆಗಳು ಅವನನ್ನು ಪೂಜಿಸಿದರು. ಬ್ರಹ್ಮನು ಅವನಿಗೆ ವಿನಾಯಕ ಗಣದ ಆಧಿಪತ್ಯವನ್ನು ಕರುಣಿಸಿದನು.

ಆ ಶಿವ ಸತಿಗೆ ಮಕ್ಕಳಾಟವನ್ನು ಎಷ್ಟು ಆಡಿದರೂ ತೃಪ್ತಿಯಿಲ್ಲ. ಅಶೋಕ ವೃಕ್ಷದ ಒಂದು ಮೊಳಕೆಯನ್ನುಅವಳು ನೆಟ್ಟು ನೀರು ಹಾಕಿ ದೊಡ್ಡದನ್ನಾಗಿ ಮಾಡಿದಳು. ಅದಕ್ಕೆ ಬೃಹಸ್ಪತಿ ಮೊದಲಾದ ಬ್ರಾಹ್ಮಣರನ್ನು ಕರೆದು, ಇಂದ್ರಾದಿ ದೇವತೆಗಳನ್ನು ಆಹ್ವಾನಿಸಿ ಮಂಗಲ ಸಂಸ್ಕಾರ ಮಾಡಿಸಿದಳು. ಆಗ ದೇವತೆಗಳು ಅವಳಿಗೆ ''ಮರಗಳಿಗೆ ಮಕ್ಕಳೆಂದು ಭಾವಿಸಿ ಪೋಷಿಸುವದರಿಂದ ಏನು ಫಲ?'' ಎಂದು ಕೇಳಿದರು. ದೇವತೆಗಳ ಈ ಪ್ರಶ್ನೆಗೆ ಪಾರ್ವತಿಯು ಲೋಕೋಪಕಾರಕವಾದ ಉದ್ಬೋಧಕ ಉತ್ತರ ಕೊಟ್ಟಳು.

ದೇವಿ ಉವಾಚ :

**''ಏವಂ ನಿರುದಕೇ ದೇಶೇ ಯಃ ಕೂಪಂ ಕಾರಯೇದ್ಬುಧಃ ।**
**ಬಿಂದೌಬಿಂದೌಚತೋಯಸ್ಯ ವಸೇತ್ಸಂವತ್ಸರಂ ದಿವಿ ॥**
**ದಶಕೂಪಸಮಾ ವಾಪೀ ದಶವಾಪೀ ಸಮೋ ಹ್ರದಃ ।**
**ದಶಹ್ರದಸಮಃ ಪುತ್ರೋ ದಶಪುತ್ರೈಃ ಸಮೋ ದ್ರುಮಃ ।**
**ಏಷೈವ ಮಮ ಮರ್ಯಾದಾ ನಿಯತಾ ಲೋಕಭಾವಿನೀ ॥''**

ನೀರಿಲ್ಲದ ದೇಶದಲ್ಲಿ ಬಾವಿ ತೋಡಿಸಿದ ಬುದ್ಧಿವಂತನು ಒಂದು ಹನಿ ನೀರಿಗೆ ಒಂದು ವರುಷದಂತೆ ಬಹುಕಾಲ ಸ್ವರ್ಗದಲ್ಲೇ ವಾಸಿಸುವನು. ಇಂತಹ ಹತ್ತುಬಾವಿಗಳಿಗೆ ಒಂದು ಕೆರೆ ಸಮ. ಹತ್ತುಕೆರೆಗಳಿಗೆ ಒಂದು ಸರೋವರ ಸಮ. ಹತ್ತು ಸರೋವರಗಳಿಗೆ ಒಬ್ಬ ಮಗ ಸಮ. ಹತ್ತು ಮಕ್ಕಳಿಗೆ ಒಂದು ಮರವು ಸಮ. ಒಂದು ಮರವನ್ನು ನೆಟ್ಟು ನೀರು ಹಾಕಿ ಬೆಳೆಸಿ ಪಾಲಿಸಿ, ಪೋಷಿಸಿ ಹಣ್ಣು ಹೂ ಬಿಡುವಂತೆ ಮಾಡಿದರೆ ಹತ್ತು ಮಕ್ಕಳನ್ನು ಹೆತ್ತು, ಹೊತ್ತು, ಎತ್ತಿ ಆಡಿಸಿ, ಬೆಳೆಸಿ, ಬೆಳಗಿಸಿದ ಪುಣ್ಯವು ಬರುವದು, ಸಂತೋಷವೂ ಆಗುವದು. ಇದು

ನಾನು ಅರಿತಿರುವ ಲೋಕನೀತಿ. ಇದನ್ನು ಮಕ್ಕಳಿದ್ದವರು ಇಲ್ಲದಿದ್ದವರು ಅವಶ್ಯವಾಗಿ ಆಚರಿಸಬೇಕು. ಇದರಿಂದ ಮಹಾಫಲ ಮಹಾಪುಣ್ಯ.

ಮಹಾದೇವಿಯ ಈ ಮಾತುಗಳನ್ನು ಕೇಳಿ ಬೃಹಸ್ಪತಿ ಮೊದಲಾದ ಬ್ರಾಹ್ಮಣರೂ ಇಂದ್ರಾದಿ ದೇವತೆಗಳೂ ಅವಳ ಮಾತಿಗೆ ತಲೆದೂಗಿ ಇದೇ ಸರಿಯೆಂದು ಹೇಳಿ ಆದರದಿಂದ ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು. ಅವರೆಲ್ಲರೂ ಹೋದ ಬಳಿಕ ಮಹೇಶ್ವರನು ಆ ಪರ್ವತ ಪುತ್ರಿಯನ್ನು ಕೈಹಿಡಿದು ಮುತ್ತುರತ್ನಗಳಿಂದ ಶೋಭಿಸುವ ತನ್ನ ಮನೆಯ ಒಳಗೆ ಕರೆದುಕೊಂಡು ಹೋದನು. ಅಲ್ಲಿ ಪಾರ್ವತಿ-ಪರಮೇಶ್ವರರಿಬ್ಬರೂ ವಿನೋದಕ್ಕಾಗಿ ಪಗಡೆ ಆಟ ಆಡತೊಡಗಿದರು. ಆ ನವದಂಪತಿಗಳು ಆಟವಾಡುವಾಗ ಹೊರಗೆ ಏನೋ ಸದ್ದುಗದ್ದಲ. ''ಇದು ಏನು?'' ಎಂದಳು ಪಾರ್ವತಿ. ''ಇದು ನನ್ನ ಭೃತ್ಯರಾದ ಗಣಾಧಿನಾಯಕರ ಆಟ'' ಎಂದು ಉತ್ತರಿಸಿದ ಮಹಾದೇವ. ''ಈ ಗಣಾಧಿನಾಯಕರೆಂದರೆ ಯಾರು ?'' ಗಿರಿಜೆಯ ಪ್ರಶ್ನೆ. ಇದಕ್ಕೆ ಗೌರೀಪತಿಯು ಕೊಟ್ಟ ಉತ್ತರ ಮಾರ್ಮಿಕವಾಗಿತ್ತು.

''ಮಂಗಳಾಂಗಿ, ಪೂರ್ವಕಾಲದಲ್ಲಿತಪಸ್ಸುಮಾಡಿ ಬ್ರಹ್ಮಚರ್ಯದಿಂದ ಇದ್ದು, ವ್ರತಾನುಷ್ಠಾನಗಳನ್ನಾಚರಿಸಿ, ತೀರ್ಥಕ್ಷೇತ್ರಗಳ ಯಾತ್ರೆಗೈದ ಭಕ್ತರೇ ಈ ಗಣಾಧಿಪತಿಗಳು. ನನ್ನ ಅನುಗ್ರಹದಿಂದ ಇವರೆಲ್ಲರೂ ಕಾಮರೂಪಿಗಳು. ಅಂದರೆ ಬಯಸಿದ ರೂಪಗಳನ್ನು ಧರಿಸಬಲ್ಲರು. ಸೃಷ್ಟಿ ಸಂಹಾರಾದಿ ಕಾರ್ಯಗಳನ್ನು ಅವರು ಸಾಧಿಸಬಲ್ಲರು. ನಾನು ಇಂದ್ರಾದಿ ದೇವತೆಗಳನ್ನು, ಸರ್ಪಗಳನ್ನು ಕೂಡ ಬಿಟ್ಟು ಬೇಕಾದಷ್ಟು ದಿನ ಇರಬಲ್ಲೆ. ಆದರೆ ಈ ಗಣೇಶರನ್ನು ಮಾತ್ರ ಒಂದು ಕ್ಷಣವೂ ಬಿಟ್ಟು ಇರಲಾರೆ. ಇವರೆಲ್ಲರೂ ಸರ್ವಾಂಗಸುಂದರರು. ಚಿತ್ರವಿಚಿತ್ರ ರೂಪವುಳ್ಳವರು. ಒಮ್ಮೊಮ್ಮೆ ಇವರು ಮಾಡುವ ಮಹಾಕಾರ್ಯಗಳನ್ನು ಕಂಡು ನನಗೆ ಆಶ್ಚರ್ಯ ವಾಗುವದು. ಇಂತಹ ಗಣಾಧೀಶ್ವರರು ಈ ಪರ್ವತದಲ್ಲಿಯೇ ಆಡುತ್ತಿದ್ದಾರೆ.''

ಗಂಗಾಧರನ ಈ ಕೌತುಕದ ನುಡಿಗಳನ್ನು ಕೇಳಿ ಭವಾನಿಯು ಆಟವನ್ನು ಬಿಟ್ಟು ಮೇಲೆದ್ದು ಕಿಡಕಿಯ ಬಳಿ ಹೋಗಿ ನೋಡಿದಳು. ಅವಳಿಗೆ ಅತ್ಯಾಶ್ಚರ್ಯ! ಅಲ್ಲಿ ಆಟವಾಡುವ ಗಣಪತಿಗಳೆಲ್ಲ ಚಿತ್ರವಿಚಿತ್ರವಾದ ಆಕಾರ ಪ್ರಕಾರಗಳಿಂದ ಹೊಳೆಯುತ್ತಿದ್ದರು. ಕೆಲವರು ಬಾನೆತ್ತರ, ಹಲವರು ಭೂಮಿಯಗಲ, ಮತ್ತೆ ಕೆಲವರು ಕುಳ್ಳತೆಳ್ಳರು, ಸ್ಥೂಲ ದೇಹದವರು. ಎಷ್ಟೋ ದಪ್ಪ ಹೊಟ್ಟೆಯ, ಆನೆ ಮೋರೆಯ, ಹುಲಿಯ ಮುಖದ, ಆಡಿನ ಕಣ್ಣಿನ ಅನೇಕ ಗಣಾಧೀಶರು ಅಲ್ಲಿಆಟವಾಡುತ್ತಿದ್ದರು. ಅವರ ಬಗೆ ಬಗೆಯ ರೂಪ, ವೇಷ, ಕಣ್ಣು, ಬಣ್ಣ, ಕಿವಿ, ಮೂಗು, ಧನಿ, ಧಾಟಿಗಳನ್ನು ಕೇಳಿ ಕಂಡು, ಅವರು ಆಡುವ ಬಗೆಬಗೆಯ ಆಟಪಾಟಗಳನ್ನು ನೋಡಿ ಪಾರ್ವತಿಯು 'ಇವರ ಸಂಖ್ಯೆ ಎಷ್ಟು? ಇವರ ಹೆಸರೇನು ? ಇವರ ಸ್ವಭಾವ ಹೇಗಿದೆ ? ಇವರೆಲ್ಲರ ಪರಿಚಯವನ್ನು ನನಗೆ ಮಾಡಿಕೊಡಿರಿ' ಎಂದು ಕೇಳಿದಳು.

**ಶಿವ** :- ''ಇವರು ಒಬ್ಬಿಬ್ಬರಲ್ಲ, ಕೋಟಿ ಕೋಟಿಯಷ್ಟಿದ್ದಾರೆ. ಇವರನ್ನು ಎಣಿಸುವದು ಶಕ್ಯವಿಲ್ಲ. ಭೀಮಕಾಯರೂ ಮಹಾಬಲಿಷ್ಠರೂ ಆದ ಇವರಿಂದ

ಭೂಮಂಡಲವೆಲ್ಲವೂ ತುಂಬಿಹೋಗಿದೆ. ಕ್ಷೇತ್ರ, ಹಾದಿಬೀದಿ, ಹಾಳು ತೋಟ, ಮನೆ ಮಠ ದೈತ್ಯ ದೇಹಗಳಲ್ಲಿಯೂ ಮತ್ತು ತಲೆ ಕೆಟ್ಟ ಜನರಲ್ಲೂ, ಬಾಲಕರಲ್ಲೂ ಸೇರಿ ಕೊಂಡು ಸಂತೋಷದಿಂದ ಇರುವವರು. ಹವೆ, ನೊರೆ,ಹೊಗೆ, ಜೇನು ರಕ್ತಗಳು ಇವರ ಆಹಾರ. ಕುಣಿತ, ಮಣಿತ, ಧ್ವನಿತ, ಹಾಸ, ಧ್ಯಾನ, ಇವು ಇವರ ವಿನೋದದ ಸಾಧನ.''

**ಪಾರ್ವತಿ :-** ''ಕೃಷ್ಣಾಜಿನವನ್ನು ಹೊದ್ದು ಸೊಂಟಕ್ಕೆ ಹುಲ್ಲಿನ ನಡುಪಟ್ಟಿಯನ್ನು ಬಿಗಿದು, ಕೊರಳಲ್ಲಿ ಕನ್ನೈದಿಲೆಗಳ ಹಾರಹಾಕಿಕೊಂಡ ಈ ಗಣೇಶ್ವರನು ಯಾರು?'' ಇವನು ಕಂಚಿನ ತಾಳವನ್ನುಅಂಗಾತವಿಟ್ಟು ಕಲ್ಲಿನಿಂದ ಹೊಡೆದು ಶಬ್ದ ಮಾಡುತ್ತಿದ್ದಾನೆ. ಇವನ ಹೆಸರೇನು?

**ಈಶ್ವರ :-** ''ಇವನೇ ವೀರಕ. ಇವನು ಅತ್ಯಂತ ಪ್ರಿಯ ನನಗೆ. ಇವನಲ್ಲಿ ಅನೇಕ ಆಶ್ಚರ್ಯಕರ ಗುಣಗಳು ಇವೆ.''

**ಪಾರ್ವತಿ :-**''ಇಂತಹ ಮಗನನ್ನು ಪಡೆಯಬೇಕೆಂದು ನನಗೆ ಬಲವತ್ತರ ಆಶೆ.''

**ಪರಮೇಶ್ವರ :-** ''ಹಾಗಾದರೆ ಇವನೇ ನಿನಗೆ ಮಗನಾಗಲಿ, ನೀನು ಅವನ ತಾಯಿ.''

ಈಶ್ವರನು ಹೀಗೆ ಹೇಳಿದ ಕೂಡಲೇ ಜಗದಂಬೆಯು ಆ ತುಂಟ ತರಳನನ್ನು ಕರೆತರಲಿಕ್ಕಾಗಿ ಗೆಳತಿ ವಿಜಯೆಯನ್ನು ಕಳಿಸಿಕೊಟ್ಟಳು. ಅವನು ಬಂದ ಬಳಿಕ ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ''ಮಗು, ಇಂದಿನಿಂದ ನೀನು ನನ್ನ ಮಗು. ಮಹೇಶ್ವರನು ನನಗೆ ನಿನ್ನನ್ನು ಪುತ್ರನನ್ನಾಗಿ ಕೊಟ್ಟಿದ್ದಾನೆ. ಇಂದಿನಿಂದ ನೀನು ಪಾರ್ವತೀ ಪುತ್ರ'' ಎಂದು ಹೇಳಿ ಅವನನ್ನು ಮುದ್ದಾಡಿದಳು. ಮಮತೆಯಿಂದ ಆ ವೀರಕನನ್ನು ಮೈದಡವಿ ಅವನಿಗೆ ಹಾರ, ಪಟ್ಟಿ, ತೋಳಿನ ಬಳೆ ಮುಂತಾದ ಅಲಂಕಾರಗಳನ್ನು ಇಡಿಸಿ, ತಲೆಗೆ ಹೂವನ್ನು ಮುಡಿಸಿ, ಅಂಗಗಳಿಗೆ ದಿವ್ಯಮಂತ್ರಗಳಿಂದ ರಕ್ಷೆಯಿಟ್ಟು ಆಡಲಿಕ್ಕೆ ಕೊಟ್ಟು ಕಳಿಸಿದಳು. ಅವನಿಗೆ ''ಕ್ರೂರ ಮೃಗಗಳಿದ್ದಲ್ಲಿ ಆಡಬೇಡ. ಗಂಗೆಯ ಪ್ರವಾಹದಲ್ಲಿ ಸೆಳವಿಗೆ ಎದುರಾಗಿ ಈಸಬೇಡ. ಬೆಟ್ಟಗಳ ತುತ್ತತುದಿಯಲ್ಲಿ ಓಡಾಡಬೇಡ'' ಎಂದು ಮುಂತಾಗಿ ಎಚ್ಚರ ಇತ್ತಳು.

ಹೀಗೆ ಗಿರಿಜೆಯಿಂದ ಲಾಲಿಸಿಕೊಂಡು ಆ ವೀರಕನು ಗಣಾಧೀಶ್ವರರ ಗುಂಪಿನಲ್ಲಿ ಹೋಗಿ ಪಾರ್ವತಿಯು ತನ್ನ ತಾಯಿಯಾದ ಬಗೆಯನ್ನು, ಪುತ್ರವಾತ್ಸಲ್ಯದಿಂದ ತನಗಿರಿಸಿದ ಅಲಂಕಾರಗಳನ್ನೂ ತೋರಿಸಿ ''ನಾನು ಜಗದಂಬೆಯ ಪ್ರೀತಿಯ ಪುತ್ರ'' ಎಂದು ಹೆಮ್ಮೆಯಿಂದ ಹೇಳಿಕೊಂಡನು. ಅವನು ಆಟಕ್ಕೆ ಹೊರಬಿದ್ದು ಹೋಗಿ ಗೆಳೆಯ ಗಣಾಧೀಶರೊಡನೆ ಕ್ರೀಡಿಸುತ್ತಿರುವಾಗ ಆ ಪಾರ್ವತಿಯು ಅವನ ಮೇಲಿನ ವ್ಯಾಮೋಹದಿಂದ ಕಿಟಕಿಯಲ್ಲಿ ಬಂದು ನಿಂತು ಅವನನ್ನೇ ನಿಟ್ಟಿಸಿ ನೋಡುತ್ತಿದ್ದಳು. ಪಂಚಮಹಾಭೂತಗಳಿಗೆಲ್ಲ ವೀರಕನಿಗೆ ಹಿತಮಿತವಾಗಿ ವರ್ತಿಸಲು ಆ ಮಹಾತಾಯಿಯು ಆಜ್ಞೆಯಿತ್ತಳು.

ಹೀಗೆ ಈ ಕೃತಕ ಪುತ್ರನೊಡನೆ ಪಾರ್ವತೀ ಪರಮೇಶ್ವರರು ಆಟವಾಡುತ್ತ ಹಗಲು ಹೊತ್ತನ್ನೆಲ್ಲ ಕಳೆದ ಬಳಿಕ ಸಂಜೆ ಆಯಿತು. ಸೂರ್ಯನು ಅಸ್ತಾಚಲಕ್ಕೆ ಇಳಿದನು. ಸುತ್ತಲೂ ಲೋಕದ ತುಂಬಾ ಕತ್ತಲೆ ವ್ಯಾಪಿಸಿತು. ಆಗ ಪರಮೇಶ್ವರನು ಪಾರ್ವತಿಯನ್ನು

ಕರೆದುಕೊಂಡು ಶಯನ ಮಂದಿರವನ್ನು ಪ್ರವೇಶಿಸಿದನು. ಆ ಶಯ್ಯಾ ಮಂದಿರದಲ್ಲಿ ಬಂಗಾರದ ಗೋಡೆಗಳ ತುಂಬ ಬಗೆಬಗೆಯ ರತ್ನಗಳನ್ನು ಕೆತ್ತಿದ್ದರು. ಹಂಸ ತೂಲ ತಲ್ಪವನ್ನು ಹೊತ್ತ ಮಂಚದ ಸುತ್ತಲೂ ಬೆಳದಿಂಗಳಂತೆ ಶುಭ್ರವಾದ ಪರದೆಯನ್ನು ಇಳಿಬಿಡಲಾಗಿತ್ತು. ನವರತ್ನಗಳ ಕಿರಣಗಳು ಮೇಳವಿಸಿ ಆ ಕೋಣೆಯ ತುಂಬ ಇಂದ್ರಚಾಪದ ಕಾಂತಿಯು ಸೂರೆಯಾಗಿತ್ತು. ಮಂಚದ ಚತುಃಶೃಂಗಗಳಲ್ಲಿ ರತ್ನದ ಕಿರುಗೆಜ್ಜೆಗಳನ್ನು ಸಾಲಾಗಿ ಕಟ್ಟಿ ನಡುನಡುವೆ ಮುತ್ತಿನ ಗುಚ್ಛಗಳನ್ನು ತೂಗು ಬಿಟ್ಟಿದ್ದರು. ಚಂದ್ರನ ನಿರ್ಮಲವಾದ ಬೆಳದಿಂಗಳು ಮೈಮೇಲೆ ಬಿದ್ದಿರಲು ಭವಾನಿಯು ತನ್ನ ಬಳ್ಳಿದೋಳನ್ನು ಶ್ರೀಕಂಠನ ಕಂಠಕ್ಕೆ ಮಾಲೆಯಾಗಿ ಮಾಡಿ, ನಲುಮೆದುಂಬಿದ ನೋಟದಿಂದ ನಲ್ಲನೆಡೆಗೆ ನೋಡಿದಳು. ಪರಮೇಶ್ವರನು ಪ್ರಣಯಭರಿತನಾಗಿ ಆ ಪರ್ವತ ಪುತ್ರಿಯ ಕಡೆಗೆ ನೋಡಿದ. ಮೊದಲೇ ಕಪ್ಪಗಾದ ಆ ಗಿರಿಜೆಯು ರಾತ್ರಿಯ ಸಂಪರ್ಕದಿಂದ ಮತ್ತಿಷ್ಟು ಕರಿಯಾಗಿಯೇ ಕಂಡಳು. ಅವಳ ನೈದಿಲೆಯಂತಹ ನೀಲಿ ಬಣ್ಣ ಕಂಡು ಪರಮೇಶ್ವರನು ನಸುನಗುತ್ತ ನುಡಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಐವತ್ತಾರನೆಯ ಅಧ್ಯಾಯ ಮುಗಿದುದು.*



## ಕಪ್ಪು ಬಣ್ಣದ ಮಡದಿಯನ್ನು ಒಪ್ಪಿಕೊಳ್ಳದ ಪರಶಿವ

**ಅಧ್ಯಾಯ - ೧೫೭**

**ಕರ್ವ ಉವಾಚ :**

**"ಶರೀರೇ ಮಮ ತನ್ವಂಗಿ ಸಿತೇ ಭಾಸ್ಯಸಿತದ್ಯುತಿಃ ।**
**ಭುಜಂಗೀವಾಽಸಿತಾ ಶುದ್ಧಾ ಸಂಶ್ಲಿಷ್ಟಾ ಚಂದನೇ ತರೌ ॥"**

**ಈಶ್ವರನು :-** "ತೆಳುಮೈವುಳ್ಳ ಪಾರ್ವತಿಯೇ, ನಾನು ಅಚ್ಚ ಬೆಳ್ಳಗೆ, ನಿನ್ನ ಬಣ್ಣ ತೀರ ಕಪ್ಪು. ನೀನು ನನ್ನ ಈ ಬಿಳಿ ಮೈಯನ್ನು ಬಿಗಿದಪ್ಪಿ ಬಳಸಿಕೊಂಡು ನಿಂತಾಗ ಕರಿನಾಗರವು ಗಂಧದ ಮರವನ್ನು ಸುತ್ತಿಕೊಂಡಂತೆ ಕಾಣುತ್ತದೆ. ನೀಲವರ್ಣದ ಆಕಾಶದಲ್ಲಿ ಚಂದ್ರನ ಕಾಂತಿಯನ್ನು ಅವಗೆಡಿಸುವ ಕೃಷ್ಣಪಕ್ಷದ ಕಾಳರಾತ್ರಿಯಂತಿರುವ ನಿನ್ನನ್ನು ನೋಡಿದರೆ ನನಗೆ ಏಕೋ ಬೇಸರ, ಏನೋ ಬೇಸರ." ಪರಮೇಶ್ವರನ ಈ ವಚನವನ್ನು ಕೇಳಿದ ಕೂಡಲೆ, ಪಾರ್ವತಿಗೆ ಕೋಪ ಬಂದಿತು. ಅವನ ಕೊರಳನ್ನು ಬಳಸಿದ ತನ್ನ ತೋಳುಗಳನ್ನು ಆಗಲೇ ಬಿಡಿಸಿ ದೂರ ಸರಿದು ಹುಬ್ಬುಗಂಟಿಕ್ಕಿ ನುಡಿದಳು.

"ಎಲ್ಲ ಜನರೂ ತಮ್ಮ ದಡ್ಡತನದಿಂದಲೇ ಅವಮಾನವನ್ನು ಅನುಭವಿಸುತ್ತಾರೆ. ಬೇಡಬಂದವನು ಜನರಲ್ಲಿ ನಗೆಗೀಡಾಗುವನು ಹಾಗೂ ನಿಂದಿಸಲ್ಪಡುವನು. ನಾನು ಬಹುಕಾಲ ದೀರ್ಘ ತಪಸ್ಸನ್ನು ಮಾಡಿ, ನಿನ್ನನ್ನು ವರಿಸಬೇಕೆಂದು ಹಾರೈಸಿ ನಿನ್ನ ಬಳಿಗೆ ಬೇಡಿ ಬಂದೆ. ಅದರ ಫಲವಾಗಿ ನಿನ್ನಿಂದ ಮೇಲೆ ಮೇಲೆ ಇಂತಹ ಘೋರ ಅಪಮಾನವು ಆಗುತ್ತಲಿದೆ. ನಾನು ಕುಟಿಲಳೂ ಅಲ್ಲ, ವಿಷಮ ಸ್ವಭಾವದವಳೂ ಅಲ್ಲ. ಆದರೆ ನೀನು ಮಾತ್ರ ಕೊರಳಲ್ಲಿ ವಿಷವನ್ನು ಇಟ್ಟುಕೊಂಡಿರುವೆ. ದೋಷಾರ್ಹನಾದ ಚಂದ್ರನನ್ನು

ತಲೆಯಲ್ಲಿ ಹೊತ್ತಿರುವೆ. ನಿನ್ನಲ್ಲಿ ದೋಷಗಳನ್ನಿಟ್ಟುಕೊಂಡು ನನ್ನನ್ನು ತೆಗಳುತ್ತಿರುವೆ. ನಾನು ಕಪ್ಪುಬಣ್ಣದವಳು, ಎಂದು ಹೀಯಾಳಿಸಿದೆ. ಆದರೆ ನೀನೇನು! ಮಹಾಕಾಳನಲ್ಲವೆ ? ಮಹಾಕಾಲ ಎಂದರೆ ಅಚ್ಚಕಪ್ಪು ಎಂದು ಅರ್ಥ ತಾನೇ! ನಿನಗೆ ಬೇಡವಾದ ಬಳಿಕ ನಿನ್ನ ಕಣ್ಣಿಗೆ ಅಸಹ್ಯ ತರುವ ಈ ಕಪ್ಪುಬಣ್ಣದ ಕಾಡು ಮೈಯನ್ನು ಕಳೆದುಕೊಳ್ಳುವದಕ್ಕಾಗಿ ಕಾಡಿಗೆ ಹೋಗುವೆನು. ನೀನು ತಿರಸ್ಕರಿಸಿದ ಬಳಿಕ ನಾನು ಬದುಕಿದ್ದರೂ ಏನು ಪ್ರಯೋಜನ? ನಿನಗೆ ಬೇಡವಾದ ಈ ದೇಹವನ್ನು ಇಡುವದರಲ್ಲಿ ಅರ್ಥವಿಲ್ಲ.''

ರುದ್ರಾಣಿಯ ಈ ರೋಷದ ಮಾತುಗಳನ್ನು ಕೇಳಿ ಶಿವನಿಗೆ ಕೋಪ ಬಂದಿತು. ಆದರೆ ಅವಳ ಮೇಲಿನ ಸ್ನೇಹ ಪ್ರೇಮಗಳು ಮಾತ್ರ ಲೋಪವಾಗಿರಲಿಲ್ಲ. ಅವನು ನುಡಿದನು- ''ಪಾರ್ವತಿ, ನನಗೆ ನಿನ್ನ ಸ್ವಭಾವವೇ ಅರ್ಥವಾಗದಂತಾಗಿದೆ. ನಿನ್ನನ್ನು ಹಳಿಯುವ ಅಥವಾ ಹೀಯಾಳಿಸುವ ವಿಚಾರವೇ ನನ್ನಲ್ಲಿಲ್ಲ. ವಿನೋದಕ್ಕಾಗಿ ನಾನು ಹಾಗೆ ಅಂದಿರುವೆನು. ನನ್ನ ಮನಸ್ಸು ನಿನ್ನ ವಿಷಯದಲ್ಲಿ ನಿಷ್ಕಲ್ಮಷವಾಗಿದೆ. ನಿನಗೆ ಸಂದೇಹ ಬೇಡ. ಪರಿಹಾಸದಿಂದ ನಿನಗೆ ಕೋಪ ಬರುತ್ತಿದ್ದರೆ ಇನ್ನೆಂದೂ ನಿನ್ನೊಡನೆ ವಿನೋದವಾಡುವದಿಲ್ಲ. ಕೋಪವನ್ನು ಬಿಡು, ನಿನಗೆ ಕೈಮುಗಿಯುತ್ತೇನೆ. ನಮಸ್ಕಾರ ಮಾಡುತ್ತೇನೆ. ಎಷ್ಟೇ ಪ್ರೀತಿ ಮಾಡಿದರೂ ನಿಂದಾಪೂರ್ಣವಾದ ಮಾತುಗಳಿಂದ ಮನುಷ್ಯನಿಗೆ ಅವಮಾನವಾಗುತ್ತದೆ. ಅವನ ಮನಸ್ಸು ಕಹಿಯಾಗಿ ಪ್ರೇಮಕ್ಕೆ ಭಂಗ ತರುತ್ತದೆ. ಆದುದರಿಂದ ಮುಂಗೋಪಿಗಳೊಂದಿಗೆ ವಿನೋದವನ್ನು ಎಂದೂ ಆಡಬಾರದು.''

ಹೀಗೆ ಬಗೆಬಗೆಯ ಸಮಾಧಾನದ ಮಾತುಗಳಿಂದ ಪರಮೇಶ್ವರನು ಆ ಅಂಬಿಕೆಯನ್ನು ರಂಬಿಸಿದರೂ ಅವಳ ಸಿಟ್ಟು ಕಡಿಮೆಯಾಗಲಿಲ್ಲ. ವಿನೋದದಲ್ಲಿ ಅವನಾಡಿದ ನಿಂದಾನುಡಿಯು ಅವಳ ಮರ್ಮಸ್ಥಳವನ್ನು ಇರಿಯುತ್ತಲೇ ಇತ್ತು. ಹರನು ಪ್ರೀತಿಯಿಂದ ತನ್ನ ಕೈಯಲ್ಲಿ ಹಿಡಿದ ತನ್ನ ಸೀರೆಯ ಸೆರಗನ್ನು ಬಿಡಿಸಿಕೊಂಡು ಪಾರ್ವತಿಯು ಅಲ್ಲಿಂದ ಹೊರಟು ನಿಂತಳು. ಆಗ ಶಿವನು ಮುಂಗುರುಳು ಕೆದರಿ ಮುಡಿಬಿಚ್ಚಿ ಹೊರಟು ನಿಂತಿರುವ ಅವಳಿಗೆ ಹೇಳಿದ- ''ನೀನು ನಿಜವಾಗಿಯೂ ಪರ್ವತಪುತ್ರಿ, ಮೋಡ ಪಡೆಗಳು ತುಂಬಿದ ಹಿಮಗಿರಿಯ ಶಿಖರಗಳು ಮುಗಿಲನ್ನು ಮುಚ್ಚಿಹಾಕಿದಂತೆ ತಿಳಿಯಲು ಅಶಕ್ಯವಾದ ಭಾವನೆಗಳು ನಿನ್ನ ಮನಸ್ಸನ್ನು ಆವರಿಸಿವೆ. ಆ ಬೆಟ್ಟದ ಕಾಠಿಣ್ಯ, ಅಲ್ಲಿಯ ಮಾರ್ಗಗಳ ವಕ್ರತೆ, ಅಂತರಂಗದ ದುರ್ಗಮತೆ ಇವೆಲ್ಲವೂ ನೀನು ನಿನ್ನ ತಂದೆಯಿಂದ ಪಡೆದ ಗುಣಗಳಾಗಿವೆ.'' ಈ ವ್ಯಂಗ್ಯೋಕ್ತಿಗಳನ್ನು ಕೇಳಿ ಸರ್ವಮಂಗಳೆಯು ಸಿಡಿಮಿಡಿಗೊಂಡು ಮತ್ತೆ ಕಿಡಿನುಡಿಗಳನ್ನು ಉಸುರಿದಳು- ''ನನ್ನನ್ನು ಮಾತ್ರವಲ್ಲದೆ ನನ್ನ ತಂದೆಯನ್ನು ಮೂದಲಿಸಲು ಮೊದಲು ಮಾಡಿದೆಯಾ? ದೋಷಿಗಳ ಸಹವಾಸದಿಂದ ನಿನ್ನಲ್ಲಿ ಎಷ್ಟು ದೋಷಗಳಿವೆ! ಸರ್ವ ದೋಷಗಳಿಗೂ ನೀನು ಆಗರನಾಗಿರುವೆ. ಹಾವುಗಳ ಸಂಪರ್ಕದಿಂದ ನಿನ್ನ ಸ್ವಭಾವದಲ್ಲೂ ಆ ವಕ್ರತೆ ಬಂದಿದೆ. ಕಲಂಕಿ ಚಂದ್ರನಿಂದ ಮನಸ್ಸಿನ ಕಾಲುಷ್ಯ, ವಾಹನವಾದ ಎತ್ತಿನಿಂದ ಜ್ಞಾನಶೂನ್ಯತೆ, ಎಷ್ಟು ಹೇಳಿದರೇನು? ಸುಮ್ಮನೆ ನನ್ನ ನಾಲಿಗೆಗೆ ಶ್ರಮ. ನಿನ್ನ ದುರ್ಗುಣಗಳು ಇನ್ನೂ ಬೇಕಾದಷ್ಟಿವೆ. ಸ್ಮಶಾನದಲ್ಲಿಯೇ ನೆಲಸಿರುವ ನಿನಗೆ ಯಾರ ಹೆದರಿಕೆಯೂ ಇಲ್ಲ. ಬತ್ತಲೆ ಓಡಾಡುವ ನಿನಗೆ ನಾಚಿಕೆಯೇ ಇಲ್ಲ, ತಲೆಬುರುಡೆ

ಕೈಯಲ್ಲಿ ಹಿಡಿದ ನಿನ್ನಿಂದ ದಯೆ ದೂರ ಓಡಿಹೋಗಿ ಎಷ್ಟೋ ದಿನಗಳಾದವು." ಹೀಗೆ ಹೇಳಿ ಮಹೇಶ್ವರಿಯು ಮಹಾದೇವನ ಮಂದಿರವನ್ನು ಬಿಟ್ಟು ಹೊರಟು ನಡೆದಳು.

ಆಗ ಗಣಾಧಿಪತಿಗಳೆಲ್ಲರೂ "ತಾಯಿ, ನಮ್ಮನ್ನು ತೊರೆದು ಎಲ್ಲಿಗೆ ಹೋಗುವೆ?" ಎಂದು ಅಳುತ್ತ ಓಡಿಬಂದರು. ಅವಳ ಪ್ರೀತಿಯ ಮಗನಾದ ವೀರಕನಂತೂ ಓಡಿ ಬಂದು ಆ ಜಗದಂಬೆಯ ಕಾಲುಗಳ ಮೇಲೆ ಬಿದ್ದು ಹೊರಳಾಡಿ "ಅಮ್ಮಾ, ನೀನು ನಮ್ಮನ್ನು ತೊರೆದುಹೋದರೆ ನಾನು ಈ ಬೆಟ್ಟದ ತುತ್ತತುದಿಯಿಂದ ಕೆಳಗೆ ಬಿದ್ದು ಪ್ರಾಣ ಕೊಡುವೆನು" ಎಂದು ಅಳತೊಡಗಿದನು. ಆಗ ಪಾರ್ವತಿಯು ಅವನನ್ನು ಹಿಡಿದು ಮೇಲೆತ್ತಿ ಮೈಮೇಲೆ ಕೈಯಾಡಿಸಿ "ಮಗು, ದುಃಖಪಡಬೇಡ, ನಿನ್ನ ತಂದೆ ನನ್ನನ್ನು ಕಪ್ಪು ಹೆಣ್ಣು, ಕಾಡು ಹೆಣ್ಣು ಎಂದು ಉಪಹಾಸಗೈದಿದ್ದಾನೆ. ಆದುದರಿಂದ ನಾನು ತಪಸ್ಸುಮಾಡಿ ಅವನ ಮನಮೆಚ್ಚುವ ಶುಭ್ರ ಬಣ್ಣ ಪಡೆದು ಗೌರಿಯಾಗಿ ಬರುವೆನು. ಆದರೆ ಮಗನೇ ಎಚ್ಚರ, ಈ ಮಹಾದೇವನು ಸ್ತ್ರೀಲಂಪಟ. ನಾನು ಹೋದಬಳಿಕ ನೀನು ಅವನ ಕೋಣೆಯ ಬಾಗಿಲಲ್ಲಿಯೇ ಕುಳಿತು ಕಾಯುತ್ತಿರು. ಯಾವ ಹೆಂಗಸೂ ಪರಮೇಶ್ವರನ ಬಳಿಗೆ ಸುಳಿಯದಂತೆ ನೋಡಿಕೊ. ಯಾವದಾದರೂ ಹೆಣ್ಣು ಇತ್ತ ಕಣ್ಣು ಹಾಕಿದರೆ ಕೂಡಲೇ ಕೊಂದುಬಿಡು. ಅದರಿಂದ ನಿನಗೆ ಸ್ತ್ರೀಹತ್ಯದ ಪಾಪ ಬರದಂತೆ ನಾನು ನೋಡಿಕೊಳ್ಳುವೆನು" ಎಂದು ಪಾರ್ವತಿಯು ಅಪ್ಪಣೆಯಿತ್ತಳು. ಅವಳ ಆಜ್ಞೆಗೆ ತಲೆಬಾಗಿ ಅದರಂತೆ ನಡೆಯುವದಾಗಿ ಮಾತುಕೊಟ್ಟು ವೀರಕನು ನಿಶ್ಚಿಂತನಾಗಿ ನಮಸ್ಕರಿಸಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಾಐವತ್ತೇಳನೆಯ ಅಧ್ಯಾಯ ಮುಗಿದುದು.*

—o—

## ಪಾರ್ವತಿಯ ರೂಪದಿಂದ ಬಂದ ದುರ್ದಾನವನ ಸಂಹಾರ

ಅಧ್ಯಾಯ - ೧೫೮

**ಸೂತ ಉವಾಚ :**

**"ದೇವೀ ಸಾಪಶ್ಯದಾಯಾಂತೀಂ ಸಖೀಂ ಮಾತುರ್ವಿಭೂಷಿತಾಂ ।**
**ಕುಸುಮಾಮೋದಿನೀಂ ನಾಮ ತಸ್ಯ ಶೈಲಸ್ಯ ದೇವತಾಂ ॥"**

**ಸೂತ** :- ಪಾರ್ವತಿಯು ತಪಸ್ಸಿಗಾಗಿ ಹೊರಟಳು. ಅವರಿದ್ದ ಶೈಲದ ಅಧಿದೇವತೆಯಾದ ಕುಸುಮಾಮೋದಿನಿ ಎಂಬ ದೇವಿಯು ಅಲಂಕಾರಮಾಡಿಕೊಂಡು ಬರುತ್ತಿದ್ದಳು. ಅವಳು ಸತಿಯ ತಾಯಿಯಾದ ಮೇನಾ ದೇವಿಯ ಗೆಳತಿ. ಅವಳು ಪಾರ್ವತಿಯನ್ನು ನೋಡಿ ಅಲ್ಲಿಗೆ ಬಂದು ಗಿರಿಜೆಯನ್ನು ಆಲಿಂಗನಮಾಡಿಕೊಂಡು "ಮಗಳೇ ಎಲ್ಲಿಗೆ ಹೊರಟಿರುವೆ?" ಎಂದು ಪ್ರಶ್ನೆ ಮಾಡಿದಳು. ಆಗ ಸತೀದೇವಿಯು ಪರಮೇಶ್ವರನ ಮೇಲೆ ತನಗೆ ಬಂದ ಕೋಪದ ಕಾರಣವನ್ನು ತಿಳಿಸಿ, ಹೇಳಿದಳು. ತಾಯಿಯ ಗೆಳತಿಯಾದ ಆ ಶೈಲದೇವತೆಯಲ್ಲಿ ತನ್ನ ದಾಂಪತ್ಯಜೀವನದ ವಿರಸವನ್ನೆಲ್ಲಾ ಬಿಚ್ಚಿ ಹೇಳಲು ಸಂಕೋಚವೆನಿಸಲಿಲ್ಲ. ತನ್ನ ಮನದ ಅಳಲನೆಲ್ಲ ಅವಳೆದುರು ತೋಡಿಕೊಂಡು, ಒಂದು ವಿಜ್ಞಾಪನೆಯನ್ನು ಮಾಡಿಕೊಂಡಳು|-

"ತಾಯಿ, ನೀನು ಬೆಟ್ಟದ ಅಧಿದೇವತೆ. ಈ ಪರ್ವತದ ಎಲ್ಲ ಸ್ಥಳಗಳಲ್ಲಿಯೂ ನಿನ್ನ ಸನ್ನಿಧಾನ. ಇಲ್ಲಿ ಎಲ್ಲಿ ಏನು ನಡೆದರೂ ನಿನಗೆ ತಿಳಿಯುವದು. ಈ ಶೈಲದಲ್ಲಿ ನನ್ನ ಹೊರತು ಬೇರೆ ಹೆಣ್ಣು ಪ್ರವೇಶಿಸದಂತೆ ನೀನು ನೋಡಬೇಕು. ನನ್ನ ಪತಿಯ ಬಳಿ ಯಾವಳಾದರೂ ಲಲನೆ ಸುಳಿದರೆ ನನಗೆ ತಿಳಿಸು. ಮುಂದಿನದನ್ನು ನಾನು ನೋಡಿಕೊಳ್ಳುವೆ."

ಅದಕ್ಕೆ ಕುಸುಮಾಮೋದಿನಿಯು ಒಪ್ಪಿಕೊಂಡ ಬಳಿಕ ಗಿರಿಜೆಯು ತನ್ನ ತಂದೆಯ ಉದ್ಯಾನಕ್ಕೆ ತೆರಳಿದಳು. ಅಲ್ಲಿ ಮೈಮೇಲಿನ ಬೆಲೆಬಾಳುವ ಆಭರಣಗಳನ್ನೆಲ್ಲ ತೆಗೆದು ಹಾಕಿ ನಾರು ಬಟ್ಟೆ ಉಟ್ಟು ಘೋರ ತಪಸ್ಸನ್ನು ಕೈಕೊಂಡಳು. ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ, ಚಳಿಮಳೆಗಳಲ್ಲಿ ನೀರಿನ ನಟ್ಟನಡುವೆಯೂ ನಿಂತು, ಕಾಡು ಕಾಯಿ ಹಣ್ಣು, ನೀರು ಸೇವಿಸಿ ಅವಳ ತಪಸ್ಸು ಮುಂದುವರಿಯಿತು. ಉಪವಾಸದಿಂದ ಅವಳ ಶರೀರ ಸೊರಗಿತು, ಅವಳ ತಪಸ್ಸಾಧನೆ ಮಾತ್ರ ತೀಕ್ಷ್ಣವಾಗಿ ನಡೆಯಿತು.

ಸತೀದೇವಿಯು ಶಿವನಿಂದ ಸಿಡಿದು ದೂರ ಹೋದುದನ್ನು ತಿಳಿದು 'ಆಡಿ' ಎಂಬ ದೈತ್ಯನು ಮಹದೇವನಿದ್ದಲ್ಲಿಗೆ ಬಂದನು. ಅವನು ಅಂಧಕಾಸುರನ ಮಗ, ಬಕಾಸುರನ ತಮ್ಮ. ಯುದ್ಧದಲ್ಲಿ ವೀರ, ಹಿಂದೆ ಅಂಧಕಾಸುರನನ್ನು ಮಹಾದೇವನು ಕೊಂದಾಗ ಅವನು ಉಗ್ರತಪಸ್ಸನ್ನು ಮಾಡಿ ಬ್ರಹ್ಮದೇವರಲ್ಲಿ ವರ ಕೇಳಿಕೊಂಡಿದ್ದ. 'ನನಗೆ ಎಂದೂ ಸಾವು ಬರಬಾರದು.' ಅದಕ್ಕೆ ಬ್ರಹ್ಮನು 'ಹುಟ್ಟಿದವರೆಲ್ಲರೂ ಸಾಯಲೇಬೇಕು. ಇದು ನಿಸರ್ಗ ನಿಯಮ'ವೆಂದು ಉತ್ತರಿಸಿದರು. ಅದಕ್ಕೆ ಆಡಿ ದೈತ್ಯನು ಮತ್ತೆ 'ದೇವಾ, ನನ್ನ ರೂಪದಲ್ಲಿ ಏನಾದರೂ ಬದಲಾದರೆ ಮಾತ್ರ ನನಗೆ ಮರಣ ಬರಲಿ. ಅಲ್ಲಿಯವರೆಗೆ ನಾನು ಸಾಯಬಾರದು' ಎಂದು ಕೇಳಿಕೊಂಡನು. ಅದಕ್ಕೆ ಬ್ರಹ್ಮದೇವರು 'ಆಗಲಿ ನಿನ್ನ ಮೊದಲಿನ ರೂಪವು ಹೋಗಿ ಬೇರೆ ರೂಪಾಂತರ ಬಂದಾಗಲೇ ನಿನ್ನ ಮರಣ. ಅಲ್ಲಿಯವರೆಗೆ ನೀನು ಅಮರ' ಎಂದು ಉತ್ತರವಿತ್ತನು. ಬ್ರಹ್ಮದೇವರ ಈ ವರದಿಂದ ಆ 'ಆಡಿ'ಯು ತಾನು ಇನ್ನು ಮೇಲೆ ಮುಪ್ಪು ಸಾವುಗಳನ್ನು ಗೆದ್ದೆ ಎಂದೇ ಭಾವಿಸಿದ್ದನು. ಮಹಾದೇವರನ್ನು ಕೊಲ್ಲಲು ಅವನು ಸಮಯವನ್ನು ನಿರೀಕ್ಷಿಸುತ್ತಿದ್ದನು. ರುದ್ರಾಣಿ ಅಲ್ಲಿಂದ ಹೊರಟು ಹೋದುದನ್ನು ಕೇಳಿ ಆ ದೈತ್ಯನು ರುದ್ರದೇವರು ಇದ್ದ ಶಿವಪುರಿಗೆ ಬಂದನು. ಆದರೆ ಬಾಗಿಲದ ಬಳಿಯಲ್ಲಿಯೇ ವೀರ ಗಣಾಧ್ಯಕ್ಷ. ಅವನ ಕಣ್ಣು ತಪ್ಪಿಸಿ, ಪುರಪ್ರವೇಶ ಮಾಡುವದು ದುಷ್ಕರ ಎನಿಸಿತು ಆ ದೈತ್ಯನಿಗೆ. ಕೂಡಲೇ ಅವನು ಒಂದು ಹಾವಿನ ರೂಪ ತೆಗೆದುಕೊಂಡು ಮರದ ಬುಡದ ಹುತ್ತಿನಲ್ಲಿ ಹೊಕ್ಕು ಯಾರ ಕಣ್ಣಿಗೂ ಬೀಳದಂತೆ ಆ ಊರಿನ ಒಳಗಡೆ ತೂರಿಕೊಂಡು ನಡೆದನು. ಒಳಗೆ ಹೋಗಿ ಸರ್ಪದ ಆಕಾರ ತ್ಯಜಿಸಿ ಮಹಾದೇವರನ್ನು ಮೋಸಗೊಳಿಸಲಿಕ್ಕಾಗಿ ಅವನು ಪಾರ್ವತಿಯ ರೂಪ ತಾಳಿದನು.

ಆ ಮಾಯಾ ಪಾರ್ವತಿಯ ವೇಷವು ಯಾರೂ ತಿಳಿಯದಂತಿತ್ತು. ಅವಳದೇ ವೇಷ, ಅದೇ ಭೂಷಣಗಳು. ಉಡಿಗೆ, ತೊಡಿಗೆ, ನಡಿಗೆ, ಹಾವ, ಭಾವ, ನಿಲುವು, ಚೆಲುವು, ಎಲ್ಲವೂ ಸಾಕ್ಷಾತ್ ಪಾರ್ವತಿಯಂತೆಯೇ. ಯಾರಿಗೂ ಗೊತ್ತಾಗದಂತೆ ಆ ನೀಚ ಜಾಣ್ಮೆಯಿಂದ ಸತಿಯ ರೂಪವನ್ನು ತಳೆದಿದ್ದ. ಆದರೆ ತನ್ನ ಬಾಯಿಯ ಒಳಗಡೆ

ಮಾತ್ರ ವಜ್ರದ ಹಲ್ಲುಗಳನ್ನು ಹಾಕಿಕೊಂಡು ಅವುಗಳಿಂದ ಹರನನ್ನು ಕಚ್ಚಿ ಕೊಲ್ಲಬೇಕೆಂದು ಅವನ ಹಂಚಿಕೆ.

ದಿವ್ಯವಾದ ವಸ್ತ್ರಾಭರಣದಿಂದ ಕೂಡಿ ತನ್ನ ಮನದನ್ನೆಯಾದ ಮಹಾದೇವಿಯು, ಅದೇ ವನವು ವಯ್ಯಾರ, ಮೆಲ್ಲುಲಿ, ಮಂದಹಾಸದಿಂದ ಇನ್ನೂ ಸುಂದರಳಾಗಿ ಕಡೆನೋಟ ಬೀರಿ, ಕುಡಿನೋಟದಿಂದ ನೋಡುತ್ತ ತನ್ನೆಡೆಗೆ ಬರುವದನ್ನು ಕಂಡು, ಹರನಿಗೆ ಎಲ್ಲಿಲ್ಲದ ಹಿಗ್ಗು. ಅವಳ ಸೌಂದರ್ಯದ ಎಲ್ಲ ಲಕ್ಷಣಗಳೂ ಆ ಮಾಯಾಂಗನೆಯಲ್ಲಿ ಇದ್ದುದರಿಂದ ಅವನಿಗೆ ತಿಲಮಾತ್ರವೂ ಸಂದೇಹ ಬರಲಿಲ್ಲ. ಎದ್ದು ಹೋಗಿ ತಾನಾಗಿ ಅವಳ ಕೈಹಿಡಿದು ಮುಂದೆ ಕರೆದು ಪ್ರೇಮದಿಂದ ಬಲವಾಗಿ ಬಿಗಿದಪ್ಪಿದನು. ಅವಳ ಮುಂದಲೆಯನ್ನು ನೇವರಿಸಿ ಪ್ರೇಮಭರಿತನಾಗಿ ನುಡಿದನು.

"ಪ್ರಿಯೆ, ನೀನು ನನ್ನ ನಿಜವಾದ ಅಭಿಪ್ರಾಯವನ್ನು ತಿಳಿದು ಈಗಲಾದರೂ ತಿರುಗಿ ಬಂದೆಯಲ್ಲವೆ! ಬಹಳ ಒಳ್ಳೆಯದಾಯಿತು. ನೀನಿಲ್ಲದೆ ನನಗೆ ಬದುಕೇ ಬೇಸರವಾಗಿತ್ತು. ಮೂರು ಲೋಕಗಳೂ ಶೂನ್ಯವಾಗಿದ್ದವು" ಎಂದು ನಲುಮೆದುಂಬಿ ನುಡಿದನು. ಶಿವನ ಈ ಪ್ರಣಯ ವಚನವನ್ನು ಕೇಳಿ ಆ ಮಾಯಾ ಮಹಾದೇವಿಯು ಮಂದಹಾಸಮಾಡಿ "ಸ್ವಾಮಿ, ಇನ್ನೂ ಹೆಚ್ಚಿನ ನಿನ್ನ ಪ್ರೇಮ ಸಂಪಾದಿಸಬೇಕೆಂದು ನಾನು ತಪಸ್ಸಿಗೆ ಹೋಗಿದ್ದೆ. ಆದರೆ ನಿನ್ನಿಂದ ಅಗಲಿ ಹೋದ ನನ್ನ ಮನಸ್ಸು ತಪೋನುಷ್ಠಾನದಲ್ಲಿ ದೃಢವಾಗಿ ನಿಲ್ಲಲಿಲ್ಲ. ಅದಕ್ಕಾಗಿ ಮತ್ತೆ ನಿನ್ನ ಬಳಿಗೆ ಬಂದೆ" ಎಂದು ಹೇಳಿದನು.

ಆ ಮಾಯಾಂಗನೆಯ ಈ ಮೋಜಿನ ಮಾತುಗಳನ್ನು ಕೇಳಿ ಮಹಾದೇವರಿಗೆ ಏನೋ ಸಂದೇಹ ಬಂದಿತು. ನನ್ನ ಮೆಚ್ಚಿನ ಮಡದಿಯಾದ ಕಾಳಿಯು ದೃಢಪ್ರತಿಜ್ಞೆ, ಸ್ವಭಾವದಿಂದಲೂ ಚಂಡಿ, ಅವಳು ಒಮ್ಮೆ ಪಟ್ಟು ಹಿಡಿದು ತಪಸ್ಸಿಗೆ ಗಟ್ಟಿಯಾಗಿ ಕುಳಿತರೆ ಅದನ್ನು ಬಿಟ್ಟು ಎಂದೂ ತಿರುಗಿ ಬರುವವಳಲ್ಲ. ತನ್ನ ಇಷ್ಟಾರ್ಥ ಕೈಗೂಡುವವರೆಗೆ ಹಿಡಿದ ಕಾರ್ಯವನ್ನು ಕೈಬಿಡುವ ಸ್ವಭಾವ ಅವಳದಲ್ಲ, ಇವಳು ಅವಳಾಗಿರಲಿಕ್ಕಿಲ್ಲ. ಇಲ್ಲಿ ಏನೋ ಮೋಸವಿದೆ ಎಂದು ಅವನ ಮನದಲ್ಲಿ ಸಂದೇಹ ಮೂಡಿತು. ಪರೀಕ್ಷಕ ದೃಷ್ಟಿಯಿಂದ ಮತ್ತೊಮ್ಮೆ ಆ ಮಾಯಾ ಮಹಿಳೆಯನ್ನು ಆ ಮುಕ್ಕಣ್ಣನು ಅಡಿಯಿಂದ ಮುಡಿಯವರೆಗೆ ನಿರುಕಿಸಿ ಪರುಕಿಸಿದನು. ಎಡಭಾಗದ ಅಂಗದ ಮೇಲೆ ಪಾರ್ವತಿಗೆ ಇದ್ದ ಪದ್ಮಚಿಹ್ನವು ಇವಳಲ್ಲಿ ಕಾಣಲಿಲ್ಲ. ಅದರ ಬದಲು ಒಂದು ಕೂದಲಿನ ಸುಳಿ. ಅದು ಪದ್ಮದಂತೆ ಕಾಣಲಿ ಎಂದು ಪ್ರಯತ್ನಪೂರ್ವಕವಾಗಿ ಎಸಳು ಎಸಳಾಗಿ ಮೂಡಿಸಿದ್ದು ಕಂಡುಬಂದಿತು. ತಕ್ಷಣ ತಿಳಿದು ಬಂದಿತು ಶಿವನಿಗೆ.

"ಇವಳು ಮಾಯಾ ಪಾರ್ವತಿ. ದೈತ್ಯರ ಮೋಸ" ಎಂದು ಖಾತರಿ ಆಯಿತು. ಆದರೂ ಪರಮೇಶ್ವರನು ಅದನ್ನು ಅವಳಿಗೆ ತಿಳಿಯಗೊಡಲಿಲ್ಲ. ತಾನೂ ಅದಕ್ಕೆ ಪ್ರತಿಯಾಗಿ ಪ್ರೇಮದ ಅಭಿನಯ ಮಾಡುತ್ತ ಆ ಮಾಯಾ ಮಹಿಳೆಯೊಂದಿಗೆ ಸರಸಕ್ಕೆ ಇಳಿದನು. ಆ ಬಿಂಕದ ಸಿಂಗಾರಿಯ ಹಲ್ಲುಗಳೆಲ್ಲವೂ ವಜ್ರಾಯುಧದಿಂದ ನಿರ್ಮಿತವಾದುದೆಂದು ತಿಳಿದುಬಂದಿತು. ಕಪಟಿಗಳನ್ನು ಕಪಟದಿಂದಲೇ ಕೊಲ್ಲಬೇಕು. 'ಶಠಂ ಪ್ರತಿ ಶಾಠ್ಯಂ' ಎಂಬ ತತ್ವವನ್ನೇ ಚಂದ್ರಮೌಳಿಯು ಆಗ ಅನುಸರಿಸಿದ. ತನ್ನ ಗುಹ್ಯಾಂಗವನ್ನು

ವಜ್ರಮಯವನ್ನಾಗಿ ಮಾಡಿಕೊಂಡು ಆ ದುರುಳ ದಾನವಿಯೊಡನೆ ಕಾಮಕೇಳಿಗಿಳಿದ. ಅರೆಚಣದಲ್ಲಿ ಆ ದುರ್ದಾನವನನ್ನು ಕೊಂದು ಹಾಕಿದನು. ಹೊರಗೆ ಕುಳಿತವೀರಕನಿಗೆ ಆ ಮಾಯಾ ಮಹಾದೇವಿಯು ಒಳಗೆ ಬಂದದ್ದೂ ತಿಳಿಯಲಿಲ್ಲ. ಮಹಾದೇವನು ಅವನನ್ನು ಕೊಂದದ್ದೂ ತಿಳಿಯಲಿಲ್ಲ. ಆದರೆ ಆ ಬೆಟ್ಟದ ಅಭಿಮಾನಿ ದೇವತೆಯಾದ ಕುಸುಮಾಮೋದಿನಿಗೆ ಮಾತ್ರ ಅರ್ಧಮರ್ಧ ಸಮಾಚಾರ ತಿಳಿಯಿತು. ಪರಮೇಶ್ವರನ ಬಳಿ ಹೆಂಗಸೊಬ್ಬಳು ಏಕಾಂತದಲ್ಲಿ ಪ್ರವೇಶಿಸಿದ್ದಳು; ಎಂದು ಅವಳು ಪಾರ್ವತಿಗೆ ಹೇಳಿಕಳಿಸಿದಳು. ಇದರಿಂದ ಸತೀದೇವಿಗೆ ಕೋಪ-ತಾಪ ಎರಡೂ ಉಕ್ಕಿಬಂದು, ಹೃದಯವು ಸಂಕಟದಿಂದ ಕುದಿಯಿತು. ತನ್ನ ಮಗನಾದ ವೀರಕನಿಗೆ ಶಾಪಕೊಟ್ಟಳು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಾಐವತ್ತೆಂಟನೆಯ ಅಧ್ಯಾಯ ಮುಗಿದುದು*



## ಕಾಳಿ, ಗೌರಿ ಆದದ್ದು. ಕೋಮಲಾಂಗಿ, ಅರ್ಧಾಂಗಿ ಆದದ್ದು

ಅಧ್ಯಾಯ - ೧೫೯

**ದೇವಿ ಉವಾಚ :**

**"ಮಾತರಂ ಮಾಂ ಪರಿತ್ಯಜ್ಯ ಯಸ್ಮಾತ್ತ್ವಂ ಸ್ನೇಹವಿಕ್ಲವಾಂ ।**
**ವಿಹಿತಾವಸರಃ ಸ್ತ್ರೀಣಾಂ ಶಂಕರಸ್ಯ ರಹೋವಿಧೌ ॥"**

**ಪಾರ್ವತಿ:-** ನಾನು ನಿನ್ನ ತಾಯಿಯಲ್ಲವೆ? ನಾನು ಮನೆ ಬಿಟ್ಟು ತೆರಳುವಾಗ 'ಮಹಾದೇವನ ಬಳಿ ಯಾವ ನಾರಿಯೂ ಸುಳಿಯದಂತೆ ನೋಡಿಕೊ' ಎಂದು ಎಚ್ಚರಿಸಿದ್ದೆ. ಆದರೂ ನೀನು ನನ್ನ ಮಾತನ್ನು ಕಡೆಗಣಿಸಿದೆ. ಪರಸ್ತ್ರೀಯೊಬ್ಬಳಿಗೆ ಪರಮೇಶ್ವರನೊಂದಿಗೆ ಏಕಾಂತದಲ್ಲಿರಲು ನೀನು ಅವಕಾಶ ಕೊಟ್ಟೆ. ಆದುದರಿಂದ ನೀನು ಈಗ ಹೃದಯಹೀನವಾದ ಕಠಿಣ ಕಲ್ಲಾಗಿ ಹುಟ್ಟು?" ಹೀಗೆ ಪಾರ್ವತಿಯು ಶಾಪ ಕೊಡುವಾಗ ಅವಳಿಗೆ ಭಯಂಕರ ಕೋಪ ಬಂದಿತು. ಆ ಕೋಪವು ಸಿಂಹರೂಪವಾಗಿ ಹೊರಬಿದ್ದು ಆರ್ಭಟಿಸಿತು. ಅದು ಬಾಯಿ ತೆರೆದು ನಾಲಿಗೆ ನೀಡಿ, ಹಸಿವೆಯಿಂದ ಏನಾದರೂ ತಿನ್ನಲು ಹಾತೊರೆಯುತ್ತಿತ್ತು. ಪಾರ್ವತಿಯು ತನ್ನ ಬದುಕಿನಲ್ಲಿ ಬೇಸರಗೊಂಡಿದ್ದಳು. ಮಹಾದೇವರಿಂದ ಕಪ್ಪು ಹೆಣ್ಣು ಎಂದು ತಿರಸ್ಕಾರ, ಅನಂತರ ಪರಸ್ತ್ರೀಯೊಡನೆ ಏಕಾಂತದಲ್ಲಿ ಸಂಧಿಸುವದು, ಮಗನ ಅಲಕ್ಷ್ಯ ಇವೆಲ್ಲಕಾರಣಗಳಿಂದ ಅವಳಿಗೆ ತಾನಿನ್ನು ಜೀವದಿಂದ ಇರುವದೇ ಬೇಡ ಎಂಬ ಯೋಚನೆ ಬಂದಿತು. "ಹೇಗೂ ತನ್ನ ಕೋಪದಿಂದ ಹುಟ್ಟಿದ ಸಿಂಹವು ಹಸಿದು ನಿಂತಿದೆ. ಅದಕ್ಕೆ ತಿನ್ನಲು ಏನೂ ಇಲ್ಲ. ತನ್ನನ್ನೇ ತಿನ್ನಲು ಅದಕ್ಕೆ ಕೊಟ್ಟು ಈ ಜನ್ಮ ನೀಗಿದರಾಯಿತು" ಎಂದು ವಿಚಾರಿಸಿದಳು.

ಗಿರಿಕುಮಾರಿಯ ಈ ಘೋರ ನಿರ್ಣಯವು ತಕ್ಷಣದಲ್ಲಿ ಬ್ರಹ್ಮದೇವನಿಗೆ ತಿಳಿಯಿತು. ಓಡಿ ಬಂದು ಅವಳನ್ನು ತಡೆದು ಹೇಳಿದ. "ಮಗಳೇ, ನಿನಗೆ ಏನು ಬೇಕು ಹೇಳು. ನಿನಗೆ ಬೇಕಾದ ಫಲವನ್ನು ಕೊಡಲು ನಾನು ಸಿದ್ಧ. ಈ ತಪಸ್ಸನ್ನು ಇಲ್ಲಿಗೇ

ಸಾಕುಮಾಡು. ಹಿರಿಯನಾದ ನನ್ನದೊಂದು ಮಾತನ್ನು ನಡೆಸಿಕೊಡು''. ಚತುರ್ಮುಖನ ನುಡಿಯನ್ನು ಕೇಳಿ, ಶರ್ವಾಣಿಯು ತನ್ನ ಹೃದಯವನ್ನು ಕೊರೆಯುತ್ತಿದ್ದ ಬಯಕೆಯನ್ನು ಗಂಭೀರ ವಚನಗಳಲ್ಲಿ ಇಂತು ವ್ಯಕ್ತಪಡಿಸಿದಳು.

''ದೇವ ದೇವಾ, ನಾನು ಅತಿ ಉಗ್ರತರವಾದ ತಪಸ್ಸನ್ನು ಮಾಡಿ ಶಂಕರನನ್ನು ಪತಿಯಾಗಿ ಪಡೆದೆ. ಮೆಚ್ಚಿ ಮೋಹಗೊಂಡು ಮದುವೆಯಾದ ಆ ನನ್ನ ಪತಿದೇವ ನನ್ನನ್ನು 'ಕಾಳಿ, ಶ್ಯಾಮಲೆ' ಎಂದು ಹಾಸ್ಯಮಾಡಿ ಹೀಯಾಳಿಸುತ್ತಾನೆ. ಆದುದರಿಂದ ನನಗೆ ಈಗ ಶಂಭುವಿಗೆ ಪ್ರಿಯವಾದ ಹೊಂಬಣ್ಣವು ಬರುವಂತೆ ಅನುಗ್ರಹಿಸಿರಿ. ಇಷ್ಟೇ ಅಲ್ಲ, ನಾನು ನನ್ನ ಪ್ರಾಣದರಸನ ಪೂರ್ಣ ಪ್ರೀತಿಗೆ ಪಾತ್ರಳಾಗುವಂತೆ ಅನುಗ್ರಹಿಸಿರಿ. ಬಂಗಾರದ ಬಣ್ಣದಿಂದ ನಾನು ಈ ಭೂತನಾಥನ ಒಂದು ಅಂಗವೇ ಆಗಿ, ಗಂಗಾಧರನ ಅರ್ಧ ಶರೀರ ಎನಿಸುವಂತೆ ಕರುಣಿಸು.'' ಮಹಾದೇವಿಯ ಮನದ ಬಯಕೆಯನ್ನು ಮೆಚ್ಚಿ ಬ್ರಹ್ಮದೇವರು ಅವಳಿಗೆ ವರ ಕೊಟ್ಟನು. ''ಪರಮೇಶ್ವರಿ, ನಿನ್ನ ಇಷ್ಟದಂತೆ ಆಗಲಿ. ಕನಕಕಾಂತಿಯು ನಿನ್ನ ಕಾಯದಲ್ಲಿ ಕಳಕಳಿಸಲಿ. ಬಂಗಾರದ ಬಣ್ಣದಿಂದ ನೀನು ಆ ಚಂದ್ರಚೂಡನ ಅರ್ಧಾಂಗಿಯಾಗಿ ಅವನ ಅರ್ಧದೇಹದ ಅಧಿಕಾರಿಣಿ ಆಗು.'' ಬ್ರಹ್ಮದೇವರ ವರದಿಂದ ಒಮ್ಮೆಲೇ ಆ ಭವಾನಿಯ ಬಣ್ಣವೇ ಬದಲಾಯಿತು. ಕನ್ನೈದಿಲೆ ಬಣ್ಣದ ಅವಳ ಕಾಯಕಾಂತಿಯು ಬದಲಾಗಿ ಸುವರ್ಣವರ್ಣದಕಾಂತಿ ಪಡೆಯಿತು. ಪುಟಕ್ಕೆ ಹಾಕಿದ ಬಂಗಾರದ ಹೊಂಬಣ್ಣದ ಮುಂಬೆಳಗು ಅವಳ ಅಡಿಯಿಂದ ಮುಡಿಯವರೆಗೂ ಮಿಂಚತೊಡಗಿತು. ಅವಳ ಮೊದಲಿನ ಕಾಡಿಗೆ ಬಣ್ಣವು ಎಲ್ಲಿಯೋ ಮಾಯವಾಗಿ ಸುವರ್ಣ ಪುತ್ಥಳಿಯಂತೆ ಸೌಂದರ್ಯರಾಣಿಯಾಗಿ ಅವಳು ಶೋಭಿಸತೊಡಗಿದಳು. ಅವಳ ಅಂಗಾಂಗಗಳಲ್ಲಿ ಬಗೆಬಗೆಯ ಆಭರಣಗಳು ಹೊಳೆದವು. ಮೇಲೆ ಮೂರು ಕಣ್ಣುಗಳು, ಕೈಯಲ್ಲಿ ಗಂಟೆ, ಮುಖದಲ್ಲಿ ಸಹಸ್ರ ಚಂದ್ರಮಂಡಲಗಳ ಚೆಲುವು, ಒಟ್ಟಾರೆ ಅವಳು ಆಕಾರ, ಅಳತೆ, ನಿಲುವು, ಚೆಲುವು ಕಣ್ಣು, ಬಣ್ಣ, ನಡೆ, ನುಡಿ ಎಲ್ಲದರಿಂದಲೂ ಸರ್ವಾಂಗ ಸುಂದರಿಯಾಗಿ ಸರ್ವಾಭಿನಂದ್ಯವಾದ, ಅನಿಂದ್ಯವಾದ ಸೌಂದರ್ಯದಿಂದ ನಳನಳಿಸಿದಳು.

ಅವಳ ದೇಹದಲ್ಲಿ ಹೊಂದಿಕೊಂಡಿದ್ದ ಕನ್ನೈದಿಲೆಯಂತೆ ಕಪ್ಪುದೇಹದ ವಿಭಾವರಿಯನ್ನು ಕುರಿತು ಬ್ರಹ್ಮನು ಹೇಳಿದನು- ''ರಾತ್ರಿ, ನೀನು ನನ್ನ ಅಪ್ಪಣೆಯಂತೆ ಪಾರ್ವತಿಯ ದೇಹಸಂಬಂಧಹೊಂದಿ ಅವಳ ಮೈತುಂಬಾ ಈವರೆಗೆ ನಿನ್ನ ಕತ್ತಲೆಯಂತಹ ಕಪ್ಪುಬಣ್ಣಬಳಿದು ಕೃತಾರ್ಥಳಾದೆ. ಇನ್ನು ಮೇಲೆ ನೀನು ಈ ಪಾರ್ವತಿಯನ್ನು ಬಿಟ್ಟು ವಿಂಧ್ಯ ಪರ್ವತಕ್ಕೆ ಹೊರಟುಹೋಗು. ಪಾರ್ವತಿಯ ಕೋಪದಿಂದ ಹುಟ್ಟಿದ ಈ ಸಿಂಹವು ನಿನ್ನ ವಾಹನವಾಗಲಿ, ನಿನ್ನ ಧ್ವಜದಲ್ಲಿಯೂ ಇದರ ಚಿಹ್ನವಿರಲಿ. '**ಪಾಂಚಾಲ**'ನೆಂಬ ವಿವಿಧ ಮಾಯೆಗಳನ್ನು ಬಲ್ಲ ಯಕ್ಷನು ತನ್ನ ಲಕ್ಷ ಜನ ಅನುಯಾಯಿಗಳೊಂದಿಗೆ ನಿನ್ನ ಸೇವಕನಾಗಿ ನಿನ್ನನ್ನು ಹಿಂಬಾಲಿಸುವನು. ನೀನು ವಿಂಧ್ಯಾಚಲದಲ್ಲಿ ಇದ್ದುಕೊಂಡೇ ದೇವಕಾರ್ಯವನ್ನು ನಡೆಸು.'' ಬ್ರಹ್ಮದೇವರ ಅಪ್ಪಣೆಯಂತೆ ಆ ವಿಭಾವರೀ-ಆ ಕೌಶಿಕೀದೇವಿಯರು ವಿಂಧ್ಯಪರ್ವತಕ್ಕೆ ತೆರಳಿದರು.

ಸತೀದೇವಿಯು ಕೂಡ ತನ್ನ ಮನೋರಥವು ಸಫಲವಾಯಿತೆಂದು ಸಂತೋಷದಿಂದ ಮಹಾದೇವರ ರಾಜಧಾನಿಗೆ ಹೊರಟಳು. ಶಿವಮಂದಿರದಲ್ಲಿ ಸತಿದೇವಿಯು ಪ್ರವೇಶಿಸುವಾಗ ಬಾಗಿಲಲ್ಲಿ ಬಂಗಾರದ ಬೆತ್ತ ಹಿಡಿದು ಕಾಯುತ್ತಿರುವ ವೀರಕನು ಅವಳನ್ನು ತಡೆದನು.

ಬಾಗಿಲಿನಿಂದ ದೂರ ತಳ್ಳಿದನು. ಬಂಗಾರ ಬಣ್ಣದ ಆ ಭವಾನಿಯನ್ನು ಕಂಡು ಗುರುತುಹತ್ತದೆ ಇವಳೊಬ್ಬ ಬೇರೆ ಯಾವದೊ ಶುಭ್ರಬಣ್ಣದ ನಾರಿ ಎಂದು ತಿಳಿದು ವೀರಕನು ಕೋಪದಿಂದ ಹೇಳಿದನು. "ನೀನು ಯಾರು? ಯಾರೇ ಇದ್ದರೂ ಹೆಣ್ಣುಮಕ್ಕಳು ಇಲ್ಲಿ ಬರುವ ಕಾರಣವಿಲ್ಲ. ಒಳಗೆ ಕಾಲಿಟ್ಟರೆ ನಿನ್ನನ್ನು ಸೀಳಿ ಹಾಕುತ್ತೇನೆ. ಈ ವಿರೂಪಾಕ್ಷನನ್ನು ವಂಚಿಸುವದಕ್ಕಾಗಿ ದುಷ್ಟ ದೈತ್ಯನೊಬ್ಬನು ಪಾರ್ವತಿಯ ರೂಪಾಂತರದಿಂದ ಒಳಹೊಕ್ಕು ಸತೀರೂಪದಿಂದ ಶಿವನ ಸಿಂಗಾರ ಮಂಚವನ್ನು ಏರಿದ. ಆ ದುಷ್ಟ ದೈತ್ಯನನ್ನು ದೇವದೇವನು ಸಂಹರಿಸಿದನು. ಅವನನ್ನು ಕೊಂದ ಬಳಿಕ ಇಂದುಮೌಳಿಯು ಅತ್ಯಂತ ಕೋಪದಿಂದ ನನ್ನನ್ನು ನಿಂದಿಸಿ, 'ನಿನಗೆ ಬಾಗಿಲಕಡೆ ಗಮನವೇ ಇರುವದಿಲ್ಲ. ಆದುದರಿಂದ ಇನ್ನು ಮೇಲೆ ಬಹಳ ವರುಷಗಳವರೆಗೆ ನನ್ನ ದ್ವಾರಪಾಲಕನಾಗಿ ಇರುವದು ಬೇಡ' ಎಂದು ಅಪ್ಪಣೆ ಮಾಡಿದನು. ಆದುದರಿಂದ ನಾನು ನಿನಗೆ ಒಳಗೆ ಹೋಗಗೊಡುವದಿಲ್ಲ. ಬೇಗನೇ ಇಲ್ಲಿಂದ ಹೊರಟು ಹೋಗು."

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಐವತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ಸತೀದೇವಿಯ ಕೋಪ, ಶಾಪ, ಅನುಗ್ರಹ ಆರುಮುಖದ ಶಿವಪುತ್ರನ ಜನನ

**ಅಧ್ಯಾಯ - ೧೬೦**

<u>ವೀರಕ ಉವಾಚ :</u>

**"ಏವಮುಕ್ತ್ವಾ ಗಿರಿಸುತಾ ಮಾತಾ ಮೇ ಸ್ನೇಹವತ್ಸಲಾ ।**
**ಪ್ರವೇಶಂ ಲಭತೇ ನಾನ್ಯಾ ನಾರೀ ಕುಮುದಲೋಚನೇ ॥"**

**ವೀರಕ :-** "ನನ್ನ ತಾಯಿಯಾದ ಪಾರ್ವತಿಯ ಹೊರತು ಬೇರೆ ಯಾವ ಹೆಂಗಸಿಗೂ ಒಳಗೆ ಹೋಗಲು ಅವಕಾಶವಿಲ್ಲ. ವಾತ್ಸಲ್ಯಮೂರ್ತಿಯಾದ ನನ್ನ ಮಮತೆಯ ಮಾತೆ ಪಾರ್ವತಿಗೆ ಮಾತ್ರ ಇಲ್ಲಿ ಅನಿರ್ಬಂಧ ಪ್ರವೇಶವುಂಟು. ನೀನು ಅವಳಲ್ಲ, ಆದುದರಿಂದ ಕನ್ನೈದಿಲೆಯಂತೆ ಕಣ್ಣುಗಳುಳ್ಳ ನಾರೀಮಣಿಯೇ, ನಾನು ನಿನ್ನನ್ನು ಒಳ ಬಿಡುವದಿಲ್ಲ".

ವೀರಕನ ಈ ನಿಷ್ಠುರ ನುಡಿಗಳನ್ನು ಕೇಳಿ ಪಾರ್ವತಿಗೆ ಚಿಂತೆ ಆಯಿತು. "ವಾಯುದೇವನು ಕುಸುಮಾಮೋದಿನಿಯ ದೂತನಾಗಿ ಬಂದು ಹೇಳಿದ ಮಾತು ನನಗೆ ಈಗ ಪೂರ್ಣ ಅರ್ಥವಾಯಿತು. ಪರಮೇಶ್ವರನ ಬಳಿಗೆ ಹೋದವಳು ಯಾವದೇ ಹೆಂಗಸಲ್ಲ. ಮಾಯಾವಿಯಾದ ದೈತ್ಯನು ನನ್ನ ರೂಪ ತೆಗೆದುಕೊಂಡು ಪ್ರಭುವಿನ

ಬಳಿಗೆ ಹೋಗಿ ಹತನಾಗಿದ್ದಾನೆ. ನಾನು ನಿಷ್ಕಾರಣವಾಗಿ ಪಾಪ ನನ್ನ ಮಗು ಈ ವೀರಕನಿಗೆ ಶಾಪಕೊಟ್ಟೆ, ಅವಿಚಾರಿತ ಕೋಪದಿಂದ ಇಂತಹ ಅಕಾರ್ಯಗಳು ನಡೆಯುತ್ತವೆ. ಸಿಟ್ಟಿನ ಕೈಯಲ್ಲಿ ಬುದ್ಧಿಕೊಟ್ಟು ಮೂರ್ಖರು ಬಹು ಅನರ್ಥವನ್ನು ಉಂಟುಮಾಡಿಬಿಡುತ್ತಾರೆ. ಕೋಪದಿಂದ ಕೀರ್ತಿ ಹಾಳಾಗುವದು. ಕೋಪದಿಂದ ಸ್ಥಿರವಾದ ಐಶ್ವರ್ಯ ನಾಶವಾಗುವದು.''

**ಅಕಾರ್ಯಂ ಕ್ರಿಯತೇ ಮೂಢೈಃ ಪ್ರಾಯಃ ಕ್ರೋಧ ಸಮೀರಿತೈಃ ।**
**ಕ್ರೋಧೇನ ನಶ್ಯತೇ ಕೀರ್ತಿಃ ಕ್ರೋಧೋ ಹಂತಿ ಸ್ಥಿರಾಂ ಶ್ರಿಯಂ ॥**

'ನಾನು ನಿಜಸಂಗತಿಯನ್ನು ತಿಳಿಯದೇ ನನ್ನ ಮೆಚ್ಚಿನ ಮಗನಿಗೆ ಶಾಪಕೊಟ್ಟೆ' ಎಂದು ಚಿಂತಿಸಿ ಮನದಲ್ಲಿ ನೊಂದು ನಾಚಿಕೆಯಿಂದ ಇಳಿದುಹೋದ ಮಹಾದೇವಿಯು ವೀರಕನಿಗೆ ಹೇಳಿದಳು.

**ದೇವಿ:-** ''ಓ ವೀರಕ, ನಾನು ನಿನ್ನ ತಾಯಿಯಾದ ಪಾರ್ವತಿಯೇ. ಶಂಕರನ ಪ್ರೀತಿಯ ಮಡದಿಯೂ ನಾನೇ. ಹಿಮಾಲಯದ ಮಗಳಾದ ನಾನು ತಪಸ್ಸುಮಾಡಿ ಪ್ರಭುವನ್ನು ಮದುವೆ ಆಗಿದ್ದೇನೆ. ನನ್ನ ಈಗಿನ ಅಪರಂಜಿಯಂತೆ ರಂಜಿಸುವ ಹೊಂಬಣ್ಣದಿಂದ ನೀನು ಭ್ರಾಂತನಾಗಿ ನಾನು ಪಾರ್ವತಿಯು ಅಲ್ಲವೆಂದು ಸಂದೇಹ ಪಡಬೇಡ. ಬ್ರಹ್ಮದೇವನು ನನ್ನ ತಪಸ್ಸಿಗೆ ಒಲಿದು ನನಗೆ ಸುವರ್ಣದಂತಹ ವರ್ಣವನ್ನು ಕರುಣಿಸಿದ್ದಾನೆ, ನನ್ನ ಪತಿಯಾದ ಪರಮೇಶ್ವರನು ಯಾವುದೋ ಒಬ್ಬ ಪರಸ್ತ್ರೀಯೊಡನೆ ಏಕಾಂತದಲ್ಲಿ ಇದ್ದ ಎಂಬ ಸುದ್ದಿಯನ್ನು ಕೇಳಿ ಇದಕ್ಕೆ ನೀನೆ ಅನವಧಾನದಿಂದ ಅವಕಾಶ ಮಾಡಿಕೊಟ್ಟೆ, ಎಂದು ತಿಳಿದು 'ಕಲ್ಲಾಗು' ಎಂದು ಶಾಪಕೊಟ್ಟೆ. ಕೊಟ್ಟ ಶಾಪವನ್ನು ಇನ್ನು ಹಿಂದಿರುಗಿಸಲು ಶಕ್ಯವಲ್ಲ. ಆದರೆ ನಾನೀಗ ಸುಪ್ರಸನ್ನಳಾಗಿರುವದರಿಂದ ನೀನು ಬೇಗನೇ ಶಾಪಮುಕ್ತನಾಗಿ ಬರುವೆ.''

ಪಾರ್ವತಿಯ ಪ್ರೇಮರಸಸಿಕ್ತವಾದ ಈ ಉಕ್ತಿಯನ್ನು ಕೇಳಿ ವೀರಕನಿಗೆ ಪರಮಾನಂದವಾಯಿತು. ಹುಣ್ಣಿಮೆಯ ಚಂದ್ರನ ಕಾಂತಿ ಎಲ್ಲವು ಮೈದಾಳಿ ಬಂದಂತೆ ಹೊಳೆಯುವ ತನ್ನ ತಾಯಿ ಪಾರ್ವತಿಯ ಪಾದ ತಾವರೆಗೆ ತಲೆ ಹಚ್ಚಿ ಇಂತು ಹೇಳಿದನು.

ನಮಃ ಶಿವಾಯಾಸ್ತು ನಿರಾಮಯಾಯೈ
ನಮಃ ಶಿವಾಯಾಸ್ತು ಮನೋಮಯಾಯೈ ।
ನಮಃ ಶಿವಾಯಾಸ್ತು ಸುರಾರ್ಚಿತಾಯೈ
ತುಭ್ಯಂ ಸದಾ ಭಕ್ತ ಕೃಪಾ ಪರಾಯೈ ॥೧॥

ತಪನ ಮಂಡಲ ಮಂಡಿತ ಕಂಧರೇ
ಪೃಥು ಸುವರ್ಣ ಸುವರ್ಣ ನಗದ್ಯುತೇ ।
ವಿಷಭುಜಂಗ ನಿಷಂಗ ವಿಭೂಷಿತೇ
ಗಿರಿಸುತೇ ಭವತೀಮಹಮಾಶ್ರಯೇ ॥೨॥

ಜಗತಿ ·ಕಃ ಪ್ರಣತಾಭಿಮತಂ ದದೌ
ಝಟಿತಿ ಸಿದ್ಧನುತೇ ಭವತೀ ಯಥಾ
ಜಗತಿ ಕಾಂಚನು ವಾಂಛತಿ ಶಂಕರೋ
ಭುವನಧೃತ್ತನಯೇ ಭವತೀಂ ಯಥಾ ॥ ೩ ॥

ವಿಮಲ ಯೋಗ ವಿನಿರ್ಮಿತ ದುರ್ಜಯ
ಸ್ವತನು ತುಲ್ಯ ಮಹೇಶ್ವರ ಮಂಡಲೀ ।
ವಿದಲಿತಾಂಧಕ ಬಾಂಧವ ಸಂಹತಿಃ
ಸುರವರ್ಯೈಃ ಪ್ರಥಮಂ ತ್ವಮಭಿಷ್ಟುತಾ ॥ ೪ ॥

ಸಿತ ಸಟಾಪಟಲೋದ್ಧತ ಕಂಧರಾ
ಭರಮಹಾಮೃಗರಾಜ ರಥ ಸ್ಥಿತಾ ।
ವಿಮಲ ಶಕ್ತಿ ಮತೀಚ ಪಿಂಗಳಾ
ಯತ ಭುಜೌಘ ವಿನಷ್ಟ ಮಹಾಸುರಾ ॥ ೫ ॥

ನಿಗದಿತಾ ಭುವನೈರಿತಿ ಚಂಡಿಕಾ
ಜನನಿ ಶುಂಭನಿಶುಂಭನಿಷೂದಿನೀ ।
ಪ್ರಣತಚಿಂತಿತದಾ ರಿಪುದಾನವ
ಪ್ರಮಥನೈಕರತಿಸ್ತರಸಾ ಭುವಿ ॥ ೬ ॥

ವಿಯತಿ, ವಾಯುಪಥೇ, ಜ್ವಲನೋಜ್ವಲೇಽ
ವನಿತಲೇ ತವ ದೇವಿ ಚ ಯದ್ವಪುಃ ।
ತದಿಹತೇ ವಿತತೇ ಪ್ರಣಮಾಮ್ಯಹಂ
ಭುವನ ಭಾಮಿನಿ ತೇ ಭವವಲ್ಲಭೇ । ॥ ೭ ॥

ಜಲಧಯೋ ಲಲಿತೋದ್ಧತ ವೀಚಯೋ
ಹುತವಹದ್ಯುತಯಶ್ಚ ಚರಾಚರಂ ।
ಫಣಸಹಸ್ರಭೃತಶ್ಚ ಭುಜಂಗಮಾ-
ಸ್ತವ ಭಿಯಾ ಸ್ಯತಿ ಮಹ್ಯಭಯಂಕರಾಃ ॥ ೮ ॥

ಭಗವತಿ ಸ್ಥಿರ ಭಕ್ತಿ ಜನಾಶ್ರಯೇ
ಪ್ರತಿಗತೋ ಭವತೀ ಚರಣಾಶ್ರಯಂ ।
ಕರಣಜಾತ ಮಿಹಾಸ್ತು ಮಮಾಚಲಂ
ನುತಿಲವಾಪ್ತಿ ಫಲಾಶಯ ಹೇತುತಃ । ॥ ೯ ॥

ಬಳಿಗೆ ಹೋಗಿ ಹತನಾಗಿದ್ದಾನೆ. ನಾನು ನಿಷ್ಕಾರಣವಾಗಿ ಪಾಪ ನನ್ನ ಮಗು ಈ ವೀರಕನಿಗೆ ಶಾಪಕೊಟ್ಟೆ, ಅವಿಚಾರಿತ ಕೋಪದಿಂದ ಇಂತಹ ಅಕಾರ್ಯಗಳು ನಡೆಯುತ್ತವೆ. ಸಿಟ್ಟಿನ ಕೈಯಲ್ಲಿ ಬುದ್ಧಿಕೊಟ್ಟು ಮೂರ್ಖರು ಬಹು ಅನರ್ಥವನ್ನು ಉಂಟುಮಾಡಿಬಿಡುತ್ತಾರೆ. ಕೋಪದಿಂದ ಕೀರ್ತಿ ಹಾಳಾಗುವದು. ಕೋಪದಿಂದ ಸ್ಥಿರವಾದ ಐಶ್ವರ್ಯ ನಾಶವಾಗುವದು.''

**ಅಕಾರ್ಯಂ ಕ್ರಿಯತೇ ಮೂಢೈಃ ಪ್ರಾಯಃ ಕ್ರೋಧ ಸಮೀರಿತೈಃ ।**
**ಕ್ರೋಧೇನ ನಶ್ಯತೇ ಕೀರ್ತಿಃ ಕ್ರೋಧೋ ಹಂತಿ ಸ್ಥಿರಾಂ ಶ್ರಿಯಂ ॥**

'ನಾನು ನಿಜಸಂಗತಿಯನ್ನು ತಿಳಿಯದೇ ನನ್ನ ಮೆಚ್ಚಿನ ಮಗನಿಗೆ ಶಾಪಕೊಟ್ಟೆ' ಎಂದು ಚಿಂತಿಸಿ ಮನದಲ್ಲಿ ನೊಂದು ನಾಚಿಕೆಯಿಂದ ಇಳಿದುಹೋದ ಮಹಾದೇವಿಯು ವೀರಕನಿಗೆ ಹೇಳಿದಳು.

**ದೇವಿ:-** ''ಓ ವೀರಕ, ನಾನು ನಿನ್ನ ತಾಯಿಯಾದ ಪಾರ್ವತಿಯೇ. ಶಂಕರನ ಪ್ರೀತಿಯ ಮಡದಿಯೂ ನಾನೇ. ಹಿಮಾಲಯದ ಮಗಳಾದ ನಾನು ತಪಸ್ಸುಮಾಡಿ ಪ್ರಭುವನ್ನು ಮದುವೆ ಆಗಿದ್ದೇನೆ. ನನ್ನ ಈಗಿನ ಅಪರಂಜಿಯಂತೆ ರಂಜಿಸುವ ಹೊಂಬಣ್ಣದಿಂದ ನೀನು ಭ್ರಾಂತನಾಗಿ ನಾನು ಪಾರ್ವತಿಯು ಅಲ್ಲವೆಂದು ಸಂದೇಹ ಪಡಬೇಡ. ಬ್ರಹ್ಮದೇವನು ನನ್ನ ತಪಸ್ಸಿಗೆ ಒಲಿದು ನನಗೆ ಸುವರ್ಣದಂತಹ ವರ್ಣವನ್ನು ಕರುಣಿಸಿದ್ದಾನೆ, ನನ್ನ ಪತಿಯಾದ ಪರಮೇಶ್ವರನು ಯಾವುದೋ ಒಬ್ಬ ಪರಸ್ತ್ರೀಯೊಡನೆ ಏಕಾಂತದಲ್ಲಿ ಇದ್ದ ಎಂಬ ಸುದ್ದಿಯನ್ನು ಕೇಳಿ ಇದಕ್ಕೆ ನೀನೆ ಅನವಧಾನದಿಂದ ಅವಕಾಶ ಮಾಡಿಕೊಟ್ಟೆ, ಎಂದು ತಿಳಿದು 'ಕಲ್ಲಾಗು' ಎಂದು ಶಾಪಕೊಟ್ಟೆ. ಕೊಟ್ಟ ಶಾಪವನ್ನು ಇನ್ನು ಹಿಂದಿರುಗಿಸಲು ಶಕ್ಯವಲ್ಲ. ಆದರೆ ನಾನೀಗ ಸುಪ್ರಸನ್ನಳಾಗಿರುವದರಿಂದ ನೀನು ಬೇಗನೇ ಶಾಪಮುಕ್ತನಾಗಿ ಬರುವೆ.''

ಪಾರ್ವತಿಯ ಪ್ರೇಮರಸಸಿಕ್ತವಾದ ಈ ಉಕ್ತಿಯನ್ನು ಕೇಳಿ ವೀರಕನಿಗೆ ಪರಮಾನಂದವಾಯಿತು. ಹುಣ್ಣಿಮೆಯ ಚಂದ್ರನ ಕಾಂತಿ ಎಲ್ಲವು ಮೈದಾಳಿ ಬಂದಂತೆ ಹೊಳೆಯುವ ತನ್ನ ತಾಯಿ ಪಾರ್ವತಿಯ ಪಾದ ತಾವರೆಗೆ ತಲೆ ಹಚ್ಚಿ ಇಂತು ಹೇಳಿದನು.

ನಮಃ ಶಿವಾಯಾಸ್ತು ನಿರಾಮಯಾಯ್ಯೆ
ನಮಃ ಶಿವಾಯಾಸ್ತು ಮನೋಮಯಾಯ್ಯೆ ।
ನಮಃ ಶಿವಾಯಾಸ್ತು ಸುರಾರ್ಚಿತಾಯ್ಯೆ
ತುಭ್ಯಂ ಸದಾ ಭಕ್ತ ಕೃಪಾ ಪರಾಯ್ಯೆ ॥೧॥

ತಪನ ಮಂಡಲ ಮಂಡಿತ ಕಂಧರೇ
ಪೃಥು ಸುವರ್ಣ ಸುವರ್ಣ ನಗದ್ಯುತೇ ।
ವಿಷಭುಜಂಗ ನಿಷಂಗ ವಿಭೂಷಿತೇ
ಗಿರಿಸುತೇ ಭವತೀಮಹಮಾಶ್ರಯೇ ॥೨॥

ಜಗತಿ ·ಕಃ ಪ್ರಣತಾಭಿಮತಂ ದದೌ
ಝಟಿತಿ ಸಿದ್ಧನುತೇ ಭವತೀ ಯಥಾ
ಜಗತಿ ಕಾಂಚನು ವಾಂಛತಿ ಶಂಕರೋ
ಭುವನಧೃತ್ತನಯೇ ಭವತೀಂ ಯಥಾ ॥ ೩ ॥

ವಿಮಲ ಯೋಗ ವಿನಿರ್ಮಿತ ದುರ್ಜಯ
ಸ್ವತನು ತುಲ್ಯ ಮಹೇಶ್ವರ ಮಂಡಲೀ ।
ವಿದಲಿತಾಂಧಕ ಬಾಂಧವ ಸಂಹತಿಃ
ಸುರವರ್ಯೈಃ ಪ್ರಥಮಂ ತ್ವಮಭಿಷ್ಟುತಾ ॥ ೪ ॥

ಸಿತ ಸಟಾಪಟಲೋದ್ಧತ ಕಂಧರಾ
ಭರಮಹಾಮೃಗರಾಜ ರಥ ಸ್ಥಿತಾ ।
ವಿಮಲ ಶಕ್ತಿ ಮತೀಚ ಪಿಂಗಳಾ
ಯತ ಭುಜೌಘ ವಿನಷ್ಟ ಮಹಾಸುರಾ ॥ ೫ ॥

ನಿಗದಿತಾ ಭುವನೈರಿತಿ ಚಂಡಿಕಾ
ಜನನಿ ಶುಂಭನಿಶುಂಭನಿಷೂದಿನೀ ।
ಪ್ರಣತಚಿಂತಿತದಾ ರಿಪುದಾನವ
ಪ್ರಮಥನೈಕರತಿಸ್ತರಸಾ ಭುವಿ ॥ ೬ ॥

ವಿಯತಿ, ವಾಯುಪಥೇ, ಜ್ವಲನೋಜ್ವಲೇಽ
ವನಿತಲೇ ತವ ದೇವಿ ಚ ಯದ್ವಪುಃ ।
ತದಿಹತೇ ವಿತತೇ ಪ್ರಣಮಾಮ್ಯಹಂ
ಭುವನ ಭಾಮಿನಿ ತೇ ಭವವಲ್ಲಭೇ । ॥ ೭ ॥

ಜಲಧಯೋ ಲಲಿತೋದ್ಧತ ವೀಚಯೋ
ಹುತವಹದ್ಯುತಯಶ್ಚ ಚರಾಚರಂ ।
ಫಣಸಹಸ್ರಭೃತಶ್ಚ ಭುಜಂಗಮಾ-
ಸ್ತವ ಭಿಯಾ ಸ್ಯತಿ ಮಹ್ಯಭಯಂಕರಾಃ ॥ ೮ ॥

ಭಗವತಿ ಸ್ಥಿರ ಭಕ್ತಿ ಜನಾಶ್ರಯೇ
ಪ್ರತಿಗತೋ ಭವತೀ ಚರಣಾಶ್ರಯಂ ।
ಕರಣಜಾತ ಮಿಹಾಸ್ತು ಮಮಾಚಲಂ
ನುತಿಲವಾಪ್ತಿ ಫಲಾಶಯ ಹೇತುತಃ । ॥ ೯ ॥

ಪ್ರಶಮಮೇಹಿ ಮಮಾತ್ಮಜವತ್ಸಲೇ
ತವ ನಮೋಽಸ್ತು ಜಗತ್ತ್ರಯ ಸಂಶ್ರಯೇ ।
ತ್ವಯಿ ಮಮಾಸ್ತು ಮತಿಸ್ಸತತಂಶಿವೇ
ಶರಣಗೋಽಸ್ಮಿ ನತೋಽಸ್ಮಿ ನಮೋಽಸ್ತುತೇ ॥೧೦॥

ಶರಣು ಬಂದವರನ್ನು ಕರುಣೆಯಿಂದ ಕಾಪಾಡುವ ಪರ್ವತ ಪುತ್ರಿಯಾದ ಪಾರ್ವತಿಯೇ, ಸುರಾಸುರರು ತಮ್ಮ ಕಿರೀಟಗಳಲ್ಲಿರುವ ರತ್ನಗಳ ಕಾಂತಿಯಿಂದ ಬೆಳಗುವ ನಿನ್ನ ಪಾದಕಮಲಗಳನ್ನು ನಾನು ನಮಸ್ಕರಿಸುತ್ತೇನೆ. ತಾಯೆ, ನಿನ್ನ ಬಣ್ಣ, ಬಂಗಾರದ ಕೊರಳಲ್ಲಿಯ ಹಾರ ಪದಕಗಳು ಸೂರ್ಯಮಂಡಲದಂತೆ ಬೆಳಗುತ್ತಲಿದೆ. ಹಾವುಗಳು ನಿನಗೆ ಆಭರಣಗಳಾಗಿವೆ. ಇಂತಹ ನಿನ್ನನ್ನು ನಾನು ಆಶ್ರಯಿಸಿರುವೆ. ಭಕ್ತರಿಗೆ ನಿನ್ನಂತೆ ಬೇಗನೇ ಬಯಸಿದ ವರವನ್ನುಕೊಡುವ ಕರುಣಾಳು ಇಲ್ಲ. ಶಿವನು ನಿನ್ನಷ್ಟು ಬೇರಾರನ್ನು ಪ್ರೀತಿಸುವದಿಲ್ಲ. ದೀರ್ಘ ತಪಸ್ಸನ್ನುಮಾಡಿ ನೀನು ಶಿವನ ಸಾವರ್ಣ್ಯ (ಸಮಾನ ಬಣ್ಣ) ಸಾಮೀಪ್ಯಗಳನ್ನು ಪಡೆದೆ. ಅಂಧಕಾಸುರನನ್ನು ಅವನ ಬಂಧು ವೃಂದವನ್ನು ಕೊಂದು ಹಾಕಿದ ನಿನ್ನನ್ನು ವೃಂದಾರಕರು, ಶಿವನಿಗಿಂತ ಹೆಚ್ಚಾಗಿ ಸ್ತುತಿಸುವರು. ಸಿಂಹದಮೇಲೆಕುಳಿತನ, ನೀನು ನಿನ್ನ ತೋಳುಗಳಿಂದ ದೈತ್ಯರನ್ನು ಮರ್ದಿಸುವೆ. ಚಂಡಿಕಾ, ಶುಂಭ ಸಂಹಾರಿಣಿ, ನಿಶುಂಭಮರ್ದಿನಿ ಎಂದು ಕರೆಯಲ್ಪಡುವೆ. ನೀನು ಭಕ್ತರಿಗೆ ಬೇಡಿದ್ದನ್ನುಕೊಡುವೆ. ದ್ವೇಷಿಗಳಾದ ದಾನವರನ್ನೂ ವೀರರಸದಿಂದ ಮರ್ದನಮಾಡುವೆ. ವ್ಯೋಮಪಥದಲ್ಲಿಯೂ ವಾಯು ಮಂಡಲದಲ್ಲಿಯೂ ಅಗ್ನಿಸ್ಥಂಡಿಲದಲ್ಲಿಯೂ, ಧರಣಿಮಂಡಲದಲ್ಲಿಯೂ ವ್ಯಾಪಿಸಿದ ನಿನ್ನ ವಿವಿಧ ರೂಪಗಳಿಗೆಲ್ಲ ನಾನು ನಮಸ್ಕಾರಮಾಡುವೆನು ಭೀಷಣ ಬಂಧುರವಾದ ಹೆದ್ದೆರೆಗಳಿಂದ ಘೂರ್ಮಿಸುವ ಸಮುದ್ರಗಳು, ಜ್ವಾಲೆಗಳಿಂದ ವಿಜೃಂಭಿಸುವ ಕಾಲಾಗ್ನಿಗಳು, ವಿಷ ತುಂಬಿದ ಹೆಡೆಗಳಿಂದ ಘೂತ್ಕರಿಸುವ ಹಾವುಗಳು ನಿನ್ನ ಭಯದಿಂದ ಮೇರೆ ಮೀರದೆ, ಲೋಕ ಕಂಟಕವಾಗದೆ, ಚರಾಚರ ಪ್ರಪಂಚವನ್ನು ಹಿಂಸಿಸದೆ ತಮ್ಮಷ್ಟಕ್ಕೆ ತಾವು ತಮ್ಮ ಆಳತೆಯಲ್ಲಿಯೇ ಉಳಿದಿರುತ್ತವೆ. ದೃಢವಾದ ಭಕ್ತಿಯುಳ್ಳ ಜನರಿಗೆಲ್ಲ ಆಶ್ರಯ ನೀಡುವ ಪೂಜ್ಯಳಾದ ಮಹಾತಾಯಿಯೇ ನಾನು ನಿನ್ನ ಚರಣಗಳಿಗೆ ಶರಣು ಬಂದಿದ್ದೇನೆ. ನಿನ್ನನ್ನು ಕಿಂಚಿತ್ತಾದರೂ ಸ್ತೋತ್ರಮಾಡಿ, ಹೊಗಳಬೇಕೆಂದು ಬಯಸಿ ನನ್ನ ಇಂದ್ರಿಯಗಳು ಸ್ಥಿರವಾಗಿ ನಿನ್ನಲ್ಲಿ ನಿಲ್ಲಲಿ. ಮಗನಾದ ನನ್ನ ಮೇಲೆ ವಾತ್ಸಲ್ಯವನ್ನು ಬೀರು. ನನ್ನ ಬುದ್ಧಿಯು ಯಾವಾಗಲೂ ನಿನ್ನ ಕಡೆಗೆ ಇರಲಿ, ಮೂರು ಲೋಕಕ್ಕೂ ಆಶ್ರಯಭೂತಳಾದ. ನಿನ್ನನ್ನು ಮೊರೆಹೊಕ್ಕಿದ್ದೇನೆ. ನಿನಗೆ ನಮೋ ನಮಃ''.

ಹೀಗೆ ಭಕ್ತಿಯಿಂದ ವೀರಕ ಎಂಬ ಹೆಸರಿನ ಗಣಾಧಿಪತಿಯು ಸ್ತೋತ್ರಮಾಡಿದನು. ಅದನ್ನು ಕೇಳಿ ಪಾರ್ವತಿಯು ಪ್ರಸನ್ನಳಾದಳು. ಅವನಿಗೆ ಆಶೀರ್ವಾದ ಮಾಡಿ ತನ್ನ ಅರಮನೆಯನ್ನು ಪ್ರವೇಶಿಸಿದಳು. ಅಲ್ಲಿ ಮಹಾದೇವನು ಕಾಳಿಯಾಗಿದ್ದ ಪಾರ್ವತಿ ಗೌರಿಯಾಗಿ ಬಂದದ್ದನ್ನು ಅರಳುಗಣ್ಣಿನಿಂದ ಆಶ್ಚರ್ಯ

ಚಕಿತನಾಗಿ ನಿರುಕಿಸಿದನು. ಪುಟಕ್ಕಿಟ್ಟ ಬಂಗಾರದಂತೆ ಹೊಳೆಯುತ್ತಿತ್ತು ಅವಳ ಮೈ ಬಣ್ಣ. ಮೋಹಕ ಆಕಾರ, ಮದ್ದಾನೆಯ ನಡಿಗೆ, ಚಂದ್ರನಿಗಿಂತ ಚಾರುತರವಾದ ಮುಖ, ತೆಳ್ಳಗಿನ ನಡು, ಅಪೂರ್ವ ಸೌಂದರ್ಯ. ಇಂತಹ ಸಕಲಾಭರಣ ಪೂರ್ಣಳಾದ ಲಾವಣ್ಯ ಸರೋವರದಲ್ಲಿ ಅದ್ದಿ ತೆಗೆದಂತಿದ್ದ ಆ ಲಲನೆಯನ್ನು ಕಂಡು, ಶಿವನಿಗೆ ಮೊದಲು ಸಂತೋಷ ಆಯಿತು. ಅನಂತರ ಅನುರಾಗ ಉಕ್ಕಿತು. ಆ ಮೇಲೆ ಅವಳ ಮಾದಕ ಮೋದಕ ಮೋಹಕ ರೂಪವನ್ನು ಕಂಡು ಸಂದೇಹವೂ ಬಂದಿತು, ಹಿಂದಿನಂತೆ ಯಾವದಾದರೂ ದುಷ್ಟ ದೈತ್ಯರ ಮಾಯೆ ಇರಬಹುದೋ! ಎಂಬ ಸಂಶಯವು ಅವನಲ್ಲಿ ಬಲವಾಯಿತು. ಇವಳೂ ಒಬ್ಬಳು ಮಾಯಾಂಗನೆಯೇ ಇರಬಹುದು. ಎಂದು ಅವಳನ್ನು ಕೊಲ್ಲಲು ಶಂಕರನು ಭಯಂಕರ ರೂಪವನಾಂತು ನಿಂತನು.

ರುದ್ರನ ಆ ರೌದ್ರ ರೂಪವನ್ನು ಕಂಡು ಆ ಶಾಂಭವಿಯು ಕೂಡಾ ಅಷ್ಟೇ ಭೀಕರವಾದ ರೂಪವನ್ನು ತಾಳಿದಳು. ಸಹಸ್ರಾರು, ರುದ್ರನ ರೂಪಗಳು ಒಂದೆಡೆ, ಅಷ್ಟೇ ರುದ್ರಾಣಿಯ ಭೈರವ ರೂಪಗಳು ಇನ್ನೊಂದೆಡೆ. ಕಾಳ ಭೈರವಿಯಂತೆ ಕ್ರುದ್ಧಳಾದ ಆ ಶಾಂಭವಿಯು ಶಿವನ ಸಹಸ್ರಾರು ರೂಪಗಳನ್ನೆಲ್ಲ ನುಂಗಿ ಹಾಕಿದಳು. ಆಗ ಪರಮೇಶ್ವರನಿಗೆ ತನ್ನ ರೂಪಗಳನ್ನು ನುಂಗಬೇಕಾದರೆ ಇವಳು ಪಾರ್ವತಿಯೇ ಇರಬೇಕೆಂದು ನಿಶ್ಚಯವಾಯಿತು. ''ಇಂತಹ ಅದ್ಭುತ ಸಾಮರ್ಥ್ಯವು ಯಾವ ದಾನವ ಮಾನವರಿಗೂ, ದೇವ ಗಂಧರ್ವರಿಗೂ ಇರುವದಿಲ್ಲ, ಇರಲು ಸಾಧ್ಯವಿಲ್ಲ. ಇದರಿಂದ ಇವಳು ತನ್ನ ಮನದನ್ನೆಯಾದ ಮಹಾದೇವಿಯೇ'' ಎಂದರಿತು ತನ್ನ ಮಾಯಾ ರೂಪಗಳನ್ನೆಲ್ಲ ಉಪಸಂಹರಿಸಿದನು. ಸೌಮ್ಯ ಸುಂದರವಾದ ಚಂದ್ರಚೂಡ ರೂಪದಿಂದ ಮಧುರ ಮಂದಹಾಸ ಮಾಡುತ್ತ ಗಂಗಾಧರನಾಗಿ ನಿಂತು ಕೊಂಡನು. ಅದನ್ನು ಕಂಡು ಪಾರ್ವತಿಯು ಅತ್ಯಂತ ಸಂತಸದಿಂದ ತನ್ನ ಕನಕಕಾಂತಿಯ ಕೋಮಲ ಅಂಗದ ಗೌರೀರೂಪವನ್ನು ಪ್ರದರ್ಶಿಸಿ ಭಕ್ತಿಯುತಳಾಗಿ ಭಗವಂತನೆದುರು ಬಾಗಿ ನಿಂತಳು.

ಕೆಲಕಾಲದ ವಿರಹದ ವೇದನೆಯಿಂದ ಸೊರಗಿ, ಕೊರಗಿ ಕ್ಲೇಶಪಡುತ್ತಿದ್ದ ತನ್ನ ಪ್ರೀತಿಯ ಕಾಂತೆಯನ್ನು ಶಿವನು ಕೈ ಹಿಡಿದು ಸಂತೈಸಿದನು, ಕುಶಲ ಪ್ರಶ್ನೆ ಮಾಡಿ ಮಧುರ ಮಾತುಗಳಿಂದ ಸಂತೋಷಪಡಿಸಿದನು. ಮತ್ತೆ ಅವಳೊಂದಿಗೆ ಪ್ರೇಮಾನುರಾಗದಿಂದ ಕೂಡಿಕೊಂಡು, ವಿವಿಧ ಕಾಮಕೇಳೀವಿಲಾಸಗಳನ್ನು ನಡೆಸಿದನು. ಹೀಗೆ ಸಾವಿರ ವರುಷಗಳವರೆಗೆ ಏಕಾಂತದಲ್ಲಿ ಆ ಪಾರ್ವತೀ ಪರಮೇಶ್ವರರ ಸಮರಸದ ಸಂಭೋಗ ಸಂಭ್ರಮ ಜರುಗಿತು. ಬಾಗಿಲ ಬಳಿಯಲ್ಲಿ ನಿಂತಿದ್ದ ವೀರಕನು ದರ್ಶನಕ್ಕಾಗಿ ಬಂದ ದೇವತೆಗಳನ್ನು ''ಪ್ರಭು-ಪರಮೇಶ್ವರಿಯೊಂದಿಗೆ ಈಗ ವಿಹಾರದಲ್ಲಿದ್ದಾನೆ. ಈಗ ನಿಮ್ಮನ್ನು ಕಾಣಲು ಸಮಯವಿಲ್ಲ''ವೆಂದು ಹೇಳಿ ಮರಳಿ ಕಳಿಸಿದನು.

ಹೀಗೆ ಸಾವಿರಾರು ವರುಷಗಳಾದರೂ ಆ ಶಿವಶಿವೆಯರ ಕಾಮಕ್ರೀಡೆಯ ಕಾರ್ಯಕ್ರಮವು ನಿರಂತರ ನಡೆದುದನ್ನು ನೋಡಿ, ಅಗ್ನಿಯನ್ನು ದೇವತೆಗಳು ''ಆ ಏಕಾಂತ ಮಂದಿರಕ್ಕೆ ಹೋಗಿ ಸಮಾಚಾರ ತಿಳಿದುಕೊಂಡು ಬಾ'' ಎಂದು ಕಳಿಸಿದರು. ಆಗ ಅಗ್ನಿಯು ಒಂದು ಗಿಳಿಯ ರೂಪವನ್ನು ತಳೆದು ಶಿವ ಪಾರ್ವತಿಯರು

ವಿಹಾರ ಗೈಯುವ ಶೃಂಗಾರ ಮಂದಿರದಲ್ಲಿ ಕಿಟಕಿಯ ಮೂಲಕ ಹಾರಿ ಒಳಗೆ ಹೋಗಿ ನೋಡಿದನು. ದಂಪತಿಗಳಿಬ್ಬರೂ ಇನ್ನೂ ಕ್ರೀಡಿಸುತ್ತಲೆ ಇದ್ದರು. ಅಗ್ನಿಯು ಬಂದದ್ದನ್ನು ನೋಡಿ ಶಂಕರನು ಅವನಿಗೆ ''ಅಗ್ನಿಯೇ, ನನ್ನ ಶಕ್ತಿಯಲ್ಲಿಯ ಅರ್ಧ ಭಾಗವನ್ನು ದೇವಿಯಲ್ಲಿ ಇಟ್ಟಿದ್ದೇನೆ. ಅವಳು ನೀನು ಬಂದುದನ್ನು ಕಂಡು ನಾಚಿಕೆಯಿಂದ ವಿಹಾರದಿಂದ ವಿಮುಖಳಾಗಿದ್ದಾಳೆ. ಈಗ ಉಳಿದ ಅರ್ಧಭಾಗವನ್ನು ನಮ್ಮ ವಿಹಾರ ವ್ಯಾಪಾರಕ್ಕೆ ವಿಘ್ನ ಒಡ್ಡಿದ ನೀನು ಪಾನ ಮಾಡು'' ಎಂದು ಹೇಳಿದನು. ಪರಮೇಶ್ವರನ ಅಪ್ಪಣೆಗೆ ತಲೆಬಾಗಿ ಅಗ್ನಿಯು ಶಿವನ ಶುಕ್ರನನ್ನು ಪಾನ ಮಾಡಿದನು.

ಅಗ್ನಿಯು ದೇವತೆಗಳಿಗೆ ಮುಖ ರೂಪನಾದುದರಿಂದ ಆ ಶಿವನ ಶಕ್ತಿಯು ಅವರೆಲ್ಲರ ಶರೀರದಲ್ಲಿ ಬೇರೆ ಬೇರೆಯಾಗಿ ಒಳ ಸೇರಿತು. ಬೆಂಕಿಗೆ ಹಾಕಿದ ಬಂಗಾರದಂತಿದ್ದ ಆ ಶಿವನ ಶಕ್ತಿಯು ಎಲ್ಲ ದೇವತೆಗಳ ಉದರವನ್ನು ಸೀಳಿಕೊಂಡು ಹೊರಗೆ ಬಂದಿತು . ಅದರಿಂದ ಶಂಕರನ ಆಶ್ರಮದಲ್ಲಿಯೇ ವಿಸ್ತಾರವಾದ ಒಂದು ಸರೋವರವು ರೂಪಗೊಂಡಿತು. ಅದರಲ್ಲಿ ಅನೇಕ ಹೊಂದಾವರೆಗಳು ಸುಂದರವಾಗಿ ಹೊಳೆದವು. ಹಲವಾರು ಬಗೆಯ ಹಕ್ಕಿಗಳು ದನಿಗೈದವು. ಅದರ ತೀರದಲ್ಲಿರುವ ತರುಗಳೆಲ್ಲವೂ ಕನಕಮಯ.

ಈ ಸರೋವರದ ಸಮಾಚಾರ ಕೇಳಿ ಪಾರ್ವತಿಗೂ ಅದನ್ನು ನೋಡಬೇಕೆಂದು ಅಪೇಕ್ಷೆ ಆಯಿತು. ಅಲ್ಲಿಗೆ ಬಂದು ಆ ದಿವ್ಯ ಪುಷ್ಕರಣಿಯನ್ನು ನೋಡಿ ಅಲ್ಲಿ ಅರಳಿದ ಕಮಲ ಕುಸುಮಗಳನ್ನು ತನ್ನ ನಿಡುಗೂದಲುಗಳಲ್ಲಿ ಮುಡಿದಳು. ಆ ಸರೋವರದಲ್ಲಿ ಸ್ನಾನಮಾಡಿದಳು. ಅದರ ಅಮೃತದಂತಿರುವ ನೀರನ್ನು ಕುಡಿಯುವ ಅಪೇಕ್ಷೆ ಆಯಿತು. ಅದರಂತೆ ಮುಗಿಲಿನಿಂದ ಇಳಿದು ಬಂದು ಆರು ಜನ ಕೃತ್ತಿಕಾದೇವಿಯರು ಆ ಶಿವಸರೋವರದಲ್ಲಿ ಸ್ನಾನ ಮಾಡಿ, ತಾವರೆ ಎಳೆಯದೊನ್ನೆಗಳಲ್ಲಿ ನೀರನ್ನು ತೆಗೆದುಕೊಂಡು ಮನೆಗೆ ಹೊರಟರು. ಅದನ್ನು ನೋಡಿ ಪಾರ್ವತಿಯು ಅವರಿಗೆ ''ನೀವು ಕೈಯಲ್ಲಿ ಹಿಡಿದಿರುವ ಆ ಕಮಲದ ಎಲೆಯಲ್ಲಿ ನೀರು ಇರುವಂತೆ ತೋರುತ್ತದೆ'' ಎಂದು ನುಡಿದಳು. ಆಗ ಆ ಆರೂ ಆದರ್ಶ ಅಂಗನೆಯರು ಅವಳಿಗೆ ಹೇಳಿದರು. ''ನಿನ್ನ ಗರ್ಭದಲ್ಲಿ ಹುಟ್ಟಲಿರುವ ಮಗನು ನಮ್ಮ ಮಗನೂ ಆಗುವಂತಿದ್ದರೆ, ನಿನಗೆ ಈ ಕಮಲದೆಲೆಯಲ್ಲಿ ಇರುವ ನೀರನ್ನು ನಾವು ಕುಡಿಯಲು ಕೊಡುತ್ತೇವೆ. ಅವನಿಗೆ ನಮ್ಮ ಹೆಸರು ಇಡಿರಿ.''

ಅದನ್ನು ಕೇಳಿ ಪಾರ್ವತಿಯು ''ನನ್ನ ಶರೀರದಲ್ಲಿ ಹುಟ್ಟಿದ ಮಗನು ನಿಮಗೆ ಹೇಗೆ ಪುತ್ರನಾಗುವನು ?'' ಎಂದು ಮರು ಪ್ರಶ್ನೆ ಹಾಕಿದಳು. ಪಾರ್ವತಿಯ ಈ ಪ್ರಶ್ನೆಗೆ ಆ ಕೃತ್ತಿಕೆಯರು ''ತಾಯಿ, ನಿನ್ನ ಕುಮಾರನನ್ನು ಮಗನೆಂದು ಸಲಹಬೇಕೆಂದು ನಮ್ಮ ಒತ್ತಾಸೆ. ನಾವು ಅವನಿಗೆ ಒಳ್ಳೇ ಉತ್ತಮವಾದ ತಲೆಯ ಟೊಪ್ಪಿಗೆಗಳನ್ನೂ ಬಗೆಯ ಬಗೆಯ ಆಭರಣಗಳನ್ನೂ ತೊಡಿಸುತ್ತೇವೆ. ಮಗನಂತೆಯೇ ಪ್ರೀತಿಸುತ್ತೇವೆ. ಇಷ್ಟರಿಂದಲೇ ನಮಗೆ ಸಂತೋಷ'', ಎಂದು ತಮ್ಮ ಅಭಿಲಾಷೆ ವ್ಯಕ್ತಮಾಡಿದರು. ಬಳಿಕ ಪಾರ್ವತಿಯು ''ನಿಮ್ಮ ಇಷ್ಟದಂತಾಗಲಿ'' ಎಂದು ಹೇಳಿದಳು.

ಆಗ ಆ ಆರೂ ಮಂದಿ ಕೃತ್ತಿಕೆಯರು ಒಬ್ಬೊಬ್ಬರಾಗಿ ತಮ್ಮ ಕೈಯಲ್ಲಿಯ ಪದ್ಮಪತ್ರಗಳಲ್ಲಿಯ ನೀರನ್ನು ಗೌರಿಗೆ ಕುಡಿಯಲು ಕೊಟ್ಟರು. ಆ ಆರೂ ಅಂಗನೆಯರ

ಕೈಯಿಂದ ಶಿವಶುಕ್ರಸರೋವರದ ನೀರನ್ನು ಮಹಾದೇವಿಯು ಕುಡಿದ ಕೂಡಲೇ ಅವಳ ಹೊಟ್ಟೆಯಿಂದ ಸಮಸ್ತ ಲೋಕಗಳನ್ನು ಬೆಳಗುವ ಅದ್ಭುತ ಆಕಾರದ ಮಗು ಒಂದು ಹೊರ ಬಂದಿತು. ಅವನ ಮುಖದಲ್ಲಿ ಸೂರ್ಯನ ದಿವ್ಯ ಪ್ರಭೆ. ಮೈತುಂಬ ಅಪರಂಜಿಯ ಹೊಳಪು, ಕೈಯಲ್ಲಿ ಶಕ್ತ್ಯಾಯುಧ ಹಾಗೂ ತ್ರಿಶೂಲ, ಅವನಿಗೆ ಆರುಮುಖಗಳು. ದುಷ್ಟರಾದ ದೈತ್ಯರನ್ನು ಮರ್ದನ ಮಾಡಲಿಕ್ಕಾಗಿ ಆ ಬಂಗಾರದ ಬಣ್ಣದ ಕುಮಾರನು ಪಾರ್ವತೀದೇವಿಯ ಉದರದಿಂದ ಅವತರಿಸಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಅರವತ್ತನೆಯ ಅಧ್ಯಾಯ ಮುಗಿದುದು.*



## ದೇವತೆಗಳು ಮಾಡಿದ ಕುಮಾರಸ್ವಾಮಿಯ ಸ್ತೋತ್ರ | ಅಧ್ಯಾಯ - ೧೬೧

**ಸೂತ ಉವಾಚ :**

**ವಾಮಂ ವಿಭಿದ್ಯ ನಿಷ್ಕ್ರಾಂತಃ ಸುತೋ ದೇವ್ಯಾಃ ಪುನಃ ಶಿಶುಃ ।**
**ಸ್ಕಂದಾಶ್ಚ ವದನೇ ವಹ್ನೇಃ ಶುಕ್ರಾತ್ಸುವದನೋಽಮಹಾನ್ ॥**

**ಸೂತ :-** ಮಹಾದೇವಿಯ ಉದರದ ಎಡಭಾಗದಿಂದ ಮತ್ತೂ ಒಂದು ಮಗು ಉದಿಯಿಸಿತು. ಶುಕರೂಪವನ್ನು ಧಾರಣೆಮಾಡಿದ ಅಗ್ನಿಯ ಮುಖದಲ್ಲಿ ಈಶ್ವರನ ಶಕ್ತಿಯು ಬಿದ್ದ ಕಾರಣ ಕುಮಾರನ ಮುಖವು ತೇಜೋಭಾಸುರವಾಗಿ ಹೊಳೆಯಿತು. ಕೃತ್ತಿಕಾ ದೇವಿಯರು ಅವನ ಆರೂ ಮುಖಗಳನ್ನು ಸರಿಯಾಗಿ ಜೋಡಿಸಿದುದರಿಂದ ಅವನಿಗೆ 'ಷಣ್ಮುಖ' ಎಂದೂ ಕೃತ್ತಿಕೆಯರು ಅವನನ್ನು ತಮ್ಮ ಮಗನಾಗಲಿ ಎಂದು ಕೇಳಿದ್ದರಿಂದ ಕಾರ್ತಿಕೇಯ ಎಂದೂ ಹೆಸರಾಯಿತು. ಚೈತ್ರಮಾಸದ ಕೃಷ್ಣಪಕ್ಷದ ಅಮವಾಸ್ಯೆಯ ದಿನ ವಿಶಾಲವಾದ ಶರವಣ ಅರ್ಥಾತ್ ಜೊಂಡು ಹುಲ್ಲಿನ ಪೊದೆಯ ಬದಿಯಲ್ಲಿ ಆ ಇಬ್ಬರೂ ಮಕ್ಕಳು ಪಾರ್ವತೀದೇವಿಯ ಉದರದಿಂದ ಉದಿಸಿ ಬಂದರು. ಮುಂದೆ ನಿಜ ಚೈತ್ರಮಾಸದ ಶುಕ್ಲಪಕ್ಷ ಪಂಚಮಿಯ ದಿನದಂದು ದೇವೇಂದ್ರನು ಸುರರ ಶ್ರೇಯಸ್ಸಿಗಾಗಿ ಅವರಿಬ್ಬರನ್ನು ಸೇರಿಸಿ ಒಬ್ಬನ್ನೇ ಕುಮಾರನನ್ನಾಗಿ ಮಾಡಿದನು. ಅದರ ಮರುದಿನ ಅಂದರೆ ನಿಜಚೈತ್ರ ಶುಕ್ಲಪಕ್ಷ ಷಷ್ಠಿಯ ದಿನ ಬ್ರಹ್ಮ; ಇಂದ್ರ, ಸೂರ್ಯ ಮುಂತಾದ ದೇವಗಣದವರೆಲ್ಲರೂ ಕೂಡಿ ಆ ಕುಮಾರಸ್ವಾಮಿಯನ್ನು ದೇವತೆಗಳ ಸೇನಾಪತಿಪಟ್ಟದಲ್ಲಿ ಅಭಿಷೇಕಮಾಡಿದರು. ಹೂವು, ಗಂಧ, ಧೂಪ, ದೀಪ, ಛತ್ರ, ಚಾಮರ, ಅನುಲೇಪನ, ಅಲಂಕಾರ, ಕ್ರೀಡಾ ಸಾಮಗ್ರಿ ಮುಂತಾದವುಗಳನ್ನು ಅವನಿಗೆ ಸಮರ್ಪಿಸಿದರು. ದೇವೇಂದ್ರನು ದೇವಸೇನಾ ಎಂಬ ತನ್ನ ಮಗಳನ್ನು ಆ ಕುಮಾರಸ್ವಾಮಿಗೆ ಒಪ್ಪಿಸಿ, **'ಪತ್ನಿ** ಎಂದು ಪರಿಗ್ರಹಿಸಬೇಕು' ಎಂದು ಬೇಡಿಕೊಂಡನು. ಆಗಲೇ ಸುರಸೇನಾಪತಿಯಾದ ಆ ಸ್ಕಂದನಿಗೆ ವಿಷ್ಣುವು ಬಗೆ ಬಗೆಯ ಆಯುಧಗಳನ್ನು, ಕುಬೇರನು ಹತ್ತು ಲಕ್ಷ ಯಕ್ಷರನ್ನು, ಅಗ್ನಿಯು ತೇಜಸ್ಸನ್ನು, ವಾಯುವು ವಾಹನವನ್ನು, ವಿಶ್ವಕರ್ಮನು ಮನಬಂದ ರೂಪ ಧರಿಸಬಲ್ಲ ಒಂದು ಆಟದ ಕೋಳಿಯನ್ನು ಕೊಟ್ಟರು. ದೇವ ಶ್ರೇಷ್ಠರು ಮಂಡೆಯೂರಿ ನಮಸ್ಕರಿಸಿ, ಈ ಮುಂದಿನ ಸ್ತೋತ್ರದಿಂದ ಅವನನ್ನು ಕೊಂಡಾಡಿದರು.

ನಮಃ ಕುಮಾರಾಯ ಮಹಾಪ್ರಭಾಯ
ಸ್ಕಂದಾಯ ಚ ಸ್ಕಂದಿತ ದಾನವಾಯ ।
ನವಾರ್ಕ ವಿದ್ಯುದ್ದ್ಯುತಯೇ ನಮೋಽಸ್ತು ತೇ
ನಮೋಽಸ್ತು ತೇ ಷಣ್ಮುಖ ಕಾಮರೂಪ ॥೧೩॥

ಪಿನದ್ಧನಾನಾಭರಣಾಯ ಭರ್ತ್ರೇ
ನಮೋ ರಣೇ ದಾನವ ಧಾರಣಾಯ ।
ನಮೋಽಸ್ತು ತೇಽರ್ಕಪ್ರತಿಮಪ್ರಭಾಯ
ನಮೋಽಸ್ತು ಗುಹ್ಯಾಯ ಗುಹಾಯ ತುಭ್ಯಂ ॥೧೪॥

ನಮೋಽಸ್ತು ತ್ರೈಲೋಕ್ಯ ಭಯಾಽಪಹಾಯ
ನಮೋಽಸ್ತುತೇ ಬಾಲ ಕೃಪಾಪರಾಯ
ನಮೋ ವಿಶಾಲಾಽಮಲಲೋಚನಾಯ
ನಮೋ ವಿಶಾಖಾಯ ಮಹಾವ್ರತಾಯ ॥೧೫॥

ನಮೋ ನಮಸ್ತೇಽಸ್ತು ಮನೋಹರಾಯ
ನಮೋ ನಮಸ್ತೇಽಸ್ತು ರಣೋತ್ಕಟಾಯ
ನಮೋ ಮಯೂರೋಜ್ವಲ ವಾಹನಾಯ
ನಮೋಽಸ್ತು ಕೇಯೂರಧರಾಯ ತುಭ್ಯಂ ॥೧೬॥

ನಮೋ ಧೃತೋದಗ್ರ ಪತಾಕಿನೇ ನಮೋ
ನಮಃ ಪ್ರಭಾವ ಪ್ರಣತಾಯ ತೇಽಸ್ತು ।
ನಮೋ ನಮಸ್ತೇ ವರ ವೀರ್ಯ ಶಾಲಿನೇ
ಕ್ರಿಯಾಪರಾಣಾಂ ಭವಭವ್ಯ ಮೂರ್ತಯೇ ॥೧೭॥

ಕ್ರಿಯಾಪರಾ ಯಜ್ಞಪತಿಂ ಚ ಸ್ತುತ್ವಾ
ವಿನೇಮುರೇವಂ ತ್ವಮರಾಧಿಪಾದ್ಯಾಃ
ಏವಂ ತದಾ ಷಡ್ವದನಸ್ತು ಸೇಂದ್ರಾ-
ನುವಾಚ ತುಷ್ಟಶ್ಚ ಗುಹಸ್ತತಸ್ತಾನ್ ।
ನಿರೀಕ್ಷ್ಯ ನೇತ್ರೈ ರಮಲೈಃ ಸುರೇಶಾನ್
ಶತ್ರೂನ್ ಹನಿಷ್ಯಾಮಿ ಗತಜ್ವರಾಃಸ್ಥ ॥೧೮॥

ಅತ್ಯಂತ ತೇಜಸ್ವಿಯೂ, ದಾನವರನ್ನು ನಿಗ್ರಹಿಸುವವನೂ ಉದಯ ಸೂರ್ಯನಂತೆ ಮಿಂಚುವವನೂ ಆದ ಕಾಮರೂಪಿ, ಆರುಮೊಗದ ಸ್ಕಂದನೆಂಬ ಕುಮಾರಸ್ವಾಮಿಗೆ ನಮೋನಮಃ. ಬಗೆ ಬಗೆಯ ಆಭರಣಗಳನ್ನಿಟ್ಟುಕೊಂಡು ಯುದ್ಧದಲ್ಲಿ ದಾನವರನ್ನು ಸೀಳುವ, ಸೂರ್ಯನಂತೆ ಅಪ್ರತಿಮ ತೇಜಸ್ಸುಳ್ಳ, ಅಗಮ್ಯನಾದ **ಗುಹ** ಎಂಬ ಹೆಸರಿನ ನಿನಗೆ ವಂದನೆ. ಮೂರುಲೋಕಗಳ ಭಯಾಪಾಯಗಳನ್ನೆಲ್ಲ ಪರಿಹರಿಸಿ ಕರುಣೆ ತೋರುವ

ವಿಶಾಲದೃಷ್ಟಿಯ ವಿಶಾಖನಿಗೆ ಪುನಃ ಪುನಃ ಪ್ರಣಾಮಗಳು. ನವಿಲನ್ನು ತನ್ನ ವಾಹನವನ್ನಾಗಿ ಮಾಡಿಕೊಂಡು, ಯುದ್ಧದ ಉತ್ಸಾಹ ತುಂಬಿದ ಮನಮೋಹಕರನಾದ ಕೇಯೂರಧಾರಿ ಕುಮಾರನಿಗೆ ನಮಸ್ಕಾರ.

ತನ್ನ ಪ್ರಭಾವದಿಂದ ಎಲ್ಲರಿಂದಲೂ ವಂದಿತನಾದ, ಕರ್ಮಯೋಗಿಗಳಿಗೆ ಮಂಗಳವನ್ನು ನೀಡುವ, ಧ್ವಜವನ್ನು ಧರಿಸಿದ, ಮಹಾಪರಾಕ್ರಮಶಾಲಿಯಾದ ಸ್ಕಂದಸ್ವಾಮಿಗೆ ವಂದನೆ.'' ಹೀಗೆ ಇಂದ್ರಾದಿ ದೇವತೆಗಳು ಯಜ್ಞಪತಿ ಎನಿಸಿದ ಆ ಷಣ್ಮುಖನನ್ನು ನಮಸ್ಕರಿಸಿ ಪ್ರಾರ್ಥಿಸಿದ ಬಳಿಕ ಪ್ರಸನ್ನನಾದ ಆ ಗುಹನು ಅವರೆಲ್ಲರನ್ನು ಕರುಣಾ ಪೂರ್ಣ ದೃಷ್ಟಿಯಿಂದ ನೋಡಿ ಅಭಯವಿತ್ತು ಅವರಿಗೆ ಹೇಳಿದನು.

**ಕುಮಾರ :-** ನಿಮ್ಮ ವೈರಿಗಳನ್ನೆಲ್ಲ ನಾನು ವಧಿಸುವೆನು. ನೀವು ಚಿಂತೆಯನ್ನು ಬಿಟ್ಟು ಬಿಡಿರಿ. ಇದಲ್ಲದೆ ನಿಮ್ಮ ಅಪೇಕ್ಷೆ ಏನಿದೆ ಹೇಳಿರಿ ? ಎಷ್ಟೇ ಅಸಾಧ್ಯವಾಗಿದ್ದರೂ ನಿಮ್ಮ ಮನೋರಥವನ್ನು ನಾನು ಪೂರ್ಣ ಮಾಡುತ್ತೇನೆ.'' ಷಣ್ಮುಖನ ಈ ಅಭಯ ವಚನವನ್ನು ಕೇಳಿ ದೇವತೆಗಳು ನಮಸ್ಕರಿಸಿ ನುಡಿದರು. ''ದೈತ್ಯ ಸಾಮ್ರಾಟನಾದ ತಾರಕನು ಎಲ್ಲ ದೇವತೆಗಳಿಗೆ ಮೃತ್ಯು ಸ್ವರೂಪನಾಗಿದ್ದಾನೆ. ದುರಹಂಕಾರಿಯೂ ಕೋಪಿಷ್ಠನೂ ಆದ ಆ ದುಷ್ಟ ದೈತ್ಯನನ್ನು ಗೆಲ್ಲುವದು ಯಾರಿಂದಲೂ ಶಕ್ಯವಿಲ್ಲ. ಅವನನ್ನು ನೀನೇ ಘಾತಿಸಬೇಕು.'' ಜಗದೊಡೆಯನಾದ ಷಣ್ಮುಖನು ದೇವತೆಗಳ ಈ ಬೇಡಿಕೆಯನ್ನು ಈಡೇರಿಸಲಿಕ್ಕಾಗಿ ತಾರಕಾಸುರನ ಸಂಹಾರಕ್ಕಾಗಿ ಸನ್ನದ್ಧನಾದನು. ಇತ್ತ ದೇವೇಂದ್ರನಿಗೆ ಷಣ್ಮುಖನ ಮಾತಿನಿಂದ ದೊಡ್ಡ ಬಲ ಬಂದಂತಾಯಿತು. ನಿಷ್ಠುರವಾಗಿ ಮಾತನಾಡುವ ಒಬ್ಬ ದೂತನನ್ನು ತಾರಕಾಸುರನ ಬಳಿಗೆ ಅಟ್ಟಿದನು. ಆ ದೂತ ದೈತ್ಯ ಸಾರ್ವಭೌಮನ ಬಳಿಗೆ ಹೋಗಿ ಹೀಗೆ ಹೇಳಿದನು.

**ದೂತ :-** ''ದೈತ್ಯರಾಜ, ದೇವತೆಗಳ ಅರಸನಾದ ಮಹೇಂದ್ರನು ನಿನಗೆ ಹೇಳಿ ಕಳಿಸಿದ್ದಾನೆ. ನಿನ್ನ ಶಕ್ತಿಯಿದ್ದಷ್ಟು ಸೈನ್ಯ ಸಂಗ್ರಹಿಸಿಕೊಂಡು ಯುದ್ಧಕ್ಕೆ ಸಿದ್ಧನಾಗು. ಜಗತ್ತಿನಲ್ಲಿಯ ಜನರನ್ನೆಲ್ಲ ಹಿಂಸಿಸಿ, ನೀನು ಕಟ್ಟಿಕೊಂಡ ಪಾಪಕ್ಕೆಲ್ಲ ನಾನೀಗ ನಿನಗೆ ತಕ್ಕ ಶಾಸ್ತಿ ಮಾಡುತ್ತೇನೆ. ಮೂರು ಲೋಕಕ್ಕೆಲ್ಲ ನಾನೇ ಮಹಾರಾಜ, ಲೋಕ ಕಂಟಕರಾದ ನಿನ್ನಂತಹ ದುಷ್ಟ ದಾನವರನ್ನು ಶಿಕ್ಷಿಸುವದು ನನ್ನಕರ್ತವ್ಯವಾಗಿದೆ.''

ದೇವೇಂದ್ರನ ದೂತನು ಆಡಿದ ಈ ದಿಟ್ಟತನದ ನುಡಿಗಳನ್ನು ಕೇಳಿ ತಾರಕಾಸುರನ ಕಣ್ಣಿನ ತುಂಬ ರಕ್ತ ಚಿಮ್ಮಿತು. ಕಾಲವು ಒದಗಿ ಬಂದ ಆ ದುರುಳ ದಾನವನು ದರ್ಪೋದ್ಧತತನದಲ್ಲಿ ಇಂತು ನುಡಿದನು. ''ಇಂದ್ರ, ಸಾಕು ನಿನ್ನ ಜಂಭ ! ನನಗೆ ಗೊತ್ತಿಲ್ಲವೇ ನಿನ್ನ ಪೌರುಷ ಪರಾಕ್ರಮ ! ನೂರಾರು ಸಲ ರಣರಂಗದಲ್ಲಿ ನನ್ನಿಂದ ಹೊಡೆತತಿಂದು ಹೋಗಿರುವೆ. ನಿರ್ಲಜ್ಜನಾದ ನಿನಗೆ ಬುದ್ಧಿಯೂ ಕೆಟ್ಟು ಹೋಗಿದೆ. ನಿನಗೆ ನಾಚಿಕೆಯೇ ಇಲ್ಲವೆಂದ ಬಳಿಕ ಮನಬಂದಂತೆ ಹೇಳಿ ಕಳಸಿರುವೆ.''

ತಾರಕನ ಈ ಮದ ತುಂಬಿದ ಮಾತುಕೇಳಿಕೊಂಡು ದೇವದೂತನು ಹೊರಟುಹೋದನು. ಅವನು ಹೋದ ಬಳಿಕ ತಾರಕಾಸುರನ ತಲೆಯಲ್ಲಿ ವಿಚಾರದ ಚಕ್ರವು ಆರಂಭವಾಯಿತು. ಹಲವಾರು ಬಾರಿ ನನ್ನಿಂದ ಸೋತು ಹೋದ ಸುರರಾಜನು

ಈಗ ಮತ್ತೆ ಇಷ್ಟು ಧೈರ್ಯದಿಂದ ಯುದ್ಧಕ್ಕೆ ಆಹ್ವಾನ ನೀಡಬೇಕಾದರೆ ಅವನಿಗೆ ಬೇರೆ ಯಾರೋ ಒಬ್ಬ ಬಲಿಷ್ಠವೀರನ ಬೆಂಬಲವು ದೊರೆತಂತಿದೆ. ಹೀಗೆ ಅವನು ಯೋಚಿಸುತ್ತಿರುವಾಗಲೇ ಅನೇಕ ಅಪಶಕುನಗಳು ಅವನಿಗೆ ಗೋಚರಿಸಿದವು. ಮುಗಿಲಿನಿಂದ ರಕ್ತದಮಳೆಧೂಳಿಯ ಮಳೆ ಸುರಿಯಿತು. ತಾರಕನ ಎಡಗಣ್ಣು ಅದುರಿತು. ಎಡ ಭುಜವು ಹಾರಿತು. ಬಾಯಿ ಒಣಗಿತು. ಮನಸ್ಸು ದಿಗಿಲುಗೊಂಡಿತು. ಇದ್ದಕ್ಕಿದ್ದಂತೆ ಆ ನಗರ ನಾರಿಯರ ಮುಖ ಕಮಲಗಳೆಲ್ಲ ಕಾಂತಿಗೆಟ್ಟು ಬಾಡಿಹೋದವು.

ಇಷ್ಟಾದರೂ ದುಷ್ಟದಾನವನು ಅದಾವುದನ್ನು ಗಮನಿಸದೆ, ನಿಶ್ಚಿಂತನಾಗಿದ್ದನು. ಸ್ವಲ್ಪೇ ಹೊತ್ತಿನನಂತರ ದೇವತೆಗಳ ಪ್ರಚಂಡವಾದ ಸೇನೆಯು ಬರುತ್ತಿರುವದು ಅರಮನೆಯ ಮೇಲೆ ನಿಂತುಕೊಂಡ ಅವನ ಕಣ್ಣಿಗೆ ಬಿದ್ದಿತು. ಆನೆಗಳ ಕೊರಳ ಗಂಟೆಗಳ ಝುಣತ್ಕಾರ, ಕುದುರೆಗಳ ಖರಪುಟದ ಸದ್ದು, ಸಾಲು ಸಾಲಾಗಿ ಹಾರುವ ಬಾವುಟಗಳು, ದೇವತಾವೀರರ ಖಡ್ಗಗಳ ಹೊಳಪು, ಸೇನಾಪತಿಗಳ ಧನುಷ್ಟಂಕಾರ, ಸೈನಿಕರ ಜಯಘೋಷ ಭೋರ್ಗರೆಯುವ ರಣವಾದ್ಯಗಳ ನಾದ ಎಲ್ಲವೂ ಅವನಿಗೆ ಗೋಚರವಾದವು. ಸುರಕುಲದ ಈ ಸಮರ ಸನ್ನಾಹ ಕಂಡು ಆ ದಾನವೇಶ್ವರನಿಗೂ ತುಸು ಗಾಬರಿ ಆಯಿತು. ಅವನು ದೂರಿನಿಂದ ನೋಡಿ, ಯೋಚಿಸಿದನು. "ಈ ಸುರಸಮೂಹದ ಮಧ್ಯದಲ್ಲಿ ಸೇನಾಪತಿಯಾಗಿ ಬರುವ ಈ ವೀರಾಗ್ರಣಿಯು ಯಾರು? ಎಲ್ಲ ದೇವತೆಗಳನ್ನು ಸೋಲಿಸಿದ ನಾನು ಇವನನ್ನು ಈ ವರೆಗೆ ಗೆದ್ದಂತಿಲ್ಲ." ಹೀಗೆ ಚಿಂತೆಯಿಂದ ಭ್ರಾಂತನಾಗಿ ತಾರಕನು ತಲೆಕೆಟ್ಟು ಯೋಚಿಸುತ್ತ ನಿಂತುಕೊಂಡಾಗ, ಸಿದ್ಧರು ಹಾಗೂ ಬಂದಿವೈತಾಲಿಕರು ದೇವ ಸೇನಾಪತಿಯಾದ ಸ್ಕಂದನನ್ನು ಹೊಗಳಿ ಅವನ ಶೌರ್ಯ, ಪರಾಕ್ರಮವನ್ನು ಜಯ ಘೋಷದೊಂದಿಗೆ ಉಗ್ಗಡಿಸುತ್ತಿರುವದು ಅವನ ಕಿವಿಗೆ ಬಿದ್ದಿತು.

॥ ಅಥ ಸ್ಕಂದ ಜಯಗಾಥಾ॥

ಜಯಾತುಲ ಶಕ್ತಿ ದಿಧೀತಿ ಪಿಂಜರ ಭುಜದಂತ, ಚಂಡ ರಣರಭಸ
ಸುರವದನ ಕುಮುದ ಕಾನನ ವಿಕಾಸನೇಂದೋ
ಕುಮಾರ ಜಯದಿತಿಕುಲ ಮಹೋದಧಿ ವಡಬಾನಲ ॥ ೪೦ ॥

ಷಣ್ಮುಖ ಮಧುರ ರವ ಮಯೂರ ರಥ ಸುರ-
ಮುಕುಟ ಕೋಟಿಘಟ್ಟಿತ ಚರಣನಖಾಂಕುರ ಮಹಾಸನ
ಜಯ ಲಲಿತ ಚೂಡಾ ಕಲಾಪ ನವ ವಿಮಲ ದಲ
ಕಮಲಕಾಂತ, ದೈತ್ಯ ವಂಶ ದುಸ್ಸಹದಾವಾನಲ ॥ ೪೧ ॥

ಜಯ ವಿಶಾಖ ವಿಭೋ ಜಯ ಸಕಲಲೋಕ
ತಾರಕ ಜಯ ದೇವ ಸೇನಾನಾಯಕ
ಸ್ಕಂದ ಜಯ ಗೌರೀನಂದನ ಘಂಟಾಪ್ರಿಯ
ಪ್ರಿಯ ವಿಶಾಖ ವಿಭೋ ಧೃತ ಪತಾಕ ಪ್ರಕೀರ್ಣ
ಪ್ರಚಲ ಕನಕಭೂಷಣ ಭಾಸುರ ದಿನಕರ ಸಚ್ಛಾಯ ॥ ೪೨ ॥

**ಜಯಜನಿತಸಂಭ್ರಮ ಲೀಲಾಲೂನಾಖಿಲಾ**
**ರಾತೇ ಜಯ ಸಕಲಲೋಕ ತಾರಕ ದಿತಿಜಾ-**
**ಸುರವರತಾರಕಾಂತಕ ಸ್ಕಂದ ಜಯಬಾಲ**
**ಸಪ್ತವಾಸರ ಜಯ ಭುವನಾವಲಿ ಶೋಕ ವಿನಾಶನ ॥ ೪೩ ॥**

ಅಸದೃಶವಾದ ಶಕ್ತಿಯ ತೇಜಸ್ಸಿನಿಂದ ಬೆಳಗುವ ಕುಮಾರನೇ, ನೀನು ಜಯಶೀಲನಾಗು. ರಣಾಂಗಣದಲ್ಲಿ ನಿನ್ನ ಬಾಹುದಂಡಗಳ ಪ್ರಚಂಡಶಕ್ತಿಯು ವ್ಯಕ್ತವಾಗುವದು, ದೇವತೆಗಳ ಮುಖವೆಂಬ ಕನ್ನೈದಿಲೆಗಳನ್ನು ನೀನು ಚಂದ್ರನಂತೆ ಅರಳಿಸುವೆ. ದೈತ್ಯಕುಲವೆಂಬ ಸಮುದ್ರದ ವಡವಾಗ್ನಿಯಂತೆ ವಿಜೃಂಭಿಸುವ ನಿನಗೆ ಜಯಜಯಕಾರ. ಮಧುರವಾಗಿ ದನಿಗೈಯುವ ನವಿಲನ್ನೇ ರಥವನ್ನಾಗಿ ಮಾಡಿಕೊಂಡು ಬಂದ ನಿನ್ನ ಪಾದಕಮಲಗಳ ಉಗುರುಗಳಿಗೆ ದೇವತೆಗಳು ತಮ್ಮ ತಲೆಯ ಮೇಲಿನ ಕಿರೀಟಗಳನ್ನು ತಾಕಿಸಿ ನಮಸ್ಕರಿಸುತ್ತಾರೆ.

ಸುಂದರವಾದ ಶಿಖಾಲಂಕಾರವುಳ್ಳ, ತಾವರೆ ಬಣ್ಣದ ಕಾಂತಿಯಿಂದ ಬೆಳಗುವ, ದೈತ್ಯವಂಶಕ್ಕೆ ಕಾಳ್ಗಿಚ್ಚಿನಂತಿರುವ ಕುಮಾರನೇ ಜಯಶೀಲನಾಗು. ಎಲ್ಲ ಜನರನ್ನು ದುಃಖದಿಂದ ಪಾರುಗೊಳಿಸುವ, ದೇವತೆಗಳ ಸೇನಾನಾಯಕನಾದ, ಮೇಲೆ ಎತ್ತಿದ ಬಾವುಟಗಳಿಂದ ಹೊಳೆಯುವ, ಸುವರ್ಣಾಲಂಕಾರಗಳಿಂದ ಶೋಭಿಸುವ, ಶೂರನಂತೆ ತೇಜಸ್ವಿಯಾದ ಗೌರೀಪುತ್ರನೇ, ಸ್ಕಂದ, ವಿಶಾಖ ಮುಂತಾದ ಹೆಸರುಳ್ಳ ನಿನಗೆ ಜಯವಾಗಲಿ. ವೈರಿಗಳನ್ನೆಲ್ಲಾ ಲೀಲೆಯಿಂದಲೇ ನಿರ್ಮೂಲಮಾಡುವ, ಸರ್ವಜಗದೋದ್ಧಾರಕನಾದ, ದೈತ್ಯರಾಜ ತಾರಕನನ್ನು ಸಂಹರಿಸುವ, ಭೂಮಂಡಲದ ಶೋಕವನ್ನೆಲ್ಲ ಪರಿಹರಿಸುವ, ಏಳು ದಿನದ ಮಗುವಾದ ಸ್ಕಂದನೇ ನಿನಗೆ ಜಯ ಜಯ !

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಾಅರವತ್ತೊಂದನೆಯ ಅಧ್ಯಾಯ ಮುಗಿದುದು.*

—o—

ಸ್ಕಂದನಿಂದ ತಾರಕಾಸುರ ಸಂಹಾರ

ಅಧ್ಯಾಯ - ೧೬೨

**ಸೂತ ಉವಾಚ :**

**ಶ್ರುತ್ವೈತತ್ತಾರಕಃ ಸರ್ವಮುದ್ಘುಷ್ಟಂ ದೇವದುಂಧುಭಿಃ ।**
**ಸಸ್ಮಾರ ಬ್ರಹ್ಮಣೋ ವಾಕ್ಯಂ ವಧಂ ಬಾಲಾದುಪಸ್ಥಿತಂ ॥**

**ಸೂತ** :- ತಾರಕನು ದೇವಬಂದಿಗಳು ಉಗ್ಗಡಿಸಿದ ಜಯಘೋಷವನ್ನೆಲ್ಲ ತನ್ನ ಕಿವಿಯಿಂದ ಕೇಳಿದನು. ಕೂಡಲೇ ಅವನಿಗೆ ಬ್ರಹ್ಮದೇವರ 'ಏಳುದಿನದ ಬಾಲಕನಿಂದ ನಿನಗೆ ಮರಣವಾಗುವದು' ಎಂಬ ವಾಕ್ಯವು ನೆನಪಿಗೆ ಬಂದಿತು. ಈ ಹುಡುಗನಿಂದ ಹಾಗಾದರೆ ನನಗೆ ಮರಣವು ಬಂದಂತಾಯಿತು ಎಂದುಕೊಂಡ. ಧರ್ಮವನ್ನು ನೆನೆದು ಮೈಯಲ್ಲಿ ಕವಚವನ್ನು ತೊಟ್ಟುಕೊಳ್ಳದೆ, ರಥ ಕುದುರೆಗಳನ್ನು ಏರದೆ ಅನುಚರರನ್ನು ಕೂಡ ಬಿಟ್ಟು ಪಾದಚಾರಿಯಾಗಿಯೇ ಮನೆಯಿಂದ ಹೊರಬಿದ್ದ. ಅವನ ಮನಸ್ಸನ್ನು ಭಯ ಶೋಕಗಳು ಹಿಡಿದು ಹಿಚುಕಿದ್ದವು. ಕಾಲನೇಮಿ ಮುಂತಾದ ದೈತ್ಯರೆಲ್ಲರೂ ಸಂಭ್ರಾಂತರಾಗಿ ಕೂಗಿದರು. ''ವೀರರೇ ಓಡಿರಿ, ಸೇನೆಯನ್ನು ಕೂಡಿಸಿರಿ'' ಎಂದು. ಆದರೆ ಚಿಂತೋದ್ಭ್ರಾಂತನಾದ ತಾರಕಾಸುರನು ಮಾತ್ರ ನೇರವಾಗಿ ಕುಮಾರನಲ್ಲಿಗೆ ಬಂದು ಹೇಳಿದನು ''ಮಗು, ಈಗಲೇ ಯುದ್ಧಕ್ಕೇಕೆ ಬಂದೆ ? ನೀನಿನ್ನೂ ಬಾಲಕನಲ್ಲವೆ ? ಚೆಂಡಿನಾಟವನ್ನು ಆಡು. ಯುದ್ಧಭೀಕರರಾದ ದೈತ್ಯರನ್ನು ನೀನು ಇನ್ನೂ ನೋಡಿಲ್ಲ. ಎಷ್ಟಾದರೂ ನೀನು ಕೂಸಷ್ಟೆ ! ಆದುದರಿಂದಲೇ ನಿನಗೆ ಇಂತಹ ದುಡುಕುವ ಬುದ್ಧಿ. ಮಗುವಿನ ಮನಸ್ಸು ಪರಿಣಾಮವನ್ನು ಗಮನಿಸಲಾರದು.''

ತಾರಕಾಸುರನ ಈ ಮಾತುಗಳನ್ನು ಕೇಳಿ ಕುಮಾರನು ಎಳೆಯ ಕೂಸಾದರೂ ಧೈರ್ಯದಿಂದ ಮಾತನಾಡಿದನು. ಅವನು ಬಾಯಿ ತೆರೆದಿದ್ದನ್ನು ಕಂಡೇ ದೇವತೆಗಳಿಗೆ ಮಹದಾನಂದವಾಯಿತು. ''ತಾರಕನೇ, ನಿನಗೆ ಶಾಸ್ತ್ರಾರ್ಥವೇ ಬೇಕಾದರೆ ಹೇಳುತ್ತೇನೆ ಕೇಳು. ನಿರ್ಭಯರಾದ ವೀರಭಟರು ರಣರಂಗದಲ್ಲಿ ಶಾಸ್ತ್ರವಿಚಾರವನ್ನುಮಾಡುತ್ತ ಕೂಡುವದಿಲ್ಲ. ಆದರೂ ನನಗೆ ಉಪದೇಶ ಮಾಡಬಂದಿರುವದರಿಂದ ನಿನಗೆ ಶಾಸ್ತ್ರರಹಸ್ಯವನ್ನೇ ತಿಳಿಸುತ್ತೇನೆ. ನಾನು ಮಗುವೆಂದು ನೀನು ಹೀಯಾಳಿಸಬೇಡ. ಕಾಳಸರ್ಪವು ಸಣ್ಣದಿದ್ದರೂ ಕಚ್ಚಿ ಕೊಲ್ಲಲಾರದೆ ? ಸೂರ್ಯನು ಚಿಕ್ಕವನಿರುವನೆಂದು ನೋಡಲಿಕ್ಕೆ ಆಗುತ್ತದೆಯೇ ? ಹಾಗೆ ನಾನೂ ಕೂಡಾ ಸಣ್ಣ ಹುಡುಗನಾದರೂ ಯಾರಿಂದಲೂ ಜಯಿಸಲು ಶಕ್ಯವಿಲ್ಲದ ಶಿಶು. ಅಕ್ಷರಗಳು ಕಡಿಮೆಯಿದ್ದಷ್ಟಕ್ಕೆ ಮಂತ್ರಗಳ ಸಾಮರ್ಥ್ಯ ಕಡಿಮೆಯಾಗುವದೇ ?''

ಹೀಗೆ ಸುಸ್ಪಷ್ಟವಾಗಿ ಎತ್ತರ ದನಿಯಿಂದ ಕುಮಾರನು ಮಾತನಾಡಿದ ಕೂಡಲೇ ತಾರಕಾಸುರನು ಸಿಟ್ಟಿಗೆದ್ದು ತನ್ನ ಕೈಯಲ್ಲಿಯ ಮುದ್ಗರಾಯುಧವನ್ನು ಕುಮಾರನ ತಲೆಯ ಮೇಲೆ ಅಪ್ಪಳಿಸಿದನು. ಸ್ಕಂದನು ಕೂಡಲೇ ವಜ್ರಾಯುಧದಿಂದ ಆ ಮುದ್ಗರವನ್ನು ಆಗಲೇ ಅಲ್ಲಿಯೇ ಮುರಿದು ಹಾಕಿದನು. ಅನಂತರ ತಾರಕನು ತೂರಿ

ಒಗೆದ '**ಬಿಂಧಿಪಾಲ**' ಎಂಬ ಉಕ್ಕಿನ ಘೋರಾಸ್ತ್ರವನ್ನು ಕುಮಾರನು ಕೈಯಲ್ಲಿ ಹಿಡಿದು ಆಚೆಗೆ ಒಗೆದನು. ಮತ್ತು ತಾನು ದೈತ್ಯನ ಮೇಲೆ ಘೋರ ಗದೆಯೊಂದನ್ನು ಬೀಸಿದನು. ಭಯಂಕರವಾದ ಆ ಗದಾಪ್ರಹಾರದಿಂದ ತಾರಕಾಸುರನ ಬೆಟ್ಟದಂತಿದ್ದ ದೇಹವು ನಡುಗಿ ಹೋಯಿತು. ಈ ಷಣ್ಮುಖನನ್ನು ಯುದ್ಧದಲ್ಲಿ ಗೆಲ್ಲುವದು ಇನ್ನುಅಶಕ್ಯ. ನನಗೆ ಈಗ ಮರಣ ಕಾಲ ಒದಗಿದಂತೆ ಎಂದು ವಿಚಾರ ಮಾಡಿದನು.

ತಾರಕಾಸುರನು ಆ ಮಗುವಿನ ಗದಾಪ್ರಹಾರ ತಿಂದು ತತ್ತರಿಸಿ ಹೋದದ್ದನ್ನು ಕಂಡು ಕಾಲನೇಮಿ ಮೊದಲಾದ ದೈತ್ಯರು ಒಗ್ಗೂಡಿ ಕುಮಾರನ ಮೇಲೆ ನುಗ್ಗಿ ಬಂದರು, ಭಯಂಕರವಾದ ಶಸ್ತ್ರಾಸ್ತ್ರಗಳಿಂದ ಅವನನ್ನು ಪ್ರಹರಿಸಿದರು. ಆದರೆ ಅವರ ಎಲ್ಲ ಶಸ್ತ್ರಾಸ್ತ್ರಗಳು ಅವನ ಮೈಗೆ ಬಡಿದು ಮುರಿದು ಬೀಳುತ್ತಿದ್ದವು. ನಿರ್ವಿಕಾರನಾದ ಕುಮಾರನಿಗೆ ಯಾವ ನೋವೂ ಆಗಲಿಲ್ಲ. ಗಾಯವೂ ಆಗಲಿಲ್ಲ. ಆದರೆ ಆ ದೈತ್ಯರಾಜರ ಭೀಷಣ ಆಯುಧಗಳು ಸುರಸೇನೆಯನ್ನು ಮಾತ್ರ ಗಾಯಗೊಳಿಸಿದವು. ಅದರಿಂದ ದೇವತೆಗಳು ಕ್ಷತವಿಕ್ಷತರಾಗಿ ಹಿಂಸೆ ಪಡತೊಡಗಿದರು. ಅದನ್ನು ಕಂಡು ಕುಮಾರನಿಗೆ ಕೋಪಬಂದು, ದಾನವರ ಸೈನ್ಯನ್ನೆಲ್ಲ ಶಸ್ತ್ರಾಸ್ತ್ರದಿಂದ ಅವನು ತುಂಡರಿಸಿ ತರಿದನು. ಅವನ ಪ್ರಹಾರದಿಂದ ಹೆದರಿ ಹೌಹಾರಿದ ಕಾಲನೇಮಿ ಮೊದಲಾದ ಅಸುರರೆಲ್ಲರೂ ಹೊಡೆತ ತಿಂದು ರಣರಂಗವನ್ನು ಬಿಟ್ಟು ಓಡಿಹೋದರು. ದಾನವ ದಳದ ಈ ಪರಾಜಯ, ಪಲಾಯನ ಕಂಡು, ಕೋಪಗೊಂಡ ತಾರಕಾಸುರನು ತನ್ನ ಭೀಕರವಾದ ಗದೆಯನ್ನು ಎತ್ತಿ ಷಣ್ಮುಖನನ್ನು ಹೊಡೆದು, ನವಿಲಿಗೆ ಪೆಟ್ಟು ಕೊಟ್ಟು, ಸುರಸೇನೆಯನ್ನೆಲ್ಲ ರಣಾಂಗಣದಿಂದ ಹಿಮ್ಮೆಟ್ಟಿಸಿದನು. ಕುಮಾರನ ವಾಹನವಾದ ನವಿಲು ರಕ್ತಕಾರಿ ಯುದ್ಧದಿಂದ ಓಡಿಹೋಯಿತು. ಆಗ ಕೋಪಾಟೋಪದಿಂದ ಕಣ್ಣು ಕೆಂಪು ಮಾಡಿ ಕುಮಾರನು ಶಕ್ತ್ಯಾಯುಧವನ್ನೆತ್ತಿಕೊಂಡು 'ದುಷ್ಟತಾರಕಾಸುರನೇ ನಿಲ್ಲು, ನಿಲ್ಲು. ಈ ಪ್ರಾಣಿ ಪ್ರಪಂಚವನ್ನೆಲ್ಲ ಇನ್ನೊಮ್ಮೆ ಕೊನೆಯ ಬಾರಿ ನೋಡಿಬಿಡು. ನಿನ್ನನ್ನು ನನ್ನ ಶಕ್ತ್ಯಾಯುಧವು ಈಗಲೇ ಕೊಂದುಬಿಡುವದು. ನೀನು ಕಲಿತ ಶಸ್ತ್ರಾಸ್ತ್ರ ವಿದ್ಯೆಯನ್ನು ಸ್ಮರಿಸಿಕೊಂಡು ಪ್ರತೀಕಾರ ಮಾಡು ?'' ಎಂದು ಹೇಳಿ ತಾರಕಾಸುರನ ಎದೆಗೆ ಗುರಿಯಿಟ್ಟು ಗದೆಯನ್ನು ಬಿಟ್ಟನು.

ಕುಮಾರನ ಕೈಯಿಂದ ಬಿಟ್ಟ ವಜ್ರಸಮಾನವಾದ ಆ ಗದೆಯು ತೋಳ ಬಳೆಯಂತೆ ಧ್ವನಿಮಾಡುತ್ತ ಹೋಗಿ, ವಜ್ರ ಪರ್ವತಕ್ಕಿಂತ ಕಠಿಣವಾದ ತಾರಕಾಸುರನ ಎದೆಯನ್ನು ಹೊಡೆದು ಸೀಳಿ ಹಾಕಿತು. ಬೆಟ್ಟ ಉರುಳುವಂತೆ ತಾರಕಾಸುರನು ನೆಲದ ಮೇಲೆ ಉರುಳಿ ಬಿದ್ದನು. ಅವನ ಕಿರೀಟವು ಹೊರಳಿ ಬಿದ್ದಿತು. ವಸ್ತ್ರಾಭರಣಗಳೆಲ್ಲವೂ ದಿಕ್ಕಾಪಾಲಾಗಿ ಎರಚಾಡಿ ಎಸೆಯಲ್ಪಟ್ಟವು. ತಾರಕಾಸುರನ ಸಂಹಾರದಿಂದ ದೇವತೆಗಳಿಗೆಲ್ಲ ಅತ್ಯಂತ ಸಂತೋಷವಾಯಿತು. ಅವರೆಲ್ಲರೂ ಷಣ್ಮುಖನನ್ನು ಹಾಡಿಹೊಗಳುತ್ತ ಆನಂದ ಭರಿತರಾಗಿ ಸ್ವಾಗತಿಸಲು ಬಂದ ತಮ್ಮ ಸುಂದರಿಯರೊಂದಿಗೆ ತಮ್ಮ ಮಂದಿರಗಳಿಗೆ ತೆರಳಿದರು. ತುಷ್ಟರಾದ ದೇವತೆಗಳು ಹೃಷ್ಟರಾದ ಮಹರ್ಷಿಗಳು ''ಕುಮಾರಸ್ವಾಮಿಯ ಈ ಉಪಾಖ್ಯಾನವನ್ನು ಓದಿದವರಿಗೂ ಕೇಳಿದವರಿಗೂ ಕೀರ್ತಿ ಬಂದು, ಸರ್ವಭೂತ ಬಾಧೆ ಪರಿಹಾರವಾಗಿ, ಸಮಸ್ತ ಸುಖ ಪ್ರಾಪ್ತಿಯಾಗಲಿ'' ಎಂದು ಹರಿಸಿದರು. ಪ್ರತಿ

ದಿನ ಪ್ರಾತಃಕಾಲದಲ್ಲಿ ಸಂಧ್ಯಾವಂದನೆಮಾಡಿ ಈ ಷಣ್ಮುಖನ ಚರಿತ್ರ ಓದಿದವರು ಸರ್ವಪಾಪಗಳಿಂದ ಮುಕ್ತರಾಗುವರು. ಅವರಿಗೆ ಅಪರಿಮಿತ ಸಂಪತ್ತು ದೊರೆಯುವದು. ಮಕ್ಕಳೂ, ರೋಗಿಗಳೂ ರಾಜಸೇವಕರೂ ಎಲ್ಲ ಜಾತಿ ಜನಾಂಗದವರೂ ಈ ಉಪಾಖ್ಯಾನವನ್ನು ಪಠಿಸಿದರೆ ಅವರ ಮನೋರಥಗಳೆಲ್ಲವೂ ಪೂರ್ಣವಾಗಿ ಕೊನೆಗೆ ಷಣ್ಮುಖನ ಸಾಯುಜ್ಯವನ್ನು ಹೊಂದುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಆರವತ್ತೆರಡನೆಯ ಅಧ್ಯಾಯ ಮುಗಿದುದು*



## ಹಿರಣ್ಯಕಶಿಪುವಿನ ತಪಸ್ಸು, ಬ್ರಹ್ಮದೇವರಿಂದ ವರಪ್ರಾಪ್ತಿ.

**ಅಧ್ಯಾಯ - ೧೬೩**

**ಋಷಯ ಊಚುಃ**

**ಇದಾನೀಂ ಶ್ರೋತುಮಿಚ್ಛಾಮೋ ಹಿರಣ್ಯಕಶಿಪೋರ್ವಧಂ**
**ನರಸಿಂಹಸ್ಯ ಮಾಹಾತ್ಮ್ಯಂ ತಥಾ ಪಾಪವಿನಾಶನಂ ॥**

**ಋಷಿ :-** ನರಸಿಂಹನು ಹಿರಣ್ಯಕಶಿಪುನನ್ನು ಸಂಹಾರಮಾಡಿದ ಪಾಪನಾಶಕ ಕಥೆಯನ್ನು ಮತ್ತು ನರಸಿಂಹರೂಪಿ ಪರಮಾತ್ಮನ ಮಹಿಮೆಯನ್ನು ಈಗ ನಾವು ಕೇಳ ಬಯಸುತ್ತೇವೆ.

**ಸೂತ :-** ಬ್ರಾಹ್ಮಣರೆ, ಹಿಂದೆ ಕೃತಯುಗದಲ್ಲಿ ದೈತ್ಯ ಸಾಮ್ರಾಟನಾದ ಹಿರಣ್ಯ ಕಶಿಪುವು ಮಹತ್ತರವಾದ ಅತ್ಯುಗ್ರ ತಪಸ್ಸನ್ನು ಮಾಡಿದನು. ಆ ರಾಕ್ಷಸರ ಆದಿ ಪುರುಷನು ಹನ್ನೊಂದು ಸಾವಿರವರುಷಕಾಲ ಮೌನವ್ರತದಿಂದ ಜಲಸಮಾಧಿಯಲ್ಲಿದ್ದು ನೀರಿನಲ್ಲಿದ್ದೇ ಮಹಾ ತಪಸ್ಸನ್ನು ಮಾಡಿದನು. ಆ ದೈತ್ಯಪತಿಯ ಬ್ರಹ್ಮಚರ್ಯ ಹಾಗೂ ಯಮನಿಯಮಗಳಿಂದ ಕೂಡಿದ ಉಗ್ರ ತಪಸ್ಸಿನಿಂದ ಬ್ರಹ್ಮ ದೇವರು ಸಂತುಷ್ಟರಾಗಿ, ಹಂಸಧ್ವಜವುಳ್ಳ ವಿಮಾನದಿಂದ ಅಲ್ಲಿಗೆ ಆಗಮಿಸಿದರು. ಎಲ್ಲ ದೇವತೆಗಳು ಬ್ರಹ್ಮರ್ಷಿಗಳು, ಚರಾಚರ ಗುರುವಾದ ಆ ಬ್ರಹ್ಮನೊಡನೆ ಹಿರಣ್ಯ ಕಶಿಪುವಿನ ತಪೋಭೂಮಿಗೆ ಆಗಮಿಸಿದ್ದರು. ಘೋರ ತಪಸ್ಸನ್ನು ಮಾಡುವ ಹಿರಣ್ಯ ಕಶಿಪುವನ್ನು ಕುರಿತು "ನಿಯಮ ನಿಷ್ಠನಾದ ಹಿರಣ್ಯಕಶಿಪು, ಭಕ್ತನಾದ ನಿನ್ನ ಈ ಅತ್ಯುಗ್ರ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರ ಕರುಣಿಸುತ್ತೇನೆ ಬಯಸಿದ ವರವನ್ನು ಕೇಳಿಕೋ" ಎಂದನು ಆ ಬ್ರಹ್ಮದೇವ.

**ಹಿರಣ್ಯಕಶಿಪು :-** ದೇವೋತ್ತಮ,ದೇವ, ದಾನವ,ಗಂಧರ್ವ, ಯಕ್ಷ, ರಾಕ್ಷಸ, ಮಾನವ, ಸರ್ಪ, ಪಿಶಾಚ, ಇವರಲ್ಲಿ ಯಾರೂ ನನ್ನನ್ನು ಕೊಲ್ಲಬಾರದು. ಯಾವ ಋಷಿ, ಮುನಿಗಳ ಶಾಪವೂ ನನಗೆ ತಟ್ಟಬಾರದು. ಮತ್ತ ಅಸ್ತ್ರಶಸ್ತ್ರಗಳಿಂದ ಗಿಡ, ಗುಡ್ಡ, ಹಗಲು, ರಾತ್ರಿ, ಹಸಿಯದು, ಒಣಗಿದ್ದು, ಯಾವುದರಿಂದಲೂ ನನಗೆ ಮರಣವು ಸಂಭವಿಸಬಾರದು. ಸೂರ್ಯ, ಚಂದ್ರ, ವಾಯು, ಅಗ್ನಿ, ಜಲ, ನಕ್ಷತ್ರ, ಅಂತರಿಕ್ಷ, ವರುಣ, ಇಂದ್ರ ಕುಬೇರ, ಇವರೆಲ್ಲರೂ ನನ್ನ ಕಿಂಕರರಾಗಿ ಅವರೆಲ್ಲರ ಅಧಿಕಾರವು ನನ್ನ ಅಧೀನವಾಗಬೇಕು.

**ಬ್ರಹ್ಮ:-** ಅಪ್ಪಾ ಹಿರಣ್ಯ ಕಶಿಪು, ನೀನು ಕೇಳಿದ ಈ ಅದ್ಭುತ ವರಗಳನ್ನು ಕೊಟ್ಟಿದ್ದೇನೆ. ನಿನ್ನ ಮನೋರಥಗಳೆಲ್ಲವೂ ಪೂರ್ಣವಾಗುವವು''. ಹೀಗೆ ಹೇಳಿ ಬ್ರಹ್ಮದೇವರು **'ವೈರಾಜ'** ಎಂಬ ಹೆಸರಿನ ಸತ್ಯಲೋಕಕ್ಕೆ ಪಯಣಿಸಿದರು. ಆ ದುಷ್ಟ ದೈತ್ಯನಿಗೆ ಇಂತಹ ವರವನ್ನು ಬ್ರಹ್ಮದೇವರು ಕೊಟ್ಟದ್ದನ್ನು ಕಂಡು ದೇವ, ಗಂಧರ್ವ, ಋಷಿ, ಮುನಿಗಳೆಲ್ಲರೂ ಬ್ರಹ್ಮದೇವರ ಬಳಿಗೆ ಹೋಗಿ ಪ್ರಾರ್ಥಿಸಿದರು, ''ಪೂಜ್ಯರೇ, ನೀವೇನೊ ಹಿರಣ್ಯ ಕಶಿಪುವಿಗೆ ವರಕೊಟ್ಟು ಅನುಗ್ರಹಿಸಿದಿರಿ. ಆದರೆ ನಿಮ್ಮ ವರದ ಬಲದಿಂದ ಉಬ್ಬಿಕೊಬ್ಬಿ ಹೋದ ಆ ದುಷ್ಟ ದೈತ್ಯನು ನಮ್ಮನ್ನೆಲ್ಲ ಕೊಂದುಹಾಕುವನು. ಆದ್ದರಿಂದ ನಮ್ಮ ಮೇಲೆ ನೀವು ಪ್ರಸನ್ನರಾಗಿ ಅವನನ್ನು ಕೊಲ್ಲುವದೆಂತು ಎಂಬುದನ್ನು ವಿಚಾರಿಸಿರಿ'' ದೇವತೆಗಳ ಈ ಬಿನ್ನಹ ಕೇಳಿ, ಆ ಪಿತಾಮಹನು ಸುರರನ್ನು ಸಂತೈಸುತ್ತ ಹೇಳಿದನು -

''ಸ್ವರ್ಗ ವಾಸಿಗಳೇ, ತಪಸ್ಸಿಗೆ ಫಲವಂತೂ ಅವಶ್ಯವಾಗಿ ದೊರಕಲೇ ಬೇಕಷ್ಟೇ ! ಅವನ ಪುಣ್ಯ ಸವೆದ ಬಳಿಕ ಭಗವಾನ್ ಶ್ರೀ ಹರಿಯು ಅವನನ್ನು ನಾಶ ಪಡಿಸುವನು.'' ದೇವತೆಗಳು ಪ್ರಜಾಪತಿಯ ಭರವಸೆಯ ನುಡಿಯನ್ನು ಕೇಳಿ ಸಮಾಧಾನ ಹೊಂದಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಬ್ರಹ್ಮದೇವರಿಂದ ವರವು ದೊರೆತ ಕೂಡಲೇ ದೈತ್ಯಪತಿಯಾದ ಹಿರಣ್ಯ ಕಶಿಪುವು ದರ್ಪದಿಂದ ಪ್ರಜೆಗಳನ್ನು ಹಿಂಸಿಸ ತೊಡಗಿದನು. ಆಶ್ರಮದಲ್ಲಿರುವ ಮುನಿಗಳನ್ನು ಪೀಡಿಸಿದನು. ದೇವತೆಗಳನ್ನು ಸೋಲಿಸಿ ಅಮರಾವತಿಯಲ್ಲಿಯೇ ನೆಲೆಸಿದನು. ಮೂರು ಲೋಕಗಳನ್ನೆಲ್ಲ ತನ್ನ ವಶದಲ್ಲಿರಿಸಿಕೊಂಡು ಪ್ರಜೆಗಳನ್ನೆಲ್ಲ ಪೀಡಿಸತೊಡಗಿದನು. ದೈತ್ಯರಿಗೆಲ್ಲ ಯಜ್ಞದಲ್ಲಿ ಭಾಗ ಸಿಗುವಂತೆ ಮಾಡಿದನು. ಆಗ ಇಂದ್ರಾದಿ ದೇವತೆಗಳೆಲ್ಲರೂ ವಸು, ಸಾಧ್ಯ, ಸಿದ್ಧ, ಹಾಗೂ ಮಹರ್ಷಿಗಳೊಂದಿಗೆ ಕೂಡಿಕೊಂಡು ವಿಷ್ಣುವಿಗೆ ಶರಣು ಹೋದರು. ಹಿರಣ್ಯಕಶಿಪುವಿನ ದುರಾಡಳಿತದ ಉಪದ್ರವದಿಂದ ತಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು.

**ವಿಷ್ಣು :-** ''ದೇವತೆಗಳೆ, ಇನ್ನು ಹೆದರಬೇಡಿ. ನಿಮಗೆ ಅಭಯವನ್ನು ಕೊಟ್ಟಿದ್ದೇನೆ, ಬ್ರಹ್ಮದೇವರ ವರದಿಂದ ಕೊಬ್ಬಿ ನಿಂತ ಹಿರಣ್ಯ ಕಶಿಪುವನ್ನು ನಾನು ಬೇಗನೆ ಸಂಹರಿಸುತ್ತೇನೆ.'' ಭಗವಂತನ ಈ ಮಾತನ್ನು ಕೇಳಿ ದೇವತೆಗಳೆಲ್ಲರಿಗೂ ಸಂತೋಷವಾಗಿ, ಅವರು ತಮ್ಮ ತಮ್ಮ ತಾಣಗಳಿಗೆ ಮರಳಿದರು. ಅವರೆಲ್ಲರೂ ಹೋದಬಳಿಕ ಹಿರಣ್ಯಕಶಿಪುವನ್ನು ಬೇಗ ಸಂಹರಿಸಬೇಕೆಂದು ಆ ಮಹಾಪ್ರಭುವು ಸಂಕಲ್ಪಿಸಿದನು.

ಅನಂತರ ಶ್ರೀಹರಿಯು ಸಿಂಹರೂಪವನ್ನು ಧರಿಸಿ, ತನ್ನ ದೇಹದ ಅರ್ಧ ಭಾಗವು ಮನುಷ್ಯರಂತೆ, ಮಿಕ್ಕಭಾಗವು ಸಿಂಹರೂಪವಾಗಿಯೂ ಇರುವಂತೆ ಏರ್ಪಡಿಸಿಕೊಂಡನು. ಅತ್ಯಂತ ತೇಜಸ್ವಿಯಾದ ಈ ನರಸಿಂಹರೂಪದಿಂದ ಹಿರಣ್ಯ ಕಶಿಪುವಿನ ಸಭಾಂಗಣವನ್ನು ಪ್ರವೇಶಿಸಿದನು. ನರಸಿಂಹನು ಆ ದೈತ್ಯರಾಜನ ದಿವ್ಯವೂ ರಮ್ಯವೂ ಸಕಲ ಕಾಮನಾ ಪೂರ್ಣವೂ ಆದ ಹಿರಣ್ಯಕಶಿಪುವಿನ ಸಭೆಯನ್ನು ಒಮ್ಮೆ ಕಣ್ಣೆತ್ತಿ ಸಿಂಹಾವಲೋಕನ ಮಾಡಿದನು. ಅದು ನೂರು ಯೋಜನ ಉದ್ದ, ಐವತ್ತು ಯೋಜನಕ್ಕಿಂತ ತುಸು ಹೆಚ್ಚು ಅಗಲ, ಅಂತರಿಕ್ಷದಲ್ಲಿ ಬೇಕಾದಲ್ಲಿ ಸಂಚರಿಸುವ ಸಾಮರ್ಥ್ಯ ಅದಕ್ಕೆ. ಐದು ಯೋಜನ

ಎತ್ತರವಾದ ಆ ದೈತ್ಯ ಸಭಾಮಂಟಪದಲ್ಲಿ ಪ್ರವೇಶಿಸಿದವರಿಗೆ ಮುಪ್ಪು ಇಲ್ಲ, ದುಃಖವಿಲ್ಲ, ಆಯಾಸವಿಲ್ಲ, ಚಳಿ, ಮಳೆ, ಹಸಿವು, ಬಾಯಾರಿಕೆ, ಸಾವು, ನೋವು ಒಂದೂ ಅಲ್ಲಿ ಸುಳಿಯುತ್ತಿರಲಿಲ್ಲ. ಅದರ ಒಳಭಾಗದಲ್ಲಿ ವಿಶ್ವಕರ್ಮನು ರಚಿಸಿದ ದಿವ್ಯವಾದ ಜಲಾಶಯಗಳು, ರತ್ನಮಯವಾದ ದಿವ್ಯವೃಕ್ಷಗಳು, ಹೂಗೊಂಚಲು ತೂಗುವ ನೂರಾರು ಬಳ್ಳಿಗಳು, ದೇವಮಾನವರ ಭೋಗಕ್ಕೆ ಅರ್ಹವಾದ ಅನೇಕ ಭಕ್ಷಭೋಜ್ಯಗಳು ಅಲ್ಲಿ ಹೊಳೆಯುತ್ತಿದ್ದವು. ಅಲ್ಲಿರುವ ಸುಂದರ ಸರೋವರಗಳಲ್ಲಿ ಕಮಲ ಕುಮುದ ಮೊದಲಾದವು ಅರಳಿ ಕಂಪು ಬೀರುತ್ತಿದ್ದವು. ಹಂಸ ಕಾರಂಡವ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದವು. ತಾಳೆ, ಅಶೋಕ, ಸುರಹೊನ್ನೆ, ಬಕುಲ, ಮಾವು, ಪಾದ ಬೂರುಗ, ಹೊಂಗೆ, ಸಂಪಿಗೆ ಮುಂತಾದ ಸುಗಂಧಿ ಮರಗಳು ಹೂತು, ಕಾತು, ಸೊಂಪಾಗಿ ಕಂಪು ಬೀರುತ್ತಿದ್ದವು. ಅಲ್ಲಿ ಬೆಳೆದ ಲತಾಪುಷ್ಪಗಳಿಗಂತೂ ಲೆಕ್ಕವೇ ಇಲ್ಲ.

ಇಂತಹ ದಿವ್ಯ ಸಭೆಯಲ್ಲಿ ದೈತ್ಯ ಹಿರಣ್ಯಕಶಿಪು ದಿವ್ಯಾಸನದಲ್ಲಿ ಮಂಡಿಸಿದ್ದನು. ದೇವ ಗಂಧರ್ವರು ಅವನ್ನು ಓಲೈಸುತ್ತಿದ್ದರು. ಮೇನಕಾ ರಂಭಾ ಮೊದಲಾದವರು ಅವನ ಸೇವೆಮಾಡುತ್ತಿದ್ದರು. ಆ ದೈತ್ಯರಾಜನ ಸಭೆಯಲ್ಲಿ ಉಳಿದ ದಾನವ ಧುರೀಣರೆಲ್ಲರೂ ಬೆಟ್ಟದಂತೆ ಬೃಹದಾಕಾರವಾಗಿ ಬೆಳೆದು ಸೂರ್ಯನಂತೆ ತೇಜಸ್ವಿಗಳಾಗಿ, ಬಂಗಾರದ ಮೈಬಣ್ಣದಿಂದ ಹೊಳೆಯುತ್ತಿದ್ದರು. ನರಸಿಂಹರೂಪಿ ಪರಮಾತ್ಮನು ಇಂತಹ ದಿವ್ಯ ಸಭಾಮಂಟಪದಲ್ಲಿ ಬಂಗಾರದ ಪದಕವನ್ನು ಹಾಕಿಕೊಂಡು ಲಕ್ಷಾಧಿಕ ದೈತ್ಯರಿಂದ ಸೇವಿಸಲ್ಪಡುವ ಹಿರಣ್ಯಕಶಿಪುವನ್ನು ದುರದುರು ನೋಡಿದನು.

*ಶ್ರೀ ಮತ್ಸ್ಯಮಹಾಪುರಾಣದಲ್ಲಿ ನೂರಾಅರವತ್ತಮೂರನೆಯ ಅಧ್ಯಾಯ ಮುಗಿದುದು.*

—○—

## ಪ್ರಹ್ಲಾದನಿಗೆ ನರಸಿಂಹದೇವರ ದರ್ಶನ

ಅಧ್ಯಾಯ - ೧೬೪

**ಸೂತ ಉವಾಚ :**

**ತತೋ ದೃಷ್ಟ್ವಾ ಮಹಾತ್ಮಾನಂ ಕಾಲಚಕ್ರಮಿವಾಗತಂ**
**ನರಸಿಂಹವಪುಶ್ಛನ್ನಂ ಭಸ್ಮಚ್ಛನ್ನಮಿವಾನಲಂ ॥೧॥**

**ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ನಾಮ ವೀರ್ಯವಾನ್ ।**
**ದಿವ್ಯೇನ ಚಕ್ಷುಷಾ ಸಿಂಹಮಪಶ್ಯದ್ದೇವಮಾಗತಂ ॥೨॥**

**ಸೂತ :-** ಅನಂತರ ಹಿರಣ್ಯ ಕಶಿಪುವಿನ ಮಗನಾದ ಪ್ರಹ್ಲಾದನು ಮಹಾತ್ಮನಾದ ನರಸಿಂಹ ದೇವರನ್ನು ನೋಡಿದನು. ಬೂದಿ ಮುಚ್ಚಿದ ಕೆಂಡದಂತೆ ಸಿಂಹದ ವೇಷವನ್ನು ತಳೆದು ಬಂದ ಆ ಭಗವಂತನನ್ನು ನೋಡಿ ಕಾಲ ಚಕ್ರವೇ ಈ ರೂಪದಲ್ಲಿ ಬಂದಂತೆ ಅನಿಸಿತು ಅವನಿಗೆ. ದಿವ್ಯದೃಷ್ಟಿಯಿಂದ ಪರಕಿಸಿದಾಗ ಅದು ಕೇವಲ ಸಿಂಹವಾಗದೇ ಸಾಕ್ಷಾತ್ ಜಗದೀಶ್ವರನೆ ಬಂದಿದ್ದಾನೆಂದು ನಿಶ್ಚಯವಾಯಿತು ಅವನಿಗೆ. ಬಂಗಾರದ ಬೆಟ್ಟದಂತೆ ಕಾಂತಿಯನ್ನು ತುಳುಕಿಸುವ ಆ ಅದ್ಭುತ ಆಕಾರದ ವಿಷ್ಣುವನ್ನು

ಕಂಡು ಎಲ್ಲ ದಾನವರೂ, ಆಶ್ಚರ್ಯ ಚಕಿತರಾದರು. ಆಗ ಪ್ರಹ್ಲಾದನು ತನ್ನ ತಂದೆಯನ್ನು ಕುರಿತು -

**ಪ್ರಹ್ಲಾದ :-** ದೈತ್ಯರ ಮೂಲ ಪುರುಷನಾದ ಮಹಾರಾಜಾ, ಅರ್ಧ ಮಾನವ ದೇಹ ಅರ್ಧ ಸಿಂಹದ ದೇಹವುಳ್ಳ ಇಂತಹ ಅದ್ಭುತ ಆಕಾರವನ್ನು ನಾನು ಇದುವರೆಗೂ ಎಂದೂ ನೋಡಿಲ್ಲ, ಎಲ್ಲಿಯೂ ಕೇಳಿಲ್ಲ. ದೈತ್ಯರ ಸಂಹಾರಕ್ಕಾಗಿ ಅವ್ಯಕ್ತ ಸ್ವರೂಪಿಯಾದ ಪರಮಾತ್ಮನೇ ಈ ನರಸಿಂಹ ರೂಪದಿಂದ ಇಲ್ಲಿಗೆ ಬಂದಿದ್ದಾನೆ ಎಂದು ನನ್ನ ಮನಸ್ಸು ಹೇಳುತ್ತದೆ. ಚಂದ್ರ, ಸೂರ್ಯ, ದೇವ, ದಾನವ, ಮಾನವ, ಶಿವ, ಬ್ರಹ್ಮ, ಇಂದ್ರ, ಕುಬೇರ, ವರುಣ, ಯಮ, ಯಕ್ಷ, ರಾಕ್ಷಸ ಮುಂತಾದ ಎಲ್ಲ ಪ್ರಾಣಿಗಳು, ನದಿ, ಸಮುದ್ರ, ಪರ್ವತ, ಬಯಲು, ಬಾನು ಮುಂತಾದ ಇಡೀ ವಿಶ್ವವೆಲ್ಲವೂ ಈತನ ದೇಹವನ್ನು ಆಶ್ರಯಿಸಿಕೊಂಡಿವೆ. ಇವನು ಸಾಕ್ಷಾತ್ ಸರ್ವ ವ್ಯಾಪಿಯಾದ ಶ್ರೀ ನಾರಾಯಣನೇ ಎಂಬಲ್ಲಿ ಸಂದೇಹವಿಲ್ಲ.

ಪ್ರಹ್ಲಾದನ ಈ ಮಾತುಗಳನ್ನು ಕೇಳಿ ಹಿರಣ್ಯಕಶಿಪುವು ತನ್ನದೈತ್ಯರನ್ನು ಕುರಿತು ಹೇಳಿದನು: ''ಅತೀ ಅಪೂರ್ವವಾದ ದೇಹವನ್ನು ಧರಿಸಿ ಬಂದ ಈ ಸಿಂಹವನ್ನು ಹಿಡಿಯಿರಿ, ಹೊಡೆಯಿರಿ. ಈ ಕಾಡು ಮೃಗವು ಕೈಯಲ್ಲಿ ಸಿಕ್ಕರೆ ಕೊಂದು ಬಿಡಿರಿ.''

ರಾಕ್ಷಸೇಶ್ವರನ ಅಪ್ಪಣೆ ಆದ ಕೂಡಲೇ ಎಲ್ಲ ದಾನವರೂ ಆ ಪ್ರಚಂಡವಾದ ಸಿಂಹವನ್ನು ತಮ್ಮ ಶಸ್ತ್ರಾಸ್ತ್ರಗಳಿಂದ ಹೊಡೆಯತೊಡಗಿದರು. ಆಗ ಬಲಿಷ್ಠವಾದ ಸಿಂಹವು ಗುಡುಗುಹಾಕಿದಂತೆ ಸಿಂಹನಾದಮಾಡಿ. ಮೃತ್ಯುವೇ ಇಳಿದು ಬಂದಂತೆ ಸುಂದರವಾದ ಆ ಹಿರಣ್ಯಕಶಿಪುವಿನ ಸಭಾಮಂಟಪವನ್ನೆಲ್ಲ ಮುರಿದು ಹಾಕಿತು. ಸುವ್ಯವಸ್ಥಿತವೂ, ಮುತ್ತುರತ್ನಾದಿ ಬೆಲೆಬಾಳುವ ಸಹಸ್ರಾರು ವಸ್ತುಗಳಿಂದ ಪರಿಪೂರ್ಣವೂ, ಬಹು ಪರಿಶ್ರಮದಿಂದ ನಿರ್ಮಾಪಿತವೂ ಆದ ತನ್ನ ದಿವ್ಯ ಸಭೆಯನ್ನು ಭಗ್ನಗೊಳಿಸಿದ ಆ ಕಾಡುಮೃಗದ ಮೇಲೆ ಅವನಿಗೆ ಬಹಳ ಸಿಟ್ಟುಬಂದಿತು. ಕಣ್ಣು ಕೆಂಪಗೆ ಮಾಡಿ ಅವನು ತನ್ನಲ್ಲಿದ್ದ ಶಸ್ತ್ರಾಸ್ತ್ರವೆಲ್ಲವನ್ನು ಪ್ರಯೋಗಿಸಿದನು. ಕಾಲಚಕ್ರ, ವಿಷ್ಣುಚಕ್ರ, ಬ್ರಹ್ಮಾಸ್ತ್ರ, ವಜ್ರಾಯುಧ ಶೂಲ, ಮುಸಲ, ಶೋಷಣ, ಸಂತಾಪನ, ಶಕ್ತಿ, ಕ್ರೌಂಚ, ಕಾಲ, ಮುದ್ಗರ, ವಾರುಣ, ಪಾಶುಪತ, ಸರ್ಪ, ನಾರಾಯಣ ಮುಂತಾದ, ದಿವ್ಯಾಸ್ತ್ರಗಳನ್ನೆಲ್ಲ ಎಡಬಿಡದೆ ಹಾರಿ, ತೂರಿ, ನರಸಿಂಹನ ಮೇಲೆ ಪ್ರಯೋಗಿಸಿದನು. ಇದರಂತೆ ಅವನ ಸೇನಾ ಸಾಗರವೆಲ್ಲವೂ ಕ್ರೋಧದಿಂದ ಉಕ್ಕೇರಿ ಪ್ರಾಸ, ಪಾಶ, ಖಡ್ಗ, ಗದೆ, ಫಿರಂಗಿ ಮುಂತಾದ ಆಯುಧಗಳಿಂದ ಆ ನರಸಿಂಹನ ಮೇಲೆ ದಾಳಿ ಮಾಡಿ,ಆಕ್ರಮಿಸಿತು. ಇಷ್ಟಾದರೂ ಮೋಡ ಮುಸುಕಿದ ಬೆಟ್ಟದಂತೆ ನಿರ್ವಿಕಾರನಾಗಿ ಯಾವ ಗಾಯವೂ ಆಗದೆ, ತೇಜಸ್ಸಿನಿಂದ ರಾಕ್ಷಸರ ಕಣ್ಣು ಕುಕ್ಕಿಸುತ್ತ ಅಚಲನಾಗಿಯೇ ನಿಂತಿದ್ದನು ಆ ನರಸಿಂಹಮೂರ್ತಿ.

*ಶ್ರೀ ಮತ್ಸ್ಯ ಮಹಾಪುರಾಣದಲ್ಲಿ ನೂರಾ ಅರವತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ನರಸಿಂಹದೇವರಿಂದ ಹಿರಣ್ಯಕಶಿಪು ವಧೆ

ಅಧ್ಯಾಯ - ೧೬೫

**ಸೂತ ಉವಾಚ :**

"ಖರಾಃ ಖರಮುಖಾಶ್ಚೈವ ಮಕರಾಶೀ ವಿಷಾನನಾಃ ।
ಈಹಾ ಮೃಗಮುಖಾಶ್ಚಾನ್ಯೇ ವರಾಹ ಮುಖ ಸಂಸ್ಥಿತಾಃ ॥

**ಸೂತ** :- ನರಸಿಂಹನನ್ನು ಪ್ರಹರಿಸಲು ಬಂದ ದೈತ್ಯರ ಆಕಾರ ಭೀಕರ. ವಿಕೃತ ಮುಖ. ಅಷ್ಟೇ ಪ್ರಖರ. ಅವುಗಳಲ್ಲಿ ಹಲವು ಪ್ರಕಾರ ಖರದಂತೆ ಕೆಲವರ ಮುಖ. ಮೊಸಳೆಯಂತೆ ಹಲವರದು. ಹಾವಿನಂತೆ, ಹಂದಿಯಂತೆ, ತೋಳದಂತೆ ಎಷ್ಟೋಜನ. ಧೂಮಕೇತುವಿನ ಮೋರೆಯವರೂ ಅವರಲ್ಲಿ ಇದ್ದರು. ಉರಿಮೋರೆಯ ಜನರಿಗೂ ಕಡಿಮೆಯಿಲ್ಲ. ಸೊಟ್ಟಮೋತಿ, ಕೆಟ್ಟಮೂಗು, ಕೆಂಪುಮುಖ, ಕೋಳಿಮೋತಿ, ತೆರಬಾಯಿ, ಜೋಲುನಾಲಿಗೆ, ಕಾಗೆ ಮೋರೆ, ಹದ್ದಿನ ಕಣ್ಣು, ಹಾವಿನ ನಾಲಿಗೆ, ಬೆಂಕಿಕಣ್ಣು, ಮೊಸಳೆ ಮೋರೆಗಳುಳ್ಳ ನಾನಾ ಆಕಾರದ ಪೆಡಂಭೂತಗಳು, ಕ್ರೂರ ಧ್ವನಿ ತೆಗೆದು ದೈತ್ಯ ಸೇನೆಯಲ್ಲಿ 'ಹೂಂ'ಕರಿಸುತ್ತಿದ್ದರು. ಹಾವುಗಳಂತೆ ಭುಸುಗುಟ್ಟತ್ತ, ಸಿಂಹಗಳಂತೆ ಅಬ್ಬರಿಸುತ್ತ ಹುಲಿಗಳಂತೆ ಹೂಂಕರಿಸುತ್ತ ಪ್ರಳಯ ಮೇಘಗಳಂತೆ ಗುಡುಗುತ್ತ ತಿರುಗುವ ಬೆಂಕಿಯ ವಂಕಿಯಂತಿರುವ ಚಕ್ರಗಳನ್ನು ಜೋರಿನಿಂದ ದೈತ್ಯರು ಆ ಸಿಂಹಪುರುಷನ ಮೇಲೆ ಬೀಸಿ ಒಗೆದರು. ಆದರೆ ಆ ದೈತ್ಯರು ಹಾರಿ ತೂರಿ ಬಿಟ್ಟ ಆ ಎಲ್ಲ ಚಕ್ರಗಳನ್ನು ಆ ಲೋಕೋತ್ತರ ಸಿಂಹವು ನುಂಗಿ ಬಿಟ್ಟಿತು.

ಇದನ್ನು ಕಂಡು ಸಿಟ್ಟಿನಿಂದ ತಲೆ ಕೆಟ್ಟಂತಾದ ಹಿರಣ್ಯಕಶಿಪು ಸಾಣೆಹಿಡಿದು ಹದನವಾದ ಉರಿಯುವ ತನ್ನ ಘೋರ ಶಕ್ತ್ಯಾಯುಧವನ್ನು ಮತ್ತೊಮ್ಮೆ ಆ ನರಹರಿಯ ಮೇಲೆ ಬೀಸಿ ಒಗೆದನು. ಅದನ್ನು ಕಂಡಕೂಡಲೇ ಆ ಅದ್ಭುತ ಸಿಂಹವು ಹೂಂಕಾರಮಾಡಿತು. ಆ ಸಿಂಹಗರ್ಜನೆಗೆ ದಾನವರೆಲ್ಲರೂ ಸಿಡಿದು ಬಿದ್ದರು. ಆ ಶಕ್ತ್ಯಾಯುಧವು ದಾರಿಯಲ್ಲಿಯೇ ಉಲ್ಕೆಯಂತೆ ತುಂಡಾಗಿ ನೆಲಕ್ಕೆ ಬಿದ್ದಿತು. ದೈತ್ಯರು ಪ್ರಯೋಗಿಸಿದ ಬಾಣಗಳೆಲ್ಲವೂ ನೈದಿಲೆಯ ಎಸಳುಗಳಂತೆ ಅವನಿಗೆ ಅಲಂಕಾರವಾಗಿ ದೇಹಸ್ಪರ್ಶಮಾಡಿ ಕಾಲಮೇಲೆ ಬಿದ್ದವು. ದೈತ್ಯರು ಇಷ್ಟೆಲ್ಲ ಗದ್ದಲ ಗಡಬಿಡಿಯಿಂದ ಯುದ್ಧಮಾಡುತ್ತ ಮಸೆದಾಡುತ್ತಿದ್ದರೂ ಆ ಸಿಂಹ ಮಾತ್ರ ನಿರ್ವಿಕಾರ. ಯುದ್ಧದ ನೀತಿಯನ್ನು ಮೀರದೆ, ಬರಿ ಗುಡುಗು ಗರ್ಜನೆ, ಸಿಂಹನಾದಗಳಿಂದಲೇ ವೈರಿಗಳನ್ನೆಲ್ಲ ಹೆದರಿಸಿ ಚೆದುರಿಸುತ್ತಿದ್ದ.

ಹಿರಣ್ಯಕಶಿಪುವಿನ ಆದೇಶದಂತೆ ದೈತ್ಯರು ಬೆಟ್ಟದಾಕಾರದ ಬಂಡೆಗಲ್ಲುಗಳಿಂದ ನರಸಿಂಹನನ್ನು ಕುಟ್ಟಿದರು. ಘೋರಮಳೆಗರೆದು ಜಲಪ್ರಳಯವನ್ನೇ ಮಾಡಿದರು. ಮಾಯೆಯಿಂದ ಕಾಡ್ಗಿಚ್ಚನ್ನು ಹೊತ್ತಿಸಿ ಸುಡಲು ಪ್ರಯತ್ನಿಸಿದರು. ಏನಾದರೂ ಆ ಆಸಿಂಹನು ದೈತ್ಯರಿಗೆ ಜಗ್ಗದೆ, ಅವರ ಶಸ್ತ್ರಾಸ್ತ್ರಗಳಿಗೆ ಬಗ್ಗದೆ ನಿಶ್ಚಲನಾಗಿ ನಿಂತನು. ಆ ನರಸಿಂಹದೇವನು ನಂತರ ನಿರ್ವಿಕಾರನಾಗಿ ನಿರ್ಭಯನಾಗಿ, ನಿಶ್ಚಿಂತನಾಗಿ, ಕುಳಿತುಕೊಂಡನು. ಹೀಗೆ ದಾನವ ಸೇನಾಪತಿಗಳು ಪ್ರಯೋಗಿಸಿದ ಶಸ್ತ್ರಗಳೂ, ಬೀಸಿದ ಆಯುಧಗಳೂ, ಬಿಟ್ಟ ಬಾಣಗಳೂ ವ್ಯರ್ಥವಾಗಿ ಮತ್ತೆ ನರಸಿಂಹನು ಸಿಂಹಗರ್ಜನೆ ಮಾಡುತ್ತ ದೈತ್ಯರನ್ನು ಎಡಬಿಡದೆ

ಸಂಹರಿಸುತ್ತ ಕಾಲಾಂತಕನಾಗಿ ನಿಂತುಕೊಂಡಾಗ, ಅಸುರರೆಲ್ಲರೂ ಭಯಭ್ರಾಂತರಾಗಿ ಹಿರಣ್ಯಕಶಿಪುವನ್ನೇ ಮೊರೆಹೊಕ್ಕರು. ದೈತ್ಯರ ಪರಾಭವನನ್ನು ಕಂಡು, ಆ ದೈತ್ಯ ಸಾರ್ವಭೌಮನು ಕನಲಿ ಕೆಂಡವಾದನು. ಅವನು ಕೋಪಾಟೋಪದಿಂದ ಹುಬ್ಬು ಗಂಟಿಕ್ಕಿದಾಗ ಜಗತ್ತಿನ ತುಂಬ ಕತ್ತಲೆ ಆವರಿಸಿತು. ಬಿರುಗಾಳಿ ಬೀಸಿತು. ಸೂರ್ಯ-ಚಂದ್ರರು ಗ್ರಹಣಹಿಡಿದಂತೆ ಕಪ್ಪಾಗಿ ಕಳೆಗುಂದಿದರು. ನಕ್ಷತ್ರಗಳು ತೇಜೋಹೀನವಾದವು. ಮುಗಿಲಿನಿಂದ ರಕ್ತವೃಷ್ಟಿ ಆಯಿತು. ಹಿರಣ್ಯಕಶಿಪುವು ಕೋಪಾಟೋಪದಿಂದ ದಿಗ್ಗನೆದ್ದು ನರಸಿಂಹನನ್ನು ಹೊಡೆಯಲು ಅವನೆಡೆಗೆ ಹೆಜ್ಜೆ ಹಾಕಿದಾಗ ನೆಲನಡುಗಿತು, ಜಲ ಕುದಿಯಿತು. ಭೂಮಿ ಹೊತ್ತ ಆದಿಶೇಷನು ಹೊಯ್ದಾಡಿದನು.

ಆ ದೈತ್ಯೇಂದ್ರನ ಸಿಟ್ಟಿನಿಂದ ಕೂಡಿದ ಕಾಲಿನ ತುಳಿತದಿಂದ ನದಿ, ಸಮುದ್ರ, ಸಹಿತವಾದ ಜಂಬೂದ್ವೀಪವೆಲ್ಲವೂ ಗದಗುಟ್ಟಿ ಕಂಪಿಸಿತು. ಕೈಲಾಸ, ಉದಯಾಚಲ, ವಿಂಧ್ಯಾಚಲ, ವೃಷಭಗಿರಿ, ಕುಂಜರಗಿರಿ, ಮೇರು, ಕೃಷಿಂಧ, ರೇಣುಕು ಕ್ರೌಂಚ ಮುಂತಾದ ಎಲ್ಲ ದೊಡ್ಡಗುಡ್ಡಗಳು ಗಡಗಡನಡುಗಿಹೋದವು. ಭೂಮಿಯ ಮೇಲಿನ ಜನರು ಸಂಭ್ರಾಂತರಾದರು ಪಾತಾಳದಲ್ಲಿಯ ನಾಗದೈತ್ಯರು ತಲ್ಲಣಿಸಿದರು. ಮುಗಿಲಿನಲ್ಲಿಯ, ಸ್ವರ್ಗದಲ್ಲಿಯ ಜನರು ಭಯಕಂಪಿತರಾದರು. ನದ, ನದೀ, ಸರೋವರ, ದೇಶ ಕೋಶಗಳಲ್ಲಿಯ ಸಮಸ್ತ ಜೀವಜಂತುಗಳು ಕಿಂ ಬಹುನಾ ಸಮಸ್ತ ಚೇತನಪ್ರಪಂಚವು ಭಯಾಪಾಯದಿಂದ ಗದಗುಟ್ಟಿ ಕಂಪಾಯಮಾನವಾಯಿತು.

ಹೀಗೆ ಮೂರು ಲೋಕಗಳನ್ನೇ ಭಯೋದ್ಭ್ರಾಂತವನ್ನಾಗಿ ಮಾಡುತ್ತ ಹಿರಣ್ಯ ಕಶಿಪುವು ತ್ರಿಶೂಲವನ್ನು ಎತ್ತಿಕೊಂಡು ನರಸಿಂಹ ದೇವರ ಮೇಲೆ ಏರಿಹೋದನು. ಇಲ್ಲಿಯವರೆಗೆ ನಿರ್ವಿಕಾರ ನಿಶ್ಚಿಂತನಾಗಿ ಕುಳಿತ ನರಸಿಂಹನು ಹಿರಣ್ಯಕಶಿಪು ತನ್ನ ಮೇಲೆ ಏರಿ ಬಂದಕೂಡಲೇ, ತಾನೇ ಅವನನ್ನು ಹಾರಿ ಹಿಡಿದನು. ತೂರಿ ಹೊಡೆದನು. ಅವನ ಮೇಲೆ ಬಿದ್ದು ಅಂಗಾಂಗಗಳನ್ನೆಲ್ಲ ಪ್ರಹರಿಸಿ, ಹದನವಾದ ತನ್ನ ಉಗುರುಗಳಿಂದ ಸೀಳಿ ಸಂಹರಿಸಿದನು. ಆ ದುಷ್ಟ ದೈತ್ಯನ ನಾಶದಿಂದ ಚಂದ್ರ, ಸೂರ್ಯ, ಗ್ರಹ, ನಕ್ಷತ್ರ, ದಾನವ, ಮಾನವ, ದೇವ, ಗಂಧರ್ವ, ಯಕ್ಷ, ಉರಗ, ಕಿನ್ನರ, ಕಿಂಪುರುಷ ಮೊದಲಾದವರೆಲ್ಲರೂ ಸಂತೋಷದಿಂದ ಹಿಗ್ಗಿ ಕುಣಿದಾಡಿದರು. ಮಹರ್ಷಿಗಳೆಲ್ಲರೂ ದೇವಾಧಿದೇವನಾದ ಆ ನರಸಿಂಹಸ್ವಾಮಿಯನ್ನು ದಿವ್ಯನಾಮಗಳಿಂದ ಸ್ತೋತ್ರಮಾಡಿದರು. ಸ್ವಯಂ ಬ್ರಹ್ಮದೇವರು ಅಲ್ಲಿಗೆ ಬಂದು ಭಕ್ತಿಯಿಂದ ಕೈಮುಗಿದು ಸ್ತೋತ್ರಮಾಡಿದರು.

**II ಬ್ರಹ್ಮೋವಾಚ II**

ಭವಾನ್ ಬ್ರಹ್ಮಾ ಚ ರುದ್ರಶ್ಚ ಮಹೇಂದ್ರೋ, ದೇವಸಪ್ತಮಃ ।
ಭವಾನ್ ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವೋಽವ್ಯಯಃ II ೯೮ II

ಪರಾಂ ಚ ಸಿದ್ಧಿಂ ಚ ಪರಂ ಚ ದೇವಂ
ಪರಂ ಚ ಮಂತ್ರಂ ಪರಮಂ ಹವಿಶ್ಚ ।
ಪರಂ ಚ ಧರ್ಮಂ ಪರಮಂ ಚ ವಿಶ್ವಂ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ II ೯೯ II

ಪರಂ ಶರೀರಂ ಪರಮಂ ಚ ಬ್ರಹ್ಮ
ಪರಂ ಚ ಯೋಗಂ ಪರಮಾಂ ಚ ವಾಣೀಂ ।
ಪರಂ ರಹಸ್ಯಂ ಪರಮಾಂ ಗತಿಂ ಚ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೦॥

ಪರಂ ಪರಸ್ಯಾಪಿ ಪರಂ ಪದಂ ಯತ್
ಪರಂ ಪರಸ್ಯಾಪಿ ಪರಂ ಚ ದೇವಂ ।
ಪರಂ ಪರಸ್ಯಾಪಿ ಪರಂ ಚ ಭೂತಂ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ
ಪರಂ ಪರಸ್ಯಾಪಿ ಪರಂ ರಹಸ್ಯಂ
ಪರಂ ಪರಸ್ಯಾಪಿ ಪರಂ ಮಹತ್ತ್ವಂ ॥೧೦೧ ॥

ಪರಂ ಪರಸ್ಯಾಪಿ ಪರಂ ಮಹದ್ಯ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೨॥

ಪರಂ ಪರಸ್ಯಾಪಿ ಪರಂ ನಿಧಾನಂ
ಪರಂ ಪರಸ್ಯಾಪಿ ಪರಂ ಪವಿತ್ರಂ ।
ಪರಂ ಪರಸ್ಯಾಪಿ ಪರಂ ಚ ದಾಂತಂ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೩॥

ಏವಂ ಉಕ್ತ್ವಾತು ಭಗವಾನ್ ಸರ್ವಲೋಕ ಪಿತಾಮಹಃ ।
ಸ್ತುತ್ವಾ ನಾರಾಯಣಂ ದೇವಂ ಬ್ರಹ್ಮಲೋಕಂ ಗತಃ ಪ್ರಭುಃ ॥೧೦೪॥

ತತೋ ನದತ್ಸು ತೂರ್ಯೇಷು ನೃತ್ಯಂತೀಷ್ವಪ್ಸರಸ್ಸು ಚ
ಕ್ಷೀರೋದಸ್ಯೋತ್ತರಂ ಕೂಲಂ ಜಗಾಮ ಹರಿರೀಶ್ವರಃ ॥೧೦೫॥

ನಾರಸಿಂಹಂ ವಪುರ್ದೇವಃ ಸ್ಥಾಪಯಿತ್ವಾ ಸುದೀಪ್ತಿಮತ್
ಪೌರಾಣಂ ರೂಪಮಾಸ್ಥಾಯ ಪ್ರಯಯೌ ಗರುಡಧ್ವಜಃ ॥೧೦೬॥

ಅಷ್ಟ ಚಕ್ರೇಣ ಯಾನೇನ ಭೂತಯುಕ್ತೇನ ಭಾಸ್ವತಾ
ಅವ್ಯಕ್ತ ಪ್ರಕೃತಿರ್ದೇವಃ ಸ್ವಸ್ಥಾನಂ ಗತವಾನ್ ಪ್ರಭುಃ ॥೧೦೭॥

**ಬ್ರಹ್ಮ** :- ಸ್ವಾಮಿ ನರಸಿಂಹ ಪ್ರಭುವೆ, ಈ ಹದಿನಾಲ್ಕು ಲೋಕಗಳ ಹುಟ್ಟಿಗೆ ನೀನೇ ಕಾರಣ. ಈ ಪ್ರಪಂಚವನ್ನೆಲ್ಲ ನಿರ್ಮಿಸುವ ಬ್ರಹ್ಮನು ನೀನೇ. ಸಂಹರಿಸುವ ರುದ್ರನು ನೀನೇ. ಪಾಲಿಸುವ ವಿಷ್ಣುವೂ ನೀನೇ. ಈ ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳೆಲ್ಲರೂ ನಿನ್ನ ಒಂದು ಅಂಶ. ನಿನಗೆ ನಾಶವಿಲ್ಲ. ಆದಿಪುರುಷನಾದ ನೀನು

ಸರ್ವೋತ್ತಮ ದೇವತೆ ಆಗಿದ್ದು, ದೇವೋತ್ತಮನೂ, ಸರ್ವಮಂತ್ರ ಪ್ರತಿಪಾದ್ಯನೂ, ಯಜ್ಞರೂಪಿಯೂ ಧರ್ಮಾತ್ಮನೂ, ವಿಶ್ವವ್ಯಾಪಿಯೂ ಪರಬ್ರಹ್ಮರೂಪಿಯೂ ದಿವ್ಯಶರೀರಯೂ ಆಗಿರುವೆ. ಯೋಗಿಗಳ ಯೋಗಗಮ್ಯನು, ವಾಣೀವಿಷಯನು. ಸದ್ಗತಿಪ್ರದನು, ಪರಾತ್ಪರ ತತ್ವಸ್ವರೂಪಿಯು, ವೈಕುಂಠಾದಿ ದಿವ್ಯಸ್ಥಾನವನ್ನು ಭಕ್ತರಿಗೆ ಕೊಡುವವನೂ, ಶ್ರೇಷ್ಠ ದೇವತೆಗಳಿಗೆಲ್ಲ ನಿಯಮಾಕನಾದ ದೇವೋತ್ತಮನೂ, ಪರಮ ರಹಸ್ಯಭೂತವಾದ ಮಹತ್ತರನೂ, ಜೀವೋತ್ತಮರಾದ ವಾಯು, ಬ್ರಹ್ಮ, ಲಕ್ಷ್ಮೀ ಮೊದಲಾದವರಿಗಿಂತ ಸರ್ವಶ್ರೇಷ್ಠನೂ, ಸರ್ವಜಗತ್ಕಾರಣನೂ ಪವಿತ್ರಗಳಲ್ಲಿ ಪರಮ ಪವಿತ್ರನೂ ಸರ್ವೋತ್ತಮನೂ ಆಗಿರುವೆ. 'ಸನಾತನ' 'ಪುರುಷ' ಶಬ್ದ ವಾಚ್ಯನಾದ ಸರ್ವದೇಹಾಂತರ್ಯಾಮಿಯಾದ ಪರಮಾತ್ಮನು ನೀನೇ ಎಂದು ಜ್ಞಾನಿಗಳೂ ವೇದಗಳೂ ಸಾರುತ್ತವೆ. ಇಂತಹ ನಿನಗೆ ನಮಸ್ಕಾರ.

ಹೀಗೆ ಪರಂಜ್ಯೋತಿ ರೂಪಿಯಾದ ಆ ನರಸಿಂಹ ಪರಮಾತ್ಮನನ್ನು ಆನಂದದಿಂದ ಸ್ತುತಿಸಿ ಕೊಂಡಾಡಿ ನಮಸ್ಕರಿಸಿ ಲೋಕಪಿತಾಮಹನಾದ ಬ್ರಹ್ಮನು ಸತ್ಯಲೋಕಕ್ಕೆ ತೆರಳಿದನು. ಅನಂತರ ಎಂಟು ಚಕ್ರಗಳುಳ್ಳ ದೇದೀಪ್ಯಮಾನವಾದ ತೇರಿನಲ್ಲಿ ಕುಳಿತು ಆ ಶ್ರೀಹರಿಯು ತನ್ನ ವೈಕುಂಠ ಲೋಕಕ್ಕೆ ಪ್ರಯಾಣಮಾಡಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಅರವತ್ತೈದನೆಯ ಅಧ್ಯಾಯ ಮುಗಿದುದು*



## ಶ್ರೀ ನೃಸಿಂಹ ಮಾಹಾತ್ಮ್ಯ

**ಅಧ್ಯಾಯ - ೧೬೬**

**॥ ಋಷಯ ಊಚುಃ ॥**

**''ಕಥಿತಂ ನರಸಿಂಹಸ್ಯ ಮಾಹಾತ್ಮ್ಯಂ ವಿಸ್ತರೇಣ ಚ**
**ಪುನಸ್ತಸ್ಯೈವ ಮಾಹಾತ್ಮ್ಯಮನ್ಯದ್ವಿಸ್ತರತೋ ವದ ॥ ೧ ॥**

**ಋಷಿ** :- ಸೂತಾಚಾರ್ಯ, ನರಸಿಂಹದೇವರ ಮಹಿಮೆಯನ್ನು ವಿಸ್ತಾರವಾಗಿ ನೀನು ನಿರೂಪಿಸಿದೆ. ಆ ಭಗವಂತನ ಮತ್ತೆ ಬೇರೆ ಮಹಿಮೆಗಳಿದ್ದರೆ, ನಮಗೆ ವಿವರವಾಗಿ ತಿಳಿಸು. ಈ ಜಗತ್ತೆಲ್ಲವೂ ಮೊದಲು ಬಂಗಾರದ ಪದ್ಮರೂಪವನ್ನು ಹೇಗೆ ತಾಳಿತು ? ಆ ಪದ್ಮದ ಮಧ್ಯದಲ್ಲಿ ವಿಷ್ಣುವು ಆಗ ಸೃಷ್ಟಿಯನ್ನು ಹೇಗೆ ಮಾಡಿದನು ? ತಿಳಿಸಿರಿ.

**ಸೂತ** :- ಋಷಿಗಳೆ, ವೈವಸ್ವತ ಮನುವು ಮತ್ಸ್ಯರೂಪಿಯಾದ ಪರಮಾತ್ಮನಿಗೆ ''ಪಾದ್ಮಕಲ್ಪದಲ್ಲಿ ನೀನು ಪ್ರಳಯ ಸಾಗರದ ಮಧ್ಯದಲ್ಲಿ ಒರಗಿದಾಗ, ನಿನ್ನ ಹೊಕ್ಕಳದಿಂದ ಈ ಜಗತ್‌ಪದ್ಮವು ಹೇಗೆ ಹುಟ್ಟಿತು ? ಎಂದು ಪ್ರಶ್ನೆ ಮಾಡಿದನು.

ಮನು ಮಹಾರಾಜನ ಆ ಪ್ರಶ್ನೆಗೆ ಮೀನರೂಪಿ ಪರಮಾತ್ಮನು ಆ ಪಾದ್ಮಕಲ್ಪದ ವೃತ್ತಾಂತವನ್ನು ಹೇಳತೊಡಗಿದನು :-

**ಮತ್ಸ್ಯ** :- ಸೂರ್ಯವಂಶದ ಲಲಾಮನಾದ ನಿನಗೆ ನಾರಾಯಣನ ಮಹಿಮೆಯನ್ನು ಕೇಳುವ ಕುತೂಹಲ ಹುಟ್ಟಿದ್ದು ನ್ಯಾಯವಾಗಿದೆ. ಪರಾಶರ ಪುತ್ರನಾದ ಜಗದ್ಗುರು

ವೇದವ್ಯಾಸರು ವೇದಗಳಲ್ಲಿ ಹೇಳಿದಂತೆ ಇದನ್ನೆಲ್ಲ ನಿರೂಪಿಸಿದ್ದಾರೆ. ಇದನ್ನೇ ನಾನು ನಿನಗೆ ನಿರೂಪಿಸುತ್ತೇನೆ. ವಿಶ್ವವ್ಯಾಪಿಯಾದ ನಾರಾಯಣರೂಪಿ ಪರತತ್ವವನ್ನು ಪೂರ್ಣರೂಪದಿಂದ ಯಾರೂ ತಿಳಿಯಲಾರರು. ಸಾಕ್ಷಾತ್ ಬ್ರಹ್ಮದೇವರಿಗೂ ಕೂಡಾ ಆ ಭಗವಂತನ ಸಕಲ ಗುಣಗಳನ್ನೂ ಸಂಪೂರ್ಣ ಶಕ್ತಿಯನ್ನೂ ಅರಿಯಲು ಶಕ್ತಿ ಸಾಲದು. ಅಂದ ಬಳಿಕ ಉಳಿದವರ ಪಾಡೇನು ?

ಸಕಲ ವೇದಗಳ ರಹಸ್ಯಾರ್ಥವೇ ನಾರಾಯಣ. ಸರ್ವಯಜ್ಞಗಳ ಆರಾಧ್ಯಮೂರ್ತಿ, ಜ್ಞಾನಿಗಳು ಜಿಜ್ಞಾಸಿಸುವ ದಿವ್ಯತತ್ವ, ಅಧ್ಯಾತ್ಮ ವಿದ್ಯೆಯ ಪರಮಲಕ್ಷ್ಯ. ಸರ್ವಜಗತ್ ತಾರಕ, ಸಕಲ ಪ್ರಾಣಿ ಪ್ರೇರಕ, 'ಓಂ'ಕಾರ ಶಬ್ದವಾಚ್ಯ, ಪ್ರಣವ ಸ್ವರೂಪಿ, ಗುಣ ಪರಿಪೂರ್ಣ, ಎಲ್ಲ ಜೀವಿಗಳ ಹೃದಯ ಗುಹೆಯಲ್ಲಿ ಇರುವ ಮಹಾಪ್ರಾಣ, ಎಲ್ಲರ ಶರೀರಗಳಲ್ಲಿ ಇರುವದರಿಂದ ಪುರುಷ ಶಬ್ದ ವಾಚ್ಯನಾಗಿ, ಸರ್ವವೇದಾರ್ಥವಾದ ಪುರುಷರೂಪದಿಂದ ಪ್ರತಿಪಾದಿತವಾದ ಪರಾತ್ಪರವಸ್ತುವೆಂದರೆ ಶ್ರೀಮನ್ನಾರಾಯಣನೇ. ಪುರುಷರೂಪದಿಂದ ಸರ್ವಾಂತರ ನಿಯಾಮಕನಾದ ಆ ಭಗವಂತನೇ ಕಾಲರೂಪದಿಂದ ಬಾಹ್ಯದಲ್ಲಿಯೂ ಸರ್ವ ನಿಯಾಮಕನಾಗಿದ್ದಾನೆ. ಅಶಾಶ್ವತವಾದ ಈ ಪ್ರಪಂಚದಲ್ಲಿ ಶಾಶ್ವತವಾಗಿ ಉಳಿಯವದೆಂದರೆ ಅವನೊಬ್ಬನೇ.

ಸರ್ವಸಾಕ್ಷೀಭೂತನಾದ ಆ ಪರಮಾತ್ಮನನ್ನು ಧ್ರುವ, ಅಕ್ಷ, ಅದೃಷ್ಟ, ಕಾಲ ಮುಂತಾದ ಅನೇಕ ನಾಮಗಳಿಂದ ಕರೆಯುತ್ತಾರೆ. ಪರಾತ್ಪರನಾದ ದೇವರು ಒಬ್ಬನೇ. ಆದರೂ ನಾಮ ಹಲವು. ಈ ಸಕಲ ಜಗತ್ತಿನ ಕಾರಕನೂ ಅವನೇ. ತಾರಕನೂ ಅವನೇ; ಮಾರಕನೂ ಅವನೇ ಪ್ರೇರಕನೂ ಅವನೇ. ವಿಶ್ವದ ಜನನ ಮರಣ ಪಾಲನ ಎಲ್ಲವನ್ನೂ ಅವನೇ ಎಲ್ಲ ಪ್ರಾಣಿಗಳಲ್ಲಿ ನಿಂತು ಮಾಡುತ್ತಾನೆ. ದುಃಖದಗ್ಧವಾದ ಅಸಂಖ್ಯ ಬದ್ಧಜೀವಿಗಳಲ್ಲಿ ಇದ್ದುಕೊಂಡು ಆ ಪರಮಾತ್ಮನು ಸರ್ವನಿರ್ವಾಹ ಮಾಡುತ್ತಿದ್ದರೂ ಅವನಿಗೆ ಮಾತ್ರ ಯಾವದೇ ದುಃಖವಾಲಿ ಬಂಧವಾಗಲಿ ಇಲ್ಲ. ಎಲ್ಲರೂ ಪೂಜಿಸುವದೂ ಅವನನ್ನೇ, ಎಲ್ಲ ಶಬ್ದಗಳು ಪ್ರತಿಪಾದಿಸುವದೂ ಅವನನ್ನೇ. ಸರ್ವವೇದಗಳೂ ಅವನ ಮಹಿಮೆಯನ್ನೇ ಉಗ್ಗಡಿಸುತ್ತವೆ. ಹಿಂದಿದ್ದ, ಈಗಿರುವ ಮುಂದೆ ಆಗಲಿರುವ ಈ ಪ್ರಪಂಚಡ ಅಸ್ತಿತ್ವಕ್ಕೆ ಮುಖ್ಯಕಾರಣ ಪುರುಷನೆಂದರೆ - ಪುರಷೋತ್ತನಾದ ಆ ಶ್ರೀ ಹರಿಯೇ. ಅವನೇ ಅಕ್ಷರ, ಅವನೇ ಸತ್ಯ. ಅವನನ್ನು ಭಜಿಸಿದವರಿಗೆ ಮಾತ್ರ ಅಮೃತ ಪದವಾದ ಮೋಕ್ಷ. ಸರ್ವ ನಿಯಾಮಕನಾದ ಸರ್ವೋತ್ತಮ ವಸ್ತುವೆಂದರೆ ಪುರಾಣ ಪುರುಷೋತ್ತಮನಾದ ಶ್ರೀಮನ್ ನಾರಾಯಣನೇ. ಅವನೇ ಸಾಕ್ಷಾತ್ ಶ್ರೀ ನರಸಿಂಹಸ್ವಾಮಿ. ಶ್ರೀ ನರಸಿಂಹ ಬೇರೆ ಅಲ್ಲ ಆ ಶ್ರೀ ನಾರಾಯಣ ಬೇರೆ ಅಲ್ಲ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಆರವತ್ತಾರನೆಯ ಅಧ್ಯಾಯ ಮುಗಿದುದು.*

—o—

**ಮತ್ಸ್ಯ ಉವಾಚ :**

**"ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತಂ ಕೃತಂಯುಗಂ**
**ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ರವಿನಂದನ ॥೧॥**

**ಮತ್ಸ್ಯ :-** ರವಿಪುತ್ರನಾದ ಮನುರಾಜ, ಕೃತಯುಗದ ಪ್ರಮಾಣ ನಾಲ್ಕು ಸಾವಿರ ವರುಷ, ಅದರ ಸಂಧ್ಯಾ ಹಾಗೂ ಸಂಧ್ಯಾಂಶ ಕಾಲ ಕೂಡಿ ಎಂಟು ನೂರು ವರ್ಷ. ಆ ಯುಗದಲ್ಲಿ ನಾಲ್ಕು ಪಾಲು ಧರ್ಮ. ಆ ಕಾಲದ ಜನರೆಲ್ಲರೂ ಸತ್ಪುರುಷರು. ಧರ್ಮನಿಷ್ಠರು, ಬ್ರಾಹ್ಮಣರೆಲ್ಲ ತಪಸ್ವಿಗಳು. ಧರ್ಮಿಷ್ಠರು. ಕ್ಷತ್ರಿಯರು ರಾಜನೀತಿಯನ್ನು ಅನೂಚಾನವಾಗಿ ಪಾಲಿಸುವರು. ವೈಶ್ಯರು ಒಕ್ಕಲುತನದ ಕಾರ್ಯವನ್ನು ನಿಷ್ಠೆಯಿಂದ ನಡೆಸುವರು. ಶೂದ್ರರು ಸೇವಾಧರ್ಮವನ್ನು ತಪ್ಪದೇ ಪಾಲಿಸುವರು. ಸತ್ಯ, ಧರ್ಮ, ಸಕಲ ವಿಧವಾದ ಶುದ್ಧಿ ಇವು ವರ್ಧಿಸುತ್ತಲೇ ಇರುತ್ತವೆ. ಈ ರೀತಿ ಸುಸ್ವಭಾವ ಹಾಗೂ ಸದಾಚಾರ ಸತ್ಕರ್ಮಾಚರಣೆಗಳು ಮಾನವರಲ್ಲಿ ಮಾತ್ರವಲ್ಲ, ಎಲ್ಲ ಪ್ರಾಣಿಗಳಲ್ಲಿ ಸಮಾನವಾಗಿ ಈ ಧರ್ಮ ಪ್ರವೃತ್ತಿ, ನ್ಯಾಯ ನಿಷ್ಠೆ ಸಮಪ್ರಮಾಣವಾಗಿ ಇರುವವು. ತ್ರೇತಾಯುಗದ ಅವಧಿ ಆರು ಸಾವಿರ ವರುಷ. ಅದರ ಸಂಧ್ಯಾ ಹಾಗೂ ಸಂಧ್ಯಾಂಶಗಳು ಸೇರಿ ಆರುನೂರು ವರುಷಗಳು. ಆಗ ಮೂರು ಪಾಲು ಧರ್ಮ, ಸತ್ಯ, ಸತ್ವಗಳೇ ಈ ಯುಗದ ಪ್ರಧಾನ ಗುಣಗಳು. ಬ್ರಾಹ್ಮಣಾದಿ ವರ್ಣ ಧರ್ಮಗಳಲ್ಲಿ ಈಗ ಕಿಂಚಿದ್ ವ್ಯತ್ಯಾಸ, ಅದರಿಂದ ಅಲ್ಲಲ್ಲಿ ದೌರ್ಬಲ್ಯ, ಕಿಂಚಿದ್ ಧರ್ಮಗ್ಲಾನಿ.

ದ್ವಾಪರಯುಗದ ಪರಿಮಿತಿ ಎರಡುಸಾವಿರ ದರ್ಷ. ಸಂಧ್ಯಾ, ಸಂಧ್ಯಂಶಗಳು ಸೇರಿ ನಾಲ್ಕುನೂರು ವರ್ಷ. ಈ ಯುಗದ ಜನರಿಗೆ ಹಣದ ಆಸೆ, ಕ್ಷುದ್ರ ಸ್ವಭಾವ, ಲೋಭ, ಸ್ವಾರ್ಥ, ಪ್ರತಿಫಲಾಪೇಕ್ಷೆ ಒಂದೊಂದಾಗಿ ಬೆಳೆಯುವವು. ಈಗ ಧರ್ಮವು ಅರ್ಧದಷ್ಟು ಮಾತ್ರ ಉಳಿದಿರುವುದು. ಕಲಿಯುಗದ ಪ್ರಮಾಣವು ಒಂದುಸಾವಿರ ವರುಷ. ಸಂಧ್ಯಾಸಂಧ್ಯಾಂಶಗಳು ಎರಡು ನೂರು ವರ್ಷ ಒಟ್ಟು ಪರಿಮಿತಿ ಹನ್ನೆರಡು ನೂರು ವರ್ಷ. ಈ ಯುಗದಲ್ಲಿ ಮೂರು ಪಾಲು ಅಧರ್ಮ ಒಂದು ಪಾಲು ಧರ್ಮ. ಈ ಕಾಲದ ಜನರು ಕಾಮಿಗಳು, ತಮೋಗುಣ ಪ್ರಾಚುರ್ಯದಿಂದ ನಾಸ್ತಿಕರು, ಗರ್ವಿಷ್ಠರು, ಸ್ನೇಹಶೂನ್ಯರೂ ಆಗುವರು. ಬ್ರಾಹ್ಮಣರು ಶೂದ್ರರಂತೆ, ಶೂದ್ರರು ಬ್ರಾಹ್ಮಣರಂತೆ ನಡೆಯುವ ಪ್ರವೃತ್ತಿ ಸಾಮಾನ್ಯವಾಗಿ ಕಂಡು ಬರುವದು. ಈ ಕಲಿಯುಗ ಮುಗಿಯುವಾಗ ಬ್ರಾಹ್ಮಣಾದಿ ವರ್ಣಗಳ ಅಸ್ತಿತ್ವವೇ ಸಂದಿಗ್ಧವಾಗಿರುವದು.

ದೇವತಾ ಮಾನದಿಂದ ಈ ನಾಲ್ಕೂ ಯುಗಗಳು ಕೂಡಿ ಹನ್ನೆರಡು ಸಾವಿರ ವರ್ಷಗಳಾಗುವವು. ಈ ನಾಲ್ಕೂ ಯುಗಗಳು ಕೂಡಿದರೆ ಒಂದು ಚತುರ್ಯುಗ ಎನಿಸುವದು. ಇಂತಹ ಸಾವಿರ ಚತುರ್ಯುಗವಾದರೆ ಬ್ರಹ್ಮನಿಗೆ ಒಂದು ಹಗಲಾಗುವದು. ಈ ಹಗಲು ಕಳೆದ ಬಳಿಕ ಪರಮಾತ್ಮನಿಗೆ ಈ ಸಮಸ್ತ ಪ್ರಪಂಚದ **'ಸಂಜೆಹೀರ್ಷೆ'**

ವೇದವ್ಯಾಸರು ವೇದಗಳಲ್ಲಿ ಹೇಳಿದಂತೆ ಇದನ್ನೆಲ್ಲ ನಿರೂಪಿಸಿದ್ದಾರೆ. ಇದನ್ನೇ ನಾನು ನಿನಗೆ ನಿರೂಪಿಸುತ್ತೇನೆ. ವಿಶ್ವವ್ಯಾಪಿಯಾದ ನಾರಾಯಣರೂಪಿ ಪರತತ್ವವನ್ನು ಪೂರ್ಣರೂಪದಿಂದ ಯಾರೂ ತಿಳಿಯಲಾರರು. ಸಾಕ್ಷಾತ್ ಬ್ರಹ್ಮದೇವರಿಗೂ ಕೂಡಾ ಆ ಭಗವಂತನ ಸಕಲ ಗುಣಗಳನ್ನೂ ಸಂಪೂರ್ಣ ಶಕ್ತಿಯನ್ನೂ ಅರಿಯಲು ಶಕ್ತಿ ಸಾಲದು. ಅಂದ ಬಳಿಕ ಉಳಿದವರ ಪಾಡೇನು ?

ಸಕಲ ವೇದಗಳ ರಹಸ್ಯಾರ್ಥವೇ ನಾರಾಯಣ. ಸರ್ವಯಜ್ಞಗಳ ಆರಾಧ್ಯಮೂರ್ತಿ, ಜ್ಞಾನಿಗಳು ಜಿಜ್ಞಾಸಿಸುವ ದಿವ್ಯತತ್ವ, ಅಧ್ಯಾತ್ಮ ವಿದ್ಯೆಯ ಪರಮಲಕ್ಷ್ಯ. ಸರ್ವಜಗತ್ ತಾರಕ, ಸಕಲ ಪ್ರಾಣಿ ಪ್ರೇರಕ, 'ಓಂ'ಕಾರ ಶಬ್ದವಾಚ್ಯ, ಪ್ರಣವ ಸ್ವರೂಪಿ, ಗುಣ ಪರಿಪೂರ್ಣ, ಎಲ್ಲ ಜೀವಿಗಳ ಹೃದಯ ಗುಹೆಯಲ್ಲಿ ಇರುವ ಮಹಾಪ್ರಾಣ, ಎಲ್ಲರ ಶರೀರಗಳಲ್ಲಿ ಇರುವದರಿಂದ ಪುರುಷ ಶಬ್ದ ವಾಚ್ಯನಾಗಿ, ಸರ್ವವೇದಾರ್ಥವಾದ ಪುರುಷರೂಪದಿಂದ ಪ್ರತಿಪಾದಿತವಾದ ಪರಾತ್ಪರವಸ್ತುವೆಂದರೆ ಶ್ರೀಮನ್‌ನಾರಾಯಣನೇ. ಪುರುಷರೂಪದಿಂದ ಸರ್ವಾಂತರ ನಿಯಾಮಕನಾದ ಆ ಭಗವಂತನೇ ಕಾಲರೂಪದಿಂದ ಬಾಹ್ಯದಲ್ಲಿಯೂ ಸರ್ವ ನಿಯಾಮಕನಾಗಿದ್ದಾನೆ. ಅಶಾಶ್ವತವಾದ ಈ ಪ್ರಪಂಚದಲ್ಲಿ ಶಾಶ್ವತವಾಗಿ ಉಳಿಯವದೆಂದರೆ ಅವನೊಬ್ಬನೇ.

ಸರ್ವಸಾಕ್ಷೀಭೂತನಾದ ಆ ಪರಮಾತ್ಮನನ್ನು ಧ್ರುವ, ಅಕ್ಷ, ಅದೃಷ್ಟ, ಕಾಲ ಮುಂತಾದ ಅನೇಕ ನಾಮಗಳಿಂದ ಕರೆಯುತ್ತಾರೆ. ಪರಾತ್ಪರನಾದ ದೇವರು ಒಬ್ಬನೇ. ಆದರೂ ನಾಮ ಹಲವು. ಈ ಸಕಲ ಜಗತ್ತಿನ ಕಾರಕನೂ ಅವನೇ. ತಾರಕನೂ ಅವನೇ; ಮಾರಕನೂ ಅವನೇ ಪ್ರೇರಕನೂ ಅವನೇ. ವಿಶ್ವದ ಜನನ ಮರಣ ಪಾಲನ ಎಲ್ಲವನ್ನೂ ಅವನೇ ಎಲ್ಲ ಪ್ರಾಣಿಗಳಲ್ಲಿ ನಿಂತು ಮಾಡುತ್ತಾನೆ. ದುಃಖದಗ್ಧವಾದ ಅಸಂಖ್ಯ ಬದ್ಧಜೀವಿಗಳಲ್ಲಿ ಇದ್ದುಕೊಂಡು ಆ ಪರಮಾತ್ಮನು ಸರ್ವನಿರ್ವಾಹ ಮಾಡುತ್ತಿದ್ದರೂ ಅವನಿಗೆ ಮಾತ್ರ ಯಾವದೇ ದುಃಖವಾಲಿ ಬಂಧವಾಗಲಿ ಇಲ್ಲ. ಎಲ್ಲರೂ ಪೂಜಿಸುವದೂ ಅವನನ್ನೇ, ಎಲ್ಲ ಶಬ್ದಗಳು ಪ್ರತಿಪಾದಿಸುವದೂ ಅವನನ್ನೇ. ಸರ್ವವೇದಗಳೂ ಅವನ ಮಹಿಮೆಯನ್ನೇ ಉಗ್ಗಡಿಸುತ್ತವೆ. ಹಿಂದಿದ್ದ, ಈಗಿರುವ ಮುಂದೆ ಆಗಲಿರುವ ಈ ಪ್ರಪಂಚಡ ಆಸ್ತಿತ್ವಕ್ಕೆ ಮುಖ್ಯಕಾರಣ ಪುರುಷನೆಂದರೆ - ಪುರಷೋತ್ತಮನಾದ ಆ ಶ್ರೀ ಹರಿಯೇ. ಅವನೇ ಅಕ್ಷರ, ಅವನೇ ಸತ್ಯ. ಅವನನ್ನು ಭಜಿಸಿದವರಿಗೆ ಮಾತ್ರ ಅಮೃತ ಪದವಾದ ಮೋಕ್ಷ. ಸರ್ವ ನಿಯಾಮಕನಾದ ಸರ್ವೋತ್ತಮ ವಸ್ತುವೆಂದರೆ ಪುರಾಣ ಪುರುಷೋತ್ತಮನಾದ ಶ್ರೀಮನ್ ನಾರಾಯಣನೇ. ಅವನೇ ಸಾಕ್ಷಾತ್ ಶ್ರೀ ನರಸಿಂಹಸ್ವಾಮಿ. ಶ್ರೀ ನರಸಿಂಹ ಬೇರೆ ಅಲ್ಲ ಆ ಶ್ರೀ ನಾರಾಯಣ ಬೇರೆ ಅಲ್ಲ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಆರವತ್ತಾರನೆಯ ಅಧ್ಯಾಯ ಮುಗಿದುದು.*

—o—

## ನಾಲ್ಕು ಯುಗಗಳ ಪ್ರಮಾಣ



**ಮತ್ಸ್ಯ ಉವಾಚ :**

**"ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತಂ ಕೃತಂಯುಗಂ**
**ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ. ರವಿನಂದನ ॥೧॥**

**ಮತ್ಸ್ಯ :-** ರವಿಪುತ್ರನಾದ ಮನುರಾಜ, ಕೃತಯುಗದ ಪ್ರಮಾಣ ನಾಲ್ಕು ಸಾವಿರ ವರುಷ, ಅದರ ಸಂಧ್ಯಾ ಹಾಗೂ ಸಂಧ್ಯಾಂಶ ಕಾಲ ಕೂಡಿ ಎಂಟು ನೂರು ವರ್ಷ. ಆ ಯುಗದಲ್ಲಿ ನಾಲ್ಕು ಪಾಲು ಧರ್ಮ. ಆ ಕಾಲದ ಜನರೆಲ್ಲರೂ ಸತ್ಪುರುಷರು. ಧರ್ಮನಿಷ್ಠರು, ಬ್ರಾಹ್ಮಣರೆಲ್ಲ ತಪಸ್ವಿಗಳು. ಧರ್ಮಿಷ್ಠರು. ಕ್ಷತ್ರಿಯರು ರಾಜನೀತಿಯನ್ನು ಅನೂಚಾನವಾಗಿ ಪಾಲಿಸುವರು. ವೈಶ್ಯರು ಒಕ್ಕಲುತನದ ಕಾರ್ಯವನ್ನು ನಿಷ್ಠೆಯಿಂದ ನಡೆಸುವರು. ಶೂದ್ರರು ಸೇವಾಧರ್ಮವನ್ನು ತಪ್ಪದೇ ಪಾಲಿಸುವರು. ಸತ್ಯ, ಧರ್ಮ, ಸಕಲ ವಿಧವಾದ ಶುದ್ಧಿ ಇವು ವರ್ಧಿಸುತ್ತಲೇ ಇರುತ್ತವೆ. ಈ ರೀತಿ ಸುಸ್ವಭಾವ ಹಾಗೂ ಸದಾಚಾರ ಸತ್ಕರ್ಮಾಚರಣೆಗಳು ಮಾನವರಲ್ಲಿ ಮಾತ್ರವಲ್ಲ, ಎಲ್ಲ ಪ್ರಾಣಿಗಳಲ್ಲಿ ಸಮಾನವಾಗಿ ಈ ಧರ್ಮ ಪ್ರವೃತ್ತಿ, ನ್ಯಾಯ ನಿಷ್ಠೆ ಸಮಪ್ರಮಾಣವಾಗಿ ಇರುವವು. ತ್ರೇತಾಯುಗದ ಅವಧಿ ಆರು ಸಾವಿರ ವರುಷ. ಅದರ ಸಂಧ್ಯಾ ಹಾಗೂ ಸಂಧ್ಯಾಂಶಗಳು ಸೇರಿ ಆರುನೂರು ವರುಷಗಳು. ಆಗ ಮೂರು ಪಾಲು ಧರ್ಮ, ಸತ್ಯ, ಸತ್ವಗಳೇ ಈ ಯುಗದ ಪ್ರಧಾನ ಗುಣಗಳು. ಬ್ರಾಹ್ಮಣಾದಿ ವರ್ಣ ಧರ್ಮಗಳಲ್ಲಿ ಈಗ ಕಿಂಚಿದ್ ವ್ಯತ್ಯಾಸ, ಅದರಿಂದ ಅಲ್ಲಲ್ಲಿ ದೌರ್ಬಲ್ಯ, ಕಿಂಚಿದ್ ಧರ್ಮಗ್ಲಾನಿ.

ದ್ವಾಪರಯುಗದ ಪರಿಮಿತಿ ಎರಡುಸಾವಿರ ದರ್ಷ. ಸಂಧ್ಯಾ, ಸಂಧ್ಯಂಶಗಳು ಸೇರಿ ನಾಲ್ಕುನೂರು ವರ್ಷ. ಈ ಯುಗದ ಜನರಿಗೆ ಹಣದ ಆಸೆ, ಕ್ಷುದ್ರ ಸ್ವಭಾವ, ಲೋಭ, ಸ್ವಾರ್ಥ, ಪ್ರತಿಫಲಾಪೇಕ್ಷೆ ಒಂದೊಂದಾಗಿ ಬೆಳೆಯುವವು. ಈಗ ಧರ್ಮವು ಅರ್ಧದಷ್ಟು ಮಾತ್ರ ಉಳಿದಿರುವುದು. ಕಲಿಯುಗದ ಪ್ರಮಾಣವು ಒಂದುಸಾವಿರ ವರುಷ. ಸಂಧ್ಯಾಸಂಧ್ಯಾಂಶಗಳು ಎರಡು ನೂರು ವರ್ಷ ಒಟ್ಟು ಪರಿಮಿತಿ ಹನ್ನೆರಡು ನೂರು ವರ್ಷ. ಈ ಯುಗದಲ್ಲಿ ಮೂರು ಪಾಲು ಅಧರ್ಮ ಒಂದು ಪಾಲು ಧರ್ಮ. ಈ ಕಾಲದ ಜನರು ಕಾಮಿಗಳು, ತಮೋಗುಣ ಪ್ರಾಚುರ್ಯದಿಂದ ನಾಸ್ತಿಕರು, ಗರ್ವಿಷ್ಠರು, ಸ್ನೇಹಶೂನ್ಯರೂ ಆಗುವರು. ಬ್ರಾಹ್ಮಣರು ಶೂದ್ರರಂತೆ, ಶೂದ್ರರು ಬ್ರಾಹ್ಮಣರಂತೆ ನಡೆಯುವ ಪ್ರವೃತ್ತಿ ಸಾಮಾನ್ಯವಾಗಿ ಕಂಡು ಬರುವದು. ಈ ಕಲಿಯುಗ ಮುಗಿಯುವಾಗ ಬ್ರಾಹ್ಮಣಾದಿ ವರ್ಣಗಳ ಆಸ್ತಿತ್ವವೇ ಸಂದಿಗ್ಧವಾಗಿರುವದು.

ದೇವತಾ ಮಾನದಿಂದ ಈ ನಾಲ್ಕೂ ಯುಗಗಳು ಕೂಡಿ ಹನ್ನೆರಡು ಸಾವಿರ ವರ್ಷಗಳಾಗುವವು. ಈ ನಾಲ್ಕೂ ಯುಗಗಳು ಕೂಡಿದರೆ ಒಂದು ಚತುರ್ಯುಗ ಎನಿಸುವದು. ಇಂತಹ ಸಾವಿರ ಚತುರ್ಯುಗವಾದರೆ ಬ್ರಹ್ಮನಿಗೆ ಒಂದು ಹಗಲಾಗುವದು. ಈ ಹಗಲು ಕಳೆದ ಬಳಿಕ ಪರಮಾತ್ಮನಿಗೆ ಈ ಸಮಸ್ತ ಪ್ರಪಂಚದ **'ಸಂಜೀಹೀರ್ಷೆ'**

ಅಂದರೆ ಸಂಹಾರದ ಅಪೇಕ್ಷೆ ಉಂಟಾಗುವದು. ಅವನು ಸೂರ್ಯನಾಗಿ ಜಗತ್ತೆಲ್ಲ ಸುಡುವನು. ವಾಯುವಾಗಿ ಜನರ ಪಂಚಪ್ರಾಣಗಳನ್ನು ಸೆಳೆದುಕೊಳ್ಳುವನು. ಅಗ್ನಿಯಾಗಿ ಸರ್ವಲೋಕಗಳನ್ನು ಸುಡುವನು. ಮೋಡವಾಗಿ ಭಯಂಕರ ಮಳೆಗರೆಯುವನು.

ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಅರವತ್ತೇಳನೆಯ ಅಧ್ಯಾಯ ಮುಗಿದುದು



## ಪ್ರಳಯದ ಭಯಂಕರ ಸ್ವರೂಪ

ಅಧ್ಯಾಯ - ೧೬೮

**ಮತ್ಸ್ಯ ಉವಾಚ :**

**"ಭೂತ್ವಾ ನಾರಾಯಣೋ ಯೋಗೀ ಸತ್ವಮೂರ್ತಿರ್ವಿಭಾವಸುಃ ।**
**ಗಭಸ್ತಿಭಿಃ ಪ್ರದೀಪ್ತಾಭಿಃ ಸಂಶೋಷಯತಿ ಸಾಗರಾನ್ ॥೧॥**

**ಮತ್ಸ್ಯ** :- ಯೋಗೀಶ್ವರನಾದ ಸತ್ವಮೂರ್ತಿಯಾದ ಶ್ರೀಮನ್ ನಾರಾಯಣನು ಸೂರ್ಯಾಂತರ್ಯಾಮಿಯಾಗಿ ತನ್ನ ಪ್ರಜ್ವಲಿಸುವ ಕಿರಣಗಳಿಂದ ಎಲ್ಲ ಸಮುದ್ರಗಳನ್ನು ಶೋಷಿಸುವನು. ತನ್ನ ಕಿರಣಗಳಿಂದ ಬಾವಿ, ನದಿ, ಸಾಗರಗಳಲ್ಲಿರುವ ಹಾಗೂ, ಪರ್ವತಗಳಿಂದ ಹುಟ್ಟಿಹರಿಯುವ ಝುರಿಗಳ ಮತ್ತು ನೆಲದ ಮೇಲಿನ ಎಲ್ಲ ಕೆರೆ, ಕಾಲುವೆಗಳ ನೀರನ್ನೆಲ್ಲಾ ಹೀರಿ ಪಾತಾಳತಳಕ್ಕೂ ಇಳಿದು ಅಲ್ಲಿಯ ನೀರನ್ನು ಕೂಡಾ ಒಣಗಿಸಿ ಬಿಡುವನು. ಅನಂತರ ಸರ್ವ ಪ್ರಾಣಿಗಳ ದೇಹದಲ್ಲಿರುವ ರಕ್ತ ಮೂತ್ರ ಬೆವರು ಮುಂತಾದ ದ್ರವ ವಸ್ತುವನ್ನು ಕೂಡ ಹೀರಿಕೊಂಡು, ಜೀವಜಂತುಗಳ ಪಂಚ ಪ್ರಾಣಗಳನ್ನು ಎಳೆದುಕೊಳ್ಳುವನು. ಅನಂತರ ಭಯಂಕರ ರಭಸದ ಗಾಳಿ ಬೀಸಿ, ಮರಗಳು ಒಂದಕ್ಕೊಂದು ತಿಕ್ಕಿ ಬೆಂಕಿ ಹೊತ್ತುವದು. ಅದರ ಉರಿಯು ಸಹಸ್ರ ಮುಖವಾಗಿ ಹಬ್ಬಿ, ಸೂರ್ಯನ ಕಿರಣಗಳ ಜೊತೆಗೆ ಕೂಡಿ ಕಾಡ್ಗಿಚ್ಚಾಗಿ, ಪ್ರಳಯಾಗ್ನಿ ರೂಪದಿಂದ ಬೆಟ್ಟ, ಬಯಲು, ಮರ, ಬಳ್ಳಿ, ಹುಲ್ಲು, ಹಳ್ಳಿ, ನಗರ, ನಾಡು ಎಲ್ಲವನ್ನು ಸುಟ್ಟು ಬೂದಿ ಮಾಡುವದು.

ಆ ನಂತರ ಆ ಪರಮಾತ್ಮನು ವರುಣನಲ್ಲಿ ಪ್ರವೇಶಿಸಿ ಮೋಡಗಳಿಗೆಲ್ಲ ಪ್ರೇರಣೆ ಮಾಡಿ, ಭಯಂಕರ ಮಳೆಗರೆಯುವನು. ಧಾರಾಕಾರವಾಗಿ ಎಡೆಬಿಡದೆ ಸುರಿಯುವ ಆ ಸಂತತ ಜಡಿಮಳೆಯಿಂದ ಉರಿಯೆಲ್ಲ ಶಾಂತವಾಗಿ, ಭೂಮಿ ಎಲ್ಲವೂ ನೀರಿನಿಂದ ತುಂಬಿ ಹೋಗುವದು. ನಿರಂತರ ವೃಷ್ಟಿಯಿಂದ ಕೆರೆ ಭಾವಿ, ನದಿ, ಸಮುದ್ರಗಳೆಲ್ಲವೂ ತುಂಬಿ, ತುಳುಕಿ ಉಕ್ಕೇರಿ ನೋಡಿದಲ್ಲೆಲ್ಲ ನೀರೇ ನೀರಾಗಿ ಎಲ್ಲೆಡೆಗೂ ಏಕಾರ್ಣವ ಜಲರಾಶಿ ಭೋರ್ಗರೆವುದು. ಮಹಾ ಸಮುದ್ರವು ತನ್ನ ಹೆದ್ದೆರೆಗಳಿಂದ ತಾನೇ ತಾನಾಗಿ ವಿಜೃಂಭಿಸುವದು. ಪ್ರಪಂಚವನ್ನೆಲ್ಲ ಸಮುದ್ರವು ವ್ಯಾಪಿಸಿದ ಬಳಿಕ ಯಾವ ಪ್ರಾಣಿಯೂ ಉಳಿಯುವದಿಲ್ಲ. ಎಲ್ಲ ಜೀವರಾಶಿಗಳೂ ಪರಮಾತ್ಮನ ಗರ್ಭದಲ್ಲಿ ಅಡಗಿ ಹೋಗುವವು. ಆಗ ಮಹಾವಿಷ್ಣುವು ತನ್ನ ಸಂಕಲ್ಪ ಮಾತ್ರದಿಂದ ಈ ಎಲ್ಲ ಪ್ರಾಣಿಗಳನ್ನು ಸಂಹರಿಸಿ, ಜಗತ್ತನ್ನೆಲ್ಲ ದಹಿಸಿ ಜಲಮಯವನ್ನಾಗಿಮಾಡಿ ತಾನು ಯೋಗನಿದ್ರೆಯಲ್ಲಿ ಒರಗುವನು.

ಹೀಗೆ ಅನೇಕ ಸಹಸ್ರ ಯುಗಗಳ ಕಾಲ ಏಕಾರ್ಣವಾಕಾರವಾದ ಆ ಪ್ರಳಯ ಜಲಧಿಯಲ್ಲಿ ಯೋಗನಿದ್ರಾ ಮುದ್ರಿತ ಲೋಚನನಾಗಿ ಪವಡಿಸಿದ ಆ ಪರಮಾತ್ಮನನ್ನು ಸ್ಪಷ್ಟವಾಗಿ ಯಾರೂ ತಿಳಿಯಲಾರರು. ಅವನ ಆ ಕಾಲದ ಯೋಗಸಮಾಧಿ ಎಂತಹುದು? ಆ ಯೋಗನಿದ್ರೆಯ ಸ್ವರೂಪವೇನು? ಎಲ್ಲಿಯವರೆಗೆ ಅವನ ಈ ಪ್ರಳಯ ಜಲಧಿವಾಸ? ಮುಂತಾದುದನ್ನು "ಇದಮಿತ್ಥಂ" ಎಂದು ತಿಳಿದು ಬಣ್ಣಿಸಲು ಯಾರಿಗೂ ಶಕ್ಯವಿಲ್ಲ. ಭಗವಂತನ ಆ ಪ್ರಳಯಸಾಗರದ ಶಯನೋತ್ಸವವನ್ನು ನೋಡುವ ಸಾಕ್ಷಿ ಪುರುಷನು ಯಾವನೂ ಇಲ್ಲ. ಅದನ್ನು ಪ್ರತ್ಯಕ್ಷವಾಗಿಕಂಡ ದಿವ್ಯದೃಷ್ಟಿಯ ಜ್ಞಾನಿಯಿಲ್ಲ. ಆ ಕಾಲದಲ್ಲಿ ಅವನ ಅಕ್ಕಪಕ್ಕದಲ್ಲಿ ಯಾರೂ ಇರುವದಿಲ್ಲ. ಆ ಕಾಲದ ಅವನ ಯೋಗಲೀಲೆಯನ್ನು ಸಂಪೂರ್ಣವಾಗಿ ತಿಳಿಯಬಲ್ಲ ಪುರುಷನೆಂದರೆ ಒಬ್ಬನೇ ಒಬ್ಬ. ಅವನು ಅದೇ ಶ್ರೀಮನ್ನಾರಾಯಣ. ಪಂಚಮಹಾಭೂತಗಳನ್ನೂ ದಕ್ಷನೇ ಮೊದಲಾದ ಪ್ರಜಾಪತಿಗಳನ್ನೂ ಮತ್ತು ಬ್ರಹ್ಮಾದಿ ಜೀವರಾಶಿಗಳನ್ನೂ ಯಥಾಕ್ರಮವಾಗಿ ಸಂಹರಿಸಿ, ತನ್ನಲ್ಲಿ ಅಡಗಿಸಿ ಆ ಪರಮಾತ್ಮನು ಸಮುದ್ರದಲ್ಲಿ ಶಯನ ಮಾಡಲು ಸಂಕಲ್ಪಿಸಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಅರವತ್ತೆಂಟನೆಯ ಅಧ್ಯಾಯ ಮುಗಿದುದು.*



## ಏಕಾರ್ಣವ ಸಮುದ್ರದಲ್ಲಿ ಹಂಸನ ಯೋಗನಿದ್ರೆ | ಅಧ್ಯಾಯ - ೧೬೯

**ಏವಮೇಕಾರ್ಣವೀಭೂತೇ ಶೇತೇಲೋಕೇ ಮಹಾದ್ಯುತಿಃ**
**ಪ್ರಚ್ಛಾದ್ಯ ಸಲಿಲೇನೋರ್ವೀಂ ಹಂಸೋ ನಾರಾಯಣಸ್ತದಾ ॥**

**ಮತ್ಸ್ಯ :-** ಹೀಗೆ ಪ್ರಪಂಚವೆಲ್ಲವೂ ಜಲಧಿ ಜಲಮಯವಾಗಿ ಇರುವಾಗ, ಹಂಸ ನಾಮಕನಾದ ಆ ಪರಮಾತ್ಮನು ತನ್ನ ಯೋಗ ನಿದ್ರೆಯಲ್ಲಿ ನಿರತನಾಗುತ್ತಾನೆ.

ಆ ಏಕಾರ್ಣವ ಜಲರಾಶಿಯಲ್ಲಿ ರಜೋಗುಣದ ಸಂಪರ್ಕವಿಲ್ಲದಂತೆ, ಸುತ್ತಲೂ ಕಗ್ಗತ್ತಲು ಹೆಪ್ಪುಗಟ್ಟಿದ್ದರೂ ತನ್ನ ಪ್ರಕಾಶ ಸ್ವರೂಪದಿಂದ ತಳತಳಿಸುತ್ತ ಯೋಗನಿದ್ರೆಯಲ್ಲಿರುವ ಆ ಪರಾತ್ಪರ ವಸ್ತುವನ್ನೇ ಬ್ರಹ್ಮಜ್ಞಾನಿಗಳು ವೇದೋಪನಿಷತ್ತುಗಳು "ಪರಬ್ರಹ್ಮ" ಎಂದು ಕರೆಯುತ್ತವೆ. ಅವನಿಗೆ 'ಪುರುಷೋತ್ತಮ' ಎಂದೂ ಕರೆಯುತ್ತಾರೆ. ಪರಬ್ರಹ್ಮನೆಂದರೂ ಅವನೇ. ಅವನು ತನ್ನ ಮುಖದಿಂದ ಹೊಸಸೃಷ್ಟಿಯ ಪ್ರಾರಂಭದಲ್ಲಿ ಮೊಟ್ಟಮೊದಲು ಬ್ರಹ್ಮದೇವರನ್ನು ಹುಟ್ಟಿಸಿ ಯಜ್ಞಕಾರ್ಯದ ಮುಖ್ಯ ನಿರ್ವಾಹಕನನ್ನಾಗಿ ನಿಯಮಿಸಿದನು. ಮುಖದಿಂದ ಸಾಮವೇದ ಗಾಯಕನಾದ ಉದ್ಗಾತ್ರವನ್ನು, ಬಾಹುಗಳಿಂದ ಹೋತ್ರವನ್ನು, ಅಧ್ವರ್ಯುವನ್ನೂ, ತಪಸ್ಸಿನಿಂದ ಪ್ರಸ್ತೋತನನ್ನು, ಪೃಷ್ಠದಿಂದ ಮಿತ್ರಾವರುಣ ಮತ್ತು ಪ್ರತಿ ಪ್ರಸ್ತಾರನನ್ನೂ, ಉದರದಿಂದ ಪ್ರತಿಹರ್ತಾನನ್ನೂ, ಕೈಗಳಿಂದ, ಅಗ್ನೀಧ್ರ, ಮೊಳಕಾಲುಗಳಿಂದ ಸುಬ್ರಹ್ಮಣ್ಯನನ್ನು ಸೃಷ್ಟಿ ಮಾಡಿದನು.

ಇದರಂತೆ ತನ್ನ ಒಂದೊಂದು ಅವಯವಗಳಿಂದ ಹದಿನಾರು ಜನ ಪ್ರವಕ್ತ್ಯಗಳಾದ ಋತ್ವಿಜರನ್ನು ಬ್ರಹ್ಮದೇವನು ಸೃಷ್ಟಿಮಾಡಿದನು. ಈ ಎಲ್ಲ ಪರಿಕರಗಳನ್ನು ನಿರ್ಮಿಸಿ, ಯಜ್ಞನಾಮಕನಾದ ಪರಮಾತ್ಮನನ್ನು, ಯಜ್ಞವಿಧಿಯಿಂದ ಆ ಬ್ರಹ್ಮದೇವನು ಆರಾಧಿಸಿದನು. ಯಜ್ಞವಿಧಿಯ ಉದ್ದೇಶವೆಲ್ಲವೂ ಆ ನಾರಾಯಣನೇ ಆದುದರಿಂದ ಮತ್ತು ಆ ಯಜ್ಞಕಾರ್ಯವೆಲ್ಲವೂ ಆ ಯಜ್ಞಿಯಿಂದಲೇ ಸಂಪನ್ನವಾದುದರಿಂದ, ಮತ್ತು ಆ ಯಜ್ಞದ ಹವಿಸ್ಸು, ಪಾತ್ರ, ಮಂತ್ರ, ಋತ್ವಿಜ, ಯಜಮಾನ, ದ್ರವ್ಯ, ಕರ್ಮ ಎಲ್ಲದರಲ್ಲಿಯೂ ಆ ಪರಮಾತ್ಮನೇ ಸ್ವತಃ ನಿಂತುದರಿಂದಲೂ, ಆ ಪರಮಾತ್ಮನಿಗೆ ''ಯಜ್ಞ'' 'ಯಜ್ಞಪುರುಷ' 'ಯಜ್ಞ ಕರ್ತೃ' ''ಯಜ್ಞಪತಿ'' ''ಯಜ್ಞ'' ''ಯಜ್ಞಾಂಗ'' ''ಯಜ್ಞಿ'' ಮುಂತಾದ ಹೆಸರಗಳು ಪ್ರಾಪ್ತವಾಗಿವೆ.

ಪ್ರಳಯಕಾಲದಲ್ಲಿ ಏಕಾರ್ಣವ ಮಹಾಸಾಗರದಲ್ಲಿ ಯೋಗ ನಿದ್ರಾಲೋಲನಾದ ಲಕ್ಷ್ಮೀಪತಿನಾರಾಯಣನಿಂದ ಪುನಃ ಈ ಪ್ರಪಂಚದ ಪ್ರಾದುರ್ಭಾವವಾಯಿತು ಎಂಬುದನ್ನು ಕೇಳಿ. ನಿಮಗೆ ಇದು ಹೇಗೆ ಎಂದು ಆಶ್ಚರ್ಯವಾಗಿರಬಹುದು. ಈ ವಿಷಯದಲ್ಲಿ ಮಾರ್ಕಂಡೇಯ ಮಹಾಮುನಿಯ ವೃತ್ತಾಂತವು ಉದ್ಬೋಧಕವಾಗಿದೆ. ಹೇಳುತ್ತೇನೆ ಕೇಳಿಃ

ಹಿಂದೆ ಒಂದು ಸಲ ಮಾರ್ಕಂಡೇಯ ಮಹಾಮುನಿ ಪ್ರಳಯಕಾಲದ ದೃಶ್ಯವನ್ನು ತೋರಿಸಿ ಕೊಡಬೇಕೆಂದು ಭಗವಂತನನ್ನು ಪ್ರಾರ್ಥಿಸಿದನು. ಅವನ ಈ ಕೋರಿಕೆಯನ್ನು ಸಲ್ಲಿಸಲು ಸಮ್ಮತಿಸಿದ ಶ್ರೀಹರಿಯು ಆ ಮಾರ್ಕಂಡೇಯ ಋಷಿಯನ್ನು ನುಂಗಿ, ತನ್ನ ಉದರದ ಒಳಗೆ ಸೆಳೆದುಕೊಂಡನು. ಅವನ ವಿಶಾಲವಾದ ಆ ಹೊಟ್ಟೆಯಲ್ಲಿ ಮತ್ತೊಂದು ಪ್ರಪಂಚವೇ ಗೋಚರಿಸಿತು ಆ ಮಹಾಮುನಿಗೆ. ಆ ಹರಿಯ ಉದರಾಂತರ್ಗತವಾದ ಜಗತ್ತಿನಲ್ಲಿ ಮಾರ್ಕಂಡೇಯ ಮುನಿಯು ತೀರ್ಥಯಾತ್ರೆ ಕೈಕೊಂಡನು. ಅಲ್ಲಿಯೂ ಅನೇಕಾನೇಕ ಪುಣ್ಯಾಶ್ರಮಗಳು ಕಾಣಿಸಿದವು. ಅಲ್ಲಿ ಎಲ್ಲ ಕಡೆಗೂ ಪೂರ್ತಿ ಸಂಚಾರ ಮಾಡಿ ತೀರ್ಥಯಾತ್ರೆ ಕೈಕೊಂಡು, ಬೇರೆ ಬೇರೆ ದೇಶ, ಪುರ, ಗ್ರಾಮ, ನಗರ, ಕಾಡು ನಾಡುಗಳನ್ನೆಲ್ಲಾ ನೋಡಿಕೊಂಡು ಅವನು ಅಲ್ಲಿಯೇ ಅನೇಕ ಯಜ್ಞಯಾಗಗಳನ್ನು ಆಚರಿಸಿದನು. ಹೋಮ ಹವನಗಳನ್ನು ಕೈಕೊಂಡನು. ಅಲ್ಲಿಯೇ ಒಂದು ಪುಣ್ಯಾರಣ್ಯದ ಪವಿತ್ರ ಸ್ಥಾನದಲ್ಲಿ ನಿಂತುಕೊಂಡು ಘೋರ ತಪಸ್ಸನ್ನು ಆಚರಿಸಿದನು.

ಅನಂತರ ನಾರಾಯಣನು ಪುನಃ ಆ ಮುನಿಯನ್ನು ತನ್ನ ಮುಖದಿಂದ ಹೊರಗೆ ಮೆಲ್ಲನೆ ತಂದು ಇರಿಸಿದನು. ಭಗವಂತನ ಮಾಯೆಯಿಂದ ಅವನಿಗೆ ಏನೂ ಗೊತ್ತಾಗಲಿಲ್ಲ. ಹೊರಗಿನ ಪ್ರಪಂಚವೆಲ್ಲವೂ ಜಲಮಯ, ನೋಡಿದಲ್ಲೆಲ್ಲ ನೀರೇ ನೀರು.

ಎತ್ತೆತ್ತಲೂ, ನೀರು ಸುತ್ತಲೂ ಬರೀ ಕತ್ತಲೆ. ಅದನ್ನು ನೋಡಿ, ಮಾರ್ಕಂಡೇಯ ಮುನಿಗೆ ಗಾಬರಿ, ಚಿಂತೆ, ಭ್ರಾಂತಿ, ''ನಾನು ಬದುಕಿರುವೆನೊ ಇಲ್ಲವೊ'' ಎಂಬ ವಿಷಯದಲ್ಲಿಯೇ ಸಂದೇಹ. ಆದರೆ ಶ್ರೀಮನ್‌ನಾರಾಯಣನ ದರ್ಶನವಾದುದರಿಂದ ಅಷ್ಟೇ ಸಂತೋಷ ಮತ್ತು ಆತ್ಮತೃಪ್ತಿ. ನಿಮಿಷದ ಹಿಂದೆ ವಿಶಾಲವಾದ ರಾಷ್ಟ್ರ, ಜನ, ದನ, ಬನ, ಮೃಗ, ಪಶು, ಪಕ್ಷಿಗಳಿಂದ ಕಿಕ್ಕಿರಿದು ತುಂಬಿದ ಪ್ರಪಂಚವು ಕಣ್ಣೆದುರು

ವಿಶಾಲವಾಗಿ ಹಬ್ಬಿಕೊಂಡಿತ್ತು. ಮರುಚಣದಲ್ಲಿ ನೋಡಿದಲ್ಲೆಲ್ಲ ನೀರು. ಎಲ್ಲ ಕಡೆಗೂ ಕಪ್ಪಾದ ಕಾರ್ಗತ್ತಲೆ. 'ಇದೆಲ್ಲವೂ ಏನು ? ಎಂತು ? ಎಂದು ಭ್ರಾಂತನಾಗಿ ಚಿಂತಿಸಿ. 'ಭ್ರಾಂತಿಯೊ ? ಇದು ಎಚ್ಚರವೊ ? ಕನಸೊ ? ಮಾಯೆಯೊ ? ಮೋಹವೊ ? ಇಲ್ಲಿ ಸೂರ್ಯ, ಚಂದ್ರ, ಬಾನು, ಬಯಲು, ಬೆಟ್ಟ, ಬುವಿ, ದಿವಿ, ಯಾವುದು ಕಾಣುವದಿಲ್ಲವಲ್ಲ ! ಎಲ್ಲವೂ ಶೂನ್ಯ. ಇದೆಂತಹ ಲೋಕ ?'' ಹೀಗೆ ದಿಗಿಲುಗೊಂಡು ಯೋಚಿಸುತ್ತಿರುವಾಗಲೇ ಯೋಗನಿದ್ರಾಲೋಲನಾದ ಪರ್ವತಾಕಾರದ ಪರಮಪುರುಷನನ್ನು ನೋಡಿದನು. ಸೂರ್ಯನಂತೆ ತೇಜಃಪುಂಜನಾಗಿ ಬೆಳಗುತ್ತಿದ್ದ ಆ ಭಗವಂತನನ್ನು ಮಾರ್ಕಂಡೇಯನು ನೋಡನೋಡುತ್ತಿರುವಾಗಲೇ ಮತ್ತೆ ಪರವಶನಾಗಿ ಆ ಹರಿಯ ಉದರದಲ್ಲಿಯೇ, ತೂರಿಕೊಂಡು ಸೇರಿಬಿಟ್ಟನು. ಆ ಉದರದೊಳಗೆ ಯಥಾಪ್ರಕಾರ. ಬೇರೆ ಒಂದು ಬ್ರಹ್ಮಾಂಡ. ಹೊಸದೇ ಒಂದು ಜಗತ್ತು. ನೂರಾರು ಪುಣ್ಯಕ್ಷೇತ್ರಗಳು, ಸಾವಿರಾರು ಪಾವನತೀರ್ಥಗಳು. ಅಸಂಖ್ಯ ಆಶ್ರಮಗಳು, ಅಲ್ಲಿ ಎಷ್ಟೋ ಜನರು ಯಜ್ಞಗಳನ್ನು ನೆರವೇರಿಸುತ್ತಿದ್ದರು. ನೂರಾರು ಜನ ಬ್ರಾಹ್ಮಣರು ಯಜ್ಞಗಳನ್ನು ಮಾಡಿಸುತ್ತಿದ್ದರು. ಹೀಗೆ ಒಂದು ನೂರು ವರುಷ ಕಾಲ ಅಂತರ್ವಿಶ್ವದಲ್ಲಿ ನಿಂತಲ್ಲಿ ನಿಲ್ಲದೆ, ಅಖಂಡನಾಗಿ ಸುತ್ತಿ ಸಂಚಾರ ಮಾಡಿದನು. ಇಷ್ಟಾದರೂ ಆ ಮುನಿಗೆ ಆ ಕೃಷ್ಣನ ಕುಕ್ಷಿಗತವಾದ ಬ್ರಹ್ಮಾಂಡದ ತುದಿ ಮೊದಲಿನ ಅಂತವು ಹತ್ತಲಿಲ್ಲ. ಕೊನೆಗೆ ಒಂದು ದಿನ ಆ ಮುನಿಯು ತಾನಾಗಿ ಹೊರಗೆ ಬಂದನು. ಆಗ ಆಲದ ಮರದ ಶಾಖೆಯೊಂದರ ಮೇಲೆ ಒಂದು ಎಳೆ ಕೂಸು ಮಲಗಿದ್ದು ಅವನಿಗೆ ಕಂಡುಬಂದಿತು. ಪ್ರಪಂಚವೆಲ್ಲವೂ ಕತ್ತಲೆಯ ಮಬ್ಬಿನಲ್ಲಿ ಮುಳುಗಿ, ಜಲಮಯವಾದಾಗ, ಆ ಮಗುವು ನಿಶ್ಚಿಂತವಾಗಿ ಆಟವಾಡುತಿತ್ತು. ಆ ಎಳೆ ಮಗುವನ್ನು ಕಂಡು ಮಾರ್ಕಂಡೇಯ ಮುನಿಗೆ ಆಶ್ಚರ್ಯವಾಯಿತು. ಆ ಪ್ರದೇಶವನ್ನೆಲ್ಲ ಹಿಂದೆ ಎಂದೊ ಒಮ್ಮೆ ನೋಡಿದ ನೆನಪು ಆ ಮಾರ್ಕಂಡೇಯ ಮುನಿಗೆ. ಪರ್ವತದಂತೆ ಎತ್ತರವಾಗಿ, ಉರುಳಿ ಹೊರಳಿ ಬೀಳುವ ಘೋರ ತೆರೆಗಳಿಂದ ಭೋರ್ಗರೆಯುವ ಆ ಸಮುದ್ರದ ಪ್ರವಾಹದಲ್ಲಿ ಅವನು ತೇಲುತ್ತಲೇ ಇದ್ದನು. ಈಜಿ, ಈಜಿ, ಅವನಿಗೆ ಬಹಳ ಬಳಲಿಕೆಯಾಗಿದ್ದಿತು. ಆದರೂ ಜೀವದಾಶೆಯಿಂದ ನೀರಿನ ಮೇಲೆ ಅವನು ಕಷ್ಟದಿಂದ ಈಜುತ್ತ, ಉಬ್ಬಸಬಡುತ್ತ, ಈಜುತ್ತಲೇ ಇದ್ದನು. ಈ ಮುನಿಯ ಒದ್ದಾಟ; ನೆರಳಾಟ, ತೊಳಲಾಟವನ್ನು ಕಂಡು ಆಲದೆಲೆಯ ಮೇಲೆ ನಗುತ್ತ ಪವಡಿಸಿದ ಆ ಎಳೆ ಕಂದನು ವೇದಗಂಭೀರವಾದ ಧ್ವನಿಯಿಂದ ಮುನಿಗೆ ಹೇಳಿದನು.

'ಮಗು ಹೆದರಬೇಡ : ಭಯಪಡಬೇಡ, ನಾನು ಇಲ್ಲಿಯೇ ಇರುವೆ. ಮಾರ್ಕಂಡೇಯಾ, ನೀನು ನೇರವಾಗಿ ನನ್ನ ಬಳಿಗೆ ಬಾ' ಅದನ್ನು ಕೇಳಿ, ಅಂತಹ ಪ್ರಾಣಾಂತಿಕ ಪ್ರಸಂಗದಲ್ಲಿಯೂ ಮಾರ್ಕಂಡೇಯ ಮುನಿಗೆ ಕೋಪ ಬಂದು ನುಡಿದನು.

**ಮಾರ್ಕಂಡೇಯ :-** ಸಾವಿರಾರು ವರುಷ ತಪಸ್ಸಿನಲ್ಲಿ ಕಳೆದು ಚಿರಂಜೀವಿಯಾದ ನನ್ನನ್ನು ಹೆಸರು ಹಿಡಿದು ಕೂಗಿ ಕರೆಯುವ ಚಿಕ್ಕ ಬಾಲಕನೇ, ನೀನು ಯಾರು? ದೇವತೆಗಳಲ್ಲಿಯೂ ಕೂಡ ನನ್ನನ್ನು ಹೀಗೆ ಕೀಳಾಗಿ ಕಂಡವರಿಲ್ಲ. ನನ್ನನ್ನು ಬ್ರಹ್ಮದೇವರೂ ಕೂಡಾ, 'ದೀರ್ಘಾಯುಷಿ'ಎಂದೇ ಸಂಬೋಧಿಸುತ್ತಾರೆ. ಇಂತಹ

ಮಹಾತಪಸ್ವಿಯಾದ ನನ್ನನ್ನು ಹೆಸರು ಹಿಡಿದು ಕೂಗಿ ಕರೆಯುವ ನಿನ್ನ ಆಯುಷ್ಯವು ತುಂಬಿಬಂದಂತೆ ಕಾಣುತ್ತದೆ, ನೀನು ಯಾರು?'' ಮುನಿಯ ಮುಂಗೋಪದ ಈ ಮಾತುಗಳನ್ನು ಕೇಳಿ ಆ ಪುಟ್ಟ ಮಗುವು ಮತ್ತೆ ದಿಟ್ಟತನದಿಂದ ನುಡಿಯಿತು.

''ವತ್ಸಾ, ನಾನು ನಿನ್ನ ಅಪ್ಪ. ನಿನ್ನ ಗುರುವು, ನಿನ್ನ ದೇವರು. ನಿನಗೆ ದೀರ್ಘಾಯುಷ್ಯವನ್ನು ಕರುಣಿಸಿದವನು ನಾನೇ. ನೀನು ನನ್ನ ಬಳಿಗೆ ಬರಲು ಏಕೆ ಹಿಂಜರಿಯುವೆ? ಪೂರ್ವದಲ್ಲಿ ತಂದೆಯಾದ ಅಂಗೀರಸನು ಘೋರ ತಪಸ್ಸನ್ನು ಮಾಡಿ ತೇಜಸ್ವಿಯಾದ ಪುತ್ರನನ್ನು ಕೇಳಿಕೊಂಡನು. ಅವನ ತಪಸ್ಸಿಗೆ ಪ್ರಸನ್ನನಾಗಿ ನಾನು ಅವನಿಗೆ ವರಕೊಟ್ಟು ನಿನ್ನನ್ನು ಹುಟ್ಟಿಸಿದೆ. ನಾನು ನಿರ್ಮಿಸಿದ ನನ್ನ ಕರುಣೆಯಕೂಸಾದ ನಿನ್ನ ಹೊರತು ಈ ಪ್ರಳಯ ಸಾಗರದಲ್ಲಿ ಯೋಗನಿದ್ರೆಯಿಂದ ವಿಹರಿಸುವ ನನ್ನ ದರುಶನವಾಗುವದು ಬೇರೆ ಯಾರಿಗೆ ಸಾಧ್ಯ?''

ಬಾಲರೂಪಿ ಭಗವಂತನ ಕರುಣೆದುಂಬಿದ ಅಮೃತದಂತೆ ಇರುವ ಈ ಮಾತುಗಳನ್ನು ಕೇಳಿದ ಕೂಡಲೇ ಮಾರ್ಕಂಡೇಯನಿಗೆ ರೋಮಾಂಚನ, ಆನಂದಾಶ್ರುಗಳು. ಕಂಠತುಂಬಿ ಬಂದಿತು. ಆ ನೀರಿನಲ್ಲಿ ಈಜುವದನ್ನು ಕೂಡಾ ಬಿಟ್ಟು ಬಿಟ್ಟು ಎರಡೂ ಕೈಗಳನ್ನು ಮೇಲಕ್ಕೆತ್ತಿ ತನ್ನ ಹೆಸರು ಹಾಗೂ ಗೋತ್ರಗಳನ್ನು ಉಚ್ಚರಿಸಿ 'ಅಯಮಹಂಭೋ ಅಭಿವಾದಯಾಮಿ' ಎಂದು ಹೇಳಿ, ಆ ಪರಮಾತ್ಮನಿಗೆ ನಮಸ್ಕಾರ ಮಾಡಿ ನುಡಿದನು.

'ನಿರ್ದೋಷನಾದ ಸ್ವಾಮಿ ಶ್ರೀಹರಿಯೆ, ಈ ಏಕಾರ್ಣವ ಸಾಗರದ ನಟ್ಟ ನಡುವೆ, ಶಿಶುರೂಪದಿಂದ, ನೀನು ಶಯನ ಮಾಡಿರುವಿಯಲ್ಲವೇ! ಸ್ವಾಮಿ ನಿನ್ನನ್ನು ಈಗ ಯಾವ ಹೆಸರಿನಿಂದ ಕರೆಯುವದು? ಇಂಥ ಬಾಲನು ಪ್ರಳಯದಲ್ಲಿಲೀಲೆಗೈಯಬೇಕಾದರೆ, ಸಾಕ್ಷಾತ್ ಜಗದೀಶ್ವರನಾದ ನಿನ್ನ ಹೊರತು ಬೇರೆ ಯಾರಿಗೆ ತಾನೇ ಸಾಧ್ಯ! ಭಗವನ್, ನಾನು ನಿನ್ನ ಮಹಿಮೆ, ಮಾಯೆಯನ್ನು ತಿಳಿಯಬೇಕೆಂದು ಅಪೇಕ್ಷಿಸುತ್ತೇನೆ. ದಯಮಾಡಿ ತಿಳಿಸಿಕೊಡು''

ಮಾರ್ಕಂಡೇಯ ಮುನಿಯ ಬಿನ್ನಹ ಕೇಳಿ, ಪರಮಾತ್ಮನು ಅಂತಃಕರಣದಿಂದ ನುಡಿದನು.

ಶ್ರೀಭಗವಾನ್ ಉವಾಚ :

**ಅಹಂ ನಾರಾಯಣೋ ಬ್ರಹ್ಮನ್ ಸರ್ವಭೂಸ್ಸರ್ವನಾಶನಃ**
**ಅಹಂ ಸಹಸ್ರ ಶೀರ್ಷಾಖ್ಯೈರ್ಯಃ ಪದ್ಯೈರಭಿಸಂಜ್ಞಿತಃ॥**

ಬ್ರಹ್ಮನೇ, ಎಲ್ಲರ ಹುಟ್ಟು ಅಳಿವು ಉಳಿವುಗಳಿಗೆ ಕಾರಣನಾದ ನಾರಾಯಣನು ನಾನೇ. ''ಸಹಸ್ರಶೀರ್ಷಾಪುರುಷನಾದ ನನಗೆ ಸಾವಿರ ತಲೆ, ಸಾವಿರ ಕೈಕಾಲು ಸಾವಿರ ಕಣ್ಣುಗಳು, ವಿಶ್ವರೂಪಿ, ವಿಶ್ವಾಧಾರ, ವಿಶ್ವನಾಮಕನಾದ ಪುರುಷ ಎಂದೇ ವೇದಗಳು ನನ್ನ ಮಹಿಮೆಯನ್ನು ಹೊಗಳುತ್ತವೆ. ಆದಿತ್ಯವರ್ಣದ ಪುರುಷೋತ್ತಮ ಎಂದು ಕರೆಯಲ್ಪಡುವ ನಾನೇ ಪರಬ್ರಹ್ಮ. ಎಲ್ಲ ಪ್ರಾಣಿ ಹಾಗೂ ಪದಾರ್ಥಗಳಲ್ಲಿ ನನ್ನ ಒಂದೊಂದು ವಿಭೂತಿರೂಪಗಳಿದ್ದು ಅದರಿಂದ ಆ ವಿಶಿಷ್ಟ ವಸ್ತುಗಳಿಗೆ ಮಹತ್ವವು

ಬರುತ್ತದೆ. ಯಜ್ಞಗಳಲ್ಲಿ ನಾನು ಜ್ಞಾನಯಜ್ಞರೂಪನಾಗಿದ್ದೇನೆ. ಅಗ್ನಿಯಲ್ಲಿ ನಾನೇ ಹವ್ಯವಾಹನ. ಇಂದ್ರರಲ್ಲಿ ಶಕ್ರನೆಂಬವನಲ್ಲಿ ನನ್ನ ವಿಭೂತಿರೂಪವಿದೆ. ವರ್ಷಗಳಲ್ಲಿ ನಾನು ಪರಿವತ್ಸರ, ಸರ್ಪಗಳಲ್ಲಿ ಆದಿಶೇಷನು ನನ್ನ ಸನ್ನಿಧಾನದಿಂದ ಶ್ರೇಷ್ಠನಾಗಿದ್ದಾನೆ. ಹಕ್ಕಿಗಳಲ್ಲಿ-ಗರುಡ ನನ್ನ ವಿಭೂತಿರೂಪ, ಇದರಂತೆ ನಾಶಕ ವಸ್ತುಗಳಲ್ಲಿ ನಾನು ಯಮ. ನದಿಗಳಲ್ಲಿ ಗಂಗೆ. ಸಮುದ್ರದಲ್ಲಿ ಹಾಲ್ಗಡಲು. ಯೋಗಗಳಲ್ಲಿ ಸಾಂಖ್ಯ. ಜ್ಯೋತಿಃಪುಂಜಗಳಲ್ಲಿ ಚಂದ್ರ ಮುಂತಾದವುಗಳೆಲ್ಲ ನನ್ನ ವಿಭೂತಿ ರೂಪದಿಂದ ಸಜಾತಿ ವಸ್ತುಗಳಲ್ಲಿ ಶ್ರೇಷ್ಠವೆ ಎನಿಸಿವೆ. ಇದರಂತೆ ಸೂರ್ಯ, ಚಂದ್ರ, ಪಂಚಭೂತಗಳು, ಯೋಗ, ಧರ್ಮ, ಕರ್ಮ, ಯಜ್ಞ, ಹವಿಸ್ಸು, ಸತ್ಯ, ವಿವಿಧವಿದ್ಯೆ, ತಪಸ್ಸು, ಕಾಲ, ಎಲ್ಲವೂ ನನ್ನ ಸನ್ನಿಧಾನದಿಂದ, ಆದೇಶದಿಂದ ಫಲಪ್ರದವಾಗಿ ವಿಶಿಷ್ಟಶಕ್ತಿಯಿಂದ ಲೋಕವ್ಯವಹಾರ ನಿರ್ವಾಹಕವಾಗಿ ಇರುತ್ತವೆ. ಅವೆಲ್ಲದರ ಶಕ್ತಿಯ ಉಗಮಸ್ಥಾನವೇ ನಾನು. ಭಕ್ತರ ಭಕ್ತಿಯಿಂದ ನಾನು ಒಮ್ಮೊಮ್ಮೆ ಗೋಚರನಾದರೂ, ಭಕ್ತಿಯಿಲ್ಲದವನಿಗೆ ನನ್ನ ಸ್ವರೂಪವು ತಿಳಿಯಲಾರದು. ಅಕಾರಶಬ್ದವಾಚ್ಯನಾದ ನಾನು ಪ್ರಣವ ಮಂತ್ರದಿಂದಲೂ ಪ್ರತಿಪಾದಿತನಾಗಿದ್ದೇನೆ. ಗುಣಪರಿಪೂರ್ಣವಾಚಕವಾದ 'ಓಂ'ಕಾರವು ಧರ್ಮಾರ್ಥ ಕಾಮ, ಮೋಕ್ಷಗಳಿಗಿಂತ ಹೆಚ್ಚಾದ ಮೋಕ್ಷವನ್ನೇ ತಿಳಿದು ಉಪಾಸನೆ ಮಾಡುವವರಿಗೆ ನೀಡಬಲ್ಲದು.

ಮಾರ್ಕಂಡೇಯ, ಧರ್ಮ. ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥಗಳನ್ನು ಪ್ರದಾನ ಮಾಡುವವನೇ ನಾನು. ನಿನ್ನನ್ನು ಉದರದಲ್ಲಿ ನುಂಗಿ, ನಿನಗೆ ಬ್ರಹ್ಮಾಂಡ ದರ್ಶನ ಮಾಡಿಸಿದೆ. ಹೊರಗೆ ನಿನ್ನ ಅಪೇಕ್ಷೆಯಮೇರೆಗೆ ಪ್ರಳಯ ದರ್ಶನವನ್ನೂ ಮಾಡಿಸಿದೆ.

ಭೂತ, ಭವಿಷ್ಯ, ವರ್ತಮಾನ ಕಾಲದ ಘಟನೆಗಳಿಗೆಲ್ಲ ನಾನೇ ಕಾರಣನೆಂದು ತಿಳಿ. ನೀನು, ನೋಡುವದು, ಕೇಳುವದು, ಅನುಭವಿಸುವುದು ಎಲ್ಲವೂ ನನ್ನ ಮೂಲಕವೇ. ಹಿಂದಿನ, ಇಂದಿನ, ಮುಂದಿನ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲದರ ಸೃಷ್ಟಿ, ಪುಷ್ಟಿ, ಹಾಗೂ ಪ್ರಣಾಶಗಳಿಗೆಲ್ಲ ಎನ್ನ ಸಂಕಲ್ಪವೇ ಕಾರಣ. ಈ ಎಲ್ಲ ನಾನು ಹೇಳುವ ಧರ್ಮವನ್ನು ಕೇಳುತ್ತಾ ನೀನು ನನ್ನ ಉದರದಲ್ಲಿ ಸ್ವಚ್ಛಂದವಾಗಿ ಸಂಚಾರ ಮಾಡುತ್ತಾ ಇರು. ಸರ್ವದೇವತೆಗಳಿಂದ ಒಡಗೂಡಿದ ಬ್ರಹ್ಮದೇವನೂ ಕೂಡ ನನ್ನ ಉದರದಲ್ಲಿಯೇ ಅಂತರ್ಲೀನನಾಗಿದ್ದಾನೆ. ನಾನು ಅಸುರ ಶತ್ರುವು. ಸುರರ ಹಾಗೂ ಸಜ್ಜನರ ಮಿತ್ರ. ಭಕ್ತರ ಕೈವಾರಿ. ಪತಿತರ ಉದ್ಧಾರಕ. ಧರ್ಮಸಂಸ್ಥಾಪಕನೆಂದು ನನ್ನನ್ನು ತಿಳಿ. ಹಂಸವೆಂಬ ಹೆಸರಿನಿಂದ ಸೃಷ್ಟಿಮಾಡಿದ ನಾನೇ ಈಗ ಪ್ರಳಯಜಲಧಿಯಲ್ಲಿ ಆಲೆದೆಲೆಯ ಮೇಲೆ ಪವಡಿಸಿ ಲೀಲಾಲೋಲನಾಗಿ ನಿನಗೆ ಈ ತತ್ವ ರಹಸ್ಯವನ್ನೆಲ್ಲ ತಿಳಿಸಿ ಹೇಳಿದ್ದೇನೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಆರವತ್ತೊಂಬತ್ತನೆಯ ಅಧ್ಯಾಯ ಮುಗಿದುದು.*

—o—

## ಪರಮಾತ್ಮನಿಂದ ಸುವರ್ಣ ಪದ್ಮದ ಉತ್ಪತ್ತಿ | ಅಧ್ಯಾಯ - ೧೭೦

**ಮತ್ಸ್ಯ ಉವಾಚ :**

**ಮತ್ಸ್ಯ** :- ಅನಂತರ ಶ್ರೀ ಹರಿಯ ಯೋಗಿಗಳಲ್ಲಿ ಸರ್ವ ಶ್ರೇಷ್ಠನಾದ, ಮತ್ತು ಸಮಸ್ತಲೋಕಗಳನ್ನು ಸೃಜಿಸಲು ಸಮರ್ಥನಾದ, ನಾಲ್ಕುಕಡೆಗೂ, ಮುಖಗಳಿದ್ದು, ಅತ್ಯಂತ ತೇಜಸ್ವಿಯಾದ ಬ್ರಹ್ಮ ದೇವರನ್ನು ನಿರ್ಮಾಣ ಮಾಡಿದನು.ಅನಂತರ ಆ ಪರಮಾತ್ಮನಿಂದ ಅನೇಕ ಯೋಜನ ವಿಸ್ತಾರವಾದ ಒಂದು ಬಂಗಾರದ ಪದ್ಮವು ಉದ್ಭೂತವಾಯಿತು. ನಾರಾಯಣನಿಂದ ನಿರ್ಮಿಸಲ್ಪಟ್ಟ ಆ ಪದ್ಮವು ಭೂಮಿ ರೂಪವಾದುದೆಂದು ಪ್ರಮಾಣಗಳನ್ನು ಬಲ್ಲ ಮಹರ್ಷಿಗಳು ಹೇಳುತ್ತಾರೆ. ಆ ಪೃಥ್ವೀ ಪದ್ಮದಲ್ಲಿ ಗಟ್ಟಿಯಾದ ಭಾಗವನ್ನು ಹಿಮಾಲಯ, ಮೇರು, ಕೈಲಾಸ, ಗಂಧಮಾದನ, ವಿಂಧ್ಯ ಮುಂತಾದ ಪರ್ವತಗಳೆಂದು ಹೇಳುವರು. ಇವುಗಳ ನಡುವಿನ ದೇಶವೇ ಕರ್ಮಭೂಮಿಯಾದ ಜಂಬೂದ್ವೀಪ. ಪದ್ಮದ ಸುತ್ತಲೂ ಇರುವ ಕೇಸರಗಳು ಖನಿಜ ಶೈಲಗಳು. ಅದರ ಎಸಳುಗಳೇ ದುರ್ಗಮವಾದ ಮ್ಲೇಂಛ ದೇಶಗಳು. ಕೆಳಗಿನ ಎಲೆಗಳು ದೈತ್ಯ ಮತ್ತು ಸರ್ಪಗಳ ನೆಲೆವೀಡಾದ ಅಧೋಲೋಕಗಳು. ಪದ್ಮದ ಒಳಗೆ ಸಾಗರಗಳು ಇರುವ ಪ್ರದೇಶವು "**ರಸ**" ಎಂದು ಕರೆಯಲ್ಪಡುತ್ತದೆ. ಅಖಂಡ ಸಾಗರದಿಂದ ಸುತ್ತುವರಿಯಲ್ಪಟ್ಟ ಭೂಭಾಗವೇ ಭೂಮಿ.

ಹೀಗೆ ಪದ್ಮ ಅರ್ಥಾತ್ ಪುಷ್ಕರದಿಂದ ಈ ಚರಾಚರ ಪ್ರಪಂಚವೂ ಹುಟ್ಟದುದರಿಂದ ಈ ಭೂಭಾಗಕ್ಕೆಲ್ಲ ಪುಷ್ಕರ ಎಂದೆ ಹೆಸರು ಬಂದಿತು. ಆದುದರಿಂದಲೇ ಪುರಾಣಗಳನ್ನು ಬಲ್ಲ ವೇದಾಧ್ಯಾಯಿಗಳಾದ ಋಷಿಗಳು ಯಜ್ಞದಲ್ಲಿ "**ಪದ್ಮವಿಧಿ**"ಯನ್ನು ನಿರೂಪಿಸಿರುತ್ತಾರೆ.

ಹೀಗೆ ಆ ಪರಮಾತ್ಮನು ಎಲ್ಲ ನದಿಗಳೂ, ಸಮುದ್ರಗಳೂ, ಪರ್ವತಗಳೂ ಸ್ಥಿರವಾಗಿ ನಿಂತು ವಿಶ್ವವು ಬೆಳೆಯಲು ಅವಕಾಶವನ್ನು ಮಾಡಿಕೊಟ್ಟನು. ಅನಂತರ ಎಲ್ಲ ಜೀವಕೋಟಿಯನ್ನು ದೇಹಕೊಟ್ಟು ಹುಟ್ಟಿಸಿ, ಬದುಕಿಸಿ, ಬಾಳಿಸಿ, ತಿರುಗಿಸಿ, ಬೆಳೆಸಿ, ಬೆಳಗಿಸಿ. ಕೊನೆಗೆ ಅದನ್ನೆಲ್ಲ ತಾನೇ ಅಡಗಿಸಿ ಹೊಟ್ಟೆಯಲ್ಲಿಟ್ಟುಕೊಂಡು ಮಹಾಸಾಗರದಲ್ಲಿ ಶಯನಮಾಡಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಪ್ಪತ್ತನೆಯ ಅಧ್ಯಾಯ ಮುಗಿದುದು.*

—o—

**ಮತ್ಸ್ಯ ಉವಾಚ :**

**ವಿಷ್ಣೌ ಸ್ವಪಿತಿ ಸಂಭೂತೋ ಮಧುರ್ನಾಮ ಮಹಾಸುರಃ**
**ತೇನೈವ ಚ ಸಹೋದ್ಭೂತೋ ಹ್ಯಾಸುರೋ ನಾಮ ಕೈಟಭಃ॥**

**ಮತ್ಸ್ಯ** :- ಮಹಾವಿಷ್ಣುವು ಯೋಗನಿದ್ರೆಯಲ್ಲಿದ್ದಾಗ ಅವನಿಂದ ರಜೋಗುಣ, ತಮೋಗುಣದಿಂದ ತುಂಬಿದ ತಾಮಸೀ ಸ್ವಭಾವದ ಮಧು ಮತ್ತು ಕೈಟಭರೆಂಬ ಇಬ್ಬರು ದೊಡ್ಡ ದೈತ್ಯರು ಹುಟ್ಟಿದರು. ಅವರು ಮಹಾಬಲಿಷ್ಠರಾಗಿದ್ದು, ಲೋಕಕ್ಕೆಲ್ಲ ಕಂಟಕ ಪ್ರಾಯರಾಗಿದ್ದರು. ಕೆಂಪು ಬಟ್ಟೆ ಉಟ್ಟು, ಕಿರೀಟಕುಂಡಲಧರಿಸಿ, ನಡೆದು ಬರುವ ಬೆಟ್ಟದಂತೆ ಎದೆ ಉಬ್ಬಿಸಿಕೊಂಡು, ಗದಾಪಾಣಿಗಳಾಗಿ, ಅವರು ಹೆಜ್ಜೆಯಿಟ್ಟರೆ ಸಮುದ್ರವೇ ಉಕ್ಕೇರುತ್ತಿತ್ತು, ಆಗ ಅವರು ಪುಷ್ಕರ ಪ್ರಪಂಚದಲ್ಲಿ ಸಂಚರಿಸುತ್ತ ಪ್ರಜಾಸೃಷ್ಟಿಯನ್ನು ಕೈಕೊಂಡರು. ಬ್ರಹ್ಮದೇವರ ಬಳಿಗೆ ಬಂದು ಕಣ್ಣು ಕೆಂಪಗೆಮಾಡಿ ಕೇಳಿದರು. "ಈ ಪುಷ್ಕರದ ನಡುವೆ ನಾಲ್ಕು ಕೈಗಳಿಂದ ಮೆರೆಯುವ ನೀನು ಯಾರು? ನಮ್ಮೊಡನೆ ನೀನು ಯುದ್ಧಕ್ಕೆ ಬಾ. ನಿನಗೆ ನಮ್ಮೊಡನೆ ಯುದ್ಧಮಾಡುವ ಶಕ್ತಿ ಇದ್ದಂತೆ ತೋರುವದಿಲ್ಲ. ನಿನ್ನನ್ನು ಹುಟ್ಟಿಸಿದವನು ಯಾರು? ನಿನ್ನನ್ನು ರಕ್ಷಿಸುವವರು ಯಾರು? ನಿನ್ನ ಹೆಸರು ಏನು? ನಿನ್ನನ್ನು ಇಲ್ಲಿ ನಿಯಮಿಸಿದವರು ಯಾರು?"

**ಬ್ರಹ್ಮ** :- ಸರ್ವಜ್ಞನಾದ 'ಏಕಮೇವಾ ದ್ವಿತೀಯ' ಎಂದು ಹೊಗಳಲ್ಪಡುವ ಪರಬ್ರಹ್ಮಸ್ವರೂಪಿಯಾದ ಪರಮಾತ್ಮನೇ ನನ್ನನ್ನು, ನಿಮ್ಮನ್ನು ಎಲ್ಲರನ್ನೂ ನಿರ್ಮಿಸಿದ್ದಾನೆ. ಅವನನ್ನು ಪೂರ್ಣರೂಪದಿಂದ ಅರಿಯುವದು ಯಾರಿಂದಲೂ ಸಾಧ್ಯವಿಲ್ಲ ನಿಮಗೆ ಬೇಕಾದ ಕೆಲಸವನ್ನು, ಹೆಸರನ್ನು ಪರಮಾತ್ಮನ ಬಳಿಗೆ ಹೋಗಿ ತಿಳಿದುಕೊಳ್ಳಿರಿ.

**ಮಧುಕೈಟಭ** :- ಬುದ್ಧಿವಂತನಾದ ಬ್ರಹ್ಮದೇವಾ, ಈ ಜಗತ್ತಿನಲ್ಲಿ ನಮಗಿಂತ ಮಿಗಿಲಾದುದು ಯಾವುದಿದೆ? ಈ ಪ್ರಪಂಚವನ್ನೆಲ್ಲ ರಜೋಗುಣದಿಂದಲೂ ತಮೋಗುಣದಿಂದಲೂ ನಾವೇ ಆವರಿಸಿದ್ದೇವೆ. ಎಲ್ಲ ಲೋಕಗಳನ್ನು ನಾವೇ ಧಾರಣ ಮಾಡಿದ್ದೇವೆ. ಜನರಿಗೆಲ್ಲ ಬೇಕುಬೇಕಾದ ಸುಖ, ಸಂಪತ್ತು, ಕೀರ್ತಿ ಮುಂತಾದವುಗಳನ್ನೆಲ್ಲಾ ನಾವೇ ಕೊಡುತ್ತೇವೆ. ಈ ವಿಶ್ವದ ಭಾಗ್ಯನಿಧಿಗಳೇ ನಾವು.

**ಬ್ರಹ್ಮದೇವರು** :- ಈ ಜಗತ್ತಿಗೆಲ್ಲ ಕಾರಣಪುರುಷನೆಂದರೆ ಯೋಗೀಶ್ವರನಾದ ಶ್ರೀಹರಿ ಅವನು ಸಕಲಗುಣಗಳಿಂದ ಪರಿಪೂರ್ಣ. ಪ್ರಪಂಚದ ಸರ್ವಪ್ರಾಣಿಗಳನ್ನು ಸತ್ವ, ರಜಸ್ತಮೋಗುಣಗಳಿಂದ ನಿರ್ಮಿಸಿದ ಮಹಾಪ್ರಭುವು ಅವನೇ ನಿಮ್ಮನ್ನು ಅದೇ ಭಗವಂತನು ತಮೋಗುಣದಿಂದ ನಿರ್ಮಿಸಿದ್ದಾನೆ. ಅವನೇ ನಿಮ್ಮನ್ನು ಸಂಹರಿಸಲಿಕ್ಕೂ ಸಮರ್ಥನು."

ಬ್ರಹ್ಮದೇವರು ಹೀಗೆ ನುಡಿದ ನಂತರ ಕೆಲವೇ ಸಮಯದಲ್ಲಿ ಯೋಗನಿದ್ರೆಯಲ್ಲಿ ಶಮನಮಾಡಿದ ಶ್ರೀಮಾನ್ ನಾರಾಯಣನು ತನ್ನ ನೀಳವಾದ ತೋಳುಗಳನ್ನು ಚಾಚಿ

ಆ ಮಧು, ಕೈಟಭ ಇಬ್ಬರೂ ದಾನವರನ್ನು ತನ್ನೆಡೆಗೆ ಸೆಳೆದು ಕೊಂಡನು. ಇಬ್ಬರೂ ದೈತ್ಯರು ಆ ಪದ್ಮನಾಭನ ಬಳಿಗೆ ಹೋಗಿ ನಮಸ್ಕಾರಮಾಡಿ ಸ್ತೋತ್ರಮಾಡಿದರು.

"ಭಗವನ್, ಈ ಜಗತ್ತಿಗೆಲ್ಲ ಪುರುಷೋತ್ತಮನಾದ ನೀನೇ ಮೂಲ ಕಾರಣ ಎಂಬುದು ನಮಗೆ ಗೊತ್ತು. ನಿನ್ನ ದರುಶನವೆಂದೂ ವ್ಯರ್ಥವಾಗುವುದಿಲ್ಲ. ನಿನ್ನಿಂದ ವರಪಡೆಯಬೇಕೆಂದು ಬಂದಿದ್ದೇವೆ. ವೈರಿಗಳನ್ನು ಮರ್ದನ ಮಾಡುವ ನಿನಗೆ ನಮಸ್ಕಾರ.

**ಪರಮಾತ್ಮ** :- ರಾಕ್ಷಸ ಶ್ರೇಷ್ಠರೆ, ನಿಮಗೇಕೆ ವರ ? ಈಗಾಗಲೇ ನಿಮಗೆ ಸಾಕಷ್ಟು ಆಯುಷ್ಯ ಕೊಟ್ಟಿದ್ದೇನೆ. ಮತ್ತೇನು ಬೇಕು ಕೇಳಿರಿ?

**ಮಧುಕೈಟಭ** :- "ದೇವಾ, ನಿನ್ನಿಂದಲೇ ನಮಗೆ ಮರಣವು ಆಗಬೇಕು. ಆ ಮರಣವೂ ಕೂಡ ಈವರೆಗೂ ಯಾರೂ ಸಾಯದ ಸ್ಥಳದಲ್ಲಿ ನಿನ್ನ ಕೈಯಿಂದಲೇ ಅಂತಹ ಮರಣವು ನಮಗೆ ಸಂಭವಿಸಬೇಕು.

**ಪರಮಾತ್ಮ** :- ನೀವು ಅಪೇಕ್ಷಿಸಿದಂತೆ ಆಗಲಿ. ನೀವು ಭವಿಷ್ಯ ಕಾಲದಲ್ಲಿ ಪ್ರಸಿದ್ಧಿ ಪಡೆಯುವಿರಿ." ಹೀಗೆ ಹೇಳಿ, ಆ ಜಗದೀಶ್ವರನು ಆ ದೊಡ್ಡ ದೈತ್ಯರಿಬ್ಬರಿಗೂ ಬೇಡಿದ ವರಕೊಟ್ಟು, ರಜಸ್ತಮೋಗುಣಗಳಿಗೆ ಆಶ್ರಯಭೂತರಾದ ಆ ಇಬ್ಬರೂ ಅವಳಿ ದೈತ್ಯರನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಸಂಹರಿಸಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಾಎಪ್ಪತ್ತೊಂದನೆಯ ಅಧ್ಯಾಯ ಮುಗಿದುದು.*



## ಕಶ್ಯಪರ ಹನ್ನೆರಡು ಹೆಂಡಿರ ಸಂತಾನದಿಂದ ಪ್ರಪಂಚವೇ ತುಂಬಿತು

ಅಧ್ಯಾಯ - ೧೭೨

**ಮತ್ಸ್ಯ ಉವಾಚ :**

**ಸ್ಥಿತ್ವಾ ಚ ತಸ್ಮಿನ್ ಕಮಲೇ ಬ್ರಹ್ಮಾ ಬ್ರಹ್ಮವಿದಾಂ ವರಃ।**
**ಊರ್ಧ್ವಬಾಹುರ್ಮಹಾತೇಜಾಸ್ತಪೋ ಘೋರಂ ಸಮಾಶ್ರಿತಃ॥**

**ಮತ್ಸ್ಯ** :- ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಚತುರ್ಮುಖಬ್ರಹ್ಮನು ಅದೇ ಕಮಲದಲ್ಲಿ ನಿಂತುಕೊಂಡು ಎರಡೂ ತೋಳುಗಳನ್ನು ಮೇಲಕ್ಕೆತ್ತಿ ಘೋರವಾದ ತಪಸ್ಸನ್ನು ಮಾಡತೊಡಗಿದನು. ಸೂರ್ಯನಂತೆ ತೇಜಃಕಿರಣಗಳಿಂದ ಕತ್ತಲೆಯ ಮೊತ್ತವನ್ನೆಲ್ಲಾ ಪರಿಹರಿಸಿ ದೇದೀಪ್ಯಮಾನನಾಗಿ ತಪಂಗೈಯುತ್ತಿದ್ದ ಆ ಬ್ರಹ್ಮನ ಬಳಿಗೆ ಯೋಗಾಚಾರ್ಯನಾದ, ಜಗಜ್ಜನ್ಮಾದಿಕಾರಣಪ್ರಭು ಶ್ರೀಮಾನ್ ನಾರಾಯಣನು ಆಗಮಿಸಿದನು. ಸಾಂಖ್ಯದರ್ಶನದ ಮೂಲ ಪುರುಷನಾದ ಕಪಿಲ ಮಹರ್ಷಿಯೊಡನೆ ಅಲ್ಲಿ ಆಗಮಿಸಿದ ಶ್ರೀ ಹರಿಯರೂಪವು ವಿಲಕ್ಷಣವಾಗಿದ್ದಿತು. ಅವರಿಬ್ಬರೂ ಕೂಡಿ, ತಪಸ್ಸನ್ನು ಮಾಡುತ್ತಲಿದ್ದ ಬ್ರಹ್ಮದೇವನಿಗೆ ಪ್ರಸನ್ನ ಮನಸ್ಸಿನಿಂದ ವರವನ್ನು ಕೊಟ್ಟು, ಪ್ರಪಂಚವನ್ನು ಸೃಷ್ಟಿಮಾಡಲು ಅಪ್ಪಣೆಕೊಟ್ಟು ಅನುಗ್ರಹಿಸಿದರು. ಬ್ರಹ್ಮದೇವರು ಭಕ್ತಿಯಿಂದ ಆ ನಾರಾಯಣನ ಉಪಾಸನೆಮಾಡಿ, ಅವನಿಂದಲೇ ಉಪದೇಶ ಪಡೆದು ಯೋಗಶಾಸ್ತ್ರದ ರಹಸ್ಯವನ್ನೆಲ್ಲಾ ಅರಿತುಕೊಂಡನು. ಅನಂತರ ಅವನ ಆದೇಶದಿಂದಲೇ ವೇದದಲ್ಲಿ ಹೇಳಿದಂತೆ ಮೂರು ಲೋಕಗಳನ್ನು ಸೃಷ್ಟಿ ಮಾಡಿದನು.

ಮೊಟ್ಟ ಮೊದಲು ಬ್ರಹ್ಮದೇವನು ಸ್ವಾಯಂಭುವ ಎಂಬ ಮಗನನ್ನು ನಿರ್ಮಾಣ ಮಾಡಿದನು. ಬ್ರಹ್ಮದೇವರ ಮಾನಸಪುತ್ರ ಸ್ವಾಯಂಭುವನು ಹುಟ್ಟಿದ ಕೂಡಲೇ ಅವನಿಗೆ ಬ್ರಹ್ಮದೇವನು ಹೀಗೆ ಆದೇಶವಿತ್ತನು. ''ಬುದ್ಧಿವಂತನಾದ ಮಗು, ಈ ಕಪಿಲಮುನಿಗಳು ಸಾಕ್ಷಾತ್ ಶ್ರೀಮನ್ ನಾರಾಯಣನ ಅಪರರೂಪ, ನಿನಗೆ ಬ್ರಹ್ಮಜ್ಞಾನವು ಆ ಭಗವಂತನ ಅನುಗ್ರಹದಿಂದಲೇ ದೊರೆಯುವದು. ನೀನು ಅವನಿಗೆ ಶರಣು ಹೋಗು. ಅವನಿಂದ ಉಪದೇಶ ಪಡೆ, ಮುಂದೆ ಅವನ ಅಪ್ಪಣೆಯಂತೆ ಮಾಡು.''

ತಂದೆ ಬ್ರಹ್ಮದೇವರ ಅಪ್ಪಣೆಯಂತೆ ಸ್ವಾಯಂಭುವ ಮನುವು ಕಪಿಲಮುನಿ ಹಾಗೂ ನಾರಾಯಣ ದೇವರ ಬಳಿಗೆ ಹೋಗಿ ಸಾಷ್ಟಾಂಗನಮಸ್ಕಾರಮಾಡಿ, ವಿಜ್ಞಾಪಿಸಿದನು. ''ಪೂಜ್ಯರೆ, ನನಗೆ ತಮ್ಮ ಸೇವೆಯನ್ನು ಮಾಡಬೇಕೆಂದು ಅಪೇಕ್ಷೆಯಿದೆ. ಆದುದರಿಂದ ಈಗ ತಮ್ಮೆದುರು ಕೈಕಟ್ಟಿಕೊಂಡು ನಿಂತಿದ್ದೇನೆ. ನಾನು ತಮ್ಮ ಯಾವ ಸೇವೆ ಮಾಡಲಿ? ಅಪ್ಪಣೆ ನೀಡಿ.''

**ನಾರಾಯಣ :-** ಬ್ರಹ್ಮಜ್ಞಾನವನ್ನು ಮಾಡಿಕೊಳ್ಳಬಯಸುವ ಸ್ವಾಯಂಭುವನೆ, ಜಗತ್ತಿನಲ್ಲಿನಾಶರಹಿತವಾದ ವಸ್ತು ಒಂದೇ. ಅವನೇ ಪರಮಾತ್ಮ. ಅವನನ್ನೇ ''ಸತ್ಯ'' ಎಂದು ಕರೆಯುವರು. ಈ ಜಗತ್ತಿನ ಉದ್ಭವ,ಉಳಿವು, ಅಳಿವುಗಳಿಗೆಲ್ಲ ಅವನೇ ಕಾರಣ. ತತ್ವಗಳು ಹದಿನೆಂಟು. ಪ್ರಕೃತಿ, ಮಹತ್ತತ್ವ, ಅಹಂಕಾರ, ಪಂಚಮಹಾಭೂತ ಪಂಚತನ್ಮಾತ್ರ, ಪಂಚೇಂದ್ರಿಯ ಈ ಅಷ್ಟಾದಶ ತತ್ವಗಳನ್ನೆಲ್ಲ ನಿರ್ಮಿಸಿ, ಅವುಗಳ ಒಳಗೆ ಪ್ರವೇಶಿಸಿ, ಅವುಗಳನ್ನೆಲ್ಲ ಕಾರ್ಯೋನ್ಮುಖಮಾಡಿ ಜಗದ್‌ವ್ಯಾಪಾರವನ್ನು ನಡೆಸುವ ಮಹಾಶಕ್ತಿಯೇ ಪುರುಷ ತತ್ವ. ಅದಕ್ಕೆ **'ಋತ' ''ಸತ್ಯ''** ಎಂದು ಕರೆಯುವರು, ಪರಮ ಪುರುಷನಾದ ಈ ಭಗವದ್ ತತ್ವವನ್ನು ಚೆನ್ನಾಗಿ ತಿಳಿದುಕೊಂಡು, ಅವನ ಉಪಾಸನೆಯನ್ನು ಸರಿಯಾಗಿ ಮಾಡು.''

ಭಗವಂತನ ಈ ಉಪದೇಶ ಕೇಳಿ, ಅವನಿಂದಲೇ, ದಿವ್ಯ ತತ್ವಜ್ಞಾನದ ರಹಸ್ಯವನ್ನೆಲ್ಲ ಅರಿತುಕೊಂಡು ಸ್ವಾಯಂಭುವ ಮನುವು ಉತ್ತರ ದಿಕ್ಕಿಗೆ ಹೋಗಿ, ಭಗವದ್ಧ್ಯಾನವನ್ನು ಮಾಡಿ, ದಿವ್ಯಾಪರೋಕ್ಷವನ್ನು ಪಡೆದು, ಬ್ರಹ್ಮ ಸಾಯುಜ್ಯವನ್ನು ಹೊಂದಿದನು. ಅನಂತರ ಬ್ರಹ್ಮದೇವರು, ತನ್ನ ಮನಸ್ಸಿನ ಸಂಕಲ್ಪದಿಂದ **''ಭುವ''** ಎಂಬ ಎರಡನೆಯ ಮಗನನ್ನು ಸೃಷ್ಟಿಸಿದನು. ಅವನೂ ಕೂಡ ಬ್ರಹ್ಮದೇವರ ಅಪ್ಪಣೆಯಂತೆ ಕಪಿಲ ಹಾಗೂ ನಾರಾಯಣ ದೇವರ ಬಳಿಗೆ ಹೋಗಿ ವೇದಾಭ್ಯಾಸ ಮಾಡಿ ಭೂಲೋಕದಲ್ಲಿ ನಿಂತು, ತಪೋನುಷ್ಠಾನಗೈದು, ಸದ್ಗತಿಯನ್ನು ಹೊಂದಿದನು.

ಅನಂತರ, ಬ್ರಹ್ಮದೇವರಿಂದ ಉತ್ಪನ್ನನಾದ 'ಭೂರ್ಭುವ' ಎಂಬ ಮೂರನೆಯ ಮಗನೂ ಸಹ ಭಗವದ್ಧರ್ಮವನ್ನು ಆಶ್ರಯಿಸಿ ತನ್ನ ಅಣ್ಣಂದಿರಂತೆ ದಿವ್ಯಗತಿಯನ್ನು ಹೊಂದಿದನು. ಬಳಿಕ, ಬ್ರಹ್ಮದೇವನು ಬಹುಕಾಲ ಪರ್ಯಂತ, ಒಬ್ಬನೇ ತಪಸ್ಸನ್ನು ಮಾಡುತ್ತ ಕುಳಿತುಕೊಂಡಿದ್ದನು. ಏಕಾಕಿತನದಿಂದ ತಪಂಗೈಯುತ್ತಿದ್ದ ಅವನಿಗೆ ತುಸು ಬೇಸರವೆನಿಸಿ, ತನ್ನ ಶರೀರದಿಂದಲೇ ಪರಮ ಮಂಗಳ ಸ್ವರೂಪಳಾದ ಮಡದಿಯೊಬ್ಬಳನ್ನು ನಿರ್ಮಿಸಿದನು. ಅವಳು ತಪಸ್ಸು, ತೇಜಸ್ಸು, ವರ್ಚಸ್ಸು, ನಿಯಮ ಮುಂತಾದ ಗುಣಗಳಿಂದ ಬ್ರಹ್ಮದೇವರಿಗೆ ಎಲ್ಲ ರೀತಿಯಿಂದಲೂ ಅನುರೂಪಳಾದ ಭಾರ್ಯೆ ಎನಿಸಿದಳು. ಅವಳೇ ಸರಸ್ವತಿ.

ಅನಂತರ ಪುನಃ ಏಕಾಗ್ರ ಚಿತ್ತದಿಂದ ಪತ್ನಿಯೊಡನೆ ತಪಸ್ಸಿನಲ್ಲಿ ನಿರತನಾದ ಬ್ರಹ್ಮದೇವನು ವೇದಗಳ ಸಾರ ರೂಪವಾದ ಗಾಯತ್ರೀ ಮಂತ್ರವನ್ನು ಉಚ್ಚರಿಸಿದನು. ಆ ಗಾಯತ್ರೀ ಮಂತ್ರದಿಂದ ನಾಲ್ಕು ವೇದಗಳನ್ನು ಕಂಡರಿಸಿದನು. ಅನಂತರ ಬ್ರಹ್ಮದೇವರು ಜಗತ್ತಿನ ಅಧಿಪತಿಯಾದ **'ಧರ್ಮ'** ಎಂಬ ಮಗನನ್ನು ಎಲ್ಲ ಮಂತ್ರ ದೇವತೆಗಳಿಗೆ ಅಪ್ತನನ್ನಾಗಿ ನಿರ್ಮಿಸಿದನು. ಅನಂತರ ದಕ್ಷ, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ ಕ್ರತು, ವಶಿಷ್ಠ, ಗೌತಮ, ಭೃಗು, ಅಂಗಿರಸ ಎಂಬ ಹೆಸರಿನ ಹತ್ತು ಮಕ್ಕಳನ್ನು ಸೃಷ್ಟಿಸಿದನು. ಇವರಿಂದ ಹದಿಮೂರು ಸದ್ಗುಣಗಳಾದ ಮಹರ್ಷಿಗಳ ವಂಶಗಳು ಮುಂದೆ ಬೆಳೆದವು.

ಬ್ರಹ್ಮದೇವರ ಮಾನಸಪುತ್ರನಾದ ದಕ್ಷ ಪ್ರಜಾಪತಿಗೆ ಅದಿತಿ, ದಿತಿ, ತನು, ಕಲಾ, ಅನಾಯು, ಸಿಂಹಿಕಾ, ಮುನಿ, ತಾಮ್ರಾ, ಕ್ರೋಧಾ, ಸುರಸಾ, ವಿನತಾ, ಕದ್ರು ಎಂಬ ಹನ್ನೆರಡು ಜನ ಕನ್ಯೆಯರು ಹುಟ್ಟಿದರು. ಈ ಹನ್ನೆರಡು ಜನ ಮಕ್ಕಳನ್ನು ದಕ್ಷ ಪ್ರಜಾಪತಿಯು ಮರೀಚಿ ಋಷಿಯ ಮಾನಸಪುತ್ರನಾದ ಕಶ್ಯಪ ಮುನಿಗೆ ಧಾರೆಯೆರೆದು ಮದುವೆಮಾಡಿದನು. ಇವರಲ್ಲದೆ, ದಕ್ಷಪ್ರಜಾಪತಿಯ ಇಪ್ಪತ್ತೇಳು ಜನ ನಕ್ಷತ್ರಾಭಿಮಾನಿಗಳಾದ ಕನ್ಯಾಮಣಿಗಳನ್ನು ಚಂದ್ರನಿಗೆ ಕೊಟ್ಟು ಮದುವೆ ಮಾಡಲಾಯಿತು.

ಬ್ರಹ್ಮದೇವರು, ಲಕ್ಷ್ಮೀ, ಸರಸ್ವತಿ, ಮರುತ್ವತಿ, ಸಾಧ್ಯಾ, ವಿಶ್ವಾ ಎಂಬ ಹೆಸರಿನ ಐದು ಹೆಣ್ಣು ಮಕ್ಕಳನ್ನು ಪೂರ್ವದಲ್ಲಿ ಸೃಷ್ಟಿ ಮಾಡಿದನು. ಈ ಐದೂ ಐದೆಯರನ್ನು ಗುಣವಂತನಾದ ಧರ್ಮನಿಗೆ ಮದುವೆ ಮಾಡಿಕೊಟ್ಟನು. ಎಲ್ಲರಕ್ಕಿಂತ ಮೊದಲು ಬ್ರಹ್ಮನು ತನ್ನ ಅರ್ಧಾಂಗಿನಿ ಎಂದು ಸರಸ್ವತಿ ಎಂಬ ಪತ್ನಿಯನ್ನು ನಿರ್ಮಾಣ ಮಾಡಿದ್ದನಷ್ಟೆ. ಆ ಸರಸ್ವತಿ ದೇವಿಯು ಒಂದು ಧೇನುವಿನ ರೂಪದಿಂದ ಬ್ರಹ್ಮದೇವರ ಸೇವೆಮಾಡಿ ಸಮಾಗಮವನ್ನು ಹೊಂದಿದ್ದಳು. ಆ ಸರಸ್ವತಿ ದೇವಿಗೆ **'ಸುರಭಿ'** ಎಂದೂ ಹೆಸರು. ಆ ಸುರಭಿಯಿಂದ ಗೋವುಗಳ ಉತ್ಪತ್ತಿ ಬ್ರಹ್ಮದೇವರ ಮುಖಾಂತರವಾಗಿ ಆಯಿತು. ಅದೇ ಸುರಭಿಯಿಂದ ಹಸುಗಳಲ್ಲದೆ ಉಳಿದ ಪಶುಗಳೂ, ಹಂಸಗಳೂ, ಔಷಧಿ, ವನಸ್ಪತಿ, ಅಮೃತ, ಯಜ್ಞಾಧಿಪತಿಗಳು, ಮುಂತಾದವುಗಳ ಉತ್ಪತ್ತಿ ಆಯಿತು.

ಅನಂತರ ಆ ಸುರಭಿದೇವಿಯಿಂದಲೇ, ನಿರತಿ, ಶಂಭು, ಅಪರಾಜಿತ, ಮೃಗವ್ಯಾಧ, ಕಪರ್ದಿ, ದಹನ, ಖರ, ಅಹಿರ್ಬುಧ್ನ, ಕಪಾಲಿ, ಪಿಂಗಲ, ಸೇನಾನಿ ಎಂದು ಹನ್ನೊಂದು ಜನ ರುದ್ರರು ಜನಿಸಿದರು. ತೀಕ್ಷ್ಣವಾದ ತೇಜಸ್ಸಿನಿಂದ ಜಗತ್ತಿಗೆಲ್ಲ ಬಿಸಿ ತಾಕಿಸುತ್ತಿದ್ದ ಹೊಗೆ ಒಣ್ಣದ ಈ ಮಕ್ಕಳೆಲ್ಲರೂ ಅಳುತ್ತ ಓಡಾಡುತ್ತಿರುವುದರಿಂದ ಅವರಿಗೆ **'ರುದ್ರ'** ಎಂದು ಹೆಸರು ಬಂದಿತು.

ಬ್ರಹ್ಮದೇವರ ಚೊಚ್ಚಲು ಗಂಡು ಮಗನಾದ ಧರ್ಮನಿಗೆ ಬ್ರಹ್ಮದೇವರು ಐದು ಜನ ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಟ್ಟಿದ್ದನಷ್ಟೇ! ಅವರಲ್ಲಿ ಲಕ್ಷ್ಮೀ ಎಂಬ ಮಡದಿಯಿಂದ ಧರ್ಮನು ಕಾಮ ಎಂಬ ಗಂಡು ಮಗನನ್ನು ಹಡೆದನು. ಸಾಧ್ಯಾ ಎಂಬ ಮತ್ತೊಬ್ಬ ಮಡದಿಯಿಂದ ಧರ್ಮದೇವನು ಸಾಧ್ಯ, ಭವ, ಪ್ರಭವ, ಈಶ, ಅರುಣ, ವಿಶ್ವಾವಸು, ಬಲ, ಅರುಣಿ, ಧ್ರುವ, ಹವಿಷ್ಯ, ವಿತಾನ, ಶಮಿತ, ವತ್ಸರ, ಭೂತಿ, ಸುಪರ್ಯ ಎಂಬ ಮಕ್ಕಳನ್ನು ಪಡೆದನು. ಧರ್ಮನ ಮೂರನೇಯ ಮಡದಿಯಾದ, ಸರಸ್ವತಿಯು ವರ, ಧ್ರುವ, ವಿಶ್ವಾವಸು, ಸೋಮ, ಆಯ, ಯಮ, ವಾಯು, ವಸು, ಎಂಬ ಎಂಟು ಜನ ಮಕ್ಕಳನ್ನು ಪಡೆದಳು. ಧರ್ಮನ ವಿಶ್ವಾ ಎಂಬ ಧರ್ಮ ಪತ್ನಿಯಲ್ಲಿ

ವಿಶ್ವೇದೇವತೆಗಳು ಹುಟ್ಟಿದರು. ಮತ್ತೆ ಒಬ್ಬ ಕಾಂತೆಯಾದ ವಿಶ್ವೇಶಾ ಎಂಬವಳಿಂದ ಗರುಡ, ದಕ್ಷ, ಪುಷ್ಕರಸ್ವನ, ಚಾಕ್ಷುಷ ಮನು, ಮಧು, ಮಹೋರಗ, ವಿಶ್ವಾಂತ, ವಸು, ಬಾದಿ, ವಿಷ್ಕಂಭ ಮುಂತಾದ ಶೂರ, ಶ್ರೇಷ್ಠ ಸದ್ಗುಣಿ ಮಕ್ಕಳು ಹುಟ್ಟಿದರು. ಮರುತ್ವತೀ ಎಂಬ ಮಗದೊಬ್ಬ ಮಡದಿಯಿಂದ ಧರ್ಮಮುನಿಗೆ ಅಗ್ನಿ, ಚಕ್ಷು, ಜ್ಯೋತಿ, ಸಾವಿತ್ರಿ, ಮಿತ್ರ, ಅಮರ, ಶರವೃಷ್ಟಿ, ಸಂಕರ್ಷ, ಮೀಜ, ವಾಜ, ವಿಶ್ವಾವಸು, ಮತಿ, ವಿಶ್ವಮಿತ್ರ, ಚಿತ್ರರಶ್ಮಿ, ನಿಕ್ಷಧನ, ಹೂಯಂತ, ವಾಡವ, ಚಾರಿತ್ರ್ಯ, ಮಂದಸನ್ನಗ, ಬೃಹನ್ನಗ, ಮರುತ್ವಂತ ಎಂಬ ಹೆಸರಿನ ದೇವತೆಗಳು ಜನಿಸಿದರು. ದಕ್ಷಪ್ರಜಾಪತಿಯ ಅದಿತಿ ಎಂಬ ಮಗಳನ್ನು ಕಶ್ಯಪ ಮುನಿಗೆ ಕೊಟ್ಟಿತ್ತಷ್ಟೇ! ಆ ಅದಿತಿದೇವಿಯಲ್ಲಿ ಇಂದ್ರ, ವಿಷ್ಣು, ಭಗ, ತ್ವಷ್ಟ, ವರುಣ, ಅರ್ಯಮ, ಪೂಷ, ಮಿತ್ರ, ಧನದ, ಧಾತ, ಪರ್ಜನ್ಯ ಎಂಬ ಹೆಸರಿನ ದ್ವಾದಶಾದಿತ್ಯರೆಂದು ಪ್ರಸಿದ್ಧ ಹನ್ನೆರಡು ಜನ ಪುತ್ರರು ಜನಿಸಿದರು.

ಕಶ್ಯಪರ ದನು ಎಂಬ ಮಡದಿಯಿಂದ ದಾನವರೂ ದಿತಿಯಿಂದ ದೈತ್ಯರೂ, ಕಾಲಿಕೆಯಿಂದ ಕಾಲಿಕೆಯರು ಎಂಬ ಹೆಸರಿನ ರಾಕ್ಷಸರು ಪ್ರಸೂತರಾದರು. ಅನಾಯುಷಾ ಎಂಬ ಕಶ್ಯಪರ ಹೆಂಡತಿಯಿಂದ ಬಗೆಬಗೆಯ ರೋಗಗಳು ಹುಟ್ಟಿಕೊಂಡವು. ಸಿಂಹಿಕಾ ಎಂಬ ಕಶ್ಯಪರ ಹೆಂಡತಿಯಿಂದ ಗ್ರಹ, ನಕ್ಷತ್ರಗಳು ಹುಟ್ಟಿಕೊಂಡವು ಮುನಿ ಎಂಬ ಮಾನಿನಿಯಿಂದ ಗಂಧರ್ವರ ಉತ್ಪತ್ತಿ, ತಾಮ್ರೆಯಿಂದ ಅಪ್ಸರಾಂಗನೆಯರ ಉದಯ. ಕ್ರೋಧೆಯಿಂದ ಸಕಲ ಭೂತ ಪಿಶಾಚ, ಯಕ್ಷ ರಾಕ್ಷಸರ ಜನನ. ಸುರಭಿಯಿಂದ ಹಸು ಮುಂತಾದ ಪಶುಗಳ ಉತ್ಪತ್ತಿ. ಕಶ್ಯಪರ ವಿನತಾ ಎಂಬ ವನಿತಾ ಮಣಿಯ ಸಂತಾನವೇ ಗರುಡ ಪಕ್ಷಿ ಮುಂತಾದ ಹಕ್ಕಿಗಳು. ಕದ್ರು ಎಂಬ ಕಶ್ಯಪ ಕಾಮಿನಿಯ ಹೊಟ್ಟೆಯಿಂದ ಹಾವುಗಳು ಹರಿದು ಬಂದವು. ಬೆಟ್ಟಗಳು ಬೆಳೆದು ನಿಂತವು. ಹೀಗೆ ಬ್ರಹ್ಮದೇವರ ಮಾನಸ ಕುಮಾರರ ಪುತ್ರ, ಪೌತ್ರ, ದೌಹಿತ್ರ ಸಂತಾನವಾಗಿ ಪ್ರಪಂಚವೆಲ್ಲವೂ ಹುಟ್ಟಿ ಬೆಳೆದು ಲೋಕವನ್ನೆಲ್ಲ ವ್ಯಾಪಿಸಿಕೊಂಡು ನಿಂತಿತು.

ರಾಜನೆ, ಸೃಷ್ಟಿಯ ಪ್ರಾರಂಭದ ಕಾಲದಲ್ಲಿ ಜಗದೀಶ್ವರನಾದ ನಾರಾಯಣನ ನಾಭಿಕಮಲದಿಂದ ಬ್ರಹ್ಮದೇವರು ಹುಟ್ಟಿ ಪ್ರಪಂಚವನ್ನೆಲ್ಲ ನಿರ್ಮಾಣಮಾಡಿದನು. ಆ ಬ್ರಹ್ಮದೇವರ ನಾಭಿಕಮಲವು ಹೇಗೆ ಉತ್ಪನ್ನವಾಯಿತು? ಅದರಿಂದ ಪ್ರಪಂಚವೆಲ್ಲ ಹೇಗೆ ಬೆಳೆದುಬಂದಿತು? ಇದೆಲ್ಲಕ್ಕೂ ಪರಮ ಪುರುಷನಾದ ಭಗವಾನ್ ನಾರಾಯಣನೇ ಹೇಗೆ ಕಾರಣಪುರುಷನಾಗಿ ನಿಂತುಕೊಂಡು, ವೇದ ಪ್ರತಿಪಾದ್ಯನಾಗಿದ್ದಾನೆ? ಎಂಬ ವಿಷಯದೊಂದಿಗೆ ಜಗತ್ಪ್ರಭು ನಾರಾಯಣನ ರೂಪವನ್ನೆಲ್ಲ ವಿಸ್ತಾರವಾಗಿ ಈ ವರೆಗೆ ನಾನು ನಿನಗೆ ತಿಳಿಸಿದೆನು. ಭಗವಂತನ ನಾಭಿಕಮಲದಿಂದ ಪ್ರಪಂಚವು ರೂಪುಗೊಂಡು ಈ ಪುಷ್ಕರ ಪ್ರಾದುರ್ಭಾವದ ವೃತ್ತಾಂತವನ್ನು ಹೇಳಿದವರು ಕೇಳಿದವರು ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರರಾಗಿ ಇಹದಲ್ಲಿ ಸಕಲ ಇಷ್ಟಾರ್ಥಗಳನ್ನು ಪಡೆದು ಪರದಲ್ಲಿ ಸ್ವರ್ಗಾದಿ ಸೌಖ್ಯಗಳನ್ನು ಅನುಭವಿಸಿ ಸದ್ಗತಿಯನ್ನು ಹೊಂದುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಏಪ್ಪತ್ತೆರಡೆಯ ಅಧ್ಯಾಯ ಮುಗಿದುದು.*

—o—

**ಮತ್ಸ್ಯ ಉವಾಚ :**

**"ವಿಷ್ಣುತ್ವಂ ಶ್ರಣು ವಿಷ್ಣೋಶ್ಚ ಹರಿತ್ವಂ ಚ ಕೃತೇಯುಗೇ।**
**ವೈಕುಂಠತ್ವಂ ಚ ದೇವೇಷು ಕೃಷ್ಣತ್ವಂ ಮಾನುಷೇಶು ಚ ॥**

**ಮತ್ಸ್ಯ** :- ಸರ್ವತ್ರವ್ಯಾಪ್ತನಾಗಿ ಸಮಸ್ತ ವಿಶ್ವದ ಒಳಗೆ ಪ್ರವೇಶಿಸಿ ಚರಾಚರಾತ್ಮಕವಾದ ಪ್ರಪಂಚದ ನಿಯಮನ ಪಾಲನಗಳನ್ನು ಮಾಡುವ ವಿಷ್ಣುವಿನ ಮಹಾಮಹಿಮೆಯನ್ನು ಕೇಳು:

ಕೃತಯುಗದಲ್ಲಿ ದುಷ್ಟರ ಸಂಹಾರಮಾಡಿ ದೇವತೆಗಳನ್ನು ಮಾನವರನ್ನು ಕಾಯ್ದುದ್ದರಿಂದ ಆ ಶ್ರೀ ವಿಷ್ಣುವಿಗೆ **"ಹರಿ"** ಎಂಬ ಹೆಸರು ಬಂದಿತು. ಅದೇ ಭಗವಂತನನ್ನು ದೇವತೆಗಳು ವೈಕುಂಠ ಎಂಬ ಹೆಸರಿನಿಂದ ಪೂಜಿಸುತ್ತಾರೆ. ವಿಕುಂಠಾ ದೇವಿಯ ಮಗನಾಗಿ ಹುಟ್ಟಿ, ದೇವತಾಗಣವನ್ನೆಲ್ಲ, ರಕ್ಷಿಸಿದ್ದರಿಂದ ವೈಕುಂಠರೂಪವು ದೇವತೆಗಳಿಗೆ ಪರಮಪೂಜನೀಯವಾಗಿದೆ. ಮಾನವನಾಗಿ ಕೃಷ್ಣರೂಪದಿಂದ ಅವತರಿಸಿದ್ದರಿಂದ ನರರೆಲ್ಲರೂ ಆ ವಿಷ್ಣುವನ್ನು ಕೃಷ್ಣರೂಪದಿಂದಲೇ ಉಪಾಸನೆ ಮಾಡುತ್ತಾರೆ. ಈಶ್ವರನ ಅವತಾರ ಲೀಲೆಗಳು ಅಸಂಖ್ಯವಾಗಿವೆ. ಅಷ್ಟೇ ಅಗಮ್ಯವೂ ಆಗಿವೆ. ಹಿಂದೆ ಆಗಿಹೋದ ಆ ಭಗವದವತಾರಗಳ ಮಹಾಮಹಿಮೆಯನ್ನು ಯಥಾರ್ಥವಾಗಿ ನಿರೂಪಿಸುತ್ತೇನೆ. ಕೇಳು.

ಅವ್ಯಕ್ತನಾದ ಭಗವಾನ್ ಶ್ರೀನಾರಾಯಣನು ಜಗಜ್ಜನ್ಮಾದಿ ಕಾರಣನಾಗಿ ಸ್ವಯಂ ತಾನು ಮಾತ್ರ ಹುಟ್ಟು ಸಾವುಗಳಿಂದ ದೂರವಾಗಿದ್ದಾನೆ. ಆ ಪರಮಾತ್ಮನು ತನ್ನ ನಾರಾಯಣರೂಪವಾದ ಮೂಲರೂಪದಿಂದ ಹರಿ ಎಂಬ ಹೆಸರಿನಿಂದ ಅಭಿವ್ಯಕ್ತಿಯನ್ನು ಪಡೆದನು. ಅದೇ ಹೆಸರಿನಲ್ಲೇ ಮುಂದೆ ಬ್ರಹ್ಮದೇವನಲ್ಲಿ ನಿಂತು ಅವನಿಂದ ಸೃಷ್ಟಿ ವ್ಯಾಪಾರಮಾಡಿಸಿ ಬ್ರಹ್ಮಶಬ್ದವಾಚ್ಯನಾಗಿ ಚತುರ್ಮುಖ ಬ್ರಹ್ಮನಿಗೆ ನಿಯಾಮಕನಾಗಿ ಜಗದ್ವ್ಯಾಪಾರವನ್ನು ಪ್ರಾರಂಭಿಸಿದನು. ಮುಂದೆ ಅದೇ ಭಗವಂತನೇ, ವಾಯು, ಚಂದ್ರ, ಯಮಧರ್ಮ, ಇಂದ್ರ, ಬೃಹಸ್ಪತಿ, ವರುಣ, ಮುಂತಾದ ದೇವತೆಗಳಲ್ಲಿ ಆಯಾ ಶಬ್ದಗಳಿಂದ ವಾಚ್ಯನಾಗಿ ಇದ್ದುಕೊಂಡು, ಅವರಿಂದ ಎಲ್ಲ ಕಾರ್ಯಗಳನ್ನು ಮಾಡಿಸುವನು. ಅದೇ ಶ್ರೀ ಭಗವಾನ್ ಮಹಾವಿಷ್ಣುವು, ಅದಿತಿ ದೇವಿಯ ಮಗನಾಗಿ, ಇಂದ್ರನ ತಮ್ಮನಾಗಿ ಉಪೇಂದ್ರ ಎಂಬ ಹೆಸರಿನಿಂದ ಪ್ರಖ್ಯಾತನಾದನು. ಇದೇ ಶ್ರೀಹರಿಯೇ ಪೂರ್ವ ಕಲ್ಪಗಳಲ್ಲಿ ಅಸಂಖ್ಯ ಬ್ರಹ್ಮದೇವರನ್ನು ನಿರ್ಮಾಣಮಾಡಿ ಅನೇಕ ಪ್ರಜಾಪತಿಗಳನ್ನು ಹುಟ್ಟಿಸಿ, ಅವರ ಮುಖಾಂತರ ವಿಶ್ವ ಸಜ್ಜನಪಾಲನಾಗಿ ವಿವಿಧ ಕಾರ್ಯಗಳನ್ನು ಮಾಡಿಸಿದನು. ಇಂಥ ಮಹಾಮಹಿಮನಾದ ಶ್ರೀ ವಿಷ್ಣುವಿನ ದಿವ್ಯ ಚರಿತ್ರದ ಲೀಲೆಗಳನ್ನು ವಿವರಿಸುತ್ತೇನೆ ಕೇಳು.

ಪೂರ್ವಕಾಲದಲ್ಲಿ ಕೃತಯುಗದಲ್ಲಿ ವೃತ್ರಾಸುರನ ಸಂಹಾರವಾದ ಬಳಿಕ ದೇವದಾನವರಲ್ಲಿ ಪುನಃ ಘನಘೋರ ಯುದ್ಧವಾಯಿತು. ಅದಕ್ಕೆ ತಾರಕಾಮಯ ಸಂಗ್ರಾಮ ಎಂದು ಮೂರುಲೋಕಗಳಲ್ಲಿ ಪ್ರಸಿದ್ಧಿಯಾಗಿದೆ. ಈ 'ತಾರಕಾಮಯ' ಎಂಬ ಯುದ್ಧದಲ್ಲಿ ಕ್ರೂರರಾದ ರಕ್ಕಸರು, ಘೋರವಾದ ಆಯುಧಗಳನ್ನು ಹಿಡಿದು ಎಲ್ಲ

ದೇವತೆಗಳನ್ನು ಅವರ ಅನುಯಾಯಿಗಳಾದ ಯಕ್ಷ, ರಕ್ಷ, ಸರ್ಪ ಮೊದಲಾದವರನ್ನು ಹೊಡೆದುಹಾಕಿದರು. ರಣಭೈರವರಾದ ದುರುಳ ದಾನವರ ದಾರುಣವಾದ ಆಯುಧಪ್ರಹಾರಗಳಿಂದ ದೇವತೆಗಳೆಲ್ಲರೂ ಹೊಡೆತ ತಿಂದು ಹೋರಾಡಲು ಶಕ್ತಿ ಸಾಲದೆ ಕ್ಷೀಣಬಲರಾದರು. ಹೀಗೆ ಪರಾಜಿತರಾದ ಎಲ್ಲ ಸುರವೃಂದದವರು ಕೊನೆಗೆ ಗತಿಗಾಣದೆ, ತಮ್ಮ ಸಂರಕ್ಷಕನಾದ ಶ್ರೀ ಹರಿಗೆ ಶರಣುಹೋದರು. ಅವರೆಲ್ಲರೂ ಭಕ್ತಿಯಿಂದ ಆ ಭಗವಂತನನ್ನು ಸ್ತೋತ್ರ ಮಾಡಿದರು. ದೀನ, ದುಃಖಿತರಾಗಿ ಬಂದು, ತನ್ನಲ್ಲಿ ಮೊರೆಯಿಟ್ಟ ದೇವತೆಗಳಿಗೆ ಭಗವಂತನು ಕರುಣೆಯಿಂದ ದರ್ಶನವನ್ನು ಕೊಟ್ಟನು.

ತುಂಬಿದ ಮೋಡದಂತೆ ನೀಲಬಣ್ಣ, ಪುಟಕ್ಕೆಹಾಕಿದ ಬಂಗಾರದ ಅನೇಕ ಆಭರಣಗಳು, ಶಂಖ, ಚಕ್ರ, ಗದಾ ಪದ್ಮಗಳಿಂದ ಹೊಳೆಯುವ ನಾಲ್ಕೋಳುಗಳು. ವಕ್ಷಸ್ಥಳದಲ್ಲಿ ಶ್ರೀವತ್ಸಲಾಂಛನ. ಶ್ರೀ, ಕೀರ್ತಿ, ಕಾಂತಿ, ಲಕ್ಷ್ಮೀ, ಮೊದಲಾದ ಲಕ್ಷ್ಮೀದೇವಿಯ ವಿವಿಧ ರೂಪಗಳಾದ ರಮಣೀಮಣಿಯರು ಅವನನ್ನು ಸೇವಿಸುತ್ತಲಿದ್ದಾರೆ. ಇಂತಹ ಪರಮಾತ್ಮನನ್ನು ಕಂಡು, ದೇವತೆಗಳೆಲ್ಲರೂ ಸಂತೋಷ ಭರಿತರಾಗಿ 'ಜಯಜಯಜಾಹ್ನವೀ ಜನಕ ಜಯ ಜನಾರ್ದನ, ಜಯ ಜಗಜ್ಜನಕ, ಜಯ ದೈತ್ಯಕುಲಮರ್ದನ, ಜಯ ಭಕ್ತ ಕುಲವರ್ಧನ, ಜಯ ಜಗದೀಶ ಹರೆ' ಎಂದು ಹಾಡಿ ಕೊಂಡಾಡಿದರು. ಮತ್ತೆ ತಮಗೆ ಒದಗಿ ಬಂದ ಘೋರ ದುಃಖವನ್ನು ಹೇಳಿ, ತಮ್ಮನ್ನು ಈ ಸಂಕಟದಿಂದ ಪಾರು ಮಾಡಬೇಕು ಎಂದು ಬೇಡಿಕೊಂಡರು. ಆಗ ಶ್ರೀ ಹರಿಯು ಮೇಘ ಗಂಭೀರವಾದ ಧ್ವನಿಯಿಂದ ಆ ಎಲ್ಲ ದೇವತೆಗಳನ್ನು ಕುರಿತು ಹೇಳಿದನು.

''ದೇವತೆಗಳೇ, ಗಾಬರಿಯಾಗಬೇಡಿರಿ. ನಿಮಗೆ ಕಲ್ಯಾಣವಾಗಲಿ. ಆ ದೈತ್ಯರೆಲ್ಲರನ್ನು ನಾನು ಸಂಹರಿಸುತ್ತೇನೆ. ಮೂರುಲೋಕಗಳ ಅಧಿಪತ್ಯವು ನಿಮಗೆ ಕ್ಲಪ್ತ. ಯೋಚನೆಯೇ ಬೇಡ. ದೇವ ಶತ್ರುಗಳನ್ನೆಲ್ಲ ಸಂಹರಿಸಬೇಕೆಂದು ನಾನು ಪ್ರತಿಜ್ಞೆ ಮಾಡಿದ್ದೇನೆ. ಇನ್ನು ಮೇಲೆ ನಿಶ್ಚಿಂತರಾಗಿರಿ'' ಭಗವಂತನ ಈ ನುಡಿಯನ್ನು ಕೇಳಿ ದೇವತೆಗಳಿಗೆಲ್ಲ ಭಯ ಕಳೆಯಿತು; ಚಿಂತೆ ದೂರಾಯಿತು. ಸತ್ಯ ಸಂಕಲ್ಪನಾದ ಶ್ರೀ ಹರಿಯ ಪ್ರತಿಜ್ಞೆಯು ಎಂದೂ ಹುಸಿಯಾಗಲಾರದು. ಇದು ಅನೇಕ ಸಲ ಅವರಿಗೆ ಅನುಭವಕ್ಕೆ ಬಂದ ವಿಷಯ. ಶ್ರೀ ಹರಿಯ ಮಾತುಗಳಿಂದ ಅಮೃತಪಾನ ಮಾಡಿದಷ್ಟು ಆನಂದವಾಯಿತು ಆ ಸುರೋತ್ತಮರಿಗೆಲ್ಲ. ಕೂಡಲೇ ಶುಭಕರವಾದ ಗಾಳಿ ಬೀಸಿತು. ದಶದಿಕ್ಕುಗಳಲ್ಲಿಯೂ ಶಾಂತಿ, ಪ್ರಸನ್ನತೆ, ನಕ್ಷತ್ರಗಳೆಲ್ಲವೂ ಸಾತ್ವಿಕ ಕಾಂತಿಯಿಂದ ಹೊಳೆದವು. ಭೂಲೋಕದಲ್ಲಿಯ ನದಿಗಳಲ್ಲೂ ಕೂಡ ಆ ಪ್ರಸನ್ನತೆ ಪ್ರತಿಫಲಿಸಿತು. ಸಾಗರಗಳಲ್ಲಿ ಶಾಂತತೆಯ ಸಾಮ್ರಾಜ್ಯ. ಋಷಿಗಳ ಚಿಂತೆ ದೂರಾಯಿತು. ಉತ್ಕಂಠೆಯಿಂದ ಅವರೆಲ್ಲರೂ ವೇದಘೋಷಗಳನ್ನು ಮಾಡತೊಡಗಿದರು. ಯಜ್ಞಮಂಟಪಗಳಲ್ಲಿ ಅಗ್ನಿಕುಂಡದಲ್ಲಿಯ ಅಗ್ನಿಯು ತುಪ್ಪಹಾಕದೆ ಉದ್ದೀಪಿತವಾಯಿತು. ಪ್ರತಿಯೊಬ್ಬ ಪ್ರಾಣಿಯ ಅಂತರಂಗದಲ್ಲಿಯೂ ಶಾಂತಿ ಸಂತಸಗಳು ಉಕ್ಕಿದವು. ಇದೆಲ್ಲವೂ ಶ್ರೀಹರಿಯ ದುಷ್ಟ, ದೈತ್ಯ ಸಂಹಾರಕ್ಕಾಗಿ ತೊಟ್ಟ ಪ್ರತಿಜ್ಞೆಯ ಪರಿಣಾಮ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಪ್ಪತ್ತಮೂರನೆಯ ಅಧ್ಯಾಯ ಮುಗಿದದು*

## ದೈತ್ಯರ ಸಮರೋದ್ಯೋಗ

ಅಧ್ಯಾಯ - ೧೭೪

**ಮತ್ಸ್ಯ ಉವಾಚ :**

**ತತೋ ಭಯಂ ವಿಷ್ಣುವಚಃ ಶ್ರುತ್ವಾ ದೈತ್ಯಾಶ್ಚ ದಾನವಾಃ**
**ಉದ್ಯೋಗಂ ವಿಪುಲಂ ಚಕ್ರುರ್ಯುದ್ಧಾಯ ವಿಜಯಾಯ ಚ**

**ಮತ್ಸ್ಯ** :- ಶ್ರೀ ವಿಷ್ಣುವಿನ ಪ್ರತಿಜ್ಞೆಯ ಸಮಾಚಾರ ದೈತ್ಯರಿಗೂ ತಿಳಿಯಿತು. ಆದರಿಂದ ಅವರಿಗೂ ಗಾಬರಿಯಾಗಿ ಕೂಡಲೇ ಅವರೆಲ್ಲರೂ ಯುದ್ಧದ ಸಿದ್ಧತೆಯನ್ನು ನಡೆಸಿದರು. ಸುರರೆಲ್ಲರನ್ನು ಈ ಸಂಗ್ರಾಮದಲ್ಲಿ ಸೋಲಿಸಿ, ಗೆಲುವನ್ನುಪಡೆಯುವ ಹಂಬಲ ಆ ಅಸುರರಿಗೆಲ್ಲ. ಮಯಾಸುರನು ನಾಲ್ಕು ಗಾಲಿಯ, ಅನೇಕ ಗಂಟೆಗಳನ್ನು ಬಿಗಿದು ಕಟ್ಟಿದ, ಬೆಟ್ಟದಂತಹ ರಥವನ್ನು ಏರಿಕೊಂಡು ಯುದ್ಧಕ್ಕೆ ಹೊರಟನು. ವಿರೋಚನನು ಉರಿಯುವ ಪರ್ವತದಂತೆ, ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ದೈತ್ಯ ಸೇನೆಯ ಮುಂಭಾಗದಲ್ಲಿ ನಿಂತುಕೊಂಡನು. ಹಯಗ್ರಿವ ದಾನವನು ಸಹಸ್ರಾರು ರಥ, ಆನೆ, ಕುದುರೆಗಳಿಂದ ಕೂಡಿದ ತನ್ನ ಸೈನ್ಯವನ್ನು ದೇವ ಸೇನೆಯ ಮೇಲೆ ನುಗ್ಗಲು ಸಜ್ಜು ಗೊಳಿಸಿದನು. ಇದರಂತೆ ಖರ, ವರಾಹ, ವಿಪ್ರಚಿತ್ತಿ, ಶ್ವೇತ, ಅರಿಷ್ಟ, ಶೋಕಿಶೋಲ, ಸ್ವರ್ಭಾನು ಮುಂತಾದ ದೈತ್ಯಸೇನಾಪತಿಗಳು ಆನೆ, ಕುದುರೆ ಸಿಂಹ, ಹುಲಿ, ಕಾಡುಹಂದಿ, ಕರಡಿ, ಕತ್ತೆ, ಒಂಟೆ, ಮುಂತಾದ ಬಗೆ ಬಗೆಯ ಕಾಡು ಕ್ರೂರ ಶ್ವಾಪದಗಳ ಬೆನ್ನ ಮೇಲೆ ಆರೋಹಣ ಮಾಡಿ ಯುದ್ಧಕ್ಕೆ ಸಿದ್ಧರಾದರು. ಉಗ್ರ ಮುಖದ,ವಿಕರಾಳ ಆಕಾರದ, ಬೆಂಕಿಯ ಬೆಟ್ಟದಂತೆ ಉರಿಯುತ್ತ ಬರುತ್ತಿರುವ ಆ ರಾಕ್ಷಸರು ರಣೋತ್ಸಾದಿಂದ ತಮ್ಮ ಕೈಯಲ್ಲಿಯ ಶಸ್ತ್ರಾಸ್ತ್ರಗಳನ್ನೆಲ್ಲ ತೂರಾಡಿ ಕುಣಿದು ಕುಪ್ಪಳಿಸಿದರು. ತಮ್ಮ ತಮ್ಮ ತೋಳು ತೊಡೆಗಳನ್ನು ತಟ್ಟಿ ಸಿಂಹಗಳಂತೆ ಗರ್ಜಿಸಿದರು. ಮೋಡಗಳಂತೆ ಗುಡುಗಿದರು. ಪ್ರಳಯಕಾಲದ ಸಮುದ್ರದಂತೆ, ಆ ದೈತ್ಯರ ಘೋರ ಸೇನೆಯೆಲ್ಲವೂ ಯುದ್ಧದ ಮದದಿಂದ ಅಬ್ಬರಿಸಿತು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು.*

—o—

**ಮತ್ಸ್ಯ ಉವಾಚ :**

**ಶ್ರುತಸ್ತು ದೈತ್ಯಸೈನ್ಯಸ್ಯ ವಿಸ್ತರೋ ರವಿನಂದನ!**
**ಸುರಾಣಾಮಪಿ ಸೈನ್ಯಸ್ಯ ವಿಸ್ತರಂ ವೈಷ್ಣವಂ ಶೃಣು**
**ಆದಿತ್ಯವಸವೊ ರುದ್ರಾ ಅಶ್ವಿನೌ ಚ ಮಹಾಬಲೌ**
**ಸಬಲಾಃ ಸಾನುಗಾಶ್ಚೈವ ಸನ್ನಹ್ಯಂತ ಯಥಾಕ್ರಮಮ್**
**ಪುರುಹೂತಸ್ತು ಪುರತೊ ಲೋಕಪಾಲಾಃ ಸಹಸ್ರದೃಕ್।**
**ಗ್ರಾಮಣೀಃ ಸರ್ವದೇವನಾಮಾರುರೋಹ ಸುರದ್ವಿಪಮ್॥**

**ಮತ್ಸ್ಯ** :- ಸೂರ್ಯಪುತ್ರನಾದ ಮನುರಾಜನೆ, ದೈತ್ಯಸೇನೆಯ ವಿಸ್ತಾರವನ್ನು ನೀನು ಕೇಳಿದೆ, ಇನ್ನು ಶ್ರೀ ಹರಿಯ ಪಕ್ಷದವರಾದ ದೇವತೆಗಳ ಸೇನಾ ಸನ್ನಾಹವನ್ನು ಬಿತ್ತರಿಸುವೆನು. ಕೇಳು, ಹನ್ನೆರಡು ಆದಿತ್ಯರು, ಎಂಟು ವಸುಗಳು, ಹನ್ನೊಂದು ರುದ್ರರು, ಮತ್ತು ಅಶ್ವಿನೀಕುಮಾರರು ತಮ್ಮ ತಮ್ಮ ಬಲಿಷ್ಠವಾದ ಅನುಚರರ ಪಡೆಯೊಂದಿಗೆ ಹೋರಾಟಕ್ಕೆ ಅಣಿಯಾದರು. ದೇವತಾಗಣದ ಮುಂದಾಳು ಎನಿಸಿದ ಸಾವಿರ ಕಣ್ಣಿನ ಶಚೀಪತಿಯು ಸುರಸೈನ್ಯದ ಮುಂಭಾಗದಲ್ಲಿ ಐರಾವತದ ಮೇಲೆ ಮಂಡಿಸಿದ್ದನು. ದೇವತೆಗಳು ಗಂಧರ್ವರು ಯಕ್ಷರು, ಸಹಸ್ರ ಸಂಖ್ಯೆಯಲ್ಲಿ ಅವನನ್ನು ಹಿಂಬಾಲಿಸಿದ್ದರು. ಅತ್ಯಂತ ತೇಜಸ್ವಿಗಳಾದ ಬ್ರಹ್ಮರ್ಷಿಗಳು, ಅವನನ್ನು ಹೊಗಳಿ ಹರಿಸುತ್ತಿದ್ದರು. ಅವನ ರಥದ ಎಲ್ಲ ಕಡೆಗಳಲ್ಲೂ ಕೆತ್ತಿದ, ಬೆಲೆಬಾಳುವ ಬಗೆಬಗೆಯ ರತ್ನದ ತಬಕಗಳಿಂದ ಮಿಂಚುವ ಕಾಂತಿಪುಂಜ, ಅನೇಕ ಇಂದ್ರಚಾಪಗಳನ್ನು ಮುರಿದು ಕಟ್ಟಿದಂತಾಗಿತ್ತು. ಅವನನ್ನು ಬೆಂಬತ್ತಿ ಬರುವ ದೇವಸೇನೆಯ ಮಧ್ಯ ಮಧ್ಯದಲ್ಲಿ ಮಂಡಲಾಕಾರವಾಗಿ ಬಿಟ್ಟ ಸ್ಥಳಗಳಲ್ಲಿ ನೂರಾರು ಅಪ್ಸರೆಯರು ಕುಣಿದು ವೀರರಸದ ಗೀತೆಗಳನ್ನು ಹಾಡುತ್ತಿದ್ದರು. ದೇವೇಂದ್ರನ ತೇರು ಮೇರು ಪರ್ವತದಂತೆ ಹೊಳೆಯುತ್ತಲಿದ್ದಿತು. ಮಾತಲಿಯು ಆ ದೇವರಾಜನ ರಥವನ್ನು ನಡೆಸುತ್ತಲಿದ್ದನು.

ಆ ದೇವೇಂದ್ರನ ಪಕ್ಕದಲ್ಲಿಯೇ ಯಮದಂಡವನ್ನೆತ್ತಿಕೊಂಡು ತನ್ನ ಸಿಂಹನಾದದಿಂದಲೇ ದೈತ್ಯರ ಹೃದಯಗಳನ್ನು ನಡುಗಿಸುತ್ತ ಯಮಧರ್ಮನು ನಿಂತುಕೊಂಡಿದ್ದನು. ಸೇನೆಯ ಮಧ್ಯದಲ್ಲಿ ಬಿಳಿ ಬಟ್ಟೆಯುಟ್ಟು ಶಂಖ, ಮುತ್ತುಗಳಿಂದ ಮಾಡಿದ ಆಭರಣಗಳನ್ನು ಇಟ್ಟುಕೊಂಡು ಮೃತ್ಯುಪಾಶವನ್ನು ಕೈಯಲ್ಲಿ ಹಿಡಿದು ವರುಣನು ರಣೋತ್ಸಾಹದಿಂದ ನಿಂತುಕೊಂಡಿದ್ದನು. ಯಕ್ಷ ರಾಕ್ಷಸ, ಸೈನ್ಯಗಳಿಂದ ಮಹಾಬಲಿಷ್ಠನಾದ ಕುಬೇರನು ದೈತ್ಯರನ್ನೆಲ್ಲ ನಿರ್ಮೂಲಮಾಡುವ ಪ್ರತಿಜ್ಞೆಗೈದು ಮುಂಚೂಣಿಯಲ್ಲಿ ಗದೆಯನ್ನು ಎತ್ತಿ ಹಿಡಿದು, ಪುಷ್ಪಕ ವಿಮಾನದಲ್ಲಿ ಸನ್ನದ್ಧನಾಗಿದ್ದನು. ಆ ಸೇನೆಯ ಪೂರ್ವಭಾಗವನ್ನು ದೇವೇಂದ್ರನು, ದಕ್ಷಿಣಭಾಗವನ್ನು ಯಮ, ಪಶ್ಚಿಮಭಾಗವನ್ನು ವರುಣನು ಕುಬೇರನು ಉತ್ತರಭಾಗವನ್ನು ಸೇನಾಪತಿಗಳಾಗಿ ಸಂರಕ್ಷಿಸುತ್ತಿದ್ದರು.

ಮಧ್ಯದಲ್ಲಿ ಮೇರು ಪರ್ವತವನ್ನು ಪ್ರತಿದಿನವೂ ಸುತ್ತು ಹಾಕುವ ಏಳು ಕುದುರೆಗಳನ್ನು ಹೂಡಿದ ಬೆಂಕಿಯಂತೆ ಪ್ರಜ್ವಲಿಸುವ ತನ್ನ ರಥವನ್ನು ಏರಿಕೊಂಡು ಸೂರ್ಯ ನಾರಾಯಣನು ಸಂಚರಿಸುತ್ತಿದ್ದನು. ಜಗತ್ತನ್ನೇ ಆಹ್ಲಾದಗೊಳಿಸುವ ಚಂದ್ರನು ಅಚ್ಚಬಿಳಿಬಣ್ಣದ ಕುದುರೆಗಳನ್ನು ಹೂಡಿದ ಸುಂದರವಾದ ರಥದಲ್ಲಿ ಕುಳಿತುಕೊಂಡು, ಮಂಜು ಹಾಗೂ ತಣ್ಣಗಿನ ನೀರುಗಳನ್ನು ತನ್ನಆಯುಧಗಳನ್ನಾಗಿ ಸಿದ್ಧಪಡಿಸಿಕೊಂಡು ಯುದ್ಧಕ್ಕೆ ಬಂದು ಇಳಿದಿದ್ದನು. ಅಗ್ನಿ ದೇವನು ತನ್ನ ಪ್ರಜ್ವಲಿಸುವ ಜ್ವಾಲಾಮಾಲೆಗಳ ಅಸ್ತ್ರಗಳನ್ನು ಹಿಡಿದುಕೊಂಡು, ಶತ್ರುಮರ್ದನಕ್ಕಾಗಿ ಉತ್ಸುಕನಾಗಿದ್ದನು. ದೈತ್ಯ ಶತ್ರುಗಳನ್ನು ಬಿರುಗಾಳಿ ಸುಂಟರಗಾಳಿಗಳಿಂದ ಹಾರಿಸಿ ಬಿಡಬೇಕೆಂದು ಹುರುಪಿನಿಂದ ವಾಯು ದೇವನು ಭರದಿಂದ ಬೀಸುವ ಬಯಕೆಯನ್ನಾಂತು ನಿಂತುಕೊಂಡಿದ್ದನು. ಸರ್ಪಜಾತಿಯ ಒಡೆಯರು ದೇವತೆಗಳ ಬಾಣಗಳಂತೆ ಹೋಗಿ, ದೈತ್ಯರನ್ನೆಲ್ಲಾ ಕಚ್ಚಿ ಚುಚ್ಚಿ ತಮ್ಮ ವಿಷದಿಂದಲೇ ಕೊಂದು ಹಾಕಬೇಕೆಂದು, ಹೆಡೆ ಬಿಚ್ಚಿ ನಾಲಿಗೆ ತೆಗೆದು ನಿಂತುಕೊಂಡಿದ್ದರು. ಇದರಂತೆ ಉಳಿದ ಕೋಟಿ ಕೋಟಿ ದೇವತೆಗಳು ದೊಡ್ಡ ದೊಡ್ಡ ಗುಡ್ಡಗಳನ್ನು ಅನೇಕ ಪರ್ವತಗಳ ಶಿಖರಗಳನ್ನು ಹಾಗೂ ಹೆಮ್ಮರಗಳನ್ನು ಕೈಯಲ್ಲಿ ಹಿಡಿದುಕೊಂಡು ದೈತ್ಯರನ್ನು ಹೊಡೆದು ಬಡೆದು ಕೊಲ್ಲಬೇಕೆಂದು ತವಕದಿಂದ ದೈತ್ಯ ಸೇನೆಯ ಎದುರು ಉಪಸ್ಥಿತರಾದರು.

ಈ ಎಲ್ಲ ದೇವಗಣದ ಮುಂಭಾಗದಲ್ಲಿ ಜಗಜ್ಜನ್ಮಾದಿಕಾರಣನೂ, ಯಜ್ಞಪತಿಯೂ ಸರ್ವಶತ್ರುವಿನಾಶಕನೂ ಆದ ಸಾಕ್ಷಾತ್ ಶ್ರೀ ಹರಿಯು ಉದಯ ಪರ್ವತದಿಂದ ಅದೇ ಉದಿಸುವ ಸೂರ್ಯನನ್ನೇ ಎತ್ತಿಕೊಂಡು ತಂದಂತಿರುವ ತನ್ನ ಸುದರ್ಶನ ಚಕ್ರವನ್ನು ತಿರುಗಿಸುತ್ತ ನಿಂತುಕೊಂಡಿದ್ದನು. ಅವನ ಎಡಗೈಯಲ್ಲಿ ದೈತ್ಯರಿಗೆ ಕಾಲದಂಡ ರೂಪವಾದ ಗದೆ ಹೊಳೆಯುತ್ತಿತ್ತು. ಉಳಿದ ಕೈಗಳಲ್ಲಿ ಶಾರ್ಙ್ಗ ಎಂಬ ಧನುಸ್ಸು, ಪದ್ಮ ಮುಂತಾದವುಗಳು ಹೊಳೆಯುತ್ತಿದ್ದವು. ಬಾಯಿಯಲ್ಲಿಹರಿವ ಹಾವನ್ನು ಕಚ್ಚಿಹಿಡಿದ ಗರುಡನ ಹೆಗಲ ಮೇಲೆ, ಆರೂಢನಾಗಿ ದಾನವಧ್ವಂಸಕ್ಕಾಗಿ ಹರಿಯು ಹೊರಟಿದ್ದನು. ಬ್ರಹ್ಮಜ್ಞಾನಿಗಳಾದ ಅನೇಕ ಮಹರ್ಷಿಗಳು ವೇದ ಮಂತ್ರಗಳಿಂದ ಆ ಭಗವಂತನನ್ನು ಹೊಗಳಿ ಹಾಡುತ್ತಿದ್ದರು. ದೇವಸೇನೆ ಎಲ್ಲವೂ ಆ ಪರಮಾತ್ಮನನ್ನು ಬೆಂಬಲಿಸಿ, ರಣರಂಗಕ್ಕೆ ಇಳಿಯಿತು. ಕುಬೇರ, ಯಮ, ವರುಣ, ದೇವೇಂದ್ರ ಮುಂತಾದ ಚತುರ ಸೇನಾಪತಿಗಳ ನಾಯಕತ್ವದಲ್ಲಿ ಉಕ್ಕಿ ಬರುವ ಸಾಗರದಂತೆ, ಅಪರಂಪಾರ ಸುರಸೇನೆಯೆಲ್ಲವೂ ವಿಷ್ಣು ಪಕ್ಷದಲ್ಲಿ ನಿಂತು, ಯುದ್ಧಕ್ಕೆ ಸನ್ನದ್ಧವಾಗಿ ನಿಂತುಕೊಂಡಿತು.

''ಸ್ವಸ್ತ್ಯಸ್ತು ದೇವೇಭ್ಯಃ'' (ದೇವತೆಗಳಿಗೆ ಜಯವಾಗಲಿ) ಎಂದು ಬೃಹಸ್ಪತಿಯು ಘೋಷಿಸಿದನು. ''ಸ್ವಸ್ತ್ಯಸ್ತು ದಾನವಾನಿಕೇ'' ದಾನವ ಸೈನ್ಯಕ್ಕೆಲ್ಲ ಗೆಲುವಾಗಲಿ'' ಎಂದು ದೈತ್ಯಗುರು ಶುಕ್ರಾಚಾರ್ಯರು ಗರ್ಜಿಸಿದರು. ತಮ್ಮ ತಮ್ಮ ಗುರುಗಳ ಈ ಯುದ್ಧದ ಆಜ್ಞೆಯನ್ನು ಕೇಳಿದ ಕೂಡಲೇ ಎರಡೂ ಪಕ್ಷದ ಸೈನಿಕರು ಒಮ್ಮೆಲೆ ಒಬ್ಬರ ಮೇಲೆ ಒಬ್ಬರು ಬಿದ್ದು ಹೋರಾಡ ತೊಡಗಿದರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಪ್ಪತ್ತೈದನೆಯ ಅಧ್ಯಾಯ ಮುಗಿದುದು.*

—o—

ಸ್ತ್ರೀ ಸಂಪರ್ಕವಿಲ್ಲದೆ ಮಗನನ್ನು ಹಡೆದ, ಉರ್ವ ಮತ್ತು ಔರ್ವ ಮುನಿಗಳ ವಿಚಿತ್ರ ಚರಿತ್ರ

ಅಧ್ಯಾಯ - ೧೭೬

**ಮತ್ಸ್ಯ ಉವಾಚ :**

**ತಾಭ್ಯಾಂ ಬಲಾಭ್ಯಾಂ ಸಂಜಜ್ಞೇ ತುಮುಲೋ ವಿಗ್ರಹಸ್ತದಾ**
**ಸುರಾಣಾಮಸುರಾಣಾಂ ಚ ಪರಸ್ಪರ ಜಯೈಷಿಣಾಮ್॥**

**ಮತ್ಸ್ಯ** :- ಆ ದೇವದಾನವರ ಸೈನಿಕರ ನಡುವೆ ಒಳ್ಳೇ ತುರುಸಿನಹೋರಾಟ ನಡೆಯಿತು. ಇಬ್ಬರಿಗೂ ಗೆಲ್ಲುವ ಹುಮ್ಮಸ್ಸು. ಇಬ್ಬರ ಬಳಿಯಲ್ಲೂ ಬಗೆ ಬಗೆಯ ಘೋರಾಯುಧಗಳು. ಬೆಟ್ಟಗಳು ಬೆಟ್ಟಗಳಿಗೆ ಢಿಕ್ಕಿ ಹೊಡೆದಂತೆ, ಮೋಡ ಮೋಡಗಳು ಸಂಘಟಿಸಿದಂತೆ ಘನಘೋರವಾಗಿ ನಡೆಯಿತು ಆ ದೈತ್ಯದೇವತಾ ಸಂಗ್ರಾಮ. ಅದೊಂದು ಧರ್ಮ ಅಧರ್ಮಗಳ ನಡುವಿನ ಯುದ್ಧದಂತಿತ್ತು. ಎಲ್ಲಿ ನೋಡಿದಲ್ಲೆಲ್ಲ ಬೆಂಕಿಯುಗುಳುವ ಬಾಣಗಳು, ತಲೆಜಜ್ಜುವ ಮುದ್ಗರಗಳು. ಸಾವನ್ನೇ ಕರತರುವ ವನಿಕೆಗಳು. ಅಗ್ನಿ ಜ್ವಾಲೆಗಳನ್ನೇ ಹಬ್ಬಿಸುವ ಅಸ್ತ್ರಗಳು. ವೈರಿದೇಹಗಳನ್ನು ತುಂಡು ತುಣುಕು ಮಾಡುವ ಭಯಂಕರ ಶಸ್ತ್ರಗಳು. ಪ್ರಾರಂಭದಲ್ಲಿ ತ್ರಿಶೂಲ, ಉಕ್ಕಿನ ಸರಳು, ಗದೆ, ಬಾಣ, ಭಲ್ಲ, ಭರ್ಚಿಗಳಿಂದ ದೈತ್ಯರು ಗೆಲುವನ್ನು ಎಳೆದು ತರಬೇಕೆಂಬ ಹುರುಡುಗೂಡಿ ಹಣಾಹಣಿ ಹೋರಾಡಿದ್ದರಿಂದ ದೇವತೆಗಳು ಕಂಗೆಟ್ಟುಹೋದರು. ಅನೇಕ ಸುರಶ್ರೇಷ್ಠರು ಉಕ್ಕಿನ ಗದೆಗಳಿಂದ ಹೃದಯದಲ್ಲಿ ಹೊಡೆತ ತಿಂದು ನೆತ್ತರುಕಾರಿ ನೆಲಕ್ಕೆ ಉರುಳಿದರು. ದೈತ್ಯವೀರರು ಸುತ್ತಲೂ ಹೆಣೆದ ಶರಪಂಜರಗಳಲ್ಲಿ ಸಿಕ್ಕು, ಅವರ ವಿವಿಧ ಸೈನಿಕ ವ್ಯೂಹಗಳಲ್ಲಿ ಹೊಕ್ಕು ನಿಶ್ಶೇಷ್ಪರಾಗಿ ನೆಲಕ್ಕೆ ಕುಸಿದರು. ಮಾಯಾವಿಗಳಾದ ದಾನವರ ಘೋರಾಯುಧಗಳ ಪ್ರಹಾರಗಳನ್ನು ತಾಳಲಾರದೆ, ನಿರ್ಜರರೆಲ್ಲರೂ ನಿರ್ಬಲರಾಗಿ ಬಿದ್ದುಬಿಟ್ಟರು.

ಅದನ್ನು ನೋಡಿ, ದೇವೇಂದ್ರನು ತನ್ನ ವಜ್ರಾಯುಧವನ್ನು ಬೀಸಿ ದೈತ್ಯರ ಶಸ್ತ್ರಾಸ್ತ್ರಗಳನ್ನೆಲ್ಲ ತುಂಡರಿಸಿ ಹಾಕಿ, ತಾಮಸಾಸ್ತ್ರವನ್ನು ದೈತ್ಯಸೇನೆಯ ಮೇಲೆ ಉಪಯೋಗಿಸಿದನು. ಅದರಿಂದ ದಾನವ ಸೇನೆಯ ಸುತ್ತಲೂ ಕಪ್ಪು ಕತ್ತಲೆಯು ಹೆಪ್ಪುಗಟ್ಟಿ, ದೈತ್ಯರಿಗೆ ತಮ್ಮವರು ಯಾರು ವೈರಿಗಳು ಯಾರೆಂಬುದು ಗೊತ್ತಾಗದೆ ತಮ್ಮ ದೈತ್ಯ ಸೈನಿಕರನ್ನೇ ಕೈಗೆ ಬಂದಂತೆ ಹೊಡೆಯತೊಡಗಿದರು. ದೇವೇಂದ್ರನ ವಜ್ರಾಯುಧದಿಂದ ದೈತ್ಯರ ಮಾಯಾಜಾಲಗಳೆಲ್ಲವೂ ಮಣ್ಣುಮುಕ್ಕಿ ಹೋದದ್ದರಿಂದ ದೇವತೆಗಳು ಉತ್ಸಾಹಿತರಾಗಿ ದೈತ್ಯ ಸೈನಿಕರನ್ನು ಕಡಿದು ಕೊಚ್ಚಿ ಹಾಕತೊಡಗಿದರು.

ದಾನವರ ಈ ಆಕಸ್ಮಿಕ ಪರಾಭವಕ್ಕೆ ದೇವೇಂದ್ರನ ತಾಮಸಾಸ್ತ್ರವೇ ಕಾರಣವೆಂದರಿತು ಮಯಾಸುರನು ಔರ್ವಾಸ್ತ್ರವನ್ನು ಪ್ರಯೋಗಿಸಿದನು. ಆ ಔರ್ವಾಗ್ನಿಯಿಂದ ದೇವೇಂದ್ರನ ತಾಮಸಾಸ್ತ್ರದಿಂದ ಉಂಟಾದ ಕತ್ತಲೆ ಹರಿದು ಬೆಳಕು ಬಿದ್ದು ದೈತ್ಯರೆಲ್ಲರೂ ಎದ್ದು ಯುದ್ಧಕ್ಕೆ ಸಿದ್ಧರಾದರು. ಆದರೆ ದೇವಸೈನಿಕರು ಮಾತ್ರ

ಆ ದಿವ್ಯಾಸ್ತ್ರದ ಝಳ ತಾಕಿ ಭಯಂಕರ ಉರಿಯ ಜ್ವಾಲೆಗಳಿಂದ ಬೇಯತೊಡಗಿದರು. ಅದನ್ನು ಕಂಡು, ದೇವೇಂದ್ರನು ವರುಣನನ್ನು ಕರೆದು,

"ಈ ಪ್ರಖರವಾದ ಅಸ್ತ್ರವು ಯಾವುದು? ಅದು ಇಷ್ಟು ಉಲ್ಬಣವಾಗಲು ಕಾರಣವೇನು?" ಎಂದು ಕೇಳಿದನು, ಆಗ ವರುಣನು ಇಂತು ವಿಜ್ಞಾಪಿಸಿದನು.

"ದೇವರಾಜಾ, ಪೂರ್ವಕಾಲದಲ್ಲಿ 'ಉರ್ವ' ಎಂಬ ಬ್ರಹ್ಮರ್ಷಿಯು ಇದ್ದನು. ಅವನಿಗೆ ಒಬ್ಬನೇ ಒಬ್ಬ ಮಗ. ಅವನ ಹೆಸರು ಔರ್ವ. ಅವನು ಬಾಲನಿರುವಾಗಲೇ ಘೋರ ತಪಸ್ಸನ್ನು ಮಾಡಿದನು. ಅದರಿಂದ ಎಳೆವರೆಯದಲ್ಲಿಯೇ ಅವನಲ್ಲಿ ಬ್ರಹ್ಮ ತೇಜಸ್ಸು ಸಂಚಿತವಾಗಿತ್ತು, ಅವನು ಪ್ರಬುದ್ಧನಾದ ಬಳಿಕ, ಇನ್ನೂ ಘೋರವಾದ ತಪಸ್ಸನ್ನು ಕೈಕೊಂಡನು, ಅವನ ತಪಸ್ಸಿನ ತೇಜೋವೃದ್ಧಿಯಿಂದ ಪ್ರಪಂಚವೆಲ್ಲವೂ ಸುಡತೊಡಗಿತು. ಆಗ ದೇವತೆಗಳೂ, ಹಿರಣ್ಯಕಶಿಪುವೂ ಅವನು ಇದ್ದಲ್ಲಿಗೆ ಬಂದು ಬಾಗಿ ಬಿನ್ನವಿಸಿದರು.

"ಋಷಿ ಕುಮಾರ, ನಿನಗೆ ಇನ್ನೂ ಎಳೆಯ ವಯಸ್ಸು, ಈಗಲೇ ಇಂತಹ ಘೋರವಾದ ತಪೋನುಷ್ಠಾನವನ್ನು ಕೈಕೊಂಡು ದೇಹವನ್ನು ಏಕೆ ದಂಡಿಸುತ್ತಿರುವೆ? ನಿನ್ನ ವಂಶದಲ್ಲಿ ನಿಮ್ಮ ತಂದೆಗೆ ನೀನೊಬ್ಬನೇ ಗಂಡು ಮಗುವು. ಬ್ರಹ್ಮಜ್ಞಾನಿಗಳ ವಂಶವು ಬೆಳೆಯುವುದು ಲೋಕದ ಹಿತದ ದೃಷ್ಟಿಯಿಂದ ಅತ್ಯವಶ್ಯ. ನೀನು ಮದುವೆ ಯಾಗದೆ ಹೀಗೆಯೇ ನೈಷ್ಠಿಕ ಬ್ರಹ್ಮಚರ್ಯ ವ್ರತದಿಂದ ತಪಸ್ಸನ್ನು ಮಾಡತೊಡಗಿದರೆ ಮಹಾತಪಸ್ವಿಗಳೂ, ಬ್ರಹ್ಮವರ್ಚಸ್ವಿಗಳೂ ಆದ ನಿಮ್ಮ ಮುನಿಕುಲವು ಇಲ್ಲಿಗೆ ನಿಂತಂತಾಗುವದು. ಇದು ಜಗತ್ತಿಗೆ ದೊಡ್ಡ ಹಾನಿ. ಲೋಕ ಕಲ್ಯಾಣಕ್ಕಾಗಿ ನಿಮ್ಮ ಮನೆತನವು ಯಾವಾಗಲೂ ನಿನ್ನಂತಹ ಬ್ರಹ್ಮಜ್ಞಾನಿಗಳ ಸಂತತಿಯನ್ನು ಬೆಳೆಸಿ, ಜಗತ್ತಿಗೆ ನೀಡುತ್ತಿದ್ದರೆ, ಎಲ್ಲರಿಗೂ ಕ್ಷೇಮ. ಆದುದರಿಂದ ತಪೋಬಲದಿಂದ ಬ್ರಹ್ಮದೇವರಂತೆ ಮಹಾಮಹಿಮೋಪೇತನಾಗಿ ಮೆರೆಯುವ ನೀನು ಮದುವೆಯಾಗಿ ನಿನ್ನಂತೆಯೇ ತೇಜಸ್ವಿಯಾದ ಒಬ್ಬ ಬ್ರಹ್ಮರ್ಷಿಯನ್ನು ಹಡೆದು ಮಾನವ ಜನಾಂಗಕ್ಕೆ ಕಾಣಿಕೆಯಾಗಿ ನೀಡು." ಹಿರಿಯ ಮುನಿಗಳ ಈ ಮಾತುಗಳನ್ನು ಕೇಳಿ ಆ ಔರ್ವ ಋಷಿಯು ಗಹಗಹಿಸಿ ನಕ್ಕು, ಆ ತಪೋವೃದ್ಧರನ್ನೆಲ್ಲ ಜರಿದು ನುಡಿದನು.

"ಹಿರಿಯ ಮುನಿಗಳೆ, ನಿಮಗೆ ತುಸು ತಿಳುವಳಿಕೆ ಕಡಿಮೆ. ಧರ್ಮ ರಹಸ್ಯವನ್ನೆಲ್ಲ ಮುಚ್ಚಿ ಈಗ ನನ್ನೊಡನೆ ಮಾತನಾಡುತ್ತಿರುವಿರಿ. ನೀವು ಸಜ್ಜನರಾದರೂ ನಿಮ್ಮ ಮಾತು ಮಾತ್ರ ಸಜ್ಜನ ಸಮ್ಮತವಾಗಿಲ್ಲ. ಮುನಿಗಳ ಮುಖ್ಯವಾದ ಧರ್ಮವೆಂದರೆ ಅರಣ್ಯದಲ್ಲಿದ್ದು, ಕಂದ ಮೂಲ ಫಲಗಳನ್ನು ತಿಂದು ತಪ್ಪಸ್ಸನ್ನುಮಾಡುವುದು; ಮದುವೆಯಾಗುವುದಲ್ಲ. ಬ್ರಹ್ಮಜ್ಞಾನಿಗಳ ಮನೆತನದಲ್ಲಿ ಹುಟ್ಟಿದ ಬ್ರಾಹ್ಮಣನು ಬ್ರಹ್ಮಚರ್ಯೆಯಲ್ಲಿದ್ದುಕೊಂಡು ತಪಸ್ಸನ್ನುಮಾಡಿದರೆ ಬ್ರಹ್ಮದೇವರಿಗೂ ಬಗ್ಗದಂತಹ ಶಕ್ತಿಯನ್ನು ಪಡೆಯಬಲ್ಲ. ಬ್ರಹ್ಮಚರ್ಯೆಯ ಮೂಲಕವೇ ತಪಸ್ಸು. ಬ್ರಾಹ್ಮಣರಿಗೆ ಬ್ರಾಹ್ಮಣತ್ವ ಬರುವುದು ಬ್ರಹ್ಮಚರ್ಯದಿಂದಲೇ. ಬ್ರಹ್ಮಚರ್ಯೆಯ ಮಹಿಮೆಯನ್ನು ಹಿಂದಿನ ಬ್ರಹ್ಮಜ್ಞಾನಿಗಳು ಹೀಗೆ ಹೇಳಿದ್ದಾರೆ.

ಬ್ರಹ್ಮಚರ್ಯೇ ಸ್ಥಿತಂ ಧೈರ್ಯಂ ಬ್ರಹ್ಮಚರ್ಯೇ ಸ್ಥಿತಂ ತಪಃ।
ಯೇ ಸ್ಥಿತಾ ಬ್ರಹ್ಮಚರ್ಯೇಷು ಬ್ರಾಹ್ಮಣಾ ದಿವಿ ಸಂಸ್ಥಿತಾಃ॥

**ನಾಸ್ತಿ ಯೋಗಂ ವಿನಾಸಿದ್ಧಿರ್ನವಾಸಿದ್ಧಿಂ ವಿನಾ ಯಶಃ।**
**ನಾಸ್ತಿ ಲೋಕೇ ಯಶೋಮೂಲಂ ಬ್ರಹ್ಮಚರ್ಯಾತ್ ಪರಂ ತಪಃ॥**

**ಯೋ ನಿಗೃಹ್ಯೇಂದ್ರಿಯ ಗ್ರಾಮಂ ಭೂತಗ್ರಾಮಂ ಚ ಪಂಚಕಮ್।**
**ಬ್ರಹ್ಮಚರ್ಯಂ ಸಮಾಧತ್ತೇ ಕಿಮತಃ ಪರಮಂ ತಪಃ॥**

**ಅಯೋಗೇ ಕೇಶಧರಣಮಸಂಕಲ್ಪೇ ವ್ರತಕ್ರಿಯಾ।**
**ಅಬ್ರಹ್ಮಚರ್ಯೇ ಚರ್ಯಾ ಚ ತ್ರಯಂ ಸ್ಯಾದ್ ದಂಭಸಂಜ್ಞಕಮ್॥**

ಧೈರ್ಯವು ಬರುವದು ಬ್ರಹ್ಮಚರ್ಯದಿಂದ. ತಪಸ್ಸು ಸಿದ್ಧಿಸುವುದು ಬ್ರಹ್ಮಚರ್ಯದಿಂದ. ಹಿಂದೆ ಬ್ರಹ್ಮಚರ್ಯವನ್ನು ಪಾಲಿಸಿದವರೆಲ್ಲ ಇಂದು ಸ್ವರ್ಗದಲ್ಲಿ ಸುಖದಿಂದ ಇರುತ್ತಾರೆ. ಯೋಗವಿಲ್ಲದೆ ಸಿದ್ಧಿಯಿಲ್ಲ. ಸಿದ್ಧಿಯಿಲ್ಲದೆ ಕೀರ್ತಿಯಿಲ್ಲ. ಆ ಕೀರ್ತಿಗೆ ಮೂಲ ತಪಸ್ಸು. ಬ್ರಹ್ಮಚರ್ಯವಿಲ್ಲದೆ, ತಪಸ್ಸಿಲ್ಲ. ಬ್ರಹ್ಮಚರ್ಯೆಯೇ ತಪಸ್ಸಿನ ಮೂಲ. ಬ್ರಹ್ಮಚರ್ಯೆಯೇ ತಪಸ್ಸು. ಅದಕ್ಕಿಂತ ಮಿಗಿಲಾದ ತಪಸ್ಸು ಯಾವುದಿದೆ? ಬ್ರಹ್ಮಚರ್ಯದಿಂದ ಎಲ್ಲ ಇಂದ್ರಿಯಗಳನ್ನು ನಿಯಂತ್ರಿಸಿ, ಪಂಚಮಹಾಭೂತಗಳನ್ನು ಮತ್ತು ಪಂಚೇಂದ್ರಿಯಗಳನ್ನು ಗೆದ್ದು, ಅಖಂಡ ಬ್ರಹ್ಮಚರ್ಯ ಎಂಬ ವ್ರತವನ್ನು ಮಾಡುವದೇ ತಪಸ್ಸುಎನಿಸುತ್ತದೆ. ಯಾವುದೇ ವ್ರತಾನುಷ್ಠಾನಗಳ ಉದ್ದೇಶವಿಲ್ಲದೇ ಕೂದಲು ಬೆಳೆಸುವುದು ವ್ಯರ್ಥ. ಸಂಕಲ್ಪ ಮಾಡದೇ ವ್ರತ ಮೊದಲಾದ ಸತ್ಕಾರ್ಯಗಳನ್ನು ಮಾಡುವದು ವಿಫಲ. ಅದರಂತೆ ಬ್ರಹ್ಮಚರ್ಯವಿಲ್ಲದೆ ಧರ್ಮ, ಕರ್ಮಗಳ ಆಚರಣೆಯು ವ್ಯರ್ಥವೇ ಸರಿ. ಇದೆಲ್ಲವೂ ಪ್ರತಿಷ್ಠೆಗಾಗಿ ಮಾಡಿದ ಡಂಭಾಚಾರ ಎನಿಸುತ್ತದೆ. ಸಂತಾನಕ್ಕಾಗಿ ಮದುವೆ ಮಾಡಿಕೊಳ್ಳಬೇಕೆಂದು ನೀವು ಹೇಳಿದಿರಿ. ಆದರೆ ಈ ಮಾತು ಶುದ್ಧ ಸುಳ್ಳು. ಸಂತಾನಕ್ಕೂ ಮದುವೆಗೂ ಏನು ಸಂಬಂಧ ? ಮಕ್ಕಳನ್ನು ಪಡೆಯ ಬೇಕಾದರೆ ಮಡದಿಯೇ ಏಕೆ ಬೇಕು? ಹಿಂದೆ ಬ್ರಹ್ಮದೇವರು ಕೇವಲ ತಮ್ಮ ಮಾನಸ ಸೃಷ್ಟಿಯಿಂದಲೇ ಬ್ರಹ್ಮರ್ಷಿಗಳನ್ನು ಪಡೆಯಲಿಲ್ಲವೇ? ಆಗ ಬ್ರಹ್ಮದೇವರು ಸ್ತ್ರೀ ಸಂಪರ್ಕವನ್ನು ಎಲ್ಲಿ ಮಾಡಿದ್ದರು? ಬ್ರಹ್ಮದೇವರ ಈ ಮಾನಸಸೃಷ್ಟಿಯ ದೃಷ್ಟಾಂತ ದಿಂದಾದರೂ ಮಕ್ಕಳಾಗಬೇಕಾದರೆ, ಮದುವೆ ಮಾಡಿಕೊಳ್ಳಲೇಬೇಕು. ಎಂಬ ಮಾತು ಅಬದ್ಧ. ಎಂದು ನೀವು ತಿಳಿಯಿರಿ. ಮಡದಿಯಿಲ್ಲದೆ ಮದುವೆಯಾಗದೆ, ಬ್ರಹ್ಮದೇವರಂತೆ ಬೇಕಾದಷ್ಟು ಮಕ್ಕಳನ್ನು ಪಡೆಯಬಹುದು. ನಿಮ್ಮಲ್ಲಿ ತಪಶ್ಶಕ್ತಿಯಿಲ್ಲವೆ? ಆ ತಪಸ್ ಶಕ್ತಿಯಿದ್ದುದಾದರೆ ಬ್ರಹ್ಮದೇವರಂತೆ ಮಾನಸಸೃಷ್ಟಿ ಮಾಡಿರಿ. ನಿಜವಾದ ತಪಸ್ವಿಗಳು ತಮ್ಮ ಸಂಕಲ್ಪಸಿದ್ಧಿಯಿಂದಲೇ ಮಾನಸಪುತ್ರರನ್ನು ಹೆಣ್ಣಿನ ಸಂಪರ್ಕವಿಲ್ಲದೆ ಪಡೆಯಬೇಕು. ಇದರಿಂದ ತಪಸ್ಸೂ ಹಾಳಾಗುವುದಿಲ್ಲ. ಅತ್ಯಂತ ತೇಜಸ್ವಿಯಾದ ಬ್ರಹ್ಮಜ್ಞಾನವುಳ್ಳ ಸಂತಾನವು ಅಭಿವೃದ್ಧಿಯಾಗುವದು. ನಿಮಗೆ ಅಂತಹ ಧೈರ್ಯವಿಲ್ಲದಿದ್ದರೆ ನಾನು ಹೆಣ್ಣಿನ ಸಂಪರ್ಕವಿಲ್ಲದೆ, ಕೇವಲ ನನ್ನ ಕ್ರತು ಶಕ್ತಿಯಿಂದಲೇ ಒಳ್ಳೇ ಉಜ್ವಲವಾದ ದಿವ್ಯ ಮಗನನ್ನು ಹಡೆದು ತೋರಿಸುತ್ತೇನೆ. ನೈಷ್ಠಿಕ ಬ್ರಹ್ಮಚರ್ಯವ್ರತಕ್ಕೆ ಇನಿತೂ ಲೋಪವಿಲ್ಲದಂತೆ ಮಾನಸ ಸೃಷ್ಟಿಯನ್ನು ಮಾಡುವ '**ಆರ್ಷ**' ಪದ್ಧತಿಯನ್ನು ನೀವು ಈಗ ನೋಡಿರಿ''

ಹೀಗೆ ಹೇಳಿ, ಮಹಾ ತಪಸ್ವಿಯಾದ ಆ ಉರ್ವಮುನಿಯು ತನ್ನ ತೊಡೆಯನ್ನು ಧಗಧಗಿಸುವ, ನಿಗಿನಿಗಿ ಕೆಂಡವುಳ್ಳ ಹೋಮಕುಂಡದಲ್ಲಿ ಇಟ್ಟನು. ಮತ್ತು ಒಂದು ದರ್ಭವನ್ನು ತೆಗೆದುಕೊಂಡು, ಆ ತನ್ನ ತೊಡೆಯನ್ನು ಕಡೆದನು. ಕೂಡಲೇ, ಅವನ ತೊಡೆಯನ್ನು ಸೀಳಿಕೊಂಡು ತೇಜಃಪುಂಜನಾದ ಓರ್ವ ಅಗ್ನಿ ಕುಮಾರನು ಅಲ್ಲಿಯೇ ಹುಟ್ಟಿದನು. ಹುಟ್ಟಿದ ಕೂಡಲೇ ಆ ಮಗು, ಯಾರನ್ನು ಸುಡಲಿ ಯಾರನ್ನು ಬಿಡಲಿ, ಅನ್ನುವಂತೆ ಉರಿಯುತ್ತಲೇ ಎದ್ದು ಕುಳಿತು ತನ್ನ ತಂದೆಗೆ ತೊದಲು ನುಡಿಯಿಂದ ಕೇಳಿದನು.

"ಅಪ್ಪಾ ಹಸಿವು, ಭಯಂಕರ ಹಸಿವೆ. ಈ ಜಗತ್ತನ್ನೆಲ್ಲಾ ಸುಟ್ಟು ತಿಂದು ಬಿಡುತ್ತೇನೆ. ನನ್ನನ್ನು ಬಿಡು. ಈ ಪ್ರಪಂಚವನ್ನು ತಿನ್ನಗೊಡು. ಈ ಘೋರವಾದ ಹಸಿವೆಯನ್ನು ನಾನು ತಾಳಲಾರೆ." ಹೀಗೆ ಹೇಳಿ, ಆ ಮಗುವು ಎದ್ದು ನಿಂತುಕೊಂಡಾಗ, ಅವನ ಮೈಯಿಂದ ತೂರಿಬಂದ ಉರಿಯ ತೆರೆಗಳಿಂದ ದಶದಿಕ್ಕುಗಳೂ ದಹಿಸತೊಡಗಿದವು. ಎಲ್ಲೆಡೆಗೂ ಉರಿನಾಲಿಗೆ ಚಾಚಿ, ಎಲ್ಲ ಪ್ರಾಣಿಗಳನ್ನು ಸುಡುತ್ತ ಅಗ್ನಿಕುಮಾರನು ಬಾಯಿ ತೆರೆದು ನಿಂತನು. ಇದೇ ವೇಳೆಯಲ್ಲಿ ಅಲ್ಲಿಗೆ ಬ್ರಹ್ಮದೇವರು ಬಂದು, ಆ ಹುಡುಗನ ತಂದೆಯಾದ '**ಉರ್ವ**' ಋಷಿಗೆ ಹೇಳಿದನು- "ಭೂಮಂಡಲವನ್ನೇ ಸುಡತೊಡಗಿದ ಈ ನಿನ್ನ ಸಿಡಿಲಿನ ಮರಿಯನ್ನು ತಡೆಹಿಡಿ, ಪ್ರಾಣಿಗಳ ಮೇಲೆ ದಯೆ ಬೀರು. ನಿನ್ನ ಮಗನಿಗೆ ಒಳ್ಳೇ ಸ್ಥಾನವನ್ನು ಕಲ್ಪಿಸಿ ಕೊಡುವೆ. ಮೊದಲು ನೀನು ಬ್ರಹ್ಮಾಂಡಗ್ರಾಸಿಯಾದ ಈ ನಿನ್ನ ಸರ್ವದಾಹಿ ಕುಮಾರನನ್ನು ಕರೆದುಕೊ."

**ಉರ್ವಮುನಿ :-** ಪೂಜ್ಯ ಬ್ರಹ್ಮದೇವ, ನೀವು ನನ್ನ ಮಗನ ಮೇಲೆ ಅನುಗ್ರಹ ಮಾಡಬೇಕೆಂದು ಬಯಸಿ ಇಲ್ಲಿಗೆ ಬಂದು ಅವನನ್ನು ಕರುಣಿಸಿದ್ದು ನನ್ನ ಭಾಗ್ಯ. ಇದರಿಂದ ನಾನು ಧನ್ಯನಾದೆ. ಇಂದು ಪ್ರಾತಃಕಾಲದಲ್ಲಿ ತಮ್ಮನ್ನು ಕಾಣಬೇಕೆಂಬ ಬಹುದಿನದ ನನ್ನ ಬಯಕೆ ಈಡೇರಿತು. ನನ್ನ ಸುದೈವ. ಪೂಜ್ಯರೆ, ಈ ಅಗ್ನಿಯಂತಿರುವ ನನ್ನ ಮಗನಿಗೆ ಯಾವ ಆಹುತಿ? ಎಂಥ ಆಹಾರ? ಅವನು ಎಲ್ಲಿ ಇರಬೇಕು? ಅವನ ತೇಜಸ್ಸಿಗೆ ತಕ್ಕದಾದ ಅನ್ನಪಾನಾದಿಗಳನ್ನು ತಾವೇ ಕಲ್ಪಿಸಿ ಕೊಡಬೇಕು.

**ಬ್ರಹ್ಮ :-** ಈ ನಿನ್ನ ಮಗನು ಸಮುದ್ರದ ವಡವಾ ಮುಖದಲ್ಲಿ ವಾಸಮಾಡಲಿ. ನಾನು ನಿರ್ಮಿಸಿದ ನೀರೇ ಇವನಿಗೆ ಆಹಾರವಾಗಲಿ. ನಾನು ಬಹುಕಾಲ ಜಲಪಾನ ಮಾಡುತ್ತ ಜಲಗರ್ಭದಲ್ಲಿಯೇ ಇದ್ದೆನು. ಅಂತಹ ಜಲವನ್ನೇ ಇವನಿಗೆ ಆಹುತಿಯನ್ನಾಗಿ ಕೊಡುತ್ತೇನೆ. ಮುಂದೆ ಪ್ರಳಯಕಾಲದಲ್ಲಿ ನಾನು ಅವನು ಇಬ್ಬರೂ ಕೂಡಿ ಎಲ್ಲ ಪ್ರಾಣಿಗಳನ್ನು ದಹಿಸಿ, ಕೃತಕೃತ್ಯರಾಗುತ್ತೇವೆ. ನಿನ್ನ ಮನೆತನದಲ್ಲಿ ಮುಂದೆ, ಇವನಿಂದ ಸಂತಾನವು ಆಗದಿದ್ದರೂ, ಹಿಂದಿನವರ ಸದ್ಗತಿಗೆ ಯಾವ ಆತಂಕವೂ ಆಗದಂತೆ ನಾನು ನೋಡಿಕೊಳ್ಳುತ್ತೇನೆ. ಇಂತಹ ಸತ್ಪುತ್ರನಿಂದ ಮುಂದೆ ಸಂತಾನಾಭಿವೃದ್ಧಿಯು ಆಗದಿದ್ದರೂ. ಇಂದಿನ ವರೆಗೆ ಹುಟ್ಟಿ, ಬಾಳಿ, ಬದುಕಿ ಹೋದ, ಹಿಂದಿನ ಎಲ್ಲ ತಲೆಮಾರಿನವರಿಗೂ ದಿವ್ಯಗತಿ ಆಗುವದರಲ್ಲಿ ಸಂದೇಹವಿಲ್ಲ" ಹೀಗೆ ಹೇಳಿ ಬ್ರಹ್ಮದೇವರು ಎಲ್ಲ ಮಹರ್ಷಿಗಳೊಂದಿಗೆ ಅಲ್ಲಿಂದ ಹೊರಟು ಹೋದರು. ಈ ಅದ್ಭುತವನ್ನು ಕಂಡು ಹಿರಣ್ಯಕಶಿಪುವು ಆ ಊರ್ವಮುನಿಯ ತೊಡೆಯಿಂದ

ಹುಟ್ಟಿದ ಔರ್ವ ಮುನಿಗೆ ಸಾಷ್ಟಾಂಗ ಪ್ರಣಾಮಗೈದ. ಮತ್ತು ಅವರ ತಂದೆಯ ಬಳಿಗೆ ಹೋಗಿ, ಅವರ ಪಾದಾರವಿಂದಗಳಿಗೆ ವಂದಿಸಿ ಭಕ್ತಿಯಿಂದ ಕೇಳಿಕೊಂಡ,

''ಪೂಜ್ಯರೆ, ಇದು ಏನು ಅದ್ಭುತ! ನಿಮ್ಮ ಮಕ್ಕಳಾದ ಈ ಮಹಾ ಮುನಿಗಳ ದಿವ್ಯ ತಪಸ್ಸು ಬ್ರಹ್ಮದೇವರನ್ನೇ ಇಲ್ಲಿಗೆ ಎಳೆದು ತಂದಿತು. ಎಲ್ಲ ಜನರೂ ನಿಮ್ಮ ಚಿರಂಜೀವರ ಲೋಕೋತ್ತರವಾದ ತಪಸ್ಸನ್ನು ಕಂಡು ಬೆಕ್ಕಸ ಬೆರಗಾಗಿ ನಿಂತುಕೊಂಡಿದ್ದಾರೆ. ಸ್ವಾಮಿ; ನಾನು ನಿಮ್ಮ ಶಿಷ್ಯ. ನಿಮ್ಮ ಪುತ್ರರಾದ ಈ ಔರ್ವಮುನಿಗಳ ಪಾದ ಸೇವಕ, ನನ್ನನ್ನು ನಿಮ್ಮ ಭೃತ್ಯ ಎಂದು ಅಂಗೀಕಾರಮಾಡಿ, ತಮ್ಮ ಸೇವೆಗೆ ಅವಕಾಶ ಮಾಡಿಕೊಡಬೇಕು. ನಾನು **'ವಿಶ್ವವಿಜಯಿ'** ಆಗುವಂತೆ ಮಾಡಿದರೆ ತಾವೂ ಪ್ರಪಂಚವನ್ನೇ ಗೆದ್ದಂತಾಗುವುದಿಲ್ಲವೆ? ಶಿಷ್ಯನ ಕೀರ್ತಿ ಗುರುಗಳ ಕೀರ್ತಿಯೇ ಸರಿ.

**ಉರ್ವಮುನಿ :-** ಹಿರಣ್ಯ ಕಶಿಪು, ನಿನ್ನಂತಹ ಶಿಷ್ಯನನ್ನು ಪಡೆದು ನಾನು ಧನ್ಯನಾದೆ. ಇನ್ನು ಮೇಲೆ ನಿನಗೆ ಯಾರಿಂದಲೂ ಭಯವಿಲ್ಲ. ನನ್ನ ಈ ಮಗನು ನಿರ್ಮಿಸಿದ ಅಗ್ನಿಮಯವಾದ ಈ ಮಾಯಾಸ್ತ್ರವನ್ನು ನೀನು ಸ್ವೀಕರಿಸು. ಇದೊಂದು ಸೌದೆಯಿಲ್ಲದೆ ಉರಿಯುವ ಬೆಂಕಿ. ಇದನ್ನು ಯಾರೂ ಜಯಿಸಲಾರರು. ಇದು ನಿನ್ನ ವಂಶವನ್ನೂ ಅನುಚರ ವರ್ಗವನ್ನೂ, ನಿನ್ನನ್ನು ಬೆಂಬಲಿಸಿದ ಎಲ್ಲ ಸೈನಿಕರನ್ನೂ ಸುರಕ್ಷಿತವಾಗಿ ಕಾಪಾಡುವುದು. ನಿನ್ನನ್ನು ವಿರೋಧಿಸಿದ ವೈರಿಗಳನ್ನೆಲ್ಲ ಸುಟ್ಟು ಹಾಕುವುದು.''

ಮಹಾಮುನಿಯ ಈ ಮಾತು ಕೇಳಿ, ಹಿರಣ್ಯ ಕಶಿಪುವಿಗೆ ಭಾರಿ ಹಿಗ್ಗು. ಅವನು ಮನಸ್ಸಿನಲ್ಲಿ ಬಯಸಿದ್ದು, ತಾನಾಗಿಯೇ ದೊರೆತಂತಾಯಿತು. ಆ ತಂದೆ ಮಕ್ಕಳು ಅನುಗ್ರಹಿಸಿ ಕೊಟ್ಟ ಮಾಯಾಸ್ತ್ರವನ್ನು ತೆಗೆದುಕೊಂಡು, ತಾನು ರಾಜ್ಯ ಆಳುವ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದನು.

ಔರ್ವಮುನಿಯು ನಿರ್ಮಿಸಿದ ಆ ಮಾಯಾಸ್ತ್ರಕ್ಕೆ ಔರ್ವಮುನಿಯ ಮೂಲಕ ಔರ್ವಾಸ್ತ್ರವೆಂದು ಹೆಸರು ಬಂದಿದೆ. ಆ ಔರ್ವಾಸ್ತ್ರವು ಯಾರಿಂದಲೂ ಮಣಿಸಲು ಅಶಕ್ಯವಾದದ್ದು, ಆದರೆ, ಹಿರಣ್ಯಕಶಿಪು ಇರುವವರೆಗೆ ಮಾತ್ರ ಅದರಲ್ಲಿ ಅಂತಹ ಶಕ್ತಿಯಿದ್ದಿತು. ಆದರೆ ನರಸಿಂಹ ದೇವರು ಬಂದು ಆ ದೈತ್ಯನನ್ನು ಕೊಂದು ಅವನ ಎಲ್ಲ ಶಸ್ತ್ರಾಸ್ತ್ರಗಳನ್ನು ನಿರ್ವೀರ್ಯಗೊಳಿಸಿದರು. ಅದುದರಿಂದ ಆ ಔರ್ವಾಸ್ತ್ರದಲ್ಲಿ ಆ ಮೊದಲಿನ ತೇಜವಾಗಲಿ, ದಾಹಕ ಶಕ್ತಿ ಆಗಲಿ ಉಳಿಯಲಿಲ್ಲ. ಆದುದರಿಂದ ನೀನು ಈಗ, ಚಂದ್ರನನ್ನು ಸಹಾಯಕ್ಕೆ ಕಳಿಸಿದರೆ, ನಾವಿಬ್ಬರೂ ಹೋಗಿ ಆ ಔರ್ವಾಸ್ತ್ರದ ಮಾಯೆಯನ್ನೆಲ್ಲ ಶಮನಗೊಳಿಸುತ್ತೇವೆ. ಅದರ ಉರಿಯನ್ನೆಲ್ಲ ಆರಿಸಿ ಬಿಡುತ್ತೇವೆ. ಇದರಲ್ಲಿ ಸಂಶಯವಿಲ್ಲ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದನೂರಾಎಪ್ಪತ್ತಾರನೆಯ ಅಧ್ಯಾಯ ಮುಗಿದುದು.*

—o—

## ಚಂದ್ರ ವರುಣರಿಂದ ದೈತ್ಯ ಸಮರ, ದೈತ್ಯರ ಪರಾಭವ

ಅಧ್ಯಾಯ - ೧೭೭

**ಮತ್ಸ್ಯ ಉವಾಚ :**

**"ಏವಮಸ್ತ್ವಿತಿ ಸಂಹೃಷ್ಟಂ ಶಕ್ರಸ್ತ್ರಿದಶ ವರ್ಧನಃ।**
**ಸಂದಿದೇಶಾಗ್ರತಃ ಸೋಮಂ ಯುದ್ಧಾಯ ಶಿಶಿರಾಯುಧಮ್॥**

**ಮತ್ಸ್ಯ** :- ವರುಣನ ಈ ಮಾತುಗಳನ್ನು ಕೇಳಿ, ದೇವೇಂದ್ರನಿಗೆ ಅತ್ಯಂತ ಸಂತೋಷವಾಯಿತು. ಅವನು 'ಹಾಗೇ ಆಗಲಿ' ಎಂದು ಅಂದನು. ತನ್ನ ಎದುರು ನಿಂತಿರುವ ಹಿಮವನ್ನೇ ಆಯುಧವನ್ನಾಗಿ ಪ್ರಯೋಗಿಸಬಲ್ಲ ಚಂದ್ರನನ್ನು ಕುರಿತು ಹೀಗೆ ಹೇಳಿದನು.

"ಚಂದ್ರನೆ, ನೀನು ಹೊರಡು, ವರುಣನಿಗೆ ಸಹಾಯಮಾಡು, ನಿಮ್ಮಿಬ್ಬರ ವೀರ್ಯ, ವಿಕ್ರಮಗಳಿಂದ ದೈತ್ಯರ ನಾಶವಾಗಿ ದೇವತೆಗಳಿಗೆ ಗೆಲುವು ಆಗಲಿಕ್ಕಿದೆ. ನೀನು ನನಗಿಂತಲೂ ಅತ್ಯಂತ ಶೂರನಿರುವೆ. ಜ್ಯೋತಿಶ್ಚಕ್ರಗಳಿಗೆಲ್ಲ ನೀನೇ ಅಧಿಪತಿ. ಸರ್ವಲೋಕಗಳಲ್ಲಿಯ ರಸವೆಲ್ಲವೂ ನಿನ್ನ ಅಧೀನ. ಭೂಮಿಯ ಛಾಯೆಯು ನಿನ್ನಲ್ಲಿ ಬಿದ್ದು, ಮೊಲದಂತೆ, ನಿನ್ನ ಲಾಂಛನವಾಗಿ ಶೋಭಿಸುತ್ತದೆ. ನೀನು ಸೂರ್ಯ ಮಂಡಲಕ್ಕಿಂತ ಮೇಲೆ, ನಕ್ಷತ್ರ ಪುಂಜಗಳ ಉಪರಿಭಾಗದಲ್ಲಿ ನಿಂತು, ಕತ್ತಲೆ ಕಳೆದು ಭೂಮಂಡಲವನ್ನೆಲ್ಲ ಬೆಳಗುವೆ ನಿನ್ನ ಕಾಂತಿಯಿಂದ. ಅಮೃತಕ್ಕೆ ನೀನೇ ಆಧಾರ. ಕಾಂತಿಯ ನೆಲೆ. ಸೋಮರಸದ ಸೆಲೆ. ಕತ್ತಲೆಯ ವೈರಿ. ನಕ್ಷತ್ರಗಳ ನಾಥ. ಇಷ್ಟಾದರೂ ಇಂತಹ ಮಹಾ ಪರಾಕ್ರಮವಿದ್ದರೂ, ನಿನ್ನ ಸ್ವರೂಪವು ಅತ್ಯಂತ ಶಾಂತ-ಸುಂದರ, ಸೌಮ್ಯ-ಭಾಸುರ. ನೀನೀಗ ವರುಣನ ಜೊತೆಗೆ ಹೋಗಿ, ದೈತ್ಯರ ಮಾಯಾಸ್ತ್ರವನ್ನು ಶಮನಗೊಳಿಸು. ದೇವತೆಗಳಿಗೆ ಗೆಲುವು ಬರುವಂತೆ ಮಾಡು."

ದೇವರಾಜನ, ವಚನವನ್ನು ಕೇಳಿ, ಚಂದ್ರನು ಉತ್ಸಾಹದುಂಬಿ ಹೇಳಿದನು "ಸುರಪತಿ, ನೀನು ಹೇಳಿದಂತೆ ಮಾಡುವೆನು, ಇದೋ ಸುರುವಾಯಿತು ನನ್ನ ಮಂಜಿನ ಮಳೆ. ಈ ನಿರಂತರ ಹಿಮವರ್ಷದಿಂದ ಆ ಔರ್ವಾಸ್ತ್ರದ ಉರಿಯನ್ನೆಲ್ಲ ಈಗಲೇ ನಂದಿಸಿ ಬಿಡುತ್ತೇನೆ. ನಮ್ಮ ಸುರ ಸೈನಿಕರನ್ನು ಬೆಂಕಿಯಿಂದ ಸುಡಲು ಹೊರಟ ದಾನವರನ್ನು ನಾನು ಬರಿ ಮಂಜಿನಿಂದಲೇ ಸುಟ್ಟು ಹಾಕುತ್ತೇನೆ. ಈ ನನ್ನ ಕೌತುಕದ ಶಕ್ತಿಯನ್ನು ನೀನು ನೋಡು. ಮದದಿಂದ ಕೊಬ್ಬಿ ಅಬ್ಬರಿಸುವ ಸಿಂಹಗಳಂತಿರುವ ದಾನವರ ಸದ್ದನ್ನೆಲ್ಲ ಈಗಲೇ ಅಡಗಿಸಿ ಬಿಡುತ್ತೇನೆ."

ಹೀಗೆ ಹೇಳಿ, ಚಂದ್ರನು ಒಂದೇ ಸವನೆ ಹಿಮದ ಜಡಿಮಳೆಯನ್ನು ಸುರಿಸ ತೊಡಗಿದನು. ಇದರ ಜೊತೆಗೆ ವರುಣನು ತನ್ನ ಪಾಶಗಳನ್ನು ಬೀಸಿ ದೈತ್ಯ ಭಟರನ್ನೆಲ್ಲ ಸದೆಬಡೆದು ಸಾಯಹೊಡೆಯ ತೊಡಗಿದನು. ಹೀಗೆ ನೀರಿನ ನಾಯಕರಾದ ಆ ಚಂದ್ರವರುಣರ ಭಯಂಕರವಾದ ಹಿಮಪಾತಗಳಿಂದ ದೈತ್ಯರ ಹಿಂಡಿನಲ್ಲಿ ಅಖಂಡವಾಗಿ ಉತ್ಪಾತ ಹಾಗೂ ಘಾತಪಾತಗಳು ನಡೆದವು. ನಾಲ್ಕು ಸಮುದ್ರಗಳೇ

ಎದ್ದು ದಾನವರ ಮೇಲೆ ಬಿದ್ದಂತಾಗಿ ಅವರೆಲ್ಲರೂ ಛಳಿಮಳೆಗಳಿಂದ ಗದಗುಟ್ಟ ನಡುಗ ತೊಡಗಿದರು, ಔರ್ವಾಸ್ತ್ರವು ಎಲ್ಲಿಯೋ ನೆನೆದು ನಿರ್ನಾಮವಾಯಿತು. ಚಂದ್ರನ ಹಿಮವೃಷ್ಟಿಯಿಂದ ಸ್ತಿಮಿತರಾಗಿ ಬರ್ಫಿನಿಂದ ಮೈಯೆಲ್ಲ ಮಂಜುಗಟ್ಟಿದ ದಾನವರ ಮೇಲೆ ವರುಣನ ಮೃತ್ಯುಪಾಶವು ಬಿದ್ದು, ಎಲ್ಲರನ್ನು ಸಂಹರಿಸ ತೊಡಗಿತು.

ಹೀಗೆ ದೈತ್ಯರೆಲ್ಲರೂ ಮಂಜಿನ ಮುಸುಕಿನಲ್ಲಿ ಬಿದ್ದು, ವರುಣ ಪಾಶದಿಂದ ಹತರಾಗುತ್ತಿರುವುದನ್ನು ಕಂಡು, ಮಯ ದಾನವನಿಗೆ ಭಯಂಕರ ಕೋಪ ಬಂದಿತು. ಕೂಡಲೇ ಅವನು ಪಾರ್ವತೀ ಮಾಯೆಯನ್ನು ಪ್ರಯೋಗಿಸಿ; ದೇವತೆಗಳನ್ನೆಲ್ಲ ಸಂಕಟಕ್ಕೆ ಈಡು ಮಾಡಿದನು. ಪಾರ್ವತೀ ಮಾಯೆ ಎಂದರೆ ಪರ್ವತಾಸ್ತ್ರವಿದ್ದಂತೆ. ಹುಲಿ, ಸಿಂಹಗಳು, ಹರಿದಾಡುವ ದೊಡ್ಡ ದೊಡ್ಡ ಗುಡ್ಡಗಳೇ ದೇವತಾ ಸೈನ್ಯದ ಮೇಲೆ ಬಂದು ಬೀಳುತ್ತಿದ್ದವು. ಅದರಿಂದ ಚಂದ್ರವರುಣರ ಮಂಜಿನ ಮಾಯೆಯೆಲ್ಲವೂ ಕರಗಿ ಹೋಯಿತು. ವರುಣನ ಪಾಶಗಳೆಲ್ಲವೂ ಹರಿದು ಹೋದವು. ಪರ್ವತಾಸ್ತ್ರದ ಪ್ರಭಾವದಿಂದ ಬಂಡೆಗಲ್ಲು ಬೀಸಿ ಬಂದವು. ಹೆಮ್ಮರಗಳು ಹಾರಿ ಬಡಿದವು. ಗಿಡದ ಟೊಂಗೆಗಳು ಬಿರುಸಿನಿಂದ ಬೀಸಿ ಬಂದು, ಮೈ ಕೈಗಳಿಗೆಲ್ಲ ಕಲ್ಲುಗಳು ಬಡಿದು ದೇವತೆಗಳೆಲ್ಲ ನೆಲಕ್ಕೆ ಉರುಳತೊಡಗಿದರು. ಹೀಗೆ ಎಲ್ಲ ದೇವತೆಗಳು ದೈತ್ಯರ ಪರ್ವತಾಸ್ತ್ರದಿಂದ ಯುದ್ಧದ ಮಧ್ಯದಲ್ಲಿ ಬಿದ್ದುಕೊಂಡಾಗ, ನಿರ್ವಿಕಾರನಾದ ಶ್ರೀಹರಿಯು ಮಾತ್ರ ಆ ಪರ್ವತಾಸ್ತ್ರಕ್ಕೆ ಮಣಿಯದೆ, ಅದರಿಂದ ಕ್ಷೋಭೆಗೊಳ್ಳದೆ ಅಗ್ನಿ, ಮಾರುತರಿಗೆ, ಈ ಪರ್ವತಾಸ್ತ್ರವನ್ನು ಮುರಿದು ಹಾಕಲು ಅಪ್ಪಣೆ ಕೊಟ್ಟನು.

ಭಗವಂತನ ಆಜ್ಞೆಯಿಂದ ಆ ಅನಲ, ಅನಿಲರು ಅರ್ಥಾತ್ ವಾಯು ಅಗ್ನಿಗಳು ಒಮ್ಮೆಲೆ ಬೆಳೆದು ವಾಯ್ವಸ್ತ್ರ ಅಗ್ನ್ಯಸ್ತ್ರಗಳನ್ನು ಪ್ರಯೋಗಿಸಿ ದೈತ್ಯ ಸೇನೆಯನ್ನೆಲ್ಲ, ನಿಗ್ರಹಿಸತೊಡಗಿದರು. ಗುಡ್ಡ, ಗಿಡಗಳಿಂದ ದೇವಸೇನೆಯನ್ನೆಲ್ಲ, ಪುಡಿಗಟ್ಟುವ ಆ ಪರ್ವತಾಸ್ತ್ರವು ಭಯಂಕರವಾಗಿ ಹತ್ತಿ ಉರಿಯುವ ಕಾಡ್ಗಿಚ್ಚಿನಿಂದ ಸುಟ್ಟು ಬೂದಿ ಆಯಿತು. ಆ ಬೆಳೆಯುವ ಬೆಂಕಿಗೆ ಪೋಷಕವಾಗಿ ಗಾಳಿ ಬೀಸಿ ಆ ದಳ್ಳುರಿಯು ಎಲ್ಲೆಡೆಗೂ ಹಬ್ಬಿ ಗಿಡಬಳ್ಳಿಗಳನ್ನೆಲ್ಲ ಸುಟ್ಟು, ಕಾಡು, ಕಂಟಿಗಳನ್ನೆಲ್ಲ ಬೂದಿಮಾಡಿ, ಬೆಟ್ಟ ಬಯಲುಗಳನ್ನೆಲ್ಲ ಸುಟ್ಟು ಕಮರಿಸಿ ತನ್ನ ಉರಿನಾಲಿಗೆಯಿಂದ ದೈತ್ಯ ವೀರರನ್ನೆಲ್ಲ ಕಬಳಿಸತೊಡಗಿತು. ಇದರಿಂದ ದಾನವರ ಸೇನಾಪಡೆಗಳಲ್ಲಿ ನೋಡಿದಲ್ಲೆಲ್ಲ, ಉರಿಗಾಳಿ, ಬಿರುಗಾಳಿ, ಸುಂಟರಗಾಳಿ, ದೆವ್ವಗಾಳಿ. ಕಣ್ಣು ಕಾಣುವವರೆಗೂ ದಳ್ಳುರಿ, ಕಂಡಲ್ಲೆಲ್ಲ ಕಿಚ್ಚು ಹಬ್ಬಿ ಭೂಮಂಡಲವೆಲ್ಲವೂ ಒಂದು ದೊಡ್ಡ ಅಗ್ನಿಕುಂಡದಂತೆ ಧಗಧಗಿಸ ತೊಡಗಿತು. ಅದರಲ್ಲಿ ದೈತ್ಯರೆಲ್ಲರೂ ದೀಪದ ಹುಳುಗಳಂತೆ ಬಿದ್ದು ಸಾಯತೊಡಗಿದರು.

ದೈತ್ಯರ ಈ ಸೋಲನ್ನು ಕಂಡು ದೇವತೆಗಳೆಲ್ಲರೂ ಮುಕ್ತಕಂಠದಿಂದ ಆ ಪವನ ಪಾವಕರಿಗೆ ಆಜ್ಞೆಯಿತ್ತ ಶ್ರೀಹರಿಯನ್ನು ಕೊಂಡಾಡಿದರು. ಪ್ರಪಂಚದ ತುಂಬೆಲ್ಲ ಧರ್ಮದ ಧ್ವಜವು ಹಾರತೊಡಗಿತು. ಎಲ್ಲ ಕಡೆಗೂ ಯಜ್ಞಯಾಗಾದಿಗಳು ಉತ್ಸಾಹದಿಂದ ಆರಂಭವಾದವು. ಋಷಿ, ಮುನಿಗಳ, ಆಶ್ರಮದಲ್ಲೆಲ್ಲ ಆನಂದಮಯ ವಾತಾವರಣವು ಕಂಡುಬಂದಿತು. ದೈತ್ಯರೆಲ್ಲರೂ ಕಂಗೆಟ್ಟು ಹೋದರು. ಇದನ್ನು ಕಂಡು

ಕಾಲನೇಮಿ ಎಂಬ ಸುಪ್ರಸಿದ್ಧನಾದ ದೈತ್ಯನಿಗೆ ದೇವತೆಗಳ ಮೇಲೆ ಕೋಪ ಬಂದಿತು. ಕೂಡಲೇ ಅವನ ಕಣ್ಣು ಕೆಂಪಗೆ ಮಾಡಿ ಕಾಲಮೃತ್ಯುವಿನಂತೆ ಎದ್ದು ನಿಂತು, ಮಡಿದು ಬಿದ್ದ ದಾನವರಿಗೆಲ್ಲರಿಗೂ ತನ್ನ ಬಲಗೈಯನ್ನೆತ್ತಿ "ಎಲೋ ರಾಕ್ಷಸರೆ, ಕೆಳಗೆ ಬಿದ್ದ ನೀವೆಲ್ಲರೂ ಮತ್ತೆ ಎದ್ದುನಿಲ್ಲಿರಿ" ಎಂದು ಕೂಗಿ ಹೇಳಿದನು.

ಅವನ ಈ ಆಶ್ವಾಸನೆಯ ಭೈರವನಾದವನ್ನು ಕೇಳಿ ದೇವತೆಗಳ ಶಸ್ತ್ರಗಳಿಂದ ಭಯಭ್ರಾಂತರಾಗಿ ನೆಲದ ಮೇಲೆ ಬಿದ್ದ ದೈತ್ಯರೆಲ್ಲರೂ ಎದ್ದುನಿಂತು, ಸಮರಾಂಗಣಕ್ಕೆ ಇಳಿದು ಸಿಂಹನಾದ ಮಾಡತೊಡಗಿದರು. ಆಗ ಕಾಲನೇಮಿಯು ತ್ರಿವಿಕ್ರಮನಂತೆ ಎತ್ತರವಾದ ತನ್ನ ವಿಶಾಲ ದೇಹವನ್ನು ಮದೋದ್ಧತ ಗಾಂಭೀರ್ಯಕ್ಕೆ ಸರಿಯಾಗಿ ತೂಗುತ್ತ ದೇವತೆಗಳ ಕಡೆಗೆ ಸಾಗಿ ಬರತೊಡಗಿದನು. ಮಂದರ ಪರ್ವತವೇ ಮುನ್ನಡೆದು ಬರುವಂತೆ, ನೆಲವನ್ನೆಲ್ಲಾ ನಡುಗಿಸುತ್ತ ಬರುವ ಆ ಕಾಲನೇಮಿಯನ್ನು ಕಂಡು, ಇಂದ್ರಾದಿದೇವತೆಗಳು ಹೆದರಿ ಹೌಹಾರಿದರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಪ್ಪತ್ತೇಳನೆಯ ಅಧ್ಯಾಯ ಮುಗಿದುದು.*



## ಕಾಲನೇಮಿಗೆ ಉತ್ಕರ್ಷದ ಕಾಲ | ಅಧ್ಯಾಯ - ೧೭೮

**ಮತ್ಸ್ಯ ಉವಾಚ :**

**ದಾನವಾನಾಮನೀಕೇಷು ಕಾಲನೇಮಿರ್ಮಹಾಸುರಃ।**
**ವ್ಯವರ್ಧತ ಮಹಾತೇಜಾಸ್ತಪಾಂತೇ ಜಲದೋ ಯಥಾ॥**

**ಮತ್ಸ್ಯ** :- ದೈತ್ಯಸೇನೆಯಲ್ಲಿ ಕಾಲನೇಮಿಯು ಶ್ರಾವಣ ಮಾಸದ ಮೋಡದಂತೆ, ತನ್ನ ಬೆಳೆಯುವ ತೇಜಸ್ಸಿನಿಂದ ದುರ್ಧರ್ಷನಾಗಿ ಗುಡುಗು ಹಾಕಿದನು.

ಮೂರು ಲೋಕಗಳನ್ನೆಲ್ಲ ಭಯಭ್ರಾಂತಗೊಳಿಸಿದ ಆ ದಾನವ ಸಾರ್ವಭೌಮನನ್ನು ಕಂಡು ದೈತ್ಯರೆಲ್ಲರಿಗೂ ಅಮೃತ ಕುಡಿದಷ್ಟು ಉತ್ಸಾಹ ಬಂದಿತು. ಅವರ ಭಯಾಪಾಯಗಳೆಲ್ಲವೂ ದೂರಾಗಿ ಅವರು ಇಮ್ಮಡಿಸಿದ ಉತ್ಸಾಹದಿಂದ ಹೋರಾಟಕ್ಕೆ ಅಣಿಯಾದರು. ಮಯ, ತಾರ, ವಿಪ್ರಚಿತ್ತ, ಅರಿಷ್ಟ, ಲಂಬ, ಖರ, ಕಿಶೋರ, ಸ್ವರ್ಭಾನು, ವಕ್ರಯೋಧ ಮೊದಲಾದ ಪರಾಕ್ರಮಶಾಲಿಗಳಾದ ದೈತ್ಯ ವೀರರೆಲ್ಲರೂ ಕಲ್ಲು, ಒನಕೆ, ಸರಳು, ಗಿಡ, ಗುಡ್ಡ, ಹೆಬ್ಬಂಡೆ, ಪರಿಘ, ಫಿರಂಗಿ, ಉಕ್ಕಿನಲಗಳಿ, ಪ್ರಾಸ, ಪಾಶ, ಬಿಲ್ಲು, ಬಾಣ, ಬರ್ಚಿ, ಖಡ್ಗ, ವಜ್ರ, ತೋಮರ, ಮುದ್ಗರ, ಪಟ್ಟಿಸ, ಭಿಂಡಿಪಾಲ, ಶೂಲ, ಮುಂತಾದ ಬಗೆ ಬಗೆಯ ಭೀಷಣ ಅಸ್ತ್ರಶಸ್ತ್ರಗಳನ್ನು ಹಿಡಿದು ದೇವತೆಗಳ ಮೇಲೆ ಏರಿಬಂದರು. ಇತ್ತ ಯಮ, ಇಂದ್ರ, ವರುಣ, ಕುಬೇರರಿಂದ ರಕ್ಷಿಸಲ್ಪಡುವ ದೇವಸೇನಯಾದರೂ, ನಾರಾಯಣನ ನಾಮಸ್ಮರಣೆಮಾಡುತ್ತ ಭೋರ್ಗರೆವ ಸಾಗರದಂತೆ ಏರಿಬರುವ ದೈತ್ಯಸೇನೆಯನ್ನು ಅಷ್ಟೇ ನಿಕರದಿಂದ ಸಂಧಿಸಿತು.

ಎರಡೂ ಸೇನೆಗಳು ಘೋರಾಯುಧಗಳನ್ನು ಎಸೆದಾಡಿ, ಪರಸ್ಪರ, ಶಸ್ತ್ರಾಸ್ತ್ರಗಳನ್ನು ಮಸೆದಾಡಿ ಜೀವದ ಹಂಗುದೊರೆದು ಕಾದಿದರು. ರಥಿಕರು, ರಥಿಕರನ್ನು, ಕಾಲಾಳು, ಕಾಲಾಳುಗಳನ್ನು ಕಡಿದು ಕೊಚ್ಚಿ ರಕ್ತದ ಕೋಡಿ ಹರಿಸಿದರು. ಎರಡು ಸಾಗರಗಳು ಒಂದಕ್ಕೊಂದು ತಾಕಲಾಡಿದಂತೆ ಎರಡು ಕುಲಾಚಲಗಳು ಪರಸ್ಪರ ಕಾದಾಡಿದಂತೆ ಆ ದೇವದಾನವ ಯುದ್ಧವು ಘನಘೋರವಾಗಿ ನಡೆಯಿತು.

ಈ ಯುದ್ಧದ ಮಧ್ಯದಲ್ಲಿ ಅತ್ಯಂತ ಕ್ರುದ್ಧನಾದ ಕಾಲನೇಮಿಯು, ಪ್ರಳಯಕಾಲದ ಸಾಗರದಂತೆ, ಭಯಂಕರವಾದ ಆಕಾರವನ್ನು ತಳೆದು ಬಾನೆತ್ತರ ಬೆಳೆದು, ದೇವಸೇನೆಯ ಮೇಲೆ ಸಾಗಿಬಂದನು. ಅವನ ಮುಖದಿಂದ ಉರಿಯತೆರೆ ಉಸಿರಾಗಿ ಹೊಮ್ಮುತ್ತಿತ್ತು. ಕಣ್ಣಿನಿಂದ ಕಿಡಿಗಳು ಸಿಡಿಲಾಗಿ ದೇವಸೇನೆಯ ಮೇಲೆ ಬೀಳುತ್ತಿದ್ದವು. ಅವನು ಹೆಮ್ಮರದಂತಿರುವ ತನ್ನ ಕೈಗಳನ್ನು ಅಂತರಿಕ್ಷದಲ್ಲಿ ತೂರಾಡುತ್ತ ಅನೇಕ ಶಸ್ತ್ರಾಸ್ತ್ರಗಳನ್ನು ದೇವಸೇನೆಯ ಮೇಲೆ ಬೀಸಿ ಒಗೆದನು. ಕಾಲನೇಮಿಯ ಭಯಂಕರ ಆಯುಧ ಪ್ರಹಾರದಿಂದ ದೇವತೆಗಳೆಲ್ಲರೂ ತತ್ತರಿಸಿಹೋದರು. ಅವನು ಒಂದು ಶರಪಂಜರಮಾಡಿ ಇಂದ್ರನನ್ನು ಐರಾವತದ ಮೇಲೆ ಕುಳಿತಲ್ಲಿಯೇ ಕಟ್ಟಿ ಹಾಕಿದನು. ವರುಣನ ಕೈಯಲ್ಲಿಯ ಪಾಶ ಕಸಿದು, ಅವನನ್ನೇ ಬಿಗಿದು ಒಗೆದನು. ಉಕ್ಕಿನ ಸರಳಿಂದ ತಲೆಯ ಮೇಲೆ ಕುಟ್ಟಿ ಕುಬೇರನನ್ನು ಕುಕ್ಕರ ಬಡಿದನು. ಸರ್ವರನ್ನು ಕೊಂದುಹಾಕುವ ಯಮನು ಕೂಡಾ ಕಾಲನೇಮಿಯ ಪ್ರಬಲ ಪ್ರತಾಪದ ಎದುರು ನಿಲ್ಲಲಾರದೆ, ಓಡಿಹೋದನು. ಇದರಂತೆ ಎಲ್ಲ ಲೋಕಪಾಲಕರನ್ನು ಸೋಲಿಸಿ ಅವರ ಕಾರ್ಯವನ್ನೆಲ್ಲ ಕಾಲನೇಮಿಯು ತಾನೇ ಕೈಗೆ ಎತ್ತಿಕೊಂಡನು. ಚಂದ್ರನ ಕಾಂತಿಯನ್ನೆಲ್ಲಾ ಕಸಿದನು. ಸೂರ್ಯನನ್ನು ಉದಯಾಚಲದಿಂದ ಕೆಳಗಿಳಿಸಿದನು. ದೇವತೆಗಳ ಮುಖ ಅನಿಸಿದ ಅಗ್ನಿಯನ್ನು ಗೆದ್ದು ತನಗೆ ಮುಖವಾಗುವಂತೆ ಮಾಡಿಕೊಂಡನು. ಯಜ್ಞಯಾಗಾದಿಗಳಲ್ಲಿ ಕೊಟ್ಟ ಹವಿರ್ಭಾಗಗಳನ್ನು ಇನ್ನು ಮುಂದೆ ದೇವತೆಗಳ ಬದಲು ತನಗೇ ತಂದುಕೊಡಬೇಕೆಂದು ಹೇಳಿದನು. ವಾಯುವನ್ನು ಸೋಲಿಸಿ, ತನಗೆ ಹಿತವಾಗುವಂತೆ ಬೀಸಲು ಅಪ್ಪಣೆಯಿತ್ತನು. ಎಲ್ಲ ಸಮುದ್ರಗಳನ್ನು ತನ್ನ ಕೈವಶಮಾಡಿಕೊಂಡು ಅವುಗಳಲ್ಲಿಯ ರತ್ನಗಳನ್ನೆಲ್ಲ ಕಾಣಿಕೆಯಾಗಿ ಒಪ್ಪಿಸಬೇಕೆಂದು ಶಾಸನಗೈದನು. ಹೀಗೆ ದುಷ್ಟ ದಾನವೇಶ್ವರನಾದ ಕಾಲನೇಮಿಯು ದೇವತೆಗಳನ್ನೆಲ್ಲ ತನ್ನ ಅತ್ಯದ್ಭುತವಾದ ಬಲ ಪರಾಕ್ರಮಗಳಿಂದ ಅತಿಕ್ರಮಿಸಿ, ಗೆದ್ದು, ಅಂಕೆಯಲ್ಲಿಟ್ಟುಕೊಂಡು ಅವರಿಂದ ಕೆಲಸ ಮಾಡಿಸಿಕೊಂಡು ಸರ್ವಲೋಕಾಧಿಪತಿಯಾಗಿ ಮೆರೆದನು.

ಬ್ರಹ್ಮದೇವರ ಪರಮೇಷ್ಠಿಪದದಲ್ಲಿಯೇ ತಾನಿದ್ದೇನೆಂದು ಭಾವಿಸಿ ಸರ್ವಲೋಕಶಾಸನವನ್ನು ಮಾಡತೊಡಗಿದನು. ಎಲ್ಲ ದೈತ್ಯರು ಅವನನ್ನು ದೇವತೆಗಳು ಬ್ರಹ್ಮನನ್ನು ಹೊಗಳುವಂತೆ ನುತಿಸಿ ಕುಣಿದಾಡಿದರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಪ್ಪತ್ತೆಂಟನೆಯ ಅಧ್ಯಾಯ ಮುಗಿದುದು.*

—o—

## ತಾರಕಾಮಯ ಸಂಗ್ರಾಮದಲ್ಲಿ ಕಾಲನೇಮಿಯ ಸಂಹಾರ ವಿಷ್ಣುವಿನ ವಿಜಯ

ಅಧ್ಯಾಯ - ೧೭೯

**ಮತ್ಸ್ಯ ಉವಾಚ :**

**ಪಂಚ ತಸ್ಮಾಭ್ಯವರ್ತಂತ ವಿಪರೀತೇನ ಕರ್ಮಣಾ।**
**ವೇದೋ ಧರ್ಮಃ ಕ್ಷಮಾ ಸತ್ಯಂ ಶ್ರೀಶ್ಚ ನಾರಾಯಣಾಶ್ರಯಾ**
**ಸ ತೇಷಾಮನುಪಸ್ಥಾನಾತ್ ಸಕ್ರೋಧೋ ದಾನವೇಶ್ವರಃ।**
**ವೈಷ್ಣವಂ ಪದಮನ್ವಿಚ್ಛನ್ಯಯೌ ನಾರಾಯಣಾಂತಿಕಮ್**
**ಸದದರ್ಶ ಸುಪರ್ಣಸ್ಥಂ ಶಂಖಚಕ್ರಗದಾಧರಮ್।**
**ದಾನವಾನಾಂ ವಿನಾಶಾಯ ಭ್ರಾಮಯಂತಂ ಗದಾಂ ಶುಭಾಮ್॥**

**ಮತ್ಸ್ಯ :-** ಎಲ್ಲ ದೇವತೆಗಳು ಕಾಲನೇಮಿಯನ್ನು ಅನುಸರಿಸಿ, ಅವನ ಸೇವೆ ಗೈಯಲು ಸದಾ ಸನ್ನದ್ಧರಾಗಿದ್ದರೂ, ಐದು ಪದಾರ್ಥಗಳು ಮಾತ್ರ ಅವನಿಗೆ ವಶವಾಗಲಿಲ್ಲ. ವೇದ, ಧರ್ಮ, ಕ್ಷಮಾ, ಸತ್ಯ ಮತ್ತು ನಾರಾಯಣನನ್ನು ಆಶ್ರಯಿಸಿದ ಲಕ್ಷ್ಮಿ. ಇವು ಐದು ಕಾಲನೇಮಿಯ ದೇವದ್ವೇಷ, ಧರ್ಮದ್ರೋಹ, ವೇದವಿರೋಧ ದುಷ್ಕರ್ಮ ಕಲಾಪಗಳನ್ನು ಕಂಡು ಅವನಿಗೆ ವಶವಾಗಲಿಲ್ಲ. ಇದರಿಂದ, ಆ ದಾನವೇಶ್ವರನಿಗೆ ಬಹಳ ಕೋಪ ಬಂದಿತು. ಅವನಿಗೆ ಈಗಾಗಲೇ ದೊರೆತ ಬ್ರಹ್ಮನ ಅಧಿಕಾರವೂ ಕೂಡ ಕಡಿಮೆಯೇ ಎಂದು ಅನಿಸಿತು. ಸರ್ವೋಚ್ಚತಮವಾದ ವಿಷ್ಣುವಿನ ಸ್ಥಾನಮಾನಗಳನ್ನೇ ಹೊಂದಬೇಕೆಂಬ ಹಂಬಲವು ಅವನ ಹೃದಯದಲ್ಲಿ ಹೆಡೆ ಎತ್ತಿತು. ವಿಷ್ಣುವಿನ ಸ್ಥಾನವನ್ನು ಕಸಿದುಕೊಳ್ಳಲು ನಾರಾಯಣನ ಬಳಿಗೆ ಐತಂದ. ಶ್ರೀಹರಿಯು ಶಂಖ, ಚಕ್ರ, ಗದಾಧಾರಿಯಾಗಿ ಗರುಡನ ಹೆಗಲ ಮೇಲೆ ಕುಳಿತು ದೈತ್ಯರನ್ನು ಸಂಹರಿಸಲು ಗದೆಯನ್ನು ತಿರುಗಿಸುತ್ತಿದ್ದ. ಪೀತಾಂಬರವನ್ನು ಧರಿಸಿ, ನೀರುತುಂಬಿದ ನೀಲಮೇಘದಂತೆ ಬಂಗಾರದ ರೆಕ್ಕೆಗಳುಳ್ಳ ಹಕ್ಕಿಯ ಮೇಲೆ ಕುಳಿತು ಯುದ್ಧಮಾಡುವ ಆ ವಿಷ್ಣುವನ್ನು ನೋಡಿ ಆ ದೈತ್ಯನ ಮನಸ್ಸು ಕೂಡ ಮಾರು ಹೋಯಿತು. ಅವನು ತನ್ನ ಮನದಲ್ಲಿಯೇ ಯೋಚಿಸಿದನು.

''ನಮ್ಮ ಪೂರ್ವಪುರುಷರಾದ, ಸಾಗರದ ಮಧ್ಯದಲ್ಲಿದ್ದ ಮಧುಕೈಟಭರೆಂಬ ದೈತ್ಯರನ್ನು ನಾಶಪಡಿಸಿದ ನಮ್ಮ ಕುಲ ಶತ್ರು ಎಂದರೆ, ಇವನೇ. ಇವನಿಗೂ ದಾನವರಿಗೂ ಇರುವ ವೈರವು ಜನ್ಮವೈರ. ಅದು ಎಂದಿಗೂ ಶಾಂತವಾಗುವಂತಹದು ಅಲ್ಲ. ಇವನು ಅನೇಕ ಸಮರಗಳಲ್ಲಿ ಅಸಂಖ್ಯ ದೈತ್ಯರನ್ನು ಕೊಂದು, ರಾಕ್ಷಸ ರಮಣಿಯರ ಸೌಭಾಗ್ಯ ಚಿಹ್ನೆಗಳನ್ನೆಲ್ಲ ಅಳಿಸಿ ಹಾಕಿದ್ದಾನೆ. ಇವನ ಕೋಪಾಟೋಪಕ್ಕೆ ತುತ್ತಾಗಿ ಹಿರಣ್ಯಕಶಿಪು ಹತನಾಗಿ ಹೋಗಿದ್ದಾನೆ. ಇವನ ಬೆಂಬಲದಿಂದಲೇ ದೇವತೆಗಳು ಗೆಲುವನ್ನು ಪಡೆದು, ಯಜ್ಞಗಳಲ್ಲಿ ಮುನಿಗಳು ಕೊಟ್ಟ ಅಹುತಿಗಳನ್ನು

ಭಕ್ಷಿಸುತ್ತಾರೆ. ಇವನ ಚಕ್ರದ ಉರಿಗೆ ನಮ್ಮ ದೈತ್ಯರ ಕುಲಗಳೆಲ್ಲವೂ ಬಲಿಯಾಗಿವೆ. ದೈತ್ಯರಿಗೆಲ್ಲ ಇವನೇ ಮೃತ್ಯು. ಸುದೈವದಿಂದ, ಇಂದು ಅವನು ನನ್ನ ಕಣ್ಣೆದುರು ಬಂದು ನಿಂತಿದ್ದಾನೆ. ಇವನನ್ನು ನಾನೀಗ ನನ್ನ ಎರಡೂ ತೋಳುಗಳಿಂದ ಹೊಸೆದು ಹಾಕುವೆನು. ಇವನನ್ನು ಈಗಲೇ ಸಂಹರಿಸಿ, ಎಲ್ಲ ದೈತ್ಯ ದಾನವರ ಭಯಾಪಾಯಗಳನ್ನೆಲ್ಲ ಪರಿಹರಿಸಿ ಎಲ್ಲರ ಮಾನ ಮನ್ನಣೆಗೆ ನಾನು ಪಾತ್ರನಾಗುವೆನು. ಇವನು ಮಹಾವಂಚಕ. ನನ್ನ ತಂದೆಯಾದ ಹಿರಣ್ಯಕಶಿಪುವನ್ನು ಅರ್ಧ ಸಿಂಹ, ಅರ್ಧಮಾನವದೇಹದ ವಿಚಿತ್ರ ಆಕಾರದಿಂದ ಬಂದು ಸೀಳಿಹಾಕಿದನು. ಅದಿತಿ ದೇವಿಯ ಹೊಟ್ಟೆಯಿಂದ ಹುಟ್ಟಿಬಂದ ಈ ವಿಷ್ಣುವು ಬಲಿಚಕ್ರವರ್ತಿಯ ಬಳಿ ಬಂದು ಮೂರಡಿ ಭೂಮಿ ಬೇಡಿ, ಬೃಹದಾಕಾರವಾಗಿ ಬೆಳೆದು, ಮೂರು ಲೋಕಗಳನ್ನೇ ಆಕ್ರಮಿಸಿ ತನ್ನ ವಚನವನ್ನು ಅತಿಕ್ರಮಿಸಿ, ದೈತ್ಯರನ್ನು ನಿಗ್ರಹಿಸಿದನು. ಹೀಗೆ ದೈತ್ಯಕುಲ ಶತ್ರುವಾದ ಈ ವಿಷ್ಣುವು ಕೊನೆಯದಾದ ಈ ತಾರಕಾಮಯ ಸಂಗ್ರಾಮದಲ್ಲಿ ನನ್ನಿಂದ ಹತನಾಗಿ ಸತ್ತು ಹೋಗುವನು.'' ಹೀಗೆ ಒದರಿ ಮಾತನಾಡಿ, ವಿಷ್ಣುವನ್ನು ಮನಸೋಕ್ತವಾಗಿ ಹೀಗಳೆದು, ಯುದ್ಧವನ್ನು ಸುರುವು ಮಾಡಿದನು. ಆ ದುಷ್ಟನಾದ ಕಾಲನೇಮಿಯು ಇಷ್ಟು, ವಿಧವಾಗಿ ತನ್ನನ್ನು ತೆಗಳಿ ನುಡಿದರೂ ಕ್ಷಮಾಸಮುದ್ರನಾದ ಶ್ರೀಹರಿಯು ಅವನ ಮೇಲೆ ಕೋಪಗೊಳ್ಳಲಿಲ್ಲ. ಮೆಲುನಗೆಯನ್ನು ಸೂಸಿ, ಅವನು ಆ ದಾನವನಿಗೆ ಮೆಲ್ಲನೆ ಹೇಳಿದನು.

''ದೈತ್ಯನೆ, ಶಕ್ತಿ ಕಡಿಮೆಯಿದ್ದರೆ, ಸೊಕ್ಕು ಹೆಚ್ಚಾಗುತ್ತದೆ. ಕೋಪದ ಸದ್ದು ಗದ್ದಲವಿಲ್ಲದ ಸ್ಥಿರವಾದ ಬಲವೇ ಬಲ ಎನಿಸುವದು. ಕ್ಷಮೆಯನ್ನು ಬಿಟ್ಟು, ನಿನ್ನ ಸೊಕ್ಕಿನಿಂದಲೇ ನೀನು ಸತ್ತು ಹೋಗಿರುವೆ. ನೀನು ಮಹಾಹೇಡಿ, ನಿನ್ನ ಈ ವಾಚಾಳಿತನಕ್ಕೆ ಧಿಕ್ಕಾರವಿರಲಿ. ಹೆಂಗಳೆಯರು ಮಾತ್ರ ನಿನ್ನಂತೆ, ಗಂಡಸರು ಇಲ್ಲದಿರುವಲ್ಲಿ ಬಾಯ್ತುಂಬ ಮಾತನಾಡುವರು. ನೀನು ಹಿರಣ್ಯಕಶಿಪು, ಮಧುಕೈಟಭ ಮುಂತಾದ ದೈತ್ಯರು ಹಿಡಿದ ಹಾದಿಯನ್ನೇ ಹಿಡಿದು ಸಾವಿನೆಡೆಗೆ ಸಾಗುತ್ತಿರುವುದು ಕಾಣುತ್ತಿದೆ. ಬ್ರಹ್ಮದೇವರು ಮಾಡಿದ ಶಾಸ್ತ್ರಮರ್ಯಾದೆಯನ್ನು ಮೀರಿ ನಡೆದವರಿಗೆ ಎಂದಾದರೂ ಕಲ್ಯಾಣವಾಗುವುದುಂಟೆ ? ನಾನು ಇಂದೇ ನಿನ್ನನ್ನು ಕೊಂದು ನೀನು ಕಿತ್ತೆಸೆದ ದೇವತೆಗಳನ್ನೆಲ್ಲ ಮತ್ತೆ ಅವರವರ ಸ್ಥಳಗಳಲ್ಲಿ ಪುನಃ ನಿಯಮಿಸುವೆನು.''

ಹೀಗೆ ನಕ್ಕು ನುಡಿದ ನಾರಾಯಣನ ನುಡಿಗಳನ್ನು ಕೇಳಿ, ಕಾಲನೇಮಿಯು ಕಿಡಿಕಿಡಿಯಾಗಿ ಕಣ್ಣು ಕೆಂಪಗೆಮಾಡಿ ತನ್ನ ನೂರು ತೋಳುಗಳನ್ನು ಎತ್ತಿ ಎಲ್ಲ ಆಯುಧಗಳನ್ನು ಹಿರಿದು ವಿಷ್ಣುವಿನ ಎದೆಗೆ ಬಲವಾಗಿ ಹೊಡೆದನು. ಮಯ, ತಾರಕ ಮುಂತಾದ ಎಲ್ಲ ದಾನವರು ಆ ಕಾಲನೇಮಿಯನ್ನು ಬೆಂಬಲಿಸಿ ವಿಷ್ಣುವಿನ ಮೇಲೆ ತಮ್ಮ ಶಸ್ತ್ರಾಸ್ತ್ರಗಳಿಂದ ಮುಗಿಬಿದ್ದರು. ಇಷ್ಟೆಲ್ಲ ದುಷ್ಟ ರಾಕ್ಷಸರು ಕೂಡಿ ಒಮ್ಮೆಲೆ ಹಾರಿ, ಹೊಡೆದು ಪ್ರಹಾರಗೈದರೂ ಆ ಹರಿಯು ಚಲಿಸದೇ, ಚದರದೇ, ಬೆದರದೇ, ಪರ್ವತದಂತೆ ಭಯರಹಿತನಾಗಿ, ನಿರ್ವಿಕಾರನಾಗಿ ನಿಂತುಕೊಂಡಿದ್ದ. ಆಗ ಕಾಲನೇಮಿಯು ತನ್ನ ಭಯಂಕರವಾದ ಗದೆಯನ್ನು ಎತ್ತಿ ಗರುಡನ ನೆತ್ತಿಯನ್ನು ಕುಕ್ಕಿದನು. ಅದರಿಂದ ಅವನ ವಾಹನವಾದ ಹಕ್ಕಿಯು ದುಃಖಿತನಾದಂತೆ ತುಸು

ಹೊಯ್ದಾಡಿತು. ಅದನ್ನು ಕಂಡು ಶ್ರೀ ಹರಿಯು ಕೋಪ ಕಷಾಯಿತ ಲೋಚನನಾಗಿ, ಕೈಯಲ್ಲಿ ಚಕ್ರವನ್ನು ಹಿಡಿದು ವಿರಾಟ್ ರೂಪವನ್ನು ತಳೆದು ಮುಗಿಲಿನೆತ್ತರ ಬೆಳೆದು ನಿಂತನು. ತನ್ನ ಎರಡೂ ಕಾಲುಗಳಿಂದ ಸಮಗ್ರ ಭೂಮಂಡಲವನ್ನೆ ವ್ಯಾಪಿಸಿ, ತ್ರಿವಿಕ್ರಮಾವತಾರದ ಪುನರಾವೃತ್ತಿ ಆದಂತೆ, ದೈತ್ಯಸಂಹಾರಕ್ಕಾಗಿ ವಿಜೃಂಭಿಸಿದನು. ದೇವತೆಗಳೂ ಋಷಿಗಳೂ, ವಿರಾಟರೂಪಿಯಾದ ಆ ಹರಿಯನ್ನು ಸ್ತೋತ್ರ ಮಾಡಿದರು. ಆ ಪರಮಾತ್ಮನು ತನ್ನ ಸುದರ್ಶನ ಚಕ್ರವನ್ನು ಪ್ರಯೋಗಿಸಿದನು. ಅದರಿಂದ ಕಾಲನೇಮಿಯ ಕೈಗಳನ್ನು ತುಂಡರಿಸಿ, ಕುತ್ತಿಗೆಯನ್ನು ಕತ್ತರಿಸಿ ಹಾಕಿದನು. ತೋಳುಗಳನ್ನು ಕಡಿದು, ಒಗೆದನು. ತಲೆಯು ಛಿನ್ನವಾಗಿ ಕೆಳಗೆ ಬಿದ್ದರೂ, ಆ ದಾನವನ ಮುಂಡವಿಲ್ಲದ ದಂಡವು ಮಾತ್ರ ಹಾಗೆಯೇ ನಿಂತುಕೊಂಡಿತ್ತು. ಆಗ ಗರುಡನು ಆ ದೈತ್ಯ ಕಬಂಧವನ್ನು ಒದ್ದು ಕೆಳಗೆ ಉರುಳಿಸಿದನು. ಕೈ ಹಾಗೂ ಮುಖವಿಲ್ಲದ ಕಾಲನೇಮಿಯ ರುಂಡವಿಲ್ಲದ ದಂಡವು ಆಕಾಶದಿಂದ ಉರುಳಿಬಿದ್ದಿತು. ಎಲ್ಲ ಋಷಿಗಳು ಆ ದುರುಳ ದಾನವನು ಶ್ರೀ ವಿಷ್ಣುವಿನಿಂದ ಹತನಾಗಿ ಉರುಳಿ ಬಿದ್ದುದನ್ನು ನೋಡಿ "ಭಲೆ ಭಾಪು!" ಇದು ಬಹಳ ಒಳ್ಳೆಯ ಕೆಲಸವೆಂದು ಜಗದೀಶ್ವರನನ್ನು ಕೊಂಡಾಡಿ ಪೂಜೆಗೈದರು. ಉಳಿದ ದೈತ್ಯರೆಲ್ಲರೂ ಕಾಲನೇಮಿಯ ಈ ದುರಂತವನ್ನು ಕಂಡು ಭಯಭ್ರಾಂತರಾಗಿ ಓಡಿಹೋಗಬಯಸಿದರು. ಆದರೆ, ವಿಶ್ವವ್ಯಾಪಿಯಾದ ಶ್ರೀ ಹರಿಯ ಸಹಸ್ರ ತೋಳುಗಳು ಎಲ್ಲ ಕಡೆಗೂ ವ್ಯಾಪಿಸಿದ್ದರಿಂದ ಅವರು ಎಲ್ಲಿಯೂ ಪಾರಾಗಿ ಹೋಗಲು ಸಾಧ್ಯವಾಗಲಿಲ್ಲ. ತನ್ನ ಅನಂತ ಬಾಹುಗಳಿಂದ ಆ ದಾನವಾಂತಕನು ಕೆಲವು ದೈತ್ಯರನ್ನು ಕೂದಲು ಹಿಡಿದು ಎಳೆದನು, ಹಲವರ ಕತ್ತನ್ನು ಹಿಡಿದು ಎತ್ತಿದನು. ಕೆಲವರ ಬಾಯಿ ಸೀಳಿದನು. ಹಲವರ ನಡುವನ್ನು ಮುರಿದನು. ಉಳಿದವರೆಲ್ಲರೂ ಅವನ ಕೈಯಲ್ಲಿಯ ಗದಾ ಚಕ್ರಗಳಿಂದ ಚೂರು ಚೂರಾಗಿ, ನೆಲದ ಮೇಲೆ ಪುಡಿಪುಡಿಯಾಗಿ, ಬಿದ್ದರು.

ಹೀಗೆ, ಎಲ್ಲ ದೈತ್ಯರು ಆ ತಾರಕಾಮಯ ಸಂಗ್ರಾಮದಲ್ಲಿ ಶ್ರೀಹರಿಯಿಂದ ಹತರಾದ ಬಳಿಕ ಅಲ್ಲಿಗೆ ಬ್ರಹ್ಮದೇವರು ಧಾವಿಸಿ ಬಂದರು. ಬ್ರಹ್ಮರ್ಷಿಗಳು, ಎಲ್ಲ ಗಂಧರ್ವ ಅಪ್ಸರೆಯರು ಕೇಶವನ ಕೈಂಕರ್ಯಕ್ಕಾಗಿ ಉಪಸ್ಥಿತರಾದರು. ದೇವ ಶ್ರೇಷ್ಠರಾದ ಬ್ರಹ್ಮ ಹಾಗೂ ಇಂದ್ರರು ಕೈಮುಗಿದು, ಕಾಲುಮುಟ್ಟಿ, ಕೇಶವನಿಗೆ ನಮಸ್ಕಾರಗೈದು, ಪೂಜೆಮಾಡಿ, ಹೀಗೆ ನುಡಿದರು: "ಭಗವನ್, ಈ ಮಹಾಕಾರ್ಯವನ್ನು ಮಾಡಿ, ದೇವತೆಗಳನ್ನು ದೊಡ್ಡ ದುಃಖದಿಂದ ಪಾರುಮಾಡಿರುವೆ. ಸುರರ ಎದೆಯಲ್ಲಿ ನೆಟ್ಟ ವಿಷಬಾಣವನ್ನು ಇಂದು ನೀನೇ ಕಿತ್ತು ತೆಗೆದಂತಾಯಿತು. ಇದೊಂದು ದೊಡ್ಡ ದೇವಕಾರ್ಯ. ಎಲ್ಲ ದೇವತೆಗಳನ್ನು ಸೋಲಿಸಿ, ದುರ್ದಮ್ಯನಾಗಿ, ಯಾರಿಗೂ ಮಣಿಯದೆ ನಿಂತ ಈ ದೈತ್ಯಾಧಮನನ್ನು ನಿನ್ನ ಹೊರತು ಗೆಲ್ಲಬಲ್ಲವರಾರು? ಕಾಲನೇಮಿಯನ್ನು ಕೊಲ್ಲ ಬಲ್ಲವರಾರು? ಈ ದುಷ್ಟನು ಎಲ್ಲ ಋಷಿ-ಮುನಿಗಳನ್ನು ದೇವತೆಗಳನ್ನು ಗೆದ್ದು ನನ್ನನ್ನು ಕೂಡ ಆಹ್ವಾನಿಸುತ್ತಿದ್ದನು. ಈ ನಿನ್ನಮಹಾ ಕಾರ್ಯದಿಂದ ಎಲ್ಲ ದೇವತೆಗಳು ತುಷ್ಟರೂ, ಪರಿಪುಷ್ಟರೂ ಆಗಿದ್ದಾರೆ. ನಿನಗೆ ನಮ್ಮೆಲ್ಲರ ವಂದನೆ.

ಇನ್ನು ನೀನು ವೈಕುಂಠಲೋಕಕ್ಕೆ ತೆರಳಬಹುದು. ಅಲ್ಲಿ ಅನೇಕ ಬ್ರಹ್ಮರ್ಷಿಗಳು ನಿನಗಾಗಿ ಕಾದಿದ್ದಾರೆ. ಪ್ರಭು, ಈ ಮಹತ್ಕಾರ್ಯದಿಂದ ನಮಗೆ ಪರಮಾನಂದವಾಗಿದೆ. ಅದಕ್ಕಾಗಿ ನಿನಗೆ ನೀನು ಬೇಡಿದ ವರವನ್ನು ಕೊಡಬೇಕೆಂದು ನನಗೇನೋ ಮನಸ್ಸು ಉತ್ಸುಕವಾಗಿದೆ. ಆದರೆ ನಮ್ಮೆಲ್ಲ ದೇವತೆಗಳಿಗೂ ಬೇಕು ಬೇಕಾದ ವರಗಳನ್ನು ನೀಡಬಲ್ಲ ವರದ ರಾಜನಾದ ನಿನಗೆ ನಾನು ವರವೇನು ಕೊಡಬಲ್ಲೆ? ಅದಕ್ಕೆ ಬದಲಾಗಿ ನಾನೇ ನಿನ್ನಲ್ಲಿ ವರ ಬೇಡುತ್ತೇನೆ. ನೀನು ಕರುಣಿಸು, ಈ ದುಷ್ಟ ದೈತ್ಯನು ಮೂರು ಲೋಕದ ಸಾಮ್ರಾಜ್ಯವನ್ನು ಇಂದ್ರನಿಂದ ಕಸಿದುಕೊಂಡಿದ್ದಾನೆ. ಆ ತ್ರೈಲೋಕಾಧಿಪತ್ಯವನ್ನು ಇಂದ್ರನಿಗೆ ಕೊಟ್ಟು ಕರುಣಿಸು''

ಬ್ರಹ್ಮದೇವರ ಈ ವಾಕ್ಯವನ್ನುಆಲಿಸಿ, ಭಗವಂತನಾದ ಮಹಾವಿಷ್ಣುವು ಪ್ರಸನ್ನಮುಖದಿಂದ ಉತ್ತರಿಸಿದನು.

''ಇಲ್ಲಿ ಬಂದ ಎಲ್ಲ ದೇವತೆಗಳೇ, ನಾನು ಹೇಳುವ ಮಾತುಗಳನ್ನು ಚಿತ್ತವಿಟ್ಟು ಆಲಿಸಿರಿ. ಇಂದ್ರನಿಗಿಂತಲೂ ಶೂರ ವೀರರಾದ ಕಾಲನೇಮಿ ಮೊದಲಾದ ಧೀರ ದಾನವರನ್ನೆಲ್ಲ ನಾನು ಸಂಹರಿಸಿದ್ದೇನೆ. ಈ ಯುದ್ಧದಲ್ಲಿ ಇಬ್ಬರು ದೈತ್ಯರು ಮಾತ್ರ ಪಾರಾಗಿ ಹೋಗಿದ್ದಾರೆ. ಉಳಿದವರೆಲ್ಲರೂ ಹತರಾಗಿದ್ದಾರೆ. ವಿರೋಚನ, ಮತ್ತು ರಾಹು ಇವರಿಬ್ಬರನ್ನು ಬಿಟ್ಟು, ಎಲ್ಲ ದುಷ್ಟ, ದರ್ಪಿಷ್ಠ ದಾನವರು ನಷ್ಟರಾಗಿದ್ದಾರೆ. ಇನ್ನು ಮೇಲೆ ಇಂದ್ರ, ವರುಣ, ಯಮ, ಕುಬೇರ, ಸೂರ್ಯ, ಅಗ್ನಿ, ವಾಯು, ಮುಂತಾದ ದೇವತೆಗಳೆಲ್ಲರೂ ತಮ್ಮ ತಮ್ಮ ಮೊದಲಿನ ಸ್ಥಾನಮಾನ ಪಡೆದು ಸುಖವಾಗಿರಲಿ. ಬ್ರಾಹ್ಮಣರು ಹೋಮಹವನ ನಡೆಸಲಿ. ಋಷಿಗಳು ಹೋಮ ಹವನ, ಅಧ್ಯಯನ ಅಧ್ಯಾಪನ, ಮುಂತಾದವುಗಳನ್ನು ಮಾಡಲಿ, ಶ್ರಾದ್ಧಗಳಿಂದ ಪಿತೃಗಳು ತೃಪ್ತಿ ಹೊಂದಲಿ. ಬ್ರಾಹ್ಮಣರು ಯಜ್ಞಯಾಗಗಳನ್ನು ಮಾಡಲಿ ಮಾಡಿಸಲಿ. ಯಾಜ್ಞಿಕರಿಗೆ ದಾನ, ದಕ್ಷಿಣೆಗಳು ವಿಪುಲವಾಗಿ ಕೊಡಲ್ಪಡಲಿ. ಎಲ್ಲ ನದಿಗಳು ತೀರದಲ್ಲಿ ಜನರನ್ನು ಪಶು, ಪಕ್ಷ್ಯಾದಿ, ಪ್ರಾಣಿಗಳನ್ನು ತಮ್ಮ ನೀರು, ಪೈರುಗಳಿಂದ ತೃಪ್ತಿಪಡಿಸಿ ಸಮುದ್ರಗಳಿಗೆ ಹೋಗಿ ಕೂಡಲಿ. ಇನ್ನು ಮೇಲೆ ದೈತ್ಯರ ಭಯವಿಲ್ಲ. ಯಾರಿಗೂ ಯಾರ ಹೆದರಿಕೆಯೂ ಬೇಡ. ಎಲ್ಲರೂ ಶಾಂತರಾಗಿರಿ. ಸ್ವಕರ್ಮಗಳಿಂದ ನನ್ನನು ಪೂಜಿಸಿರಿ. ನಿಮಗೆಲ್ಲರಿಗೂ ಕಲ್ಯಾಣವಾಗಲಿ,'' ಹೀಗೆ ಹೇಳಿ, ಸತ್ಯ ಪರಾಕ್ರಮನಾದ ಶ್ರೀ ಮಹಾವಿಷ್ಣುವು ಬ್ರಹ್ಮದೇವರೊಂದಿಗೆ ಸತ್ಯಲೋಕಕ್ಕೆ ಪ್ರಯಾಣ ಮಾಡಿದನು. ಹೀಗೆ ತಾರಕಾಮಯ ಸಂಗ್ರಾಮದಲ್ಲಿ ಶ್ರೀಹರಿಯು ದೈತ್ಯರನ್ನೆಲ್ಲ ನಿಗ್ರಹಿಸಿ, ದುಷ್ಟ ಶಿಕ್ಷಣಮಾಡಿ ಸಾಧು ರಕ್ಷಣೆಗೈದು, ಲೋಕಕಂಟಕವನ್ನು ಪರಿಹರಿಸಿ, ಭಕ್ತ ಭೃತ್ಯರನ್ನೆಲ್ಲ ಪೊರೆದು ಮೆರೆದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದನೂರುಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು.*

—o—

# ಭೈರವರೂಪಿಯಾದ ಶಿವನ ಮಹಿಮೆ

**ಅಧ್ಯಾಯ - ೧೮೦**

**ಋಷಯ ಊಚುಃ**

**ಶ್ರುತಃ ಪದ್ಮೋದ್ಭವಸ್ತಾತ ವಿಸ್ತರೇಣ ತ್ವಯೇರಿತಃ।**
**ಸಮಾಸಾದ್ಭವಮಾಹಾತ್ಮ್ಯಂ ಭೈರವಸ್ಯ ವಿಧೀಯತಾಂ॥**

**ಋಷಿ** :- 'ಸೂತಾಚಾರ್ಯರೆ, ತಾವು ಹೇಳಿದ ಪುಷ್ಕರ ಪ್ರಾದುರ್ಭಾವದ ವೃತ್ತಾಂತವನ್ನೆಲ್ಲ ನಾವು ಕೇಳಿದೆವು. ಈಗ ಭೈರವರೂಪಿಯಾದ ಶಿವನ ಮಹಿಮೆಯನ್ನು ತಾವು ನಿರೂಪಿಸಬೇಕು.

**ಸೂತ** :- ದೇವತೆಗಳಿಗೂ ದೇವರು ಎನಿಸಿದ ಮಹಾದೇವರ ಮಹತ್ವಪೂರ್ಣವಾದ ಕರ್ಮಕಲಾಪವನ್ನು ಕೇಳಿರಿ. ಹಿಂದೆ ಅಂಧಕ ಎಂಬ ಒಬ್ಬ ದೈತ್ಯ. ಕಾಡಿಗೆಯಿಂದಲೇ ಪಿಡಿದು ಬಂದಂತಿದ್ದ ಆ ದಾನವ ಕಪ್ಪು ಬಣ್ಣ, ದಪ್ಪ ದೇಹ, ಕ್ರೂರಮುಖ, ರಕ್ತಾಕ್ಷಿ, ಉಗ್ರಚರ್ಯೆ ಇದು ಅವನ ಲಕ್ಷಣ. ಆ ಕ್ರೂರ ರಕ್ಕಸ ಘೋರ ತಪಮಾಡಿದ. ಆ ತಪೋಬಲದಿಂದ ದೇವತೆಗಳನ್ನೆಲ್ಲ ಗೆದ್ದ. ಒಂದು ದಿನ ಆ ದುರುಳ ದಾನವನು ಶಿವಪಾರ್ವತಿಯರು ವಿಹಾರ ಮಾಡುವುದನ್ನು ಕಂಡನು. ಭವಾನಿಯ ಮನಮೋಹಕ ರೂಪವು ಆ ದುಷ್ಟನ ಹೃದಯವನ್ನು ಸೂರೆಗೊಂಡಿತು. ಆ ಹರನ ಕುಟುಂಬಿನಿಯನ್ನು ಅಪಹರಿಸಬೇಕೆಂದು ಆ ದುಷ್ಟದೈತ್ಯ ಉಜ್ಜುಗಿಸಿದ. ಸತಿಯ ಸಲುವಾಗಿ ರುದ್ರದೇವರಿಗೂ, ರಾಕ್ಷಸೇಶ್ವರನಿಗೂ ನಿಕರದ ಕಾಳಗ ಮಸಗಿತು. ಕಾಮಾಂಧನಾದ ಅಂಧಕಾಸುರನು ಕೋಪಾಂಧನೂ ಆಗಿ, ಶಿವನನ್ನು ಬಹು ವಿಧವಾಗಿ ಹೊಡೆದು ಬಡೆದು, ಪೀಡಿಸಿದನು. ಆಗ ಪರಮೇಶ್ವರನು ಪಾಶುಪತಾಸ್ತ್ರವನ್ನು ಆ ದೈತ್ಯಾಧಮನ ಮೇಲೆ ಪ್ರಯೋಗಿಸಿದನು. ಆ ಉಲ್ಬಣವಾದ ಅಸ್ತ್ರವು ಅಂಧಕಾಸುರನ ದೇಹಕ್ಕೆ ಚುಚ್ಚಿ ಅವನ ನೆತ್ತರಿನ ಓಕುಳಿಯಾಡಿತು. ಆದರೆ ಆಶ್ಚರ್ಯದ ಮಾತೆಂದರೆ ಆ ಅಂಧಕಾಸುರನ ದೇಹದಿಂದ ಚಿಮ್ಮಿದ ರಕ್ತದ ಕಣ ಕಣಗಳಿಂದಲೂ ನೂರಾರು, ಸಾವಿರಾರು ಹೊಸ ಅಂಧಕರೇ ಹುಟ್ಟಿ, ಚಿಗಿತು, ಚೆಲ್ಲವರಿದು ನಿಂತರು. ಶಂಕರನ ಪಾಶುಪತಾಸ್ತ್ರವು ಆ ರಕ್ತಜನ್ಯ ರಕ್ಕಸರನ್ನೆಲ್ಲ ಸೀಳಿ ಹಾಕುವಷ್ಟರಲ್ಲಿ ಅವರ ನೆತ್ತರದಿಂದ ಮತ್ತೆ ಕೋಟಿ ಕೋಟಿ ಅಂಧಕರು. ಹೀಗೆ ಎಲ್ಲಿ ನೋಡಿದಲೆಲ್ಲ ಅಂಧಕನ ಮರಿಗಳು. ಈ ಅಸಂಖ್ಯ ಅಂಧಕಾಸುರ ವೃಂಧವನ್ನು ಕಂಡು, ಮಹಾದೇವರು ಮಾತೃಗಣವನ್ನು ನಿರ್ಮಿಸಿದನು.

ಅಂಧಕಾಸುರನು ಬಹುರೂಪಿ. ಅಂಶಭೂತ ಅಂಧಕರ ಗುಂಪುಗಳನ್ನು ನುಂಗಿ ನೀರು ಕುಡಿಯಲು ಪರಮೇಶ್ವರನು ಒಂದು ಸರ್ವಸಮರ್ಥವಾದ ಮಾತೆಯರ ಪಡೆಯನ್ನೇ ನಿರ್ಮಿಸಿದನು. ಅವರ ಹೆಸರುಗಳು ಇಂತಿವೆ. ಮಾಹೇಶ್ವರೀ, ಬ್ರಾಹ್ಮೀ, ಕೌಮಾರೀ, ಮಾಲಿನೀ, ಬಲಾ, ಅತಿಬಲಾ, ರಕ್ತಾ, ಸುರಭಿ, ಮುಖಮುಂಡಿಕಾ, ಮಾತೃನಂದಾ, ಸುನಂದಾ, ಬಿಡಾಲಿ, ಶಕುನಿ, ರೇವತಿ, ಮಹಾರಕ್ತಾ, ಪಿಲಪಿಚ್ಛಿಕಾ, ಜಯಾ, ವಿಜಯಾ, ಜಯಂತೀ, ಅಪರಾಜಿತಾ, ಕಾಲೀ, ಸುಭಗಾ, ದುರ್ಭಗಾ, ಅಕಲಾ,

ಕರಾಲೀ, ನಂದಿನೀ, ಅದಿತಿ, ದಿತಿ, ಮಾರೀ, ಮೃತ್ಯು, ಕರ್ಣಮೋಟೀ, ಉಲೂಕೀ, ಘಟೋದರೀ, ಕಪಾಲಿ, ಪಿಶಾಚೀ, ಶಾಂಕರೀ, ಚಂಡಾ, ಲಾಂಗಲೀ, ಕುಟಭೀ, ಖೇಟಾ, ಮುಂತಾಗಿ ಇರುತ್ತವೆ. ಇನ್ನು ಉಳಿದ ಅನೇಕ ಮಾತೆಯರ ಹೆಸರುಗಳನ್ನು ಈ ಕೆಳಗಿನ ಈ ಪದ್ಯದಲ್ಲಿ ಹೇಳಲಾಗಿದೆ.

''ಖೇಟಾ, ಸುಲೋಚನಾ, ಧೂಮ್ರಾ ಏಕವೀರಾ ಕರಾಲಿನೀ।
ವಿಶಾಲದಂಷ್ಟ್ರಿಣೀ ಶ್ಯಾಮಾ ತ್ರಿಜಟೀ ಕುಕ್ಕುಟೀತಥಾ।

ವೈನಾಯಕೀ ಚ ವೈತಾಲೀ ಉನ್ಮತ್ತೋದುಂಬರೀ ತಥಾ।
ಸಿದ್ಧಿಶ್ಚ ಲೇಲಿಹಾನಾ ಚ ಕೇಕರೀ ಗರ್ದಭೀ ತಥಾ॥

ಭ್ರುಕುಟೀ ಬಹುಪುತ್ರೀ ಚ ಪ್ರೇತಯಾನಾ ವಿಡಂಬಿನೀ।
ಕ್ರೌಂಚಾ, ಶೈಲಮುಖೀ ಚೈವ ವನಿತಾ ಸುರಮಾದನು॥

ಉಷಾ ರಂಭಾ ಮೇನಕಾ ಚ ಸಲಿಲಾ ಚಿತ್ರರೂಪಿಣೀ।
ಸ್ವಾಹಾ ಸ್ವಧಾ ವಷಟ್ಕಾರಾ ಧೃತಿರ್ಜ್ಯೇಷ್ಠಾ ಕಪರ್ದಿನೀ॥

ಮಾಯಾ ವಿಚಿತ್ರ ರೂಪಾ ಚ ಕಾಮ ರೂಪಾ ಚ ಸಂಗಮಾ।
ಮುಖಾವಿಲಾ ಮಂಗಲಾ ಚ ಮಹಾನಾಸಾ ಮುಹಾಮುಖೀ॥

ಕುಮಾರೀ ರೋಚನಾ ಭೀಮಾ ಸಹಾಹಾಸಾ ಮದೋದ್ಧತಾ।
ಅಲಂಬಾಕ್ಷೀ ಕಾಲಪರ್ಷೀ ಕುಂಭಕರ್ಣೀ ಮಹಾಸುರೀ॥

ಕೇಶಿನೀ ಶಂಖಿಣೀ ಲಂಬಾ ಪಿಂಗಲಾ ಲೋಹಿತಾಮುಖೀ।
ಘಂಟಾರವಾಥ ದಂಷ್ಟ್ರಾಲಾ ರೋಚನಾ ಕಾಕಜಂಘಿಕಾ॥

ಗೋಕರ್ಣಿಕಾ ಚ ಮುಖಿಕಾ ಮಹಾಗ್ರೀವಾ ಮಹಾಮುಖೀ।
ಉಲ್ಕಾಮುಖೀ ಧೂಮಶಿಖಾ ಕಂಪಿನೀ ಪುರಕಂಪಿನೀ॥

ಮೋಹನಾ ಕಂಪನಾ ಕ್ಷ್ವೇಲಾ ನಿರ್ಭಯಾ ಬಾಹುಶಾಲಿನೀ।
ಸರ್ಪಕರ್ಣೀ ತಥೈಕಾಕ್ಷೀ ವಿಶೋಕಾನಂದಿನೀ ತಥಾ॥

ಜ್ಯೋತ್ಸ್ನಾಮುಖೀ ಚ ರಭಸಾ ನಿಕುಂಭರಕ್ತಕಂಪನಾ।
ಅವಿಕಾರಾ ಮಹಾಚಿತ್ರಾ ಚಂದ್ರಸೇನಾ ಮನೋರಮಾ॥

ಆದರ್ಶನಾ ಹರತ್ಪಾಪಾ ಮಾತಂಗೀ ಲಂಬಮೇಖಲಾ।
ಅಬಾಲಾ ವಂಚನಾ ಕಾಲೀ ಪ್ರಮೋದಾ ಲಾಂಗಲಾವತೀ॥

ಚಿತ್ರಾ ಚಿತ್ತಜಲಾ ಕೋಣಾ ಶಾಂತಿಕಾಲೀ ವಿನಾಶಿನೀ।
ಲಂಬಸ್ತನೀ ಲಂಬಸಟಾ ವಿಸಟಾ ವಾಸಚೂರ್ಣಿನೀ॥

**ಸ್ಖಲಂತೀ ದೀರ್ಘಕೇಶೀ ಚ ಸುಚಿರಾ ಸುಂದರೀ ಶುಭಾ।**
**ಅಯೋಮುಖೀ ಕಟುಮುಖೀ ಕ್ರೋಧನೀ ಚ ತಥಾಶನೀ॥**

**ಕುಟುಂಬಿಕಾ ಮುಕ್ತಿಕಾ ಚ ಚಂದ್ರಿಕಾ ಬಲಮೋಹಿನೀ।**
**ಸಾಮಾನ್ಯಾಹಾಸಿನೀ ಲಂಬಾ ಕೋವಿದಾರೀ ಸಮಾಸವೀ।**
**ಶಂಕುಕರ್ಣೀ ಮಹಾನಾದಾ ಮಹಾದೇವೀ ಮಹೋದರೀ॥**

**ಹುಂಕಾರೀ ರುದ್ರಸುಸಟಾ ರುದ್ರೇಶೀ ಭೂತ ಡಾಮರೀ।**
**ಪಿಂಡಜಿಹ್ವಾ ಚಲಜ್ಜ್ವಾಲಾ ಶಿವಾ ಜ್ವಾಲಾಮುಖೀ ತಥಾ।**
**ಏತಾಶ್ಚಾನ್ಯಾಶ್ಚ ದೇವೇಶಃ ಸೋಽಸೃಜನ್ಮಾತರಸ್ತದಾ॥**

ಈ ಎಲ್ಲ ದೇವಿಯರು ಅದೇ ಆಗ ಹುಟ್ಟಿದ ಅನಂತ ಅಂಧಕಾಸುರರ ಬಿಸಿನೆತ್ತರ ಹೀರಿ ಮನದಣಿಕುಡಿದು ತೃಪ್ತಿಪಡೆದರು. ಈ ಎಲ್ಲ ಮಾತೆಯರು ಅಂಧಕ ವೃಂದವನ್ನು ಕೊಂದು ತಿಂದರೂ, ಅವರು ನೆಕ್ಕಿದ ನೆತ್ತರಿನ ಹನಿಗಳು ಬಿದ್ದಲ್ಲೆಲ್ಲ ಮತ್ತೆ ಸಾವಿರಾರು ಸಂಖ್ಯೆಯಲ್ಲಿ ಅಂಧಕದೈತ್ಯರು ಚಿಗುರಿ ಮಹಾದೇವರನ್ನು ತ್ರಿಶೂಲಗಳಿಂದ ತಿವಿಯ ತೊಡಗಿದರು. ಸರಳುಗಳಿಂದ ಹಣಿಯತೊಡಗಿದರು. ಮಾತೆಯರ ರಕ್ತಪಾನದ ಪ್ರಮಾಣಕ್ಕಿಂತ ಅಂಧಕಾಸುರರ ವೃಂದದ ಜನನ ಹಾಗೂ ವೃದ್ಧಿಯ ಪ್ರಮಾಣವು ಸಾವಿರಪಟ್ಟು ಹೆಚ್ಚಾಗಿದ್ದಿತು. ಇದರಿಂದ ಅನೇಕ ಅಂಧಕಾಸುರರ ಅಂಗಾಂಗಳಿಂದ ಬಸಿದು ಸೋರುವ ನೆತ್ತರವನ್ನು ಈ ಮಾತೆಯರ ಗುಂಪು ನೆಕ್ಕಿ ನಾಲಿಗೆಯ ತುದಿಯನ್ನು ಸವರಾಡುವಷ್ಟರಲ್ಲಿ ಲಕ್ಷ ಲಕ್ಷ ಅಂಧಕರು ಉದಿಸಿ ಮದಿಸಿ, ಮಲೆತು ಮಹಾದೇವರನ್ನು ಹೊಡೆಯತೊಡಗುತ್ತಿದ್ದರು. ಹೀಗೆ ಕ್ಷಣ ಕ್ಷಣಕ್ಕೆ ಅಂಧಕಾಸುರ ಹಾಗೂ ಅವನ ರಕ್ತಸಂತತಿಯವರ ದೇಹಗಳಿಂದ ಹೊರಚಿಮ್ಮುವ ನೆತ್ತರ ಕಣಗಳಿಂದ ಅಸಂಖ್ಯ ಅಂಧಕರು ಗಣಗಣಗಳಾಗಿ ಬೆಳೆದು ಬಂದು ಶಸ್ತ್ರಾಸ್ತ್ರಗಳಿಂದ ಹಿಂಸಿಸತೊಡಗಿದಾಗ ಮಹಾದೇವರು ಕೂಡಾ ಕಾತರಿಸಿ ಕಂಗೆಟ್ಟು ಹೋದರು. ಕೊನೆಗೆ ಈ ಅಂಧಕರಕ್ತದ ಶನಿ ಸಂತಾನದ ದುರಂತ ಚಿಂತಾಸಂತಾಪಗಳಿಂದ ಬೆಂದು ಹೋದ ಇಂದು ಶೇಖರನು ಬದುಕಲು ಬೇರೆ ಯಾವ ಉಪಾಯಗಳನ್ನು ಕಾಣದೆ, ಭಗವಂತನಾದ ಮಹಾವಿಷ್ಣುವಿನ ಚರಣ ಕಮಲಗಳಿಗೆ ಶರಣು ಹೋದನು. ''ಈ ರಕ್ಕಸರ ರಕ್ತಸಂತತಿಯಿಂದ ನನ್ನನ್ನು ಕಾಪಾಡಬೇಕೆಂದು ಮೊರೆಯಿಟ್ಟನು.

ಭವಾನೀಪತಿಯ ಬವಣೆಯನ್ನು ಕಂಡು, ಬೇಡಿಕೆ ಕೇಳಿ, ಕರುಣೆಗೂಡಿದ ಶ್ರೀಮಹಾವಿಷ್ಣುವು ''ಶುಷ್ಕರೇವತಿ'' ಎಂಬ ದೇವಿಯನ್ನು ನಿರ್ಮಿಸಿದನು. ಆ ದೇವತೆಯು ಅಲ್ಲಿ ಆಗಲೇ ಅಂಧಕಾಸುರನ ಮತ್ತು ಪ್ರತಿ ಅಂಧಕಾಸುರರ ರಕ್ತ ಮೂಲಕವಾಗಿ ಉದಿಸಿ ನಿಂತ ಅಸಂಖ್ಯ ದೈತ್ಯರ ರಕ್ತವನ್ನೆಲ್ಲ ಅರೆನಿಮಿಷದಲ್ಲಿ ಕುಡಿದುಬಿಟ್ಟಳು. ಹೀಗೆ ಕಣ್ಣಿನ ಎವೆ ಮಿಳುಕಿಸುವಷ್ಟರಲ್ಲಿ ರಕ್ತಬೀಜರ ಸಕಲ ಅಂಧಕ ದೇಹಿಗಳ ನೆತ್ತರವೆಲ್ಲವನ್ನೂ ಹೀರಿ ಒಣಗಿಸಿದ ಬಳಿಕ ಮುಂದೆ ಹುಟ್ಟುವುದು ನಿಂತು ಹೋಯಿತು. ಆಗ ಮಹಾದೇವರು ಮುಂದಿನ ಅಂಧಕ ಸೃಷ್ಟಿಯು ಪ್ರತಿರುದ್ಧವಾಗಿ ಅಲ್ಲಿಯೇ ಕೊನೆಗೊಂಡ ಬಳಿಕ ಇದ್ದವರೆಲ್ಲರನ್ನೂ ತಮ್ಮ ತ್ರಿಶೂಲದಿಂದ ತಿವಿದು, ಕಡಿದು, ಹೊಡೆದು ತುಂಡರಿಸಿ

ಚೆಲ್ಲಿದರು. ಹೀಗೆ ಪ್ರತಿಬಿಂಬಭೂತರಾದ ಅಂಧಕನ ಅಂಶಾಸುರರೆಲ್ಲರೂ ಪ್ರಣಷ್ಟರಾದ ಬಳಿಕ ಮೂಲ ಅಂಧಕಾಸುರನ ಮೇಲೆ ಏರಿಹೋಗಿ ಶಿವನು ತನ್ನ ತ್ರಿಶೂಲವನ್ನು ಅವನ ದೇಹಕ್ಕೆ ಚುಚ್ಚಿ ಎತ್ತಿಹಿಡಿದನು. ಶಿವನ ಕೈಯಲ್ಲಿಯ ಶೂಲದ ತುತ್ತ ತುದಿಯಲ್ಲಿ ಹೆಚ್ಚಿ ಕೊಚ್ಚಿದ ದೇಹದಿಂದಲೇ ನಿಂತುಕೊಂಡ ಅಂಧಕಾಸುರನು ಶಂಕರನನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ಅಂತ್ಯಕಾಲದಲ್ಲಿ ಮಾಡಿದ ಸ್ತೋತ್ರದಿಂದ ಗೌರೀಪತಿಯು ಸುಪ್ರಸನ್ನನಾಗಿ ಆ ಅಂಧಕಾಸುರನಿಗೆ ತನ್ನ ಸಾಮೀಪ್ಯವನ್ನು ಹಾಗೂ ಪ್ರಮಥಗಣಗಳ ಒಡೆತನವನ್ನು ಕೊಟ್ಟು ಕರುಣಿಸಿದನು.

ಹೀಗೆ ಅಂಧಕಾಸುರನು ತನ್ನನ್ನು ಸಂಹರಿಸಿದ ಹರನನ್ನೇ ಹೊಗಳಿ ಹಾಡಿ ಅವನ ಪ್ರಸಾದಕ್ಕೆ ಪಾತ್ರನಾಗಿ ಶಿವಸಾಮೀಪ್ಯವನ್ನು ಹೊಂದಿದ ಬಳಿಕ ಈ ಅಂಧಕಾಸುರನ ರಕ್ತ ಸಂತತಿಯು ನೆತ್ತರ ಹೀರಲಿಕ್ಕಾಗಿ ಹುಟ್ಟಿಸಿದ ಮಾತೆಯರ ಗಣವೆಲ್ಲವೂ ಶಂಕರನನ್ನು ಕೈಮುಗಿದು ಕೇಳಿಕೊಂಡಿತು. ''ಪೂಜ್ಯನೆ, ನಮಗೆ ಹೊಟ್ಟೆ ತುಂಬಾ ಹಸಿವು, ಹೃದಯ ತುಂಬ ಕಸಿವಿಸಿ, ಈ ಹಸಿವನ್ನು ಹಿಂಗಿಸಿಕೊಳ್ಳಲು ಮಾನವರನ್ನು ಮುಕ್ಕುತ್ತೇವೆ. ದಾನವರನ್ನು ನೆಕ್ಕುತ್ತೇವೆ. ದೇವತೆಗಳನ್ನು ನೆಕ್ಕುತ್ತೇವೆ. ಒಟ್ಟಿನಲ್ಲಿ ಈ ಜಗತ್ತನ್ನೇ ಕೊಂದುಬಿಡುತ್ತೇವೆ. ಅನಂತರ ಅವರೆಲ್ಲರನ್ನು ತಿಂದುಬಿಡುತ್ತೇವೆ.''

**ಶಂಕರ** :- 'ದೇವಿಯರೆ, ನೀವೆಲ್ಲರೂ ಪ್ರಜೆಗಳ ರಕ್ಷಣ ಮಾಡಬೇಕು. ಭಕ್ಷಣವನ್ನು ಎಂದೂ ಮಾಡಬಾರದು. ಈ ನಿಮ್ಮ ಘೋರ ವಿಚಾರವನ್ನು ಬಿಟ್ಟು ಬಿಡಿರಿ,'' ಎಂದು ನಿಷ್ಠುರವಾಗಿ ತಿಳಿ ಹೇಳಿದನು. ಆದರೆ ಸೌಮ್ಯನಾದ ಶಿವನ ಮಾತನ್ನು ಕೇಳುವರಾರು? ''ನಮ್ಮನ್ನು ನೀನು ಹುಟ್ಟಿಸಿದ್ದು ರಕ್ಷಣೆಗಾಗಿ ಅಲ್ಲ. ಭಕ್ಷಣೆಗಾಗಿ; ರಕ್ತ ಪಾನಕ್ಕಾಗಿ. ನಮ್ಮ ಜನ್ಮದ ಉದ್ದೇಶಕ್ಕೆ ಅನುಗುಣವಾಗಿ ನಾವು ಈಗ ಲೋಕ ಭಕ್ಷಣ, ರಕ್ತಪಾನಾದಿ ಕಾರ್ಯವನ್ನು ಮುಂದುವರಿಸುತ್ತೇವೆ'' ಎಂದು ಹೇಳಿದರು. ಕಂಡವರನ್ನೆಲ್ಲ ತುಂಡರಿಸಿ ರಕ್ತಪಾನ ಮಾಡತೊಡಗಿದರು. ಮೂಲೋಕವೆಲ್ಲವೂ ಹಸಿದು ನಿಂತ ಮಾತೃಗಣದ ರಕ್ತ ಪಿಪಾಸೆಗೆ ಬಲಿಯಾಗ ತೊಡಗಿತು. ಇದನ್ನು ನೋಡಿ ಪರಮೇಶ್ವರನಿಗೆ ಏನೂ ತಿಳಿಯದಂತಾಯಿತು. ಕರ್ತವ್ಯ ಮೂಢನಾಗಿ ಅವನು ಮತ್ತೆ ನರಸಿಂಹದೇವರಿಗೆ ಮೊರೆಯಿಟ್ಟನು. ಆದಿಅಂತ್ಯವಿಲ್ಲದ ಸರ್ವ ಪ್ರಪಂಚದ ಮೂಲ ಕಾರಣನಾದ ನರಸಿಂಹ ಸ್ವಾಮಿಯನ್ನು ಧ್ಯಾನ ಮಾಡತೊಡಗಿದನು.

ಮಹಾದೇವರ ಭಕ್ತಿಯುಕ್ತವಾದ ಧ್ಯಾನೋಪಾಸನೆಗಳಿಂದ ನರಸಿಂಹದೇವರು ಸುಪ್ರಸನ್ನರಾಗಿ ಆ ಶಿವನ ಎದುರು ಪ್ರತ್ಯಕ್ಷವಾಗಿ ಬಂದು ನಿಂತರು. ದೂರ್ಜಟಿಯು ಧ್ಯಾನ ಮಾಡಿದಂತೆಯೇ ಇತ್ತು ಆ ನರಸಿಂಹದೇವರ ಆಕಾರ-ವಿನ್ಯಾಸ, ಸಿಂಹದ ಮುಖ, ತೀಕ್ಷ್ಣ ಹಲ್ಲು, ಮಿಂಚಿನ ನಾಲಿಗೆ, ಹೊಳೆಯುವ ಆಯಾಲ, ತೆರೆದ ವದನ, ಉದಯ ಸೂರ್ಯನಂತೆ ಕೆಂಪಡರಿದ ಕಣ್ಣು, ಮೇರುಗಿರಿಯಂತಹ ಬೃಹದಾಕಾರ, ಹಿರಣ್ಯಕಶಿಪುವಿನ ಎದೆಯ ನೆತ್ತರು ಮೆತ್ತಿದ ಉಗುರು, ಕೊರಳಿನಲ್ಲಿ ಕರುಳುಮಾಲೆ, ಬ್ರಹ್ಮಾಂಡ ತುಂಬಿದ ಬೆಳಕು, ಕಿವಿಯವರೆಗೆ ಅಗಲವಾದ ಬಾಯಿ. ನರಸಿಂಹದೇವರ ಈ ಉಗ್ರರೂಪವನ್ನು ಕಂಡು, ಸತೀಪತಿಯಾದ ಶಿವನು ಸಾಷ್ಟಾಂಗ ನಮಸ್ಕಾರಮಾಡಿ, ಹೀಗೆ ಸ್ತೋತ್ರ ಮಾಡಿದನು:

ನಮಸ್ತೇಽಸ್ತು ಜಗನ್ನಾಥ। ನರಸಿಂಹ ವಪುರ್ಧರ ॥೩೫॥

ದೈತ್ಯನಾಥಾಽಸೃಜಾಪೂರ್ಣ। ನಖಶಕ್ತಿ ವಿರಾಜಿತ ।
ತತಃ ಸಕಲ ಸಂಲಗ್ನ ಹೇಮ ಪಿಂಗಲ ವಿಗ್ರಹ ॥೩೬॥

ನತೋಽಸ್ಮಿ ಪದ್ಮನಾಭ ತ್ವಾಂ ಸುರಶಕ್ರ ಜಗದ್ಗುರೋ।
ಕಲ್ಪಾಂತಾಂಭೋದನಿರ್ಘೋಷ । ಸೂರ್ಯಕೋಟಿ ಸಮಪ್ರಭ ॥೩೭॥

ಸಹಸ್ರಮಯ ಸಂಕ್ರೋಧ । ಸಹಸ್ರೇಂದ್ರ ಪರಾಕ್ರಮ।
ಸಹಸ್ರಧನದಸ್ಫೀತ ಸಹಸ್ರವರುಣಾತ್ಮಕ ।
ಸಹಸ್ರಕಾಲರಚಿತ ಸಹಸ್ರನಿಯತೇಂದ್ರಿಯ ।
ಸಹಸ್ರಭೂಮಿಸದ್ಧೈರ್ಯ । ಸಹಸ್ರಾನಂತ ಮೂರ್ತಿಮನ್ ॥
ಸಹಸ್ರಚಂದ್ರಪ್ರತಿ ಸಹಸ್ರಗ್ರಹವಿಕ್ರಮ । ಸಹಸ್ರರುದ್ರ ತೇಜಸ್ಕ
ಸಹಸ್ರಬ್ರಹ್ಮ ಸಂಸ್ತುತ ॥೩೮॥
ಸಹಸ್ರಬಾಹುವರ್ಗಾಗ್ರ ಸಹಸ್ರಾಸ್ಯ ನಿರೀಕ್ಷಣ। ಸಹಸ್ರಯಂತ್ರಮಥನ
ಸಹಸ್ರಬಂಧಮೋಚಕ ॥

**ಮಹಾದೇವ** :- ಜಗದೊಡೆಯನಾಗಿ ನರಸಿಂಹದೇಹವನ್ನು ಧರಿಸಿದ ಪರಮಾತ್ಮನೇ, ನಿನಗೆ ನಮಸ್ಕಾರ. ದೈತ್ಯನಾಥನಾದ ಹಿರಣ್ಯಕಶಿಪುವಿನ ಮೈನೆತ್ತರವು ನಿನ್ನ ಉಗುರುಗಳಿಗೆ ಮೆತ್ತಿದೆ. ಆದರಿಂದ ಆ ರಕ್ತದ ಕೆಂಪುಕಾಂತಿಯಿಂದ ನಿನ್ನ ದೇಹವೆಲ್ಲವೂ ಹೊಂಬಣ್ಣದ ಶೋಭೆಯನಾಂತು ವಿಜೃಂಭಿಸುತ್ತಿದೆ. ಪದ್ಮನಾಭನೆ, ದೇವತೆಗಳಿಗೆಲ್ಲ ನಿಜವಾದ ಇಂದ್ರನು ನೀನೆ. ಜಗತ್ತಿನ ಗುರು ನೀನು. ನೀನು ಸಿಂಹನಾದ ಮಾಡಿದರೆ ಪ್ರಳಯಕಾಲದ ಮೋಡಗಳು ಗುಡುಗಿದಂತೆ. ಕೋಟಿ ಸೂರ್ಯರಿಗೆ ಸಮಾನವಾಗಿದೆ ನಿನ್ನ ಕಾಂತಿ. ಸಾವಿರ ಸಾವಿರ ಯಮ, ಇಂದ್ರ, ಕುಬೇರ, ವರುಣ, ಚಂದ್ರ, ಸೂರ್ಯ, ರುದ್ರ, ಬ್ರಹ್ಮ, ಮುಂತಾದವರ ಶಕ್ತಿ ಪರಾಕ್ರಮಗಳಿಂದ ತುಂಬಿ ವಿಜೃಂಭಿಸುವ, ಸಹಸ್ರ ಮುಖ, ಸಹಸ್ರಬಾಹು, ಸಹಸ್ರನೇತ್ರಗಳುಳ್ಳ ವಿರಾಟ ಪುರುಷನಾದ ನರಸಿಂಹದೇವನೇ, ನಿನಗೆ ನಮಸ್ಕಾರ. ಭಗವನ್ ಅಂಧಕಾಸುರನ ಸಂಹಾರಕ್ಕಾಗಿ ನಾನು ಕೆಲವು ದೇವಿಯರನ್ನು ನಿರ್ಮಾಣಮಾಡಿದೆ. ನಿನ್ನ ಅನುಗ್ರಹದಿಂದ ನಾನು ಆ ದೈತ್ಯನನ್ನು ನಿಗ್ರಹಿಸಿದ ಬಳಿಕ ಆ ಎಲ್ಲ ದೇವಿಯರು ಪ್ರಜೆಗಳನ್ನು ಭಕ್ಷಿಸುತ್ತಿದ್ದಾರೆ. ನಾನು ಬೇಡವೆಂದು ಹೇಳಿದರೂ ಕೇಳದೆ, ಪ್ರಪಂಚವನ್ನೇ ಕಬಳಿಸಲು ತೊಡಗಿದ್ದಾರೆ. ಅವರನ್ನೆಲ್ಲ ಸೃಷ್ಟಿ ಮಾಡಿದವನು ನಾನೇ ಎನ್ನೋ ನಿಜ. ಆದರೆ, ಆದರೆ, ಅವರನ್ನು ನಾನಾಗಿ ನನ್ನ ಕೈಯಿಂದ ಸಂಹರಿಸಲಾರೆ. ನೀನೇ ಅವರನ್ನು ನಿಗ್ರಹಿಸು, ನನ್ನನ್ನು ಅನುಗ್ರಹಿಸು.''

ಆಗ ಮಹಾದೇವರ ಆ ಬಿನ್ನಹವನ್ನು ಮನ್ನಿಸಿ, ನರಸಿಂಹರೂಪಿಯಾದ ಶ್ರೀಹರಿಯು ತನ್ನ ಅಂಗಾಂಗಗಳಿಂದ ಮೂವತ್ತೆರಡು ಮಾತೆಯರನ್ನು ನಿರ್ಮಿಸಿದನು. ಇದಕ್ಕೂ ಮೊದಲು ನರಸಿಂಹದೇವರ ನಾಲಿಗೆಯಿಂದ ವಾಣೀಶ್ವರಿ, ಹೃದಯದಿಂದ

ಮಾಯಾ, ಗುಹ್ಯೇಂದ್ರಿಯದಿಂದ ಭವಮಾಲಿನಿ, ಎಲವುಗಳಿಂದ ಕಾಳಿ, ಅಥವಾ ಶುಕ್ಲ ದೇವತೆ ಮುಂತಾದವರು ಸೃಷ್ಟರಾಗಿದ್ದರು. ಈಗ ರುದ್ರದೇವರ ಪ್ರಾರ್ಥನಾನುಸಾರವಾಗಿ, ಘಂಟಾಕರ್ಣೆ, ತ್ರೈಲೋಕ್ಯಮೋಹಿನಿ. ಸರ್ವಶಕ್ತಶಂಕರೀ, ಚಕ್ರಹೃದಯಾ, ವ್ಯೋಮಚಾರಿಣೀ, ಶಂಕಿಣೀ, ಲೇಖಿನೀ, ಕಾಲಸಂಕರ್ಷಿಣೀ, ಎಂಬ ಎಂಟು ಜನ ಮಾತೆಯರು ನಿರ್ಮಿಸಲ್ಪಟ್ಟರು. ಇವರೆಲ್ಲರೂ ನರಸಿಂಹದೇವರಿಂದ ಈ ಮೊದಲು ಉತ್ಪನ್ನಳಾದ ವಾಣೀಶ್ವರಿಯ ಸೇವಕಿಯರು. ಅನಂತರ ಮಾಯಾ ಎಂಬ ನರಸಿಂಹದೇವರ ಹೃದಯದಿಂದ ಉತ್ಪನ್ನಳಾದ ಮಾತೆಯ ಕಿಂಕರಿಯರಾಗಿ ಸಂಕರ್ಷಿಣಿ, ಅಶ್ವಥಾ, ಬೀಜಭಾವಾ, ಅಪರಾಜಿತಾ, ಕಲ್ಯಾಣೀ, ಮೃದುದಂಷ್ಟ್ರೀ, ಕಮಲಾ ಉತ್ಪಲಾ, ಹಸ್ತಿಕಾ ಎಂಬ ಹೆಸರಿನ ಎಂಟು ದೇವಿಯರು ಸೃಜಿಸಲ್ಪಟ್ಟರು. ಅನಂತನ ನರಸಿಂಹದೇವರ ಗುಹ್ಯಾಂಗ ಸಂಭೂತಳಾದ ಭವಮಾಲಿನಿಯ ಅನುಚರರಾಗಿ, ಅಜಿತಾ, ಸೂಕ್ಷ್ಮಹೃದಯಾ, ವೃದ್ಧಾ, ವೇತಾಂಶದಂಶನಾ. ನರಸಿಂಹಭೈರವಿ, ಬಿಲ್ವಾ, ಗುರುತ್ಮಾ, ಹೃದಯಾ, ಜಯಾ ಎಂದು ಎಂಟು ದೇವಿಯರನ್ನು ಉಂಟು ಮಾಡಿದನು. ಅದರಂತೆ ಅಂಧಕಾಸುರನ ಬಳಗದ ರಕ್ತವನ್ನೆಲ್ಲ ಪಾನಮಾಡಿದ ರೇವತಿದೇವಿಯ ಕಿಂಕರಿಯರೆಂದು ಅಕರ್ಣಿನಿ, ಸಂಘಟಾ, ಉತ್ತರಮಾಲಿಕಾ, ಜ್ವಾಲಾಮುಖೀ, ಕಾಮಧೇನು, ಬಾಲಿಕಾ ಪದ್ಮಕರಾ, ಎಂಬ ಎಂಟು ಜನ ದೇವಿಯರನ್ನು ನಿರ್ಮಾಣ ಮಾಡಿದನು.

ಈ ಎಲ್ಲ ದೇವಿಯರು ತಮ್ಮ ಒಡತಿಯರಾದ ಮಾತೃದೇವಿಯರೊಂದಿಗೆ ಕೂಡಿಕೊಂಡು ಮೂರು ಲೋಕಗಳ ಸೃಷ್ಟಿ ಸಂಹಾರಾದಿ ಕಾರ್ಯಗಳನ್ನು ಮಾಡಲು ಸಮರ್ಥರಿದ್ದರು. ನರಸಿಂಹದೇವರ ದೇಹದಿಂದ ಜನಿಸಿಬಂದದ್ದರಿಂದ ಈ ಮಾತೆಯರಿಗೆಲ್ಲ ಇಂತಹ ಸಾಮಾರ್ಥ್ಯವು ಬಂದಿದ್ದಿತು. ಈದೇವಿಯರೆಲ್ಲರೂ ನರಸಿಂಹಸ್ವಾಮಿಯಿಂದ ಸೃಷ್ಟರಾದ ಕೂಡಲೇ, ರುದ್ರದೇವರಿಂದ ನಿರ್ಮಿಸಲ್ಪಟ್ಟ, ಮಾತೃಕಾಗಣವನ್ನು ಹೊಡೆಯಲು ಹೊರಟರು. ಇವರು ಕೋಪದಿಂದ ಕಣ್ಣನ್ನು ತೆರೆದಾಗ ಬೆಂಕಿಯ ಕಿಡಿಗಳೇ ಹಾರಿ, ಆ ಶಂಕರ ಮಾತೆಯರನ್ನು ಸುಡತೊಡಗಿದವು. ಇವರ ಕಣ್ಣಿನ ಕುಂಡದಿಂದ ಚಿಮ್ಮಿ ಬರುವ ಕಾಂತಿಯ ಕಿಡಿಗಳನ್ನು ಎದುರಿಸಲಾರದೆ, ಅವುಗಳ ಝಳ ತಾಕಿ ಬೆಂದು ಬಸವಳಿದು ಹೋದ ಆ ಶಿವನಿಂದ ಸೃಷ್ಟರಾದ ಮಾತೆಯರು ಎಲ್ಲಿಯೂ ಗತಿಗಾಣದೆ, ಕೊನೆಗೆ ನರಸಿಂಹ ದೇವರನ್ನೇ ಮೊರೆಹೊಕ್ಕರು. ಆಗ ಆ ನರಸಿಂಹನು ಅವರೆಲ್ಲರಿಗೂ ಅಭಯವಿತ್ತು ಇಂತು ನುಡಿದನು.

''ಮಾನವರು, ಅದರಂತೆ ಪಶು ಪಕ್ಷಿಗಳು ತಮ್ಮ ತಮ್ಮ ಮಕ್ಕಳನ್ನು ರಕ್ಷಿಸುವದಿಲ್ಲವೆ? ಅದರಂತೆ ನೀವು ಕೂಡಾ ಪ್ರಜೆಗಳನ್ನು ರಕ್ಷಿಸಿರಿ. ದೇವತೆಗಳು ಹಾಗೂ ದೇವಿಯರು ರಕ್ಷಣ ಕಾರ್ಯದಿಂದಲೇ ಉಚ್ಚಸ್ಥಾನಮಾನ ಪಡೆದು ಉತ್ಕರ್ಷ ಹೊಂದುವರು. ಆದುದರಿಂದ ನೀವಾದರೂ ಪಾಲನ ಪೋಷಣ ಮೊದಲಾದ ಮಾತೆಯರಿಗೆ ಉಚಿತವಾದ ಪ್ರೀತಿಯ ಕಾರ್ಯಗಳನ್ನು ಮಾಡಿರಿ. ಮಹಾದೇವರನ್ನು ಎಲ್ಲ ಮಾನವರು, ದೇವತೆಗಳೂ ಪೂಜಿಸುವಂತೆ ಪ್ರೇರಣೆ ನೀಡಿರಿ. ಪೂಜೆ ಮಾಡುವವರಿಗೆ ಎಲ್ಲ ಬಗೆಯಿಂದ ಅನುಕೂಲತೆ ಉಂಟುಮಾಡಿರಿ. ಹರನಲ್ಲಿ ಆಗಲಿ, ಹರಿಯಲ್ಲಿ ಆಗಲಿ ಭಕ್ತಿ ಮಾಡುವ ಸಜ್ಜನರಿಗೆ ನೀವು ಎಂದೂ ಪೀಡೆ ಕೊಡಬೇಡಿರಿ.

ಅವರನ್ನು ಪಾಲಿಸುವುದೇ ನಿಮ್ಮ ಮುಖ್ಯ ಕರ್ತವ್ಯ. ನಿಮ್ಮನ್ನು ಪೂಜಿಸುವ ಜನರಿಗೆ ಇಷ್ಟಾರ್ಥಗಳನ್ನು ಪ್ರದಾನ ಮಾಡಿರಿ."

ನಾನು ನಿರ್ಮಿಸಿದ ಈ ಮಾತೆಯರ ಬಳಗವು ನನ್ನೊಡನೆ ಇದ್ದು, ನನ್ನ ಸೇವೆ ಮಾಡಿ ಆನಂದಪಡಲಿ. ನಾನು ನಿರ್ಮಿಸಿದ ಈ ಶುಷ್ಕರೇವತೀ ಎಂಬ ದೇವತೆಯನ್ನು ಸಂತಾನಾಪೇಕ್ಷೆಯುಳ್ಳವರು ಪೂಜಿಸಿದರೆ ಪುತ್ರ ಸಂತಾನವಾಗುವದು." ಹೀಗೆ ಹೇಳಿ ಪರಮಾತ್ಮನಾದ ಶ್ರೀ ನರಸಿಂಹ ಪ್ರಭುವು ತಾನು ನಿರ್ಮಿಸಿದ ಮಾತೆಯರ ಗಣದೊಂದಿಗೆ ಅಂತರ್ಧಾನ ಹೊಂದಿದನು. ನರಸಿಂಹದೇವರು ಮಹಾದೇವರಿಗೆ ಪ್ರತ್ಯಕ್ಷವಾದ ಸ್ಥಳದಲ್ಲಿ **'ಕೃತಶೌಚ'** ಎಂಬ ಪವಿತ್ರ ತೀರ್ಥ ಉತ್ಪನ್ನವಾಯಿತು. ಅನಂತರ ರುದ್ರದೇವರು ಅಂಧಕಾಸುರನ ಪ್ರತಿಬಿಂಬಗಳ ರಕ್ತಪಾನಕ್ಕಾಗಿ ನಿರ್ಮಿಸಿದ ಮಾತೆಯರ ಗುಂಪನ್ನು ಶ್ರೀ ವಿಷ್ಣುವಿನ ಆದೇಶದಂತೆ ತನ್ನ ಒಂದು ರುದ್ರಮೂರ್ತಿಯನ್ನು ಕೊಟ್ಟು ಕರುಣಿಸಿದನು. ಆ ಎಳೂ ಮಾತೆಯರು ಅರ್ಧನಾರೀ ನಟೇಶ್ವರನಾದ ಶಿವನ ಆ ದಿವ್ಯಮೂರ್ತಿಯನ್ನು ನಡುವೆ ನಿಲ್ಲಿಸಿ ಸುತ್ತಲೂ ಅವನ ಸೇವೆಮಾಡುತ್ತ ನಿಂತು ಕೊಂಡರು. ಈ ಮಾತೆಯರ ಗುಂಪು ಭಕ್ತಿಯಿಂದ ಅರ್ಧನಾರೀ ನಟೇಶ್ವರನಾದ ಶಿವಮೂರ್ತಿಯನ್ನು ಭಕ್ತಿಯಿಂದ ಪೂಜೆಮಾಡಿದಾಗಲೆಲ್ಲ ಆ ಪರಮೇಶ್ವರನು ದೇವೇಶ್ವರನಾದ ನರಸಿಂಹಮೂರ್ತಿಯ ಪೂಜೆಯನ್ನು ಸ್ವಯಂತಾನೇ ಮಾಡುತ್ತಾನೆ. ಹೀಗೆ ಮಾತೃಗಣದ ಮಧ್ಯದಲ್ಲಿ ತನ್ನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಅಲ್ಲಿಯೇ ಅದೃಶ್ಯರಾದರು ಮಹಾದೇವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾಎಂಬತ್ತನೆಯ ಅಧ್ಯಾಯ ಮುಗಿದುದು.*



## ಕಾಶಿಯ ಮಹಾತ್ಮೆಯು

ಅಧ್ಯಾಯ - ೧೮೧

**ಋಷಯ ಊಚುಃ :**

**"ಶ್ರುತೋऽಂಧಕವಧಃ ಸೂತ ಯಥಾವತ್ತ್ವದುದೀರಿತಃ।**
**ವಾರಾಣಸ್ಯಾಸ್ತು ಮಾಹಾತ್ಮ್ಯಂ ಶ್ರೋತುಮಿಚ್ಛಾಮ ಸಾಂಪ್ರತಮ್॥**

**ಋಷಿಗಳು**:-ಸೂತನೇ, ನೀನು ಯಥಾರ್ಥವಾಗಿ ಹೇಳಿದ ಅಂಧಕನ ವೃತ್ತಾಂತವನ್ನು ಕೇಳಿದೆವು. ಈಗ ನಮಗೆ ಕಾಶಿಯ ಮಹಿಮೆಯನ್ನು ಕೇಳುವ ಬಯಕೆ ಆಗಿದೆ.

ಪೂಜ್ಯನಾದ ಪಿಂಗಲನನ್ನು ಯಾರು ಗಣಾಧೀಶನನ್ನಾಗಿ ಮಾಡಿದರು? ಆ ಮಹಾನುಭಾವನು ಕಾಶೀಪಟ್ಟಣದಲ್ಲಿ ಅನ್ನದಾನಿ ಅನಿಸಿದ್ದು ಹೇಗೆ? ಆ ಪವಿತ್ರ ಪಟ್ಟಣದ ಕ್ಷೇತ್ರಪಾಲನಾಗಿ ಅವನು ನಿಯೋಜಿತನಾದದ್ದು ಎಂತು? ಅಷ್ಟು ಅವನು ಶಿವನ ಪ್ರೀತಿಗೆ ಪಾತ್ರನಾದುದು ಹೇಗೆ? ಇದೆಲ್ಲವನ್ನು ತಮ್ಮ ಮುಖದಿಂದ ತಿಳಿಯಲು ಅಪೇಕ್ಷಿಸುತ್ತೇವೆ.

**ಸೂತ** :- ಕಾಶಿಯ ಮಹಿಮೆಯನ್ನೂ, ಪಿಂಗಲನು ಗಣೇಶನಾಗಿ ಕಾಶಿವಾಸಿ ಎನಿಸಿ, ಜನರಿಗೆಲ್ಲ ಅನ್ನದಾನ ಮಾಡಿದ ವೃತ್ತಾಂತವನ್ನೂ ಹೇಳುತ್ತೇನೆ ಕೇಳಿರಿ.

ಪೂರ್ವ ಕಾಲದಲ್ಲಿ ಕೂರ್ಮಭದ್ರನೆಂಬ ಶ್ರೀಮಂತ ಯಕ್ಷನಿದ್ದನು. ಆ ಕೂರ್ಮಭದ್ರನಿಗೆ ಹರಿಕೇಶ ಎಂಬ ಧಾರ್ಮಿಕ ಬುದ್ಧಿಯ ಪುತ್ರನಿದ್ದನು. ಅವನಿಗೆ ಬ್ರಾಹ್ಮಣರ ಮೇಲೆ ಭಕ್ತಿ ಬಹಳ. ಹುಟ್ಟಿದಂದಿನಿಂದಲೇ ಅವನಿಗೆ ಶಿವನಲ್ಲಿ ಪೂರ್ಣಶ್ರದ್ಧೆ. ಅವನಿಗೆ ಹಗಲಿರುಳೂ ಶಿವನದೇ ಧ್ಯಾನ. ಅವನಲ್ಲಿಯೇ ಮನಸ್ಸು. ಕುಳಿತಾಗ ಕೈಲಾಸಪತಿ, ನಿಂತಾಗ ನಾಗಭೂಷಣಾ, ಚಲಿಸುವಾಗ ಚಂದ್ರಚೂಡ, ಭೋಜನಮಾಡುವಾಗ ಭವಾನೀಪತಿ, ನೀರುಕುಡಿಯುವಾಗ ಶಿವ ಶಿವಾ, ಎಂದು ಯಾವಾಗಲೂ ದೇವರನ್ನು ನೆನೆಯುತ್ತಿದ್ದನು. ನಿಂತರವೂ ನಮಿಸುತ್ತಿದ್ದನು.

ಮಗನ ಈ ಶಿವಭಕ್ತಿಯನ್ನು ಕಂಡು, ತಂದೆಗೆ ಸಿಟ್ಟು ಬಂದಿತು. ಅವನು ಹರಿ ಕೇಶನನ್ನು ಕರೆದು ಹೇಳಿದನು. ''ಮಗನೆ, ಈಗ ನೀನು ಮಾಡುವ ಶಿವಭಕ್ತಿಯು ನಮ್ಮ ಯಕ್ಷಜಾತಿಗೆ ಉಚಿತವಲ್ಲ. ಈ ತರಹದ ಭಕ್ತಿ, ಧ್ಯಾನ, ಪೂಜೆ, ಅಹಿಂಸಾವ್ರತ, ಇವೆಲ್ಲವೂ ಸ್ವಭಾವದಿಂದಲೇ ಕ್ರೂರರಾದ ಯಕ್ಷರ ಜಾತಿಗೆ ಉಚಿತವಲ್ಲ. ಹಿಂಸಾಶೀಲರಾದ ನಾವೆಲ್ಲರೂ ಮಾಂಸಾಹಾರಿಗಳು. ಕಂದಮೂಲ ಫಲಗಳನ್ನು ತಿಂದು ಮುನಿಗಳಂತೆ, ಧ್ಯಾನ, ತಪೋನುಷ್ಠಾನ ಮಾಡುವುದು ನಮ್ಮ ಕುಲಧರ್ಮಕ್ಕೆ ವಿರುದ್ಧ, ನೀನು ಮಾನವರಂತೆ, ಈಗ ವೇದೋಕ್ತ ಕರ್ಮಗಳನ್ನು ಮಾಡುತ್ತಿರುವುದು ನಮ್ಮ ಸಂಪ್ರದಾಯಕ್ಕೆ ವಿರುದ್ಧ. ನಮ್ಮ ಜಾತಿ, ಕುಲಾಚಾರವನ್ನು ಬಿಟ್ಟು, ಮಾನವೀಯಧರ್ಮವನ್ನು ಆಚರಿಸುವ ನೀನು ಮನೆ ಬಿಟ್ಟು ಹೊರಗೆ ಹೋಗು'' ಎಂದು ಬೆದರಿಸಿದನು.

ತಂದೆಯ ಈ ನಿಷ್ಠುರ ನುಡಿಯನ್ನು ಕೇಳಿ, ಹರಿಕೇಶಯಕ್ಷನು ಮನೆಬಿಟ್ಟು ಹೊರಬಿದ್ದನು. ತನ್ನ ಶಿವೋಪಾಸನೆಗೆ ಯೋಗ್ಯ ಸ್ಥಳವೆಂದು ಹುಡುಕಿ, ಕಾಶಿಗೆ ಬಂದನು. ಅಲ್ಲಿಯ ಗಂಗಾತೀರದಲ್ಲಿ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ, ಮೋಟು ಮರದಂತೆ ನಿಂತು, ಉಗ್ರವಾದ ತಪಸ್ಸನ್ನು ಮಾಡತೊಡಗಿದನು. ಅವನನ್ನು ನೋಡಿದರೆ ಒಣಗಿದ ಕಟ್ಟಿಗೆಯಂತೆ ತೋರುತ್ತಿದ್ದನು. ದೂರದಿಂದ ನೋಡುವವರಿಗೆ ಅವನೊಂದು ಹೆಬ್ಬಂಡೆ. ಕಣ್ಣಿನ ಎವೆ ಪಿಳುಕಿಸದೆ, ಯಾವ ಆಹಾರವನ್ನು ತೆಗೆದುಕೊಳ್ಳದೆ, ಯಾವಾಗಲೂ ಉಗ್ರನಾಮಕನಾದ ಶಿವನನ್ನು ಕುರಿತು ತಪಸ್ಸನ್ನು ಆ ಯಕ್ಷನು ಮಾಡಿದನು.

ಹೀಗೆ ತಪಿಸುವಾಗ ದೇವಮಾನದ ಸಾವಿರ ವರುಷಗಳು ಉರುಳಿದವು. ಅಸಂಪ್ರಜ್ಞಾತ ಸಮಾಧಿಯೋಗದಲ್ಲಿ ಕುಳಿತು ತಪಿಸುವ ಆ ಯಕ್ಷನ ತಲೆಯ ಮೇಲೆ, ಹಾಗೂ ಸುತ್ತ ಮುತ್ತಲೂ ದೊಡ್ಡ ಹುತ್ತ ಹಬ್ಬಿತು. ಅದರ ಮೇಲೆ ಇರುವೆಗಳು ಸಾಲಿಟ್ಟವು. ಅವನ ಮೈಗೂ ಕೂಡ ಇರುವೆ ಹತ್ತಿ ಮುತ್ತಿದವು. ವಜ್ರದ ಸೂಜಿಯಂತಿದ್ದ ತಮ್ಮ ಹಲ್ಲುಗಳಿಂದ ಅವನ ದೇಹವನ್ನುಕಚ್ಚಿ ಚುಚ್ಚಿ ಹಿಂಸಿಸಿದವು. ಅವನ ಮೆಯ್ಯಲ್ಲಿಯ ಮಾಂಸ ಕರಗಿತು, ರಕ್ತ ಒಣಗಿತು. ತೊಗಲು ಕೂಡಾ ಸವೆದು ಜೀರ್ಣವಾಯಿತು. ಮೈಎಲ್ಲವೂ ಬೆಳ್ಳಗಾಗಿ, ಶರೀರವೆಲ್ಲವೂ ಪಂಜರದಂತೆ ನಿಂತಿತು. ಎದೆಗೂಡಿನಲ್ಲಿಯ ಯಾವದೋ ಒಂದು ಪಕ್ಕೆಯಲ್ಲಿ ಮಾತ್ರ ಅವನ ಜೀವದ ಹಕ್ಕಿಯು ಮೆಲ್ಲನೆ ಮಿಡಿಯುತ್ತಿತ್ತು. 'ಶಿವ, ಶಿವ' ಎಂದು ನುಡಿಯುತ್ತಿತ್ತು.

ಇತ್ತ ಕೈಲಾಸ ಪರ್ವತದಲ್ಲಿ ಪಾರ್ವತಿ ಪರಮೇಶ್ವರರ ಸರಸಸಲಾಪ, ಆ ಹೇಮವತಿಯ ಹೃದಯದಲ್ಲಿ ಒಂದು ಹಂಬಲ ಹೆಡೆ ಎತ್ತಿತು. ಅವಳು ತನ್ನ ಮನದ

ಬಯಕೆಯನ್ನು ತನ್ನ ಮನದನ್ನನ ಎದುರು ಮೆಲುನಗೆಯೊಂದಿಗೆ ಮಂಡಿಸಿದಳು. "ನಾಥಾ, ನಿನ್ನ ಆಡುಂಬೊಲವಾದ ಕಾಶೀ ಪಟ್ಟಣವನ್ನು ಮತ್ತೊಮ್ಮೆ ನೋಡಬೇಕೆಂದು ನನ್ನ ಅಪೇಕ್ಷೆ. ಆ ಕ್ಷೇತ್ರವು ನಿನಗೆ ಅತ್ಯಂತ ಪ್ರಿಯತಮ. ನಿನಗೆ ಪ್ರಿಯವಾದ ಬಳಿಕ ಆ ಕ್ಷೇತ್ರದ ಮಹಿಮೆಯನ್ನು ಕೇಳಿದರೆ, ಅದನ್ನು ಕಣ್ಣಾರೆ ನೋಡಿದರೆ ಮಹತ್ತರ ಫಲವು ಬರುವದು ಖಂಡಿತ ಹಾನೇ?" ಸರ್ವಮಂಗಲೆಯ ಈ ಮಧುರ ಮಾತುಗಳನ್ನು ಕೇಳಿ, ಆವಳ ಅಪೇಕ್ಷೆಯನ್ನು ಪೂರೈಸಬೇಕೆಂದು ಪರಮೇಶ್ವರನು ಆ ಸತೀದೇವಿಯೊಡನೆ ಕೈಲಾಸದಿಂದ ಹೊರಟು ಕಾಶಿಯಲ್ಲಿಯ ತನ್ನ ಉಪವನಕ್ಕೆ ಬಂದನು. ಮಹಾದೇವಿಗೆ ನಂದನವನದಂತೆ ಸುಂದರವಾಗಿದ್ದ ಆ ಉದ್ಯಾನವನ್ನು ತೋರಿಸಿ ಹೇಳಿದನು.

"ದೇವಿ, ಈ ಉದ್ಯಾನದಲ್ಲಿ ಬಗೆ ಬಗೆಯ ಗಿಡಬಳ್ಳಿಗಳು ಅರಳಿ, ಅನೇಕ ಅರಳುಗಳು ನಗುತ್ತಲಿವೆ. ಅಲ್ಲಿಯ ಬಳ್ಳಿವಾಡಗಳು, ಮಂಜುಲತಾ ಕುಂಜಗಳು ಅತ್ಯಂತ ಮನೋಹರವಾಗಿವೆ. ಅರಳಿದ ಕೇದಗಿ ಬನಗಳು ಮುಳ್ಳು ತುಂಬಿದ್ದರೂ ತಮ್ಮ ನಗುವು ದೀರಿ ವಾತಾವರಣವನ್ನೇ ಗಂಧಾಢ್ಯವನ್ನಾಗಿ ಮಾಡಿವೆ. ಇಲ್ಲಿಯ ಪರಿಮಳ ಬೀರುವ ಅಶೋಕ ಪುನ್ನಾಗ, ಬಕುಲ, ತಮಾಲ ಮುಂತಾದ ಗಿಡಬಳ್ಳಿಗಳಲ್ಲಿ ದುಂಬಿಗಳ ದಂಡು ಬಂದು ಜೇನನ್ನು ಉಂಡು ಗೀತಗುಂಜಾರವದಿಂದ ಜನಮನವನ್ನು ರಂಜಿಸುತ್ತದೆ. ಇಲ್ಲಿಯ ಸರೋವರಗಳಲ್ಲಿ ಬಿರಿದ ಹೊಂದಾವರೆಗಳ ಪರಾಗವನ್ನು ಲೇಪಿಸಿಕೊಂಡು ಚಕ್ರವಾಕ, ಹಂಸ ಕಾರಂಡವ, ಭೃಂಗಮುಂತಾದವುಗಳು ಮಧುರ ಧ್ವನಿಗೈಯುತ್ತಲಿವೆ. ಇಲ್ಲಿಯ ಲತಾಮಂಟಪಗಳಲ್ಲಿ ವಿದ್ಯಾಧರರು ಸಿದ್ಧ ಚಾರಣರು ಸಂಗೀತಸಭೆ ನಡೆಸುತ್ತಾರೆ. ಅಪ್ಸರೆಯರು ನರ್ತಿಸುತ್ತಾರೆ. ಈ ನೃತ್ಯ-ಸಂಗೀತಗಳಿಗೆ ಸಾಥಿ ಮಾಡಿದಂತೆ ಅನೇಕ ಪಕ್ಷಿಗಳು 'ಕಲಕಲ' ಧ್ವನಿಗೈಯುತ್ತವೆ. ನವಿಲುಗಳು ಸಾವಿರಕಣ್ಣಿನ ಗರಿ ತೆರೆದು ಕುಣಿದು ಕೂಗುತ್ತವೆ. ಇಲ್ಲಿಗೆ ಬಂದವರ ಶ್ರಮವೆಲ್ಲವೂ ತಂಪಿಂಪು ತೀಡುವ ತಂಗಾಳಿಯಿಂದ ಪರಿಹಾರವಾಗುತ್ತದೆ. ಇಂತಹ ಗಿಡ-ಬಳ್ಳಿಗಳಿಂದ ನಿಬಿಡವಾಗಿ ಹೆಣೆದು ಸುಂದರವಾಗಿ ಕಾಣುವ, ಅಳಿ, ಗಿಳಿ, ಕೋಗಿಲೆಗಳ ಮಧುರವಾದ ಮನೋಹರವಾದ, ಉಪವನವನ್ನು ದೇವಿ ನೀನು ನೋಡು, ಆನಂದಪಡು." ಎಂದು ಪರಮೇಶ್ವರನು ತನ್ನ ಸುಂದರಿಯಾದ ಪಾರ್ವತಿಗೆ ತೋರಿಸಿದನು. ಅದನ್ನು ನೋಡಿ ಹರ್ಷಗೊಂಡ ಹೈಮವತಿಯ ನುಡಿದಳು.

**ದೇವಿ :-** "ಪ್ರಭು, ತಾವು ಅತ್ಯಂತ ಸುಂದರವಾಗಿ ಶೋಭಿಸುವ ಉದ್ಯಾನ ತೋರಿಸಿದಿರಿ. ಇದರಿಂದ ನಾನು ಧನ್ಯಳಾದೆ. ಆದರೆ ಈ ಕ್ಷೇತ್ರದ ಎಲ್ಲ ಗುಣಗಳನ್ನು ಮತ್ತೊಮ್ಮೆ ನನಗೆ ಹೇಳಿರಿ. ಈ ಕಾಶೀಕ್ಷೇತ್ರವು ಅವಿಮುಕ್ತಕ್ಷೇತ್ರವೆಂದು ಏಕೆ ಕರೆಯಲ್ಪಡುತ್ತದೆ? ಇದರ ಮಹಿಮೆಯನ್ನು ನಿಮ್ಮ ಬಾಯಿಂದ ಕೇಳಿದ್ದೇನೆ. ಆದರೂ ನನಗೆ ತೃಪ್ತಿಯಿಲ್ಲ. ಮತ್ತೆ ಮತ್ತೆ ಈ ಅವಿಮುಕ್ತ ಕ್ಷೇತ್ರದ ಮಹಿಮೆಯನ್ನು ತಮ್ಮ ಮುಖದಿಂದ ಕೇಳಬೇಕೆಂದು ಅಪೇಕ್ಷೆಯಾಗಿದೆ. ದಯವಿಟ್ಟು ಈ ವಾರಣಾಸಿಯ ಮಹಿಮೆ ಹೇಳಿರಿ.

**ಮಹಾದೇವ :-** ಈ ವಾರಣಾಸಿಯು ನನ್ನ ಗುಹ್ಯಕ್ಷೇತ್ರ. ಇಲ್ಲಿ ನೆಲೆಸಿದ ಎಲ್ಲ ಪ್ರಾಣಿಗಳಿಗೂ, ಮೋಕ್ಷವು ದೊರಕುವುದು. ಇಲ್ಲಿ ಇರುವವರೆಲ್ಲರೂ ಸಿದ್ಧರು. ಮಹೇಶವ್ರತವನ್ನು ಆಚರಿಸುವರು. ಬಗೆಬಗೆಯ ಗಿಡಬಳ್ಳಿಗಳಿಂದ ತುಂಬಿದ ಅನೇಕ ಬಗೆಯ ಪಕ್ಷಿಗಳ ಕಂಠ ಕೂಜನದಿಂದ ಮಂಜುಳವಾದ, ಕಮಲ ಕನ್ನೈದಿಲೆ, ಹೂಗಳಿಂದ

ತುಂಬಿ, ಶೋಭಿಸುವ, ಉದ್ಯಾನಗಳಿಂದ ಅಲಂಕೃತವಾದ ಈ ಕಾಶೀಪಟ್ಟಣದಲ್ಲಿ ನನಗೆ ಯಾವಾಗಲೂ ವಾಸ ಮಾಡಬೇಕು ಎಂದು ಎನಿಸುವದು. ಅದಕ್ಕೆ ಒಂದು ಕಾರಣ ಉಂಟು. ಈ ಕಾಶಿಯಲ್ಲಿ ನೆಲೆಸಿ, ನನ್ನನ್ನು ಸರ್ವಾರ್ಪಣಭಾವದಿಂದ ಸೇವೆ ಮಾಡುವ ಭಕ್ತರು ಮೋಕ್ಷವನ್ನು ಹೊಂದುವಂತೆ ಬೇರೆ ಕಡೆಯ ಭಕ್ತರು ಹೊಂದುವದಿಲ್ಲ. ಆದುದರಿಂದ ಈ ಕಾಶೀಕ್ಷೇತ್ರವು ನನಗೆ ಅತ್ಯಂತ ಪ್ರೀತಿಯ ಕ್ಷೇತ್ರವಾಗಿದೆ. ಆದುದರಿಂದಲೇ ನಾನು ಈ ಕ್ಷೇತ್ರವನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ. ಇದು ಎಂದಿಗೂ ನನ್ನಿಂದ ಮುಕ್ತವಾಗುವದಿಲ್ಲ. ಆದುದರಿಂದಲೇ ಅವಿಮುಕ್ತಕ್ಷೇತ್ರವೆಂದು ಇದರ ಖ್ಯಾತಿ. ನೈಮಿಷ, ಕುರುಕ್ಷೇತ್ರ, ಪುಷ್ಕರ, ಗಂಗಾದ್ವಾರ ಅಥವಾ ಮತ್ತೆ ಯಾವ ತೀರ್ಥದಲ್ಲಿಯೂ ಸ್ನಾನಮಾತ್ರದಿಂದ ಮೋಕ್ಷವು ಸಿಗುವುದಿಲ್ಲ. ಈ ಕಾಶಿಯಲ್ಲಿ ಹಾಗೂ ಪ್ರಯಾಗದಲ್ಲಿ ಸ್ನಾನಮಾಡುವದರಿಂದ ಮೋಕ್ಷವು ಲಭಿಸುವುದು. ವಾಸ್ತವಿಕವಾಗಿ ಪ್ರಯಾಗಕ್ಕಿಂತಲೂ ನಾನು ನೆಲೆಸಿರುವ ಈ ಕಾಶೀಕ್ಷೇತ್ರವು ಉತ್ತಮವಾದ ಕ್ಷೇತ್ರ ಎಂದು ತಿಳಿ. ಜೈಗೀಷವ್ಯ ಎಂಬ ಯೋಗಿಶ್ರೇಷ್ಠನು ಈ ಕ್ಷೇತ್ರದ ಮಹಿಮೆ ಹಾಗೂ ನನ್ನಲ್ಲಿರುವ ಭಕ್ತಿಭಾವನೆಯಿಂದ ಯೋಗ ಸಿದ್ಧಿ ಪಡೆದು ದಿವ್ಯಗತಿಯನ್ನು ಹೊಂದಿದನು. ಈ ಕಾಶಿಕ್ಷೇತ್ರದಲ್ಲಿ ಇದ್ದು ನನ್ನನ್ನು ಧ್ಯಾನಮಾಡಿ ಯೋಗಸಾಧನ ಮಾಡುವವರಿಗೆ ದೇವದುರ್ಲಭವಾದ ಮೋಕ್ಷ ಪ್ರಾಪ್ತಿಯಾಗುವುದು. ಇಲ್ಲಿ ಕಾಶೀಕ್ಷೇತ್ರದಲ್ಲಿ ವಾಸಿಸುವ ದೇವರಿರಲಿ, ದಾನವರಿರಲಿ, ಮಾನವರಿರಲಿ, ಮುನಿಗಳಿರಲಿ ಯಾರೇ ಇದ್ದರೂ ಅವರಿಗೆ ಮುಕ್ತಿಯು ದೊರೆಯುವುದು. ನಾನು ಅಂಥವರ ಮೇಲೆ ಪ್ರೀತನಾಗಿ ಸಾಯುಜ್ಯ ಕೊಡುವೆನು. ಕುಬೇರನು ಈ ಕ್ಷೇತ್ರದಲ್ಲಿ ವಾಸಮಾಡಿ, ಮಹಾದೇವರ ಸೇವೆಮಾಡಿ ಗಣಾಧಿಪತ್ಯ ಪದವಿ ಪಡೆದನು. ಈ ಕ್ಷೇತ್ರದಲ್ಲಿ ನನ್ನ ಆರಾಧನೆ ಮಾಡಿದವರು ಅತ್ಯುತ್ತಮ ಗತಿ ಪಡೆಯುವರು.

ಪರಾಶರ ಮಗನಾದ ಯೋಗೀಶ್ವರ ವೇದವ್ಯಾಸರು, ವೇದಮಾರ್ಗದ ಪ್ರವರ್ತಕರು. ನಿರ್ಣಾಯಕರಾದ ಆ ವ್ಯಾಸರು ಕೂಡಾ ಈ ಪುಣ್ಯಕ್ಷೇತ್ರದಲ್ಲಿ ವಿಹರಿಸುತ್ತಾರೆ. ಬ್ರಹ್ಮ, ವಿಷ್ಣು, ವಾಯು, ಇಂದ್ರ, ಮೊದಲಾದ ದೇವತೆಗಳೆಲ್ಲರೂ ನನ್ನನ್ನೇ ಉಪಾಸನೆ ಮಾಡುತ್ತಾರೆ. ಇನ್ನೂ ಎಷ್ಟೋ ಸಿದ್ಧರು ಗುಪ್ತರೂಪದಿಂದ ಇಲ್ಲಿ ಮಹಾವ್ರತಗಳನ್ನು ಕೈಕೊಂಡು ಅನನ್ಯ ಮನಸ್ಸಿನಿಂದ ನನ್ನನ್ನೇ ಉಪಾಸಿಸುತ್ತಾರೆ.

ಈ ಕಾಶೀಪಟ್ಟಣವನ್ನು ಮುಂದೆ ನನ್ನ ಅನುಗ್ರಹದಿಂದ **ಅಲರ್ಕ** ಎಂಬ ಮಹಾರಾಜನು ಆಳುವನು. ಅವನು ಈ ಕಾಶೀನಗರವನ್ನು ಮೊದಲಿನಂತೆ ಚಾತುರ್ವರ್ಣದ ವ್ಯವಸ್ಥೆಯೊಂದಿಗೆ ಪ್ರತಿಷ್ಠೆಮಾಡಿ ರಾಜ್ಯ ಮಾಡುತ್ತಾನೆ. ಕೊನೆಗೆ ವಿರಕ್ತನಾಗಿ, ತನ್ನ ಪಂಚಪ್ರಾಣಗಳನ್ನು ಅರ್ಪಿಸಿ ಕೊನೆಗೆ ನನ್ನನ್ನೇ ಹೊಂದುವನು.

ಪಾರ್ವತಿ, ಅಂದಿನಿಂದ ಈ ಕ್ಷೇತ್ರದಲ್ಲಿ ವಟುಗಳೇ ಇರಲಿ, ಸನ್ಯಾಸಿಗಳೇ ಇರಲಿ, ಗೃಹಸ್ಥಾಸ್ರಮಿಗಳೇ ಇರಲಿ ಅವರೆಲ್ಲರೂ ನನ್ನಲ್ಲಿ ಭಕ್ತಿಮಾಡಿ, ಮನಸ್ಸನ್ನಿಟ್ಟು ನನ್ನ ಅನುಗ್ರಹದಿಂದ ಮೋಕ್ಷವನ್ನು ಹೊಂದುತ್ತಾರೆ. ಈ ಕಾಶಿಯಲ್ಲಿ ವಾಸಿಸಿದ ಜನರು ಧರ್ಮಲಂಡನಿರಲಿ, ವಿಷಯಲಂಪಟನಿರಲಿ, ಯಾರೇ ಇರಲಿ, ಏನೇ ಇರಲಿ, ಏನೇ ಆಗಲಿ, ಈ ಕಾಶೀಪಟ್ಟಣದಲ್ಲಿ ದೇಹಬಿಟ್ಟರೆ ಮುಗಿಯಿತು. ಅವರು ಮರಳಿ ಸಂಸಾರಕ್ಕೆ

ಬರುವಂತಿಲ್ಲ. ಸಾವಿರಾರು ಜನ್ಮಗಳಲ್ಲಿ ತಪಸ್ಸು ಮಾಡಿ ಪಡೆಯಬೇಕಾದ ಸಿದ್ಧಿಯು ಕೇವಲ ಕಾಶಿಯೊಂದರಿಂದಲೇ ಸುಲಭವಾಗಿ ದೊರಕುವದು. ಪಾರ್ವತಿ, ಇದೇ ಈ ವಾರಣಾಸಿ ಕ್ಷೇತ್ರದ ವೈಶಿಷ್ಟ್ಯ ಮತ್ತು ಮಹತ್ವ. ಈ ಕ್ಷೇತ್ರದ ಮಹಿಮೆಯನ್ನೆಲ್ಲ ನಾನು ನಿನಗೆ ಹೇಳಿದೆ. ಇದನ್ನು ಯೋಗಿಗಳು ಮಾತ್ರ ತಿಳಿಯುತ್ತಾರೆ. ಆ ಅವಿಮುಕ್ತಕ್ಷೇತ್ರವು ಸಿದ್ಧಿಕ್ಷೇತ್ರ, ಗುಹ್ಯಕ್ಷೇತ್ರವೆಂದು ಹೆಸರಾಗಿದೆ. ಈ ಕಾಶಿಯೇ ಶ್ರೇಷ್ಠಸ್ಥಾನ. ಪುಣ್ಯ ಭೂಮಿ.

"ವಾರಾಣಸಿ ತು ಭುವನತ್ರಯಸಾರಭೂತಾ ರಮ್ಯಾ ಸದಾ ಮಮ ಪುರೀ ಗಿರಿರಾಜ ಪುತ್ರಿ
ಅತ್ರಾಗತಾ ವಿವಿಧ ದುಷ್ಕೃತ ಕಾರಿಣೋಽಪಿ ಪಾಪಕ್ಷಯಾದ್ವಿರಜಸಃ ಪ್ರತಿಭಾಂತಿ ಮರ್ತ್ಯಾಃ ॥

ಈ ಕಾಶೀಪಟ್ಟಣವು ಮೂರುಲೋಕಗಳ ಸಾರಭೂತವಾದದ್ದು. ಇದು ಅತ್ಯಂತ ರಮಣೀಯ. ಇದು ನನ್ನ ಪಟ್ಟಣ. ಹಲವಾರು ಬಗೆಯ ದುಷ್ಕರ್ಮ ಮಾಡಿದವರೆಲ್ಲರೂ ಇಲ್ಲಿ ಬಂದ ಕೂಡಲೇ ಪವಿತ್ರರಾಗುವರು. ಅವರ ದುರಿತಗಳೆಲ್ಲ ದೂರವಾಗಿ ನಿಷ್ಕಲ್ಮಷರಾಗಿ ಕಂಗೊಳಿಸುವರು. ಆದುದರಿಂದ ಈ ಕ್ಷೇತ್ರವು ನನ್ನ ಅತ್ಯಂತ ಪ್ರೀತಿಯ ಕ್ಷೇತ್ರವಾಗಿದೆ. ಈ ಕ್ಷೇತ್ರವು ನನಗೆ ಅತ್ಯಂತ ಪ್ರಿಯತಮವಾದುದು. ಇಲ್ಲಿ ಮರಣ ಹೊಂದಿದವರು ಪರಮಪದವನ್ನು ಐದುತ್ತಾರೆ. ಇಲ್ಲಿ ನಿಂತು ನನ್ನನ್ನು ಧ್ಯಾನ ಮಾಡುವವರ ಯೋಗಾಗ್ನಿಯು ತಾನಾಗಿಯೇ ಉದ್ದೀಪ್ತ ಆಗುತ್ತದೆ. ಅವರಿಗೆಲ್ಲ ನಾನು ಭೋಗ, ಐಶ್ವರ್ಯ, ಸೌಭಾಗ್ಯಗಳನ್ನು ಇಹದಲ್ಲಿ ಇತ್ತು, ಪರದಲ್ಲಿ ಶಿವಸಾಯುಜ್ಯವನ್ನು ಕರುಣಿಸುತ್ತೇನೆ.

ಇದೇ ವೇಳೆಯಲ್ಲಿ ಆ ಕಾಶೀ ಕ್ಷೇತ್ರದಲ್ಲಿ ಉಗ್ರ ತಪಸ್ಸನ್ನು ಮಾಡುತ್ತಿದ್ದ ಹರಿಕೇಶ ಯಕ್ಷನಿಗೆ ಅನುಗ್ರಹಮಾಡಿ ವರವನ್ನು ಕರುಣಿಸಬೇಕೆಂದು ಮಹಾದೇವರ ಮನಸ್ಸಿನಲ್ಲಿ ಕರುಣೆ ಮೂಡಿತು. ದೇವಿಯೊಂದಿಗೆ ಆ ವಿರೂಪಾಕ್ಷನು ಯಕ್ಷನು ತಪಸ್ಸು ಮಾಡುವಲ್ಲಿ ಬಂದ. ಉಗ್ರವಾದ ತಪಶ್ಚರ್ಯೆಯಿಂದ ಕೊರಗಿ, ಸೊರಗಿ, ಹೋದ ಆ ಯಕ್ಷನ ಮೈಮೇಲಿನ ತೊಗಲೆಲ್ಲವೂ ಸುಲಿದು ಹೋಗಿದ್ದಿತು. ಬರಿ ನರಗಳು ಬಿಗಿದ ಮೂಳೆಗಳಪಂಜರಮಾತ್ರ ನಿಂತುಕೊಂಡಿತ್ತು. ಇಷ್ಟಾದರೂ ಅವನು ಶಿವಪಂಚಾಕ್ಷರಿಯ ಜಪವನ್ನು ಮಾಡುತ್ತಲೇ ಇದ್ದನು. ಅವನನ್ನು ಕಂಡ ಕೂಡಲೇ ಪಾರ್ವತೀ ದೇವಿಯ ಎದೆ ಕರಗಿತು. ಅವಳು ಶಿವನಿಗೆ ಆ ಬಡಕಲು ದೇಹದ ಅಸ್ಥಿಗತ ಪ್ರಾಣನಾದ ಯಕ್ಷನನ್ನು ತೋರಿಸಿ-

"ಸತ್ಯಂನಾಮ ಭವಾನುಗ್ರೋ ದೇವೈರುಕ್ತಸ್ತು ಶಂಕರ ।
ಈದೃಶೇ ಚಾಸ್ಯ ತಪಸಿ ನ ಪ್ರಯಚ್ಛಸಿ ಯದ್ವರಂ ॥

ಶಂಕರನೇ ದೇವತೆಗಳು ನಿನ್ನನ್ನು ಉಗ್ರ ಎಂದರೆ ಕ್ರೂರ ಎಂದು ಕರೆಯುತ್ತಾರೆ. ಅದು ಯಥಾರ್ಥವೇ ಆಗಿದೆ. ಯಾಕೆಂದರೆ, ಇಂತಹ ದಾರುಣವಾದ ತಪಸ್ಸನ್ನುಮಾಡುವ ಈ ಯಕ್ಷ ಕುಮಾರನಿಗೆ ನೀನು ಇನ್ನೂ ವರವನ್ನು ಕರುಣಿಸದಿರುವೆ. ಇಂತಹ ಈ ದಿವ್ಯಕ್ಷೇತ್ರದಲ್ಲಿ ಇಷ್ಟು ಭಕ್ತಿಯಿಂದ ನಿನ್ನನ್ನು ಸೇವಿಸಿ ಉಪಾಸನೆ ಮಾಡಿದರೂ ಇವನಿಗೆ ಫಲ ದೊರಕಬಾರದೆ? ಪರಮೇಶ್ವರನೇ, ಬೇಗನೇ ಇವನು ಬಯಸಿದ

ವರವನ್ನು ಕೊಟ್ಟು ಅನುಗ್ರಹಿಸು. ಶಿವನು ಹೃಷ್ಟನೇ ಆಗಲಿ, ತುಷ್ಟನೇ ಆಗಲಿ, ಅವನಿಂದ ಇಷ್ಟಾರ್ಥಸಿದ್ಧಿ ಮಾತ್ರ ಬೇಗ ಆಗುವುದೆಂದು ಮನು ಮೊದಲಾದ ಮಹಾಮುನಿಗಳು ಹೇಳುವರು. ಭೋಗ, ಭಾಗ್ಯ, ರಾಜ್ಯ, ಅಧಿಕಾರ, ಐಶ್ವರ್ಯ ಮುಂತಾದ ಅಧಿಕ ಫಲಗಳು ಕೊನೆಗೆ ಮೋಕ್ಷವೂ ಕೂಡ ಸದಾಶಿವನಿಂದ ಭವಭಕ್ತರಿಗೆ ತಪ್ಪದೆ ದೊರಕುವದು ಎಂದು ಜ್ಞಾನಿಗಳು, ಮಹರ್ಷಿಗಳು ಘೋಷಿಸುವರು. ಈ ಯಕ್ಷನಿಗೆ ವರವಿತ್ತು ಆ ಮುನಿಗಳ ಮಾತುಗಳನ್ನು ಯಥಾರ್ಥ ಮಾಡು.''

ಹೀಗೆ ಪಾರ್ವತಿಯು ಪ್ರಾರ್ಥಿಸಿಕೊಂಡ ಬಳಿಕ ಆ ಶಿವನು ಯಕ್ಷನು ಕುಳಿತ ಸ್ಥಳದಲ್ಲಿ ಹೋಗಿ ಅವನ ಹತ್ತಿರ ನಿಂತು ಅವನಿಗೆ ದಿವ್ಯದೃಷ್ಟಿಯನ್ನು ಪ್ರದಾನ ಮಾಡಿದನು. ಆಗ ಹರಿಕೇಶನು ಮೆಲ್ಲಮೆಲ್ಲನೆ, ತನ್ನ ಕಣ್ಣನ್ನು ತೆರೆದು, ಎತ್ತಿನ ಮೇಲೆ ಹತ್ತಿ ಬಂದ ಗಂಗಾಧರನನ್ನು ಕಣ್ಣು ತುಂಬಾ ನೋಡಿದನು. ಆಗ ಮಹಾದೇವರು ಅವನಿಗೆ ''ಯಕ್ಷನೇ, ನಿನಗೆ, ದುರ್ಲಭವಾದ ನನ್ನ ದರುಶನವನ್ನು ಕೊಟ್ಟಿದ್ದೇನೆ. ನಿನಗೆ ಬೇಕಾದ ವರವನ್ನು ಬೇಡು. ಮನಸ್ಸಿನಲ್ಲಿಯ ಚಿಂತೆ ಬಿಟ್ಟು ನನ್ನನ್ನು ನೋಡು. ನಿನಗೆ ನನ್ನ ಸಮಾನವಾದ ದೇಹಧಾವಲ್ಯವು ಪ್ರಾಪ್ತವಾಗುವದು.'' ಕೂಡಲೇ ಆ ಯಕ್ಷನಿಗೆ ಶಿವನ ದೇಹದಂತೆ ಶುಭ್ರಕಾಂತಿಯಿಂದ ಹೊಳೆಯುವ ದಿವ್ಯದೇಹವು ಪ್ರಾಪ್ತವಾಯಿತು ಆಗ ಅವನು ಪರಮೇಶ್ವರನ ಎರಡೂ ಪಾದಗಳ ಮೇಲೆ ತನ್ನ ತಲೆಯಿಟ್ಟು, ಎರಡೂ ಕೈಗಳನ್ನು ಜೋಡಿಸಿ ಕೇಳಿಕೊಂಡನು.

''ಪೂಜ್ಯನಾದ ಪರಮೇಶ್ವರ, ನನಗೆ ನಿನ್ನಲ್ಲಿ ಅನನ್ಯವಾದ ಭಕ್ತಿಯನ್ನು ಕರುಣಿಸು, ಮತ್ತು ಗಣಾಧಿಪತ್ಯ ನೀಡು, ಹಾಗೂ ನನ್ನಿಂದ ಜನರಿಗೆಲ್ಲ ನಿರಂತರವೂ ಅನ್ನದಾನವು ನಡೆಯುವಂತೆ ಮಾಡು. ಹಾಗೂ ನಿನ್ನ ದಿವ್ಯ ಸ್ಥಾನವಾದ ಅವಿಮುಕ್ತಕ್ಷೇತ್ರವನ್ನು ನಾನು ಯಾವಾಗಲೂ ಕಣ್ಣಿನಿಂದ ನೋಡುತ್ತಿರುವಂತೆ ಅನುಗ್ರಹಿಸು.''

**ಮಹಾದೇವ :-** ಭವಭಕ್ತನಾದ ಯಕ್ಷನೇ, ನಿನ್ನ ಇಷ್ಟಾರ್ಥಗಳನ್ನೆಲ್ಲ ಪೂರೈಸಿದ್ದೇನೆ. ನೀನು ಇನ್ನು ಮುಂದೆ ಮುಪ್ಪುಮರಣಗಳಿಂದ ರಹಿತನಾಗಿ ಗಣಾಧ್ಯಕ್ಷನಾಗುವೆ. ನಿನ್ನ ಎಲ್ಲ ರೋಗಗಳು ದೂರವಾಗುವವು. ಕುಬೇರನಂತೆ ಐಶ್ವರ್ಯ ಪೂರ್ಣನಾಗಿ ಜನರಿಗೆಲ್ಲ ಅನ್ನದಾನವನ್ನು ಮಾಡುವೆ. ಹಾಗೂ ನಿನಗೆ ಸಕಲ ವಿಧವಾದ ಯೋಗಸಿದ್ಧಿಯು ಪ್ರಾಪ್ತವಾಗಿ, ನೀನು ಮಹಾಬಲಿಷ್ಠನೂ, ಬ್ರಾಹ್ಮಣ ಪೂಜಕನೂ, ನನಗೆ ಅತ್ಯಂತ ಪ್ರೀತ್ಯಾಸ್ಪದನೂ, ಸರ್ವಲೋಕಪೂಜಿತನೂ ಆಗುವೆ. ಯಾರಿಂದಲೂ ಗೆಲ್ಲಲು ಅಶಕ್ಯನಾದ, ನೀನು ಕೈಯಲ್ಲಿ ದಂಡಹಿಡಿದು ಕಾಶಿಯ ಕ್ಷೇತ್ರಪಾಲನಾಗಿ ವಾಸುಸುವೆ. ಉದ್ಭವ, ಸಂಭ್ರಮ ಇಬ್ಬರು ಪರಿಚಾರಕರು ನಿನಗೆ ಸಹಾಯ ಮಾಡುವರು.'' ಹೀಗೆ ಹೇಳಿ, ಶಿವನು ಆ ಹರಿಕೇಶ ಎಂಬ ಯಕ್ಷನನ್ನು ಗಣಾಧಿಪನನ್ನಾಗಿ ಮಾಡಿ ಅಂತರ್ಧಾನ ಹೊಂದಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಎಂಬತ್ತೊಂದನೆಯ ಅಧ್ಯಾಯ ಮುಗಿದುದು.*

—o—

## ಕಾಶಿಯಲ್ಲಿದ್ದ ಕ್ಷೇತ್ರಗಳ ವರ್ಣನೆ

ಅಧ್ಯಾಯ - ೧೮೨

**ಸೂತ ಉವಾಚ:**

**"ಇಮಾಂ ಪುಣ್ಯೋದ್ಭವಾಂ ಸ್ನಿಗ್ಧಾಂ ಕಥಾಂ ಪಾಪಪ್ರಣಾಶಿನೀಮ್।**
**ಶೃಣ್ವಂತು ಋಷಯಃ ಸರ್ವೇ ಸುವಿಶುದ್ಧಾಸ್ತಪೋಧನಾಃ।**
**ಗಣೇಶ್ವರಪತಿಂ ದಿವ್ಯಂ ರುದ್ರತುಲ್ಯಪರಾಕ್ರಮಂ।**
**ಸನತ್ಕುಮಾರೋ ಭಗವಾನಪೃಚ್ಛನ್ನಂದಿಕೇಶ್ವರಮ್।೨॥**

**ಸೂತ** :- ತಪೋಧರನರಾದ ಮಹರ್ಷಿಗಳೇ, ಪಾಪನಾಶಕವಾದ ಈ ಕಾಶೀಕ್ಷೇತ್ರದ ಪುಣ್ಯದ ಕತೆಯನ್ನು ನೀವೆಲ್ಲರೂ ಕೇಳಿರಿ. ಹಿಂದೆ ಪೂಜ್ಯನಾದ ಸನತ್ಕುಮಾರನು ಮಹಾ ಪರಾಕ್ರಮಶಾಲಿಯಾದ ಗಣಾಧ್ಯಕ್ಷ ನಂದಿಕೇಶ್ವರನನ್ನು ಕುರಿತು ಪ್ರಶ್ನೆ ಮಾಡಿದನು.

**ಸನತ್ಕುಮಾರ** :- "ನಂದಿಕೇಶ್ವರನೆ, ಸರ್ವ ಪ್ರಾಣಿಗಳಿಗೂ ಒಡೆಯನಾದ ಪರಮಾತ್ಮನು ಪರಮೇಶ್ವರ ರೂಪದಿಂದ ಪ್ರಳಯಕಾಲದವರೆಗೂ ಸ್ಥಾಣುವಾಗಿ ಈ ಕಾಶೀಕ್ಷೇತ್ರದಲ್ಲಿ ನೆಲೆ ನಿಂತಿದ್ದರ ರಹಸ್ಯವೇನು? ಇದನ್ನು ನನಗೆ ತಿಳಿಸು.

**ನಂದಿಕೇಶ್ವರ** :- ನನಗೆ ಪೂರ್ವಕಾಲದಲ್ಲಿ ಪರಮೇಶ್ವರನು ಪಾರ್ವತೀದೇವಿಗೆ, ಪ್ರೀತಿಯಿಂದ ಹೇಳಿದ ಕಾಶೀಪುರಾಣವನ್ನು ನಾನು ನಿನಗೆ ತಿಳಿಸುತ್ತೇನೆ. ಮೇರು ಪರ್ವತದ ಶಿಖರದಲ್ಲಿ ಹಿಂದೆ ಒಂದು ದಿನ ಮಹಾದೇವರ ಅರ್ಧಾಸನದಲ್ಲಿ ಕುಳಿತುಕೊಂಡ ಅರ್ಧಾಂಗಿನಿಯಾದ ಪಾರ್ವತಿಯು ಪತಿಗೆ ನಮಸ್ಕಾರ ಮಾಡಿ ಕೇಳಿದಳು.

**ಪಾರ್ವತಿ** :- ದೇವದೇವನಾದ ಪೂಜ್ಯ ಪರಮೇಶ್ವರನೇ, ಅರ್ಧಚಂದ್ರನನ್ನು ಜಡೆಯಲ್ಲಿ ಮುಡಿದುಕೊಂಡು, ಚಂದ್ರಚೂಡ ಎನಿಸಿದ ನೀನು ನನಗೆ ದಿವ್ಯಧರ್ಮವನ್ನು ಹೇಳಿಕೊಡು. ಈ ಭೂಮಂಡಲದಲ್ಲಿ ಸಾಮಾನ್ಯರಾದ ಮಾನವರೂ ನೈಷ್ಠಿಕ ಬ್ರಹ್ಮಚರ್ಯ ವ್ರತದ ಯೋಗಿಗಳೂ ಮಾಡಿದ ಜಪ, ಹೋಮ, ತಪ, ಧ್ಯಾನ, ಅಧ್ಯಯನ, ಪೂಜೆ, ಮೊದಲಾದ ಪುಣ್ಯ ಕರ್ಮಗಳೆಲ್ಲವೂ ಹೇಗಾದರೆ ಫಲಪ್ರದವಾಗುವವು? ಮತ್ತು ಮಾನವರು ಜನ್ಮಾಂತರಗಳಲ್ಲಿ ಮಾಡಿದ ಪಾಪಗಳು ಪರಿಹಾರವಾಗುವ ಬಗೆ ಯಾವುದು? ಯಾವ ವ್ರತ, ಆಚಾರ, ನಿಯಮ, ಧರ್ಮಗಳ ಅನುಷ್ಠಾನವನ್ನು ಎಲ್ಲಿ ನಿಂತು ಮಾಡಿದರೆ ನೀನು ಪ್ರಸನ್ನನಾಗುವಿ? ಅಕ್ಷಯ ಫಲಪ್ರದನಾದ ನಿನ್ನ ಪ್ರೀತಿಯ ಸ್ಥಾನವು ಯಾವುದು? ಇದೆಲ್ಲವನ್ನು ನನಗೆ ತಿಳಿಸು. ಇದೆಲ್ಲವನ್ನು ಕೇಳಬೇಕೆಂದು ನನಗೆ ಅತ್ಯಂತ ಕುತೂಹಲ.

**ಮಹೇಶ್ವರ** :- ದೇವಿ, ನೀನು ಕೇಳಿದ ವಿಷಯವು ಅತ್ಯಂತ ರಹಸ್ಯವಾಗಿದೆ. ಎಲ್ಲ ಕ್ಷೇತ್ರಗಳಲ್ಲಿಯೂ ನನ್ನ ಈ ಅವಿಮುಕ್ತಕ್ಷೇತ್ರವು ಸರ್ವಶ್ರೇಷ್ಠ. ಅರವತ್ತೆಂಟು ಕ್ಷೇತ್ರಗಳು ಸಾಕ್ಷಾತ್ ರುದ್ರದೇವರ ದಿವ್ಯ ಸನ್ನಿಧಾನಗಳಿಂದ ಕೂಡಿದ ಪವಿತ್ರ

ಕ್ಷೇತ್ರಗಳೆಂದು ಪ್ರಸಿದ್ಧವಾಗಿವೆ. ಆ ಎಲ್ಲ ಕ್ಷೇತ್ರಗಳಿಗಿಂತಲೂ ಈ ಕಾಶೀಕ್ಷೇತ್ರವು ವೈಶಿಷ್ಟ್ಯವುಳ್ಳದ್ದಾಗಿದೆ. ಇಲ್ಲಿ ನನ್ನ ನಿತ್ಯ ಸನ್ನಿಧಾನ. ಇಲ್ಲಿಂದ ನಾನು ಎಲ್ಲೂ ಕದಲುವುದಿಲ್ಲ. ಆದುದರಿಂದಲೇ ಇದಕ್ಕೆ ಅವಿಮುಕ್ತಕ್ಷೇತ್ರವೆಂದು ಹೆಸರು. ಇಲ್ಲಿ ಮಾಡಿದ ತಪಸ್ಸಿಗೆ ಕೂಡಲೇ ಸಿದ್ಧಿ. ಇಲ್ಲಿ ನೀಡಿದ ದಾನಕ್ಕೆ ಅಕ್ಷಯ ಫಲ. ಇಲ್ಲಿ ಜಪಿಸಿದ ಜಪ, ಹೂಡಿದ ಹೋಮ, ಮಾಡಿದ ದಾನ, ಉಪಕ್ರಮಿಸಿದ ಅಧ್ಯಯನ, ಕೈಕೊಂಡ ತಪಸ್ಸು ಎಲ್ಲವೂ ಅಕ್ಷಯ ಆಗುವದು. ಆದರಿಂದ ಅನಂತ ಫಲವು ಪ್ರಾಪ್ತವಾಗುವುದು. ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪವೆಲ್ಲವೂ ಈ ಅವಿಮುಕ್ತಕ್ಷೇತ್ರದಲ್ಲಿ ಕಾಲಿಟ್ಟ ಕೂಡಲೇ, ಅಗ್ನಿಯಿಂದ ಅರಳೆಯಂತೆ ಕ್ಷಣದಲ್ಲಿ ಸುಟ್ಟು ಹೋಗುವದು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ,ಶೂದ್ರ, ಚಂಡಾಲ ಅಥವಾ ಯಾವದೇ ಸಂಕರ ಜಾತಿಯವರು, ಪಾಪಿಗಳು, ಪಶು, ಪಕ್ಷಿ, ಕ್ರಿಮಿ, ಕೀಟ, ಇರುವೆ, ನೊಣ, ನೊರಜು ಮುಂತಾದ ಕ್ಷುದ್ರ ಜೀವಜಂತು ಯಾರೇ ಇರಲಿ, ಈ ಕ್ಷೇತ್ರದಲ್ಲಿ ಮರಣ ಹೊಂದಿದ ಮಾತ್ರಕ್ಕೆ ನನ್ನ ಸಾರೂಪ್ಯವನ್ನು ಹೊಂದುವರು. ಈ ಅವಿಮುಕ್ತಕ್ಷೇತ್ರದಲ್ಲಿ ಸತ್ತವರೆಲ್ಲರೂ, ಮೂರು ಕಣ್ಣಿನ ಮುಕ್ಕಣ್ಣರಾಗಿ, ಮುಡಿಯಲ್ಲಿ ಚಂದ್ರಶೇಖರವನ್ನು ಮುಡಿದುಕೊಂಡು ಇಲ್ಲಿ ಮೆರೆಯುವರು. ಇಚ್ಛೆಯಿರಲಿ, ಇಲ್ಲದಿರಲಿ, ನರನಾಗಲಿ, ಪಶುಪಕ್ಷಿಯಾಗಲಿ, ಈ ಕಾಶೀಕ್ಷೇತ್ರಕ್ಕೆ ಬಂದು ಅಕಸ್ಮಾತ್ ಮರಣ ಹೊಂದಿದರೆ ಅವನಿಗೆ ಪುನರ್ಜನ್ಮವಿಲ್ಲ. ಅವನು ನನ್ನ ಸಾಮೀಪ್ಯ ಹೊಂದುವದರಲ್ಲಿ ಸಂದೇಹವಿಲ್ಲ. ಗೋಕರ್ಣ, ರುದ್ರಕರ್ಣ, ಸುವರ್ಣಾಕ್ಷ, ಮಹಾಕಾಲ, ರುದ್ರಕೋಟಿ ಸಿದ್ಧೇಶ್ವರ, ಕಾಲಿಂಜರ, ಶಂಕುಕರ್ಣ, ಸ್ಥಲೇಶ್ವರ, ಕಾಯಾವರೋಹಣ, ಹರಿಶ್ಚಂದ್ರ, ಅಮ್ರಾತಕೇಶ್ವರ, ಜಲೇಶ್ವರ, ಶ್ರೀಪರ್ವತ, ಮಹಾಲಯ, ಚಂಡೇಶ್ವರ, ಕೇದಾರ, ಮಹಾಭೈರವ ಇವೆಲ್ಲವೂ ಸಿದ್ಧಿಪ್ರದವಾದ ಶಿವಕ್ಷೇತ್ರಗಳೆನಿಸಿವೆ. ಈ ಎಲ್ಲ ಕ್ಷೇತ್ರಗಳಲ್ಲಿ ನಾನು ಸಂಧ್ಯಾಕಾಲಗಳಲ್ಲಿ ಅಂದರೆ ಬೈಗು, ಬೆಳಗು ಸಮಯಗಳಲ್ಲಿ ಸನ್ನಿಹಿತನಾಗಿ ಇರುತ್ತೇನೆ. ಆದರೆ ತ್ರಿಕಾಲದಲ್ಲಿಯೂ ಹಗಲು, ಇರುಳು, ಬೈಗು, ಬೆಳಗು, ಮಧ್ಯಾಹ್ನ, ಸರಿರಾತ್ರಿ ಸರ್ವಕಾಲಗಳಲ್ಲಿ, ಪರ್ವಕಾಲಗಳಲ್ಲಿ ನಿರಂತರವೂ ನಾನು ನೆಲೆಸುವ ಸ್ಥಾನವೆಂದರೆ ಕಾಶಿ ಮಾತ್ರ. ಆದುದರಿಂದಲೇ ಇದು ಅವಿಮುಕ್ತಕ್ಷೇತ್ರ ಎನಿಸಿದೆ. ಎಲ್ಲ ಶಿವಕ್ಷೇತ್ರಗಳು ಇಲ್ಲಿ ನಿತ್ಯವೂ ಸನ್ನಿಹಿತವಾಗಿರುತ್ತವೆ. ಈ ಕಾಶೀಕ್ಷೇತ್ರದ ಮುಂದಿನ ಮಹಾಮಹಿಮೆಯನ್ನು ಸ್ಕಂದನು ಮಹರ್ಷಿಗಳಿಗೆಲ್ಲ ತಿಳಿಸಿರುತ್ತಾನೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಎಂಬತ್ತೆರಡನೆಯ ಅಧ್ಯಾಯ ಮುಗಿದುದು.*

—○—

## ಕಾಶಿಯ ಕ್ಷೇತ್ರದ ಮಹಿಮಾ ವರ್ಣನೆ

ಅಧ್ಯಾಯ - ೧೮೩

**ಸೂತ ಉವಾಚ :**

**ಕೈಲಾಸಪೃಷ್ಠಮಾಸೀನಂ ಸ್ಕಂದಂ ಬ್ರಹ್ಮವಿದಾಂ ವರಮ್**
**ಪೃಚ್ಛಂತಿ ಋಷಯಃ ಸರ್ವೇ ಸನಕಾದ್ಯಾಸ್ತಪೋಧನಾಃ॥**

**ಸೂತ** :- ಕೈಲಾಸ ಬೆಟ್ಟದ ಬಯಲು ಬೆನ್ನಿನ ಮೇಲೆ ಕುಳಿತುಕೊಂಡ ಬ್ರಹ್ಮಜ್ಞಾನಿಯಾದ ಸ್ಕಂದನನ್ನು ಕುರಿತು ಸನಕನೇ ಮೊದಲಾದ ತಪೋಧನರು ಪ್ರಶ್ನೆಮಾಡಿದರು. ಅವರೊಡನೆ ಶಿವಭಕ್ತರಾದ ಅನೇಕ ರಾಜಋಷಿಗಳು ಕೂಡ ಭಕ್ತಿಯಿಂದ ಬಂದು, ಬಾಗಿ, ಆ ಷಣ್ಮುಖನಿಗೆ ಸನಕಾದಿ ಮಹರ್ಷಿಗಳು ಕೇಳಿದ್ದನ್ನೇ ತಾವೂ ಪ್ರಶ್ನಿಸಿದರು. ಸ್ಕಂದನೆ, ಈ ಭೂಲೋಕದಲ್ಲಿ ಮಹಾದೇವನು, ನಿತ್ಯ ನಿರಂತರವೂ ನೆಲಿಸಿದ ಸ್ಥಾನವು ಯಾವುದೆಂಬುದನ್ನು ಹೇಳಿರಿ.

**ಸ್ಕಂದ** :- ಮಹಾತ್ಮನೂ ಸರ್ವಪ್ರಾಣಿಗಳ ಅಂತರ್ಯಾಮಿಯೂ ಆದ ದೇವದೇವ ಮಹಾದೇವನು ದೇವದಾನವರಿಗೂ ದುಷ್ಕರವಾದ ಘೋರರೂಪವನ್ನು ಪಡೆದು ಪ್ರಳಯಕಾಲದವರೆಗೂ ಸ್ಥಾಣುವಾಗಿ ನಿಂತ ಗುಪ್ತ ಸ್ಥಾನವೆಂದರೆ ಕಾಶಿ. ಅದಕ್ಕೆ ಅವಿಮುಕ್ತಕ್ಷೇತ್ರವೆಂದು ಹೆಸರು, ಇಲ್ಲಿ ಪರಮೇಶ್ವರನು ಸರ್ವದಾ ಸನ್ನಿಹಿತನಾಗಿರುವದರಿಂದ ಇಲ್ಲಿ ಸದಾ ಸಿದ್ಧಿ. ಇದರ ಮಹಿಮೆಯನ್ನು ಸ್ವಯಂ ಈಶ್ವರನೇ ಸಾರಿದ್ದಾನೆ. ಇಲ್ಲಿರುವ ಎಲ್ಲ ಸ್ಥಾನಗಳು, ತೀರ್ಥಗಳು ಪವಿತ್ರವಾಗಿವೆ. ಇಲ್ಲಿಯ ಸ್ಮಶಾನವೂ ಅಲ್ಲಿರುವ ಗಿಡಗಳೂ ಬಳಿಯಲ್ಲಿರುವ ಮನೆಗಳೂ ಕೂಡ ಪಾವನವೆನಿಸುತ್ತವೆ. ಅಂತರಿಕ್ಷದಲ್ಲಿರುವ ಶಿವಮಂದಿರಗಳೂ ಕೂಡ ಈ ಕಾಶೀಕ್ಷೇತ್ರಕ್ಕೆ ಸೂಕ್ಷ್ಮ ರೂಪದಿಂದ ಹೊಂದಿಕೊಂಡಿವೆ. ಇದು ಯೋಗಿಗಳಿಗೆ ಮಾತ್ರ ಕಾಣಬರುವದು. ಮರಣಕಾಲದವರೆಗೆ ಈ ಕಾಶಿಯಲ್ಲಿದ್ದುಕೊಂಡು, ವೇದವೇದಾಂತಗಳ ಪಠಣ, ಪಾರಾಯಣ, ಪ್ರವಚನ ಮಾಡುವ ಸಿದ್ಧರು, ಬ್ರಹ್ಮಚಾರಿಗಳು ತಮ್ಮ ಸರ್ವ ಪಾಪಗಳನ್ನು ಕಳೆದುಕೊಂಡು ಮೋಕ್ಷಾದಿ ಪುರುಷಾರ್ಥಗಳನ್ನು ಪಡೆಯುತ್ತಾರೆ. ಇಲ್ಲಿ ಸದಾಚಾರಿಯಾಗಿ ಶಿವಧ್ಯಾನಮಾಡುತ್ತ ವಾಸಿಸುವ ಬ್ರಾಹ್ಮಣರು ಮೂರು ಹೊತ್ತು ಊಟ ಮಾಡಿದರೂ ಉಪವಾಸ ಮಾಡಿದ ಪುಣ್ಯಫಲವನ್ನು ಪಡೆಯುತ್ತಾರೆ. ಈ ಕಾಶಿಯಲ್ಲಿ ಹಿತಮಿತವಾದ ಆಹಾರ ಉಂಡು, ಜಿತೇಂದ್ರಿಯನಾಗಿದ್ದರೆ, ದಿವ್ಯವಾದ ಪಾಶುಪತ ವ್ರತವನ್ನು ಅನುಷ್ಠಾನ ಮಾಡಿದ ಫಲವು ಪ್ರಾಪ್ತವಾಗುವದು. ಬ್ರಹ್ಮಹತ್ಯಾ ಮಾಡಿದ ಮನುಷ್ಯನು ಈ ಕ್ಷೇತ್ರದಲ್ಲಿ ಬಂದು ಸಾಯುವವರೆಗೆ ಇಲ್ಲಿಯೇ ವಾಸಿಸಿದರೆ ಅವನ ಬ್ರಹ್ಮಹತ್ಯಾ ದೋಷ ಪರಿಹಾರವಾಗುತ್ತದೆ. ಇಲ್ಲಿ ಅನುದಿನವೂ ಶಿವಪೂಜೆ ಮಾಡುವ ಮನುಷ್ಯನ ಪಾಪಗಳು ಪರಿಹಾರವಾಗಿ ಅವನಿಗೆ ಪುನರ್‌ಜನ್ಮವಿಲ್ಲದೆ ಶಾಶ್ವತ ಗತಿಯನ್ನು ಹೊಂದುವನು. ಸಾಂಖ್ಯ, ಯೋಗ, ತಪಸ್ಸಮಾಧಿ, ಧ್ಯಾನೋಪಾಸನೆ ಮುಂತಾದ ಶುಭಕರ್ಮಗಳಿಂದ ಪ್ರಾಪ್ತವಾಗುವ ಫಲಗಳನ್ನೆಲ್ಲ ಕಾಶಿ ವಾಸ ಮಾತ್ರದಿಂದ

ಪರಮೇಶ್ವರನು ಕರುಣಿಸುವನು. ಸಿದ್ಧಿ ದೊರಕುವದೂ ಪರಮಪದ ಪ್ರಾಪ್ತಿಯಾಗುವದೂ ಈ ಕಾಶೀಕ್ಷೇತ್ರದ ವಾಸದಿಂದಲೇ. ಮನುಷ್ಯನ ಅಂತ್ಯಕಾಲದಲ್ಲಿ ನಾಡಿಗಳು ಬಿಡುತ್ತ ಬಂದಾಗ, ಎಚ್ಚರತಪ್ಪಿದಾಗ, ದೇವರ ನಾಮಸ್ಮರಣೆ ಮಾಡುವದು ಮಾನವರಿಗೆ ಸಾಧ್ಯವಾಗುವುದಿಲ್ಲ. ಆದರೆ ಈ ಕಾಶೀಕ್ಷೇತ್ರದಲ್ಲಿ ಮಾತ್ರ ಮರಣ ಕಾಲದಲ್ಲಿ ಮಣಿಕರ್ಣಿಕಾ ತೀರದಲ್ಲಿ ಸ್ವಯಂ ಈಶ್ವರನೆ ಬಂದು ಕಿವಿಯಲ್ಲಿ ತಾರಕ ಮಂತ್ರವನ್ನು ಉಪದೇಶಿಸುತ್ತಾನೆ. ಆದರಿಂದ ಬದುಕಿರುವವರೆಗೆ ಮಾಡಿದ ಪಾಪಗಳೆಲ್ಲವೂ ಪರಿಹಾರವಾಗಿ, ಈಶ್ವರನ ಅನುಗ್ರಹದಿಂದ ದಿವ್ಯ ಗತಿಯನ್ನು ಮರಣಿಸಿದ ಪ್ರಾಣಿಯು ಹೊಂದುತ್ತಾನೆ. ಆದುದರಿಂದ ಸಂಸಾರದ ಭಯದಿಂದ ಬಿಡುಗಡೆ ಹೊಂದಬೇಕೆಂದು ಬಯಸಿದವರು ಎಷ್ಟೇ ವಿಘ್ನಬಂದರೂ ಕಾಶಿಯಲ್ಲಿ ಬಿಟ್ಟೂಬಿಡದೇ ವಾಸಿಸಬೇಕು. ಈ ಅವಿಮುಕ್ತ ಕ್ಷೇತ್ರದ ಮಹಿಮೆಯಿಂದ ಇಲ್ಲಿ ವಾಸಿಸಿದ ಮನುಷ್ಯನು ಮರಣಾನಂತರ ಶಿವಸಾಯುಜ್ಯ ಪಡೆಯುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಎಂಬತ್ತಮೂರನೆಯ ಅಧ್ಯಾಯ ಮುಗಿದುದು.*



## ಕಾಶಿಯ ಕ್ಷೇತ್ರದ ಮಹಿಮೆ

ಅಧ್ಯಾಯ - ೧೮೪

<u>ದೇವೀ ಉವಾಚ</u>

**ಹಿಮವಂತಗಿರಿಂ ತ್ಯಕ್ತ್ವಾ ಮಂದರಂ ಗಂಧಮಾದನಮ್।**
**ಕೈಲಾಸಂ ನಿಷಧಂ ಚೈವ ಮೇರುಪೃಷ್ಠಂ ಮಹಾದ್ಯುತಿಮ್॥**

**ರಮ್ಯಂ ತ್ರಿಶಿಖರಂ ಚೈವ ಮಾನಸಂ ಸ ಮಹಾಗಿರಿಮ್।**
**ದೇವೋದ್ಯಾನಾನಿ ರಮ್ಯಾಣಿ ನಂದನಂ ವನಮೇವ ಚ॥**

**ಸುರಸ್ಥಾನಾನಿ ಮುಖ್ಯಾನಿ ತೀರ್ಥಾನ್ಯಾಯತನಾನಿ ಚ।**
**ತಾನಿ ಸರ್ವಾಣಿ ಸಂತ್ಯಜ್ಯ ಅವಿಮುಕ್ತೇ ರತಿಃ ಕಥಮ್॥**

ಹಿಮಾಲಯ, ಮಂದರಾಚಲ, ಗಂಧಮಾದನ, ಕೈಲಾಸ, ನಿಷಧ, ಮೇರು, ತ್ರಿಶಿಖರ, ಮಾನಸ ಮುಂತಾದ ದೊಡ್ಡ ದೊಡ್ಡ ಪರ್ವತಗಳನ್ನು ಬಿಟ್ಟು ನಂದನವನವೇ ಮೊದಲಾದ ದೇವತೆಗಳ ಉದ್ಯಾನಗಳನ್ನು ಬಿಟ್ಟು ಮತ್ತು ಮುಖ್ಯ ಮುಖ್ಯವಾದ ದೇವತಾ ಸ್ಥಾನಗಳನ್ನು, ಪವಿತ್ರ ತೀರ್ಥಗಳನ್ನು, ಸುಂದರವಾದ ಮಂದಿರಗಳನ್ನು ಬಿಟ್ಟು, ಮಹಾದೇವಾ, ನಿನಗೆ ಈ ಅವಿಮುಕ್ತಕ್ಷೇತ್ರದಲ್ಲಿ ಮಾತ್ರ ಹೇಗೆ ಇಷ್ಟು ಪ್ರೀತಿ ಉಂಟಾಗಿರುವುದು? ಇದರ ಮಹತ್ವವೇನು? ಇದರ ರಹಸ್ಯವೇನು? ನೀನು ಏಕೆ ಈ ಸ್ಥಳದಲ್ಲಿಯೇ ನಿನ್ನ ಭೂತ ಗಣಗಳೊಂದಿಗೆ ಆನಂದದಿಂದ ಕ್ರೀಡಿಸುವೆ? ಇಲ್ಲಿ ಇರುವವರ ಮೇಲೆ ನಿನ್ನ ಅನುಗ್ರಹ ವಿಶೇಷವಾಗಲು ಕಾರಣವೇನು? ಇದೆಲ್ಲವನ್ನು ಹೇಳು.

**ಮಹಾದೇವ :-** ಭವಾನಿ, ನೀನು ಕೇಳಿದ ಪ್ರಶ್ನೆ ಅತ್ಯದ್ಭುತ. ಕಾಶೀಕ್ಷೇತ್ರದ ರಹಸ್ಯವನ್ನೇ ವಿಚಾರಿಸಿರುವೆ. ಅದೆಲ್ಲವನ್ನು ನಿನಗೆ ಹೇಳುತ್ತೇನೆ ಕೇಳು.

ಈ ಕಾಶಿಯ ಹಿರಿಮೆ ಮಹಿಮೆಗಳಿಗೆ ಮುಖ್ಯ ಕಾರಣವೆಂದರೆ ಇಲ್ಲಿ ಹರಿಯುವ ಗಂಗಾನದಿ. ಮುಗಿಲುಮಾರ್ಗವನ್ನೆಲ್ಲ ತನ್ನ ಪ್ರವಾಹದಿಂದ ಪಾವನಗೊಳಿಸಿ ಸಿದ್ಧರಿಂದ ಸೇವಿತಳೂ, ಗಂಧರ್ವರಿಂದ ಗೌರವಿತಳೂ ಆದ ಗಂಗೆ ತನ್ನ ತುಂಗ ತರಂಗಗಳಿಂದ ಈ ವಾರಣಾಸಿಯ ಅಂಗಳವನ್ನು ತೊಳೆದು ತೀರ್ಥವಾಗಿದ್ದಾಳೆ. ಆ ಗಂಗೆಯಿಂದ ಎಲ್ಲ ಸ್ಥಾನಗಳಿಗಿಂತ ಈ ಕ್ಷೇತ್ರಕ್ಕೆ ಒಂದು ಮಹತ್ವ ಬಂದಿದೆ. ಇದರ ಮೇಲೆ ಗಂಗಾಜಲ ಲೋಭಿಯಾದ ನಾನು ಈ ಕ್ಷೇತ್ರವನ್ನು ಬಿಟ್ಟು ಆಚೀಚೆ ಹೋಗದಂತೆ ನಿತ್ಯ ನಿರಂತರವೂ ಕಾಶಿಯ ವಿಶ್ವನಾಥ ಮಂದಿರದಲ್ಲಿಯ ಲಿಂಗದಲ್ಲಿ ಸಾನಿಧ್ಯವನ್ನು ಹೊಂದಿದ್ದೇನೆ. ಪ್ರಳಯಕಾಲದಲ್ಲಿಯೂ ಕೂಡ ನಾನು ಈ ಕಾಶೀಪಟ್ಟಣ ಬಿಟ್ಟು ಚಲಿಸುವುದಿಲ್ಲ. ಎಂಥ ಘೋರ ಪಾತಕಿಯೂ, ಕ್ರೂರನೂ, ಠಕ್ಕನೂ, ವಂಚಕನೂ, ವ್ಯಭಿಚಾರಿಯೂ ಇಲ್ಲಿ ಬಂದಿದ್ದರೆ ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಈ ಕ್ಷೇತ್ರದಲ್ಲಿ ಪ್ರಾಣ ಪರಿತ್ಯಾಗ ಮಾಡಿದವರು ದಿವ್ಯಗತಿಯನ್ನು ಹೊಂದುತ್ತಾರೆ. ಇಲ್ಲಿ ಸ್ನಾನಮಾಡಿದವರಿಗೆ ಭೂಮಂಡಲದ ಸಕಲ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯ. ಇಲ್ಲಿ ಕಿಂಚಿತ್ ದಾನ ಕೊಟ್ಟವರಿಗೂ ಸರ್ವಸ್ವ ದಾನ ಮಾಡಿದ ಫಲ. ಇಲ್ಲಿ ಅತ್ಯಲ್ಪ ಪುಣ್ಯ ಮಾಡಿದರೂ ಸರ್ವ ಯಜ್ಞ ಮಾಡಿದ ಫಲ. ಇಲ್ಲಿ ನೆಲೆಸಿದವರಿಗೆ ನನ್ನ ಪೂರ್ಣ ಪ್ರಸಾದ. ಸರ್ವ ಪಾಪ ಪರಿಹಾರ. ದೇವಸಾಕ್ಷಾತ್ಕಾರ.

**ಪಾರ್ವತಿ** :- ಪ್ರಿಯಕರ, ನನಗಾಗಿ ನೀನು ದಕ್ಷನ ಯಜ್ಞವನ್ನು ನಾಶಗೈದೆ. ಈ ಅವಿಮುಕ್ತಕ್ಷೇತ್ರದಲ್ಲಿ ಇಷ್ಟು ಪ್ರೇಮವನ್ನು ನೀನು ಯಾರಿಗೊಸ್ಕರ ಮಾಡುವೆ?

**ಮಹದೇವ** :- ನಿನ್ನ ಸಲುವಾಗಿ. ನಿನ್ನನ್ನು ಆಹ್ವಾನ ಮಾಡಲಿಲ್ಲವೆಂದೂ, ನೀನಾಗಿ ಹೋದ ನಿನ್ನನ್ನು ಗೌರವಿಸಲಿಲ್ಲವೆಂದೂ, ನಿನ್ನೆದುರೇ ನನ್ನ ನಿಂದೆ ಮಾಡಿದನೆಂದೂ, ನಿನ್ನ ತಂದೆಯಾದ ದಕ್ಷನ ಯಜ್ಞವನ್ನು ನಾನು ವಿಧ್ವಂಸಮಾಡಿದೆ. ಆದರೆ ಅವಿಮುಕ್ತ ಕ್ಷೇತ್ರದ ಮೇಲೆ ನನ್ನ ಪ್ರೀತಿಯಾಗಲಿಕ್ಕೆ ಈ ಕ್ಷೇತ್ರವೇ ಕಾರಣ. ಇಲ್ಲಿ ನನ್ನನ್ನು ಪೂಜಿಸುವವರಿಗೆ ಪುನರ್ಜನ್ಮವಿಲ್ಲ. ಶಿವಭಕ್ತರಿಗೆಲ್ಲ ಮೋಕ್ಷದಾಯಕ ಕ್ಷೇತ್ರವಾದುದರಿಂದ ಈ ಕಾಶಿಯ ಮೇಲೆ ಇಷ್ಟು ಪ್ರೀತಿ.

**ಪಾರ್ವತಿ** :- ಹಾಗಾದರೆ ಈ ಅವಿಮುಕ್ತಕ್ಷೇತ್ರದ ದುರ್ಲಭವಾದ ಸರ್ವಗುಣಗಳನ್ನು ಮತ್ತೊಮ್ಮೆ ಹೇಳು.

**ಈಶ್ವರ** :- ಮಹೇಶ್ವರಿ, ಕಾಶಿಯಲ್ಲಿ ವಾಸಮಾಡಿದವರು ಅಮರರಾಗುವರು. ಅಕ್ಷಯಲೋಕ ಪಡೆಯುವರು. ನನ್ನ ಅನುಗ್ರಹದಿಂದ ಅವರು ನನ್ನಲ್ಲಿಯೇ ಲೀನವಾಗುವರು. ಇದಕ್ಕೂ ಇನ್ನೇನು ಬೇಕು? ದೇವಿ, ಬೇರೆ ತೀರ್ಥ, ಕ್ಷೇತ್ರಗಳಲ್ಲಿ ಬರಿ ಎಲೆ ತರಕಾರಿ ಅಥವಾ ಕಾಯಿಪಲ್ಲೆ ಮಾತ್ರ ತಿಂದು, ಅಥವಾ ಕುದಿಸಿದ್ದನ್ನು ತಿನ್ನದೆ, ಕುಟ್ಟಿದ್ದನ್ನು ಉಣ್ಣದೆ, ಬೇಯಿಸಿದ್ದನ್ನು ಭಕ್ಷಿಸದೆ, ಹೊಲದಲ್ಲಿ ಒಕ್ಕಿಬಿಟ್ಟ ಹಕ್ಕಲು ತೆನೆಗಳನ್ನು ಮಾತ್ರ ಆಯ್ದು ಅಥವಾ ಅದರ ಒಕ್ಕಲು ಮಾಡಿಕೊಂಡು ಹೋಗುವಾಗ ಉದುರಿದ ಧಾನ್ಯಗಳನ್ನು ತಂದು ಕೈಯಿಂದ ಕುಟ್ಟಿ ಹಸಿಯದನ್ನೇ ತಿಂದು ತಪಸ್ಸು ಮಾಡುವವರೂ, ಗಿಡದಡಿಯಲ್ಲಿ ಇದ್ದು, ಕಲ್ಲುಹಾಸಿಗೆಯ ಮೇಲೆ ಮಲಗಿ,

ಇಂದ್ರಿಯಗಳನ್ನು ಬಿಗಿಹಿಡಿದು ತಪಸ್ಸುಮಾಡುವವರೂ ಎಂತಹ ಪುಣ್ಯ ಫಲ ಪಡೆವರೋ ಅಂತಹ ಪುಣ್ಯವನ್ನು ಕಾಶೀಕ್ಷೇತ್ರದಲ್ಲಿ ಮೂರು ಹೊತ್ತು ಊಟ ಮಾಡಿ, ಸುಖದಿಂದ ಇರುವವರು ಸಹ ಸುಲಭವಾಗಿ ಪಡೆಯುತ್ತಾರೆ. ಇಲ್ಲಿ ತಪಸ್ಸಿನ ಹದಿನಾರರಲ್ಲಿ ಒಂದು ಪಾಲನ್ನು ಬೇರೆ ಕಡೆಗೆ ಮಾಡಿದ ಘೋರ ತಪಸ್ಸುಗಳು ಹೊಂದಲಾರವು. ಹೋಲಲಾರವು. ಪಾರ್ವತಿ, ಇನ್ನೊಂದು ರಹಸ್ಯ ಹೇಳುತ್ತೇನೆ, ಕೇಳು; ಶಿವನಂತಹ ಗಂಡರಿಲ್ಲ. ಪಾರ್ವತಿಯಂತಹ ಹೆಂಗಸಿಲ್ಲ. ಕಾಶಿಯಂತಹ ಕ್ಷೇತ್ರವು ಹಿಂದಿರಲಿಲ್ಲ. ಇಂದಿಲ್ಲ, ಮುಂದಿರುವದಿಲ್ಲ.

**''ಮತ್ಸಮಃ ಪುರುಷೊ ನಾಸ್ತಿ ತ್ವತ್ಸಮಾ ನಾಸ್ತಿ ಯೋಷಿತಾಂ।**
**ಅವಿಮುಕ್ತಸಮಂ ಕ್ಷೇತ್ರ ನ ಭೂತಂ ನ ಭವಿಷ್ಯತಿ''॥**

ಬೇರೆ ಕ್ಷೇತ್ರಗಳಲ್ಲಿ ಸಾವಿರಾರು ಜನ್ಮ ಸಾಧನೆ ಮಾಡಿದರೂ ಮೋಕ್ಷವು ಸಿಗುವದೋ ಇಲ್ಲವೋ ಸಂದೇಹ. ಆದರೆ ಈ ಕ್ಷೇತ್ರದಲ್ಲಿ ಒಂದೇ ಜನ್ಮದಿಂದ ಮಾನವನು ಮೋಕ್ಷವನ್ನು ಹೊಂದುತ್ತಾನೆ.

**ಮಹಾದೇವಿ :-** ಪ್ರಭು, ಈ ವಾರಣಾಸಿಯಲ್ಲಿ ಇರುವ ಬ್ರಾಹ್ಮಣರು ಯಜ್ಞ ಯಾಗಾದಿಗಳನ್ನು ಮಾಡಿ ಯಾರನ್ನು ಪೂಜಿಸುತ್ತಾರೆ?

**ಮಹಾದೇವ :-** ಬ್ರಾಹ್ಮಣರು ತಮ್ಮ ಮಂತ್ರ ಹಾಗೂ ತಂತ್ರಗಳಿಂದ ಈ ಕಾಶೀ ಕ್ಷೇತ್ರಗಳಲ್ಲಿ ನನ್ನನ್ನೇ ಭಕ್ತಿಯಿಂದ ಪೂಜಿಸುತ್ತಾರೆ. ಅದಕ್ಕೆ ಕಾರಣ ರುದ್ರನನ್ನು ಪೂಜೆ ಮಾಡುವವರಿಗೆ ಭಯವೇ ಇಲ್ಲ. ಮತ್ತು ನನ್ನನ್ನು ಉದ್ದೇಶಿಸಿ ಯಜ್ಞಮಾಡುವವರಿಗೂ ಅಂಜಿಕೆಯಿಲ್ಲ. ಯಜ್ಞವಿಧಿಗಳು ಸಮಂತ್ರಕ, ಅಮಂತ್ರಕ ಎಂದು ಎರಡು ಬಗೆಯಾಗಿವೆ. ಸಗುಣ, ನಿರ್ಗುಣವೆಂದು ಉಪಾಸನೆಯೂ ಎರಡು ವಿಧವಾಗಿವೆ. ಕಾಶಿಯಲ್ಲಿದ್ದು ನನ್ನನ್ನು ಹೇಗೆ ಉಪಾಸನೆ, ಪೂಜೆ ಮಾಡಿದರೂ, ಭಕ್ತರಿಗೆ ನಾನು ಫಲ ಕೊಡುತ್ತೇನೆ.

**ಪಾರ್ವತಿ :-** ಈ ಕಾಶೀಕ್ಷೇತ್ರದ ಆಳತೆ, ಪ್ರಮಾಣ, ವಿಸ್ತಾರ ಎಷ್ಟು? ಏನು ತಿಳಿಸು.

**ಪರಮೇಶ್ವರ :-** ಈ ಕಾಶೀಕ್ಷೇತ್ರವು ಪೂರ್ವ ಪಶ್ಚಿಮ ಎರಡು ಯೋಜನ, ದಕ್ಷಿಣೋತ್ತರ ಅರ್ಧ ಯೋಜನ ವಿಸ್ತಾರವಾಗಿದೆ. ಭೀಷ್ಮಚಂಡಿಕದಿಂದ ಆರಂಭಿಸಿ ಪರ್ವತೇಶ್ವರದವರೆಗೆ ಶುಕ್ಲ ನದಿ ಹರಿದೆಡೆಯೆಲ್ಲವೂ ವಾರಣಾಸಿ ಎಂದು ತಿಳಿಯಬೇಕು. ಈ ಕ್ಷೇತ್ರದ ತುಂಬ ಕೂಷ್ಮಾಂಡರಾಜ, ಶಂಭು, ಜಯಂತಿ, ಮಹಾಕಾಲ, ಮಹೇಶ್ವರ, ಚಂಡೇಶ್ವರ, ಗಂಟಾಕರ್ಣ ಮೊದಲಾದ ಗಣಾಧ್ಯಕ್ಷರು ವಾಸಮಾಡುತ್ತಾರೆ. ಇವರೆಲ್ಲರೂ ತ್ರಿಶೂಲ, ಮುದ್ಗರ, ಮುಂತಾದ ಘೋರಾಯುಧಗಳನ್ನು ಹಿಡಿದು ಈ ಕ್ಷೇತ್ರವನ್ನು ಸಂರಕ್ಷಿಸುತ್ತಾರೆ. ಈ ಕಾಶೀ ಕ್ಷೇತ್ರದಲ್ಲಿ ಬಂಗಾರದ ಕೊಂಬು ಕಟ್ಟಿ ಬೆಳ್ಳಿಯ ಗೊರಸು ಮಾಡಿಸಿ, ಮೇಲೆ ವಸ್ತ್ರವನ್ನು ಹೊದಿಸಿ, ಹಿಂಡುವ ಕರು ಸಹಿತವಾದ ಆಕಳವನ್ನು ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ದಾನ ಕೊಡಬೇಕು. ಇದರಿಂದ ಅವನ ಏಳು ತಲೆಮಾರಿನ ಪಿತೃಗಳೆಲ್ಲರೂ ಉದ್ಧಾರಹೊಂದುವರು. ಬಂಗಾರ, ಬೆಳ್ಳಿ, ಬಟ್ಟೆ, ಏನೇ ಕೊಡಲಿ, ಎಷ್ಟೇ ಕೊಡಲಿ, ಯಾರೇ ಕೊಡಲಿ, ಕಾಶಿಯಲ್ಲಿ ದಾನದಿಂದ ಅಕ್ಷಯ ಫಲ ಉಂಟು.

ಈ ಕಾಶಿಯ ಹಿರಿಮೆ ಮಹಿಮೆಗಳಿಗೆ ಮುಖ್ಯ ಕಾರಣವೆಂದರೆ ಇಲ್ಲಿ ಹರಿಯುವ ಗಂಗಾನದಿ. ಮುಗಿಲುಮಾರ್ಗವನ್ನೆಲ್ಲ ತನ್ನ ಪ್ರವಾಹದಿಂದ ಪಾವನಗೊಳಿಸಿ ಸಿದ್ಧರಿಂದ ಸೇವಿತಳೂ, ಗಂಧರ್ವರಿಂದ ಗೌರವಿತಳೂ ಆದ ಗಂಗೆ ತನ್ನ ತುಂಗ ತರಂಗಗಳಿಂದ ಈ ವಾರಣಾಸಿಯ ಅಂಗಳವನ್ನು ತೊಳೆದು ತೀರ್ಥವಾಗಿದ್ದಾಳೆ. ಆ ಗಂಗೆಯಿಂದ ಎಲ್ಲ ಸ್ಥಾನಗಳಿಗಿಂತ ಈ ಕ್ಷೇತ್ರಕ್ಕೆ ಒಂದು ಮಹತ್ವ ಬಂದಿದೆ. ಇದರ ಮೇಲೆ ಗಂಗಾಜಲ ಲೋಭಿಯಾದ ನಾನು ಈ ಕ್ಷೇತ್ರವನ್ನು ಬಿಟ್ಟು ಆಚೀಚೆ ಹೋಗದಂತೆ ನಿತ್ಯ ನಿರಂತರವೂ ಕಾಶಿಯ ವಿಶ್ವನಾಥ ಮಂದಿರದಲ್ಲಿಯ ಲಿಂಗದಲ್ಲಿ ಸಾನಿಧ್ಯವನ್ನು ಹೊಂದಿದ್ದೇನೆ. ಪ್ರಳಯಕಾಲದಲ್ಲಿಯೂ ಕೂಡ ನಾನು ಈ ಕಾಶೀಪಟ್ಟಣ ಬಿಟ್ಟು ಚಲಿಸುವುದಿಲ್ಲ. ಎಂಥ ಘೋರ ಪಾತಕಿಯೂ, ಕ್ರೂರನೂ, ಠಕ್ಕನೂ, ವಂಚಕನೂ, ವ್ಯಭಿಚಾರಿಯೂ ಇಲ್ಲಿ ಬಂದಿದ್ದರೆ ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಈ ಕ್ಷೇತ್ರದಲ್ಲಿ ಪ್ರಾಣ ಪರಿತ್ಯಾಗ ಮಾಡಿದವರು ದಿವ್ಯಗತಿಯನ್ನು ಹೊಂದುತ್ತಾರೆ. ಇಲ್ಲಿ ಸ್ನಾನಮಾಡಿದವರಿಗೆ ಭೂಮಂಡಲದ ಸಕಲ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯ. ಇಲ್ಲಿ ಕಿಂಚಿತ್ ದಾನ ಕೊಟ್ಟವರಿಗೂ ಸರ್ವಸ್ವ ದಾನ ಮಾಡಿದ ಫಲ. ಇಲ್ಲಿ ಅತ್ಯಲ್ಪ ಪುಣ್ಯ ಮಾಡಿದರೂ ಸರ್ವ ಯಜ್ಞ ಮಾಡಿದ ಫಲ. ಇಲ್ಲಿ ನೆಲೆಸಿದವರಿಗೆ ನನ್ನ ಪೂರ್ಣ ಪ್ರಸಾದ. ಸರ್ವ ಪಾಪ ಪರಿಹಾರ. ದೇವಸಾಕ್ಷಾತ್ಕಾರ.

**ಪಾರ್ವತಿ** :- ಪ್ರಿಯಕರ, ನನಗಾಗಿ ನೀನು ದಕ್ಷನ ಯಜ್ಞವನ್ನು ನಾಶಗೈದೆ. ಈ ಅವಿಮುಕ್ತಕ್ಷೇತ್ರದಲ್ಲಿ ಇಷ್ಟು ಪ್ರೇಮವನ್ನು ನೀನು ಯಾರಿಗೊಸ್ಕರ ಮಾಡುವೆ?

**ಮಹದೇವ** :- ನಿನ್ನ ಸಲುವಾಗಿ. ನಿನ್ನನ್ನು ಆಹ್ವಾನ ಮಾಡಲಿಲ್ಲವೆಂದೂ, ನೀನಾಗಿ ಹೋದ ನಿನ್ನನ್ನು ಗೌರವಿಸಲಿಲ್ಲವೆಂದೂ, ನಿನ್ನೆದುರೇ ನನ್ನ ನಿಂದೆ ಮಾಡಿದನೆಂದೂ, ನಿನ್ನ ತಂದೆಯಾದ ದಕ್ಷನ ಯಜ್ಞವನ್ನು ನಾನು ವಿಧ್ವಂಸಮಾಡಿದೆ. ಆದರೆ ಅವಿಮುಕ್ತ ಕ್ಷೇತ್ರದ ಮೇಲೆ ನನ್ನ ಪ್ರೀತಿಯಾಗಲಿಕ್ಕೆ ಈ ಕ್ಷೇತ್ರವೇ ಕಾರಣ. ಇಲ್ಲಿ ನನ್ನನ್ನು ಪೂಜಿಸುವವರಿಗೆ ಪುನರ್ಜನ್ಮವಿಲ್ಲ. ಶಿವಭಕ್ತರಿಗೆಲ್ಲ ಮೋಕ್ಷದಾಯಕ ಕ್ಷೇತ್ರವಾದುದರಿಂದ ಈ ಕಾಶಿಯ ಮೇಲೆ ಇಷ್ಟು ಪ್ರೀತಿ.

**ಪಾರ್ವತಿ** :- ಹಾಗಾದರೆ ಈ ಅವಿಮುಕ್ತಕ್ಷೇತ್ರದ ದುರ್ಲಭವಾದ ಸರ್ವಗುಣಗಳನ್ನು ಮತ್ತೊಮ್ಮೆ ಹೇಳು.

**ಈಶ್ವರ** :- ಮಹೇಶ್ವರಿ, ಕಾಶಿಯಲ್ಲಿ ವಾಸಮಾಡಿದವರು ಅಮರರಾಗುವರು. ಅಕ್ಷಯಲೋಕ ಪಡೆಯುವರು. ನನ್ನ ಅನುಗ್ರಹದಿಂದ ಅವರು ನನ್ನಲ್ಲಿಯೇ ಲೀನವಾಗುವರು. ಇದಕ್ಕೂ ಇನ್ನೇನು ಬೇಕು? ದೇವಿ, ಬೇರೆ ತೀರ್ಥ, ಕ್ಷೇತ್ರಗಳಲ್ಲಿ ಬರಿ ಎಲೆ ತರಕಾರಿ ಅಥವಾ ಕಾಯಿಪಲ್ಲೆ ಮಾತ್ರ ತಿಂದು, ಅಥವಾ ಕುದಿಸಿದ್ದನ್ನು ತಿನ್ನದೆ, ಕುಟ್ಟಿದ್ದನ್ನು ಉಣ್ಣದೆ, ಬೇಯಿಸಿದ್ದನ್ನು ಭಕ್ಷಿಸದೆ, ಹೊಲದಲ್ಲಿ ಒಕ್ಕಿಬಿಟ್ಟ ಹಕ್ಕಲು ತೆನೆಗಳನ್ನು ಮಾತ್ರ ಆಯ್ದು ಅಥವಾ ಅದರ ಒಕ್ಕಲು ಮಾಡಿಕೊಂಡು ಹೋಗುವಾಗ ಉದುರಿದ ಧಾನ್ಯಗಳನ್ನು ತಂದು ಕೈಯಿಂದ ಕುಟ್ಟಿ ಹಸಿಯದನ್ನೇ ತಿಂದು ತಪಸ್ಸು ಮಾಡುವವರೂ, ಗಿಡದಡಿಯಲ್ಲಿ ಇದ್ದು, ಕಲ್ಲುಹಾಸಿಗೆಯ ಮೇಲೆ ಮಲಗಿ,

ಇಂದ್ರಿಯಗಳನ್ನು ಬಿಗಿಹಿಡಿದು ತಪಸ್ಸುಮಾಡುವವರೂ ಎಂತಹ ಪುಣ್ಯ ಫಲ ಪಡೆವರೋ ಅಂತಹ ಪುಣ್ಯವನ್ನು ಕಾಶೀಕ್ಷೇತ್ರದಲ್ಲಿ ಮೂರು ಹೊತ್ತು ಊಟ ಮಾಡಿ, ಸುಖದಿಂದ ಇರುವವರು ಸಹ ಸುಲಭವಾಗಿ ಪಡೆಯುತ್ತಾರೆ. ಇಲ್ಲಿ ತಪಸ್ಸಿನ ಹದಿನಾರರಲ್ಲಿ ಒಂದು ಪಾಲನ್ನು ಬೇರೆ ಕಡೆಗೆ ಮಾಡಿದ ಘೋರ ತಪಸ್ಸುಗಳು ಹೊಂದಲಾರವು. ಹೋಲಲಾರವು. ಪಾರ್ವತಿ, ಇನ್ನೊಂದು ರಹಸ್ಯ ಹೇಳುತ್ತೇನೆ, ಕೇಳು; ಶಿವನಂತಹ ಗಂಡರಿಲ್ಲ. ಪಾರ್ವತಿಯಂತಹ ಹೆಂಗಸಿಲ್ಲ. ಕಾಶಿಯಂತಹ ಕ್ಷೇತ್ರವು ಹಿಂದಿರಲಿಲ್ಲ. ಇಂದಿಲ್ಲ, ಮುಂದಿರುವದಿಲ್ಲ.

**"ಮತ್ಸಮಃ ಪುರುಷೊ ನಾಸ್ತಿ ತ್ವತ್ಸಮಾ ನಾಸ್ತಿ ಯೋಷಿತಾಂ।**
**ಅವಿಮುಕ್ತಸಮಂ ಕ್ಷೇತ್ರ ನ ಭೂತಂ ನ ಭವಿಷ್ಯತಿ"॥**

ಬೇರೆ ಕ್ಷೇತ್ರಗಳಲ್ಲಿ ಸಾವಿರಾರು ಜನ್ಮ ಸಾಧನೆ ಮಾಡಿದರೂ ಮೋಕ್ಷವು ಸಿಗುವದೋ ಇಲ್ಲವೋ ಸಂದೇಹ. ಆದರೆ ಈ ಕ್ಷೇತ್ರದಲ್ಲಿ ಒಂದೇ ಜನ್ಮದಿಂದ ಮಾನವನು ಮೋಕ್ಷವನ್ನು ಹೊಂದುತ್ತಾನೆ.

**ಮಹಾದೇವಿ :-** ಪ್ರಭು, ಈ ವಾರಣಾಸಿಯಲ್ಲಿ ಇರುವ ಬ್ರಾಹ್ಮಣರು ಯಜ್ಞ ಯಾಗಾದಿಗಳನ್ನು ಮಾಡಿ ಯಾರನ್ನು ಪೂಜಿಸುತ್ತಾರೆ?

**ಮಹಾದೇವ :-** ಬ್ರಾಹ್ಮಣರು ತಮ್ಮ ಮಂತ್ರ ಹಾಗೂ ತಂತ್ರಗಳಿಂದ ಈ ಕಾಶೀ ಕ್ಷೇತ್ರಗಳಲ್ಲಿ ನನ್ನನ್ನೇ ಭಕ್ತಿಯಿಂದ ಪೂಜಿಸುತ್ತಾರೆ. ಅದಕ್ಕೆ ಕಾರಣ ರುದ್ರನನ್ನು ಪೂಜೆ ಮಾಡುವವರಿಗೆ ಭಯವೇ ಇಲ್ಲ. ಮತ್ತು ನನ್ನನ್ನು ಉದ್ದೇಶಿಸಿ ಯಜ್ಞಮಾಡುವವರಿಗೂ ಅಂಜಿಕೆಯಿಲ್ಲ. ಯಜ್ಞವಿಧಿಗಳು ಸಮಂತ್ರಕ, ಅಮಂತ್ರಕ ಎಂದು ಎರಡು ಬಗೆಯಾಗಿವೆ. ಸಗುಣ, ನಿರ್ಗುಣವೆಂದು ಉಪಾಸನೆಯೂ ಎರಡು ವಿಧವಾಗಿವೆ. ಕಾಶಿಯಲ್ಲಿದ್ದು ನನ್ನನ್ನು ಹೇಗೆ ಉಪಾಸನೆ, ಪೂಜೆ ಮಾಡಿದರೂ, ಭಕ್ತರಿಗೆ ನಾನು ಫಲ ಕೊಡುತ್ತೇನೆ.

**ಪಾರ್ವತಿ :-** ಈ ಕಾಶೀಕ್ಷೇತ್ರದ ಆಳತೆ, ಪ್ರಮಾಣ, ವಿಸ್ತಾರ ಎಷ್ಟು? ಏನು ತಿಳಿಸು.

**ಪರಮೇಶ್ವರ :-** ಈ ಕಾಶೀಕ್ಷೇತ್ರವು ಪೂರ್ವ ಪಶ್ಚಿಮ ಎರಡು ಯೋಜನ, ದಕ್ಷಿಣೋತ್ತರ ಅರ್ಧ ಯೋಜನ ವಿಸ್ತಾರವಾಗಿದೆ. ಭೀಷ್ಮಚಂಡಿಕದಿಂದ ಆರಂಭಿಸಿ ಪರ್ವತೇಶ್ವರದವರೆಗೆ ಶುಕ್ಲ ನದಿ ಹರಿದೆಡೆಯೆಲ್ಲವೂ ವಾರಣಾಸಿ ಎಂದು ತಿಳಿಯಬೇಕು. ಈ ಕ್ಷೇತ್ರದ ತುಂಬ ಕೂಷ್ಮಾಂಡರಾಜ, ಶಂಭು, ಜಯಂತಿ, ಮಹಾಕಾಲ, ಮಹೇಶ್ವರ, ಚಂಡೇಶ್ವರ, ಗಂಟಾಕರ್ಣ ಮೊದಲಾದ ಗಣಾಧ್ಯಕ್ಷರು ವಾಸಮಾಡುತ್ತಾರೆ. ಇವರೆಲ್ಲರೂ ತ್ರಿಶೂಲ, ಮುದ್ಗರ, ಮುಂತಾದ ಘೋರಾಯುಧಗಳನ್ನು ಹಿಡಿದು ಈ ಕ್ಷೇತ್ರವನ್ನು ಸಂರಕ್ಷಿಸುತ್ತಾರೆ. ಈ ಕಾಶೀ ಕ್ಷೇತ್ರದಲ್ಲಿ ಬಂಗಾರದ ಕೊಂಬು ಕಟ್ಟಿ ಬೆಳ್ಳಿಯ ಗೊರಸು ಮಾಡಿಸಿ, ಮೇಲೆ ವಸ್ತ್ರವನ್ನು ಹೊದಿಸಿ, ಹಿಂಡುವ ಕರು ಸಹಿತವಾದ ಆಕಳವನ್ನು ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ದಾನ ಕೊಡಬೇಕು. ಇದರಿಂದ ಅವನ ಏಳು ತಲೆಮಾರಿನ ಪಿತೃಗಳೆಲ್ಲರೂ ಉದ್ಧಾರಹೊಂದುವರು. ಬಂಗಾರ, ಬೆಳ್ಳಿ, ಬಟ್ಟೆ, ಏನೇ ಕೊಡಲಿ, ಎಷ್ಟೇ ಕೊಡಲಿ, ಯಾರೇ ಕೊಡಲಿ, ಕಾಶಿಯಲ್ಲಿ ದಾನದಿಂದ ಅಕ್ಷಯ ಫಲ ಉಂಟು.

ಇನ್ನು ಕಾಶಿಯಲ್ಲಿ ಹರಿಯುವ ದಿವ್ಯ ತೀರ್ಥಾತ್ಮಕವಾದ ಗಂಗಾನದಿಯ ಮಹಿಮೆಯನ್ನು ಕೇಳು. ಈ ದೇವನದಿಯಲ್ಲಿ ಸ್ನಾನಮಾಡುವ ಮಾತ್ರದಿಂದ ಮನುಷ್ಯರ ದೇಹದಲ್ಲಿಯ ಸಕಲ ರೋಗಗಳು, ಸಮಸ್ತ ಪಾಪಗಳು, ಪರಿಹಾರ ವಾಗುವವು. ಹತ್ತು ಅಶ್ವಮೇಧಯಾಗದ ಪುಣ್ಯ ಬರುವದು. ಇಲ್ಲಿಯ ಗಂಗಾ ನದಿಯಲ್ಲಿ ಧರ್ಮಬುದ್ಧಿಯಿಂದ ಸ್ನಾನಮಾಡಿ ಕಿಂಚಿತ್ತಾದರೂ ದಾನ ಕೊಟ್ಟರೆ, ದಾನ ಮಾಡಿದವನು ಸದ್ಗತಿಯನ್ನು ಹೊಂದುತ್ತಾನೆ. ಅಗ್ನಿಯಂತೆ ದಿವ್ಯ ತೇಜೋ ಭಾಸುರನಾಗಿ ಹೊಳೆಯುತ್ತಾನೆ. ಗಂಗೆ ಮತ್ತು ಕಾಶಿ ಇವೆರಡೂ ತೀರ್ಥ ಕ್ಷೇತ್ರಗಳು ಒಂದೊಂದೂ ಪಾವನತರವಾಗಿವೆ, ಈ ಅವಿಮುಕ್ತ ಸ್ಥಾನದಲ್ಲಿ ಈ ತೀರ್ಥ, ಆ ಕ್ಷೇತ್ರ ಎರಡರ ಸಂಗಮವಾದುದರಿಂದ ಇದೊಂದು ಮುಕ್ತಿಕ್ಷೇತ್ರವೇ ಆಗಿದೆ. ಇಲ್ಲಿ ಅನ್ನದಾನ ಮಾಡಿದವರಿಗೆ ಪುನರ್‌ಜನ್ಮವಿಲ್ಲ. ಸ್ವಯಂ ಉಪವಾಸವಿದ್ದು ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ, ಸೌತ್ರಾಮಣಿ ಯಜ್ಞಮಾಡಿಸಿದ ಪುಣ್ಯ. ಇಲ್ಲಿ ಒಂದೇ ಸಲ ಊಟ ಮಾಡಿ, ಒಂದು ತಿಂಗಳು ಇದ್ದರೆ ಇಡೀ ಜನ್ಮದಲ್ಲಿ ಇದ್ದ ಪಾಪವೆಲ್ಲವೂ ನಾಶವಾಗುವವು. ಹತ್ತು ಬಂಗಾರದ ಹೂಗಳನ್ನು ಮಾಡಿಸಿ ದಾನಮಾಡಿದರೆ ಅಗ್ನಿಹೋತ್ರದ ಫಲ. ಗಂಧವನ್ನು ತೇಯ್ದು ದೇವರಿಗೆ ಏರಿಸಿ ಬ್ರಾಹ್ಮಣರಿಗೆ ಕೊಟ್ಟರೆ ಭೂಮಿ ದಾನ ಮಾಡಿದ ಪುಣ್ಯ. ಈ ಕ್ಷೇತ್ರದ ಅಂಗಳವನ್ನು ಉಡುಗಿದರೆ ಐದುನೂರು ಬಂಗಾರದ ನಾಣ್ಯಗಳನ್ನು ಕೊಟ್ಟ ಫಲ. ಮುತ್ತೈದೆಯರಿಗೆ ಹೂವಿನಮಾಲೆ ಮಾಡಿ ಕೊಟ್ಟರೆ ಸಾವಿರ ಬಂಗಾರದ ನಾಣ್ಯ ಕೊಟ್ಟ ಫಲ. ಈ ಕಾಶಿಯಲ್ಲಿ ಇದ್ದು ಭಗವಂತನ ನಾಮಸ್ಮರಣೆಮಾಡುತ್ತ ಗಾಯನ, ನರ್ತನ, ಮಾಡಿದರೆ ಬಹಳ ಪುಣ್ಯದ ಫಲ.

**ಪಾರ್ವತಿ** :- ಈ ಕ್ಷೇತ್ರದ ಅದ್ಭುತ ಮಹಿಮೆಯನ್ನು ಕೇಳಿ ನಾನು ಧನ್ಯಳಾದೆ! ಇನ್ನು ನೀನು ಈ ಕ್ಷೇತ್ರವನ್ನು ಬಿಟ್ಟು ಎಲ್ಲಿಯೂ ಹೋಗದಿರಲು ಕಾರಣವೇನು?

**ಈಶ್ವರ** :- ಸುಂದರಿ, ಪೂರ್ವಕಾಲದಲ್ಲಿ ಬ್ರಹ್ಮದೇವರಿಗೆ ಐದು ತಲೆಗಳಿದ್ದವು. ಅದರಲ್ಲಿ ಅವನ ಐದನೆಯ ತಲೆಯು ಬಂಗಾರದಂತೆ ಕಾಂತಿಯಿಂದ ಹೊಳೆಯುತ್ತಿತ್ತು. ಆಗ ಬ್ರಹ್ಮದೇವನು ಒಂದು ದಿನ ನನಗೆ "ನಿನ್ನ ಜನ್ಮರಹಸ್ಯವನ್ನು ನಾನು ಬಲ್ಲೆ" ಎಂದು ಹೇಳಿದನು. ಆಗ ನನಗೆ ಬಹಳ ಕೋಪ ಬಂದಿತು. ಕಣ್ಣುಗಳಲ್ಲಿ ರಕ್ತಚಿಮ್ಮಿತು. ನನ್ನ ಎಡಗೈಹೆಬ್ಬೆರಳಿನ ಉಗುರಿನ ತುದಿಯಿಂದ ಬ್ರಹ್ಮದೇವರ ಆ ಐದನೆಯ ತಲೆಯನ್ನು ಕಡಿದುಹಾಕಿದೆ. ಆಗ ಬ್ರಹ್ಮದೇವನು ನನಗೆ ಹೀಗೆ ಶಾಪ ಕೊಟ್ಟನು.

**ಬ್ರಹ್ಮ** :- "ನಿರಪರಾಧಿಯಾದ ನನ್ನ ತಲೆಯನ್ನು ನೀನು ನಿಷ್ಕಾರಣವಾಗಿ ತರಿದು ಹರಿದೆ. ಅದರಿಂದ ನಿನಗೆ ಬ್ರಹ್ಮಹತ್ಯಾ ದೋಷವು ತಟ್ಟಿ, ನೀನು ಕಪಾಲಿ ಆಗುವೆ. ಈ ತಲೆ ಬುರುಡೆಯು ನಿನ್ನ ಕೈಗೆ ತಗಲಿಬಿಡುವದು. ಇದರಿಂದ ಶಾಪಗ್ರಸ್ತನಾಗಿ ನೀನು ಭೂಲೋಕದಲ್ಲಿ ಎಲ್ಲ ತೀರ್ಥ ಕ್ಷೇತ್ರಗಳಲ್ಲಿ ಪರಿಭ್ರಮಿಸುವಂತಾಗಲಿ."

ಅನಂತರ ಪಾರ್ವತಿ, ನಾನು ಶಪಿತನಾಗಿ ಹಿಮಾಲಯ ಪರ್ವತಕ್ಕೆ ಹೋಗಿ ಅಲ್ಲಿರುವ ನಾರಾಯಣ ದೇವರಿಗೆ ಮೊರೆಹೊಕ್ಕೆ. 'ನನಗೊಂದು ಭಿಕ್ಷೆ ಕೊಡಿರಿ' ಎಂದು ಆ ಭಗವಂತನನ್ನು ಬೇಡಿಕೊಂಡೆ. ಆಗ ಆ ನಾರಾಯಣನು ತನ್ನ ಉಗುರಿನಿಂದ

ತನ್ನ ದೇಹದ ಒಂದು ಪಾರ್ಶ್ವವನ್ನು ಕೆದರಿದನು. ಅದರಿಂದ ರಕ್ತವು ಧಾರಾಕಾರವಾಗಿ ಸೋರಿ ಸುರಿದು ಅರ್ಧ ಯೋಜನದವರೆಗೆ ಹರಿದು ಹೋಯಿತು. ಅದರಿಂದ ನಾನು ನನ್ನ ಕೈಯಲ್ಲಿಯ ಕಪಾಲವನ್ನು ತುಂಬಿಕೊಳ್ಳಲು ಹೋದೆ. ಒಂದು ಸಾವಿರ ವರುಷಗಳವರೆಗೆ ರಕ್ತವು ಸುರಿಯುತ್ತಲೇ ಇತ್ತು. ಸಾವಿರ ವರುಷಗಳವರೆಗೆ ವಿಷ್ಣು ದೇಹದಿಂದ ನೆತ್ತರ ಹೊಯ್ದರೂ ಆ ಕಪಾಲ ತುಂಬಲೇ ಇಲ್ಲ ಅದನ್ನು ಕಂಡು ನಾರಾಯಣನು ಆಶ್ಚರ್ಯಚಕಿತನಾಗಿ ಕೇಳಿದನು.

''ಮಹಾದೇವನೇ, ಇದು ಎಲ್ಲಿಯ ಕಪಾಲ ? ಇದು ಹೀಗೇಕೆ ಇದೆ ? ಇದು ಹುಟ್ಟಿದ್ದು ಎಲ್ಲಿ? ಎಂಬುದನ್ನು ನನಗೆ ತಿಳಿಸು'' ಎಂದು.

ಅದಕ್ಕೆ ನಾನು ಹೀಗೆ ಉತ್ತರ ಕೊಟ್ಟೆ.

**ಮಹಾದೇವ :-** ಬ್ರಹ್ಮನು ಸಹಸ್ರಾರು ವರುಷ ತಪಸ್ಸು ಮಾಡಿ ಐದನೆಯ ಒಂದು ಬಂಗಾರದ ತಲೆಯನ್ನು ಪಡೆದಿದ್ದನು. ಅದನ್ನು ನಾನು ಕಡಿದುಬಿಟ್ಟೆ. ಇದೋ ನೋಡು ಇದೇ ಆ ಬ್ರಹ್ಮಕಪಾಲ. ಬ್ರಹ್ಮಹತ್ಯಾ ದೋಷದಿಂದ ಆ ಬ್ರಹ್ಮ ಕಪಾಲವು ಬಿಡದೇ ನನ್ನ ಕೈಗೆ ಅಂಟಿಕೊಂಡಿದೆ. ನಾನು ಹೋದಲೆಲ್ಲ ಇದು ನನಗೆ ಹತ್ತಿಕೊಂಡೇ ಬರುತ್ತದೆ.

**ನಾರಾಯಣ :-** ''ಹೋಗು, ಹೋಗು. ಇಲ್ಲಿಂದ ಹೊರಟು ಹೋಗು. ಬ್ರಹ್ಮದೇವರಿಗೆ ಮನಸ್ಸು ಪ್ರಸನ್ನವಾಗುವಂತೆ ನೀನು ಕಾರ್ಯಮಾಡು. ಅವರು ಪ್ರಸನ್ನರಾದರೆ ಈ ಕಪಾಲವು ನಿನ್ನ ಕೈ ಬಿಡುವದು.'' ಅನಂತರ ನಾನು ವಿಷ್ಣುವಿನ ಆದೇಶದಂತೆ ಬ್ರಹ್ಮಾಂಡದಲ್ಲಿಯ ಎಲ್ಲ ಕ್ಷೇತ್ರಗಳನ್ನು ಸುತ್ತಿದೆ. ಎಲ್ಲ ಯಾತ್ರೆಗಳನ್ನೂ ಮಾಡಿ ಮುಗಿಸಿದೆ. ಏನಾದರೂ ಆ ಬ್ರಹ್ಮಕಪಾಲವು ಎನ್ನ ಕೈ ಬಿಡಲಿಲ್ಲ. ಆಗ ನಾನು ನಾರಾಯಣನ ಆದೇಶದಂತೆ ನನ್ನ ಸ್ಥಾನವಾದ ಅವಿಮುಕ್ತಕ್ಷೇತ್ರಕ್ಕೆ ಬಂದೆ. ಇಲ್ಲಿಯ ತೀರ್ಥದಲ್ಲಿ ಮಿಂದೆ. ಅದರಿಂದ ಕೂಡಲೆ ನನ್ನ ಕೈಯಲ್ಲಿಯ ಕಪಾಲವು ಪಾಪವು ನಾಶವಾಯಿತು. ಈಗ ಆ ಬ್ರಹ್ಮಕಪಾಲವು ನನ್ನ ಕೈಗೆ ಅಂಟಿದ ಕುರುಹು ಕೂಡಾ ಉಳಿದಿಲ್ಲ. ಅದೊಂದು ಕನಸ್ಸಿನಂತೆ ಆಗಿ ಹೋಗಿದೆ. ಈ ಗಂಗಾನದಿಯು ಬ್ರಹ್ಮಹತ್ಯಾ ಪಾಪವನ್ನು ಪರಿಹರಿಸಬಲ್ಲ ದಿವ್ಯ ತೀರ್ಥ ಎಂಬುದಕ್ಕೆ ನಾನೇ ದೃಷ್ಟಾಂತ. ಅದಕ್ಕಾಗಿಯೇ ದೇವತೆಗಳ ರುದ್ರಭೂಮಿಯಾದ ಈ ಕಾಶೀ ಕ್ಷೇತ್ರವನ್ನೇ ನನ್ನ ಮನೆಯನ್ನಾಗಿ ಮಾಡಿಕೊಂಡು ವಾಸವಾಗಿದ್ದೇವೆ. ಹರಿಭಕ್ತ ಇಲ್ಲವೆ ಹರಭಕ್ತರಾಗಲಿ ಸೂರ್ಯಭಕ್ತರಾಗಲಿ ಈ ಕಾಶಿಯಲ್ಲಿದ್ದು ಗಂಗಾಸ್ನಾನಮಾಡಿ ತಮ್ಮ ತಮ್ಮ ಇಷ್ಟದೇವರನ್ನು ಧ್ಯಾನಮಾಡುತ್ತ ಮರಣ ಹೊಂದಿದರೆ ಅವರೆಲ್ಲರಿಗೂ ಶಿವನ ಸನ್ನಿಧಾನವು ಮುಂದೆ ಲಭಿಸುವದು.

**ದೇವಿ :-** ಬ್ರಹ್ಮದೇವರು ಹೇಳಿದಂತೆ ಈ ಮಹಿಮೆಯು ಅತ್ಯದ್ಭುತವಾಗಿದೆ, ಎಲ್ಲ ಕ್ಷೇತ್ರಗಳು ಇದರ ಒಂದು ಅಂಶಕ್ಕೂ ಸಮಾನವಾಗುವದಿಲ್ಲ. ಎಲ್ಲ ಸಹಸ್ರ ತೀರ್ಥಗಳು ಗಂಗೆಗೆ ಸಮವಾಗುವದಿಲ್ಲ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಎಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು.*

## ಅವಿಮುಕ್ತಕ್ಷೇತ್ರ, ಕಾಶಿ ಮತ್ತು ಗಂಗಾನದಿಯ ಮಹಾಮಹಿಮೆ

ಅಧ್ಯಾಯ - ೧೮೫

**ಮಹೇಶ್ವರ ಉವಾಚ**

**"ಸೇವಿತಂ ಬಹುಭಿಃ ಸಿದ್ಧೈರಪುನರ್ಭವಕಾಂಕ್ಷಿಭಿಃ।**
**ವಿದಿತ್ವಾ ತು ಪರಂ ಕ್ಷೇತ್ರಮವಿಮುಕ್ತ ನಿವಾಸಿನಾಂ॥**

**ಮಹೇಶ್ವರ :-** ಈ ಅವಿಮುಕ್ತಕ್ಷೇತ್ರದಲ್ಲಿ ನೆಲೆಸುವವರಿಗೆ ಪರಮ ಪದವು ಸುಲಭವಾಗಿಯೇ ದೊರಕುತ್ತಿರುವದನ್ನು ನೋಡಿ ಅನೇಕ ಸಿದ್ಧರು ಜನನ ಮರಣ ಚಕ್ರದಿಂದ ಪಾರಾಗಲಿಕ್ಕಾಗಿ ಇಲ್ಲಿ ಬಂದು ವಾಸಮಾಡುತ್ತಾರೆ. ಇದೇ ದೇವರೊಡೆಯನಾದ ಶಿವನ ಗುಪ್ತಸ್ಥಳ. ಇದೇ ಉತ್ತಮ ತೀರ್ಥ. ಇದೇ ಶ್ರೇಷ್ಠ ತಪೋವನ. ಇಲ್ಲಿ ಬಂದವರು, ಇಲ್ಲಿ ವಾಸಿಸುವವರು, ಇಲ್ಲಿ ಮರಣ ಹೊಂದಿದವರು ಮರಳಿ ಹುಟ್ಟುವದಿಲ್ಲ. ಮೋಕ್ಷ ಹೊಂದದೆ ಇರುವದಿಲ್ಲ. ಇದಕ್ಕೆ **ಸ್ಮಶಾನ ರುದ್ರ ಭೂಮಿ** ಎಂದು ಹೆಸರಿದೆಯೆಂಬ ಕಾರಣದಿಂದ ಇಲ್ಲಿ ಬಾರದೆ ದೂರ ಇರುವ ಮನುಷ್ಯರು ನಿಜವಾಗಿಯೂ ಸೌಭಾಗ್ಯದಿಂದ ವಂಚಿತರಾದಂತೆ. ಈ ಕ್ಷೇತ್ರದ ಗಾಳಿ ಬಡಿದರೂ ಸಾಕು. ಮೇರು ಮಂದರ ಮುಂತಾದ ಪರ್ವತಗಳ ಪ್ರಮಾಣದ ಪಾಪರಾಶಿಯು ನಾಶವಾಗಿ ಹೋಗುವದು. ನಾರಾಯಣ ಬ್ರಹ್ಮ ಮೊದಲಾದ ಸಾಧ್ಯರು ಇಲ್ಲಿ ಶಿವನನ್ನು ಸೃಷ್ಟಿ, ಸ್ಥಿತಿ, ಸಂಹಾರಾದಿಗಳಿಗೆ ಕಾರಣನಾದವನೆಂದು ಭಕ್ತಿಯಿಂದ ಸೇವಿಸುತ್ತಾರೆ. ಇದು ಪರಬ್ರಹ್ಮನ ಸ್ಥಾನ. ಚತುರ್ಮುಖನ ಆವಾಸ, ಬ್ರಹ್ಮನೇ ಇದನ್ನು ಸೇವಿಸಿ ರಕ್ಷಿಸುತ್ತಾನೆ. ಶಿವಭಕ್ತರಾದ ಪತಿವ್ರತಾ ಸ್ತ್ರೀಯರು ಅವಿಮುಕ್ತಕ್ಷೇತ್ರಕ್ಕೆ ಬಂದು ಇಲ್ಲಿ ಇದ್ದು ಮರಣ ಹೊಂದಿ ದಿವ್ಯಗತಿ ಪಡೆಯುವದು ಆಶ್ಚರ್ಯವಲ್ಲ. ಯಾಕಂದರೆ ಕರ್ಮಚಾರಿಣಿಯರಾದ ಭೋಗಲಂಪಟರಾದ ವ್ಯಭಿಚಾರಿಣಿ ಸ್ತ್ರೀಯರು ಕೂಡಾ ಈ ಕಾಶೀ ಕ್ಷೇತ್ರದಲ್ಲಿ ಮರಣ ಹೊಂದಿದರೆ ಸದ್ಗತಿ ಹೊಂದುತ್ತಲಿದ್ದಾರೆ. ಒಮ್ಮೆ ಇಲ್ಲಿ ಬಂದು ಗಂಗೆಯಲ್ಲಿ ಮಿಂದು ದೇವನನ್ನು ಧ್ಯಾನಿಸಿದ ಮೇಲೆ ತಪೋವನಕ್ಕಾಗಲಿ, ತೀರ್ಥಕ್ಷೇತ್ರಕ್ಕಾಗಲಿ ಹೋಗುವ ಅವಶ್ಯಕತೆಯಿಲ್ಲ. ಈ ಕಾಶೀಕ್ಷೇತ್ರಕ್ಕೆ ಒಮ್ಮೆಯಾದರೂ ಬರದಿರುವ ಮೂಢರು ನರಕಕ್ಕೆ ಹೋಗಿ ವಿಷಮೂತ್ರಗಳ ಕುಂಡಗಳಲ್ಲಿ ಹೊರಳಾಡುವರು. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಅಜ್ಞಾನ, ಆಲಸ್ಯ, ನಿದ್ರೆ, ಚಾಡಿಕೋರಿತನ ಎಂಬ ಹತ್ತು ದೋಷಗಳು ಮಾನವರನ್ನು ಪೀಡಿಸುತ್ತವೆ. ಈ ಎಲ್ಲ ದೋಷಗಳು ಬೇರೆ ಕಡೆಗಳಲ್ಲಿ ಮನುಷ್ಯನಿಂದ ಅನೇಕ ದುಷ್ಕರ್ಮ ಮಾಡಿಸಿ ಅವನನ್ನು ನರಕಕ್ಕೆ ಒಯ್ಯುತ್ತವೆ. ಆದರೆ ಈ ಕಾಶೀಕ್ಷೇತ್ರದಲ್ಲಿ ಇಷ್ಟೆಲ್ಲ ದೋಷಗಳಿದ್ದರೂ ಗಂಗಾಸ್ನಾನದಿಂದ ಶುದ್ಧನಾಗಿ ಸರ್ವಪಾಪಗಳು ಪರಿಹಾರವಾಗಿ ಅವನು ಸದ್ಗತಿ ಹೊಂದುತ್ತಾನೆ. ಮೇದಸ್ಸಿನಿಂದ ತುಂಬಿರುವದರಿಂದ ಈ ಭೂಮಿಗೆ ಮೇದಿನಿ ಎಂದು ಹೆಸರು ಬಂದಿದೆ. ಅದ್ದರಿಂದ

ಈ ಭೂಮಂಡಲವು ಪುಣ್ಯಕಾರ್ಯಕ್ಕೆ ಅಪವಿತ್ರ. ಆದಕ್ಕಾಗಿ ಯಜ್ಞಾದಿ ಕಾರ್ಯ ಮಾಡುವಾಗ ಭೂಮಿಗೆ ಸಂಸ್ಕಾರಮಾಡಿ ಪವಿತ್ರಗೊಳಿಸುವ ವಿಧಿಯನ್ನು ಶಾಸ್ತ್ರದಲ್ಲಿ ಹೇಳಿದ್ದಾರೆ. ಆದರೆ ಕಾಶಿಯಲ್ಲಿ ಈ ಭೂ ಸಂಸ್ಕಾರ ಕಾರ್ಯದ ಅಗತ್ಯವೇ ಇಲ್ಲ. ಇದು ಸ್ವಯಂ ಶುದ್ಧ ಮತ್ತು ಪವಿತ್ರತಮ. ಈ ಅವಿಮುಕ್ತಕ್ಷೇತ್ರದಲ್ಲಿ ಮರಣ ಹೊಂದಿದವರಾರೂ ನರಕಕ್ಕೆ ಹೋಗಿಲ್ಲ. ಈ ಕಾಶೀಕ್ಷೇತ್ರದಲ್ಲಿ ಇದ್ದು ಕಾಮ, ಕ್ರೋಧಗಳನ್ನು ಬಿಟ್ಟು ಯಥಾಶಕ್ತಿ ಪುಣ್ಯಕಾರ್ಯಗಳನ್ನು ಮಾಡುವ, ಶತರುದ್ರ ಪಾರಾಯಣಮಾಡುವ, ಬ್ರಾಹ್ಮಣರನ್ನೂ, ಯೋಗ್ಯತಾನುಗುಣವಾಗಿ ತಪಸ್ಸು ಮಾಡುವವರನ್ನೂ ಪರಶಿವನು ಸ್ವಯಂ ತಾನೆ ತನ್ನವರೆಂದು ಗ್ರಹಿಸುತ್ತಾನೆ ಮತ್ತು ಅನುಗ್ರಹಿಸುತ್ತಾನೆ.

ಬೇರೆಡೆಗೆ ಮಾಡಿದ ಎಂತಹ ದಾನ, ಜ್ಞಾನ, ತಪಸ್ಸು, ಯಜ್ಞ, ಸೇವೆ ಉಪಾಸನೆಗಳಿಂದಲೂ ಕೂಡ ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುವದರಿಂದ ಬರುವಷ್ಟು ಪುಣ್ಯ ಬರುವದಿಲ್ಲ. ಜಾತಿ ಚಾಂಡಾಲರಾಗಲಿ, ಕರ್ಮಚಾಂಡಾಲರಾಗಲಿ, ಮಹಾಪಾಪಿಗಳಾಗಿರಲಿ, ಎಂತಹ ನೀಚರೇ ಇರಲಿ, ಕಾಶಿಗೆ ಬಂದರೆ ಸಾಕು. ಇಲ್ಲಿರುವ ನದಿಯಲ್ಲಿ ಮಿಂದರೆ ಸಾಕು; ಇಲ್ಲಿ ಮರಣಹೊಂದಿದರೆ ಸಾಕು; ಇಲ್ಲಿಯ ಮಹಾದೇವರನ್ನು ನೆನೆದರೆ ಸಾಕು. ಅವರಿಗೆ ಇರುವವರೆಗೆ ಭವನಲ್ಲಿ ಭಕ್ತಿ, ಸತ್ತಬಳಿಕ ಮುಕ್ತಿ. ಇದು ನಿಶ್ಚಿತ. ಸರ್ವಪಾಪಗಳಿಗೂ ಇದು ದಿವ್ಯೌಷಧ. ಈ ಕಾಶೀ ಕ್ಷೇತ್ರಕ್ಕೆ ಬರಲು ದಕ್ಷಿಣಾಯಣ, ಉತ್ತರಾಯಣ ಎನ್ನಬಾರದು. ಶುಭಕಾಲ, ಅಶುಭಕಾಲ ವಿಚಾರ ಮಾಡಬಾರದು. ಯಾವಾಗ ಬಂದರೂ ಸರಿ. ಎಂದಾದರೂ ಬಂದು, ಈ ಕಾಶೀ ಕ್ಷೇತ್ರದಲ್ಲಿ ವಾಸಮಾಡಿ ಗಂಗಾಸ್ನಾನಮಾಡಿ, ಶಿವಾರ್ಚನೆ ಮಾಡಿದವರಿಗೆ ಸರ್ವವೂ ಶುಭಕಾಲವೇ. ಕಾಶಿಯಲ್ಲಿ ಮರಣಹೊಂದಿದವರು ಎಂದು ಸತ್ತರೂ ಎಂತಹ ಕೆಟ್ಟ ಮುಹೂರ್ತವಿದ್ದರೂ ಅಶುಭವೆಂದು ತಿಳಿಯಬಾರದು. ಇಲ್ಲಿ ಶುಭಾ-ಶುಭ ವಾರವೇ ಇಲ್ಲ. ಕಾಲ ಮೀಮಾಂಸೆಯೆ ಇಲ್ಲ. ಇದೇ ಆ ಕ್ಷೇತ್ರದ ಅದ್ಭುತ ಮಹಿಮೆ. ಸರ್ವರ ಅಧಿನಾಯಕನಾದ ಸ್ಕಂದನು, ಸರ್ವೇಶ್ವರನಾದ ಶಿವನ ನಿತ್ಯನಿವಾಸಭೂತವಾದ ಈ ಕಾಶೀ ಕ್ಷೇತ್ರದ ಮಹಿಮೆಯನ್ನು ಹೇಳಿದ್ದನ್ನೆಲ್ಲ ಕೇಳಿಕೊಂಡು ಅದರಂತೆ ಆಚರಿಸಿದರೆ ಈ ಕಾಶಿಯಲ್ಲಿ ನೆಲಿಸಿ, ಸಾಧನಾನುಷ್ಠಾನವನ್ನು ಮಾಡಿಕೊಂಡರೆ ಮಹಾಫಲವಿದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರಎಂಬತ್ತೈದನೆಯ ಅಧ್ಯಾಯ ಮುಗಿದುದು.*

—o—

## ಕಾಶೀಕ್ಷೇತ್ರ ಮಹಿಮಾ ವರ್ಣನೆ

ಅಧ್ಯಾಯ - ೧೮೬

**ಸೂತ ಉವಾಚ**

**ಅವಿಮುಕ್ತೇ ಮಹಾಪುಣ್ಯೇ ಆಸ್ತಿಕಾಃ ಶುಭದರ್ಶನಂ।**
**ವಿಸ್ಮಯಂ ಪರಮಂ ಜಗ್ಮುರ್ಹರ್ಷಗದ್ಗದನಿಸ್ವನಾಃ॥**

ಸ್ಕಂದನು ಹೇಳಿದ ಅವಿಮುಕ್ತಕ್ಷೇತ್ರದ ಮಹಿಮೆಯನ್ನು ಕೇಳಿ ಆಸ್ತಿಕರೆಲ್ಲರಿಗೂ ಅತ್ಯಂತ ಆಶ್ಚರ್ಯವಾಯಿತು. ಅವರೆಲ್ಲರಿಗೂ ಮೂರ್ತಿಮಂತ ಕಲ್ಯಾಣದ ದರ್ಶನವೇ ಆದಂತೆ ಎನಿಸಿತು. ಸಂತೋಷದಿಂದ ಗದ್ಗದಿತಕಂಠರಾಗಿ ಅವರು ಧರ್ಮದ ಮರ್ಮವನ್ನು ಅರಿತವನಾದ ಸ್ಕಂದನನ್ನು ಇಂತು ಕೇಳಿದರು.

''ಸ್ಕಂದ, ನೀನು ಬ್ರಹ್ಮದೇವರ ಮೊಮ್ಮಗ, ಬ್ರಹ್ಮಜ್ಞಾನಿ ಬ್ರಾಹ್ಮಣ, ಬ್ರಹ್ಮಚಾರಿ, ಬ್ರಹ್ಮವತ್ಸಲ, ಬ್ರಹ್ಮದೇವರಂತೆ ಸೃಷ್ಟ್ಯಾದಿಗಳನ್ನು ಮಾಡಲು ಸಮರ್ಥ. ಬ್ರಹ್ಮದೇವರಿಗೆ ಸಮಾನ. ಬ್ರಹ್ಮಸ್ವರೂಪಿಯಾದ ನಿನಗೆ ನಮಸ್ಕಾರವಿರಲಿ. ನಿನ್ನ ಮುಖದಿಂದ ನಾವು ಪರಮಪಾವನತತ್ವ ತಿಳಿದಂತಾಯಿತು. ನಾವು ಧನ್ಯರಾದೆವು. ನಿನಗೆ ಕಲ್ಯಾಣವಾಗಲಿ. ನಾವೆಲ್ಲರೂ ಶಂಕರನು ಸ್ಥಾಣುವಾಗಿ, ಸ್ಥಿರವಾಗಿ ನೆಲೆಸಿ, ತಪಂಗೈಯುತ್ತಿದ್ದ ಸ್ಥಳಕ್ಕೆ ಹೋಗುತ್ತೇವೆ'' ಎಂದು ಹೇಳಿದರು. ಅನಂತರ ಬ್ರಹ್ಮಾದಿ ದೇವತೆಗಳು ದೇವ ಸೇನಾಪತಿಯಾದ ಆ ಸ್ಕಂದನಿಗೆ ಹೀಗೆ ಬಿನ್ನಹ ಮಾಡಿಕೊಂಡರು. ಅದರಂತೆ ಸಿದ್ಧಪುರುಷರು ಈ ದೇವತೆಗಳೊಡನೆ ಆ ಬಿನ್ನಹದಲ್ಲಿ ದನಿಗೂಡಿಸಿದರು:

''ಕುಮಾರಾ, ಇಂತಹ ಮಹಾಮಹಿಮೋಪೇತವಾದ ಅವಿಮುಕ್ತಕ್ಷೇತ್ರದಲ್ಲಿ ನಾವೆಲ್ಲರೂ ನೆಲೆಸಬೇಕೆಂದು ನಿಶ್ಚಯ ಮಾಡಿದ್ದೇವೆ. ಅದಕ್ಕಾಗಿ ನೀನು ಸಹಾಯ ಮಾಡಬೇಕು.'' ಎಂದು ಹೇಳಿ, ಸುರರು, ಸಿದ್ಧರೂ ಆ ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡಿದ್ದಾರೆ.

**ಮಹಾದೇವ :-** ಪರಮೇಶ್ವರೀ, ಈ ಅವಿಮುಕ್ತಕ್ಷೇತ್ರದ ಇಂತಹ ಮಹಾ ಪ್ರಭಾವಕ್ಕೆ ಮುಖ್ಯ ಕಾರಣವೆಂದರೆ ಒಂದೇ ಜನ್ಮದಲ್ಲಿ, ಅದೂ ಕೂಡ ಇದೇ ಜನ್ಮದಲ್ಲಿ ಈ ಕ್ಷೇತ್ರದಲ್ಲಿ ಮೋಕ್ಷ ಪ್ರಾಪ್ತಿಯಾಗುತ್ತದೆ. ಪೂರ್ವ ಕಾಲದಲ್ಲಿ ಮಹರ್ಷಿ ವೇದವ್ಯಾಸರು ಕಾಶಿಯಲ್ಲಿದ್ದಾಗ ಒಂದು ಘಟನೆ ಜರುಗಿತು:

ವ್ಯಾಸಮುನಿಯು ಹಸಿವೆಯಿಂದ ಆಕ್ರಾಂತನಾಗಿ ಈ ಕಾಶೀಪಟ್ಟಣದಲ್ಲಿ ಎಲ್ಲೆಡೆಗೂ ಲೋಕವಿಡಂಬನಾರ್ಥನಾಗಿ ಭಿಕ್ಷೆಬೇಡಿದನು. ದುರ್ದೈವದಿಂದ ಆ ದಿನಗಳಲ್ಲಿ ಎಲ್ಲೆಡೆಗೆ ತಿರುಗಿ ಭಿಕ್ಷೆ ಬೇಡಿದರೂ ಯಾರೂ ಅವನಿಗೆ ಭಿಕ್ಷೆ ಹಾಕಲಿಲ್ಲ. ಕಸವಿಸಿಗೊಂಡ ಆ ಮುನಿಗೆ ಭಿಕ್ಷೆ ಆರುತಿಂಗಳವರೆಗೆ ಎಲ್ಲಿಯೂ ದೊರಕದಂತಾದಾಗ ಬಹಳ ಕೋಪ ಬಂದಿತು. ''ಇದೆಂತಹ ಕೆಟ್ಟ ಪಟ್ಟಣ! ಎಲ್ಲಿಯಾ ಭಿಕ್ಷೆ ಹುಟ್ಟಲೊಲ್ಲದು. ಈ ಊರಲ್ಲಿ ಇರುವ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ಇಲ್ಲಿ ಭಿಕ್ಷೆಯನ್ನು ನೀಡುವದಿಲ್ಲ. ಗಂಡ ಸತ್ತವಿಧವೆಯು ಕೂಡ ನನ್ನಂತಹ ಬ್ರಾಹ್ಮಣನಿಗೆ ಭಿಕ್ಷೆಯನ್ನು ನೀಡಲು ಮುಂದಾಗುವದಿಲ್ಲ. ಈ ಆರು ತಿಂಗಳಿಂದ ನನ್ನದು ಇದೇ ಹಾಡು. ಒಂದು ದಿನವೂ

ಸರಿಯಾಗಿ ಭಿಕ್ಷಾನ್ನ ದೊರಕುವದಿಲ್ಲ. ಹಸಿಯದನ್ನಾಗಲಿ, ಬಿಸಿಯದನ್ನಾಗಲಿ, ಬೆಂದದ್ದನ್ನಾಗಲಿ, ನೆನೆದಿದ್ದನ್ನಾಗಲಿ, ಬೇಯಿಸಿದ್ದನ್ನಾಗಲಿ ಎಂತಹದನ್ನು ನೀಡಿದರೂ ಆಹಾರವನ್ನು ಸ್ವೀಕರಿಸಲು ಸಿದ್ಧನಿದ್ದೇನೆ. ಆದರೆ ಯಾರೊಬ್ಬರೂ ನನಗೆ ಭಿಕ್ಷೆಯನ್ನು ಕೊಡಲು ಮಾತ್ರ ಇಲ್ಲಿ ಸಿದ್ಧರಿಲ್ಲ. ಆದುದರಿಂದ ಈ ತೀರ್ಥಕ್ಕೂ ಈ ನಗರಕ್ಕೂ ಈಗಲೇ ಹೀಗೆ ಶಾಪ ಕೊಟ್ಟುಬಿಡುತ್ತೇನೆ. ಇಲ್ಲಿಯ ತೀರ್ಥವು ತೀರ್ಥ ಎನಿಸದೇ ಹೋಗಲಿ. ಈ ಊರಲ್ಲಿ ತ್ರಿಪುರುಷ, ತ್ರಿಪುರುಷ ಧನ, ತ್ರಿಪುರುಷ ಸಖ್ಯ, ಇವು ಮೂರು ಆಗದಂತೆ ಹೋಗಲಿ. ಈ ಅವಿಮುಕ್ತಕ್ಷೇತ್ರದಲ್ಲಿಯ ಜನರಿಗೆಲ್ಲ ಸಿದ್ಧಿಯಾಗದಂತೆ ನಾನು ವಿಘ್ನವನ್ನುಂಟುಮಾಡುತ್ತೇನೆ.'' ಹೀಗೆ ಶಾಪ ಕೊಡಬೇಕೆಂದು ವ್ಯಾಸಮುನಿಯು ಮನಸ್ಸಿನಲ್ಲಿ ಮಾಡಿಕೊಂಡಿದ್ದು ಮಹದೇವರಿಗೆ ಯೋಚಿಸುತ್ತಿರುವಾಗಲೇ ಗೊತ್ತಾಯಿತು. ಆಗ ಅವಸರದಿಂದ ಗೌರೀಪತಿಯು ತನ್ನ ಪ್ರೇಯಸಿ ಪರಮೇಶ್ವರಿಗೆ ಅಂಜುತ್ತ ಹೇಳಿದನು. ''ದೇವಿ ನನಗೆ ಘೋರ ಪ್ರಸಂಗವು ಬಂದಿದೆ. ದ್ವೈಪಾಯನ ಮುನಿಯು ಸಿಟ್ಟಿಗೆದ್ದು ನನಗೆ ಶಾಪಕೊಡಲು ಹೊರಟಿದ್ದಾನೆ.

**ಗೌರಿ :-** ವ್ಯಾಸಮುನಿಗೆ ಇಷ್ಟು ಕೋಪಬರಲು ಕಾರಣವೇನು ? ಈ ಕ್ಷೇತ್ರವು ಅವನಿಗೇನು ಮಾಡಿದೆ ?

**ಮಹಾದೇವ :-** ಪ್ರಿಯೆ, ವೇದವ್ಯಾಸ ಮುನಿಯು ಮೌನದಿಂದಿದ್ದು, ಧ್ಯಾನ ಸಮಾಧಿಯಿಂದ ಹನ್ನೆರಡು ವರುಷಕಾಲ ಉಗ್ರತಪಸ್ಸು ಮಾಡಿದನು. ಅದರಿಂದ ಅವನಿಗೆ ವಿಚಿತ್ರ ಹಸಿವು ಹುಟ್ಟಿ, ಭಿಕ್ಷೆಬೇಡಲು ಹೊರಟನು. ಯಾರೂ ಅವನಿಗೆ ತುತ್ತು ಅನ್ನವನ್ನು ಈ ಕಾಶಿಯಲ್ಲಿ ನೀಡಲಿಲ್ಲ. ಹೀಗೆ ಆರು ತಿಂಗಳುವರೆಗೆ ಭಿಕ್ಷೆ ಬೇಡಿದರೂ ಅವನಿಗೆ ತುಸುವೂ ಅನ್ನವು ದೊರಕದಂತಾದಾಗ ಕೊನೆಗೆ ಹಸಿವೆಯನ್ನುತಾಳಲಾರದೆ ಅವನಿಗೆ ಕೋಪ ಬಂದುಬಿಟ್ಟಿತು. ಈಗ ಅವನು ನಮ್ಮ ಈ ಕ್ಷೇತ್ರಕ್ಕೂ, ತೀರ್ಥಕ್ಕೂ ಶಾಪಕೊಡಲು ಹೊರಟಿದ್ದಾನೆ. ಏನೆಂದು ಶಾಪಕೊಡ ಬೇಕೆಂಬುದನ್ನು ನಿರ್ಧರಿಸಿದ್ದಾನೆ. ಆದರೆ ಶಾಪಾಕ್ಷರ ಇನ್ನೂ ಅವನು ಉಚ್ಚರಿಸಿಲ್ಲ. ಅಷ್ಟರಲ್ಲಿ ಏನಾದರೂ ಉಪಾಯ ಮಾಡಿ, ಅವನು ಶಾಪವನ್ನು ಕೊಡದಂತೆ ಮಾಡಬೇಕು. ಈ ವ್ಯಾಸಮುನಿಯು ಸಾಮಾನ್ಯನಲ್ಲ. ಸಾಕ್ಷಾತ್ ಶ್ರೀಮನ್ ನಾರಾಯಣನೇ ವೇದವ್ಯಾಸ ಅವತಾರಮಾಡಿ ಬಂದಿದ್ದಾನೆ.

**''ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ ।**
**''ವಿಷ್ಣುವೆ ಕೃಷ್ಣ ದ್ವೈಪಾಯನ.**

ಅವನೆ ವ್ಯಾಸ. ಅವನು ಸಾಕ್ಷಾತ್ ನಾರಾಯಣ. ಅವನ ಶಾಪಕ್ಕೆ ಯಾರು ಹೆದರಲಿಕ್ಕಿಲ್ಲ ? ಸಾಕ್ಷಾತ್ ಬ್ರಹ್ಮದೇವರೂ ಕೂಡ ಆ ಭಗವಂತನಿಗೆ ಬೆದರಿ ಹೋಗುತ್ತಾನೆ. ಅವನು ಮನಸ್ಸುಮಾಡಿದರೆ ಯಾರನ್ನಾದರೂ ದೇವತೆಯನ್ನಾಗಿ ಮಾಡಬಹುದು. ಎಂತಹ ದೊಡ್ಡ ದೇವತೆಯನ್ನೂ ಸಾಮಾನ್ಯನನ್ನಾಗಿ ಮಾಡಬಹುದು. ಆದ್ದರಿಂದ ನಾವು ಈಗ ಮಾನವ ದಂಪತಿಗಳಾಗೋಣ. ಗೃಹಸ್ಥಾಶ್ರಮಿಗಳಾಗಿ ಒಂದು ಮನೆಯಲ್ಲಿದ್ದು, ಅವನಿಗೆ ತೃಪ್ತಿಯಾಗುವಂತೆ ಭಿಕ್ಷೆ ನೀಡೋಣ ''ಹೀಗೆ ಯೋಚಿಸಿ, ಆ ಶಿವ ಸತಿಯರು ಮನುಷ್ಯ ದಂಪತಿಗಳಾಗಿ ವೇದವ್ಯಾಸರಿಗೆ ಭೆಟ್ಟಿಯಾದರು. ಅವರಿಗೆ ನಮಸ್ಕಾರ ಮಾಡಿ ''ಪೂಜ್ಯರೆ, ಬನ್ನಿ, ಬನ್ನಿ, ದಯಮಾಡಿ ನಮ್ಮ ಭಿಕ್ಷೆಯನ್ನು ತಾವು ಸ್ವೀಕರಿಸಬೇಕು.

ನಿಮ್ಮಂತಹ ಸತ್ಪಾತ್ರರು ದೊರೆತದ್ದು ನಮ್ಮ ಪುಣ್ಯ'' ಎಂದು ಭಕ್ತಿಯಿಂದ ಬಾಗಿ ವಿನಯದಿಂದ ವಂದಿಸಿ, ಕೈಂಕರ್ಯದಿಂದ ಕೈಜೋಡಿಸಿ ಕೇಳಿಕೊಂಡರು.

ಈ ದಂಪತಿಗಳ ವಿನಯ ಮಧುರಮಾತುಗಳನ್ನು ಕೇಳಿ, ಅವರ ಮನೆಗೆ ಬಂದು ವೇದವ್ಯಾಸರು ಭಿಕ್ಷೆ ಸ್ವೀಕರಿಸಿದರು. ಪಾರ್ವತೀ ಪರಮೇಶ್ವರರು ಅವರಿಗೆ ಷಡ್ರಸಗಳ ಅಮೃತದಂತಹ ಅನ್ನವನ್ನು ಉಣಬಡಿಸಿದರು. ಊಟಕ್ಕೆ ಕುಳಿತಾಗ ವೇದವ್ಯಾಸ ಮುನಿಗಳಿಗೆ ಆಶ್ಚರ್ಯವೆನಿಸಿತು. ಇಂತಹ ಅಮೃತಕ್ಕೆ ಸಮಾನವಾದ ರುಚಿಕರ ಊಟವನ್ನು ಅವರು ಎಂದೂ ಉಂಡಿರಲಿಲ್ಲ. ಆಗ ವ್ಯಾಸಮುನಿಯು ಅತ್ಯಂತ ಸಂತುಷ್ಟನಾಗಿ ಆ ದಂಪತಿಗಳನ್ನು ಅಭಿನಂದಿಸಿ ಹೇಳಿದನು.

**''ದೇವೋ ದೇವೀ ನದೀಗಂಗಾ ಮಿಷ್ಟಮನ್ನಂ ಶುಭಾಗತಿಃ|**
**ವಾರಾಣಸ್ಯಾಂ ವಿಶಾಲಾಕ್ಷಿ ವಾಸಃಕಸ್ಯ ನ ರೋಚತೆ.''**

ಕಾಶೀವಾಸವು ಯಾರಿಗೆ ಸೇರುವದಿಲ್ಲ ? ಇಲ್ಲಿ ಶಿವನಿದ್ದಾನೆ.ಸತೀ ದೇವಿಯಿದ್ದಾಳೆ. ಗಂಗಾನದಿಯು ಉಂಟು. ಬೇಕಾದಂತಹ ಮೃಷ್ಟಾನ್ನ ಭೋಜನಉಂಟು. ಕೊನೆಗೆ ಸದ್ಗತಿಯೂ ಕಾದಿದೆ. ಅಂದ ಬಳಿಕ ಈ ಕಾಶಿಯಲ್ಲಿ ವಾಸಿಸಲು ಯಾರು ಇಷ್ಟಪಡಲಿಕ್ಕಿಲ್ಲ ?'' ಹೀಗೆ ನುಡಿದು ವ್ಯಾಸರು ತಾವು ಶಪಿಸಲು ಹೊರಟ ಆ ಕಾಶೀಪಟ್ಟಣವನ್ನು ಮತ್ತೊಮ್ಮೆ ನೋಡಿದರು. ಅವರ ಕಣ್ಣೆದುರೆ ಪಾರ್ವತಿ ಪರಮೇಶ್ವರರೂ ಕಂಡುಬಂದರು. ತಾನಿದ್ದ ಮನೆಯ ಅಂಗಳದಲ್ಲಿ ಬಂದು ನಿಂತುಕೊಂಡಾಗ ಆ ವ್ಯಾಸಮುನಿಯನ್ನುಕುರಿತು ಮಹಾದೇವರು ಹೇಳಿದರು :

''ಮುನಿಯೇ, ಇನ್ನು ನೀನು ಈ ಕ್ಷೇತ್ರದಲ್ಲಿ ಇರಬೇಡ. ನಿನಗೆ ಸಿಟ್ಟು ಬಹಳ''. ಈ ಮಾತನ್ನು ಕೇಳಿ, ವ್ಯಾಸಮುನಿಗೆ ಆಶ್ಚರ್ಯವಾಗಿ ನುಡಿದನು.

**ವ್ಯಾಸ :-** ''ಚತುರ್ದಶಿ ಮತ್ತು ಅಷ್ಟಮಿ ಎರಡು ದಿನ ನನಗೆ ಈ ಕಾಶಿಪಟ್ಟಣದಲ್ಲಿ ಪ್ರವೇಶ ಮಾಡಲು ಅನುಮತಿಯನ್ನು ನೀಡಿರಿ.''

ವ್ಯಾಸಮುನಿಯ ಈ ಬಿನ್ನಹವನ್ನು ಮನ್ನಿಸಿ ಪರಮೇಶ್ವರನು ಅಲ್ಲಿಯೇ ಅಂತರ್ಧಾನ ಹೊಂದಿದನು. ಮರುಕ್ಷಣದಲ್ಲಿ ಮಾನವ ರೂಪದಿಂದ ತನಗೆ ಅತಿಥ್ಯ ನೀಡಿದ ಆ ಮನೆಯ ಯಜಮಾನನೂ ಇಲ್ಲ; ಯಜಮಾನಿಯೂ ಇಲ್ಲ. ಆ ಮನೆಯೂ ಇಲ್ಲ. ಎಲ್ಲವೂ ಅದೃಶ್ಯವಾಗಿದ್ದವು. ಹೀಗೆ ಮೂರು ಲೋಕದಲ್ಲಿ ವಿಖ್ಯಾತರಾದ ವೇದವ್ಯಾಸ ಮುನಿಗಳು ಕಾಶೀವಾಸಕ್ಕೆ ನಿಷೇಧಿಸಲ್ಪಟ್ಟಿದ್ದರೂ, ಆ ಕ್ಷೇತ್ರದ ಗುಣದಿಂದ ಲುಬ್ಧರಾಗಿ ಅದರ ಸಮೀಪದಲ್ಲಿಯೇ ಮತ್ತೊಂದು ವಸತಿ ಸ್ಥಾನವನ್ನು ಕಲ್ಪಿಸಿಕೊಂಡು ವಾಸಮಾಡಿರುತ್ತಾರೆ. ವ್ಯಾಸರ ಈ ಕಾಶೀ ಪರಿಸರ ವಾಸದ. ವ್ಯಸನವನ್ನು ಕಂಡು ಎಲ್ಲ ಪಂಡಿತರು ಈ ಕ್ಷೇತ್ರವನ್ನು ಪ್ರಂಶಸಿಸುತ್ತಾರೆ.

ಈ ಕಾಶೀಕ್ಷೇತ್ರದಲ್ಲಿ ದೇವದ್ರೋಹಿಗಳು, ಬ್ರಾಹ್ಮಣದ್ವೇಷಿಗಳು, ದೇವಭಕ್ತಿಯನ್ನು ಅಣಕಿಸುವವರು, ಬ್ರಹ್ಮಹತ್ಯೆಮಾಡುವವರು, ಉಪಕಾರವನ್ನು ನೆನೆಯದವರು, ಗುರುದ್ರೋಹಿಗಳು, ತೀರ್ಥ ಹಾಗೂ ದೇವಮಂದಿರವನ್ನು ದೂಷಣ ಮಾಡುವವರು ಇರಬಾರದು. ಇಂಥವರಿಗೆ ಈ ಕಾಶೀಪಟ್ಟಣದಲ್ಲಿ ಪ್ರವೇಶಕ್ಕೆ ಅವಕಾಶ ಕೊಡಬಾರದೆಂದು ದಂಡನಾಯಕನು, ನಗರ ರಕ್ಷಕನಾಗಿ ನಿಂತುಕೊಂಡಿದ್ದಾನೆ. ಈ ದಂಡನಾಯಕನಿಗೆ ನಮಸ್ಕಾರ

ಮಾಡಿ ಗಂಧ, ಹೂವು, ದೀಪ, ಧೂಪಗಳಿಂದ ಪೂಜೆಮಾಡಿ, ಅನಂತರ ಈ ಕ್ಷೇತ್ರದಲ್ಲಿ ಪ್ರವೇಶ ಮಾಡಬೇಕು. ಈ ಕ್ಷೇತ್ರದಲ್ಲಿ ವಾಸಿಸಿ, ಶಿವನನ್ನು ಅತ್ಯಂತ ಭಕ್ತಿಯಿಂದ ಭಜಿಸಿ ಶಿವೋಪಾಸನೆ ಮಾಡಿದವರು ಈಶ್ವರನ ಅನುಗ್ರಹದಿಂದ ನಾನಾ ರೂಪಧಾರಿಗಳಾದ ಗಣೇಶ್ವರರಾಗಿ ಮೆರೆಯುವರು. ಈ ಅವಿಮುಕ್ತಕ್ಷೇತ್ರಕ್ಕೆ ಬಂದು ಈಶ್ವರನ ಲಿಂಗವನ್ನು ಅರ್ಚಿಸಿದ ಮನುಷ್ಯನು ಮತ್ತೆ ಸಂಸಾರಕ್ಕೆ ಬರುವದಿಲ್ಲ; ಅಮರನಾಗಿ ಅಕ್ಷಯ ಐಶ್ವರ್ಯ ಪಡೆದು ಶಿವನ ಸನ್ನಿಧಿಯಲ್ಲಿ ವಿಹಾರ ಮಾಡುತ್ತಾನೆ. ಅಂತರಿಕ್ಷದಲ್ಲಿಯ ನಕ್ಷತ್ರ, ಗ್ರಹ, ಚಿಕ್ಕೆಗಳಿಗೂ ಕೆಲವು ಕಾಲದ ಬಳಿಕ ಯಾವಾಗಾದರೊಮ್ಮೆ ಬೀಳುವ ಭಯವಿದೆ. ಆದರೆ ಈ ಅವಿಮುಕ್ತ ಕ್ಷೇತ್ರದಲ್ಲಿರುವವರಿಗೆ ಪತನದ ಭಯವೇ ಇಲ್ಲ. ಘೋರವಾದ ಕಲಿಯುಗವು ಬಂದು, ಎಲ್ಲ ಕಡೆಗೂ ಅಧರ್ಮವು ಹಬ್ಬಿರಲು, ಈ ಅವಿಮುಕ್ತಕ್ಷೇತ್ರ ಬಿಡದೆ, ವಾಸ ಮಾಡಿದವರು ಕೃತಾರ್ಥರು. ಒಮ್ಮೆ ಈ ಕಾಶಿ ನಗರದಲ್ಲಿ ಪ್ರವೇಶ ಮಾಡಿ ಇದ್ದು, ಅದನ್ನು ಬಿಟ್ಟು ಬೇರೆ ಕಡೆಗೆ ಹೊರಟರೆ ಅವನನ್ನು ನೋಡಿ ಭೂತಗಣಗಳು ಒಬ್ಬರಿಗೊಬ್ಬರು ಚಪ್ಪಾಳೆ ತಟ್ಟಿ ನಗುತ್ತಾರೆ. ಜಪಮಾಡದ, ಧ್ಯಾನಗೈಯದ, ಜ್ಞಾನಶೂನ್ಯರಾದ ಧರ್ಮವರ್ಜಿತರಾದ, ದುಃಖದಗ್ಧರಾದ ಜನರಿಗೆಲ್ಲ ವಾರಣಾಸಿಯೇ ಪರಮಗತಿ. ಈ ಕಾಶೀಪಟ್ಟಣದಲ್ಲಿಯ ಎಲ್ಲ ತೀರ್ಥಗಳೂ ಪಾಪನಾಶಕವೇ. ಅದರಲ್ಲೂ ದಶಾಶ್ವಮೇಧ, ಲೋಲಾರ್ಕ, ಕೇಶವ, ಬಿಂದುಮಾಧವ, ಮತ್ತು ಐದನೆಯದಾಗಿ ವೈಕರ್ಣಿಕಾ ಇವು ಸರ್ವಶ್ರೇಷ್ಠವಾದ ಪಂಚತೀರ್ಥಗಳು ಎನಿಸುತ್ತವೆ.'' ಹೀಗೆ ಮಹಾದೇವರು ಮಹಾದೇವಿಗೆ ಹೇಳಿದ ಅವಿಮುಕ್ತ ಕ್ಷೇತ್ರದ ಮಹಿಮೆಯನ್ನು ನಾನು ನಿಮಗೆ ತಿಳಿಸಿದ್ದೇನೆ.

ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಎಂಬತ್ತಾರನೆಯ ಅಧ್ಯಾಯ ಮುಗಿದುದು.



## ನರ್ಮದಾ ನದಿಯ ಮಾಹಾತ್ಮ್ಯ

**ಅಧ್ಯಾಯ - ೧೮೭**

**ಋಷಯ ಊಚು :**

**''ಮಾಹಾತ್ಮ್ಯಮವಿಮುಕ್ತಸ್ಯ ಯಥಾವತ್ ಕಥಿತಂ ತ್ವಯಾ ।**
**ಇದಾನೀಂ ನರ್ಮದಾಯಾಸ್ತು ಮಾಹಾತ್ಮ್ಯಂ ವದಸತ್ತಮ ॥**

**ಋಷಿ :-** ಸಜ್ಜನ ಶ್ರೇಷ್ಠನಾದ ಸೂತನೇ, ನೀನು ಈವರೆಗೆ ಅವಿಮುಕ್ತ ಕ್ಷೇತ್ರವೆನಿಸಿದ ಕಾಶಿಯ ಮಹಿಮೆಯನ್ನು ಯಥಾವತ್ತಾಗಿ ನಿರೂಪಿಸಿರುವೆ. ಈಗ ನರ್ಮದಾ ನದಿಯ ಮಹಿಮೆಯನ್ನು ಹೇಳು. ಈ ನರ್ಮದಾ ನದಿಯ ದಂಡೆಯ ಮೇಲೆ ಓಂಕಾರಕ್ಷೇತ್ರ, ಅಮರೇಶಕ್ಷೇತ್ರ ಮುಂತಾದ ಅನೇಕ ತೀರ್ಥಕ್ಷೇತ್ರಗಳು ಇರುತ್ತವೆ. ಪ್ರಳಯಕಾಲದಲ್ಲಿ ನರ್ಮದಾ ನದಿ ಮತ್ತು ಮಾರ್ಕಂಡೇಯ ಮುನಿ ಇವರಿಬ್ಬರೂ ನಾಶವಾಗದೇ ಉಳಿದಿದ್ದರಂತೆ. ಸರ್ವವೂ ನಷ್ಟವಾದಾಗ ಈ ನರ್ಮದಾ ನದಿಯು ಮಾತ್ರ ನಾಶವಾಗದೇ ಹೇಗೆ ಉಳಿಯಿತು ? ಇದನ್ನೆಲ್ಲ ಸಂಕ್ಷಿಪ್ತವಾಗಿ ಹಿಂದೆ ಹೇಳಿದರೂ, ಈಗ ನನಗೆ ವಿವರ ವಿಸ್ತಾರವಾಗಿ ಕೇಳಬೇಕೆಂದು ಅಪೇಕ್ಷೆಯಾಗಿದೆ, ಅದನ್ನೀಗ ಬಿತ್ತರಿಸು.

**ಸೂತ** :- ಪೂರ್ವಕಾಲದಲ್ಲಿ ಮಹಾತ್ಮನಾದ ಧರ್ಮರಾಜನು ಮಾರ್ಕಂಡೇಯ ಮಹಾಮುನಿಗಳನ್ನು ಕುರಿತು ನರ್ಮದೆಯ ಮಹಿಮೆಯನ್ನು ಹೇಳಬೇಕೆಂದು ಕೇಳಿಕೊಂಡಿದ್ದನು. ಆಗ, ಮಾರ್ಕಂಡೇಯ ಮುನಿಗಳು ಆ ಧರ್ಮರಾಜನ ಪ್ರಶ್ನೆಗೆ ಉತ್ತರ ರೂಪವಾಗಿ ಆ ನರ್ಮದೆಯ ಮಹಿಮೆಯನ್ನು ತಿಳಿಸಿದ್ದರು. ಅದನ್ನೇ ನಾನು ಈಗ ಹೇಳುತ್ತೇನೆ.

**ಧರ್ಮರಾಜ** :- ಮಾರ್ಕಂಡೇಯ ಮುನಿಗಳೇ, ತಾವು ನಮಗೆ ವಿವಿಧ ಧರ್ಮಗಳನ್ನು ಉಪದೇಶಿಸಿದಿರಿ. ಈಗ ನರ್ಮದಾ ನದಿಯ ಮಹಿಮೆಯನ್ನು ಹೇಳಿರಿ.

**ಮಾರ್ಕಂಡೇಯ** :- ನರ್ಮದೆಯು ನದಿಗಳಲ್ಲಿ ಶ್ರೇಷ್ಠವಾಗಿದೆ. ಸರ್ವ ಪಾಪಗಳನ್ನು ನಾಶಮಾಡುವ ನದಿ ಎನಿಸಿದೆ. ಸ್ನಾನಮಾಡಿದ ಸರ್ವಪ್ರಾಣಿಗಳನ್ನು ಉದ್ಧರಿಸುತ್ತದೆ. ಗಂಗಾ ನದಿಯು ಕನಖಲು ಕ್ಷೇತ್ರದಲ್ಲಿ ಪುಣ್ಯಕರೀ. ಸರಸ್ವತೀ ನದಿ ಕುರುಕ್ಷೇತ್ರದಲ್ಲಿ ಪರಮಪವಿತ್ರವಾಗಿದೆ. ನರ್ಮದಾನದಿಯು ಎಲ್ಲ ಕಡೆಗೂ ಪವಿತ್ರವಾಗಿದೆ. ಸರಸ್ವತೀ ನದಿಯಲ್ಲಿ ಮೂರು ದಿನ ಸ್ನಾನ ಮಾಡಿದರೆ ಉದ್ಧಾರ, ಯಮುನಾ ನದಿಯಲ್ಲಿ ಏಳು ದಿನ ಸ್ನಾನ ಮಾಡಿದ ಬಳಿಕ ಉದ್ಧಾರ. ಗಂಗಾ ನದಿಯಲ್ಲಿ ಒಂದೇ ದಿನ ಸ್ನಾನ ಮಾಡಿದರೆ ಸಾಕು. ಆಗಲೇ ಉದ್ಧಾರ. ಆದರೆ ನರ್ಮದಾ ನದಿಯನ್ನು ನೋಡಿದ ಕೂಡಲೇ ಉದ್ಧಾರ. ಸ್ನಾನ ಮಾಡಬೇಕೆಂಬ ನಿಯಮ ಕೂಡ ಇಲ್ಲ. ಅತಿ ರಮಣೀಯವಾದ ಈ ನದಿಯಲ್ಲಿ ಅನೇಕ ಜನ ದೇವತೆಗಳು, ಗಂಧರ್ವರು, ತಪಸ್ವಿಗಳು ಭಕ್ತಿಯಿಂದ ಸ್ನಾನ ಮಾಡಿ, ತಪಂಗೈದು ಸಿದ್ಧಿಯನ್ನು ಪಡೆದಿದ್ದಾರೆ.

ಈ ನದಿಯಲ್ಲಿ ಸ್ನಾನಮಾಡಿ, ಒಂದು ದಿನ ಉಪವಾಸವಿದ್ದು ದೇವರ ಪೂಜೆ ಮಾಡಿದ ಮನುಷ್ಯನು ತನ್ನ ಹಿಂದಿನ ನೂರು ಕುಲವನ್ನು ಉದ್ಧರಿಸುವನು. ನರ್ಮದೆಯ ಜಲೇಶ್ವರ ತೀರ್ಥದಲ್ಲಿ ಸ್ನಾನಮಾಡಿ, ಶ್ರಾದ್ಧ ವಿಧಿಯಿಂದ ಪಿಂಡ ಪ್ರದಾನ ಮಾಡಿದರೆ, ಪ್ರಳಯಕಾಲದ ವರೆಗೂ ಪಿತೃಗಳಿಗೆ ತೃಪ್ತಿ. ಇಲ್ಲಿ ನರ್ಮದಾ ನದಿಯ ಪರ್ವತ ಎಂಬ ತೀರ ಪ್ರದೇಶದ ಪರಿಸರದಲ್ಲಿ ರುದ್ರಕೋಟಿ ಎಂಬ ಲಿಂಗವನ್ನು ಪ್ರತಿಷ್ಠೆ ಮಾಡಲಾಗಿದೆ. ಅಲ್ಲಿ ಸ್ನಾನ ಮಾಡಿದರೆ, ಮಹದೇವನು ಪ್ರೀತನಾಗುತ್ತಾನೆ. ಇಲ್ಲಿ ಪರ್ವತ ತೀರ್ಥದಲ್ಲಿ ಸ್ನಾನಮಾಡಿ, ಶುಚಿರ್ಭೂತನಾಗಿ ಪಿತೃಕಾರ್ಯ ಮಾಡಬೇಕು. ಅಲ್ಲಿ ತಿಲೋದಕ ದಾನದಿಂದ ಏಳುತಲೆಮಾರಿನ ಪಿತೃಗಳು ಉದ್ಧಾರ ಹೊಂದುವರು. ಇಲ್ಲಿ ಪಿತೃಕಾರ್ಯಮಾಡಿದವನು ಅರವತ್ತು ಸಾವಿರ ವರುಷ ಸ್ವರ್ಗ ಲೋಕದಲ್ಲಿ ಅಪ್ಸರೆಯರೊಂದಿಗೆ ವಿಹಾರ ಮಾಡುತ್ತಾನೆ. ಪುಣ್ಯ ಸವೆದ ಬಳಿಕ, ಸ್ವರ್ಗದಿಂದ ಉರುಳಿ ಬಿದ್ದು, ದೊಡ್ಡ ಕುಲದಲ್ಲಿ ಹುಟ್ಟಿ ಶ್ರೀಮಂತನಾಗಿ, ದಾನ ಧರ್ಮ ಮಾಡಿ, ಅನೇಕ ಧರ್ಮ ಕರ್ಮ ನೆರವೇರಿಸಿ, ಮತ್ತೆ ನರ್ಮದಾನದಿಯನ್ನು ನೆನೆದು ಅಲ್ಲಿಯೇ ಹೋಗುತ್ತಾನೆ. ನರ್ಮದಾ ನದಿಯ ಅಮರಕಂಟಕ ತೀರ್ಥದಲ್ಲಿ ಬ್ರಹ್ಮಚಾರಿಯಾಗಿ ಕಾಮವನ್ನು ಗೆದ್ದು, ಕೋಪ ನಿಗ್ರಹಿಸಿ, ಎಲ್ಲ ಹಿಂಸೆಗಳನ್ನು ತೊರೆದು, ಪರೋಪಕಾರ ಮಾಡುತ್ತ ಶಿವನಲ್ಲಿಯೇ ಮನಸ್ಸನ್ನಿಟ್ಟು, ಪ್ರಾಣಪರಿತ್ಯಾಗ ಮಾಡಿದವನು ಅನೇಕಾನೇಕ ಸಾವಿರ ವರುಷಗಳವರೆಗೆ ಸ್ವರ್ಗಸುಖ ಪಡೆಯುತ್ತಾನೆ. ಅಪ್ಸರೆಯರೊಂದಿಗೆ ನಂದನವನದಲ್ಲಿ ಆನಂದದಿಂದ ದಿವ್ಯ ಗಂಧಲೇಪನ ಮಾಡಿಕೊಂಡು ಮಂದಾರಾದಿ ಸುಂದರವಾದ ದೇವಲೋಕದ ಸುಗಂಧಿಪುಷ್ಪಗಳನ್ನು ಹಾಕಿಕೊಂಡು ದಿವ್ಯ ಕ್ರೀಡೆಗಳನ್ನು

ದೇವಲೋಕದಲ್ಲಿ ಮಾಡುತ್ತಾನೆ. ತನ್ನ ಪುಣ್ಯಕ್ಷೀಣವಾದ ಬಳಿಕ ಸ್ವರ್ಗದಿಂದ ಪರಿಭ್ರಷ್ಟನಾಗಿ ಭೂಲೋಕದಲ್ಲಿ ಮಹಾರಾಜನಾಗಿ ಮೆರೆಯುತ್ತಾನೆ. ದಾಸ, ದಾಸಿಯರು, ಆನೆ, ಕುದುರೆ, ಪರಿಚಾರಕ ಮುಂತಾದವರಿಂದ ಅವರ ಮನೆಯು ಇಂದ್ರಭವನದಂತೆ ತೋರುವದು. ರಾಜರಾಜೇಶ್ವರನಂತೆ ನಲ್ಲೆಯರೊಂದಿಗೆ ಲಲ್ಲೆವಾತುಗಳನ್ನಾಡುತ್ತ ಸುಖದಿಂದ ಬಾಳಿ ಬದುಕಿ ನಲಿದಾಡುತ್ತಾನೆ.

ಇದರಂತೆ ಅಮರೇಶತೀರ್ಥದಲ್ಲಿ ದೇಹಪಾತ ಮಾಡಿದ ಮನುಷ್ಯನು ಹರಲೋಕದಲ್ಲಿ ಮೂರು ಸಾವಿರ ದಿವ್ಯ ಕನ್ನಿಕೆಯರೊಡನೆ ವಿಹರಿಸುತ್ತಾನೆ ಬಹುಕಾಲದ ವರೆಗೆ. ಈ ಪರ್ವತ ತೀರ್ಥದ ಸುತ್ತಲೂ ರುದ್ರ ಕೋಟಿ ಎಂಬ ಅನೇಕ ತೀರ್ಥಗಳಿವೆ. ಅಲ್ಲಿ ಸ್ನಾನಮಾಡಿದವನು ರುದ್ರ ಕೋಟಿಯಲ್ಲಿ ಪ್ರವೇಶಿಸುವನು. ಈ ಪರ್ವತ ತೀರ್ಥದ ಪಶ್ಚಿಮಕ್ಕೆ ಸ್ನಾನಮಾಡಿ ಪಿತೃಕಾರ್ಯ ಕೈಕೊಂಡು ತಿಲೋದಕದಿಂದ ತರ್ಪಣ ಕೊಟ್ಟರೆ ಅವನ ಏಳು ತಲೆ ಉದ್ಧಾರ. ಸ್ವರ್ಗಲೋಕದ ಸುಖವಾಸ. ಅನಂತರ ಸ್ವರ್ಗದಿಂದ ಉರುಳಿ ಬಿದ್ದರೂ ಭೂಲೋಕದಲ್ಲಿ ಶ್ರೀಮಂತ ಧಾರ್ಮಿಕ,ಮನೆತನದಲ್ಲಿ ಹುಟ್ಟಿ ನರ್ಮದಾ ನದಿಯನ್ನು ನೆನೆದು ಮತ್ತೆ ಅಲ್ಲಿಗೆ ಹೋಗುವನು ? ಪರ್ವತ ತೀರ್ಥದ ಸುತ್ತಲೂ ಅಮರ ಕಂಟಕದ ಎರಡೂ ಬದಿಯಲ್ಲಿ ಅರವತ್ತು ಸಾವಿರ ತೀರ್ಥಗಳಿರುತ್ತವೆ. ಇಲ್ಲಿ ಶಿವನನ್ನು ಧ್ಯಾನ ಮಾಡುತ್ತ ಪ್ರಾಣ ತ್ಯಾಗ ಮಾಡಿದ ಮನುಷ್ಯನು, ಮೂರು ಸಾವಿರ ವರ್ಷ ಸ್ವರ್ಗದಲ್ಲಿ ಸುಖಪಡುವನು. ಪರ್ವತ ತೀರ್ಥದ ಪಶ್ಚಿಮದಲ್ಲಿ ಜಲೇಶ್ವರ ಎಂಬ ತೀರ್ಥವಿದೆ. ಅಲ್ಲಿ ಜಪ, ಉಪಾಸನಾದಿ ಕರ್ಮಗಳಿಂದ ಪಿತೃಗಳಿಗೆ ಹತ್ತು ವರುಷ ಶ್ರಾದ್ಧ ಮಾಡಿ ತರ್ಪಣ ಕೊಟ್ಟಷ್ಟು ಪ್ರೀತಿಯಾಗುವದು. ನರ್ಮದಾ ನದಿಯ ದಕ್ಷಿಣ ತೀರದಲ್ಲಿ ಕಪಿಲಾ ಎಂಬ ಮಹಾ ನದಿ ಇದ್ದು, ಅಲ್ಲಿ ಕೋಟಿಶತವೆಂಬ ತೀರ್ಥವಿದೆ. ಅಲ್ಲಿ ಮಾಡಿದ ಪುಣ್ಯ ಕರ್ಮಕ್ಕೆ ಕೋಟಿ ಪಟ್ಟು ಪುಣ್ಯ ಬರುವದು. ಆ ನದಿಯ ದಂಡೆಯಲ್ಲಿ ಹಳತಾಗಿ, ಹುಳತಾಗಿ ಬಿದ್ದು ಹೋದ ಗಿಡಗಳಿಗೂ ದಿವ್ಯ ಗತಿಯುಂಟು.

ಆ ನರ್ಮದಾ ನದಿಯ ಇನ್ನೊಂದು ಉಪನದಿಯಾದ ವಿಶಲ್ಯಕರಣಿಯು ಒಂದು ಪುಣ್ಯಪಯಸ್ವಿನೀ. ಇಲ್ಲಿ ಸ್ನಾನಮಾಡಿದರೆ ಮನುಷ್ಯನ ದೇಹದ ಮನಸ್ಸಿನ ಗಾಯಗಳೆಲ್ಲವೂ ಮಾಯವಾಗುತ್ತವೆ - ಅರೆಚಣದಲ್ಲಿ. ಈ ನರ್ಮದಾ ನದಿಗೆ ವಿಶಲ್ಯಾ ಎಂಬ ಮತ್ತೊಂದು ಉಪನದಿಯಿದೆ. ಈ ನದಿಯಲ್ಲಿ ಸ್ನಾನಮಾಡಿ ಒಂದು ರಾತ್ರಿ ಉಪವಾಸ ಮಾಡಿದರೆ ನೂರಾರು ಹಿಂದಿನ ಕುಲಗಳು ಉದ್ಧಾರವಾಗುವವು. ನರ್ಮದಾ ನದಿಯ ಉಪನದಿಗಳಾದ ಈ ಕಪಿಲಾ ಮತ್ತು ವಿಶಲ್ಯಾ ಎಂಬ ಎರಡು ನದಿಗಳಿಗೆ ಪೂರ್ವಕಾಲದಲ್ಲಿ ಮಹಾದೇವರು ವರ ಕೊಟ್ಟಿದ್ದಾನಂತೆ. ಈ ಉಪನದಿಗಳಲ್ಲಿ ಸ್ನಾನಮಾಡಿದ ಮನುಷ್ಯನು ಅಶ್ವಮೇಧಯಾಗದ ಪುಣ್ಯ ಪಡೆಯುವನು. ಈ ತೀರ್ಥದಲ್ಲಿ ಉಪವಾಸ ಮಾಡಿದ ಮನುಷ್ಯನು ಪಿತೃಲೋಕ ಪಡೆಯುತ್ತಾನೆ. ನರ್ಮದೆಯಲ್ಲಿ ಸ್ನಾನ ಮಾಡಿದರೆ ಅಶ್ವಮೇಧದ ಫಲವಿದೆ.

ಸರಸ್ವತಿ, ಗಂಗಾ, ನರ್ಮದಾ ಈ ಮೂರು ನದಿಗಳ ಸ್ನಾನ, ದಾನ, ಪಾನಗಳಿಗೆ ಸಮಾನ ಫಲವಿದೆ ಎಂದು ಸ್ವಯಂ ಶಂಕರನೇ ಹೇಳಿದ್ದಾನೆ. ಪರ್ವತ ತೀರ್ಥದಲ್ಲಿ

ಪ್ರಾಣತ್ಯಾಗಮಾಡಿದ ಪುಣ್ಯಾತ್ಮನು ಅನಂತಕಾಲದವರೆಗೆ ರುದ್ರಲೋಕದಲ್ಲಿ ಮೆರೆಯುತ್ತಾನೆ. ತರಳ ತೆರೆಗಳಿಂದ ಅಲಂಕೃತವಾದ ನರ್ಮದೆಯ ನೀರನ್ನು ಪ್ರೋಕ್ಷಣ, ಪ್ರಾಶನ, ಸ್ನಾನಮಾಡಿದ ಮನುಷ್ಯರು ಸರ್ವ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಈ ನರ್ಮದಾ ನದಿಯ ಸ್ನಾನದಿಂದ ಬ್ರಹ್ಮಹತ್ಯಾ ಮೊದಲಾದ ಪಾಪಗಳು ನಾಶವಾಗುತ್ತವೆ. ಮೂರು ಲೋಕಗಳಲ್ಲಿಯೂ ಈ ನದಿಯು ಪುಣ್ಯತಮವಾಗಿದೆ. ವಟೇಶ್ವರ, ಗಂಗಾದ್ವಾರ, ತಪೋವನ ಈ ಮೂರು ಸ್ಥಳಗಳಲ್ಲಿ ಈ ನರ್ಮದಾನದಿಯು ಅತ್ಯಂತ ಪುಣ್ಯಕರವಾಗಿದೆ. ಇದರ ಹತ್ತುಪಟ್ಟು ಪುಣ್ಯವು ನರ್ಮದಾ ನದಿಯು ಸಮುದ್ರವನ್ನು ಕೂಡಿದಲ್ಲಿ ನಿರ್ಮಿತವಾದ ಸಂಗಮತೀರ್ಥದಲ್ಲಿ ಸ್ನಾನ ಮಾಡಿದರೆ ಪ್ರಾಪ್ತವಾಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಎಂಟತ್ತೇಳನೆಯ ಅಧ್ಯಾಯ ಮುಗಿದುದು*



## ನರ್ಮದಾನದಿ ಮಹಾತ್ಮೆಯಲ್ಲಿ ಜ್ವಲೇಶ್ವರತೀರ್ಥದ ಮಹಿಮಾವರ್ಣನೆ

**ಅಧ್ಯಾಯ - ೧೮೮**

**ಮಾರ್ಕಂಡೇಯ ಉವಾಚ :**

**ನರ್ಮದಾ ತು ನದೀಶ್ರೇಷ್ಠಾ ಪುಣ್ಯಾತ್ ಪುಣ್ಯತಮಾ ಮತಾ ।**
**ಮುನಿಭಿಸ್ತು ಮಹಾಭಾಗೈರ್ವಿಭಕ್ತಾ ಮೋಕ್ಷಕಾಂಕ್ಷಿಭಿಃ ।**

**ಮಾರ್ಕಂಡೇಯ** :- ನದಿಗಳಲ್ಲೆಲ್ಲ ನರ್ಮದಾನದಿಯು ಶ್ರೇಷ್ಠವಾದದ್ದು. ಪುಣ್ಯತೀರ್ಥಗಳಲ್ಲೆಲ್ಲ ಇದು ಅತ್ಯಂತ ಪುಣ್ಯಕಾರಿ. ಈ ಮಹಾನದಿಯನ್ನು ಮೋಕ್ಷವನ್ನು ಬಯಸುವ ಮಹಾಮುನಿಗಳು ವಿಭಜಿಸಿದ್ದಾರೆ, ಒಂದೊಂದು ಯಜ್ಞೋಪವೀತದ ಅಳತೆಯಲ್ಲಿ ವಿಭಾಗ ಮಾಡಲ್ಪಟ್ಟ ಈ ತೀರ್ಥದಲ್ಲಿ ಸ್ನಾನಮಾಡುವದರಿಂದ ಸರ್ವತೀರ್ಥಸ್ನಾನ ಪುಣ್ಯ ಬರುತ್ತದೆ. ಮತ್ತು ಸರ್ವ ಪಾಪಗಳು ಪರಿಹಾರವಾಗುತ್ತವೆ. ಇವುಗಳಲ್ಲಿ ಜಲೇಶ್ವರ ಎಂಬ ದಿವ್ಯ ತೀರ್ಥವು ಮೂರು ಲೋಕಗಳಲ್ಲಿಯೂ ಸುಪ್ರಸಿದ್ಧವಾಗಿದೆ. ಅದರ ಉತ್ಪತ್ತಿಯ ವೃತ್ತಾಂತ ಹೇಳುತ್ತೇನೆ ಕೇಳು :

ಪೂರ್ವ ಕಾಲದಲ್ಲಿ ಎಲ್ಲ ಋಷಿಗಳು ಇಂದ್ರನೇ ಮೊದಲಾದ ಮರುದ್ಗಣಗಳು ಭಯಭ್ರಾಂತರಾಗಿ ''ರಕ್ಷಿಸು ರಕ್ಷಿಸು'' ಎಂದು ಶಿವನಿಗೆ ಶರಣು ಹೋದರು. ಆಗ ಶಿವ ಕೇಳಿದ.

**ಮಹಾದೇವ** :- ದೇವತೆಗಳೆ, ನಿಮಗೆ ಸುಸ್ವಾಗತ. ನೀವು ಇಲ್ಲಿಗೆ ಏಕೆ ಬಂದಿರಿ ? ನಿಮಗೆ ಬಂದ ಆಪತ್ತು ಏನು ? ಚಿಂತೆ ಯಾವುದು ? ಯಾರಿಂದ ಭಯವು ಬಂದಿದೆ ?

**ಋಷಿಗಳು** :- ಮಹಾಬಲಿಷ್ಠನಾದ ಬಾಣ ಎಂಬ ದೈತ್ಯನು ತನ್ನ ಶೌರ್ಯದ ಗರ್ವದಿಂದ ನಮ್ಮನ್ನು ಪೀಡಿಸುತ್ತಿದ್ದಾನೆ. ಅವನಿಗೆ ಹೆದರಿ ನಾನು ನಿನಗೆ ಶರಣು ಬಂದಿದ್ದೇವೆ. ನಮ್ಮನ್ನು ದುಃಖದಿಂದ ಪಾರುಮಾಡು. ನೀನೇ ನಮಗೆ ಗತಿ. ನಮ್ಮ ಮೇಲೆ ಪ್ರಸನ್ನನಾಗು. ದೇವತೆಗಳು ಹೇಗಾದರೆ ದುಃಖಮುಕ್ತರಾಗಿ ಶಾಂತಿ, ಸಂತಸವನ್ನು ಪಡೆಯುವರೋ ಹಾಗೆ ಮಾಡು.

**ಶಂಕರ :-** ನೀವು ಹೇಳಿದ್ದನ್ನೆಲ್ಲಾ ಮಾಡುತ್ತೇನೆ. ಚಿಂತೆಮಾಡಬೇಡಿರಿ. ಬಹು ಬೇಗನೆ ನಿಮಗೆಲ್ಲರಿಗೂ ಸುಖವಾಗುವಂತೆ ಮಾಡುವೆನು'' ಹೀಗೆ ಹೇಳಿ ದೇವತೆಗಳನ್ನೆಲ್ಲ ಶಂಕರನು ಸಮಾಧಾನಮಾಡಿ ಕಳಿಸಿದ ಬಳಿಕ ''ಈ ದೈತ್ಯನನ್ನು ಹೇಗೆ ಕೊಲ್ಲುವದು ? ಮತ್ತು ಆ ತ್ರಿಪುರವನ್ನು ಹೇಗೆ ನಾಶಮಾಡುವದು ?'' ಎಂದು ಆಲೋಚಿಸಿದನು. ಮತ್ತು ಮನಸ್ಸಿನಿಂದ ನಾರದನನ್ನು ನೆನೆದನು. ಕೂಡಲೇ ನಾರದನು ಅಲ್ಲಿಗೆ ಬಂದು ಕೇಳಿದನು.

''ಮಹಾದೇವನೇ, ಅಪ್ಪಣೆಯಾಗಲಿ, ನನ್ನನ್ನು ನೆನೆದದ್ದು ಏಕೆ ? ನನ್ನಿಂದೇನು ಕೆಲಸವಾಗಬೇಕು ? ಹೇಳು.''

**ಶಂಕರ :-** ನಾರದಾ, ಬಾಣಾಸುರನ ಆ ದೊಡ್ಡದಾದ ತ್ರಿಪುರಪಟ್ಟಣಕ್ಕೆ ಹೋಗು. ಆ ನಗರವು ಆಕಾಶದಲ್ಲಿ ಸಂಚರಿಸಲು ಅಲ್ಲಿಯ ಪತಿವ್ರತಾ ಸ್ತ್ರೀಯರ ಪ್ರಭಾವವೇ ಕಾರಣ. ಆ ತ್ರಿಪುರದಲ್ಲಿರುವ ಹರಿಣಾಕ್ಷಿಯರಿಗೆ ಭೋಜನದ ನೆವದಿಂದ ಬುದ್ಧಿಭೇದನ ಮಾಡಿ, ದಾರಿಬಿಡಿಸು.'' ಪರಮೇಶ್ವರನ, ಅಪ್ಪಣೆ ಪಡೆದು, ಅವನ ಆದೇಶದಂತೆ, ನಾರದಮುನಿಯು ತ್ರಿಪುರದಲ್ಲಿಯ ನಾರಿಯರ ಹೃದಯವನ್ನು ನಾಶಮಾಡಲು ಆ ಪಟ್ಟಣದಲ್ಲಿ ಪ್ರವೇಶ ಮಾಡಿದನು. ನಿಜವಾಗಿಯೂ ಅದೊಂದು ದಿವ್ಯನಗರ. ನೂರು ಯೋಜನ ವಿಸ್ತಾರ. ಇನ್ನೂರು ಯೋಜನ ಅಗಲ. ಬಗೆಬಗೆಯ ರತ್ನ ರಾಶಿಗಳ ಹೊಳಪು. ಅಲ್ಲಿಯೇ ಬಾಣನು ತನ್ನ ಶೌರ್ಯದಿಂದ ಗರ್ವಿಷ್ಠನಾಗಿ ರತ್ನದ ಕಡಗ, ಕಂಕಣ ತೋಳಬಂದಿ, ಕಿರೀಟಗಳನ್ನು ಧರಿಸಿಕೊಂಡು ಅನೇಕ ಮುತ್ತಿನ ಹಾರಗಳನ್ನು ಧರಿಸಿ ಹನ್ನೆರಡು ಸೂರ್ಯರಂಥ ಕಾಂತಿಯಿಂದ ಹೊಳೆಯುವ ರತ್ನಸಿಂಹಾಸನದ ಮೇಲೆ ಕುಳಿತು ಕೊಂಡಿದ್ದನು. ನಾರದನನ್ನು ಕಾಣುತ್ತಲೇ ಸ್ವಾಗತ ನೀಡಿ ಆದರಾತಿಥ್ಯ ಮಾಡಿ ಅಂದನು.

''ದೇವಮುನಿ ನೀವು ನಿಜವಾಗಿ, ನನ್ನ ನಗರಕ್ಕೆ ಬಂದುದರಿಂದ ನಿಮಗೆ ಅರ್ಘ್ಯಪಾದ್ಯಗಳನ್ನಿತ್ತು ಸತ್ಕರಿಸುವೆ. ನನ್ನಿಂದ ತಮಗೆ ಏನಾಗಬೇಕು ? ಬಹು ದಿನಗಳ ಬಳಿಕ ಬಂದಿರುವಿರಿ. ಕುಳಿತುಕೊಳ್ಳಿರಿ. ಇಕೊ ಇದು ತಮಗಾಗಿ ಆಸನ'' ಎಂದು ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಸತ್ಕರಿಸಿದನು. ನಂತರ ನಾರದರನ್ನು ಬಾಣನ ಹೆಂಡತಿಯಾದ ಅನೌಪಮ್ಯಾ ತನ್ನ ಅಂತಃಪುರಕ್ಕೆ ಬರಮಾಡಿಕೊಂಡು ಸತ್ಕಾರಮಾಡಿ ಮಾತನಾಡಿದಳು

**ಅನೌಪಮ್ಯಾ :-** ಪೂಜ್ಯ ನಾರದರೆ, ದೇವತೆಗಳು ಯಾವ ಧರ್ಮದಿಂದ ಸಂತುಷ್ಟರಾಗುತ್ತಾರೆ? ಸುರರನ್ನು ತೃಪ್ತಿಪಡಿಸುವ ವ್ರತವಾವುದು ? ನಿಯಮವಾವುದು? ಯಾವ ದಾನದಿಂದ ಎಂತಹ ತಪಸ್ಸಿನಿಂದ ದೇವತೆಗಳು ಪರಿತುಷ್ಟಿ ಹೊಂದುವರು ?

**ನಾರದ :-** ವೇದ ಪಂಡಿತನಾದ ಬ್ರಾಹ್ಮಣನಿಗೆ ಎಳ್ಳಿನಿಂದ ಹಸುವನ್ನು ಮಾಡಿ ಗೋದಾನ ನೀಡಿದರೆ, ಸಮುದ್ರ, ವನ ದ್ವೀಪ ಸಹಿತವಾದ ಇಡೀ ಭೂಮಂಡಲವನ್ನೇ ದಾನಮಾಡಿದಂತಾಗುವದು. ಮುಂದೆ ಅವನು ಅನಂತಕಾಲದವರೆಗೆ ಸ್ವರ್ಗದಲ್ಲಿ ಸುಖಪಡುತ್ತಾನೆ. ಮಾವು, ನೆಲ್ಲಿ, ಬೆಳುವಲ, ಬೋರೆ, ಕದಂಬ, ಸಂಪಿಗೆ, ಅಶೋಕ, ಅಶ್ವತ್ಥ, ಬಾಳೆ, ದಾಳಿಂಬೆ, ಬೇವು ಮುಂತಾದ ಗಿಡಗಳನ್ನು ಉಪವಾಸವಿದ್ದು, ದಾನ ಕೊಡಬೇಕು. ಸ್ತ್ರೀಯರು ಬೆಳುವಲ ಗಿಡವನ್ನು ದಾನಕೊಟ್ಟರೆ ಆ ಹೆಣ್ಣು ಮಗಳ

ಸ್ತನಗಳು ಬೆಳುವಲ ಕಾಯಿಯಂತೆ ಸುಂದರವಾಗುವವು. ಬಾಳೆಗಿಡದ ದಾನದಿಂದ ತೊಡೆಗಳು ಸುಂದರವಾಗುವವು. ಅಶ್ವತ್ಥಮರವನ್ನು ದಾನಕೊಟ್ಟರೆ ಎಲ್ಲರಿಂದ ನಮ್ಯಳಾಗುವಳು. ಬೇವಿನಗಿಡವನ್ನು ದಾನ ಕೊಟ್ಟವಳು ಸುಗಂಧವನ್ನು ಸೂಸುವಳು. ಚಂಪಕಗಿಡ ದಾನಕೊಟ್ಟರೆ ಸಂಪಿಗೆಯಂತಹ ಬಣ್ಣ ಪಡೆದು, ಸುವರ್ಣಕಾಂತಿಯಿಂದ ಹೊಳೆಯುವಳು. ಅಶೋಕಗಿಡದ ದಾನದಿಂದ ಶೋಕವು ನಾಶವಾಗುವದು. ಮಧೂಕ ದಾನದಿಂದ ಮಾತಿನಲ್ಲಿ ಮಧುರತೆ ಹೊಮ್ಮುವದು. ಆಲದಗಿಡದ ದಾನದಿಂದ ಕೊಟ್ಟವಳ ಮೈಯಲ್ಲಿ ಮಾರ್ದವಮೂಡುವದು. ಬೋರೆಗಿಡದ ದಾನದಿಂದ ಭಾಮಿನಿಯರ ಸೌಭಾಗ್ಯ ವೃದ್ಧಿ.

ಯಾವಾಗಲೂ ಪತಿಯು ಮಡದಿಯ ಮುಖವನ್ನು ನೋಡುತ್ತಲೇ ಅವಳ ಸೌಂದರ್ಯಕ್ಕೆ ಮುಗ್ಧನಾಗಿ ಕೂಡಬೇಕೆಂದು ಅಪೇಕ್ಷಿಸುವ ಹೆಣ್ಣುಮಗಳು ಕೇವಲ ಉಪೋಷಣ ಮಾಡಬೇಕು. ಅಗ್ನಿಯಲ್ಲಿ ಬೇಯಿಸಿದ್ದನ್ನು ಪಕ್ವಾನ್ನಗಳನ್ನು ತಿನ್ನಬಾರದು. ಹಣ್ಣುಹಂಪಲುಗಳನ್ನು ತಿಂದು ಸಾಯಂಕಾಲದಲ್ಲಿ ಮೌನದಿಂದ ಇರಬೇಕು. ಕ್ಷೇತ್ರಪಾಲನ ಪೂಜೆ ಮೊದಲುಮಾಡಬೇಕು. ಇದರಿಂದ ಗಂಡನು ಯಾವಾಗಲೂ ಹೆಂಡತಿಯ ಮುಖ ನೋಡುತ್ತ ಕೂಡುವಂತಾಗುವದು. ಅಷ್ಟಮಿ, ಚತುರ್ಥಿ, ದ್ವಾದಶಿ, ಸಂಕ್ರಮಣ, ಪರ್ವಕಾಲ ಮುಂತಾದ ದಿನಗಳಲ್ಲಿ ಉಪವಾಸಮಾಡಿ, ಧರ್ಮಕಾರ್ಯ ಮಾಡಿದ ಹೆಣ್ಣುಮಕ್ಕಳಿಗೆ ಸ್ವರ್ಗಸುಖವು ದೊರಕುವುದರಲ್ಲಿ ಸಂದೇಹವಿಲ್ಲ.

**ಅನೌಪಮ್ಯಾ** - ನಾರದರೆ, ನಮ್ಮ ಪೂರ್ವಜನ್ಮದ ಪುಣ್ಯದಿಂದಲೇ ತಾವು ಇಲ್ಲಿಗೆ ದಯಮಾಡಿಸಿದ್ದೀರಿ. ಆದುದರಿಂದ ತಮ್ಮನ್ನು ಇನ್ನೂ ರಹಸ್ಯವಾಗಿ ನಾನು ಕೆಲವು ವಿಷಯಗಳನ್ನು ಕೇಳಬೇಕಾಗಿದೆ. ಅದಕ್ಕೆ ಉಪಾಯಗಳನ್ನು ತಾವು ತಿಳಿಸಬೇಕು. ಬಲಿಚಕ್ರವರ್ತಿಯ ಹೆಂಡತಿಯಾದ ವಿಂಧ್ಯಾವಲಿಯು ನನ್ನ ಅತ್ತೆ. ಅವಳಿಗೆ ನನ್ನನ್ನು ಕಂಡರೆ ಆಗದು, ಅವಳ ಮಾತನ್ನು ಕೇಳಿ ನನ್ನ ಮಾವನಾದ ಬಲಿರಾಜನೂ ಕೂಡ ನನ್ನೊಡನೆ ಸ್ನೇಹದಿಂದಿಲ್ಲ. ನನ್ನನ್ನು ನೋಡಿಯೂ ನೋಡದಂತಿರುತ್ತಾನೆ. ಕುಂಭೀನಸೀ ಎಂಬ ನನಗೊಬ್ಬ ನಾದಿನಿಯಿದ್ದಾಳೆ. ಅವಳು ಯಾವಾಗಲೂ ನನಗೆ ಅಪಕಾರಮಾಡುವುದರಲ್ಲಿ ನಿಸ್ಸೀಮಳು. ನನ್ನನ್ನು ಕಂಡಲ್ಲೆಲ್ಲ ಮುಖ ಕಿವುಚಿ, ಲಟಿಕೆ ಮುರಿಯುತ್ತಾಳೆ. ಸ್ವಾಮಿ, ಇಂತಹ ಅತ್ತೆಮನೆಯ ಬಂಧುಬಳಗದವರ ವೃಂದದ ನಟ್ಟನಡುವೆ ದುಃಖಪಡುತ್ತಿರುವ ನನ್ನ ದೈವವು ಎಂತು ಸುಖಮಯವಾಗುವದು? ನನಗೆ ಸಂತೋಷದ ದಿನಗಳು ಬರುವ ಉಪಾಯ ಏನಾದರೂ ಉಂಟೆ? ಅತ್ತೆಯ ಮನೆಯಲ್ಲಿ ಹೆಣ್ಣುಮಕ್ಕಳಿಗೆ ಶಾಂತಿ-ಸಂತಸಗಳು ಬರುವದೆಂದರೆ ಬಂಜರು ಭೂಮಿಯಲ್ಲಿ ಸಮೃದ್ಧ ಬೆಳೆಯನ್ನು ಬಯಸಿದಂತೆಯೇ. ತಾವು ದೊಡ್ಡವರು. ಇಂತಹ ಅತ್ತೆಯ ಕಾಟಕ್ಕೆ ಏನಾದರೂ ವ್ರತ, ಉಪವಾಸ, ದಾನಧರ್ಮ, ಮುಂತಾದವುಗಳು ಉಪಾಯಗಳಿದ್ದರೆ ತಾವು ಹೇಳಬೇಕು. ಈ ನನ್ನ ಗಂಡನಮನೆಯ ಚಂಡಿಮೊಂಡ ಜನರೆಲ್ಲರೂ ನಾನು ಹೇಳಿದಂತೆ ಕೇಳಬೇಕು; ನನಗೆ ವಶರಾಗಬೇಕು. ಇಂತಹದೊಂದು ಯಾವುದಾದರೂ ವ್ರತವನ್ನು ತಾವು ಹೇಳಿದರೆ ನಾನು ನಿಮ್ಮಲ್ಲಿ ಕೊನೆಯವರೆಗೆ ಊಳಿಗದ ಆಳಾಗಿ ದುಡಿಯುವೆನು. ಸೇವಕಿಯಾಗಿ ಸೇವೆ ಮಾಡುವೆನು.

**ನಾರದ** :- ಸುಂದರಿ, ನಾನು ಇದೀಗ ನಿನಗೆ ವ್ರತವನ್ನು ಹೇಳಲಿಲ್ಲವೇ? ಪಾರ್ವತೀದೇವಿಯು ಈ ವ್ರತವನ್ನು ಮಾಡಿ, ಶಂಕರನ ಅರ್ಧ ಶರೀರವನ್ನೇ ಆಕ್ರಮಿಸಿದ್ದಾಳೆ. ಲಕ್ಷ್ಮೀದೇವಿಯು ವಿಷ್ಣುವಿನ ತೊಡೆಯೇರಿದ್ದಾಳೆ. ಸಾವಿತ್ರಿಯನ್ನಂತೂ ಬ್ರಹ್ಮನು ಒಂದು ಕ್ಷಣವೂ ಬಿಟ್ಟಿರುವುದೇ ಇಲ್ಲ. ಅರುಂಧತೀದೇವಿ ಈ ವ್ರತವನ್ನು ಮಾಡಿದ ಬಳಿಕ ವಶಿಷ್ಠರು ಯಾವಾಗಲೂ ಅವಳ ಬಳಿಯಲ್ಲಿಯೇ ಇರುತ್ತಾರೆ. ಇದರಂತೆ ನಾನು ಹೇಳಿದ ಉಪೋಷಣೆಯಿಂದ ನಿನ್ನ ಗಂಡ ನಿನ್ನ ಕೈಯಲ್ಲಿಯೇ ಇರುತ್ತಾನೆ. ನಿನ್ನ ಅತ್ತೆಯ ಬಾಯಿ ಬಂದಾಗುತ್ತದೆ. ಮಾವನಿಗೂ ಮುಖಬಂಧನ. ಅನಂತರ ಇವರನ್ನು ನೀನು ನಿನ್ನಿಷ್ಟ ಬಂದಂತೆ ಆಡಿಸಬಹುದು.

**ಅನೌಪಮ್ಯಾ**:-ನಾರದರೆ, ಹಾಗಾದರೆ ಬಹಳ ಸಂತೋಷ., ನೀವು ನನ್ನ ಮೇಲೆ ಅನುಗ್ರಹಮಾಡಿದಂತಾಯಿತು. ನಿಮಗೆ ಬೇಕಾದ್ದನ್ನು ಕೇಳಿ ದಾನ ಸ್ವೀಕರಿಸಿರಿ. ಬಂಗಾರ, ಮುತ್ತು, ರತ್ನ, ವಸ್ತ್ರಾಭರಣ ಅಥವಾ ನಿಮಗೇನಾದರೂ ಬೇರೆಬೇಕಿದ್ದರೆ ದಾನ ನೀಡುತ್ತೇನೆ. ನನ್ನ ಮೇಲೆ ಅನುಗ್ರಹಮಾಡಿರಿ. ನನ್ನ ಮೇಲೆ ಇದರಿಂದ ಹರನು ಪ್ರಸನ್ನನಾಗಲಿ.

**ನಾರದ** :- ''ಮಂಗಳಾಂಗಿ, ನನಗೇನೂ ದಾನದ ಅವಶ್ಯಕತೆಯಿಲ್ಲ. ಯಾವನಾದರೂ ಬಡಬ್ರಾಹ್ಮಣನನ್ನು ಕರೆದು ದಾನಕೊಡು. ನನ್ನಲ್ಲಿ ಬೇಕಾದಷ್ಟು ಸಂಪತ್ತಿದೆ. ಹಣವಂತರಿಗೆ ದಾನ ಕೊಡುವದಕ್ಕಿಂತ ದರಿದ್ರ ಬ್ರಾಹ್ಮಣನಿಗೆ ದಾನ ಕೊಡುವದು ಹೆಚ್ಚು ಪುಣ್ಯ. ಸಂಪನ್ನರಿಗಿಂತ ವಿಪನ್ನರಿಗೆ ದಾನನೀಡುವುದೇ ಶ್ಲಾಘ್ಯ'' ಎಂದು ಹೇಳಿ ನಾರದರು ಅಲ್ಲಿಂದ ಹೊರಟರು. ನಾರದರ ಮಾತು, ಉಪದೇಶ ಅಲ್ಲಿ ಕುಳಿತ ಎಲ್ಲ ಹೆಣ್ಣುಮಕ್ಕಳ ಮನಸ್ಸನ್ನು ತಿರುಗಿಸಿತು. ಎಲ್ಲರ ಮನಸ್ಸಿನಲ್ಲಿಯೂ ವಿಚಾರಗಳು ಬದಲಾದವು. ಗುರಿಗಳು ಭಿನ್ನವಾದವು. ಬಾಣಾಸುರನ ಅಂತಃಪುರದಲ್ಲಿ ಬಿರುಕು ಬಿಟ್ಟಿತು. ಹೀಗೆ ಒಂದಾಗಿದ್ದ ದೈತ್ಯ ಸಾರ್ವಭೌಮನ ಕುಟುಂಬದಲ್ಲಿ ಭಿನ್ನಾಭಿಪ್ರಾಯದ ಬೀಜ ಬಿತ್ತಿ ಕೃತಕೃತ್ಯನಾಗಿ ನಾರದನು ತನ್ನ ಸ್ಥಾನಕ್ಕೆ ತೆರಳಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಎಂಬತ್ತೆಂಟನೆಯ ಅಧ್ಯಾಯ ಮುಗಿದುದು.*

—o—

## ತ್ರಿಪುರ ನಾಶಕ್ಕಾಗಿ ರುದ್ರನು ಬಾಣಾಸುರ ಪುರಪ್ರವೇಶ



**ಮಾರ್ಕಂಡೇಯ ಉವಾಚ :**

**ಯನ್ಮಾಂ ಪೃಚ್ಛಸಿ ಕೌಂತೇಯ! ತನ್ಮೇ ಕಥಯತಃ ಶೃಣು ।**
**ಏತಸ್ಮಿನ್ನಂತರೇ ರುದ್ರೋ ನರ್ಮದಾತಟಮಾಶ್ರಿತಃ ।**

**ಮಾರ್ಕಂಡೇಯ** :- ಧರ್ಮರಾಜನೇ, ನೀನು ಪ್ರಶ್ನೆ ಮಾಡಿದ ವಿಷಯವನ್ನು ವಿಸ್ತರಿಸಿ ಹೇಳುತ್ತೇನೆ ಕೇಳು. ಇದೇ ಸಂದರ್ಭದಲ್ಲಿ ಮಹಾದೇವನು ನರ್ಮದಾ ನದಿಯ ದಂಡೆಯ ಮೇಲೆ ಕುಳಿತು ಮಹೇಶ್ವರನ ಸ್ಥಾನದಲ್ಲಿ ವಾಸಮಾಡಿದ್ದನು. ಅಲ್ಲಿದ್ದುಕೊಂಡು ಅವನು ಬಾಣಾಸುರನನ್ನು ಕೊಲ್ಲಬೇಕೆಂದು ಯೋಚಿಸಿದನು. ಮಂದರಾಚಲವನ್ನೇ ಬಿಲ್ಲನ್ನಾಗಿ ಮಾಡಿಕೊಂಡನು. ವಾಸುಕಿ ಹಾವನ್ನು ಹೆದೆಯನ್ನಾಗಿ ಮಾಡಿಕೊಂಡನು. ಶ್ರೀಹರಿಯು ಬಾಣರೂಪವಾಗಿ ಬಂದು ಕುಳಿತನು. ಶಲ್ಯದಲ್ಲಿ ಅಗ್ನಿಯನ್ನು ಸ್ಥಾಪಿಸಿ ಆಯಿತು. ಬಾಣದ ತುದಿಗೆ ವಾಯುದೇವರು ಅಧಿಷ್ಠಿತರಾದರು. ನಾಲ್ಕು ವೇದಗಳೇ ಅಶ್ವಗಳಾದವು. ಎಲ್ಲ ದೇವತೆಗಳು ಶಿವನ ರಥದಲ್ಲಿ ಸನ್ನಿಹಿತರಾದರು. ಅಶ್ವಿನೀ ದೇವತೆಗಳು ಕಡಿವಾಣ, ಇಂದ್ರನೇ ಈಸು, ತೋರಣದಲ್ಲಿ ಕುಬೇರ, ಬಲಗೈಯಲ್ಲಿ ಯಮ, ಎಡಗೈಯಲ್ಲಿ ವರುಣ, ಚಕ್ರದಲ್ಲಿ (ಗಾಲಿಯಲ್ಲಿ) ಅನೇಕ ದೇವತೆಗಳು, ಗಂಧರ್ವರು. ಬ್ರಹ್ಮನೇ ಸಾರಥಿ, ಹೀಗೆ ಈ ರುದ್ರರಥವು ಸರ್ವದೇವತಾಮಯವಾಯಿತು. ಆ ಬಾಣಾಸುರನ ಮೂರು ಪಟ್ಟಣಗಳು ಅಂತರಿಕ್ಷದಲ್ಲಿ ಕೂಡಿ ಇದ್ದಾಗ ಮಹಾದೇವನು ಬಾಣಬಿಟ್ಟು ನಗರಗಳನ್ನು ಭೇದಿಸಿದನು. ಅದರಿಂದ ದೈತ್ಯನ ತೇಜೋವಧೆಯಾಯಿತು. ಆ ಪಟ್ಟಣದಲ್ಲಿ ಅನೇಕ ಅಪಶಕುನಗಳು ತೋರಿಬಂದವು. ಅಲ್ಲಿರುವ ಎಲ್ಲ ಜನರಿಗೂ ಕೆಟ್ಟ ಕನಸುಗಳು. ಗೋಡೆಯಲ್ಲಿ ಬರೆದ ಕುದುರೆಗಳು ಕೆನೆಯತೊಡಗಿದವು. ಮಕ್ಕಳಾಟಿಕೆಯಲ್ಲಿಯ ಮಣ್ಣು-ಕಟ್ಟಿಗೆಯ ಹುಲಿ-ಸಿಂಹಗಳೂ ಕೂಡಾ ಗರ್ಜಿಸಹತ್ತಿದವು. ಅವರೆಲ್ಲರ ಬುದ್ಧಿ ಹಾಳಾಗಿಹೋಯಿತು. ಎಲ್ಲೆಡೆಗೂ ಬಿರುಗಾಳಿ ಬೀಸಿತು. ಅನಿರೀಕ್ಷಿತವಾಗಿ ಗಿಡಗಳು ಉರುಳಿದವು. ಶಿಖರಗಳು ಉರಿದವು. ಊರೆಲ್ಲ ಉರಿಯತೊಡಗಿತು. ಶಿವನು ಪ್ರಯೋಗಿಸಿದ ಬಾಣದಿಂದ ಆ ತ್ರಿಪುರಪಟ್ಟಣದಲ್ಲಿ ಎಲ್ಲ ಕಡೆಗೂ ಅಗ್ನಿತಾಂಡವ ಪ್ರಾರಂಭವಾಯಿತು. ಮನೆಮನೆಗಳಲ್ಲಿ ಬೆಂಕಿಹತ್ತಿ ಉರಿಯತೊಡಗಿತು. ಶಿವನ ಕೋಪವು ಬಾಣರೂಪದಿಂದ ಆ ತ್ರಿಪುರದ ನಟ್ಟನಡುವೆ ಬಿದ್ದು ಕಾಡ್ಗಿಚ್ಚಾಗಿ, ಊರನ್ನೆಲ್ಲಾ ದಹಿಸತೊಡಗಿತು. ಎಲ್ಲೆಡೆಗೂ ಹಾಹಾಕಾರ, ಸ್ತ್ರೀಯರ ಚೀತ್ಕಾರ, ಮಕ್ಕಳ ರೋದನ, ಮುದುಕರ ನರಳಾಟ, ಜನರೆಲ್ಲರೂ ಈ ಬೆಂಕಿಯ ಅನಾಹುತವನ್ನು ಕಂಡು ದಾರಿ ಸಿಕ್ಕಲ್ಲಿ ಓಡತೊಡಗಿದರು. ಕಮಲ, ಕನ್ನೈದಿಲೆಗಳಿಂದ ಕಳಕಳಿಸುವ ಕೊಳಗಳು, ಉಪವನಗಳು, ಜನರಿಂದ ತುಂಬಿದ ಸಭಾಮಂಟಪಗಳು, ಮಹಾದೇವನ ಬಾಣಾಗ್ನಿಗೆ ಬಲಿಯಾದವು. ಹೆಣ್ಣುಮಕ್ಕಳೆಲ್ಲ ಮುತ್ತುರತ್ನಾದಿ ಆಭರಣಗಳನ್ನು ಹಾಕಿಕೊಂಡು ತಮ್ಮ ತಮ್ಮ ಮಕ್ಕಳನ್ನು ಎತ್ತಿಕೊಂಡು

ಓಡುತ್ತಿರುವಾಗ ಅಗ್ನಿನಾರಾಯಣನಿಗೆ ಆಹುತಿಯಾದರು. ಅಗ್ನಿ ಪ್ರಕೋಪಕ್ಕೆ ಕಾರಣನಾದ ಶಿವನನ್ನು ಹೊಡೆಯಬೇಕೆಂದು ಹೊರಟ ದಾನವರೆಲ್ಲರಿಗೂ ಎರಡುಹೆಜ್ಜೆ ಹೋಗುವಷ್ಟರಲ್ಲಿ ಬೆಂಕಿ ತಗುಲಿ ಬೂದಿಯಾಗುತ್ತಿದ್ದರು. ಮಗುವಿಗೆ ಮೊಲೆಯುಣಿಸುವ ತಾಯಿ, ಪತಿಯೊಡನೆ ಮೊದಲ ರಾತ್ರಿಯ ಶಯ್ಯಾಮಂದಿರದಲ್ಲಿರುವ ನವವಧು, ವಿವಾಹಕ್ಕಾಗಿ ಹಸೆಯ ಮೇಲೆ ಕೂಡ ಹೊರಟ ಮದುಮಗಳು,ನಲ್ಲನ ಸಂಕೇತ ಸ್ಥಾನಕ್ಕೆ ಮೆಲ್ಲನೆ ಹೊರಟ ಅಭಿಸಾರಿಕೆ, ಮಕ್ಕಳಿಗೆ ಊಟ ಬಡಿಸುವ ಹೆಣ್ಣುಮಗಳು, ಹೀಗೆ ನಾನಾಬಗೆಯ ಅವಸ್ಥೆಯಲ್ಲಿದ್ದ ಸ್ತ್ರೀಯರೆಲ್ಲರೂ ಬೆಳೆಯುತ್ತಿರುವ ಬಾಣಾಗ್ನಿಯ ಕಿಚ್ಚಿಗೆ ಬಲಿಯಾಗಿ ಗೋಳಿಡತೊಡಗಿದರು. ಅದರಲ್ಲಿ ಒಬ್ಬ ಸಿರಿವಂತ ಮಹಿಳೆಯು ತನ್ನ ಮಗ, ಮಗಳು, ಗಂಡ, ಎಲ್ಲರೂ ಬೆಂಕಿಗೆ ತುತ್ತಾಗುವದನ್ನು ನೋಡಿ ದುಃಖಗೂಡಿ ತಲೆಯಮೇಲೆ ಕೈಯಿಟ್ಟು, ಅಗ್ನಿಯನ್ನು ನಿಂದಿಸಿದಳು. ''ಅಗ್ನಿಯೇ, ಹೆಣ್ಣುಮಕ್ಕಳು ನಿನಗೇನು ಅಪರಾಧ ಮಾಡಿದ್ದಾರೆ? ನಿನಗೆ ಸ್ತ್ರೀ ದಾಕ್ಷಿಣ್ಯವೆಂಬುದು ಸ್ವಲ್ಪವೂ ಇದ್ದಂತಿಲ್ಲ. ಅಬಲೆಯಾದ ಹೆಣ್ಣುಮಕ್ಕಳನ್ನು ಸುಡುವುದರಲ್ಲಿ ನಿನಗೇನು ಪೌರುಷ?'' ಎಂದು ಮುಂತಾಗಿ ವಿಲಪಿಸುತ್ತಿದ್ದಳು. ಆದರೆ ಅವರ ಯಾವ ಮಾತನ್ನೂ ಕೇಳದೆ ಬೆಂಕಿಯು ತನ್ನ ದಹನಕಾರ್ಯ ನಡೆಸಿಯೇ ಇತ್ತು. ಆ ತ್ರಿಪುರದಲ್ಲಿಯ ಕೆರೆ, ಮಡುವು ಬಾವಿಗಳಲ್ಲಿಯ ನೀರು ಕೂಡಾ ಅಗ್ನಿಜ್ವಾಲೆಯಿಂದ ಒಣಗಿಹೋದವು. ತನ್ನನ್ನು ಬೈಯುತ್ತಿರುವ ಹೆಣ್ಣುಮಕ್ಕಳಿಗೆ ಅಗ್ನಿ ಹೇಳಿದನು :

''ಈ ವಿನಾಶಕ್ಕೆಲ್ಲ ನಾನು ಕಾರಣನಲ್ಲ. ಮಹಾದೇವರು ಅಪ್ಪಣೆ ಮಾಡಿದ್ದರಿಂದ ಅವರ ಬಾಣದ ತುದಿಯಲ್ಲಿ ನೆಲೆಸಿದ ನಾನು ಈ ದಹನ ಕಾರ್ಯ ಮಾಡುತ್ತಿದ್ದೇನೆ.''

ಅನಂತರ ಪರಾಕ್ರಮಿಯಾದ ಬಾಣಾಸುರನು ತ್ರಿಪುರವೆಲ್ಲ ಉರಿಯುತ್ತಿರುವದನ್ನು ಕಂಡು ನುಡಿದನು. ''ದೇವತೆಗಳು ಘಾತಮಾಡಿದರು. ದುರ್ಬಲರಾದ ಅವರು ಮಹಾದೇವನ ಬಳಿಗೆ ಹೋಗಿ ನನ್ನ ವಿರುದ್ಧವಾಗಿ ಚಾಡಿ ಹೇಳಿಬಿಟ್ಟಿದ್ದಾರೆ. ಶಂಕರನು ಯಾವದನ್ನೂ ವಿಚಾರಿಸದೆ ಕ್ಷುದ್ರರಾದ ಆ ದೇವತೆಗಳ ಮಾತು ಕೇಳಿ, ನನ್ನ ತ್ರಿಪುರವನ್ನೆಲ್ಲ ಸುಟ್ಟಿಹಾಕಿದ್ದಾನೆ. ಇದರಿಂದ ನಾನೇ ಈಗ ದಗ್ಧನಾದಂತೆ; ಮಹಾದೇವನ ಹೊರತು, ನನ್ನನ್ನು ಕೊಲ್ಲಲಿಕ್ಕೆ ಜಗತ್ತಿನಲ್ಲಿ ಯಾರಿಗೂ ಸಾಮರ್ಥ್ಯವಿಲ್ಲ.''

ಹೀಗೆ ನುಡಿದು ಪರಮೇಶ್ವರನ ಲಿಂಗವನ್ನು ತಲೆಯ ಮೇಲಿಟ್ಟುಕೊಂಡು ತ್ರಿಪುರವನ್ನು ಬಿಟ್ಟು, ಗೆಳೆಯರನ್ನು ತೊರೆದು, ಮಕ್ಕಳನ್ನು ಪರಿತ್ಯಜಿಸಿ, ಹೆಂಡಂದಿರ ಸಂಬಂಧವನ್ನು ಹರಿದು, ಅನರ್ಘ್ಯ ಮುತ್ತುರತ್ನ, ವಸ್ತ್ರಾಭರಣಗಳ ಆಸೆ ಕಡಿದುಕೊಂಡು, ಬಾಣಾಸುರನು ಅಲ್ಲಿಂದ ಹೊರಟು ಬಿಟ್ಟನು. ಅವನ ತಲೆಯ ಮೇಲೆ ಶಿವಲಿಂಗವು ಶೋಭಿಸುತ್ತಿತ್ತು. ಅವನು ತನ್ನ ತ್ರಿಪುರದಿಂದ ಒಮ್ಮೆಲೆ ಗಗನಕ್ಕೆ ನೆಗೆದು ಮಹಾದೇವರನ್ನು ಭಕ್ತಿಯಿಂದ ಸ್ತೋತ್ರಮಾಡತೊಡಗಿದನು.

''ಸ್ವಾಮಿ, ಪ್ರಭು ಪರಮೇಶ್ವರಾ, ನಾನು ನಿನಗೆ ಬೇಡವಾದ, ಆ ತ್ರಿಪುರವನ್ನು ಬಿಟ್ಟು ಬಿಟ್ಟಿದ್ದೇನೆ. ನಿನಗೆ ಕೋಪ ಬಂದಿದ್ದರೆ, ನನ್ನನ್ನು ಬೇಕಾದಾಗ ಕೊಲ್ಲಬಹುದು, ಅಥವಾ ಸುಟ್ಟುಹಾಕಬಹುದು. ಆದರೆ ಜಗದೀಶ್ವರಾ, ನನ್ನ ಇಷ್ಟ ದೈವವಾದ, ನಾನು ತಲೆಯ ಮೇಲೆ ಹೊತ್ತುನಿಂತ ಈ ಲಿಂಗವು ನಾಶವಾಗಬಾರದು. ನಾನು ನಿನ್ನ ಕೋಪಕ್ಕೆ

ತುತ್ತಾಗಿ ಸತ್ತರೂ ಲಿಂಗಕ್ಕೆ ಮಾತ್ರ ಏನೂ ಧಕ್ಕೆಯಾಗುವದು ಬೇಡ. ನಿನ್ನಿಂದ ನನಗೆ ಮರಣ ಸಂಭವಿಸಿದರೆ ಅದೂ ಒಂದು ನನ್ನ ಭಾಗ್ಯವೇ ಸರಿ! ನಾನು ಯಾವಾಗಲೂ ನಿನ್ನ ಪಾದಸೇವಕ, ನಿನ್ನನ್ನೇ ನೆನಸಿ ಭಜಿಸುವೆ.'

**''ಶಿವಶಂಕರ ನಮೋಹರಾಯ ನಮೋ, ಭಟ ಭೀಮ ಮಹೇಶ್ವರ ಶರ್ವ ನಮಃ**
**ಕುಸುಮಾಯುಧ ದೇಹ ವಿನಾಶಕರ, ತ್ರಿಪುರಾಂತಕ ಅಂಧಕ ಶೂಲಧರ ॥**
**ಪ್ರಮದಾ ಪ್ರಿಯಕಾಂತ ವಿಭಕ್ತನಮಃ ಸಸುರಾಸುರ ಸಿದ್ಧಗಣೈರಭಿಮಂದಿತ ।**
**ಹಯವಾನರ ಸಿದ್ಧ ಗಜೇಂದ್ರ ಮುಖಾದತಿ ಭಾಸ್ವದ್‌ದೀರ್ಘ ವಿಶಾಲಮುಖ॥**
**ಉಪಲಬ್ಧುಮಶಕ್ಯತರೈರಮರೈರಸುರೈಃ ಪ್ರಥಿತೋಽಸ್ಮಿ ಚ ಬಾಹುಶತೈಃ**
**ಪ್ರಣತೋಽಸ್ಮಿ ಭವಂ ಭವಭಕ್ತಿರತೊ ಚಲಚಂದ್ರಕಲಾಕುಲದೇವ ನಮಃ॥**
**ನ ಚ ಪುತ್ರ ಕಲತ್ರಹಯಾದಿ ಧನಂ ನಮತಂ ತ್ವದನುಸ್ಮರಣಂ ಶರಣಮ್।**
**ವ್ಯಥಿತೋಽಸ್ಮಿ ತು ಬಾಹುಶತೈರ್ಬಹುಭಿರ್ಗಮಿತಾ ಚ ಮಹಾನರಕಸ್ಯ ಗತಿಃ॥**
**ನ ನಿವರ್ತತಿ ಜನ್ಮನಿ ಪಾಪಮತಿಃ ಶುಭಕರ್ಮ ನಿಬದ್ಧಮಪಿ ತ್ಯಜತಿ।**
**ಅನುಕಂಪತಿ ವಿಭ್ರಮತಿ ಸತಿ ಮಯಿ ಚೈವ ಕುಕರ್ಮ ನಿವಾರಯತಿ''॥**

ತ್ರಿಪುರ, ಅಂಧಕ, ಕಾಮ, ಮುಂತಾದವರನ್ನು ನಿಗ್ರಹಿಸಿದ ಸರ್ವಜನರಿಗೂ ಸುಖವನ್ನುಉಂಟುಮಾಡುವ ಕಲ್ಯಾಣಪ್ರದನಾದ, ದೈತ್ಯ ಭಯಂಕರನಾದ ಎಲ್ಲರಿಗೂ ಪ್ರಭುವಾದ ಶಿವನಿಗೆ ನಮೋ ನಮಃ ಪಾರ್ವತೀ ಪ್ರಿಯನಾದ, ಸುರಾಸುರ ಸಿದ್ಧರಿಂದ ವಂದಿತನಾದ, ಹೊಳೆಯುವ ದೀರ್ಘ ವಿಶಾಲ ಮುಖವುಳ್ಳ ಪರಮೇಶ್ವರನಿಗೆ ನಮಸ್ಕಾರ. ಯಾವ ದೇವತೆಗಳೂ ರಾಕ್ಷಸರೂ ಪಡೆಯಲಾರದ ಸಾವಿರ ತೋಳುಗಳನ್ನು ಪಡೆದ ನಾನು, ನಿನ್ನ ಪಾದಾರವಿಂದಗಳಿಗೆ ನಮಸ್ಕರಿಸುತ್ತೇನೆ.

ನನಗೆ ಮಡದಿ, ಮಕ್ಕಳು, ಆನೆ, ಕುದುರೆ ಮುಂತಾದ ಐಶ್ವರ್ಯಯಾವುದೂ ಇಷ್ಟವಿಲ್ಲ. ನಿನ್ನನ್ನೇ ನಾನು ಮೊರೆ ಹೊಕ್ಕಿದ್ದೇನೆ, ನಿನ್ನ ನಾಮಸ್ಮರಣವೇ ನನಗೆ ಧನ. ಅದರಲ್ಲಿಯೇ ನನ್ನ ಮನ. ಅದೇ ನನ್ನ ಸರ್ವಸ್ವ. ನಿನ್ನ ಸೇವೆಗೆ ಉಪಯೋಗ ಬೀಳದ ಈ ನನ್ನ ಸಾವಿರ ತೋಳುಗಳು ವ್ಯರ್ಥವೇ ಸರಿ. ನಿನ್ನನ್ನು ಸ್ಮರಿಸದವರಿಗೆ ನರಕವೇ ಗತಿ. ನಿನ್ನ ನಿರಂತರ ಧ್ಯಾನ, ಪೂಜೆಯಲ್ಲಿ ತೊಡಗಿದ ನಾನು ಉಳಿದ ಯಾವ ಸತ್ಕರ್ಮಗಳನ್ನೂ ಮಾಡುವದಿಲ್ಲ. ಎಲ್ಲ ಪುಣ್ಯ ಕಾರ್ಯಗಳನ್ನು ಬಿಟ್ಟು ಬಿಟ್ಟಿದ್ದೇನೆ. ನನಗೆ ಭ್ರಾಂತಿಯಿಂದ ಯಾವುದಾದರೂ ದುಷ್ಕರ್ಮಗಳಲ್ಲಿ ನಾನು ಪ್ರವೃತ್ತನಾದರೆ ನನ್ನ ಮೇಲೆ ದಯೆತೋರಿ, ಆ ದುಷ್ಕಾರ್ಯಗಳಿಂದ ನನ್ನನ್ನು ಪರಾವರ್ತಿತಗೊಳಿಸಿ. ನೀನೇ ನನ್ನನ್ನು ಉದ್ಧಾರಮಾಡು. ಈ ಶಿವ ಸ್ತೋತ್ರವನ್ನು ಶುಚಿರ್ಭೂತನಾಗಿ ಪಠಿಸುವ ಮನುಷ್ಯನಿಗೆ ಮಹಾದೇವನು ಬಾಣಾಸುರನಿಗೆ ವರಕೊಟ್ಟಂತೆ ಪ್ರಸನ್ನನಾಗಿ ವರ ನೀಡುವನು.

ಮಹೇಶ್ವರನು ಬಾಣಾಸುರಮಾಡಿದ ಈ ಸ್ತೋತ್ರದಿಂದ ಪ್ರಸನ್ನನಾಗಿ ಹೇಳಿದನು, ''ಎಲೈ ಮಗನೆ, ಹೆದರಬೇಡ, ನಿನ್ನ ಮಕ್ಕಳು, ಮೊಮ್ಮಕ್ಕಳು, ಬಂಧು-ಬಳಗದೊಂದಿಗೆ ಸುವರ್ಣಪುರದಲ್ಲಿ ವಾಸಮಾಡು. ಇಂದಿನಿಂದ ನೀನು

ಅಮರ. ಯಾವ ದೇವತೆಗಳೂ ನಿನ್ನನ್ನು ಸಂಹರಿಸಲಾರರು. ನಾಶರಹಿತನಾದ ನೀನು ಯಾರ ಯಾರ ಭಯವೂ ಇಲ್ಲದೆ ಜಗತ್ತಿನಲ್ಲಿ ಬೇಕಾದಲ್ಲಿ ಸ್ವಚ್ಛಂದವಾಗಿ ಸಂಚಾರ ಮಾಡು'' ಹೀಗೆ ಹೇಳಿ ಮಹಾದೇವನು ತಾನೇ ನಿರ್ಮಿಸಿದ ಅಗ್ನಿಯನ್ನು ತಡೆದು ಶಾಂತಗೊಳಿಸಿ ನಿಲ್ಲಿಸಿದನು. ಬಾಣಾಸುರನ ಮೂರು ಪಟ್ಟಣಗಳಲ್ಲಿ ಈಗಾಗಲೇ ಎರಡು ನಗರಗಳು ಶಿವನ ಬಾಣಾಗ್ನಿಯಿಂದ ಸುಟ್ಟುಸೀಕರಿಗೊಂಡಿದ್ದವು. ಕಬ್ಬಿಣ ಮತ್ತು ಬೆಳ್ಳಿಯ ಎರಡು ಪಟ್ಟಣಗಳು ದಗ್ಧವಾಗಿ ಹೋಗಿದ್ದರೂ ಬಂಗಾರದ ಮೂರನೆಯ ಪಟ್ಟಣವು ಮಾತ್ರ ಇನ್ನೂ ಉಳಿದಿತ್ತು. ಕೈಲಾಸ ಪತಿಯ ಆಜ್ಞೆಯಂತೆ ಕಾಳ್ಗಿಚ್ಚು ಶಾಂತವಾದ ಬಳಿಕ, ಆ ಸುವರ್ಣಪುರದಲ್ಲಿ ಬಾಣಾಸುರನು ತನ್ನ ಪರಿವಾರದೊಂದಿಗೆ ನಿಶ್ಚಿಂತನಾಗಿ, ನಿರ್ಭಯದಿಂದ ನೆಲೆ ನಿಂತನು.

ಸುಟ್ಟುಹೋದ ಎರಡು ಪಟ್ಟಣಗಳಲ್ಲಿ ಒಂದು ಶ್ರೀಶೈಲ ಕ್ಷೇತ್ರದ ಬಳಿಯಲ್ಲಿ ಮತ್ತೊಂದು ಅಮರಕಂಟಕದ ಬಳಿಯಲ್ಲಿ ಉರುಳಿಬಿದ್ದಿತು. ಹೀಗೆ ಅವೆರಡು ಪಟ್ಟಣಗಳು ನಷ್ಟವಾದ ಬಳಿಕ ಸುಟ್ಟುಹೋದ ಪಟ್ಟಣಗಳಲ್ಲಿ ಪ್ರತಿಷ್ಠಿತವಾದ ರುದ್ರಕೋಟಿ ಎಂಬ ದೇವಸ್ಥಾನವು ಕೆಳಗೆ ಬಿದ್ದಿತು. ಅದರಲ್ಲಿರುವ ಲಿಂಗದಿಂದ ಬೆಂಕಿಯ ಜ್ವಾಲೆಗಳು ಬಾನಿನೆಡೆಗೆ ಬೆಳೆದು ಆಗಸವನ್ನೆಲ್ಲ ಸುಡತೊಡಗಿದವು. ಆ ಜ್ವಾಲೆಗಳಿಂದ ಆ ಲಿಂಗಕ್ಕೆ 'ಜ್ವಾಲೇಶ್ವರ' ಎಂದು ಹೆಸರು ಬಂದಿತು. ಆಗ ದೇವಪುರದಲ್ಲಿ ಹಾಹಾಕಾರವೆದ್ದಿತು. ಅದನ್ನು ನೋಡಿ ಮಹಾದೇವನು ಆ ಜ್ವಾಲೆಯನ್ನು ಶಮನಗೊಳಿಸಿ, ತನ್ನ ಅಗ್ನಿಬಾಣವನ್ನು ಉಪಸಂಹರಿಸಿದನು.

ಅಮರಕಂಟಕ ಪರ್ವತದಲ್ಲಿ ಈಗಲೂ ಆ ಜ್ವಾಲೇಶ್ವರಲಿಂಗವು ಇರುತ್ತದೆ. ಸೂರ್ಯಗ್ರಹಣ, ಚಂದ್ರಗ್ರಹಣ ಸಮಯದಲ್ಲಿ ಈ ಅಮರಕಂಟಕ ಪರ್ವತಕ್ಕೆ ಹೋಗಿ ಜ್ವಾಲೇಶ್ವರಲಿಂಗ ದರ್ಶನ ಮಾಡಿಕೊಂಡು ಬಂದವರು ಸ್ವರ್ಗಲೋಕಕ್ಕೆ ಹೋಗುತ್ತಾರೆ. ಬ್ರಹ್ಮಹತ್ಯಾ ಪಾಪವು ಪರಿಹಾರವಾಗುತ್ತದೆ. ಅದನ್ನು ಮನಸ್ಸಿನಲ್ಲಿ ನೆನೆದವರಿಗೆ ಚಾಂದ್ರಾಯಣವ್ರತದ ಪುಣ್ಯ. ಈ ಅಮರಕಂಟಕವು ಮೂರು ಲೋಕಗಳಲ್ಲಿ ವಿಖ್ಯಾತವಾಗಿದೆ. ಅನೇಕ ಗಿಡಬಳ್ಳಿಗಳಿಂದ ತುಂಬಿದ, ಘೋರವಾದ ಈ ಪರ್ವತದಲ್ಲಿ ಪಾರ್ವತೀದೇವಿಯೊಂದಿಗೆ ಪರಮೇಶ್ವರನು ವಿಹರಿಸುತ್ತಾನೆ. ಇಲ್ಲಿ ಬ್ರಹ್ಮ, ಇಂದಾದ್ರಿ ದೇವತೆಗಳು ಸನ್ನಿಹಿತರಾಗಿದ್ದಾರೆ. ಯಕ್ಷ ಕಿನ್ನರ ಕಿಂಪುರುಷರು ಇದನ್ನು ಸೇವಿಸುತ್ತಾರೆ. ಇಲ್ಲಿಯ ಜ್ವಾಲೇಶ್ವರಲಿಂಗವನ್ನು ಪ್ರದಕ್ಷಿಣೆ ಮಾಡಿದವರಿಗೆ ಪೌಂಡರೀಕ ಯಜ್ಞ ಮಾಡಿದ ಫಲವು ಬರುವದು. ಅಲ್ಲಿಯೇ ಜ್ವಾಲೇಶ್ವರ ತೀರ್ಥವೂ ಇದೆ. ಅಲ್ಲಿ ಸ್ನಾನ ಮಾಡಿದವರಿಗೆ ಮರಳಿ ಹುಟ್ಟು ಇಲ್ಲ. ಈ ತೀರ್ಥದಲ್ಲಿ ಸ್ನಾನಮಾಡಿ ಪ್ರಾಣ ಬಿಟ್ಟವರಿಗೆ ರುದ್ರಲೋಕ ಪ್ರಾಪ್ತಿ. ನರ್ಮದಾ ನದಿಯ ದಂಡೆಯ ಮೇಲಿರುವ ಈ ಅಮರೇಶ್ವರ ಪರ್ವತದ ಎಲ್ಲ ಕಡೆಗೂ ಯೋಗಿಗಳು ನಿಂತು ತಪಸ್ಸು ಮಾಡುತ್ತಿದ್ದಾರೆ. ಈ ಕ್ಷೇತ್ರದ ಸಮೀಪದ ನರ್ಮದಾ ನದಿಯಲ್ಲಿ ಸ್ನಾನ ಮಾಡಿದವರ ಎಲ್ಲ ಪಾಪಗಳು ಪರಿಹಾರವಾಗಿ ರುದ್ರಲೋಕ ಪ್ರಾಪ್ತಿಯಾಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದನೂರಎಂಬತ್ತೊಂಬತ್ತನೆಯ ಅಧ್ಯಾಯ ಮುಗಿದುದು.*

## ನರ್ಮದಾ ನದಿ ಮಹಾತ್ಮ್ಯೆಯಲ್ಲಿ, ಕಾವೇರಿ ಸಂಗಮದ ಮಹಿಮಾ ವರ್ಣನೆ

ಅಧ್ಯಾಯ - ೧೯೦

**ಸೂತ ಉವಾಚ :**

**ಪೃಚ್ಛಂತಿ ತೇ ಮಹಾತ್ಮಾನೋ ಮಾರ್ಕಂಡೇಯಂ ಮಹಾಮುನಿಮ್।**
**ಯುಧಿಷ್ಠರ ಪುರೋಗಾಸ್ತೇ ಋಷಯಶ್ಚ ತಪೋಧನಾಃ॥**
**ಅಖ್ಯಾಹಿ ಭಗವನ್ ತಥ್ಯಂ ಕಾವೇರೀ ಸಂಗಮೋ ಮಹಾನ್॥**

**ಸೂತ** :- ಧರ್ಮರಾಜನೇ ಮೊದಲಾದ ಮಹಾತ್ಮರಾದ ತಪಸ್ವಿ ಮಹರ್ಷಿಗಳು ಮಾರ್ಕಂಡೇಯ ಮುನಿಗೆ ಪ್ರಶ್ನೆಮಾಡುತ್ತಾರೆ: ''ಪೂಜ್ಯರೆ, ಜಗತ್ತಿನ ಹಿತಕ್ಕಾಗಿ ಹಾಗೂ ನಮ್ಮ ಉತ್ಕರ್ಷಕ್ಕಾಗಿ ಕಾವೇರಿ ಸಂಗಮದ ಮಹಿಮೆ ಹೇಳಿರಿ.''

**ಮಾರ್ಕಂಡೇಯ** :- ಕಾವೇರಿ ಮತ್ತು ನರ್ಮದೆ ಸಂಗಮಿಸಿದ ತೀರ್ಥವು ಜಗತ್ಪ್ರಸಿದ್ಧವಾಗಿದೆ. ಯಕ್ಷರಾಜನಾದ ಕುಬೇರನು ಅಲ್ಲಿ ಸ್ನಾನಮಾಡಿ, ಶುಚಿಯಾಗಿ ದೇವಮಾನದ ನೂರು ವರುಷ ತಪಸ್ಸು ಮಾಡಿದನು. ಅವನ ತಪಸ್ಸಿನಿಂದ ತುಷ್ಟನಾದ ತ್ರ್ಯಂಬಕನು ಅವನಿಗೆ ವರ ಕೊಡಬೇಕೆಂಬ ಅಪೇಕ್ಷೆಯಿಂದ ''ಯಕ್ಷರಾಜನೆ, ನಿನ್ನ ಇಷ್ಟದಂತೆ ವರ ಕೇಳು. ನಿನ್ನ ಮನಸ್ಸಿನಲ್ಲಿ ಇದ್ದುದನ್ನು ನಾನು ಪೂರೈಸುವೆನು'' ಎಂದು ನುಡಿದನು.

ಕುಬೇರ :- ''ಮಹಾದೇವಾ, ಇಂದಿನಿಂದ ನಾನು ಎಲ್ಲ ಯಕ್ಷರಿಗೂ ಅಧಿಪತಿಯಾಗಬೇಕು. ಈಗ ನಾನೊಬ್ಬ ಸಾಮಾನ್ಯ ಯಕ್ಷ. ಯಕ್ಷಪತಿಯಾಗುವ ವರವನ್ನು ತಾವು ಕರುಣಿಸಿರಿ.'' ಕುಬೇರನ ಅಪೇಕ್ಷೆಗೆ 'ಅಸ್ತು' 'ಆಗಲಿ' ಎಂದು ಉಸುರಿದ ಆ ಅನಂಗವೈರಿ. ಅನಂತರ ಅಲ್ಲಿಯೇ ಅಂತರ್ಧಾನ ಹೊಂದಿದ ಆ ಪರಮೇಶ್ವರ. ಮಹಾದೇವರ ವರವು ಕೂಡಲೇ ಫಲ ಕೊಟ್ಟಿತು ಆ ಕುಬೇರನಿಗೆ. ಎಲ್ಲ ಯಕ್ಷರೂ ಬಂದು ಯಕ್ಷಾಧಿಪತ್ಯ ಪಟ್ಟದಲ್ಲಿ ಅಭಿಷೇಕಗೈದು ಗೌರವಿಸಿ ಯಕ್ಷರಾಜನೆಂದು ಅವನನ್ನು ಹೊಗಳಿದರು. ಈ ನರ್ಮದಾ, ಕಾವೇರಿ ಸಂಗಮ ತೀರ್ಥದಲ್ಲಿ ಸ್ನಾನಮಾಡಿ, ಕುಬೇರನು ಇಂತಹ ಫಲವನ್ನು ಪಡೆದನು. ಆದುದರಿಂದ ಈ ಸಂಗಮತೀರ್ಥದಲ್ಲಿ ಪ್ರತಿಯೊಬ್ಬ ಮಾನವನು ಅವಶ್ಯವಾಗಿ ಸ್ನಾನ ಮಾಡಬೇಕು. ನರ್ಮದೆಯೂ ಮಹಾನದಿ; ಕಾವೇರಿಯೂ ಮಹಾನದಿ. ಈ ಎರಡು ಪುಣ್ಯ ಪಯಸ್ವಿನೀಗಳ ಸಂಗಮ ಸ್ಥಲವು ಪರಮಪಾವನ ತಾಣವಾಗುವದರಲ್ಲಿ ಸಂದೇಹವೇನು? ಇಲ್ಲಿ ಸ್ನಾನ ಮಾಡಿ ಶಿವಾರ್ಚನೆ ಮಾಡುವವರಿಗೆ ಅಶ್ವಮೇಧದ ಪುಣ್ಯ. ರುದ್ರಲೋಕ ಪ್ರಾಪ್ತಿ. ಇಲ್ಲಿ ಉಪವಾಸ ಮಾಡಿದವರಿಗೆ ದೇಹತ್ಯಾಗ ಮಾಡಿದವರಿಗೆ ಮೋಕ್ಷವಾಗುವದೆಂದು ಶಂಕರನ ಅಭಿಪ್ರಾಯ. ಆ ಮೋಕ್ಷಾವಸ್ಥೆಯನ್ನು ಹೊಂದುವವರೆಗೆ ಅರವತ್ತುಕೋಟಿ ಅರವತ್ತು ಸಾವಿರ ವರುಷ ಅಪ್ಸರಾಂಗನೆಯರೊಂದಿಗೆ ರುದ್ರಲೋಕದಲ್ಲಿ ರುದ್ರರಂತೆ ವಿಹಾರಮಾಡಿ, ಪುಣ್ಯ ಸವೆದ ಬಳಿಕ ನೆಲಕ್ಕುರುಳಿ ಮಹಾರಾಜನಾಗುವನು. ಆ ಜನ್ಮದಲ್ಲಿಯೂ ಸತ್ಕುಲದಲ್ಲಿ ಜನಿಸಿ ಭೋಗ ಭಾಗ್ಯಗಳನ್ನು ಪಡೆದು, ದಾನಧರ್ಮಮಾಡಿ, ಶೀಲ ಸಜ್ಜನಿಕೆಯಿಂದ ಶಿವನನ್ನು ಆರಾಧಿಸಿ,

ಮತ್ತೆ ಈ ಸಂಗಮ ಸ್ಥಳಕ್ಕೆ ಬಂದು ಮುಂದೆ ಮೋಕ್ಷ ಪಡೆಯುವನು. ಈ ಸಂಗಮದ ನೀರು ಕುಡಿದವರಿಗೆ ಚಾಂದ್ರಾಯಣದ ಫಲ. ಗಂಗಾಯಮುನಾ ಸಂಗಮದಂತೆ, ಕಾವೇರೀ ನರ್ಮದಾ ಸಂಗಮ ತೀರ್ಥವಾದರೂ ಪರಮ ಪವಿತ್ರ; ಪಾಪನಾಶಕ; ಪುಣ್ಯದಾಯಕ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಬತ್ತನೆಯ ಅಧ್ಯಾಯ ಮುಗಿದುದು*



## ನರ್ಮದಾನದಿ ಮಾಹಾತ್ಮ್ಯೆಯಲ್ಲಿ ಅನೇಕ ತೀರ್ಥಗಳ ವರ್ಣನೆ

**ಅಧ್ಯಾಯ - ೧೯೧**

**ಮಾರ್ಕಂಡೇಯ ಉವಾಚ :-**

**ನಾರ್ಮದಾ ಚೋತ್ತರೇ ಕೂಲೇ ತೀರ್ಥಂ ಯೋಜನ ವಿಸ್ತೃತಂ।**
**ಮಂತ್ರೇಶ್ವರೇತಿ ವಿಖ್ಯಾತಂ ಸರ್ವ ಪಾಪ ಹರಂ ಪರಮ್॥**

**ಮಾರ್ಕಂಡೇಯ** :- ನರ್ಮದೆಯ ಉತ್ತರ ತೀರದಲ್ಲಿ ಒಂದು ಯೋಜನ ವಿಸ್ತಾರವಾದ ಮಂತ್ರೇಶ್ವರ ಎಂಬ ಸುಪ್ರಸಿದ್ಧವಾದ ಪಾಪನಾಶಕ ತೀರ್ಥವಿದೆ. ಅಲ್ಲಿ ಒಂದು ದಿನ ಸ್ನಾನಮಾಡಿದ ಮನುಷ್ಯನು ಐದುಸಾವಿರ ವರುಷ ಕಾಮರೂಪಿಯಾಗಿ ದೇವತೆಗಳೊಂದಿಗೆ ಸ್ವರ್ಗದಲ್ಲಿ ಆನಂದಿಸುವನು. ಅನಂತರ **'ಜನಕ'** ಎಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮೇಘನಾದನೆಂಬ ರಾವಣನ ಮಗನು ತಪಸ್ಸು ಮಾಡಿ ಇಂದ್ರನನ್ನು ಗೆದ್ದು ಇಂದ್ರಜಿತ್ ಎಂಬ ಹೆಸರನ್ನು ಪಡೆದನು. ಅದರ ಮುಂದಿನ ಆಮ್ರಾತಕೇಶ್ವರ ತೀರ್ಥದಲ್ಲಿ ಸ್ನಾನಮಾಡಿದರೆ ಸಾವಿರ ಭೂದಾನಮಾಡಿದ ಫಲ. ಮತ್ತೊಂದು ವಿಸ್ತೃತ ಎಂಬತೀರ್ಥದಲ್ಲಿ ಸ್ನಾನಮಾಡಿ, ಪಿತೃತರ್ಪಣ, ತಿಲತರ್ಪಣಬಿಟ್ಟರೆ ಸರ್ವ ಮನೋರಥ ಸಿದ್ಧಿ. ನರ್ಮದೆಯ ಮತ್ತೊಂದು ತೀರ್ಥ ಬ್ರಹ್ಮಾವರ್ತದಲ್ಲಿ ನಿತ್ಯವೂ ಬ್ರಹ್ಮದೇವರ ಸನ್ನಿಧಾನ. ಅಲ್ಲಿ ಸ್ನಾನಮಾಡಿದವರು ಬ್ರಹ್ಮಲೋಕದಲ್ಲಿ ಬೆಳಗುವರು. ಆಗಾರೇಶ್ವರ ತೀರ್ಥದಲ್ಲಿ ಮಿತಾಹಾರಿಯಾಗಿ ಸ್ನಾನಮಾಡಿದವನು ರುದ್ರಲೋಕ ಹೊಂದುವನು. ಅದರ ಮುಂದಿನ ಕಪಿಲಾ ತೀರ್ಥದಲ್ಲಿ ಸ್ನಾನಮಾಡಿದರೆ ಕಪಿಲ ಗೋದಾನದ ಫಲ. ಕರಜ ತೀರ್ಥ ಸ್ನಾನದಿಂದ ದಿವ್ಯಲೋಕ ಪ್ರಾಪ್ತಿ. ಇದರಂತೆ ಕುಂಡಲೇಶ್ವರ, ಪಿಪ್ಪಲೇಶ, ವಿಮಲೇಶ್ವರ, ಪುಷ್ಕರಿಣಿ, ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿ, ರುದ್ರಪೂಜೆಮಾಡಿದ ಮಾನವನು ರುದ್ರದೇವರ ಅನುಗ್ರಹದಿಂದ ದಿವ್ಯಗತಿಯನ್ನು ಹೊಂದುವನು. ನದಿಗಳಲ್ಲಿ ಶ್ರೇಷ್ಠವಾದ ನರ್ಮದೆಯು ಶಿವನ ದೇಹದಿಂದಲೇ ಹುಟ್ಟಿ ಬಂದಿದ್ದಾಳೆ. ಚರಾಚರ ಪ್ರಾಣಿಗಳನ್ನೆಲ್ಲ ಉದ್ಧರಿಸಲು ಇವಳೇ ಸಮರ್ಥಳು. ಆದುದುರಿಂದ ಇವಳನ್ನು ಎಲ್ಲ ದೇವತೆಗಳು ನಮಿಸುತ್ತಾರೆ. ಋಷಿ, ಗಂಧರ್ವ, ಅಪ್ಸರೆಯರು ನುತಿಸುತ್ತಾರೆ. ಈ ನರ್ಮದಾನದಿಯನ್ನು ಈ ಕೆಳಗಿನ ಸ್ತೋತ್ರದಿಂದ ಧ್ಯಾನಮಾಡಿ ಪ್ರಾರ್ಥಿಸಬೇಕು.

**"ನಮಃ ಪುಣ್ಯಜಲೇ ಹ್ಯಾದ್ಯೇ ನಮಃ ಸಾಗರಗಾಮಿನಿ।**
**ನಮಸ್ತೇ ಪಾಪನಾಶಿನಿ। ನಮೋ ದೇವಿ ವರಾನನೆ।**
**ನಮೋಽಸ್ತು ತೇ ಋಷಿ ಗಣಸಿದ್ಧ ಸೇವಿತೇ।**
**ನಮೋಽಸ್ತು ತೇ ಶಂಕರದೇಹ ನಿಸ್ಸೃತೇ।**
**ನಮೋಽಸ್ತು ತೇ ಧರ್ಮ್ಮಭೃತಾಂ ವರಪ್ರದೆ।**
**ನಮೋಽಸ್ತು ತೇ ಸರ್ವ ಪವಿತ್ರ ಪಾವನೆ**

ಸಕಲ ಪಾಪಗಳನ್ನು ಪರಿಹರಿಸುವ ಎಲ್ಲ ದೇವ,ಗಂಧರ್ವ, ಅಪ್ಸರೆಯರಿಂದ ಸ್ತುತಿಸಲ್ಪಟ್ಟ ನರ್ಮದೆಗೆ ನಮ್ಮ ನಮಸ್ಕಾರ. ಸಮುದ್ರವನ್ನು ಕೂಡುವ, ಪಾಪನಾಶಮಾಡುವ, ಪುಣ್ಯ ಜಲವುಳ್ಳ ಮಹಾನದಿಗೆ ವಂದನೆಗಳು. ಸಿದ್ಧ, ಋಷಿಗಳ ವೃಂದದಿಂದ ಸೇವಿತಳಾದ, ಶಿವನದೇಹದಿಂದ ಹೊರಹೊಮ್ಮಿದ, ಧಾರ್ಮಿಕರಿಗೆ ವರವನ್ನು ನೀಡುವ, ಪವಿತ್ರಗಳೆಲ್ಲೆಲ್ಲ ಅತ್ಯಂತ ಪವಿತ್ರಳಾದ ಮಹಾನದಿಗೆ ನಮೋ ನಮಃ ನಮೋ ನಮಃ.

ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿದ ಬ್ರಾಹ್ಮಣನು ಜ್ಞಾನಿ, ಕ್ಷತ್ರಿಯನ್ನು ವಿಜಯ ಶಾಲಿ, ವೈಶ್ಯನಿಗೆ ವ್ಯಾಪಾರದಲ್ಲಿ ವಿಶೇಷ ಲಾಭ, ಶೂದ್ರನಿಗೆ ಸದ್ಗತಿ. ಹಣ ಬೇಕಾದವರು ಇದನ್ನು ಹೇಳಿದರೆ ಸಂಪತ್ತು ದೊರಕುವದು. ಸ್ವಯಂ ಶಿವನೇ ಈ ನರ್ಮದೆಯನ್ನು ಸೇವಿಸುವನು. ಬ್ರಹ್ಮಹತ್ಯಾದಿ ಪಾಪಗಳನ್ನು ಕಳೆಯಬಲ್ಲದು ಈ ಪುಣ್ಯನದಿ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಬತ್ತೊಂದನೆಯ ಅಧ್ಯಾಯ ಮುಗಿದುದು.*



## 'ಶೂಲಭೇದ ತೀರ್ಥದ ಮಹಾತ್ಮೆ' — ಅಧ್ಯಾಯ - ೧೯೨

**ಮಾರ್ಕಂಡೇಯ ಉವಾಚ**

**ತದಾಪ್ರಭೃತಿ ಬ್ರಹ್ಮಾದ್ಯಾ, ಋಷಯಶ್ಚ ತಪೋಧನಾः॥**
**ಸೇವಂತೇ ನರ್ಮದಾಂ ರಾಜನ್ ರಾಗ ಕ್ರೋಧ ವಿವರ್ಜಿತಾः॥**

**ಮಾರ್ಕಂಡೇಯ :-** ಅಂದಿನಿಂದ ಬ್ರಹ್ಮಾದಿ ದೇವತೆಗಳೂ, ಕಾಮಕ್ರೋಧ ಬಿಟ್ಟು ತಪಸ್ವಿಗಳೂ, ಮಹರ್ಷಿಗಳೂ ನರ್ಮದಾ ನದಿಯನ್ನು ಸೇವಿಸುತ್ತಲಿದ್ದಾರೆ.

**ಧರ್ಮರಾಜ :-** ಮುನಿ ಪುಂಗವರೆ, ಮಹಾದೇವರ ತ್ರಿಶೂಲವು ಭೂಮಿಯಲ್ಲಿ ಎಲ್ಲಿ ಬಿದ್ದಿತು? ಈ ಸಮಾಚಾರ ತಿಳಿಸಿರಿ.

**ಮಾರ್ಕಂಡೇಯ :-** ನರ್ಮದೆಯ ದಡದಲ್ಲಿ ಶೂಲಭೇದ ಎಂಬ ತೀರ್ಥವಿದೆ. ಅಲ್ಲಿಯೇ ಮಹಾದೇವರು ಹಿಂದೆ ತನ್ನ ತ್ರಿಶೂಲವನ್ನು ನೆಟ್ಟಿದ್ದನು. ಅಲ್ಲಿ ಸ್ನಾನಮಾಡಿ, ಶಿವಪೂಜೆಗೈದರೆ, ಸಾವಿರಹಸುಗಳನ್ನು ದಾನಮಾಡಿದ ಪುಣ್ಯಬರುವದು. ಆ ತೀರ್ಥದಲ್ಲಿ ಮೂರು ರಾತ್ರಿ ಇದ್ದು, ಪರಮೇಶ್ವರನ ಪೂಜೆಮಾಡಿದರೆ ಪುನರ್ಜನ್ಮವಿಲ್ಲ. ಅನಂತರ ಅದರ ಮುಂದಿನ ಭೀಮೇಶ್ವರ, ನಾರದೇಶ್ವರ, ಆದಿತ್ಯೇಶ್ವರ, ನಂದಿಕೇಶ್ವರ, ಸ್ವತಂತ್ರೇಶ್ವರ ಎಂಬ ಐದು ಶಿವದೇವಾಲಯಗಳ ಪಂಚಾಯತನ

ದರ್ಶನದಿಂದ ಮತ್ತು ಆ ಹೆಸರಿನ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಸಕಲ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲ ಬರುವದು. ಇದರ ಮುಂದಿನದೇ ಕೋಟಿ ತೀರ್ಥ. ಅಲ್ಲಿ ಧೂರ್ಜಟಿಯು ದರ್ಪಿಷ್ಟರಾದ ದಾನವರಕೋಟಿರುಂಡಗಳನ್ನು ಚಂಡಾಡಿದ. ಆದರ ನೆನಪಿಗಾಗಿ ಸಂತುಷ್ಟರಾದ ದೇವತೆಗಳು ಅಲ್ಲಿ ಒಂದು ಲಿಂಗಸ್ಥಾಪನೆ ಮಾಡಿ ಕೋಟೇಶ್ವರ ಎಂದು ಹೆಸರಿಟ್ಟರು. ಈ ಕೋಟೇಶ್ವರನ ದರ್ಶನದಿಂದ ಮತ್ತು ಆದರ ಮುಂದಿನ ಕೋಟಿ ತೀರ್ಥದಲ್ಲಿ ಸ್ನಾನಮಾಡುವದರಿಂದ ಸದೇಹ ಸ್ವರ್ಗಲೋಕ ಪ್ರಾಪ್ತಿಯಾಗುವದು. ಅನಂತರ ತ್ರಯೋದಶಿ ದಿನ ಬಹುನೇತ್ರವೆಂಬ ದಿವ್ಯ ತೀರ್ಥದಲ್ಲಿ ಸ್ನಾನ ಮಾಡಿದರೆ ಸರ್ವಯಜ್ಞ ಫಲ. ಅಗಸ್ತ್ಯೇಶ್ವರ ತೀರ್ಥದಲ್ಲಿ ಸ್ನಾನ ಮಾಡಿ, ಕಾರ್ತಿಕ ಕೃಷ್ಣ ಪಕ್ಷ ಚತುರ್ದಶಿದಿನ ಜಿತೇಂದ್ರಿಯನಾಗಿ ಅಗಸ್ತ್ಯೇಶ್ವರನಿಗೆ ತುಪ್ಪದಿಂದ ಅಭಿಷೇಕ ಮಾಡಬೇಕು. ಗೋದಾನ, ಪಾದರಕ್ಷೆ, ಛತ್ರ, ಕಂಬಳಿ, ತುಪ್ಪ ಮುಂತಾದವುಗಳನ್ನು ದಾನಕೊಟ್ಟು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದರಿಂದ ಇವನ ಇಪ್ಪತ್ತೊಂದು ತಲೆಮಾರಿನ ಪಿತೃಗಳೆಲ್ಲರೂ ರುದ್ರಲೋಕದಲ್ಲಿ ಸುಖದಿಂದ ಇರುವರು.

ಬಲಾಕೇಶ್ವರ ತೀರ್ಥದಲ್ಲಿ ಸ್ನಾನ ಮಾಡಿದರೆ ರಾಜ್ಯ ಪದವಿ. ಶಕ್ತಿ ತೀರ್ಥದಲ್ಲಿ ಒಂದು ರಾತ್ರಿ ಉಪವಾಸವಿದ್ದು ಸ್ನಾನ ಮಾಡಿ ವಿಷ್ಣುವನ್ನು ಪೂಜಿಸಿದರೆ ಸಾವಿರ ಗೋದಾನ ಫಲ, ವಿಷ್ಣುಲೋಕ ಪ್ರಾಪ್ತಿ. ಋಷಿತೀರ್ಥ ಸ್ನಾನದಿಂದಲೂ ಅಷ್ಟೆ. ಬ್ರಹ್ಮನಿರ್ಮಿತವಾದ ದೇವ ತೀರ್ಥ ಸ್ನಾನದಿಂದ ಬ್ರಹ್ಮಲೋಕ, ಅಮರಕಂಟಕಸ್ನಾನದಿಂದ ರುದ್ರಲೋಕ. ರಾವಣೇಶ್ವರ ತೀರ್ಥದಲ್ಲಿ ಸ್ನಾನಮಾಡಿ ಪಂಚಾಯತನ ದರ್ಶನದಿಂದ ಬ್ರಹ್ಮಹತ್ಯಾ ಪಾಪವಿಮುಕ್ತಿ, ಋಣತೀರ್ಥ ಸ್ನಾನದಿಂದ ಬಡವರ ಸಾಲವೆಲ್ಲವೂ ಪರಿಹಾರ. ವಟೇಶ್ವರ, ಭೀಮೇಶ್ವರ, ದುರಾಸಂಗ, ಸೋಮತೀರ್ಥ, ಪಿಂಗಲೇಶ್ವರ, ಸುರೇಶ್ವರ, ಕರ್ಕೋಟಕೇಶ್ವರ, ನಂದಿತೀರ್ಥ, ದೀಪೇಶ್ವರ, ವ್ಯಾಸತೀರ್ಥ, ಮುಂತಾದ ತೀರ್ಥಗಳಲ್ಲಿ ಸ್ನಾನ ಮಾಡಿದ ಆಸ್ತಿಕರಿಗೆ ಪರಮೇಶ್ವರನ ಪೂರ್ಣಾನುಗ್ರಹ ಮತ್ತು ದಿವ್ಯಲೋಕ ಪ್ರಾಪ್ತಿ.

ಹಿಂದೆ ವೇದವ್ಯಾಸರು ಇದ್ದ ಸ್ಥಳದಲ್ಲಿ ನರ್ಮದೆಯ ಭೀಷ್ಮ ಪ್ರವಾಹವು ನುಗ್ಗಿತು. ಅದನ್ನು ಕಂಡು ವ್ಯಾಸರು ನಸುಕೋಪದಿಂದ ಹೂಂಕರಿಸಿದರು. ಕೂಡಲೇ ನರ್ಮದೆಯು ಗಾಬರಿಯಾಗಿ ದಕ್ಷಿಣಕ್ಕೆ ಹೊರಳಿದಳು. ಅಂದಿನಿಂದ ಇದಕ್ಕೆ ವ್ಯಾಸತೀರ್ಥವೆಂದು ಹೆಸರು ಬಂದಿತು. ಈ ತೀರ್ಥವನ್ನು ಪ್ರದಕ್ಷಿಣೆಹಾಕಿ ಒಂದು ಕಟ್ಟಿಗೆಯ ತುದಿಗೆ ದೀಪ ಕಟ್ಟಿ, ದಾರ ಸುತ್ತಿ ಇಲ್ಲಿಯ ದೇವಮಂದಿರದ ಕಟ್ಟೆಯ ಮೇಲೆ ದೀಪದಾನ ಮಾಡಬೇಕು. ಸೂರ್ಯ ಚಂದ್ರರಿರುವವರೆಗೆ ವ್ಯಾಸಶಂಕರರ ಅನುಗ್ರಹದಿಂದ ಅಕ್ಷಯಲೋಕ ಪ್ರಾಪ್ತಿಯಾಗುವದು

ಅನಂತರ, ಐರಂಡಿ ಎಂಬ ಪಾಪನಾಶಕವಾದ ತೀರ್ಥದಲ್ಲಿ ಆಶ್ವಿನ ಶುಕ್ಲ ಪಕ್ಷ ಅಷ್ಟಮೀ ಸ್ನಾನಮಾಡಿ ತಾನು ಉಪವಾಸವಿದ್ದು ಒಬ್ಬ ಬ್ರಾಹ್ಮಣನ ಭೋಜನ ಮಾಡಿಸಿದರೆ ಕೋಟಿ ಬ್ರಾಹ್ಮಣ ಭೋಜನದ ಪುಣ್ಯ ಬರುವದು. ಇಲ್ಲಿಯ ಮಣ್ಣನ್ನು ತಲೆಯಲ್ಲಿ ಧರಿಸಿ, ಅವಗಾಹನಸ್ನಾನಮಾಡಿದರೆ, ಸರ್ವ ಪಾಪಗಳಿಂದ ಮುಕ್ತನಾಗುವನು. ಈ ತೀರ್ಥವನ್ನು ಪ್ರದಕ್ಷಿಣೆ ಮಾಡಿದರೆ ಸರ್ವ ತೀರ್ಥಗಳನ್ನು ಪ್ರದಕ್ಷಿಣೆ ಮಾಡಿದ ಪುಣ್ಯ ಬರುವದು.

ಇದರ ಮುಂದೆ ಸುವರ್ಣ ತೀರ್ಥದಲ್ಲಿ ಸ್ನಾನಮಾಡಿ ಬಂಗಾರ ದಾನಮಾಡಿದರೆ ಅವನು ಬಂಗಾರದ ವಿಮಾನದಲ್ಲಿ ಕುಳಿತೇ ರುದ್ರಲೋಕಕ್ಕೆ ಪ್ರಯಾಣ ಮಾಡುವನು.

ನರ್ಮದಾನದಿಗೆ ನಂತರ ಇಕ್ಷುನದಿಯು ಬಂದು ಕೂಡುವದು. ಈ ಎರಡೂ ನದಿಗಳ ಸಂಗಮ ಸ್ನಾನ ಮಾಡಿದ ನರನಿಗೆ ಗಣೇಶ ಪದವಿಯು ಪ್ರಾಪ್ತವಾಗುವದು ಅನಂತರ ಸ್ಕಂದ ತೀರ್ಥ, ಲಿಂಗಸಾರ, ಭಂಗತೀರ್ಥ, ವಟೇಶ್ವರ, ಸಂಗಮೇಶ್ವರ, ಅಂಗಾರೇಶ್ವರ, ಕಠೇಶ್ವರ, ಮುಂತಾದ ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಬೇಕು. ಅದರಿಂದ ದೇಹಶುದ್ಧಿ, ತಪಸ್ಸಿದ್ಧಿ, ದಿವ್ಯಲೋಕ ಪ್ರಾಪ್ತಿ ನಿಶ್ಚಿತ. ಇದರ ಮುಂದೆ ಶಕ್ರತೀರ್ಥದಲ್ಲಿ ಸ್ನಾನಮಾಡಿ ಅಲ್ಲಿರುವ ಈಶ್ವರನನ್ನು ಪೂಜಿಸಿ ಸುವರ್ಣ ದಾನಮಾಡಬೇಕು. ಇಲ್ಲವೆ ಕಪ್ಪು ಬಣ್ಣದ ಎತ್ತನ್ನು ದೇವರಿಗಾಗಿ ಬಿಟ್ಟು ಬಿಡಬೇಕು. ಇದರಿಂದ ಆ ಎತ್ತಿನ ಮೇಲಿನ ಕೂದಲುಗಳಷ್ಟು ವರುಷ ಶಿವಪುರದಲ್ಲಿ ಸುಖದಿಂದ ವಾಸಿಸುವನು. ಅನಂತರವೂ ಕೂಡ ಭೂಲೋಕದಲ್ಲಿ ಹುಟ್ಟಿ ಮಹಾರಾಜನಾಗಿ ಆ ತೀರ್ಥದ ಪ್ರಭಾವದಿಂದ ಸಹಸ್ರಾರು ಆನೆ ಕುದುರೆಗಳನ್ನು ಇಟ್ಟುಕೊಂಡು ಸಕಲ ಸುಖಭೋಗ ಅನುಭವಿಸುವನು. ಇದರ ಮುಂದಿನ ಬ್ರಹ್ಮಾವರ್ತ ಕ್ಷೇತ್ರದಲ್ಲಿ ಗುರು ಕನ್ಯಾರಾಶಿಗೆ ಬಂದಾಗ ಒಂದು ರಾತ್ರಿ ಉಪವಾಸಮಾಡಿ ಪಿಂಡ ದಾನಮಾಡಿದವನು ಅಕ್ಷಯಫಲ ಹೊಂದುವನು.

ಇದರ ಮುಂದೆ ಇರುವ ನರ್ಮದೇಶ, ಕಪಿಲೇಶ್ವರ, ಸಂಗಮೇಶ್ವರ ಮುಂತಾದ ತೀರ್ಥದಲ್ಲಿ ಸ್ನಾನಮಾಡುವದರಿಂದ ಅಶ್ವಮೇಧದ ಫಲವು ಪ್ರಾಪ್ತವಾಗುವದು. ಅದಕ್ಕಿಂತ ಮೊದಲು ಭೂಮಂಡಲದಲ್ಲಿ ಮಹಾರಾಜನಾಗಿ ಮೆರೆಯುವನು. ನರ್ಮದೆಯ ಉತ್ತರ ದಂಡೆಯಲ್ಲಿರುವ ಸರ್ವಶ್ರೇಷ್ಠ ತೀರ್ಥವಾದ ಆದಿತ್ಯಾಯನ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಕಾಮಣಿ ಮುಂತಾದ (ಹಳದಿರೋಗ) ರೋಗಗಳು ಪರಿಹಾರವಾಗಿ ಸರ್ವಪಾಪಗಳು ನಾಶವಾಗಿ ಸೂರ್ಯಲೋಕ ಪ್ರಾಪ್ತಿಯಾಗುವುದು. ಆ ಆದಿತ್ಯಾಯನ ತೀರ್ಥದಲ್ಲಿ ಮಾಘಶುಕ್ಲಸಪ್ತಮಿ ತಿಥಿಯಂದು ಉಪವಾಸವಿದ್ದು ಜಿತೇಂದ್ರಿಯನಾಗಿ ಸ್ನಾನಮಾಡಿ ಶಿವಾರ್ಚನೆ ಮಾಡಿದರೆ, ಮುಪ್ಪು, ಮೌಢ್ಯ, ಅಂಧತೆ ಮುಂತಾದ ದೇಹದೋಷಗಳು ದೂರವಾಗಿ, ಒಳ್ಳೇ ಸೌಂದರ್ಯ ಪ್ರಾಪ್ತವಾಗಿ ನಾರಿಯರಿಗೆಲ್ಲ ಮನಮೋಹಕನಾಗುವನು.

ಇದರ ಮುಂದೆ ಗರ್ಗೇಶ್ವರ, ನಾಗೇಶ್ವರ, ಕಾಲೇಶ್ವರ, ಮಾರುತಾಲಯ, ಯಮತೀರ್ಥ, ಅಹಲ್ಯಾತೀರ್ಥ ಮುಂತಾದ ತೀರ್ಥಗಳಲ್ಲಿ ಸ್ನಾನ ಶಿವಧ್ಯಾನಮಾಡಿದವರು ಈಶ್ವರಾನುಗ್ರಹದಿಂದ ಪುಣ್ಯ ಲೋಕಗಳನ್ನೂ ಆರೋಗ್ಯ ಐಶ್ವರ್ಯ, ಭೋಗ ಭಾಗ್ಯಗಳನ್ನೂ ಪಡೆಯುವರು. ಇಲ್ಲಿಯ ಅಹಲ್ಯಾ ತೀರ್ಥದಲ್ಲಿ ಗೌತಮ ಪತ್ನಿ ಅಹಲ್ಯೆಯು ತಪಸ್ಸು ಮಾಡಿ ಮುಕ್ತಳಾದಳು. ಚೈತ್ರ ಶುಕ್ಲ ಚತುರ್ದಶೀ ಸ್ನಾನಮಾಡಿ ಅಹಲ್ಯೆಯನ್ನು ಪೂಜಿಸಿದರೆ, ಕಾಮಿನಿಯರ ಮನಸ್ಸನ್ನು ಮರಳುಮಾಡುವ ಸುಂದರ ರೂಪವು ಪ್ರಾಪ್ತವಾಗುವದು.

ಇದರಮುಂದಿನ ಅಯೋಧ್ಯಾತೀರ್ಥ, ಸೋಮತೀರ್ಥ, ಶುಭತೀರ್ಥ, ವಿಷ್ಣುತೀರ್ಥ, ತಾಪಸೇಶ್ವರತೀರ್ಥ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿ, ಪರಮೇಶ್ವರನನ್ನು ಪೂಜಿಸಿದರೆ ಅಕ್ಷಯ ಪುಣ್ಯಪ್ರಾಪ್ತಿ.

ಈ ತಾಪಸೇಶ್ವರ ತೀರ್ಥದಲ್ಲಿ ಹಿಂದೊಮ್ಮೆ ಬೇಡನೊಬ್ಬನು ಬೆನ್ನಟ್ಟಿಬಂದಾಗ ಹೆದರಿ ಹೌಹಾರಿದ ಹೆಣ್ಣು ಚಿಗರೆಯು ಬಂದುಬಿದ್ದಿತು. ಈ ತೀರ್ಥ ಜಲದಲ್ಲಿ ಓಡಿ ಬಂದು ಬಿದ್ದಕೂಡಲೇ, ಆ ಚಿಗರೆಯು ಆಗಲೇ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿತು ಇದನ್ನು ನೋಡುತ್ತಿದ್ದ ಬೇಡನು ಬೆಕ್ಕಸ ಬೆರಗಾಗಿ ನಿಂತುಕೊಂಡನು. ಈ ತೀರ್ಥದ ಮಹಿಮೆ ಕಂಡು, ಅವನು ಬಿಲ್ಲು ಬಾಣ ಒಗೆದು ಸ್ನಾನಮಾಡಿ ಉದ್ಧೃತನಾದನು, ಅದರ ಮುಂದೆ, ಬ್ರಹ್ಮತೀರ್ಥದಲ್ಲಿ ಹುಣ್ಣಿವೆ, ಅಮಾವಾಸ್ಯಾ ತಿಥಿಗಳಲ್ಲಿ ಶ್ರಾದ್ಧಮಾಡಿ, ಪಿತೃಗಳನ್ನು ತೃಪ್ತಿಪಡಿಸಬೇಕು. ಆ ತೀರ್ಥದ ನಡುವೆ ಆನೆ ಆಕಾರದ ಒಂದು ದೊಡ್ಡ ಬಂಡೆಯಿದ್ದು ಅದರ ಮೇಲೆಯೇ ವೈಶಾಖದಲ್ಲಿ ಪಿಂಡಗಳನ್ನಿಟ್ಟರೆ ಪಿತೃಗಳಿಗೆ ಪ್ರೀತಿ ಆ ಚಂದ್ರಾರ್ಕ. ಇದರ ಮುಂದೆ ಸಿದ್ಧೇಶ್ವರ ಎಂಬ ಕ್ಷೇತ್ರದಲ್ಲಿ ಸ್ವಯಂ ಶ್ರೀಹರಿಯೇ ಲಿಂಗಪ್ರತಿಷ್ಠೆ ಮಾಡಿದ್ದಾನೆ. ಅಲ್ಲಿ ಸ್ನಾನ ಮಾಡಿ, ಆ ಈಶ್ವರನ ದರ್ಶನ ಮಾಡಿದವರಿಗೆ ವಿಷ್ಣುಪದ ಪ್ರಾಪ್ತಿ.

ನರ್ಮದೆಯ ದಕ್ಷಿಣ ತೀರದಲ್ಲಿ ಕುಸುಮೇಶ್ವರ ತೀರ್ಥವಿದೆ. ಅಲ್ಲಿ ಹಿಂದೆ ಶಿವನು ಸಾವಿರ ವರುಷ ತಪಸ್ಸನ್ನು ಕೈಕೊಂಡಾಗ ಅಗ್ನಿ, ಯಮ, ಕಾಮ ಮುಂತಾದವರು ವಿಘ್ನಒಡ್ಡಲು ಬಂದಾಗ ಅವರನ್ನೆಲ್ಲಾ, ಶಂಕರನು ಕಣ್ಣುತೆರೆದು ನೋಡಿದನು. ಅವರೆಲ್ಲರೂ ಸುಟ್ಟು ಬೂದಿಯಾಗಿಬಿಟ್ಟರು. ಮುಂದೆ ಹೀನಜನ್ಮತಳೆದು ಅವರು ಸಾವಿರ ವರುಷ ತಪಸ್ಸನ್ನು ಮಾಡಿದ ಮೇಲೆ, ಅವರು ತಪಸ್ಸಿನಿಂದ ಪ್ರೀತನಾದ ಪರಮೇಶ್ವರನು ತುಷ್ಟನಾಗಿ ಪಾರ್ವತಿ ಸಹಿತನಾಗಿ ಅವರಿಗೆ ವರವಿತ್ತು ಉದ್ಧಾರ ಮಾಡಿದನು. ಅವರೆಲ್ಲರೂ ಮತ್ತೆ ದೇವತ್ವವನ್ನು ಮೊದಲಿನಂತೆ ಹೊಂದಿದರು.

ಅವರೆಲ್ಲರೂ ''ಇದು ಅರ್ಧಯೋಜನ ವಿಸ್ತಾರವಾದ ದಿವ್ಯ ತೀರ್ಥವಾಗಲಿ'' ಎಂದು ಮಹಾದೇವರಲ್ಲಿ ಬೇಡಿಕೊಂಡರು. ಅವನ ಅನುಗ್ರಹದಿಂದ ರೂಪಗೊಂಡ ಈ ಕುಸುಮಾವತೀ ತೀರ್ಥದಲ್ಲಿ ಸ್ನಾನಮಾಡಿ ಉಪವಾಸವಿದ್ದವರು ಕಾಮರೂಪದಿಂದ ರುದ್ರಲೋಕದಲ್ಲಿ ಖ್ಯಾತರಾಗುತ್ತಾರೆ. ಇದರ ಹತ್ತಿರವೇ ಅಂಕೋಲವೆಂಬ ತೀರ್ಥದಲ್ಲಿ ಸ್ನಾನ, ದಾನ, ಶ್ರಾದ್ಧ, ಅಥವಾ ಅಗ್ನಿ ಪ್ರವೇಶ ಮುಂತಾದವುಗಳನ್ನು ಮಾಡಿದವರಿಗೆ ಶ್ರೇಯಸ್ಸು, ಪ್ರೇಯಸ್ಸು ಎರಡೂ ಉಂಟಾಗುವವು. ಇದರ ದಂಡೆಯಲ್ಲಿರುವ ಅಂಕೋಲಗಿಡದ ಕೆಳಗೆ ರುದ್ರಮಂತ್ರದಿಂದ ಅಭಿಮಂತ್ರಣಮಾಡಿ ಆ ನೀರಿನಿಂದ ಪಿತೃಗಳನ್ನು ಉದ್ದೇಶಿಸಿ ಪಿಂಡಪ್ರದಾನ ಮಾಡಿದರೆ ಪಿತೃಗಳಿಗೆ ಶಾಶ್ವತ ಮುಕ್ತಿ. ಇಲ್ಲಿಯ ಸಿದ್ಧೇಶ್ವರ ದೇವಸ್ಥಾನದಲ್ಲಿ ಪುರುಷ ಇಲ್ಲವೆ ಸ್ತ್ರೀಯರು ನಿಂತುಕೊಂಡು ದೇವರಿಗೆ ಪ್ರಾತಃಕಾಲದಲ್ಲಿ ತುಪ್ಪದಿಂದ ಅಭಿಷೇಕ ಮಾಡಿದರೆ ಸರ್ವಯಜ್ಞಗಳನ್ನು ಮಾಡಿದ ಪುಣ್ಯ ಬರುವದು. ಇಲ್ಲಿ ಇರುವ ಕ್ಷೇತ್ರಪಾಲನಾದ ದಂಡಪಾಣಿ ಗಣೇಶನ ದರ್ಶನ ಮಾಡಿಕೊಳ್ಳದಿದ್ದರೆ ತೀರ್ಥಯಾತ್ರೆ ಎಲ್ಲವೂ ವ್ಯರ್ಥ. ಇದೆಲ್ಲವೂ ಕುಸುಮೇಶ್ವರ ತೀರ್ಥವೆಂದೇ ಕರೆಯಲ್ಪಡುತ್ತದೆ. ಇದರ ಈ ಮಹಾಮಹಿಮೆ ಕೇಳಿ, ದೇವತೆಗಳು ಕುಸುಮವೃಷ್ಟಿಮಾಡಿದರು. ಅದರಿಂದ ಇದಕ್ಕೆ **ಕುಸುಮೇಶ್ವರ** ಎಂದು ಹೆಸರು ಬಂದಿತು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಬತ್ತೆರಡನೆಯ ಅಧ್ಯಾಯ ಮುಗಿದುದು.*

—○—

## ಶುಕ್ಲತೀರ್ಥದ ಮಹಿಮೆ

ಅಧ್ಯಾಯ - ೧೯೩

**ಮಾರ್ಕಂಡೇಯ ಉವಾಚ :**

**ಭಾರ್ಗವೇಶಂ ತತೋ. ಗಚ್ಛೇದ್ಭಗ್ನೋ ಯತ್ರ ಜನಾರ್ಧನಃ।**
**ಅಸುರೈಸ್ತು ಮಹಾಯುದ್ಧೇ ಮಹಾಬಲ ಪರಾಕ್ರಮೈಃ॥**

**ಮಾರ್ಕಂಡೇಯ :-** ಅನಂತರ ದೇವದಾನವರ ಮಹಾಯುದ್ಧದಲ್ಲಿ ಬಲಿಷ್ಠರಾದ ಅಸುರರು ಶ್ರೀಹರಿಯನ್ನು ಪ್ರಹರಿಸಲು ಬಂದಾಗ ಅವನು (ಲೋಕ ವಿಡಂಬನಾರ್ಥವಾಗಿ) ಪರಾಜಯ ಹೊಂದಿದ ಭಾರ್ಗವೇಶ ಎಂಬ ತೀರ್ಥಕ್ಕೆ ಹೋಗಬೇಕು. ಜನಾರ್ದನನ ಈ ತೋರಿಕೆಯ ಸೋಲಿನಿಂದ ಉತ್ತೇಜಿತರಾದ ದೈತ್ಯರು ಇಮ್ಮಡಿಸಿದ ಹುಮ್ಮಸ್ಸಿನಿಂದ, ಎಲ್ಲರೂ ಒಗ್ಗೂಡಿ, ಅವನ ಮೇಲೆ ನುಗ್ಗಿ ಏರಿಬಂದರು. ಆಗ ಆ ಜಗದೀಶ್ವರನು ಕೇವಲ ''ಹೂಂ'' ಎಂದು ಒಂದೇ ಅಕ್ಷರವನ್ನು ಉಚ್ಚರಿಸಿ 'ಹೂಂ'ಕಾರ ಮಾಡಿದನು. ಅದರಿಂದ ತತ್‌ಕ್ಷಣದಲ್ಲಿ ಎಲ್ಲ ರಾಕ್ಷಸರು ಸುಟ್ಟು, ಬೆಂದು ಬೂದಿಯಾದರು. ಇಂತಹ ಈ ದಿವ್ಯ ತೀರ್ಥದಲ್ಲಿ ಸ್ನಾನ ಮಾಡಿದರೆ ಸರ್ವ ಪಾಪಗಳಿಂದ ಮಾನವ ಮುಕ್ತನಾಗುವನು

ಪೂರ್ವಕಾಲದಲ್ಲಿ ಮಹಾದೇವರು ಲೋಕಾನುಗ್ರಹಕ್ಕಾಗಿ, ಹಿಮಾಲಯ ಪರ್ವತದ ರಮ್ಯವಾದ ಒಂದು ಬಂಗಾರದ ಶೃಂಗದ ಮೇಲೆ ಕುಳಿತುಕೊಂಡಾಗ ಮಾರ್ಕಂಡೇಯ ಮುನಿಯು ಬಂದು ಭಕ್ತಿಯಿಂದ ವಂದಿಸಿ ಪ್ರಶ್ನೆ ಮಾಡಿದರು.

**ಭಗವನ್ :-** ನಾನು ಸಂಸಾರದ ತಾಪದಿಂದ ಬೆದರಿ ಬೆಂಡಾಗಿದ್ದೇನೆ. ಇದರಿಂದ ಪಾರಾಗುವ ಒಂದು ಸುಲಭವಾದ ಉಪಾಯ ಹೇಳು? ಅಂತಹ ಯಾವುದಾದರೂ ಪವಿತ್ರ ತೀರ್ಥವಿದ್ದರೆ ತಿಳಿಸು.

**ಈಶ್ವರ :-** ನರ್ಮದಾ ನದಿಯಲ್ಲಿ ಶುಕ್ಲತೀರ್ಥವೆಂಬ ಮಹಾಪುಣ್ಯಕರವಾದ ತೀರ್ಥ ಒಂದಿದೆ. ನೀನು ಅತ್ರಿ, ಕಶ್ಯಪ, ಮನುಮುನಿ, ಯಾಜ್ಞವಲ್ಕ್ಯ ಮುಂತಾದ ಎಲ್ಲ ಋಷಿಗಳೊಂದಿಗೆ ಆ ಶುಕ್ಲ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡು. ಆ ತೀರ್ಥದ ದರ್ಶನ, ಸ್ಪರ್ಶನ, ಸ್ನಾನ, ದಾನ, ಧ್ಯಾನ, ಅಲ್ಲಿ ಮಾಡಿದ ಜಪ, ತಪ, ಹೋಮ, ಉಪವಾಸ ಎಲ್ಲದಕ್ಕೂ ಮಹಾಫಲಉಂಟು. ಚಾಣಕ್ಯನೆಂಬ ರಾಜರ್ಷಿ ಹಿಂದಕ್ಕೆ ತಪಸ್ಸುಮಾಡಿ ಅಲ್ಲಿ ಸಿದ್ಧಿ ಪಡೆದನು. ನಾನು ಪ್ರತಿವರ್ಷ, ಚೈತ್ರ, ವೈಶಾಖ, ಮಾಸಗಳ ಕೃಷ್ಣಪಕ್ಷ ಚತುರ್ದಶಿ ದಿನ ಕೈಲಾಸ ಪರ್ವತದಿಂದ ಅಲ್ಲಿಗೇ ಹೋಗಿ ಅಲ್ಲಿಯ ತೀರ್ಥದಲ್ಲಿ ಸನ್ನಿಹಿತನಾಗುತ್ತೇನೆ. ಅಗಸನು ಬಟ್ಟೆಗಳನ್ನು ತೊಳೆದು ಬೆಳ್ಳಗೆ ಮಾಡುವಂತೆ, ಈ ಶುಕ್ಲತೀರ್ಥದ ಅಭಿಮಾನಿ ದೇವತೆಯು ಸ್ನಾನಮಾಡಿದ ಜನರ ಪಾಪಗಳನ್ನು ತೊಳೆದು ಸ್ವಚ್ಛ ಮಾಡುತ್ತದೆ. ಆದುದರಿಂದ ಇದಕ್ಕೆ ಶುಕ್ಲತೀರ್ಥವೆಂಬ ಹೆಸರು ಬಂದಿದೆ. ಹುಟ್ಟಿದಂದಿನಿಂದ ಮಾಡಿದ ಎಲ್ಲ ಪಾಪಗಳನ್ನೂ ಒಂದು ಹಗಲು ಒಂದು ರಾತ್ರಿ ಉಪವಾಸವಿದ್ದು ಸ್ನಾನ ಮಾಡಿದರೆ ಈ ತೀರ್ಥವು ತೊಳೆದು ಬಿಡುತ್ತದೆ. ಕಾರ್ತಿಕ ಕೃಷ್ಣಪಕ್ಷ ಚತುರ್ದಶಿ ದಿನ ಅಲ್ಲಿಯ ಪರಮೇಶ್ವರನನ್ನು ತುಪ್ಪದಿಂದ ಸ್ನಾನ ಮಾಡಿಸಿ, ಪೂಜಿಸಿದರೆ, ಇಪ್ಪತ್ತೊಂದು ಕುಲದವರು

ರುದ್ರ ಸ್ಥಾನದಲ್ಲಿ ಆನಂದದಿಂದ ನಲಿಯುವರು. ಈ ಶುಕ್ಲತೀರ್ಥದಲ್ಲಿ ಸ್ನಾನಮಾಡಿ ಇಲ್ಲಿರುವ ಮಹಾದೇವರ ಮೂರ್ತಿಯ ಕೈಯಲ್ಲಿನ ಕಪಾಲವನ್ನು ನೀರಿನಿಂದ ತುಂಬಿದರೆ ಮಹಾದೇವರಿಗೆ ಸಂತೋಷ. ಇಲ್ಲಿಯ ತೀರ್ಥತಟದಲ್ಲಿ ಒಂದು ಬಟ್ಟೆ ತುಂಡಿನ ಮೇಲೆ ಶಿವನ ಮೂರ್ತಿಯನ್ನು ಬರೆದು ಪೂಜೆ ಮಾಡಿ, ಜಾಗರ ಮಾಡಬೇಕು. ಶಂಖ, ಜಾಗಟೆ, ಬಜಂತ್ರಿ ಮುಂತಾದ ವಾದ್ಯಗಳನ್ನು ಮೊಳಗಿಸಬೇಕು. ಬ್ರಾಹ್ಮಣರಿಂದ ವೇದಘೋಷ ಮಾಡಿಸಬೇಕು. ರಾತ್ರಿಯಲ್ಲಿ ಗಾಯನ ನರ್ತನ ಮುಂತಾದವುಗಳಿಂದ ಜಾಗರ ಮಾಡಬೇಕು. ಬೆಳಿಗ್ಗೆ ಸ್ನಾನಮಾಡಿ ಶಿವನನ್ನುಪೂಜಿಸಿ, ಶಿವವ್ರತಮಾಡುವ ಗುರುಗಳಿಗೆ ಭೋಜನ ಏರ್ಪಾಡು ಮಾಡಬೇಕು. ಯಥಾಶಕ್ತಿ ದಕ್ಷಿಣೆ ಕೊಡಬೇಕು. ಅವರಿಗೆ ನಮಸ್ಕರಿಸಿ, ದೇವರ ಬಳಿಗೆ ಬಂದು ಪ್ರದಕ್ಷಣೆ ಹಾಕಿ ಶಿವಧ್ಯಾನ, ಮಾಡಬೇಕು. ಹೀಗೆ ಮಾಡಿದರೆ, ಸನ್ಮಾನಿತನಾಗಿ ಶಿವನಿಗೆ ಸಮಾನವಾದ ಶಕ್ತಿ ಸಾಮರ್ಥ್ಯಗಳು ಬಂದು ಬಹುಕಾಲದವರೆಗೆ ರುದ್ರ ಲೋಕದಲ್ಲಿ, ಸಂತೋಷದಿಂದ ಇರುವನು.

ಹೆಣ್ಣು ಮಕ್ಕಳು ಈ ಶುಕ್ಲತೀರ್ಥದಲ್ಲಿ ಶಿವನಿಗೆ ಅಭಿಷೇಕ ಮಾಡಿಸಿ ಸ್ಕಂದನ ಪೂಜೆ ಮಾಡಿ, ಸುವರ್ಣದಾನ ನೀಡಿದರೆ ಹದಿನಾಲ್ಕು ಇಂದ್ರರ ಆಳ್ವಿಕೆ ಮುಗಿಯುವವರೆಗೆ ಶಿವಲೋಕದಲ್ಲಿ ಸೌಖ್ಯ ಅನುಭವಿಸುವರು. ಹುಣ್ಣಿಮೆ, ಚತುರ್ದಶಿ, ಸಂಕ್ರಮಣ ಮುಂತಾದ ಪರ್ವಕಾಲದಲ್ಲಿ ಈ ಶುಕ್ಲತೀರ್ಥದಲ್ಲಿ ಸ್ನಾನಮಾಡಿ ಉಪವಾಸವಿದ್ದು ಶಂಭುವನ್ನು ಅರ್ಚಿಸಿ ಯಥಾಶಕ್ತಿದಾನ ದಕ್ಷಿಣೆನೀಡಿದರೆ ಹರಿಶಂಕರರು ಸುಪ್ರೀತರಾಗುವರು. ಈ ಕ್ಷೇತ್ರದಲ್ಲಿ ಬಡ ಬ್ರಾಹ್ಮಣನ ಮದುವೆ ಮಾಡಿಸಿದರೆ ಆ ದಂಪತಿಗಳ ಮೈಮೇಲಿರುವ ಮತ್ತು ಅವರಿಂದ ಜನಿಸುವ ಮಕ್ಕಳ ಮೈಮೇಲಿರುವ ಕೂದಲುಗಳಷ್ಟು ಸಾವಿರಾರು ವರ್ಷ ಶಿವಲೋಕದಲ್ಲಿ ಸನ್ಮಾನಿತನಾಗಿ ಸುಖದಿಂದ ಇರುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಭತ್ತಮೂರನೆಯ ಅಧ್ಯಾಯ ಮುಗಿದುದು*

—o—

## ನರ್ಮದಾನದಿಯ ತೀರ್ಥಗಳ ಮಹಾತ್ಮೆ

ಅಧ್ಯಾಯ - ೧೯೪

**ಮಾರ್ಕಂಡೇಯ ಉವಾಚ**

**ತತಸ್ತ್ವನರಕಂ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್।**
**ಸ್ನಾತಮಾತ್ರೋ ನರಸ್ತತ್ರ ನರಕಂಚನಪಶ್ಯತಿ॥**

**ಮಾರ್ಕಂಡೇಯ :-** ಅನಂತರ 'ಅ ನರಕ' ಎಂಬ ತೀರ್ಥಕ್ಕೆ ಹೋಗಿ ಸ್ನಾನಮಾಡಬೇಕು. ಅಲ್ಲಿ ಸ್ನಾನಮಾಡುವುದರಿಂದಲೇ ನರನಿಗೆ ಎಂದೂ ನರಕ ದರ್ಶನವಾಗುವದಿಲ್ಲ. ಈ ತೀರ್ಥದಲ್ಲಿ ಮೃತ ಮಾನವನ ಮೂಳೆಗಳನ್ನು ಹಾಕಿದರೆ ಆ ಮಾನವನು ಸುರೂಪಿಯಾಗಿ ಸದ್ಗತಿ ಪಡೆಯುವನು. ಅನಂತರ ಗೋತೀರ್ಥದಲ್ಲಿ ಸ್ನಾನಮಾಡಿ, ಪಾಪಗಳನ್ನು ಕಳೆದುಕೊಳ್ಳಬೇಕು. ಇನ್ನೊಂದು ಕಪಿಲಾ ತೀರ್ಥದಲ್ಲಿ ಜೇಷ್ಠ ಮಾಸದ ಚತುರ್ದಶಿ ದಿನದಂದು ಸ್ನಾನಮಾಡಿ ಕಪಿಲ ಗೋವನ್ನು ದಾನನೀಡಿ ತುಪ್ಪದ ದೀಪ ಹಚ್ಚಿ, ಶಿವನಿಗೆ ತುಪ್ಪದ ರಸದಿಂದಲೇ ಸ್ನಾನ ಮಾಡಿಸಬೇಕು. ಅಂದು ಕೇವಲ ಹಣ್ಣುಹಂಪಲ ತಿಂದು ದೇವರಿಗೆ ನಮಸ್ಕರಿಸಿ, ಕೊರಳಲ್ಲಿ ಗಂಟೆ ಹಾಗೂ

ಆಭರಣ ಹಾಕಿ ಕಪಿಲೆಯನ್ನು ದಾನ ಮಾಡುವವನು ಶಿವನಂತೆ ಪರಾಕ್ರಮ ಶಾಲಿಯಾಗಿ ಮತ್ತೆ ಹುಟ್ಟಿ ಬರುವುದಿಲ್ಲ. ಇಲ್ಲಿ ಮಂಗಳವಾರ ಚತುರ್ಥೀತಿಥಿ ಬಂದಾಗ ಶಂಕರನನ್ನು ಪೂಜಿಸಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಮಂಗಳವಾರ ನವಮೀತಿಥಿ, ಮಂಗಳವಾರ ಅಮಾವಾಸ್ಯೆ ಬಂದಾಗ ಶಿವನಿಗೆ ಘೃತ ಸ್ನಾನಮಾಡಿಸಿ, ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ತನ್ನ ಎಲ್ಲ ಪರಿವಾರ ಸಹಿತವಾಗಿ ಪುಷ್ಪಕ ವಿಮಾನದಲ್ಲಿ ಕುಳಿತು ಶಿವಪದಹೊಂದಿ, ರುದ್ರದೇವರಂತೆ ಸುಖಿಸುವನು.

ತೃಣಬಿಂದು ಎಂಬ ಋಷಿಯು ಘೋರ ಪಾಪಮಾಡಿ, ಹಾಳಾಗಿ ಹೋದಾಗ ಋಷಿತೀರ್ಥವೆಂಬ ನರ್ಮದೆಯ ಮಡುವಿನಲ್ಲಿ ಸ್ನಾನಮಾಡಿ ಶಾಪಮುಕ್ತನಾದನು. ಈ ತೀರ್ಥದಲ್ಲಿ ಸ್ನಾನ ಮಾಡಿ ಗಂಗೇಶ್ವರ ತೀರ್ಥಕ್ಕೆ ಹೋಗಿ ಶ್ರಾವಣ ಕೃಷ್ಣ ಚತುರ್ದಶಿಯಂದು ಸ್ನಾನ ಮಾಡಿ ಪಿತೃ ತರ್ಪಣ ಕೊಟ್ಟರೆ ಋಣತ್ರಯದಿಂದ ಮುಕ್ತನಾಗುವನು. ಇಲ್ಲಿ ಸ್ನಾನಮಾಡಿದರೆ ಪ್ರಯಾಗದಲ್ಲಿ ಸ್ನಾನ ಮಾಡಿದ ಫಲವು ಬರುವುದು. ಅಲ್ಲಿಂದ ಗಂಗಾವದನ ತೀರ್ಥದಲ್ಲಿ ಪರ್ವಕಾಲದಲ್ಲಿ ಅಥವಾ ಬಿಡಿ ದಿನಗಳಲ್ಲಿ ಸ್ನಾನ ಮಾಡಿದರೆ ಆಜನ್ಮಮಾಡಿದ ಪಾಪಗಳೆಲ್ಲವೂ ತೊಳೆದು ಹೋಗುತ್ತವೆ. ದಶಾಶ್ವಮೇಧ ತೀರ್ಥದಲ್ಲಿ ಭಾದ್ರಪದ ಮಾಸದಲ್ಲಿ ಒಂದು ರಾತ್ರಿ ಉಪವಾಸವಿದ್ದು ಸ್ನಾನ ಮಾಡಿ, ಶಂಕರನನ್ನು ಪೂಜಿಸಿ ಪಿತೃಗಳ ತರ್ಪಣ ಕೊಟ್ಟರೆ ಅಶ್ವಮೇಧ ಫಲ ಬರುವುದು.

ಈ ದಶಾಶ್ವಮೇಧದ ಪಶ್ಚಿಮದಲ್ಲಿ ಬ್ರಾಹ್ಮಣೋತ್ತಮನಾದ ಭೃಗು ಋಷಿಯು ಸಾವಿರ ವರ್ಷ ಶಿವನನ್ನು ಕುರಿತು ತಪಸ್ಸು ಮಾಡಿದನು. ಅವನ ಜಡೆಯಲ್ಲಿ ಪಕ್ಷಿಗಳು ಗೂಡುಕಟ್ಟಿದ್ದವು. ಗೌರೀ ಗಂಗಾಧರರಿಗೆ ಅವನನ್ನು ಕಂಡು ಕೌತುಕವೆನಿಸಿತು. ಅವಳು ಗಿರೀಶನನ್ನು ಕೇಳಿದಳು "ಮಹೇಶ್ವರಾ, ಇವನು ಯಾರು? ದೇವನೋ ದಾನವನೋ?"

**ಮಹೇಶ್ವರ**:- ಇವನು ಭೃಗು ಋಷಿ ಮುನಿಗಳಲ್ಲಿ ಸರ್ವ ಶ್ರೇಷ್ಠ. ತಪಃ ಸಮಾಧಿಯಲ್ಲಿ ಕುಳಿತು ನನ್ನನ್ನೇ ಧ್ಯಾನಮಾಡುತ್ತಾನೆ." ಇದನ್ನು ಕೇಳಿ ಸರ್ವಮಂಗಳೆಯು ನಸುನಕ್ಕು ತನ್ನ ನಾಥನನ್ನು ಕುರಿತು ನುಡಿದಳು. 'ಪ್ರಿಯಕರ, ತಪಸ್ಸನ್ನುಮಾಡಿ ಇವನ ಜಡೆ ಹೊಗೆ ಬಣ್ಣಕ್ಕೆ ತಿರುಗಿದೆ. ಇಷ್ಟಾದರೂ ನೀನು ಪ್ರಸನ್ನನಾಗಿಲ್ಲ. ಭಕ್ತರಿಗೆ ನೀನು ದುರಾರಾಧ್ಯನೇ ಆಗಿರುವಂತೆ ತೋರುವುದು."

**ಈಶ್ವರ**:- ಈ ಋಷಿಯ ಸ್ವಭಾವ ನಿನಗೆ ಗೊತ್ತಿಲ್ಲ. ಇವನು ಬಹು ಮುಂಗೋಪಿ. ನಿನಗೆ ನನ್ನ ಮಾತಿನ ಸತ್ಯತೆಯನ್ನು ಈಗಲೇ ಮನಗಾಣಿಸಿ ಕೊಡುವೆನು." ಹೀಗೆ ಹೇಳಿ ಮಹಾದೇವರು ಧರ್ಮರೂಪಿಯಾದ ಎತ್ತನ್ನು ಸ್ಮರಣೆ ಮಾಡಿದರು. ಕೂಡಲೆ ವೃಷಭವು ಅಲ್ಲಿಗೆ ಬಂದು ಮಾನವರ ಮಾತನ್ನು ಅನುಸರಿಸಿ ವಿರೂಪಾಕ್ಷನಿಗೂ ಬಿನ್ನವಿಸಿತು. "ಪ್ರಭು ಅಪ್ಪಣೆಯಾಗಲಿ."

**ಶಂಕರ** :- ಇಲ್ಲಿ ಬೆಳೆದ ಈ ಹುತ್ತವನ್ನು ನಿನ್ನ ಕೋಡಿನಿಂದ ಅಗೆದು ಒಳಗೆ ತಪಸ್ಸು ಮಾಡುತ್ತ ಕುಳಿತ ಬ್ರಾಹ್ಮಣನನ್ನು ಕೆಳಗೆ ಕೆಡವಿಬಿಡು.

ಸದಾಶಿವನ ಅಪ್ಪಣೆ ಆಗುವದೊಂದೇ ತಡ, ಆ ಎತ್ತು ಹೋಗಿ, ತಪಃ ಸಮಾಧಿಯಲ್ಲಿ ಕುಳಿತ ಭೃಗು ಮುನಿಯನ್ನು ಎತ್ತಿ ಒಗೆಯಿತು. ಕೂಡಲೇ ಕೋಪ

ಬಂದಿತು ಅವನಿಗೆ. ಕೈ ಎತ್ತಿ ಶಾಪ ಕೊಟ್ಟನು. "ಎಲೆ ಎತ್ತೆ. ಎಲ್ಲಿ ಹೋಗುವೆ? ನನಗೆ ಕೋಪ ಬಂದಿದೆ, ಇಂದು ನಿನ್ನನ್ನು ನಾಶ ಮಾಡುವೆ, ನಿಲ್ಲು." ಆಗ ಎತ್ತು ಮತ್ತೆ ತನ್ನ ಕೋಡಿನಿಂದ ಭೃಗು ಋಷಿಯನ್ನು ಎತ್ತಿ ಮುಗಿಲಿಗೆ ತೂರಿತು. ಮೇಲೆ ಬೀಸಿ ಎಸೆಯಲ್ಪಟ್ಟ ಮುನಿಯು ಅಂತರಾಳದಲ್ಲಿ ನಿಂತುಕೊಂಡಾಗ ಈ ಎತ್ತು ಅಲ್ಲಿಯೂ ಕಂಡು ಬಂದಿತು. ಅದನ್ನು ನೋಡಿ ಭೃಗು ಮುನಿಗೆ ಆಶ್ಚರ್ಯವಾಯಿತು. ಅಲ್ಲಿಯೇ ಅವನ ಪಕ್ಕದಲ್ಲಿ ಮಹಾದೇವರು ನಿಂತುಕೊಂಡು ನಗುತ್ತಿದ್ದರು, ನನ್ನನ್ನು ಕಂಡು ನಗುವ ಇವನಾರು? ಎಂದು ಕಣ್ತೆರೆದು ನೋಡುವಲ್ಲಿ ನಗುವವನ ಹಣೆಯಲ್ಲಿ ಒಂದು ಕಣ್ಣು ಕಾಣಿಸಿತು. "ಓಹ್! ಹಾಗಾದರೆ ಇವನು ಸಾಕ್ಷಾತ್ ಮುಕ್ಕಣ್ಣ" ಎಂದು ಅವನಿಗೆ ಸಾಷ್ಟಾಂಗನಮಸ್ಕಾರ ಮಾಡಿ ಸ್ತೋತ್ರ ಮಾಡಿದನು.

"ಪ್ರಣಿಪ್ರತ್ಯ ಭೂತನಾಥಂ ಭವೋದ್ಭವಂ ತ್ವಾಮಹಂ ದಿವ್ಯರೂಪಮ್
ಭವಾತೀತೊ ಭುವನಪತೇ ಪ್ರಭೋ। ತ್ವಾಂ ವಿಜ್ಞಾಪಯೇ ಕಿಂಚಿತ್।
ತ್ವದ್‌ಗುಣ ನಿಕರಾನ್ ವಕ್ತುಂ ಕಃ ಶಕ್ತೋ ಭವತಿ ಮನುಷ್ಯಾಣಾಮ್।
ವಾಸುಕಿರಪಿ ಹಿ ಕದಾಚಿದ್ವದನ ಸಹಸ್ರಂ ಭವೇದ್ಯಸ್ಯ"॥

ಭಕ್ತ್ಯಾ ತಥಾಪಿ ಶಂಕರ ಭುವನಪತೇ ತ್ವತ್‌ಸುತೋ ಮುಖರಃ।
ವದತಃ ಕ್ಷಮಸ್ವ ಭಗವನ್। ಪ್ರಸೀದ ಮೇ ತವ ಚರಣಪತಿತಸ್ಯ॥

ಯಮ ನಿಯಮ ಯಜ್ಞ ದಾನ ವೇದಾಭ್ಯಾಸಾಶ್ಚ ಧಾರಣಾ ಯೋಗಃ।
ತ್ವದ್ಭಕ್ತೇಃ ಸರ್ವಮಿದಂ ನಾರ್ಹತಿಹಿಕಲಾಸಹಸ್ರಾಂಶಮ್॥

ಉಚ್ಛಿಷ್ಟ ರಸ ರಸಾಯನ ಖಡ್ಗಾಂಜನ ಪಾದುಕಾ ವಿವರ ಸಿದ್ಧಿರ್ವಾ।
ಚಿಹ್ನಂ ಭವವ್ರತಾನಾಂ ದೃಶ್ಯತಿ ಚೇಹ ಜನ್ಮನಿ ಪ್ರಕಟಂ॥

ಶಾಠ್ಯೇನ ನಮತೋ ಯದ್ಯಪಿ ದದಾಸಿ ತ್ವಂ ಭೂತಿಮಿಚ್ಛತೊ ದೇವ।
ಭಕ್ತಿರ್ಭವ ಭೇದಕರೀ ಮೋಕ್ಷಾಯ ವಿನಿರ್ಮಿತಾ ನಾಥ॥

ಪರದಾರ ಪರಸ್ವರತಂ ಪರ ಪರಿಭವ ದುಃಖ ಶೋಕ ಸಂತಪ್ತಮ್।
ಪರವದನ ವೀಕ್ಷಣ ಪರಂ ಪರಮೇಶ್ವರ ಮಾಂ ಪರಿತ್ರಾಹಿ॥

ಮಿಥ್ಯಾಭಿಮಾನ ದಗ್ಧಂ ಕ್ಷಣಭಂಗುರ ವಿಭವ ವಿಲಸಂತಮ್।
ಕ್ರೂರ ಕುಪಥ್ಯಾಭಿಮುಖಂ ಪತಿತಂ ಮಾಂ ಪಾಹಿ ದೇವೇಶ॥

ದೀನೇ ದ್ವಿಜಗಣೇ ಸಾರ್ಥೇ ಬಂಧು ಜನೇನ್ನೈವ ದೂಷಿತಾ ಹ್ಯಾಶಾ।
ತೃಷ್ಣಾ ತಥಾಪಿ ಶಂಕರ। ಕಿಂ ಮೂಢಂ ಮಾಂ ವಿಡಂಬಯತಿ॥

ತೃಷ್ಣಾಂ ಹರಸ್ವ ಶೀಘ್ರಂ ಲಕ್ಷ್ಮೀಂ ಪ್ರದಸ್ವ ಯಾವದಾಸಿನೀಂ ನಿತ್ಯಮ್।
ಛಿಂಧಿ ಮದ ಮೋಹ ಪಾಶಾನುತ್ತಾರಯ ಮಾಂ ಮಹಾದೇವ॥

ಕರುಣಾಭ್ಯುದಯಂ ನಾಮಸ್ತೋತ್ರಮಿದಂ ಸರ್ವಸಿದ್ಧಿದಂ ದಿವ್ಯಂ।
ಯಃ ಪಠತಿ ಭಕ್ತಿಯುಕ್ತಸ್ತಸ್ಯ ತುಷ್ಯೇತ್ ಭೃಗೋರ್ಯಥಾ ಚ ಶಿವಃ"॥

ಸರ್ವ ಪ್ರಾಣಿಗಳ ಒಡೆಯನು ಪ್ರಪಂಚದ ಉತ್ಪತ್ತಿಗೆ ಕಾರಣನು, ಸಂಸಾರದ ತಾಪತ್ರಯಕ್ಕೆ ಅತೀತನೂ ಜಗತ್ಪತಿಯೂ ದಿವ್ಯ ರೂಪಿಯೂ ಆದ ಪರಮೇಶ್ವರನೆ, ಪ್ರಭುವಾದ ನಿನ್ನಲ್ಲಿ ನಾನು ನಮಸ್ಕಾರಪೂರ್ವಕವಾಗಿ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ.

ನಿನ್ನ ಗುಣಗಳನ್ನು ಹೇಳಲು ಯಾವ ಮನುಷ್ಯನು ಶಕ್ತನಾದಾನು? ಸಾವಿರ ಮುಖದ ವಾಸುಕಿಯು ಕೂಡಾ ನಿನ್ನ ಗುಣಗಳನ್ನು ಬಣ್ಣಿಸಲಾರ. ಆದರೂ ನಿನ್ನ ಮಗನಾದ ನಾನು, ಜಗದೊಡೆಯನಾದ ಶಂಕರಸ್ವಾಮಿಯೇ, ವಾಚಾಳಿತನದಿಂದ ನಿನ್ನ ಮಹಿಮೆಯನ್ನು ಯಥಾಶಕ್ತಿ ಹೇಳುವೆ. ಕ್ಷಮಿಸು. ನಿನ್ನ ಚರಣಗಳ ಮೇಲೆ ಬಿದ್ದ ನನ್ನ ಮೇಲೆ ಪ್ರಸನ್ನನಾಗು, ಸತ್ವ, ರಜಸ್ಸು, ತಮಸ್ಸುಗಳಿಂದ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ನಿನ್ನ ಹೊರತು, ಜಗದೀಶನೆ, ಬೇರೆ ಪರದೇವತೆ ಯಾರೂ ಇಲ್ಲ. ಯಮ, ನಿಯಮ, ಯಜ್ಞ, ದಾನ, ವೇದಾಭ್ಯಾಸ, ಯೋಗಧಾರಣೆ, ಇವು ಯಾವು ನಿನ್ನ ಭಕ್ತಿಯ ಸಾವಿರದ ಒಂದಂಶಕ್ಕೂ ಸರಿದೂಗಲಾರವು. ಶಿವವ್ರತ ಮಾಡುವವರ ಎಂಜಲು ತಿಂದರೆ ರೋಗಗಳು ದೂರವಾಗುವವು. ಅವರ ಪಾದ ತೊಳೆದು ನೀರನ್ನು ಕುಡಿದರೆ, ಅಥವಾ ಅವರು ಅಭಿಮಂತ್ರಿಸಿ ಕೊಟ್ಟ ಜಲವನ್ನು ಪ್ರಾಶನ ಮಾಡಿದರೆ, ಅವರು ಕೈಯಿಂದ ಕೊಟ್ಟ ಖಡ್ಗ ಧರಿಸಿದರೆ, ಅಥವಾ ಅವರ ಹೆಸರು ಹೇಳಿ ಹಚ್ಚಿದ ಅಂಜನ, ಅವರು ಹಾಕಿಕೊಂಡ ಪಾದುಕಾಪೂಜೆ ಮುಂತಾದವುಗಳಿಂದ ಬೇಕಾದ ಸಿದ್ಧಿ ದೊರಕುವುದು.

ಇದೆಲ್ಲವೂ ಶಿವಭಕ್ತಿಯಿಂದ ಇದೇ ಜನ್ಮದಲ್ಲಿ ದೊರೆಯುವ ಸಿದ್ಧಿಯ ಚಿಹ್ನಗಳಾಗಿರುತ್ತವೆ. ಶಾಠ್ಯದಿಂದ ನಿನಗೆ ನಮಸ್ಕಾರ ಮಾಡಿದರೂ ಬೇಡುವವರಿಗೆ ನೀನು ಐಶ್ವರ್ಯ ಪ್ರದಾನಮಾಡುವೆ. ನಿನ್ನಲ್ಲಿ ಭಕ್ತಿಯಿಂದ ಪ್ರಾರ್ಥಿಸಿದರೆ ಭವಬಂಧನವು ನೀಗಿ, ಮೋಕ್ಷಕ್ಕೆ ಮಾರ್ಗವಾಗುವದು. ಹೆರವರ ಹೆಣ್ಣನ್ನು ಕೆಡಿಸಿ, ಹೆರವರ ಹಣವನ್ನು ಅಪಹರಿಸಿ, ಯಾವಾಗಲೂ ಜನರಿಗೆ ಅಪಕಾರ, ದುಃಖ ಸಂತಾಪಗಳನ್ನು ನೀಡುವ, ಪರಕೀಯರ ಮುಖವನ್ನು ನೋಡುತ್ತಲೇ ಬದುಕಿರುವ ನನ್ನನ್ನು ಪರಮೇಶ್ವರನೇ, ಸಂರಕ್ಷಿಸು, ಒಣ ದುರಭಿಮಾನದಿಂದ ದಗ್ಧನಾದ ಮತ್ತು ಕ್ಷಣಭಂಗುರ ಸಂಸಾರದಲ್ಲಿ ಬಿದ್ದು ಹೊರಳಾಡುವ, ದುರ್ಮಾರ್ಗಗಾಮಿಯಾದ, ಪತಿತನಾದ ನನ್ನನ್ನು, ಮಹಾದೇವನೇ ರಕ್ಷಿಸು. ಆಶೆಯು ದೀನದಲಿತರಲ್ಲಿಯೂ ಬ್ರಾಹ್ಮಣರಲ್ಲಿಯೂ ಇದ್ದರೆ ಅಂತಹ ದೋಷವಲ್ಲ. ಆದರೆ ಈ ಆಶೆಯು ನನ್ನನ್ನು ಏಕೆ ಅಣಕಿಸುತ್ತಿದೆ? ಸ್ವಾಮಿ, ನನ್ನ ಆ ಆಶೆಯನ್ನು ಬೇಗನೇ ನಾಶಪಡಿಸು. ಲಕ್ಷ್ಮಿಯನ್ನು ಅರ್ಥಾತ್ ಐಶ್ವರ್ಯವನ್ನು ಕೊಡು. ಅದು ನಿರಂತರವಾಗಿ ನನ್ನಲ್ಲಿ ನೆಲೆಸುವಂತೆ ಮಾಡು. ಅಹಂಕಾರ ಹಾಗೂ ಮೋಹದ ಪಾಶಗಳನ್ನು ಕತ್ತರಿಸು. ಸಂಸಾರ ಮೋಹದಿಂದ ಪಾರುಮಾಡು. ಸರ್ವ ಸಿದ್ಧಿಯನ್ನು ಕರುಣಿಸುವ ಕರುಣಾಭ್ಯುದಯ ಎಂಬೀ ಸ್ತೋತ್ರವನ್ನು ಭಕ್ತಿಯುತವಾಗಿ ಪಠಿಸುವ ನರನ ಮೇಲೆ ಪರಮೇಶ್ವರನು ಭೃಗುಋಷಿಗೆ ಒಲಿದಂತೆ ಒಲಿದು ಪ್ರಸನ್ನನಾಗಿ ಕರುಣಾದೃಷ್ಟಿಯನ್ನು ಇರಿಸುವನು. ತುಷ್ಟಿ ಪುಷ್ಟಿಗಳನ್ನು ಕರುಣಿಸುವನು.

ಮಹಾದೇವ :- ವತ್ಸ ನಾನು ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ನೀನು ಅಪೇಕ್ಷಿತವಾದ ವರವನ್ನು ಕೇಳು ಕೊಡುತ್ತೇನೆ. ನಿನ್ನ ಈ ಸ್ತೋತ್ರದಿಂದ ನನಗೆ ಅತ್ಯಂತ ಸಂತೋಷವಾಗಿದೆ.

**ಭೃಗು :-** ದೇವ ದೇವೇಶನೆ, ನೀನು ಸಂತುಷ್ಟನಾಗಿದ್ದರೆ ಇಲ್ಲಿ ರುದ್ರವೇದಿಕೆ ಒಂದು ರೂಪುಗೊಳ್ಳುವಂತೆ ಅನುಗ್ರಹಿಸು.

**ಈಶ್ವರ :-** ಬ್ರಾಹ್ಮಣ ಶ್ರೇಷ್ಠನೇ, ಹಾಗೇ ಆಗಲಿ ನಿನಗೆ ಇನ್ನು ಸಿಟ್ಟು ಬರುವದಿಲ್ಲ. ನೀವಿಬ್ಬರೂ ತಂದೆಮಕ್ಕಳಲ್ಲಿ ಒಬ್ಬರಿಗೂ ಕೋಪ ಬಾರದೆ ಇಬ್ಬರಲ್ಲಿಯೂ ಐಕ್ಯಮತ್ಯವು ಬೆಳೆಯುವುದು

ಶಿವನು ಹೀಗೆ ವರ ಕೊಟ್ಟಂದಿನಿಂದ ಬ್ರಹ್ಮಾದಿ ದೇವತೆಗಳು ಕಿನ್ನರ, ಕಿಂಪುರುಷರು. ಪರಮೇಶ್ವರ ಸನ್ನಿಧಾನವಿದ್ದ ಆ ಭೃಗುತೀರ್ಥದಲ್ಲಿ ವಾಸ ಮಾಡುತ್ತಾರೆ. ಈ ತೀರ್ಥದರ್ಶನದಿಂದಲೇ ಸರ್ವಪಾಪಗಳು ನಾಶವಾಗುತ್ತವೆ. ಇಲ್ಲಿ ಸ್ನಾನಮಾಡಿ, ಪಾದರಕ್ಷೆ. ಛತ್ರ, ಅನ್ನ, ಬಂಗಾರ, ಯಥಾಶಕ್ತಿ ಭೋಜನ ಮುಂತಾದವುಗಳನ್ನು ದಾನ ಮಾಡಬೇಕು. ಅದರಿಂದ ಅಕ್ಷಯಫಲಉಂಟು. ನರ್ಮದಾ ನದಿಯಲ್ಲಿರುವ ಈ ಭೃಗುತೀರ್ಥದದ ಮಹಿಮೆಯನ್ನು ಶ್ರವಣ ಮಾಡಿದವರ ಸರ್ವಪಾಪಗಳು ಪರಿಹಾರವಾಗುತ್ತವೆ.

ಇದಾದ ನಂತರ ನರ್ಮದೆಯಲ್ಲಿ ಪಾಪ ಪರಿಹಾರಕವಾದ ಧೌತಪಾಪ ತೀರ್ಥದಲ್ಲಿ ಸ್ನಾನ ಮಾಡಿದವನ ಬ್ರಹ್ಮಹತ್ಯಾ ಪರಿಹಾರ, ಪ್ರಾಣತ್ಯಾಗ ಮಾಡಿದವನು ನಾಲ್ಕು ತೋಳು, ಮೂರು ಕಣ್ಣು ಪಡೆದ ಶಿವಸಾಯುಜ್ಯವನ್ನು ಹೊಂದಿ ಹತ್ತುಸಾವಿರ ಕಲ್ಪಕಾಲ ಶಿವಲೋಕದಲ್ಲಿ ವಾಸಮಾಡುವನು. ಇಲ್ಲಿಯ ಸ್ನಾನದಿಂದ ಪ್ರಯಾಗ ಸ್ನಾನದ ಫಲವು ದೊರಕುವದು. ಭಾದ್ರಪದಶುದ್ಧ ಚತುರ್ದಶಿದಿನ ಒಂದು ದಿನ ಉಪವಾಸ ಮಾಡಿ ಮರುದಿನ ಸ್ನಾನ ಮಾಡಿದರೆ ಯಮಬಾಧೆ ತಪ್ಪುವದು. ಮೇಲೆ ರುದ್ರಲೋಕ ಲಾಭ.

ಹಿರಣ್ಯದೀಪ ಎಂಬ ಹರಿಯ ಸನ್ನಿಧಾನವುಳ್ಳ ಪಾಪನಾಶಕ ತೀರ್ಥಕ್ಕೆ ಹೋಗಿ ಸ್ನಾನ ಮಾಡಬೇಕು. ಅದರಿಂದ ಸೌಂದರ್ಯ ಸಂಪತ್ತು ಎರಡೂ ದೊರಕುವವು. ಅನಂತರ ಗರುಡನು ತಪಸ್ಸು ಮಾಡಿದ ಪ್ರಖ್ಯಾತವಾದ ಕನಖಲ ತೀರ್ಥಕ್ಕೆ ಹೋಗಬೇಕು. ಅನಂತರ ಹಂಸತೀರ್ಥ, ವರಾಹತೀರ್ಥ, ಚಂದ್ರತೀರ್ಥ, ಕನ್ಯಾತೀರ್ಥ, ದೇವತೀರ್ಥ, ಸರ್ಪತೀರ್ಥ, ಶಿಖಿತೀರ್ಥ, ಭೃಗುತೀರ್ಥ ಮುಂತಾದ ತೀರ್ಥಗಳಲ್ಲಿ ಸ್ನಾನ ಮಾಡಬೇಕು. ಇದರಿಂದ ಅಶ್ವಮೇಧಯಾಗಮಾಡಿದ ಪುಣ್ಯವು ಬರುವದು. ಸಕಲ ಪಾಪಗಳು ಪರಿಹಾರವಾಗುವವು. ಕೊನೆಗೆ ದಿವ್ಯಗತಿಯು ಪ್ರಾಪ್ತವಾಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಒಂದುನೂರತೊಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು.*

—o—

## ನರ್ಮದಾನದೀ ಮಹಾತ್ಮೆಯಲ್ಲಿ ಅನೇಕ ತೀರ್ಥಗಳ ಮಹಿಮಾವರ್ಣನೆ

**ಅಧ್ಯಾಯ - ೧೯೫**

**ಮಾರ್ಕಂಡೇಯ ಉವಾಚ:**

**ತತೋ ಗಚ್ಛೇಚ್ಚ ರಾಜೇಂದ್ರ. ಶಂಕುಶೇಖರಮುತ್ತಮಮ್।**
**ದರ್ಶನಾತ್ತಸ್ಯ ದೇವಸ್ಯ ಮುಚ್ಯತೇ ಸರ್ವಪಾತಕೈ:॥**

ಮಾರ್ಕಂಡೇಯ:- ಅನಂತರ ಶಂಕುಶೇಖರತೀರ್ಥಕ್ಕೆ ಹೋಗಬೇಕು. ಅದರ ದರ್ಶನದಿಂದಲೇ ಸರ್ವಪಾಪಗಳು ನಾಶವಾಗುತ್ತವೆ. ಆ ಬಳಿಕ ನರ್ಮದೇಶ್ವರ, ಅಶ್ವತೀರ್ಥ, ಪಿತಾಮಹತೀರ್ಥ, ಸಾವಿತ್ರೀತೀರ್ಥ, ಮಾನಸತೀರ್ಥ, ಕುಂಜತೀರ್ಥ, ತ್ರಿದಶಜ್ಯೋತಿತೀರ್ಥ ಮುಂತಾದ ತೀರ್ಥಗಳಿಗೆ ಹೋಗಿ ಸ್ನಾನಮಾಡಬೇಕು.

ಹಿಂದೆ ಕೆಲವು ಋಷಿಕನ್ಯೆಯರು ನರ್ಮದೆಯ ದಂಡೆಯಲ್ಲಿ ನಿಂತು ತಪಸ್ಸು ಮಾಡಿದರು. ಮಹಾದೇವರೇ ತಮಗೆ ಪತಿಯಾಗಬೇಕೆಂಬ ಅಪೇಕ್ಷೆಯಿಂದ ನಡೆದಿತ್ತು ಅವರ ಉಗ್ರತಪಸ್ಸು. ಒಂದು ದಿನ ಶಿವನು ಅಲ್ಲಿ ವಿದ್ರೂಪ ಮುಖದ ಬೀಭತ್ಸ ರೂಪದಿಂದ ಅಸಹ್ಯಬರುವಂತೆ ವೇಷತಾಳಿ ಅಲ್ಲಿಗೆ ಬಂದನು. "ನಾನೊಬ್ಬ ಋಷಿಕುಮಾರ. ಮದುವೆಯಾಗಬೇಕೆಂದಿದ್ದೇನೆ" ಎಂದು ಹೇಳಿದನು. ಆಗ ಆ ಋಷಿ ಕುಮಾರಿಯರೆಲ್ಲರೂ ಶಿವನನ್ನೇ ಮದುವೆಯಾಗುವ ತಮ್ಮ ಅಪೇಕ್ಷೆಯನ್ನು ವ್ಯಕ್ತಮಾಡಿದರು. ಆಗ ಆ ಕುರೂಪಿಯಾದ ತಪಸ್ವಿಯು ಉಪದೇಶಮಾಡಿ, ಮನುಷ್ಯ ದೇಹದ ಹೇಯ ಸ್ವರೂಪವನ್ನು ತಿಳಿಸಿ, ಈ ಮಾನವದೇಹದಿಂದ ಶಿವನನ್ನು ಪಡೆಯುವದು ಅಸಾಧ್ಯವೆಂದು ಬೋಧಿಸಿ ಅವರ ಮನಸ್ಸನ್ನು ತಿರುಗಿಸಿದನು. ಅಂದಿನಿಂದ ಈ ತೀರ್ಥಕ್ಕೆ ಋಷಿಕನ್ಯಾತೀರ್ಥವೆಂದು ಹೆಸರು ಬಂದಿತು ಅಲ್ಲಿಂದ ಸ್ವರ್ಣಬಿಂದು, ಅಪ್ಸರೇಶ, ಕೌಶಿಕೀತೀರ್ಥ, ನರಕತೀರ್ಥ, ಸ್ತ್ರೀತೀರ್ಥ, ಏರಂಡೆ ನರ್ಮದಾ ಸಂಗಮತೀರ್ಥ, ನರ್ಮದಾ ಉದಧಿ ಸಂಗಮತೀರ್ಥ, ಜಾಮದಗ್ನಿ ತೀರ್ಥ, ವಿಮಲೇಶ್ವರ ತೀರ್ಥ, ಮುಂತಾದ ನದಿಯಲ್ಲಿರುವ ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಪ್ರೋಕ್ಷಣೆಗೈದು, ಉಪೋಷಣೆಗೈದು, ಮಹಾದೇವರನ್ನು ಪೂಜಿಸಿದರೆ, ಬ್ರಹ್ಮಹತ್ಯಾದಿ ಪಾತಕಗಳು ಕಳೆದುಹೋಗುತ್ತವೆ. ಸರ್ವತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲ ಬರುತ್ತದೆ. ಕೊನೆಗೆ ರುದ್ರದೇವರ ಅನುಗ್ರಹದಿಂದ ರುದ್ರಲೋಕಕ್ಕೆ ಆ ಮನುಷ್ಯನು ಪ್ರಯಾಣ ಮಾಡುವನು. ಒಟ್ಟು ತೀರ್ಥಗಳು ಹತ್ತು ಕೋಟಿ. ಈ ಎಲ್ಲ ತೀರ್ಥಗಳು ಶಿವಧ್ಯಾನ ಪರಾಯಣರಾದ ಅಸಂಖ್ಯ ಋಷಿಗಳಿಂದ ಸೇವಿಸಲ್ಪಡುತ್ತವೆ. ಸ್ನಾನಮಾಡಿದವರ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸುತ್ತವೆ. ಈ ತೀರ್ಥಗಳಲ್ಲಿ ಸ್ನಾನಮಾಡಿದವನಿಗೆ, ಇವುಗಳ ಮಹಿಮೆ ಶ್ರವಣ ಮಾಡಿದವನಿಗೆ ನರ್ಮದಾ ನದಿಯು ಸುಪ್ರೀತಳಾಗಿ ಸಕಲ ತೀರ್ಥ ಸ್ನಾನಮಾಡಿದ ಪುಣ್ಯ ನೀಡುವಳು. ಇದರಂತೆ ಮಹಾದೇವನೂ ಮಾರ್ಕಂಡೇಯ ಮಹಾಮುನಿಯೂ ಈ ತೀರ್ಥ ಮಹಿಮಾಶ್ರವಣದಿಂದ

ಬಹಳ ಪ್ರೀತರಾಗಿ ಬಯಸಿದ ಫಲಗಳನ್ನು ನೀಡಿ ಕರುಣಿಸುವರು. ಬಂಜೆಗೆ ಗಂಡು ಮಗು, ಕನ್ಯೆಗೆ ವರ, ಬ್ರಾಹ್ಮಣರಿಗೆ ಪಾಂಡಿತ್ಯ, ಕ್ಷತ್ರಿಯರಿಗೆ ಯುದ್ಧದಲ್ಲಿ ಗೆಲುವು, ವೈಶ್ಯರಿಗೆ ಲಾಭ, ಶೂದ್ರರಿಗೆ ಸದ್ಗತಿ, ಮೂರ್ಖನಿಗೆ ವಿವೇಕ ವಿದ್ಯೆ, ಕುರೂಪಿ ಹೆಣ್ಣಿಗೆ ಉತ್ತಮವರ. ಕಿಂ ಬಹುನಾ ಬಯಸಿದ ಫಲಗಳು ದೊರಕುವವು. ನರಕದರ್ಶನವಂತೂ ಅವರಿಗೆ ಎಂದೂ ಆಗುವುದಿಲ್ಲ.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ನೂರ ತೊಂಬತ್ತೆದನೇಯ ಅಧ್ಯಾಯ ಮುಗಿದುದು.*



## ಭೃಗುವಂಶದ ಋಷಿಗಳ ಹೆಸರು ಮತ್ತು ಗೋತ್ರಪ್ರವರಗಳ ವರ್ಣನೆ

ಅಧ್ಯಾಯ - ೧೯೬

**ಸೂತ ಉವಾಚ :**

**ಇತ್ಯಾಕರ್ಣ್ಯ ಸ ರಾಜೇಂದ್ರ ಓಂಕಾರಸ್ಯಾಭಿವರ್ಣನಮ್।**
**ತತಃ ಪಪ್ರಚ್ಛ ದೇವೇಶಂ ಮತ್ಸ್ಯರೂಪಂ ಜಲಾರ್ಣವೇ॥**

**ಸೂತ:-** ಮನುರಾಜನು ನರ್ಮದಾತೀರದ ಓಂಕಾರಕ್ಷೇತ್ರದ ಮಹಿಮೆಕೇಳಿ, ದೇವತೆಗಳಿಗೆಲ್ಲ ಸ್ವಾಮಿಯಾದ ಮತ್ಸ್ಯರೂಪೀ ಹರಿಯನ್ನು ಪ್ರಶ್ನೆಮಾಡಿದನು.

**ಮನು:-** ದೇವನೇ, ಋಷಿಗಳ ಹೆಸರು, ಗೋತ್ರ, ವಂಶ, ಅವತಾರ, ಪ್ರವರ, ಸಾಮ್ಯ, ವೈಷಮ್ಯ ಮುಂತಾದ ವಿಷಯಗಳನ್ನೆಲ್ಲ ವಿವರವಾಗಿ ಹೇಳಬೇಕು. ಸ್ವಾಯಂಭುವ ಮನ್ವಂತರದಲ್ಲಿ ಮಹಾದೇವರಿಂದ ಶಪಿತರಾದ ಋಷಿಗಳು ವೈವಸ್ವತ ಮನ್ವಂತರದಲ್ಲಿ ಜನ್ಮತಾಳಿ ಮಾಡಿದ ಕಾರ್ಯ, ಹಾಗೂ ಸಾಧಿಸಿದ ಕೃತ್ಯಗಳ ವೃತ್ತಾಂತವನ್ನು ತಿಳಿಸು. ಹಾಗೂ ದಕ್ಷಕುಮಾರಿಯರಿಂದ ಮುಂದೆ ಬೆಳೆದು, ವಿಸ್ತಾರವಾದ ಪ್ರಜಾಭಿವೃದ್ಧಿಯನ್ನು ವಿವರಿಸು. ಭೃಗುವಂಶದ ಬೆಳವಣಿಗೆಯ ಬಗೆಯನ್ನು ಮತ್ತು ಉಳಿದ ಋಷಿಗಳ ವಂಶ ವಿಸ್ತಾರದ ರೀತಿಯನ್ನು ತಿಳಿಸು.

**ಮತ್ಸ್ಯ:-** ಸ್ವಾಯಂಭುವ ಮನ್ವಂತರದಲ್ಲಿ ಮಹಾದೇವರ ಶಾಪದಿಂದ ಋಷಿಗಳು ದೇಹತ್ಯಾಗಮಾಡಿ, ವೈವಸ್ವತ ಮನ್ವಂತರದಲ್ಲಿ ಮರಳಿ ಹುಟ್ಟಿದರು. ದೇವಮಾತೆಯರನ್ನು ಕಂಡು ಪರಮೇಷ್ಠಿಯ ಶಕ್ತಿಪಾತವಾದ ಬಳಿಕ ಅವನು ಅಗ್ನಿಯಲ್ಲಿ ಹೋಮಮಾಡಿದನು. ಆ ಅಗ್ನಿಮಧ್ಯದಿಂದ ಆಗ ತಪೋನಿಧಿಯಾದ ಭೃಗುಋಷಿಯು ಉತ್ಪನ್ನನಾದನು. ಅಂಗಾರಖಂಡ ಅಂದರೆ ಕೆಂಡದಿಂದ **ಅಂಗಿರಾ** ಎಂಬ ಋಷಿಯು ಜನಿಸಿದರು ಆ ಹೋಮಾಗ್ನಿಯ ಜ್ವಾಲೆಗಳಿಂದ ಅತ್ರಿಋಷಿ ಹುಟ್ಟಿದನು. ಆ ಅಗ್ನಿಯ ಮರೀಚಿ ಅರ್ಥಾತ್ ಕಿರಣಗಳಿಂದ ಮರೀಚಿ ಮುನಿಯು ಉದಿಸಿದನು. ಕೂದಲುಗಳಿಂದ ಪುಲಸ್ತ್ಯ ಮತ್ತು ಕಶ್ಯಪ, ಇನ್ನೂ ಉದ್ದವಾಗಿ ಬೆಳೆದ ಕೂದಲಗಳಿಂದ ಪುಲಹ, ವಸುಮಧ್ಯದಿಂದ ವಶಿಷ್ಠ ಎಂಬ ಮಹರ್ಷಿಗಳು ಹುಟ್ಟಿದರು. ಬ್ರಹ್ಮದೇವರ ಈ ಮಕ್ಕಳಲ್ಲಿ ಹಿರಿಯನಾದ ಭೃಗು ಋಷಿಯು ಪುಲೋಮನ . ಮಗಳಾದ ಪೌಲೋಮಿಯನ್ನು ಪತ್ನಿ ಎಂದು ಪರಿಗ್ರಹಿಸಿದನು. ಪೌಲೋಮಿಯಲ್ಲಿ ಭುವನ,

ಭೌವನ, ಸುಜನ್ಯ, ಸುಜನ, ಶುಚಿ, ಕ್ರತು, ಮೂರ್ಧ ತ್ಯಾಜ್ಯ, ವಸುಧ, ಪ್ರಭವ, ಅವ್ಯಯ, ದಕ್ಷ ಎಂದು ಹನ್ನೆರಡು ಜನ ಮಕ್ಕಳು ಹುಟ್ಟಿದರು. ಇವರಿಗೆಲ್ಲ ಭಾರ್ಗವರು ಎಂದು ಹೆಸರು. ಇವರೆಲ್ಲರು ದ್ವಾದಶದೇವತೆಗಳೆಂದೇ ಪ್ರಸಿದ್ಧರಾಗಿದ್ದಾರೆ. ಅನಂತರ ಭೃಗುಮುನಿಗೆ ಪೌಲೋಮಿಯಲ್ಲಿ ಆ ದೇವತೆಗಳಿಂದ ಕನಿಷ್ಠರಾದ ಚ್ಯವನ, ಆಪ್ನುವಾನ ಎಂಬ ಇಬ್ಬರು ಬ್ರಾಹ್ಮಣ ಕುಮಾರರು ಹುಟ್ಟಿದರು. ಅಪ್ನುವಾನನ ಪುತ್ರನೇ ಔರ್ವಮುನಿ. ಔರ್ವನ ಮಗ ಜಮದಗ್ನಿ. ಈ ಔರ್ವನು ಭಾರ್ಗವಮುನಿಗಳಲ್ಲಿ ಗೋತ್ರ ಪ್ರವರ್ತಕ ಮಹಾಮುನಿಯೆಂದು ಪ್ರಸಿದ್ಧವಾಗಿದ್ದಾನೆ.

ಈ ಭೃಗುವಂಶದಲ್ಲಿ ತಮ್ಮ ತಪೋಬಲದಿಂದ ಇನ್ನೂ ಅನೇಕ ಗೋತ್ರ ಪವರ್ತಕರಾದ ಮುನಿಗಳು ಆಗಿದ್ದಾರೆ. ಅವರ ಹೆಸರುಗಳು ಇಂತಿವೆ. ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿ, ವಾಯಷ್ಯ, ದಂಡಿ, ನಡಾಯನ, ವೈಗಾಯನ, ವೀತಹವ್ಯ ಪೈಲ, ಶೌನಕ, ಶೌನಕಾಯನ, ಚೀವಂತಿ, ಅವೇದ, ಕಾರ್ಪಣಿ, ವೈಹೀನರಿ, ವಿರೂಪಾಕ್ಷ, ರೋಹಿತ್ಯಾಯನಿ, ವೈಶ್ವಾನರಿ, ನೀಲ, ಲುಬ್ಧ, ಸಾವರ್ಣಿಕ, ವಿಷ್ಣು, ಪೌರ, ಬಾಲಾಕಿ, ಐಲಿಕ, ಭೃತ, ಭಾರ್ಗೇಯ, ಮಾರ್ಕಂಡ, ಮಂಡ, ಮಾಂಡವ್ಯ, ಮಂಡೂಕ, ಸ್ಥಲಿಕ, ಸ್ಥಲಪಿಂಡ, ಶಿಖಾವರ್ಣ, ಶಾರ್ಕರಾಕ್ಷಿ, ಜಾಲಧಿ, ಸೌಧಿಕ, ಕ್ಷುಭ್ಯ, ಕ್ಷಮ್ಯ, ಮೌದ್ಗಲಾಯನ, ಕರ್ಮಾಯನ, ದೇವಪತಿ, ಸಗಾಲವ, ಸಾಂಸ್ಕೃತ್ಯ, ಚಾತಕಿ, ಸಾರ್ಪಿ, ಯಜ್ಞಪಿಂಡಾಯನ, ಗಾರ್ಗಾಯನ, ಗಾಯನ, ಗಾರ್ಹಾಯನ, ಗೋಷ್ಠಯನ, ವಾತ್ಸ್ಯಾಯನ, ವೈಶಂಪಾಯನ, ವೈಕರ್ಣಿನಿ, ಶಾಂಕರವ, ಯಾಜ್ಞೇಯಿ, ಭಾಷ್ಟಕಾಯನಿ, ಲಾಲಾತಿ, ನಾಕುಲಿ, ತಾಕ್ಷಿಣ್ಯ, ಪರಿಮಂಡಲ, ಆಲುಕಿ, ಸೌಚಕಿ, ಕೌತ್ಸ, ವೈಂಗಲಾಯಿನಿ, ಸಾತ್ಯಾಯನಿ, ಮಾಲಾಯಿನಿ, ಕೌಟಲಿ, ಕೌಚಹಸ್ತಿಕ, ಸಕೌಭಾಕ್ಷಿ, ಕೌಸಿ, ಚಾಂದ್ರಮಸಿ, ನೈಕಜಿಹ್ವ, ಜಂಭಕ, ಶಾರದ್ವತಿ, ನೈತಿಷ್ಯ ಲೋಲಾಕ್ಷಿ, ಚರಕುಂಡಲ, ವಾಗಾಯಿನಿ, ಅನುಮತಿ, ಮುಂತಾದ ಅನೇಕ ಗೋತ್ರಕಾರರು ಆಗಿಹೋದರು. ಇವರೆಲ್ಲರಿಗೂ

"ಭೃಗುಶ್ಚ, ಚ್ಯವನಶ್ಚೈವ ಅಪ್ನುವಾನಸ್ತಥೈವಚ ।,
ಔರ್ವಶ್ಚ ಜಮದಗ್ನಿಶ್ಚ ಪಂಚೈತೇ ಪ್ರವರಾ ಮತಾಃ।"

ಎಂದು ಪಂಚಪ್ರವರುಗಳು ಇರುತ್ತವೆ.

ಇವರಲ್ಲದೆ, ಈ ಭೃಗುವಂಶದಲ್ಲಿ ಜಮದಗ್ನಿ, ವಿದ, ಪೌಲಸ್ತ್ಯ, ವೈಜಭೃತ, ಕಾಯನಿ, ಶಾಕಟಾಯನ ಮುಂತಾದ ಋಷಿಗಳು ಆಗಿಹೋದರು. "ಭೃಗುಶ್ಚ ಚ್ಯವನಶ್ಚೈವ, ಅಪ್ನುವಾನಸ್ತಥೈವಚ।'ಎಂದು ಪ್ರಸಿದ್ಧವಾದ ಈ ಪ್ರವರವುಳ್ಳ ಕುಲಗಳಲ್ಲಿ ಪರಸ್ಪರ ವಿವಾಹವು ಆಗಕೂಡದು.

ಭೃಗುದಾಸ, ಮಾರ್ಗಪಥ, ಗ್ರಾಮ್ಯಾಯನಿ, ನಿಕಟಾಯನಿ, ಅಪಸ್ತಂಭ, ಬಿಲ್ವಿ, ನೈಕಸಿಕಪಿ, ಗಾರ್ದಭಿ, ಕಾರ್ದಮಾಯನಿ, ಅಶ್ವಾಯನಿ, ತಥಾರೂಪಿ, ಎಂಬ ಋಷಿಗಳು ಈ ಭೃಗುಕುಲದ ಮತ್ತೆ ಕೆಲವು ಗೋತ್ರಕಾರರು. ಇವರೆಲ್ಲರಿಗೂ

"ಭೃಗುಶ್ಚ ಚ್ಯವನಶ್ಚೈವ ಆಪ್ನುವಾನಸ್ತಥೈವ ಚ !
ಆರ್ಷ್ಟಿಷೇಣ ಸ್ತಥಾರೂಪೀ ಪ್ರವರಾಃ ಪಂಚಕೀರ್ತಿತಾಃ।"

ಎಂದು ಪಂಚಪ್ರವರಗಳು ಇರುತ್ತವೆ. ಇವರಲ್ಲಿಯೂ ಪರಸ್ಪರ ವಿವಾಹ ಸಂಬಂಧವಾಗುವದಿಲ್ಲ.

ಜೈವಂತಾಯಿನಿ, ಮೌಂಜ, ಯಾಸ್ಕ, ವೀತಹವ್ಯ, ಮತಿಥ, ದಮ, ಪಿಲಿ, ಚಲಿ, ಭಾಗಿಲ, ಭಾಗವಿತ್ರಿ, ಕೌಶಾಪಿ, ಕಾಶ್ಯಪಿ, ಬಾಲಪಿ, ಶ್ರಮದಾಗೇಪಿ, ಸೌರ, ತಿಥಿ, ಗಾರ್ಗೀಯ. ಜಾಬಾಲಿ, ಪೌಷ್ಣಾಯನ, ಗ್ರಾಮದ ಎಂದು ಮತ್ತೆ ಕೆಲವರು ಇವರಲ್ಲಿ ಗೋತ್ರಕಾರ ಋಷಿಗಳಾಗಿದ್ದಾರೆ. ಇವರಿಗೆಲ್ಲ ''ಭೃಗುಶ್ಚ ವೀತ ಹವ್ಯಶ್ಚ ತಥಾರ್ಯ್ಯ ವಸವೈವಸೌ'' ಎಂದು ಪ್ರವರಗಳು ಇರುತ್ತವೆ. ಇವರಲ್ಲಿಯೂ ಪರಸ್ಪರ ಶರೀರ ಸಂಬಂಧವಿಲ್ಲ.

ಶಾಲಾಯನಿ, ಶಾಕಟಾಕ್ಷ, ಮೈತ್ರೇಯ, ಖಾಂಡವ, ದ್ರೋಣಾಯನ, ರೌಕ್ಮಾಯನ, ಕಾಯನಿ, ಹಂಸಜಿಹ್ವ ಎಂಬ ಅನೇಕ ಋಷಿಗಳು ಆಗಿ ಹೋದರು. ಇವರಿಗೆಲ್ಲ ''ಭೃಗು ಶ್ಚೈವಾಥ ವಧ್ರ್ಯಶ್ವೋ ದಿವೋದಾಸಸ್ತಥೈವಚ॥'' ಎಂದು ಪ್ರವರಗಳಿದ್ದು ಇವರಲ್ಲಿ ಪರಸ್ಪರ ವಿವಾಹಗಳಿಲ್ಲ.

ಏಕಾಯನ, ಯಜ್ಞಪತಿ, ಮತ್ಸ್ಯಗಂಧ, ಪ್ರತ್ಯೂಹ, ಸೌರಿ, ಚೌಕ್ಷಿ, ಕಾರ್ದಮಾಯಿನಿ, ಮದ, ಸನಕ ಮುಂತಾದವರು ಆಗಿ ಹೋದರು, ಇವರಿಗೆ- ''ಭೃಗುರ್ಗೃತ್ಸಮದಶ್ಚೈವ'' ಎಂದು ಪ್ರವರವಿದ್ದು ಇವರಲ್ಲೂ ಪರಸ್ಪರ ವೈವಾಹಿಕ ಸಂಬಂಧವಾಗುವದಿಲ್ಲ. ಇವರೆಲ್ಲರೂ ಭೃಗುವಂಶದಲ್ಲಿ ಹುಟ್ಟಿದ ಮಹಾನುಭಾವರಾದ ಗೋತ್ರ ಪ್ರವರ್ತಕ ಋಷಿಗಳು. ಇವರ ನಾಮೋಚ್ಚಾರದಿಂದ ಸಮಗ್ರ ಪಾಪ ರಾಶಿಯೆಲ್ಲವೂ ಕರಗಿಹೋಗುವದು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ನೂರತೊಂಬತ್ತಾರನೇಯ ಅಧ್ಯಾಯ ಮುಗಿದುದು*



## ಅಂಗಿರಸವಂಶದ ಋಷಿಗಳ ಹೆಸರು ಗೋತ್ರಪ್ರವರ ವರ್ಣನೆ

**ಅಧ್ಯಾಯ - ೧೯೭**

**ಮತ್ಸ್ಯ ಉವಾಚ :**

**''ಮರೀಚಿ ತನಯಾ ರಾಜನ್ ಸುರೂಪಾ ನಾಮ ವಿಶ್ರುತಾಃ।**
**ಭಾರ್ಯಾಚಾಂಗಿರಸೋ ದೇವಾಸ್ತಸ್ಯಾಃ ಪುತ್ರಾ ದಶ ಸ್ಮೃತಾಃ॥**

**ಮತ್ಸ್ಯ** :- ಮರೀಚಿ ಋಷಿಯ ಮಗಳಾದ ಸುರೂಪಾ ಎಂಬ ಕನ್ಯೆಯನ್ನು ಅಂಗಿರಸ ಋಷಿಗೆ ಧಾರೆಯೆರೆದು ಕೊಟ್ಟಿದ್ದನು. ಸುರೂಪಾದೇವಿಯಲ್ಲಿ ಅಂಗಿರಸ ಮಹರ್ಷಿಗಳಿಗೆ ಹತ್ತು ಜನ ದೇವತಾ ಪುತ್ರರು ಜನಿಸಿದರು. ಆತ್ಮ, ಆಯು, ದಮನದಕ್ಷ, ಸದ, ಪ್ರಾಣ, ಹವಿಷ್ಮಾನ್, ಗವಿಷ್ಠ, ಋತ, ಸತ್ಯ ಎಂದು ಆ ಮರೀಚಿ ಪುತ್ರರ ಹೆಸರು. ಈ ಎಲ್ಲ ದೇವತೆಗಳಿಗೂ ಆಂಗೀರಸರು ಎಂದೇ ಹೆಸರು. ಇವರೆಲ್ಲರೂ ಸೋಮಪಾನಮಾಡತಕ್ಕವರು. ಇವರ ನಂತರ ಸುರೂಪಾದೇವಿಯು ಬ್ರಹಸ್ಪತಿ, ಗೌತಮ, ಸಂವರ್ತ, ವಾಮದೇವ, ಆಜಸ್ಯ, ಋಷಜ, ಎಂಬ ಋಷಿ ಪುತ್ರರನ್ನು ಪಡೆದಳು. ಇವರೆಲ್ಲರೂ ಗೋತ್ರಪ್ರವರ್ತಕರಾದ ಋಷಿಗಳೇ. ಇವರ ವಂಶದಲ್ಲಿ ಹುಟ್ಟಿದ ಗೋತ್ರಪವರ್ತಕರಾದ ಹೆಸರುಗಳನ್ನು ಹೇಳುತ್ತೇನೆ ಕೇಳು.

ಉತಥ್ಯ, ಗೌತಮ, ಲೌಲೇಯ, ಅಭಿಜಿತ, ಸಾರ್ಧನೇಮಿ, ಸಲೌಗಾಕ್ಷಿ, ಕ್ಷೀರಕೌಷ್ಟಿಕಿ, ರಾಹುಕರ್ಣಿನ, ಸೌಪುರಿ, ಕೈರಾತಿ, ಸಾಮಲೋಮಕಿ, ಪೌಷಜತಿ, ಐರೀಡವ ಎಂಬ ಋಷಿಗಳಾದ ಕಾರೋಟಕ, ಸಂಜೀವಿ, ಉಪಬಿಂದು, ವಾಹಾನೀಪತ್ರಿ, ವೈಶಾಲಿ, ಕ್ರೋಷ್ಟಾ, ಅರುಣಾಯನಿ, ಸೋಮ, ತ್ರಾಯನಿ, ಕಾಸೋರು, ಕೀಶಲ್ಯ ಎಂಬುವ ಕೆಲವು ರಾಜರೂ ಆಗಿ ಹೋದರು. ರೋಹಿಣ್ಯಾಯನಿ, ಪಾಂಡು, ಕ್ಷಪಾವಿಶ್ವಕರ, ಅರಿ, ಪಾರಿಕಾರಾರಿ ಎಂಬ ಹೆಸರಿನ ರಾಜರ್ಷಿಗಳು ಈ ಆಂಗೀರಸ ವಂಶದಲ್ಲಿ ಉತ್ಪನ್ನರಾದರು. ಇವರಿಗೆಲ್ಲ ಅಂಗೀರಸ, ಉತಥ್ಯ, ಉಷಿಜ ಎಂಬ ತ್ರಿಪ್ರವರವಿದ್ದು, ಇವರಲ್ಲಿ ಪರಸ್ಪರ ಮದುವೆಯಾಗುವದಿಲ್ಲ.

ಆತ್ರೇಯಾಯಿನಿ, ಸೌವೇಷ್ಟ್ಯ, ಅಗ್ನಿವೇಶ್ಯ, ಶಿಲಾಸ್ಥಲಿ, ಬಾಲಿಶಾಯನಿ, ಚೈಕೇಪಿ, ವಾರಾಹಿ, ಬಾಷ್ಕಲಿ, ಸೌಟ, ತೃಣಕರ್ಣ, ಪ್ರಾವಹಿ, ಆಶ್ವಲಾಯನಿ, ವಾರಾಹಿ ಬರ್ಹಿಸಾದಿ, ಶಿಖಾಗ್ರೀವಿ, ಕಾರಕಿ, ಮಹಾಕಪಿ, ಉಡುಪತಿ, ಕೌಟಕಿ, ಧೂವಿರಿತೆ, ಪುಷ್ಪಾನ್ವೇ,, ಸೋಮತನ್ವಿ, ಬಾಲಡಿ, ಸಾಲಡಿ, ದೇವರಾರಿ, ದೇವಸ್ಥಾನಿ, ಹರಿಕರ್ಣ, ಸರದ್ರುವಿ, ಪ್ರಾವೇಪಿ, ಸುಗ್ರೀವಿ, ಗೋಮೇಧ, ಗಂಧಿಕ, ಮಚ್ಛಾಚ್ಛಾದ್ಯ, ಮೂಲಹರ, ಫಲಾಹರ, ಗಾಂಗೋದಧಿ, ಕೋರುಪತಿ, ಕೌರುಕ್ಷೇತ್ರಿ, ನಾಯಕಿ, ಚೈತ್ಯದ್ರೋಣಿ, ಜೈವ್ಹಲಾಯನಿ, ಅಪಸ್ಥಂಬಿ, ಮೌಂಜ, ವೃಷ್ಟಿ, ಮಾರ್ಷ್ಟಿಪಿಂಗಲಿ, ಪೈಲ, ಶಾಲಂಕಾಯನಿ, ದ್ವಾಷ್ಯೇಯ, ಮಾರುತ ಮುಂತಾದ ಗೋತ್ರಕಾರ ಮಹರ್ಷಿಗಳು ಆಗಿಹೋದರು. ಇವರಿಗೆ ಆಂಗಿರಸ, ಬೃಹಸ್ಪತಿ, ಭಾರದ್ವಾಜವೆಂದು ತ್ರ್ಯಾರ್ಷೀಯ ಪ್ರವರವಿದ್ದು ಇವರಿಗೆ ಪರಸ್ಪರ ವಿವಾಹ ಸಂಬಂಧವಾಗುವದಿಲ್ಲ.

ಕಾಣ್ವಾಯನ, ಕೋಪಚಯ, ವಾಚ್ಯತರಾಯಣ, ಭ್ರಾಷ್ಟಕೃತ, ರಾಷ್ಟಪಿಂಡಿ ಲೈಂದಾಣಿ, ಸಾಯಕಾಯನಿ, ಕ್ರೋಟಾಕ್ಷಿ, ಬಹುವೀತಿ, ತಾಲಕೃತ್, ಮಧರಾವಹ, ಲಾವಕೃತ್, ಗಾಲವಿತ್, ಗಾಂಧಿ, ಮಾರ್ಕಟ, ಪೌಲಿಕಾಯನಿ, ಸ್ಕಾಂದಸ, ಚಕ್ರಿ, ಗಾರ್ಗ್ಯ, ಶ್ಯಾಮಾಯನಿ, ಬಾಲಾಕಿ, ಸಾಹರೆ ಮುಂತಾದ ಮಹರ್ಷಿಗಳು ಉದ್ಭವಿಸಿದರು. ಈ ವಂಶದವರಿಗೆ ''ಅಂಗಿರಾಶ್ಚ ಮಹಾತೇಜಾ ದೇವಾಚಾರ್ಯೋ ಬೃಹಸ್ಪತಿಃ। ಭರದ್ವಾಜ ಸ್ತಥಾ ಗರ್ಗಃ ಸೈನ್ಯಶ್ಚ ಭಗವಾನೃಷಿಃ॥ ಎಂದು ಪಂಚಪ್ರವರಗಳಿದ್ದು ಇವರಲ್ಲಿ ಪರಸ್ಪರ ವಿವಾಹವಾಗುವಂತಿಲ್ಲ.

ಕಪೀತರ, ಸ್ವಸ್ತಿತರ, ದಾಕ್ಷಿ, ಶಕಿ, ಪತಂಜಲಿ, ಭೂಯಸಿ, ಜಲ, ಸಂಧಿ, ವಿಂದು, ಮಾದಿ, ಕುಶೀದರೆ, ಊರ್ವ, ರಾಜಕೇಶ, ವೌಷಲಿ, ಶೌಸಪಿ, ಶಾಲಿ, ಕಲಶೀಕಂಠ, ಕಾರೀರಯ, ಋಷಿಕಾಟ್ಯ, ಧಾನ್ಯಾಯನಿ, ಭಾವಾಸ್ಯಾಯನಿ, ಭಾರದ್ವಾಜಿ, ಸೌಬುಧಿ ಮುಂತಾದ ಮಹರ್ಷಿಗಳು ಜನಿಸಿದರು. ಇವರಿಗೆಲ್ಲ ''ಅಂಗಿರಾ ದಮಬಾಹ್ಯಶ್ಚತಥಾ ಚೈವಾಪ್ಯುರುಕ್ಷಯಃ'' ಎಂದು ತ್ರಿಪ್ರವರವುಂಟು.

ಪರಸ್ಪರಾಯಣಿ, ಅಪರ್ಣ, ತಾಕ್ಷಿ, ಗಾರ್ಗ್ಯ, ಹರಿ, ಶಾಲವಿ, ಮುಂತಾದ ಋಷಿ ಕುಲದವರಿಗೆ 'ಅಂಗಿರಾ' ಸಂಕೃತಿ, ಗೌರವೀತಿ, ಎಂದು ತ್ರಿಪ್ರವರ ಉಂಟು. ಇದರಂತೆ ಅಂಗಿರಾ, ಬೃಹದುಕ್ಥ, ವಾಮವೇವ, ಎಂಬ ತ್ರಿಪ್ರವರದವರಿಗೂ ಮದುವೆ

ಯಾಗುವದಿಲ್ಲ. ಇದರಂತೆ ರಥೀತರ ಕುಲದವರಿಗೆ ಅಂಗಿರಾ, ವಿರೂಪ ರಥೀತರ ಎಂದು ತ್ರಿಪವವಿದ್ದು, ಪರಸ್ಪರ ವಿವಾಹವಿಲ್ಲ. ಶಿವಮತಿ, ವಿಷ್ಣುವೃದ್ಧಿ, ಜತ್ರಣ, ಕತ್ರಣ, ಪುತ್ರವ, ಮಹಾತೇಜ, ವೇದ, ಪರಾಯಣ ಮುಂತಾದ ಋಷಿಕುಲದವರು ಅಂಗಿರ, ಮಚ್ಛ್ಯದಗ್ಧ್ಯ, ಮುದ್ಗಲ ಎಂಬ ತ್ರಿಪ್ರವರ ಉಳ್ಳವರು.

ಅಗ್ನಿಜಿವ್ಹ, ಹಂಸಜಿವ್ಹ, ದೇವಜಿವ್ಹ, ವಿರಾತಪ, ಅಸಾಗ್ನೆಯ, ಅಶ್ವಯು, ಮೌದ್ಗಲ, ಪರಣ್ಯನ್ರಾವಿ, ಮುಂತಾದ ಋಷಿಗಳ ವಂಶಜರಿಗೆಲ್ಲ ಅಂಗೀರಸತಾಂತಿ, ಮೌದ್ಗಲ್ಯ ಎಂಬ ತ್ರಿಪ್ರವರ ಉಂಟು. ಆರುಪಾಂಡು, ಗುರು, ಶಾಕಟಾಯನ, ಮತ್ತು ಪ್ರಾಗಾಥಮಾ ಎಂಬ ಸ್ತ್ರೀಋಷಿ, ಮಾರ್ಕಂಡ, ಶಿವ, ಕಟುಮರ್ಕಟಪ, ನಾಡಾಯನ, ಶ್ಯಾಮಾಯಾನ, ಮುಂತಾದ ಗೋತ್ರಕಾರ ಮುನಿಗಳ ವಂಶದವರಿಗೆ ಅಂಗಿರ, ಅಜಮೀಢ, ಕಟ್ಯ, ಎಂಬ ಮೂರು ಋಷಿಗಳ ಪ್ರವರವು ಇರುತ್ತದೆ. ಈ ಋಷಿಗೋತ್ರದವರಿಗೆ ಪರಸ್ಪರ ವಿವಾಹವಿಲ್ಲ. ತಿತ್ತರಿ, ಕವಿಭೂ, ಗಾರ್ಗ್ಯ ಎಂದು ಗೋತ್ರಕಾರ ಮಹರ್ಷಿಗಳಾದರು. ಅವರಿಗೆಲ್ಲ ''ಅಂಗಿರಾಸ್ತಿರಶ್ಚೈವ ಕವಿಭೂಶ್ಚ ಮಹಾನ್ ಋಷಿಃ'' ಎಂದು ತ್ರಿಪ್ರವರವು ಹೇಳಲ್ಪಟ್ಟಿದೆ. ಇದರಂತೆ ಋಷಿ ಭರದ್ವಾಜ, ಋಷಿವಾನ್ ಮಾನವ, ಮೈತ್ರವರ ಮುಂತಾದ ಮಹರ್ಷಿಗಳು ಗೋತ್ರಕಾರರು ಆಗಿಹೋದರು. ಅವರಿಗೆಲ್ಲ ಅಂಗಿರ, ಭರದ್ವಜ, ಬೃಹಸ್ಪತಿ, ಮಿತ್ರವರ, ಮಾನವ ಈ ಪಂಚ ಪ್ರವರ ಉಂಟು.

ಭಾರದ್ವಾಜ, ಹೃತ ಶೈಶರೇಯ ಮುಂತಾದ ಹಲವು ದ್ವಾಮುಷಾಯಣ ಗೋತ್ರದ ಋಷಿಗಳು ಆಗಿ ಹೋದರು. ಇವರಿಗೆಲ್ಲ ಅಂಗಿರ, ಭರದ್ವಾಜ, ಬೃಹಸ್ಪತಿ, ಮೌದ್ಗಲ್ಯ, ಶೈಶಿರ ಎಂದು ಪಂಚಪ್ರವರಗಳಿರುತ್ತವೆ. ಇವರೆಲ್ಲರೂ ಆಂಗೀರಸ ವಂಶದ ಗೋತ್ರದಲ್ಲಿ ಹುಟ್ಟಿದ ಗೋತ್ರಕಾರ ಮಹರ್ಷಿಗಳು. ಇವರ ಹೆಸರುಗಳನ್ನು ಪಠಿಸುವದರಿಂದ ಮಾನವರು ಮಾಡಿದ ಸರ್ವಪಾಪಗಳು ಬಿಟ್ಟುಹೋಗುತ್ತವೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಬತ್ತೇಳನೆಯ ಅಧ್ಯಾಯ ಮುಗಿದುದು*

—o—

## ಅತ್ರಿವಂಶದ ಋಷಿಗಳ ಹೆಸರು ಮತ್ತು ಗೋತ್ರಪ್ರವರ ವರ್ಣನೆ

**ಅಧ್ಯಾಯ - ೧೯೮**

**ಮತ್ಸ್ಯ ಉವಾಚ :**

**ಅತ್ರಿವಂಶ ಸಮುತ್ಪನ್ನಾನ್ ಗೋತ್ರಕಾರಾನ್ನಿಬೋಧ ಮೇ॥**
**ಕರ್ದಮಾಯನ ಶಾಖೇಯಾಸ್ತಥಾ ಶಾರಾಯಣಾಶ್ಚ ಯೇ॥**

**ಮತ್ಸ್ಯ:**- ಅತ್ರಿವಂಶದಲ್ಲಿ ಹುಟ್ಟಿದ ಗೋತ್ರಕಾರರನ್ನು ಹೇಳುತ್ತೇನೆ ಕೇಳು- ಇದರಂತೆ ಕರ್ದಮಾಯನ, ಶಾರಾಯಣ, ಶಾಖೆಯನ್ನು ಹೇಳುತ್ತೇನೆ. ಶೌಣಿ, ಉದ್ದಾಲಕಿ, ಕರ್ಣರಥ, ಶೌಕ್ರತವ, ಗೌರಗ್ರೀವ, ಗೌರಾಜನ, ಚೈತ್ರಾಯನ, ಅರ್ಧಪಣ್ಯ, ವಾಮರಥ್ಯ, ಗೋಪವನ, ಆಸಕ್ರಿಬಿಂದು, ಹರಪ್ರೀತಿ, ನೈದ್ರಾಣಿ ಶಾಕಲಾಯನಿ, ತೈಲಾಪ, ಗೋಣೀಪತಿ, ಜಲದ, ಭಗಪಾದ, ಸೌಪಷ್ಟೀಛಂದೋಗೇಯ ಮುಂತಾದ ಗೋತ್ರಕಾರ ಋಷಿಗಳು ಅತ್ರಿ ವಂಶದಲ್ಲಿ ಜನಿಸಿದರು. ಇವರಿಗೆಲ್ಲ ಶ್ಯಾವಾಶ್ವ, ಅತ್ರಿ, ಅರ್ಚನಾನಸ, ಎಂದು ತ್ರಿಪ್ರವರ ಇದೆ. ಪರಸ್ಪರ ವಿವಾಹವಿಲ್ಲ.

ದಾಕ್ಷಿ, ಬಲಿ, ಪರ್ಣವಿ, ಉರ್ಣನಾಭಿ, ವೀಜವಾಪಿ, ಮೌಂಜಕೇಶ, ಗವಿಷ್ಠಿರ, ಭಲಂದನ ಮುಂತಾದ ಗೋತ್ರಕಾರ ಋಷಿಗಳು ಅತ್ರಿ, ಗವಿಷ್ಠರ, ಪೂರ್ವತಿಥಿ ಎಂಬ ತ್ರಿಪ್ರವರ ಉಳ್ಳವರಾಗಿದ್ದಾರೆ. ಇನ್ನು ಅತ್ರಿವಂಶದ ದೌಹಿತ್ರ ಸಂತತಿಯ ಋಷಿಗಳನ್ನು ಹೇಳುತ್ತೇನೆ ಕೇಳಿರಿ- ಕಾಲೇಯ, ಸಾವಾಲೇಯ, ಆಸರಥ್ಯ, ಧಾತ್ರೇಯ, ಮೈತ್ರೇಯ, ಎಂಬ ಮಹರ್ಷಿಗಳು ಈ ಅತ್ರಿ ವಂಶದಲ್ಲಿ ಜನಿಸಿದರು. ಇವರಿಗೆಲ್ಲ ಅತ್ರಿ, ವಾಮರಥ್ಯ, ಪೌತ್ರಿ, ಎಂಬ ತ್ರಿಪ್ರವರವಿದೆ. ಈ ವಂಶದಲ್ಲಿ ಪರಸ್ಪರ ವಿವಾಹವಿಲ್ಲ. ಇವರೆಲ್ಲರೂ ಅತ್ರಿವಂಶದ ಮಹಾನುಭಾವರಾದ ಗೋತ್ರಕಾರ ಮಹರ್ಷಿಗಳು. ಇವರ ನಾಮ ಕೀರ್ತನದಿಂದ ಮಾನವನಿಗೆ ಮಾಡಿದ ಎಲ್ಲ ಪಾಪಗಳಿಂದ ಬಿಡುಗಡೆ ನಿಶ್ಚಿತ.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಬತ್ತೆಂಟನೆಯ ಅಧ್ಯಾಯ ಮುಗಿದುದು*

—o—

ಕುಶಿಕ ವಂಶದ ಋಷಿಗಳ ಹೆಸರು
ಗೋತ್ರಪ್ರವರ ವರ್ಣನೆ

ಅಧ್ಯಾಯ - ೧೯೯

<u>ಮತ್ಸ್ಯ ಉವಾಚ :</u>

**ಅತ್ರೇರೇವಾಪರಂ ವಂಶಂ ತವ ವಕ್ಷ್ಯಾಮಿ ಪಾರ್ಥಿವ।**
**ಅತ್ರೇಃ ಸೋಮಃ ಸುತಃ ಶ್ರೀಮಾಂಸ್ತಸ್ಯ ವಂಶೋದ್ಭವೋ ನೃಪಃ॥**

**ಮತ್ಸ್ಯ:-** ಅತ್ರಿಮುನಿಯಿಂದ ಇನ್ನೊಂದು ವಂಶವು ಬೆಳೆದು ಪ್ರಸಿದ್ಧಿ ಹೊಂದಿತು. ಆ ವಂಶದ ಗೋತ್ರಕಾರರ ಋಷಿಗಳ ಹೆಸರು ಹೇಳುತ್ತೇನೆ ಕೇಳು.

ಅತ್ರಿ ಋಷಿಯ ವಂಶವನ್ನು ಅವರ ಮಗನಾದ ಚಂದ್ರನು ಬಹುವಿಧವಾಗಿ ಬೆಳೆಸಿದನು. ಅದೇ ವಂಶದಲ್ಲಿ ವಿಶ್ವಾಮಿತ್ರ ಋಷಿಯು ಕ್ಷತ್ರಿಯನಾಗಿದ್ದರೂ ತನ್ನ ತಪೋಬಲದಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿ ಗೋತ್ರಪ್ರವರ್ತಕ ಮಹಾಮುನಿ ಎನಿಸಿದನು. ಅವನ ವಂಶವು ಬಿತ್ತರಗೊಂಡ ಬಗೆಯನ್ನು ಹೇಳುತ್ತೇನೆ ಕೇಳು:

ವಿಶ್ವಾಮಿತ್ರ, ದೇವರಾತ, ವೈಕೃತಿ, ಗಾಲವ, ವತಂಡ, ಸಲಂಕ, ಅಭಯ, ಆಯತಾಯನ, ಶಾಮಾಯನ; ಯಾಜ್ಞವಲ್ಕ್ಯ, ಜಾಬಾಲ, ಸೈಂಧವಾಯನ, ಬಾಭ್ರವ್ಯ, ಕರೀಷ, ಸಂಸ್ರತ, ಉಲೂಪ, ಔಪಗಹಯ, ಪಯೋದ, ಜನಪಾದಪ, ಖರವಾಚ, ಹಲಯಮ, ಸಾಧಿತ ಮತ್ತು ಕೌಶಿಕ ಮುಂತಾದ ಋಷಿಗಳ ವಂಶಗಳು, ಈ ವಿಶ್ವಾಮಿತ್ರ ಕುಲದಲ್ಲಿ ಪ್ರಸಿದ್ಧಿಪಡೆದವು. ಇವರಿಗೆ ವಿಶ್ವಾಮಿತ್ರ, ದೇವರಾತ, ಉದ್ದಾಲ ಎಂಬ ತ್ರಿಪ್ರವರವಿದೆ. ಈ ವಂಶದಲ್ಲಿ ಪರಸ್ಪರ ವಿವಾಹ ಸಂಬಂಧವಿಲ್ಲ. ಇವರಲ್ಲದೆ, ದೇವಶ್ರವ, ಸುಜಾತೇಯ, ಕಾರುಕಾಯನ, ಸೌಸುಕ, ವೈದೇಹ ರಾತ, ಕುಶಿಕ, ಎಂಬ ಗೋತ್ರದವರಿಗೆ ದೇವಶ್ರವ, ದೇವರಾತ, ವಿಶ್ವಾಮಿತ್ರ, ಎಂಬ ತ್ರಿಪ್ರವರ ಉಂಟು.

ಧನಂಜಯ, ಕಪರ್ದೇಯ, ಪರಿಕೂಟ, ಪಾಣಿನಿ, ಎಂಬ ಋಷಿವಂಶದವರಿಗೆ ವಿಶ್ವಾಮಿತ್ರ, ಮಧುಚ್ಛಂದ, ಅಘಮರ್ಷಣ ಎಂದು ತ್ರಿಪ್ರವರವಿದೆ. ಮತ್ತು ಕಾಮಲಾಯಜಿನ, ಆಶ್ಮರಥ್ಯ, ಚಂಚುಲಿ, ಎಂಬ ಋಷಿಕುಲದವರಿಗೆ ವಿಶ್ವಾಮಿತ್ರ ಆಶ್ಮರಥ್ಯ, ಚಂಚುಲಿ, ಎಂದು ತ್ರಿಪ್ರವರ. ಲೋಹಿತ, ಅಷ್ಟಕ, ಪೂರಣ, ಎಂಬ ವಿಶ್ವಾಮಿತ್ರ ಗೋತ್ರದ ಋಷಿಗಳ ವಂಶದವರಿಗೆ ವಿಶ್ವಾಮಿತ್ರ ಲೋಹಿತ, ಅಷ್ಟಕ ಎಂದೂ ವಿಶ್ವಾಮಿತ್ರ, ಲೋಹಿತ, ಪೂರಣ ಎಂದೂಎರಡು ಪ್ರವರಗಳು ಇರುತ್ತವೆ. ಇವರ ಜೊತೆಗೆ ಶರೀರ ಸಂಬಂಧ ಮಾಡುವವರು ಎರಡೂ ಗೋತ್ರ, ಪ್ರವರಗಳನ್ನು ಬಿಡಬೇಕಾಗುವದು. ಅಷ್ಟಕಗೋತ್ರ ಹಾಗೂ ದೌಹಿತಗೋತ್ರದವರಿಗೆ ವಿವಾಹವಾಗುವುದಿಲ್ಲ. ಉದರೇಣು, ಕೃಥಕ, ಉದಾವಹಿ, ಶಾಟ್ಯಾಯಿನಿ, ಕರೀರಾಶಿ, ಕಾಲಂಕಾಯಿನಿ, ಲಾವಕಿ, ಮೌಂಜಾಯನಿ ಮುಂತಾದ ಗೋತ್ರಕಾರ ಋಷಿಗಳ ವಂಶಜರಿಗೆ ಬಿಲಿಬಿಲಿ, ತಥಾವಿದ್ಯ, ವಿಶ್ವಾಮಿತ್ರವೆಂದು ತ್ರಿಪ್ರವರ ಇರುತ್ತದೆ. ಇವರಲ್ಲಿ ವಿವಾಹ ಸಂಬಂಧವಿಲ್ಲ. ನಾಮಸ್ಮರಣ ಮಾತ್ರದಿಂದಲೇ ಪಾಪ ಪರಿಹಾರ ಮಾಡುವ ಮಹಾನುಭಾವರಾದ ವಿಶ್ವಾಮಿತ್ರಕುಲದ ಮಹರ್ಷಿಗಳ ಗೋತ್ರ ಪ್ರವರಗಳನ್ನು ನಿಮಗೆ ನಾನು ಹೇಳಿದೆನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರತೊಂಬತ್ತೊಂಬತ್ತನೆಯ ಅಧ್ಯಾಯ ಮುಗಿದುದು*

## ಕಶ್ಯಪ ವಂಶದಲ್ಲಿಯ ಋಷಿಗಳ ಹೆಸರು, ಗೋತ್ರಪ್ರವರದ ವರ್ಣನೆ

**ಅಧ್ಯಾಯ - ೨೦೦**

**ಮತ್ಸ್ಯ ಉವಾಚ :**

**ಮರೀಚೇಃ ಕಶ್ಯಪಃ ಪುತ್ರಕಶ್ಯಪಸ್ಯ ತಥಾ ಕುಲೇ।**
**ಗೋತ್ರಕಾರಾನ್ ಋಷೀನ್ ವಕ್ಷ್ಯೇ ತೇಷಾಂ ನಾಮಾನಿ ಮೇ ಶ್ರುಣು॥**

**ಮತ್ಸ್ಯ:-** ಮರೀಚಿ ಮಹರ್ಷಿಯ ಮಗನಾದ ಕಶ್ಯಪ ಋಷಿಯ ಕುಲದಲ್ಲಿ ಹುಟ್ಟಿದ ಗೋತ್ರಕಾರ ಋಷಿಗಳ ಹೆಸರು ಹೇಳುವೆನು, ಕೇಳು:

ಆಶ್ರಾಯಣಿ, ಮೇಷ, ಕಿರೀಟಕಾಯನ, ಜಾಮಾತರ, ಶಾಲಾಹಲೇಯ, ಕೌರಿಷ್ಠಿ, ಅಸುರಾಯನ, ದೇವಯಾನ, ಗೋಮಯಾನ, ಅಧಶ್ಛಾಯ, ರಕ್ಷಾಯ, ಕಾತ್ಯಾಯನ, ಶಾಕ್ರಯಾನ, ಬರ್ಹಿಯೋಗ, ಗದಾಯನ, ಭವನಂದಿ, ಮಹಾಚಕ್ರಿ, ದಾಕ್ಷಪಾಯನ, ಯೋಧಯಾನ, ಕಾರ್ತವಯ, ಹಸ್ತಿದಾನ, ವಾಚ್ಛಾಯನ, ಅಶ್ವಲಾಯನ, ಪ್ರಗಾಯನ, ಪೌಲ, ಮೌಲಿ, ಮೇಷಪ, ವಾತಾಯನ, ಕೌವೇರಕ, ಶ್ಯಾಕಾರ, ಅಗ್ನಿಶರ್ಮಾಯನ, ಕೈಕರಸಪ, ವಭ್ರು, ಪಾಟೀಯ, ಜ್ಞಾನಸಂಜ್ಞೇಯ, ಅಗ್ನಾ, ಪ್ರಸೇವ್ಯ, ಶ್ಯಾಮೋದರ, ವೈವಶಪ, ಉದ್ವಲಾಯನ, ಕಾಷ್ಠಾಹಾರಿ, ಮಾರೀಚ, ಅಜಿಹಾಯನ, ಹಸ್ತಿಕ, ವೈಕರ್ಣೇಯ ಕಾಶ್ಯಪೇಯ, ಹಾರಿತಾಯನ ಮಾತಂಗಿ ಮುಂತಾದ ಋಷಿಗಳು ಈ ಕಶ್ಯಪ ವಂಶದಲ್ಲಿ ಹುಟ್ಟಿದರು. ಇವರೆಲ್ಲರೂ ವತ್ಸರ ಕಶ್ಯಪ, ನಿಧ್ರುವ, ಎಂದು ತ್ರಿಪ್ರವರಾನ್ವಿತರು.

ಇದೇ ಕಶ್ಯಪ ವಂಶದ ಅನುಸೂಯ, ನಾಕುರಯ, ಸ್ನಾತಪ, ರಾಜವರ್ತಪ, ಶೈಶಿರ, ಉದವಧಿ, ಔಪಸೇವಕಿ, ಕಾದ್ರು, ಪಿಂಗಾಕ್ಷಿ, ಸುಜಾತಮ್ವಿ, ದಿವಾಷಷ್ಠಾಶ್ವ, ಯಾಮುನಿ, ಮಹಾತಪ, ಮುಂತಾದ ಋಷಿಗಳು ದ್ವಾಮುಷ್ಯಾಯನ ಗೋತ್ರೋತ್ಪನ್ನ ರಾಗಿದ್ದಾರೆ. ಇವರಿಗೆ ವತ್ಸರ, ಕಾಶ್ಯಪ, ವಶಿಷ್ಠ ಎಂದು ಪ್ರವರಗಳು ಇರುತ್ತವೆ.

ಸಂಯಾತಿ, ನಭ, ಪಿಪ್ಪಲ್ಯ, ಜಲಂಧರ, ಭುಜಾತಪೂರ, ಕರ್ದಮ, ಗರ್ಧಭೀ ಮುಖ, ಹಿರಣ್ಯಬಾಹು, ಕಾಸ್ಯಪ, ಗೋಭಿಲ, ವೃಷಕಂಡ, ಮೃಗಕೇತು, ಶಾಂಡಿಲ್ಯ ಕುಲಹ, ನಿದಾಘು, ಮಸ್ಯಣ, ಪ್ರೆಪ್ಪಲ, ಭತ್ಸ್ಯ, ಮುಂತಾದ ಗೋತ್ರಪ್ರವರ್ತಕರಾದ ಋಷಿಗಳು ಈ ಕಶ್ಯಪ ಕುಲದಲ್ಲಿ ಹುಟ್ಟಿದರು. ಇವರಿಗೆಲ್ಲ ಅಸಿತ, ದೇವಲ, ಕಶ್ಯಪರೆಂದು ತ್ರಿಪ್ರವರಗಳು ಉಂಟು. ಇವರಲ್ಲಿ ಪರಸ್ಪರ ಶರೀರಸಂಬಂಧವಾಗುವಂತಿಲ್ಲ. ಈ ಕಶ್ಯಪ ಮುನಿಗೆ ದಕ್ಷಪ್ರಜಾಪತಿಯು ಮದುವೆ ಮಾಡಿಕೊಟ್ಟ ಹೆಣ್ಣುಮಕ್ಕಳಿಂದ ಬಗೆ ಬಗೆಯ ಜಾತಿಯ ಪ್ರಾಣಿಗಳು ಹುಟ್ಟಿ ಜಗತ್ತನ್ನೆಲ್ಲ ತುಂಬಿದವು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರನೆಯ ಅಧ್ಯಾಯ ಮುಗಿದುದು*

—○—

# ವಶಿಷ್ಠ ವಂಶದ ಬ್ರಾಹ್ಮಣರು

ಅಧ್ಯಾಯ - ೨೦೧

**ಮತ್ಸ್ಯ ಉವಾಚ:**

**ವಾಶಿಷ್ಠವಂಶಜನಾನ್ ವಿಪ್ರಾನ್ ನಿಭೋಧ ವದತೋ ಮಮ ।**
**ಏಕಾರ್ಷೇಯಸ್ತು ಪ್ರವರೋ ವಾಶಿಷ್ಠಾನಾಂ ಪ್ರಕೀರ್ತಿತಃ॥**

ಮತ್ಸ್ಯ:- ವಶಿಷ್ಠವಂಶದ ಬ್ರಾಹ್ಮಣರನ್ನು ಹೇಳುತ್ತೇನೆ ಕೇಳು. ವಶಿಷ್ಠ ಗೋತ್ರದವರಿಗೆ ಒಂದು ಋಷಿಯ ಹೆಸರಿನಿಂದ ಪ್ರವರ ಇರುತ್ತದೆ. ವಶಿಷ್ಠ ಎಂದೂ ವಾಶಿಷ್ಠ ಎಂದೂ ಇವರ ಪ್ರವರ. ಇವೆರಡೂ ಪ್ರವರದವರಲ್ಲಿ ವಿವಾಹವಾಗುವದಿಲ್ಲ ವ್ಯಾಘ್ರಪಾದ, ಅವ್ವೈಕ್ಲವ, ಶಾದ್ವಲಾಯನ, ಕಪಿಷ್ಠಲ, ಔಪಗವ, ಔಪಹೋಮ, ಅಲಬ್ಧ, ಷಠ, ಕಠ, ಗೌಪಯಾನ, ಬೋಧಪ, ವಾಹ್ಯಕ, ವಾಲಿಶಯ, ಅರ್ವಾಗ್ಗ್ರಂಥಿ, ಅಪಸ್ಥೂಣ, ಸೀತವೃತ, ಬ್ರಾಹ್ಮಪುತ್ರೀಯಕ, ಲೋಮಾಯನ, ಸ್ವಸ್ತಿಕರ, ಶ್ಯಾಂಡಿಲಿ, ಗೌಡಿನಿ, ವಾಡೋಹಲಿ, ಸುಮನ, ಉಪಾವೃದ್ಧಿ, ಚೌಲಿ, ವೌಲಿ, ಬ್ರಹ್ಮಬಲ, ಪೌಲಿ, ಶ್ರವಸ, ಪೌಡವ, ಯಾಜ್ಞವಲ್ಕ, ಇವರೆಲ್ಲರೂ ಏಕರ್ಷೇಯ ಪ್ರವರವುಳ್ಳ ಗೋತ್ರಪ್ರವರ್ತಕ ಮಹರ್ಷಿಗಳು. ಇವರೆಲ್ಲರಿಗೂ 'ವಶಿಷ್ಠ' ಎಂದೇ ಪ್ರವರ. ಇವರಲ್ಲಿ ವಿವಾಹವಿಲ್ಲ.

ಶೈಲಾಲಯ, ಮಹಾಕರಣ, ಕೌರವ್ಯ, ಕ್ರೋಧಿ, ಕಪಿಂಜಲ, ವಾಲಖಿಲ್ಯ, ಭಾಗವಿತ್ತಾಯನ, ಕೀಲಾಯನ, ಕಾಲಶಿಖ, ಕ್ರೋರಕೃಷ್ಣ, ಸುರಾಯಣ, ಶಾಕಾಹಾರ್ಯ, ಶಾಕಧಿ, ಕಾಣ್ವ, ಉಪಲಪ, ಉಹಾಕ, ಮಾಷ, ಶಾಕಾಯನ, ಶರಾವಿ, ದಾಕಾಯನ, ವಾಲವಿ, ಅವಾಕಿ, ಗೋರಥ, ಲಂಬಾಯನ, ಚಕೋಡ, ಉದಾರಯಣ, ಪ್ರಲಂಬಾಯನ, ಔಪಮನ್ಯ, ಸಾಂಖ್ಯಾಯನ, ವೇದಶೇರಕ, ಪಾಲಂಕಾಯನ, ಉದ್ಗಾಹ, ಬಲೇಷು, ಮಾತೇಯ, ಬ್ರಹ್ಮಬಲಿ, ಪರ್ಣಾಗಾಲಿ, ಎಂದೂ ಅನೇಕ ಋಷಿಗಳು ಉತ್ಪನ್ನರಾದರು. ಇವರೆಲ್ಲರೂ ತ್ರ್ಯಾರ್ಷೇಯ ಪ್ರವರದವರು. ಅಂದರೆ ಇವರ ಪ್ರವರದಲ್ಲಿ ಮೂರು ಋಷಿಗಳು ಇರುತ್ತಾರೆ ಎಂದರ್ಥ. 'ಭಗೀವಸು, ವಶಿಷ್ಠ, ಇಂದ್ರಪ್ರಮತಿ, ಎಂದು ತ್ರಿಪ್ರವರಾನ್ವಿತರು. ಇವರೆಲ್ಲರು. ಇವರ ಸಂತತಿಯಲ್ಲಿ ಪರಸ್ಪರ ಮದುವೆಯಿಲ್ಲ.

ಔಪಸ್ಥಲ, ಅಸ್ವಸ್ಥಲ, ಪಾಲ, ಹಾಲ, ಹಲ, ಮಾಧ್ಯಂದಿನ, ಮಾಕ್ಷತಯ, ಪೈಪ್ಪಲಾದಿ, ವಿಚಕ್ಷು, ತ್ರೈಶೃಂಗಾಯನ, ಸೈವಲ್ಕ, ಕುಂತಿನ ಮುಂತಾದವರಿಗೆಲ್ಲ ವಶಿಷ್ಠ ಮಿತ್ರಾವರುಣ ಕುಂತಿನ ಎಂದು ತ್ರಿಪ್ರವರವಿದೆ.

ಶಿವಕರ್ಣ, ವಯ, ಪಾದಪ ಮುಂತಾದ ಕುಲದವರಿಗೆ ಚಾತೂಕರ್ಣ್ಯ, ವಶಿಷ್ಠ, ಅತ್ರಿ ಎಂದು ತ್ರಿಪ್ರವರ ಇದೆ. ಇವರೆಲ್ಲರೂ ವಶಿಷ್ಠ ವಂಶದ ಪ್ರಧಾನ ಋಷಿಗಳು. ಇವರ ಹೆಸರು ಹೇಳುವದರಿಂದ ಪಾಪ ಪರಿಹಾರವಾಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರಒಂದನೆಯ ಅಧ್ಯಾಯ ಮುಗಿದುದು*

—○—

**ಮತ್ಸ್ಯ ಉವಾಚ :**

**ವಶಿಷ್ಠಸ್ತು ಮಹಾತೇಜಾ ನಿಮೇಃ ಪೂರ್ವ ಪುರೋಹಿತಃ।**
**ಬಭೂವ ಪಾರ್ಥಿವಶ್ರೇಷ್ಠ! ಯಜ್ಞಾಸ್ತಸ್ಯ ಸಮಂತತಃ॥**

ಮತ್ಸ್ಯ:- ಮಹಾತೇಜಸ್ವಿಯಾದ ವಶಿಷ್ಠ ಮುನಿಯು ನಿಮಿರಾಜನಿಗೆ ಮೊದಲು ಪುರೋಹಿತನಾಗಿದ್ದನು. ವಶಿಷ್ಠರ ಪೌರೋಹಿತ್ಯದಲ್ಲಿ ನಿಮಿಮಹಾರಾಜನು ಎಲ್ಲೆಡೆಗೂ ಅನೇಕ ಯಜ್ಞಗಳನ್ನು ಮಾಡಿಸಿ ವಶಿಷ್ಠರಿಗೆ ತುಸು ದಣಿವು ಆಗಿತ್ತು. ಅವರು ತುಸು ಮಿಶ್ರಮಿಸಿದರು. ಆಗ ರಾಜೇಶ್ವರನಾದ ನಿಮಿಯು ಅವರ ಬಳಿಗೆ ಹೋಗಿ ಮಾತನಾಡಿದನು

''ಪೂಜ್ಯರೆ, ಮತ್ತೆ ನನಗೆ ಯಜ್ಞ ಮಾಡಬೇಕೆಂದು ಇಚ್ಛೆಯಾಗಿದೆ. ಕೂಡಲೇ ಯಜ್ಞವನ್ನು ಮಾಡಿಸಿರಿ'' ಅದಕ್ಕೆ ವಶಿಷ್ಠರು ಆ ನೃಪೋತ್ತಮನಿಗೆ ಹೇಳಿದರು. 'ಮಹಾರಾಜಾ, ನಿನ್ನ ಕಡೆಯಿಂದ ಅನೇಕಾನೇಕ ದೊಡ್ಡ ಯಜ್ಞ ಮಾಡಿಸಿ ನನಗೆ ಬಹಳ ಆಯಾಸವಾಗಿದೆ. ಇದೀಗ ತುಸು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದೇನೆ. ತುಸು ತಡೆ, ದಣಿವು ಆರಿಸಿಕೊಂಡು ಮತ್ತೆ ಹೊಸ ಯಜ್ಞ ಕಾರ್ಯ ಪ್ರಾರಂಭಿಸುವೆನು.'

ವಶಿಷ್ಠರ ಈ ನುಡಿಗಳನ್ನು ಕೇಳಿ, ನಿಮಿರಾಜನು ನಿಷ್ಠುರವಾಗಿ ನುಡಿದನು. ''ಗುರುಗಳೇ, ಧರ್ಮಕಾರ್ಯಗಳಿಗೆ ನಾಳೆ, ಮುಂದೆ, ಎಂದು ವಿಲಂಬ ಮಾಡಬಾರದು. ಯಮನಿಗೂ ನಮಗೂ ಏನಾದರೂ ನೆಂಟಸ್ತಿಕೆ ಇದೆಯೆ? ನಮ್ಮ ಜೀವನವೇನು ಶಾಶ್ವತವೇ? ದೇಹವು ಗಟ್ಟಿಯಿರುವಾಗಲೇ ಧರ್ಮಕಾರ್ಯಗಳನ್ನು ಮಾಡಿ ಕೊಳ್ಳಬೇಕು. ಅದಕ್ಕೆ ವಿಲಂಬವು ತರವಲ್ಲ. ಪುಣ್ಯಕಾರ್ಯಗಳು ಮಾನವನಿಗೆ ಬುತ್ತಿಯ ಗಂಟು ಇದ್ದಂತೆ. ಅವನಿಗೆ ಇಲ್ಲಿ ಸತ್ತರೂ ಮುಂದೆ ಸುಖವಾಗುವದು. ನಾಳೆ ಮಾಡುವುದನ್ನು ಇಂದೇ ಮಾಡಬೇಕು. ಮಧ್ಯಾಹ್ನ ಮಾಡಬೇಕಾದುದನ್ನು ಬೆಳಗಿನಲ್ಲಿಯೇ ಮಾಡಬೇಕು. ಮರಣವು ಯಾರದಾದರೂ ದಾರಿ ಕಾಯುವುದೇ? ಪ್ರಾಣಿಯು ತನ್ನ ಕಾರ್ಯಗಳನ್ನೆಲ್ಲ ಮಾಡಿ ಪೂರೈಸಿದ್ದಾನೋ ಇಲ್ಲವೋ ಎಂಬುದನ್ನು ಅದು ಪ್ರತೀಕ್ಷಿಸುವುದಿಲ್ಲ. ಹೊಲ, ಮನೆ, ವ್ಯಾಪಾರ, ಮುಂತಾದ ಕಾರ್ಯಗಳಲ್ಲಿ ತೊಡಗಿದ್ದಾನೆಂದು ಮೃತ್ಯುವು ಪ್ರಾಣಿಗಳ ಮೇಲೆ ಎರಗುವದನ್ನು ಬಿಡುವದಿಲ್ಲ. ಕುರಿಯನ್ನು ಕಂಡು ತೋಳವು ಅದರ ಸುಖ ದುಃಖಗಳನ್ನು ಏನಾದರೂ ವಿಚಾರಿಸುವದೇ? ಆಯುಷ್ಯವು ಸವೆದ ಕೂಡಲೇ ಸಾವು ಬಂದು ಹದ್ದಿನ ಹಾಗೆ ಎರಗಿ ಬಿಡುತ್ತದೆ. ಪ್ರಾಣವಾಯು ಅತ್ಯಂತ ಚಂಚಲವೆಂಬುದು ತಮಗೆ ತಿಳಿದೇ ಇದೆ. ಒಂದು ಕ್ಷಣ ನಾವು ಬದುಕಿ ಇದ್ದುದೂ ಅತೀ ಆಶ್ಚರ್ಯವೇ ಸರಿ. ವಿದ್ಯೆ ಸಂಪಾದಿಸುವಾಗ, ಮತ್ತು ಹಣ ಗಳಿಸುವಾಗ, ಈ ಶರೀರವು ಶಾಶ್ವತ ಎಂದು ಬಗೆದು ಸಂಪಾದಿಸಬೇಕು. ಧರ್ಮಕಾರ್ಯ ಮಾಡುವಾಗ ಈ ದೇಹವು ಅಶಾಶ್ವತ. ಈಗಿದ್ದರೆ ಮುಂದಿನ ಕ್ಷಣ ಇರುವದಿಲ್ಲ ಎಂದು ಭಾವಿಸಿ ಬೇಗ ಬೇಗ ಧರ್ಮಕಾರ್ಯಗಳನ್ನು ಮಾಡಬೇಕು. ನನಗೆ

ಇನ್ನೂ ಧರ್ಮಕಾರ್ಯ ಮಾಡುವದು ಬಹಳವಿದೆ. ಆದುದರಿಂದ, ನಾನು, ಮುಂದಿನ ಯಜ್ಞದ ಸಕಲ ಸಲಕರಣೆಗಳನ್ನು ಸಿದ್ಧ ಮಾಡಿಕೊಂಡು ತಮ್ಮ ಪಾದದಡಿ ಬಂದಿದ್ದೇನೆ. ನೀವು ಈಗಲೇ ನನ್ನ ಪೌರೋಹಿತ್ಯವನ್ನು ವಹಿಸಿ ಯಜ್ಞ ಕಾರ್ಯ ಪ್ರಾರಂಭಿಸದಿದ್ದರೆ ನಾನು ಬೇರೆ ಪುರೋಹಿತರ ಬಳಿಗೆ ಹೋಗಬೇಕಾಗುವದು.''

ನಿಮಿರಾಜನ ಈ ನಿಷ್ಠುರ ನುಡಿಗಳನ್ನು ಕೇಳಿ ಬ್ರಾಹ್ಮಣೋತ್ತಮರಾದ ವಶಿಷ್ಠರಿಗೆ ಕೋಪ ಬಂದಿತು. ಅವರು ರಾಜನಿಗೆ ''ನೀನು ವಿದೇಹ ಅಂದರೆ ಶರೀರರಹಿತನಾಗು. ಯಜ್ಞಕಾರ್ಯದಿಂದ ದಣಿದು ವಿಶ್ರಮಿಸಿದ ನನ್ನನ್ನು ಬಿಟ್ಟು ಬೇರೆ ಬ್ರಾಹ್ಮಣನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಲು ಹೊರಟಿರುವೆ. ಆದುದರಿಂದ ಗುರು ದ್ರೋಹಿಯಾದ ನಿನ್ನ ಶರೀರ ಬಿದ್ದುಹೋಗಲಿ.''

ಆಗ ನಿಮಿ ರಾಜನು ಆ ಗುರುಗಳಿಗೆ ತಿರುಗಿ ಶಾಪ ಕೊಟ್ಟನು. ''ಧರ್ಮಕಾರ್ಯ ಮಾಡಬೇಕೆಂಬ ನನ್ನಂಥ ಲೌಕಿಕ ಮನುಷ್ಯನಿಗೆ ನೀನು ವಿಘ್ನ ಮಾಡುತ್ತಿರುವೆ. ನೀನೂ ಯಜ್ಞ ಮಾಡುವದಿಲ್ಲ; ಇನ್ನೊಬ್ಬರಿಂದ ಮಾಡಿಸಿಕೊಡುವದಿಲ್ಲ. ಮೇಲೆ ನನಗೆ ಶಾಪ ಕೊಡುತ್ತಿರುವೆ. ಆದುದರಿಂದ ನೀನು ಕೂಡ ದೇಹರಹಿತನಾಗು.''

ಹೀಗೆ ಪರಸ್ಪರ ಶಾಪದಿಂದ ಆ ನಿಮಿರಾಜ, ವಶಿಷ್ಠ ಮುನಿ ಇಬ್ಬರ ದೇಹಗಳೂ ಬಿದ್ದುಹೋದವು. ಇಬ್ಬರೂ ಶರೀರರಹಿತರಾದರು. ಅವರ ಜೀವಗಳೆರಡೂ ಬ್ರಹ್ಮದೇವರ ಬಳಿಗೆ ಹೋದವು. ಅವುಗಳನ್ನು ಕಂಡು ಬ್ರಹ್ಮದೇವರು ಹೀಗೆ ನುಡಿದರು.

''ನಿಮಿಯ ಜೀವವೇ, ಇಂದಿನಿಂದ ನಿನಗೆ ಎಲ್ಲ ಪ್ರಾಣಿಗಳ ಕಣ್ಣಿನ ಎಮೆಗಳಲ್ಲಿ ಸ್ಥಾನವನ್ನು ಕೊಟ್ಟಿದ್ದೇವೆ. ನೀನು ಕಂಗಳ ರೆಪ್ಪೆಗಳಲ್ಲಿ ನೆಲೆಸು. ನಿನ್ನ ಸಂಬಂಧದಿಂದ ಕಣ್ಣಿನ ಎಮೆಗಳು ಪಿಳುಕಿಸುವವು. ಜನರೆಲ್ಲರೂ ಇನ್ನು ಮೇಲೆ ಸ್ಥಿರವಾಗಿ ನಿಂತ ತಮ್ಮ ಕಣ್ಣಿನ ರೆಪ್ಪೆಗಳನ್ನು ಮುಚ್ಚಿ ತೆರೆದು, ತೆರೆದು ಮುಚ್ಚಿ ಪಿಳುಕಿಸುವರು.''

ಹೀಗೆ ಬ್ರಹ್ಮದೇವರ ವರದಿಂದ ನಿಮಿಯು ಪ್ರಾಣಿಗಳ ಕಣ್ಣೆವೆಗಳಲ್ಲಿ ನೆಲೆ ನಿಂತನು. ನಿಮಿಯಿಂದ ನಡೆಯುವ ನೇತ್ರಚಾಲನಕ್ಕೆ ನಿಮಿಷವೆಂದು ಅಂದಿನಿಂದ ಹೆಸರು ಬಂದಿತು. ಅನಂತರ ಬ್ರಹ್ಮದೇವರು ವಶಿಷ್ಠ ದೇಹ ತೊರೆದು ಬಂದ ಜೀವಕ್ಕೆ ಹೀಗೆ ಆದೇಶವಿತ್ತರು. ''ವಶಿಷ್ಠನೇ, ಇನ್ನು ಮುಂದೆ ನೀನು ಮಿತ್ರಾ ವರುಣನ ಮಗನಾಗಿ ಜನಿಸು. ಅಲ್ಲಿಯೂ ಆಗಲೂ ನಿನಗೆ ವಶಿಷ್ಠ ಎಂಬ ಹೆಸರೇ ಉಳಿಯುವದು. ಎರಡೂ ಜನ್ಮದ ಸ್ಮರಣೆಯು ಊರ್ಜಿತವಾಗುವದು''

ಇದೇ ವೇಳೆಯಲ್ಲಿ ಮಿತ್ರ ಹಾಗೂ ವರುಣ ದೇವತೆಗಳು ಹಿಮಾಲಯದಲ್ಲಿಯ ಬದರಿಕಾ ಕ್ಷೇತ್ರಕ್ಕೆ ಬಂದು ಉಗ್ರ ತಪಸ್ಸು ಕೈಕೊಂಡರು. ಒಮ್ಮೆ ವಸಂತ ಮಾಸ, ಬೆಟ್ಟ ಬಯಲುಗಳಲ್ಲೆಲ್ಲ ಚಿಗುರು, ಕೊನರು, ಬನದೆಡೆಯೆಲ್ಲವೂ ಕಾತು ಹೂತು ನಿಂತಿದೆ. ಭೃಂಗಗಳ ಗುಂಗಾನ, ಕೋಕಿಲೆಗಳ ಕುಕಿಲು, ಹಕ್ಕಿಗಳ ಚಿಲಿಪಿಲಿ. ಚೈತ್ರ ಚುಂಬನಕ್ಕೆ ವನಾಂತರವೆಲ್ಲವೂ ಕುಸುಮ ಕಮನೀಯವಾಗಿ ಕಾಣುತ್ತಿದೆ. ಇಂತಹ ಸುಂದರ ಸನ್ನಿವೇಶದಲ್ಲಿ ಅಲ್ಲಿಗೆ ಸ್ವರ್ಗಸುಂದರಿಯಾದ ಉರ್ವಸಿಯು ಹೂಗಳನ್ನು ಹರಿಯಲು ಬಂದಳು.

ತಪೋನುಷ್ಠಾನ ಮಾಡುವ ಮಿತ್ರಾ ವರುಣರ ಇಬ್ಬರ ದೃಷ್ಟಿ ಹೂಗಳನ್ನು ಹರಿಯ ಬಂದ ಆ ಹರಿಣಾಕ್ಷಿಯ ಮೇಲೆ ಬಿದ್ದಿತು. ಅವಳು ಉಟ್ಟು ತೊಟ್ಟ ಕೆಂಪು ಬಟ್ಟೆ ಅವಳ ಬಳ್ಳಿ ಮೈಚೆಲುವನ್ನೆಲ್ಲ ಎತ್ತಿ ತೋರುವಷ್ಟು ತೆಳ್ಳಗಿದ್ದಿತು. ಕಣ್ಣುಗಳಂತೂ ಅದೇ ಬಿರಿದ, ಕನ್ನೈದಿಲೆ, ತಿದ್ದು ತೀಡಿದ ಹುಬ್ಬು, ಚಂದ್ರನಿಗಿಂತ ಚಾರುತರವಾದ ಮುಖ, ಅವಳ ಈ ಅನಿಂದ್ಯ ಸೌಂದರ್ಯವು ಆ ಇಬ್ಬರೂ ತಪಸ್ವಿಗಳ ಚಿತ್ತವನ್ನು ಕದಡಿತು. ಮನಸ್ಸನ್ನು ಮೋಹಗೊಳಿಸಿತು. ಆದ್ದರಿಂದ ಕೂಡಲೇ ಕುಳಿತಲ್ಲಿಯೇ ಇಬ್ಬರಿಗೂ ಸ್ಖಲನ. ಇದರಿಂದ ಇಬ್ಬರಿಗೂ ಹೆದರಿಕೆ. ಇನ್ನೊಬ್ಬನು ನೋಡಿ ಶಾಪ ಕೊಟ್ಟಾನು ಎಂದು. ಇಬ್ಬರೂ ಮೌನದಿಂದಲೇ ತಮ್ಮ ಶುಕ್ರವನ್ನು ನೀರು ತುಂಬಿದ ಕಲಶದಲ್ಲಿ ಹಾಕಿ ಮುಚ್ಚಿಟ್ಟರು. ಅದರಿಂದ ಎರಡು ಅತ್ಯಂತ ತೇಜಸ್ವಿಗಳಾದ ಮಕ್ಕಳು ಹುಟ್ಟಿದರು. ಅವರಲ್ಲಿ ಒಬ್ಬ ವಶಿಷ್ಠ. ಇನ್ನೊಬ್ಬ ಅಗಸ್ತ್ಯ. ಅನಂತರ ಮಿತ್ರಾವರುಣರ ವೀರ್ಯದಿಂದ ಮರಳಿ ಹುಟ್ಟಿದ ಮುನಿಯು ನಾರದರ ತಂಗಿಯಾದ ಅರುಂಧತೀದೇವಿಯನ್ನು ಮದುವೆಯಾದನು. ಅರುಂಧತಿಯು ನಿಜವಾಗಿಯೂ ನಾರೀಕುಲದ ರತ್ನ. ಆ ಸಾಧ್ವೀಶಿರೋಮಣಿಯಲ್ಲಿ ವಶಿಷ್ಠರಿಗೆ ಶಕ್ತಿ ಎಂಬ ಮಗನು ಜನಿಸಿದನು. ಆ ಶಕ್ತಿ ಋಷಿಯ ಮಗನೇ ಪರಾಶರ. ಈ ಪರಾಶರನ ಹೊಟ್ಟೆಯಿಂದ ಸಾಕ್ಷಾತ್ ಶ್ರೀ ಹರಿಯೇ ಕೃಷ್ಣ ದ್ವೈಪಾಯನ ರೂಪದಿಂದ ಅವತರಿಸಿದನು. ಅವರಿಗೆ ವೇದವ್ಯಾಸರೆಂದು ಹೆಸರು. ಇವರು ಮಹಾಭಾರತ ಎಂಬ ಶ್ರೇಷ್ಠ ಗ್ರಂಥ ಬರೆದು, ಜ್ಞಾನದ ಚಂದ್ರಿಕೆಯನ್ನು ತಿರೆಯ ತುಂಬ ತುಳುಕಿಸಿದರು.

ಈ ಪರಾಶರ ಮುನಿಯ ವಂಶದಲ್ಲಿ, ಕಾಂಡಷಪ, ವಾಹನಪ, ಜೈಹ್ನಪ, ಭೌಮತಾಪನ, ಗೋಪಾಲ, ಮುಂತಾದ ಮಹರ್ಷಿಗಳು ಜನಿಸಿ ಈ ಋಷಿವಂಶವನ್ನು ಬೆಳೆಸಿ ಬೆಳಗಿಸಿದರು ಇವರು ಐವರು ಗೌರಪರಾಶರರು. ಪ್ರಪೋಹಯ, ಅವಾಹ್ಯಮಯ, ಖ್ಯಾತೇಯ, ಕೌತುಜಾತಿ, ಹರ್ಯಶ್ವಿ ಇವರು ಐವರು ಮಹರ್ಷಿಗಳು ನೀಲಪರಾಶರರು ಎಂದು ಕರೆಯಲ್ಪಡುತ್ತಾರೆ.

ಕಾಷ್ಣಾಯನ, ಕಪಿಸಖ, ಕಾಕೇಯಸ್ಥ, ಅಜಪಾತಿ, ಪುಷ್ಕರ ಇವರು ಐವರು ಕೃಷ್ಣ ಪಾರಾಶರರು. ಅವಿಷ್ಟಾಯನ, ಬಾಲೇಯ, ಸ್ವಾಯಷ್ಟ, ಓಪಯ, ಇಷೀಕ ಹಸ್ತ. ಈ ಐದು ಮುನಿಗಳು ಶ್ವೇತ ಪಾರಾಶರರು. ಪಾಟಕ, ಬಾದರಿ, ಸ್ಥಂಬ, ಕ್ರೋದ ನಾಯನ, ಕ್ಷೇಮಿ, ಈ ಐದು ಮುನಿಗಳು ಶ್ಯಾಮ ಪಾರಾಶರರು.

ಖಲ್ಯಾಯನ, ವಾಷ್ಣ್ಯಾಯನ, ತೈಲೇಯ, ಯೂಥಪ, ತಂತಿ ಇವರು ಧೂಮ ಪಾರಾಶರರು. ಪರಾಶರ ವಂಶದಲ್ಲಿ ಮುಖ್ಯರಾದ ಋಷಿಗಳ ಹೆಸರುಗಳನ್ನು ಹೇಳಿದ್ದೇನೆ. ಇವರೆಲ್ಲರಿಗೂ ಸೂರ್ಯ ಸಮಾನವಾದ ದಿವ್ಯ ಜ್ಞಾನ, ಕಾಂತಿಗಳು ವಂಶಪರಂಪರಾಪ್ರಾಪ್ತವಾಗಿರುತ್ತಿದ್ದವು. ಇದರ ನಾಮ ಕೀರ್ತನದಿಂದ ಮಾನವನು ದುರಿತ ದೂರ ನಾಗುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರಎರಡನೆಯ ಅಧ್ಯಾಯ ಮುಗಿದುದು*

—o—

ಅಗಸ್ತ್ಯ ವಂಶದ ವಿಸ್ತಾರ

ಅಧ್ಯಾಯ - ೨೦೩

**ಮತ್ಸ್ಯ ಉವಾಚ :**

**ಅತಃ ಪರಮಗಸ್ಯ ವಕ್ಷ್ಯೇ ವಂಶೋದ್ಭವಾನ್ ದ್ವಿಜಾನ್।**
**ಅಗಸ್ತ್ಯಶ್ಚ ಕರಂಭಶ್ಚ ಕೌಶಲ್ಯಃ ಕರಟಸ್ತಥಾ॥**

**ಮತ್ಸ್ಯ:-** ಇನ್ನು ಮುಂದೆ ಅಗಸ್ತ್ಯ ವಂಶದಲ್ಲಿ ಹುಟ್ಟಿದ ಬ್ರಾಹ್ಮಣರ ಹೆಸರು ಹೇಳುವೆನು.

ಅಗಸ್ತ್ಯ, ಕರಂಭ, ಕೌಶಲ್ಯ, ಕರಟ, ಸುಮೇಧಸ, ಮಯೋಭವ, ಗಾಂಧಾರ ಕಾಯನ, ಪೌಲಸ್ತ್ಯ, ಪೌಲವ, ಮುಂತಾದ ಮುನಿವಂಶದವರಿಗೂ, ಕ್ರತುವಂಶದಲ್ಲಿ ಹುಟ್ಟಿದವರೆಲ್ಲರಿಗೂ ಅಗಸ್ತ್ಯ, ಮಹೇಂದ್ರ, ಮಯೋಭವ ಈ ಮೂವರು ಮಹರ್ಷಿಗಳು ಪ್ರವರ ಪುರುಷರಾಗಿದ್ದಾರೆ. ಇವರಲ್ಲಿ ಪರಸ್ಪರ ವಿವಾಹ ಸಂಬಂಧವಾಗುವದಿಲ್ಲ. ಪೌರ್ಣಮಾಸ, ಪಾರಣ, ಎಂಬ ಅಗಸ್ತ್ಯವಂಶದ ಋಷಿಗಳು ಅಗಸ್ತ್ಯ ಪೌರ್ಣಮಾಸ, ಪಾರಣ ಎಂದು ತ್ರಿಪ್ರವರಾನ್ವಿತರಾಗಿದ್ದಾರೆ. ಪೌರ್ಣಮಾಸ ಪಾರಣ ಕುಲದವರಿಗೂ ವಿವಾಹ ಸಂಬಂಧ ಆಗುವದಿಲ್ಲ.

**ಮನು :-** ಪುಲಹ, ಪುಲಸ್ತ್ಯ ಕ್ರತು ಈ ಮೂರು ಬ್ರಹ್ಮರ್ಷಿಗಳ ವಂಶದವರು ಅಗಸ್ತ್ಯ ವಂಶದವರು ಹೇಗಾದರೂ ಇದನ್ನು ತಿಳಿಸಿರಿ?

**ಮತ್ಸ್ಯ :-** ವೈವಸ್ವತ ಮನ್ವಂತರದಲ್ಲಿ ಕ್ರತು ಮಹರ್ಷಿಗೆ ಸಂತಾನವಾಗಲಿಲ್ಲ. ಆದುದರಿಂದ ಆ ಮುನಿಯು ಅಗಸ್ತ್ಯರ ಮಗನಾದ ಇಧ್ಮವಾಹನನ್ನು ದತ್ತು ತೆಗೆದುಕೊಂಡನು. ಅದರಿಂದ ಕ್ರತು ವಂಶಗವರೆಲ್ಲ ಅಗಸ್ತ್ಯ ವಂಶದವರಾಗಿ ಆಗಸ್ತ್ಯ ಎಂದು ಕರೆಯಲ್ಪಡುತ್ತಾರೆ. ಪುಲಹ ಮುನಿಗೆ ಮೂವರು ಮಕ್ಕಳು ಹುಟ್ಟಿದರು. ಅವರ ಜನ್ಮ ವೃತ್ತಾಂತವನ್ನು ಮುಂದೆ ತಿಳಿಸುತ್ತೇನೆ. ಪುಲಹ ಋಷಿಗೆ ತನ್ನ ಪ್ರಜೆಗಳಿಂದ ಬಹಳ ಬೇಸರವೆನಿಸಿತು. ತನ್ನ ಮನಸ್ಸಿಗೆ ತಕ್ಕ ಮಕ್ಕಳು ತನಗೆ ಹುಟ್ಟದಿರುವದರಿಂದ ಆ ಮುನಿಯು ಅಗಸ್ತ್ಯರ ಮಗನಾದ ದೃಢಾಸ್ಯನನ್ನು ಅವರ ಆಜ್ಞೆಯಿಂದ ದತ್ತು ತೆಗೆದುಕೊಂಡರು. ಆದುದರಿಂದ ಅಗಸ್ತ್ಯರ ಸಂತಾನವು ಪೌಲಹ ಸಂತಾನವೂ ಆಯಿತು. ಪುಲಸ್ತ್ಯ ವಂಶದಲ್ಲಿ ರಾಕ್ಷಸರು ಜನಿಸಿದ್ದರಿಂದ ಪುಲಸ್ತ್ಯ ಮುನಿಯು ಅಗಸ್ತ್ಯಪುತ್ರನಾದ. ಧರ್ಮಜ್ಞಾನಿ ಇಧ್ಮವಾಹನನ್ನು ಮಗನೆಂದು ಪರಿಗ್ರಹಿಸಬೇಕಾಯಿತು. ಆದುದರಿಂದ ಪೌಲಸ್ತ್ಯರೂ, ಪೌಲಹರೂ, ಕ್ರತುವಂಶದವರೂ, ಆಗಸ್ತ್ಯಕುಲದವರೂ ಸಗೋತ್ರರಾಗಿ ಎಲ್ಲರಿಗೂ ಒಂದೇ ಪ್ರವರವಾಯಿತು. ಇವರಲ್ಲಿ ವಿವಾಹ ಸಂಬಂಧವಾಗುವಂತಿಲ್ಲ. ಇವರ ಕುಲಗಳಲ್ಲಿ ಮುಂದೆ ಮಹಾನುಭಾವರಾದ ಋಷಿಗಳು ಹುಟ್ಟಿ, ಬಾಳಿ, ವಂಶಾಭಿವೃದ್ಧಿಯನ್ನು ಮಾಡಿದರು. ಅವರ ನಾಮ ಸಂಕೀರ್ತನೆಯಿಂದ ಪಾಪ ಮುಕ್ತಿಯಾಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರುಮೂರನೆಯ ಅಧ್ಯಾಯ ಮುಗಿದುದು*

—o—

ಧರ್ಮವಂಶ ವರ್ಣನೆ

ಅಧ್ಯಾಯ - ೨೦೪

**ಮತ್ಸ್ಯ ಉವಾಚ :**

**ಅಸ್ಮಿನ್ವೈವಸ್ವತೇ ಪ್ರಾಪ್ತೇ ಶೃಣು ಧರ್ಮಸ್ಯ ಪಾರ್ಥಿವ।**
**ದಾಕ್ಷಾಯಣೀಭ್ಯಃ ಸಕಲಂ ವಂಶಂ ದೈವತಮುತ್ತಮಮ್॥**

**ಮತ್ಸ್ಯ**:- ಈ ವೈವಸ್ವತ ಮನ್ವಂತರ ಪಾಪ್ತವಾದ ಬಳಿಕ, ಧರ್ಮನಿಗೆ ಕೊಟ್ಟ ದಕ್ಷಕುಮಾರಿಯರಿಂದ ದೇವತೆಗಳ ವಂಶವೆಲ್ಲವೂ ಬಿತ್ತರಗೊಂಡ ಬಗೆಯನ್ನು ಹೇಳುತ್ತೇನೆ, ಕೇಳು.

ರಾಜನ್, ದಕ್ಷನ ಮಗಳಾದ ಅರುಂಧತೀದೇವಿಯಿಂದ ಧರ್ಮ ಮುನಿಯು ಬೃಹತ್ ಕಾಯದ ಪರ್ವತ ಮುಂತಾದ ಸ್ಥಾವರ ವಸ್ತುಗಳನ್ನು ಸೃಷ್ಟಿಮಾಡಿದನು. ಇದೇ ಧರ್ಮಮುನಿಯು ಮತ್ತೊಬ್ಬ ವಸು ಎಂದ ದಕ್ಷಕನ್ಯೆಯಿಂದ ಧರ, ಧ್ರುವ, ಸೋಮ, ಅಪ, ಅನಿಲ, ಅನಲ, ಪ್ರತ್ಯೂಷ, ಪ್ರಭಾವ ಎಂದು ಎಂಟು ವಸುಗಳನ್ನು ಪಡೆದನು. ಈ ಅಷ್ಟ ವಸುಗಳಲ್ಲಿ ಹಿರಿಯನಾದ ಧರವಸುವಿಗೆ ದ್ರವಿಣ ಎಂಬ ಮಗನು ಹುಟ್ಟಿದನು. ಧ್ರುವನಲ್ಲಿ ಕಾಲ ಎಂಬ ಪುತ್ರನು ಜನಿಸಿದನು. ಆ ಕಾಲನಿಂದ ಕಾಲ ಖಂಡಗಳು ಮೂರ್ತಿ ಮುಂತಾಗಿ ಜನಿಸಿದವು. ಸೋಮು ಎಂಬ ವಸುವಿನಿಂದ ವರ್ಚಸ್ ಎಂಬ ಮಗನು ಹುಟ್ಟಿದನು. ಶ್ರೀಮಾನ್‌ನು ಅಪ್‌ನ ಮಗ. ಅನಲ ವಸುವಿಗೆ ಕುಮಾರ, ಅನಿಲನಿಗೆ ಪುರೋಜವ, ಪ್ರತ್ಯುಷನಿಗೆ ದೇವಲ, ಪ್ರಭಾಸನಿಗೆ ದೇವತೆಗಳ ಬಡಿಗನಾದ ವಿಶ್ವಕರ್ಮನು ಮಕ್ಕಳಾಗಿ ಜನಿಸಿದರು. ಲಂಬಾ ಎಂಬ ಧರ್ಮಮುನಿಯ ಮಡದಿಯು ಘೋಷ, ಎಂಬ ಮಗನನ್ನು ಹೆತ್ತಳು. ಭಾನು ಎಂಬ ಧರ್ಮಮುನಿಯ ಧರ್ಮಪತ್ನಿಯಿಂದ ಗ್ರಹ, ನಕ್ಷತ್ರಗಳ, ಕಿರಣಗಳ ಅಭಿಮಾನಿ ದೇವತೆಗಳು ಹುಟ್ಟಿದರು. ಧರ್ಮನ ಮರತ್ವಂತೀ ಎಂಬ ಮಡದಿಯಿಂದ ಮರುತ್ವಂತ ಎಂಬ ದೇವಗಣ, ಸಂಕಲ್ಪೆಯಿಂದ ಸಂಕಲ್ಪ, ಮೂಹೂರ್ತೆಯಿಂದ ಮುಹೂರ್ತಗಳು, ಸಾಧ್ಯಾಳಿಂದ ಸಾಧ್ಯ ಎಂಬ ಮಕ್ಕಳು ಹುಟ್ಟಿದರು. ಯಾಮಿಯಿಂದ ನಾಗವೀಥಿ ಮೊದಲಾದವರು ಮಕ್ಕಳಾಗಿ ಹುಟ್ಟಿದರು. ಧರ್ಮಸತಿಯಾದ ಸಾಧ್ಯಾದೇವಿಗೆ ಸಾಧ್ಯ ಎಂಬ ದೇವತೆಗಳು ಹುಟ್ಟಿದರೆಂದು ಹೇಳಿದೆ ಅಷ್ಟೆ! ಹನ್ನೆರಡು ಜನ ಪುತ್ರರ ಹೆಸರುಗಳು: ಮನ, ಮನು, ಪ್ರಾಣ, ನರ, ಊಷನ್, ವೀರ್ಯವಾನ್, ಚಿತ್ರ ಹಾರ್ಯ, ಆಯನ, ಹಂಸ, ನಾರಾಯಣ, ವಿಭು, ಪ್ರಭು, ಇವರೇ ದ್ವಾದಶ ಸಾಧ್ಯರು.

ವಿಶ್ವಾ ಎಂಬ ಧರ್ಮಪತ್ನಿಯಿಂದ ವಿಶ್ವೇದೇವತೆಗಳು ಜನಿಸಿದರು. ಆ ವಿಶ್ವಾ ದೇವತೆಗಳು ಕ್ರತು, ದಕ್ಷ, ವಸು, ಸತ್ಯ, ಕಾಲಕಾಮ, ಮುನಿ, ಕುರಜ, ಮನುಜ, ಬೀಜ, ರೋಚಿಮಾಲ ಎಂಬ ಹೆಸರಿನಿಂದ ಹತ್ತೂ ಜನರು ಪ್ರಸಿದ್ಧರಾಗಿದ್ದಾರೆ. ಮಹಾರಾಜನೇ, ದಕ್ಷನ ಅಳಿಯನಾದ ಧರ್ಮನ ವಂಶವನ್ನು ಸಂಕ್ಷೇಪವಾಗಿ ಹೇಳಿದೆನು ಇದನ್ನು ವಿಸ್ತಾರವಾಗಿ ಹೇಳಬೇಕಾದರೆ ವ್ಯಾಸಮುನಿಗೆ ಮಾತ್ರ ಶಕ್ಯ. ಉಳಿದವರು ಸಾವಿರ ವರ್ಷ ಹೆಣಗಿದರೂ ಸಾಧ್ಯವಿಲ್ಲ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರನಾಲ್ಕನೆಯ ಅಧ್ಯಾಯ ಮುಗಿದುದು.*

ಪಿತೃಗಾಥಾ ವರ್ಣನೆ

ಅಧ್ಯಾಯ - ೨೦೫

**ಮತ್ಸ್ಯ ಉವಾಚ**

**ಏತದ್ವಂಶಭವಾ ವಿಪ್ರಾಃ ಶ್ರಾದ್ದೇ ಭೋಜ್ಯಾಃ ಪ್ರಯತ್ನತಃ।**
**ಪಿತೃಣಾಂ ವಲ್ಲಭಂ ಯಸ್ಮಾದೇಷು ಶ್ರಾದ್ಧಂ ನರೇಶ್ವರ॥**

**ಮತ್ಸ್ಯ** :- ಮೇಲೆ ಹೇಳಿದ ಮಹಾ ಋಷಿಗಳ ವಂಶದಲ್ಲಿ ಜನಿಸಿದ ಬ್ರಾಹ್ಮಣರನ್ನು ಪ್ರಯತ್ನಮಾಡಿ ಹುಡುಕಿ ತಂದು ಶ್ರಾದ್ಧದಲ್ಲಿ ಭೋಜನ ಮಾಡಿಸಬೇಕು. ಇಂತಹ ಬ್ರಹ್ಮರ್ಷಿ ವಂಶದ, ಬ್ರಾಹ್ಮಣರು ಪಿತೃಗಳಿಗೆ ಪರಮ ಪ್ರೀತ್ಯಾಸ್ಪದರು. ಅಂಥವರನ್ನು ಶ್ರದ್ಧೆಯಿಂದ ಕರೆದು ಮಾಡಿದ ಸತ್ಕಾರ ಅತಿಥ್ಯಗಳಿಗೆ ಶ್ರಾದ್ಧ ಎಂದು ಹೆಸರು. ಇನ್ನು ಮುಂದೆ ಪಿತೃಗಳು ತಾವಿದ್ದ ತಾಣದಲ್ಲಿಯೇ, ತಮ್ಮ ಮನಸ್ಸಿನ ಅಪೇಕ್ಷೆಯನ್ನು ವ್ಯಕ್ತ ಮಾಡಿ ಹೇಳಿದ ಹಾರೈಕೆಯ ಹಾಡನ್ನು ಹೇಳುತ್ತೇನೆ ಕೇಳು:

''ನಮ್ಮ ವಂಶದಲ್ಲಿ ತಣ್ಣಗಿನ ನೀರುಳ್ಳ ನದಿಗಳಲ್ಲಿ ನಮಗೆ ನೀರಿನಿಂದ ತರ್ಪಣ ಕೊಡುವ ಪುಣ್ಯಾತ್ಮನು ಎಂದಾದರೂ ಹುಟ್ಟುವನೊ ? ಹಾಲು, ಹಣ್ಣು, ಕಂದ, ಮೂಲ ಪಕ್ವಾನ್ನ, ಕೊನೆಗೆ ಎಳ್ಳುನೀರಿನಿಂದಾದರೂ ನಿತ್ಯವೂ ಶ್ರಾದ್ಧ ಮಾಡುವ ಧರ್ಮಾತ್ಮನು ನಮ್ಮ ವಂಶದಲ್ಲಿ ಹುಟ್ಟಬಹುದೆ ? ತ್ರಯೋದಶಿ ದಿನ ಪಾಯಸ ಜೇನುತುಪ್ಪ, ಮಧುಪರ್ಕಗಳನ್ನು ನಮ್ಮ ಉದ್ದೇಶದಿಂದ ನೀಡುವವನು ಹುಟ್ಟಬಹುದೆ ? ಖಡ್ಗ ಮಾಂಸ ಬಿಟ್ಟು ಕಾಲಪ್ರಾಪ್ತವಾದ, ಕಾಯಿಪಲ್ಲೆ, ಜೇನುತುಪ್ಪ, ಮತ್ತು ಮುನಿಗಳಿಗೆ ವಿಹಿತವಾದ ಅನಿಷಿದ್ಧ ಅನ್ನ ಮುಂತಾದವುಗಳಿಂದಾಗಲಿ ಶ್ರಾದ್ಧಮಾಡುವವನು ನಮ್ಮ ವಂಶದಲ್ಲಿ ಯಾವನಾದರೂ ಜನಿಸಬಹುದೊ? ಗಯಾ, ಛಾಯಾ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿ ಶ್ರಾದ್ಧಮಾಡಿ, ಕಲ್ಪಕಾಲದವರೆಗೆ ನಮ್ಮನ್ನು ಯಾವನಾದರೂ ನಮ್ಮ ವಂಶಜನು ತೃಪ್ತಿಪಡಿಸಬಹುದೇ? ನಮ್ಮ ವಂಶದಲ್ಲಿ ಈಯುತ್ತಲಿರುವ ಹಸುವನ್ನೂ ಕೃಷ್ಣಾಜಿನವನ್ನೂ, ಬಂಗಾರ, ಭೂಮಿ, ಬಾವಿ, ಉದ್ಯಾನ, ಕೆರೆ ಮುಂತಾದವುಗಳನ್ನು ರಚಿಸಿ, ಕಟ್ಟಿಸಿ ದಾನ ಕೊಡುವ ಪುಣ್ಯಪುತ್ರನು ಜನಿಸಬಹುದೆ ? ಕಪ್ಪು ಬಿಳಿ ಬಣ್ಣದ ಅಥವಾ ಬಣ್ಣ ಬಣ್ಣದ ಎತ್ತನ್ನು ದೇವರ ಹೆಸರಿನಿಂದ ಬಿಡುವ ಪುಣ್ಯಾತ್ಮನು ನಮ್ಮ ಪೀಳಿಗೆಯಲ್ಲಿ ಉದಿಸಬಹುದೆ?'' ಮುಖ್ಯವಾಗಿ ದೇವ ದೇವೇಶನಾದ ಮಹಾವಿಷ್ಣುವನ್ನು ಸರ್ವ ಭಾವದಿಂದಲೂ ಶರಣುಹೋಗಿ, ಪೂಜಿಸಿ, ವಿಷ್ಣುಭಕ್ತರನ್ನೇ ಶ್ರಾದ್ಧದಲ್ಲಿ ನಿಮಂತ್ರಿಸುವ ವೈಷ್ಣವಾಗ್ರೇಸರನಾದ ಮಗನು ನಮ್ಮ ಕುಲದಲ್ಲಿ ಹುಟ್ಟಬಹುದೆ?'' ಎಂದು ಪಿತೃಗಳು ಹಗಲಿರುಳು ಹಾರೈಸುತ್ತಿರುತ್ತಾರೆ.

ವೇದಶಾಸ್ತ್ರಗಳನ್ನು ಓದಿ ವಿದ್ವಾಂಸನಾಗಿ ಪಿತೃಗಳ ಉದ್ದೇಶದಿಂದ ಧರ್ಮ, ಶಾಸ್ತ್ರಗಳನ್ನು ದಾನಮಾಡುವ ಧರ್ಮಾತ್ಮನು ತಮ್ಮ ಕುಲದಲ್ಲಿ ಹುಟ್ಟಬೇಕೆಂದು ಪಿತೃಗಳ ಅಪೇಕ್ಷೆ ತಿಳಿದು ಆಸ್ತಿಕನಾದವನು ಅದರಂತೆ ನಡೆದು ತನ್ನ ಹಿಂದಿನ ಹಿರಿಯರಿಗೆ ತೃಪ್ತಿಯನ್ನು ಅವಶ್ಯವಾಗಿ ಮಾಡತಕ್ಕದ್ದು.

ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರ ಐದನೇಯ ಅಧ್ಯಾಯ ಮುಗಿದುದು.

## ಆಕಳ ದಾನದ ವಿಧಿ ವರ್ಣನೆ

ಅಧ್ಯಾಯ - ೨೦೬

**ಮನುರುವಾಚ :**

**ಪ್ರಸೂಯಮಾನಾ ದಾತವ್ಯಾ ಧೇನುಃ ಬ್ರಾಹ್ಮಣ ಪುಂಗವೇ।**
**ವಿಧಿನಾ ಕೇನ ಧರ್ಮಜ್ಞ ದಾನಂ ದದ್ಯಾಚ್ಚ ಕಿಂ ಫಲಮ್॥**

**ಮನು** :- ಕರುಹಾಕಲಿರುವ ಹಸುವನ್ನು ಬ್ರಾಹ್ಮಣಶ್ರೇಷ್ಠನಿಗೆ ದಾನ ನೀಡುವ ವಿಧಿ ಏನು? ಎಂತು? ಇಂತಹ ಪ್ರಸವಿಸುವ ಹಸುವಿನ ದಾನದ ಫಲವೇನು?

**ಮತ್ಸ್ಯ**:- ಈಯಲಾಗಿರುವ ಆಕಳಿನ ಕೆಚ್ಚಲವನ್ನು ಎಳೆಗರು ಇನ್ನೂ ಬಿಟ್ಟು ಹೊರಬರದಿರುವಾಗಲೇ ಅದನ್ನು ದಾನ ಕೊಡಬೇಕು. ಅದಕ್ಕೆ ಮೊದಲೇ ಬೆಳ್ಳಿಯ ಖುರ, ಬಂಗಾರದ ಕೋಡು, ಮುತ್ತಿನ ಬಾಲಗಳನ್ನು ಮಾಡಿಸಿ, ಹಸುವಿನ ಕೋಡಿಗೆ ಇರಿಸಿ, ಗೊರಸಿಗೆ ಕೂಡಿಸಿ, ಬಾಲಕ್ಕೆ ಹಚ್ಚಿ ಇಟ್ಟಿರಬೇಕು. ತಾಯಿಯ ಗರ್ಭದಿಂದ ಕರು ಹೊರಗೆ ಬರುತ್ತಿರುವಾಗಲೇ ಬ್ರಾಹ್ಮಣನನ್ನು ಕರೆದು, ಹಿಂಡುವ ಪಾತ್ರೆ ಸಹಿತವಾಗಿ ಆ ಆಕಳವನ್ನು ದಾನಕೊಟ್ಟರೆ ಮಹಾಪುಣ್ಯ, ಕರುವನ್ನು ಹಾಕುತ್ತಲಿರುವ ಗೋಮಾತೆಯು ಅಖಂಡ ಪೃಥ್ವಿಮಂಡಲವಿದ್ದಂತೆ. ಅಂತಹ ಒಂದು ಗೋದಾನ ಮಾಡಿದರೆ ಭೂದಾನದ ಪುಣ್ಯ ಬರುತ್ತದೆ. ಆ ಹಸುವಿನ ಮೈಮೇಲಿರುವ ಕೂದಲಷ್ಟು ವರುಷ ದೇವಲೋಕದಲ್ಲಿ ದಾನಕೊಟ್ಟ ಮನುಷ್ಯನು ಗೌರವಿತನಾಗುತ್ತಾನೆ ಪಿತೃಗಣದ ಪಿತ, ಪಿತಾಮಹ, ಪ್ರಪಿತಾಮಹ, ತಂದೆ-ತಾತ, ಮುತ್ತಾತರಾದ ಹಿಂದಿನ ಹಿರಿಯರನ್ನೆಲ್ಲ ನರಕದಿಂದ ಉದ್ಧಾರ ಮಾಡಿದಂತಾಗುತ್ತದೆ ಇಂತಹ ಗೋದಾನವನ್ನು ವಿಶೇಷದಾನ, ದಕ್ಷಿಣೆಗಳೊಂದಿಗೆ ನೆರವೇರಿಸಬೇಕು. ಇಂತಹ ಈಯಲಿರುವ ಧೇನುವನ್ನು ದಾನವಿತ್ತು ದ್ರವ್ಯವನ್ನು ಪಾತ್ರೆಗಳನ್ನು ದಾನ ಕೊಡಬೇಕು. ಆ ಧೇನುವಿನ ಮೈ, ಕೈ ಮೇಲೆ ವಸ್ತ್ರಾಭರಣಗಳನ್ನು ಇಡಿಸಿ ದಾನ ಕೊಟ್ಟ ಮಾನವನಿಗೆ ದೇವಲೋಕ ಬ್ರಹ್ಮಲೋಕಗಳು ಸುಲಭವಾಗಿ ದೊರಕುವವು. ಅವನಿಗೆ ಹೋದಲ್ಲೆಲ್ಲ ಹಾಲಿನ ಹೊಳೆ, ಕುಳಿತಲ್ಲೆಲ್ಲ ಪರಮಾನ್ನ ಪ್ರಾಪ್ತಿ. ಬಯಸಿದಲ್ಲೆಲ್ಲ ಮೊಸರು, ತುಪ್ಪ, ಬೆಣ್ಣೆ ಮುಂತಾದ ಮಧುರ ವಸ್ತುಗಳ ಕಾಲುವೆಯೇ ಹರಿದು ಬರುವದು. ಚಂದ್ರನಂತೆ ಮುಖವುಳ್ಳ, ಬಂಗಾರದ ತಗಡಿನ ಬಣ್ಣವುಳ್ಳ ಅನೇಕ ತಾವರೆಗಣ್ಣಿನ ತರಳೆಯರು 'ನಾಮುಂದೆ.... ನಾ ಮುಂದೆ' ಎಂದು ಇಂತಹ ಗೋದಾನಿ ಮನುಷ್ಯನನ್ನುಸೇವಿಸುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರುಆರನೆಯ ಅಧ್ಯಾಯ ಮುಗಿದುದು.*

—o—

## ಕೃಷ್ಣಮೃಗಚರ್ಮ ದಾನವಿಧಿ ವರ್ಣನೆ

**ಅಧ್ಯಾಯ - ೨೦೭**

**ಮನುಃ ಉವಾಚ :**

**ಕೃಷ್ಣಾಜಿನ ಪ್ರದಾನಸ್ಯ ವಿಧಿಕಾಲೌ ಮಮಾಽನಘ।**
**ಬ್ರಾಹ್ಮಣಶ್ಚ ತಥಾಽ ಚಕ್ಷ್ವ ತತ್ರ ಮೇ ಸಂಶಯೋ ಮಹಾನ್॥**

**ಮನು:-** ಕೃಷ್ಣಾಜಿನವನ್ನು ದಾನ ಕೊಡುವ ವಿಧಿ ಯಾವದು? ಯಾವ ಕಾಲದಲ್ಲಿ ದಾನ ಕೊಡಬೇಕು ? ಎಂತಹ ಬ್ರಾಹ್ಮಣರಿಗೆ ದಾನ ಕೊಡಬೇಕು? ಇದರ ಬಗ್ಗೆ ಹೇಳಿ, ನನ್ನ ಸಂಶಯ ಕಳೆಯಬೇಕು.

**ಮತ್ಸ್ಯ :-** ವೈಶಾಖ ಹುಣ್ಣಿವೆ, ಚಂದ್ರ, ಸೂರ್ಯಗ್ರಹಣಕಾಲ, ಮಾಘ, ಆಷಾಢ, ಕಾರ್ತಿಕ ಹುಣ್ಣಿವೆ, ಉತ್ತರಾಯಣದ ದ್ವಾದಶಿ. ಈ ದಿನಗಳಲ್ಲಿ ಅಗ್ನಿ ಹೋತ್ರವನ್ನಿಟ್ಟ ಬ್ರಾಹ್ಮಣನಿಗೆ ಕೃಷ್ಣ ಮೃಗಚರ್ಮವನ್ನು ದಾನ ಕೊಡಬೇಕು. ಶುದ್ಧವಾದ ನೆಲದ ಮೇಲೆ ಗೋಮಯದಿಂದ ಸಾರಿಸಿ, ಕೋಡು ಖುರಗಳುಳ್ಳ ಪ್ರಶಸ್ತವಾದ ಕೃಷ್ಣಾಜಿನವನ್ನು ಹಾಸಿ, ಅದರ ಮೇಲೆ ಬೆಳ್ಳಿಯ ಕೊಂಬು, ಹಲ್ಲು, ಬಾಲಗಳನ್ನು ಮಾಡಿ ಇರಿಸಬೇಕು. ಅಲ್ಲಲ್ಲಿ ಮುತ್ತುಗಳನ್ನು ಇಡಿಸಿ, ಎಳ್ಳಿನಿಂದ ಕೂದಲು ಮಾಡಿ, ಬಂಗಾರದ ಹೊಕ್ಕಳವನ್ನಿಟ್ಟು, ಬಟ್ಟೆಯಿಂದ ಹೊದಿಸಬೇಕು. ಯಥಾಶಕ್ತಿ ರತ್ನಗಳನ್ನಿರಿಸಿ, ಗಂಧ ಹಚ್ಚಿ, ನಾಲ್ಕು ದಿಕ್ಕುಗಳಲ್ಲಿ ಕಂಚಿನ ಪಾತ್ರೆಗಳನ್ನಿಟ್ಟು ಹಾಲು, ಮೊಸರು, ತುಪ್ಪ, ಜೇನುತುಪ್ಪ ತುಂಬಿ, ಮೇಲೆ ಒಂದು ಸಂಪಿಗೆಯ ಗೊನೆಯನ್ನು ತಂದಿರಿಸಬೇಕು. ಒಂದು ಕಲಶವನ್ನು ಸ್ಥಾಪಿಸಿ ಹೊರಗೆ ದಾನ ಕೊಡಬೇಕು. ದಾನ ಕೊಡುವಾಗ,

**"ಯಾನಿ ಕಾನಿ ಚ ಪಾಪಾನಿ, ಮಯಾ ಲೋಭಾತ್ ಕೃತಾನಿ ವೈ।**
**ಲೋಹಪಾತ್ರಾದಿ ದಾನೇನ ಪ್ರಣಶ್ಯಂತು ಮಮಾಶು ವೈ॥"**

ಎಂದು ಮಂತ್ರ ಹೇಳಿ, ಪಾದದ ಬಳಿಯಲ್ಲಿ. ಕಬ್ಬಿಣ ಪಾತ್ರೆಯನ್ನು ಇಟ್ಟು ದಾನ ಕೊಡಬೇಕು.

ಇದರಂತೆ ಎಳ್ಳು ತುಂಬಿದ ಪಾತ್ರೆಯನ್ನು ಎಡಗಾಲ ಬಳಿಯಲ್ಲಿಯೂ, ಜೇನು ತುಂಬಿದ ಪಾತ್ರೆಯನ್ನು ಬಲಗಾಲ ಬಳಿಯಲ್ಲಿಯೂ ಇಟ್ಟು, ಕಿವಿಯಿಂದ ಧರ್ಮ ವಿರುದ್ಧ ಮಾತುಗಳನ್ನು ಕೇಳುವದರಿಂದ ಬಂದ ಪಾಪ ಪರಿಹಾರವಾಗಲಿ ಎಂದು ದಾನ ಕೊಡಬೇಕು. ಚಾಡಿಕೋರತನ, ಮಾಂಸಭಕ್ಷಣ, ಪರರಿಗೆ ಅಪವಾದ ಹೊರಿಸುವದು ಮುಂತಾದವುಗಳಿಂದ ಬರುವ ಪಾಪಗಳು ನಾಶವಾಗಲಿ ಎಂದು ತಾಮ್ರ ಪಾತ್ರೆಕೊಡಬೇಕು. ವ್ಯಭಿಚಾರ ದೋಷ ಪರಿಹಾರಕ್ಕೆ ಬೆಳ್ಳಿ ಪಾತ್ರೆ ದಾನ ಕೊಡಬೇಕು. ಕೃಷ್ಣಾಜಿನದ ಜೊತೆಗೆ ಒಂದು ಪ್ರಶಸ್ತವಾದ ಎಲೆಯ ಮೇಲೆ ಎಲ್ಲ ವಿಧವಾದ ತರಕಾರಿ ಹಣ್ಣು ಹಂಪಲ ಮುಂತಾದವುಗಳನ್ನು ಇಟ್ಟು ದಾನನೀಡಬೇಕು. ಇದನ್ನು ದಾನ ಕೊಳ್ಳುವ ಬ್ರಾಹ್ಮಣನು ಸ್ನಾನ ಮಾಡಿ ಜೋಡು ವಸ್ತ್ರ ಧರಿಸಿ, ಕೃಷ್ಣಾಜಿನದ ಬಾಲ ಬಳಿಯಲ್ಲಿ ನಿಂತು:

**"ಕೃಷ್ಣ: ಕೃಷ್ಣಗಲೋ ದೇವಃ ಕೃಷ್ಣಾಜಿನ ಧರಸ್ತಥಾ**
**ತದ್ದಾನಾತ್ ಭೂತ ಪಾಪಸ್ಯ ಪ್ರೀಯತಾಂ ವೃಷಭಧ್ವಜಃ॥**

ಈ ಕೃಷ್ಣಾಜಿನದ ದಾನದಿಂದ ಕೊರಳಿನಲ್ಲಿ ಕಪ್ಪು ಬಣ್ಣವುಳ್ಳ ಕೃಷ್ಣಾಜಿನ ಧರಿಸಿದ ಮಹಾದೇವರು ಪ್ರೀತನಾಗಿ ನನ್ನ ಪಾಪಗಳನ್ನು ಪರಿಹರಿಸಲಿ. ಈ ವಿಧಿಯಿಂದ ಕೃಷ್ಣಾಜಿನ ದಾನಕೊಟ್ಟು ಆ ಬ್ರಾಹ್ಮಣನನ್ನು ಮುಟ್ಟಬಾರದು. ಈ ದಾನ ಸ್ವೀಕರಿಸಿದ ಬ್ರಾಹ್ಮಣನು ಸ್ಮಶಾನದಲ್ಲಿಯ ಕಂಬವಿದ್ದಂತೆ. ಅವನನ್ನು ಮನೆಯಿಂದ ಹೊರಗೆ ಕಳಿಸಿ ಮಂಗಲಸ್ನಾನಮಾಡಬೇಕು. ಅನಂತರ ಒಂದು ಕಲಶದಲ್ಲಿ ನೀರನ್ನು ತುಂಬಿ, ಸಂಪಿಗೆಯ ತೆನೆಯನ್ನು ಒಳಗೆ ಹಾಕಿ, "ಅಪ್ಯಾಯಸ್ವ", "ಸಮುದ್ರ ಜ್ಯೇಷ್ಠಾ" ಮುಂತಾದ ಮಂತ್ರಗಳಿಂದ ಅಭಿಮಂತ್ರಣಮಾಡಿ, ಅದಕ್ಕೆ ಒಂದು ಬಟ್ಟೆ ಹೊದಿಸಿ, ತಲೆಯ ಮೇಲೆ ಹೊತ್ತುಕೊಂಡು ಹೋಗಿ, ನಾಲ್ಕು ದಾರಿಗಳು ಕೂಡುವ ಕೂಟ ಬೀದಿಯಲ್ಲಿ ಅರಿವೆ ಸಹಿತ ಆ ಕೊಡವನ್ನು ಒಗೆದು ಬಿಡಬೇಕು. ಇದರಿಂದ ಸಮಗ್ರ ಭೂಮಿ ದಾನಮಾಡಿದ ಫಲವು ಬರುವದು. ಇದರಿಂದ ಪ್ರಳಯಕಾಲದವರೆಗೆ ಸ್ವರ್ಗದಲ್ಲಿದ್ದು ಹಕ್ಕಿಗಳಂತೆ ಕಾಮಚಾರಿಯಾಗಿ ಸುಖ ಪಡುವನು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರ ಏಳನೆಯ ಅಧ್ಯಾಯ ಮುಗಿದುದು*

## ವೃಷೋತ್ಸರ್ಗ ವಿಧಿ ವರ್ಣನೆ — ಅಧ್ಯಾಯ - ೨೦೮

**ಮನುರುವಾಚ :**

**ಭಗವನ್ ಶ್ರೋತುಮಿಚ್ಛಾಮಿ ವೃಷಭಸ್ಯ ಚ ಲಕ್ಷಣಮ್।**
**ವೃಷೋತ್ಸರ್ಗವಿಧಿಂ ಚೈವ ತಥಾ ಪುಣ್ಯಫಲಂ ಮಹತ್॥**

**ಮನು :-** ಭಗವನ್, ಎತ್ತಿನ ಲಕ್ಷಣಗಳೇನು? ಎಂತಹ ಎತ್ತನ್ನು ದೇವರಿಗೆ ಬಿಡಬೇಕು? ಅದರಿಂದ ಬರುವ ಪುಣ್ಯವೇನು? ಫಲವೇನು? ಇದೆಲ್ಲ ತಿಳಿಯಬೇಕೆಂದು ನನ್ನ ಆಶೆ. ಹೇಳಿರಿ.

**ಮತ್ಸ್ಯ :-** ಆಕಳನ್ನು ಮೊದಲು ಪರೀಕ್ಷಿಸಬೇಕು, ಅದು ಸಾಧು ಸ್ವಭಾವದ್ದಿರಬೇಕು, ಊನವಾಗಿರಬಾರದು, ರೋಗಿಷ್ಠವಾಗಿರಬಾರದು, ಕರು ಬದುಕಿರಬೇಕು, ಬಣ್ಣ, ಗೊರಸು, ಕೊಂಬು ಆಕಾರ, ನಿಲುವು ಎಲ್ಲವೂ ನೋಡಲು ಚೆನ್ನಾಗಿರಬೇಕು. ಅದರ ಮೈಮೇಲೆ ಬಲಭಾಗದಲ್ಲಿ ಬಲಸುಳಿ, ಎಡಭಾಗದಲ್ಲಿ ಎಡಸುಳಿ ಇದ್ದು, ಬೆನ್ನು ಹರವಾಗಿರಬೇಕು. ಕೆಂಪು ನಾಲಿಗೆ, ಆಕರ್ಷಕ ಕಣ್ಣು ಸುಂದರ ಮುಖ ಚರ್ಯೆಯಿದ್ದು, ಆರು ಅಡಿ ಎತ್ತರವಾಗಿರಬೇಕು. ಐದು ಸ್ಥೂಲವಾಗಿ ಸಮಾನವಾಗಿ ಹರವಾಗಿರಬೇಕು. ಎಂಟು ಆಯತವಾಗಿ ಇದ್ದ ಧೇನು ಸುಲಕ್ಷಣ ಉಳ್ಳದ್ದು ಎಂದು ತಿಳಿಯಬೇಕು.

**ಮನು :-** ಎತ್ತರವಾದ ಆರು ಯಾವವು? ಸಮನಾದ ಐದು ಸ್ಥೂಲವಾವು? ಎಂಟು ಆಯುತವಾದವುಗಳ ಯಾವವು?

**ಮತ್ಸ್ಯ:-** ಹಸುವಿನ ಶುಭ ಲಕ್ಷಣ ಹೇಳುತ್ತೇನೆ. ಎದೆ, ಬೆನ್ನು, ಕೊರಳು, ನಡು, ಹಾಗೂ ಎರಡು ಪಾರ್ಶ್ವ ಇವು ಆರು ಎತ್ತರವಾಗಿರಬೇಕು. ಎರಡು ಕಣ್ಣು, ಎರಡು ಕಿವಿ, ಹಣೆ ಸಮ ಪ್ರಮಾಣದಲ್ಲಿ ವಿಶಾಲವಾಗಿರಬೇಕು. ಬಾಲ, ತೊಡೆ, ಎರಡು ಗಂಗೆದೊಗಲು

ಹಾಗೂ ನಾಲ್ಕು ಮೊಲೆಗಳು ಇವು ಎಂಟು ಮತ್ತು ಕೊರಳು, ತಲೆ ಒಟ್ಟು ಹತ್ತು ಅಂಗಗಳು ಉದ್ಧವಾಗಿರಬೇಕು. ಇಂತಹ ಹಸುವಿನಿಂದ ಹುಟ್ಟಿದ ಒಳ್ಳೇ ಲಕ್ಷಣಗಳಿಂದ ಕೂಡಿದ ಎತ್ತನ್ನು ಪರೀಕ್ಷಿಸಿ ದಾನಕೊಡಬೇಕು. ಎತ್ತರವಾದ ಕಿವಿ, ಹೆಗಲು, ದಪ್ಪವಾದ ಸರಳ ಬಾಲ, ವೈಡೂರ್ಯ ರತ್ನದಂತೆ ಹೊಳೆಯುವ ಕಣ್ಣು, ಪ್ರವಾಳದಿಂದ ಮಾಡಿದಂತಿದ್ದ ಕೋಡು, ಮಲ್ಲಿಗೆಯ ಅರಳಿನಂತಿರುವ ಕಣ್ಣು. ಈ ಎಲ್ಲ ಲಕ್ಷಣಗಳುಳ್ಳ ಬಣ್ಣದಿಂದ ಕೆಂಪು ಅಥವಾ ಕಪಿಲ ವರ್ಣದ ಎತ್ತನ್ನು ಬಿಡಬೇಕು. ಸೊಟ್ಟಗಾಲು, ಬೆದರುಗಣ್ಣು, ಕುಂಟಗಾಲು, ಗಿಡ್ಡ ಆಕಾರ, ಕಾಗೆ ಬಣ್ಣ, ಒಣಗಿದ ಕೋಡು, ಕರಿಮೋರೆವುಳ್ಳ ಎತ್ತುಗಳನ್ನು ಬಿಡಬಾರದು. ಮತ್ತು ಮನೆಯಲ್ಲಿ ಇಟ್ಟುಕೊಳ್ಳಬಾರದು. ಎತ್ತರವಾದ ಮತ್ತು ಗಜದಂತೆ ಗಂಭೀರವಾಗಿ ನಡೆಯುವ ಹರವಾದ ಎದೆಯುಳ್ಳ ಉನ್ನತ ನಿಲುವಿನ, ಬಲಿಷ್ಠವಾದ, ಎತ್ತು ಬಿಡಲಿಕ್ಕೂ, ಮನೆಯಲ್ಲಿ ಇಡಲಿಕ್ಕೂ ಯೋಗ್ಯವೆನಿಸಿದೆ. ಚಂದ್ರಬಣ್ಣದ ಬಿಳಿ ಎತ್ತಿಗೆ ತಲೆ, ಕಿವಿ, ಹಣೆ, ಬಾಲ, ಕಾಲು, ಕಣ್ಣುಗಳು ಕಪ್ಪಗಿದ್ದರೆ ಪ್ರಶಸ್ತ. ಎತ್ತು ಕಪ್ಪು ಬಣ್ಣದ್ದಿದ್ದರೆ, ಇವೆಲ್ಲವೂ ಬಿಳಿ ಬಣ್ಣದ್ದಿರಬೇಕು. ಮುಂಭಾಗದಲ್ಲಿ ಎತ್ತರ ನಿಲುವಿನ, ನೀಲಿ ಬಣ್ಣದ, ಎತ್ತು ಒಳ್ಳೆಯದು. ಮೈಮೇಲಿನ ಕೂದಲುಗಳು ಧ್ವಜ, ಪತಾಕೆ, ಶಕ್ತಿ ಆಯುಧದ ಆಕಾರದಲ್ಲಿದ್ದರೆ ಶುಭ. ಮತ್ತು ವಿಜಯ ಲಾಭ. ಬಲಕ್ಕೆ ತಾವಾಗಿ ತಿರುಗುವ ಎತ್ತರ ತಲೆಯ ಉದ್ದಕೊರಳಿನ ವೃಷಭಗಳು ಸರ್ವಶ್ರೇಷ್ಠ. ಖುರಗಳು ಪ್ರವಾಳದಂತಿದ್ದರೆ ಮಂಗಳಕರ.

ಬಣ್ಣದಿಂದ ತಾಮ್ರದಂತೆ ಕೆಂಪು ಅಥವಾ ಬಿಳಿ, ಕಪ್ಪು, ಸಾದಗೆಂಪು, ಉದ್ದ ಕಿವಿ, ಎತ್ತರಣಿಣಿ, ಮಿದುಕೂದಲು, ಕೆಂಪು ಕಣ್ಣು ಅದರಂತೆ ಕೆಂಪಾದ ಕೋಡಿನ ನಡುವಿನ ಭಾಗ, ಬಿಳಿ ಹೊಟ್ಟೆ, ಅಥವಾ ಸರ್ವಾಂಗದಲ್ಲಿ ಕಪಿಲವಾದ ಎತ್ತು ಬ್ರಾಹ್ಮಣನಿಗೆ ಪ್ರಶಸ್ತ. ಕೆಂಪು ಬಣ್ಣದ ಎತ್ತು ಕ್ಷತ್ರಿಯನಿಗೂ, ಸಾದಗಪ್ಪು ವೈಶ್ಯನಿಗೂ ಅಚ್ಚ ಕರಿ ಬಣ್ಣದ್ದು ಹೊಲೆಯನಿಗೂ ಶುಭಕರವಾಗಿದೆ. ಬೆಕ್ಕಿನ ಕಾಲು, ಬಗೆ ಬಗೆಯ ಬಣ್ಣ ಉಳ್ಳ, ಕಪಿಲಗೋವು ಶುಭದಾಯಕ. ಬಿಳಿಯ ಬಣ್ಣ, ರತ್ನದಂತೆ ಹೊಳೆಯುವ ಕಣ್ಣು, ಬೆಕ್ಕಿನ ಕಾಲು ಉಳ್ಳ ಎತ್ತು ಶುಭಲಕ್ಷಣ ಉಳ್ಳದ್ದು ಎಂದು ತಿಳಿಯಬೇಕು. ಕಿವಿಯ ಬದಿಯಲ್ಲಿ ಬಿಳಿ ಬಣ್ಣ ಉಳ್ಳ ಕೆಂಪು ಎತ್ತು ನಂದಿಮುಖ ಎನಿಸುತ್ತದೆ. ಹೊಟ್ಟೆ, ಬೆನ್ನು, ಬೆಳ್ಳಗಿದ್ದ ಎತ್ತು ಸಮುದ್ರ ವೃಷಭ ಎಂದು ಹೆಸರಿದ್ದು ವಂಶ ವೃದ್ಧಿಕರವಾಗಿದೆ. ಮಲ್ಲಿಗೆಯ ಹೂವಿನಂತೆ ಮೈಮೇಲೆ ಅಲ್ಲಲ್ಲಿ ಚಿಹ್ನವುಳ್ಳ ಎತ್ತು ಮಂಗಳಕರ. ಮೈಮೇಲೆ ಕಮಲದ ಆಕಾರ ಮತ್ತು ಗುಂಡು ಸುಳಿಗಳುಳ್ಳ ಎತ್ತು ಭಾಗ್ಯಪ್ರದವಾಗಿದೆ. ಕಾಲು, ಮುಖ, ಬಾಲಗಳು, ಬೆಳ್ಳಗಿದ್ದು, ದ್ರಾಕ್ಷಾರಸದಂತೆ ಬಣ್ಣವುಳ್ಳ ಎತ್ತಿಗೆ ನೀಲ ಎಂದು ಹೆಸರು, ಇದನ್ನು ದೇವರ ಹೆಸರಿನಲ್ಲಿ ಬಿಡಬೇಕು. ಇಂತಹ ಒಳ್ಳೆ ಲಕ್ಷಣದಿಂದ ಕೂಡಿದ ಎತ್ತು ಮನೆಯಲ್ಲಿ ಇದ್ದರೆ ಸರಿ. ಇಲ್ಲದಿದ್ದರೆ ಕೊಂಡಾದರೂ ದೇವರಿಗೆ ಬಿಡಬೇಕು. ಜನರಲ್ಲಿ ಬಹು ಪ್ರಸಾರವುಳ್ಳ ಒಂದುಗಾದೆಯ ಮಾತಿದೆ. "ಗೌರೀಂ ಚಾಪ್ಯುದ್ವಹೇತ್ ಕನ್ಯಾಂ ನೀಲಂ ವಾ ವೃಷಮುತ್ಸೃಜೇತ್" ಕನ್ಯೆಯನ್ನು ಮದುವೆಯಾಗಬೇಕಾದರೆ ಬೆಳ್ಳಗಿನ ಹುಡುಗಿಯನ್ನೇ ಮದುವೆಯಾಗಬೇಕು. ಎತ್ತನ್ನು ಬಿಡುವದಾದರೆ ನೀಲವರ್ಣದ ಎತ್ತನ್ನೇ ಬಿಡಬೇಕು.

ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಎಂಟನೆಯ ಅಧ್ಯಾಯ ಮುಗಿದುದು

## ಪತಿವ್ರತಾ ಮಾಹಾತ್ಮ್ಯದಲ್ಲಿ ಸಾವಿತ್ರೀ ಉಪಾಖ್ಯಾನಮ್

**ಅಧ್ಯಾಯ - ೨೦೯**

**ಸೂತ ಉವಾಚ :**

**ತತಃ ಸ ರಾಜಾ ದೇವೇಶಂ ಪಪ್ರಚ್ಛಾಽಮಿತವಿಕ್ರಮಃ।**
**ಪತಿವ್ರತಾನಾಂ ಮಾಹಾತ್ಮ್ಯಂ ತತ್ಸಂಬದ್ಧಾಂ ಕಥಾಮಪಿ॥**

**ಸೂತ:-** ಅನಂತರ ಮಹಾಪರಾಕ್ರಮಶಾಲಿಯಾದ ಮನುಮಹಾರಾಜನು ದೇವಪತಿಯಾದ ಮತ್ಸ್ಯನಿಗೆ ಪತಿವ್ರತೆಯರ ಕಥೆಯನ್ನು ಹೇಳಿರಿ. ಪತಿವ್ರತೆಯರಲ್ಲಿ ಶ್ರೇಷ್ಠರು ಯಾರು ? ಮೃತ್ಯುವನ್ನು ಸೋಲಿಸಿದವಳು ಯಾವಳು? ಯಾವ ಸತೀಮಣಿಯ ಹೆಸರು ಹೇಳಿದರೆ ಜನರ ಪಾಪಗಳೆಲ್ಲ ನಾಶವಾಗುವವು? ಅಂತಹ ಸಾಧ್ವೀಮಣಿಯ ಚರಿತ್ರೆ ನಿರೂಪಿಸಿರಿ.'' ಎಂದು ಕೇಳಿದನು. ಆಗ ಮತ್ಸ್ಯಾವತಾರಿ ಶ್ರೀ ಹರಿಯು ಪತಿವ್ರತೆಯ ಮಹಿಮೆಯನ್ನು ಹೇಳಿದನು.

**ಮತ್ಸ್ಯ:-** ಪತಿವ್ರತಾಸ್ತ್ರೀಯರ ಮನಸ್ಸಿನ ವಿರುದ್ಧವಾಗಿ ಯಮಧರ್ಮನೂ ಕೂಡ ನಡೆಯಲಾರ, ನುಡಿಯಲಾರ, ಅಂಥವನಿಗೂ ಅಂತಹ ಸತಿಯರು ಪೂಜ್ಯರಾಗಿದ್ದಾರೆ. ಮೃತ್ಯುಪಾಶದಿಂದ ಪತಿಯನ್ನು ಬಿಡಿಸಿ ತಂದ ಪತಿವ್ರತೆಯ ಪಾಪ ನಾಶಕವಾದ ಕತೆಯನ್ನು ಹೇಳುತ್ತೇನೆ ಕೇಳು

ಮದ್ರದೇಶದಲ್ಲಿ ಶಾಕಲವಂಶದ ಅಶ್ವಪತಿಯೆಂಬ ರಾಜನು ಹಿಂದೆ ವಾಸವಾಗಿದ್ದನು. ಆ ಮಹಾರಾಜನಿಗೆ ಸಂತಾನವಿರಲಿಲ್ಲ. ಸಂತಾನಾಪೇಕ್ಷೆಯಿಂದ ಅವನು ಸರ್ವಾಭೀಷ್ಟಗಳನ್ನು ನೀಡುವ ಸಾವಿತ್ರೀದೇವಿಯನ್ನು ಆರಾಧಿಸಿದನು. ಮಂತ್ರಸಿದ್ಧರಾದ ಒಳ್ಳೊಳ್ಳೆ ಬ್ರಾಹ್ಮಣರನ್ನು ಕರೆಯಿಸಿ, ಪ್ರತಿ ದಿನವೂ ಸಾವಿತ್ರೀದೇವಿಯನ್ನು ಉದ್ದೇಶಿಸಿ ನೂರು ಆಹುತಿಗಳನ್ನು ನೀಡಿ ಹೋಮಮಾಡಿ, ಪೂಜಿಸುತ್ತಿದ್ದನು. ಹೀಗೆ ಹತ್ತು ತಿಂಗಳು ಕಳೆದ ಬಳಿಕ ಚತುರ್ಥೀತಿಥಿಯಂದು ಸಾವಿತ್ರೀದೇವಿಯು ಅವನಿಗೆ ಪ್ರತ್ಯಕ್ಷಳಾಗಿ ಹೇಳಿದಳು. ''ರಾಜನೆ, ನಾನು ನಿನ್ನ ಭಕ್ತಿಗೆ ಮೆಚ್ಚಿದೆ. ನಿನಗೆ ನನ್ನ ಅನುಗ್ರಹದಿಂದ ಒಳ್ಳೇ ಮಗಳು ಜನಿಸುವಳು.''

ಇಷ್ಟು ಹೇಳಿ, ದೇವಿಯು ಅದೃಶ್ಯಳಾದಳು. ಮಹಾರಾಜನ ಕಣ್ಣಿಗೆ ಮಿಂಚು ಮಿಂಚಿದಂತಾಯಿತು. ಮಹಾರಾಜನಿಗೆ ಮಾಲತಿ ಎಂಬ ಪತಿವ್ರತೆಯಾದ ಪತ್ನಿ ಇದ್ದಳು. ಅವಳು ಸಕಾಲದಲ್ಲಿ ಒಂದು ಹೆಣ್ಣು ಮಗು ಹೆತ್ತಳು ರೂಪದಿಂದ ಅವಳು ಪ್ರತಿಸಾವಿತ್ರಿಯೇ. ಹೋಮಮಾಡಿ, ಸಂತೋಷಪಡಿಸಿದ ಸಾವಿತ್ರಿದೇವಿಯ ರೂಪದಂತೆಯೇ ಸುಂದರವಾದ ರೂಪವಿರುವದರಿಂದ ಈ ನನ್ನ ಮಗಳಿಗೆ 'ಸಾವಿತ್ರಿ' ಎಂದೇ ಹೆಸರಿರಲಿ, ಎಂದು ಮಹಾರಾಜನು ಬ್ರಾಹ್ಮಣರಿಗೆ ಹೇಳಿದನು.

ಸಾವಿತ್ರಿಯ ಮೈಯಲ್ಲಿ ಹರೆಯದ ಸಿರಿ ಮೈದೋರಿದಾಗ, ಅಶ್ವಪತಿಯು ಅವಳನ್ನು ಸತ್ಯವಂತನಿಗೆ ಕೊಟ್ಟು ಮದುವೆ ಮಾಡಬೇಕೆಂದು ನಿಶ್ಚಯಿಸಿದನು. ಅದೇ ದಿನ ನಾರದರು ರಾಜನಿದ್ದಲ್ಲಿಗೆ ಬಂದು- ''ಇನ್ನು ಒಂದು ವರುಷದಲ್ಲಿ ನಿನ್ನ ಸತ್ಯವಂತನ ಆಯುಷ್ಯ

ಕ್ಷೀಣವಾಗುವದು'' ಎಂದು ಹೇಳಿದರು. ''ಒಮ್ಮೆ ನಿಶ್ಚಯಮಾಡಿದ ಬಳಿಕ ಆ ಕನ್ಯೆಯನ್ನು ಕೊಟ್ಟಂತೆಯೇ ಸರಿ. ಆದರಿಂದ ನಿರ್ಣಯವನ್ನು ಬದಲಿಸುವದು ಧರ್ಮವಿರುದ್ಧವೆಂದು ತಿಳಿದ ಅಶ್ವಪತಿಯು ಸತ್ಯವಂತನಿಗೇ ಸಾವಿತ್ರಿಯನ್ನು ಕೊಟ್ಟು ಮದುವೆಮಾಡಿದನು. ಸಾವಿತ್ರಿಯು ಪತಿಯ ಮನೆಗೆ ಬಂದು, ಅತ್ತೆ, ಮಾವ, ಪತಿ, ಎಲ್ಲರ ಸೇವೆಯನ್ನು ಪರಿಪರಿಯಿಂದ ಮಾಡಿದಳು. ತಂದೆಯ ಮನೆಯಲ್ಲಿ ಕೇಳಿದ ನಾರದರ ಮಾತು ಅವಳ ಅಂತಃಕರಣವನ್ನು ಚಿಂತಾರೂಪದಿಂದ ಕೊರೆಯುತ್ತಲೇ ಇತ್ತು. ಸತ್ಯವಂತನ ತಂದೆಯಾದ ದ್ಯುಮತ್ಸೇನನು ರಾಜ್ಯಭ್ರಷ್ಟನಾಗಿ ಅರಣ್ಯದಲ್ಲಿದ್ದನು. ಅವನ ಕಣ್ಣಿನ ದೃಕ್ ಶಕ್ತಿಯು ಇಂಗಿಹೋಗಿದ್ದಿತು. ಇಂತಹ ಗುಡಿಸಲಿನ ಗೃಹಸ್ಥನಾದ ತನ್ನ ಮನೆಗೆ ರಾಜಕುಮಾರಿಯಾದ ಸಾವಿತ್ರಿಯು ಸೊಸೆಯಾಗಿ ಬಂದದ್ದು ಸಂತೋಷ ಎನಿಸಿದರೂ ಸಮಾಧಾನವಾಗಲಿಲ್ಲ. ಆದರೆ ಸಾವಿತ್ರಿಯು ಮಾತ್ರ ಆ ಬಡತನದ ಜೀವನವನ್ನೇ ಭಾಗ್ಯವೆಂದು ತಿಳಿದು ಅನನ್ಯ ಭಕ್ತಿಯಿಂದ ತನ್ನ ಪತಿಯನ್ನೂ ಮುಪ್ಪಿನ ಅತ್ತೆಯನ್ನೂ ಕುರುಡು ಮಾವನನ್ನೂ ಸೇವಿಸಿದಳು.

ಒಂದು ವರುಷ ಮುಗಿಯಲು ಬಂದಿತು. ನಾರದರು ಹೇಳಿದಂತೆ ನಾಲ್ಕನೇಯ ದಿನ ಸತ್ಯವಾನನ ಮರಣವು ಸನ್ನಿಹಿತವಾಗಿತ್ತು. ಮಾವನ ಅಪ್ಪಣೆ ಪಡೆದು ರಾಜಕುಮಾರಿಯಾದ ಸಾವಿತ್ರಿಯು ಮೂರು ದಿನ ಉಪವಾಸ ಮಾಡಿ ಸಾವಿತ್ರೀದೇವಿಯ ಆರಾಧನೆ ಮಾಡಿದಳು.

ನಾಲ್ಕನೇಯ ದಿನ ಬೆಳಗಾಯಿತು. ಸತ್ಯವಾನನು, ಹೂವು-ಹಣ್ಣುಗಳನ್ನು ತರಲಿಕ್ಕಾಗಿ ಅರಣ್ಯಕ್ಕೆ ಹೊರಟನು. ಸಾವಿತ್ರಿಯು ಪತಿಯೊಡನೆ ವನಕ್ಕೆ ಹೋಗಲು ಮಾವನನ್ನು ಕೇಳಿಕೊಂಡಳು. ಉಪವಾಸವಿದ್ದ ಸೊಸೆಯನ್ನು ಕಾಡಿಗೆ ಕಳಿಸಿಕೊಡಲು ದ್ಯುಮತ್ಸೇನನಿಗೆ ಇಷ್ಟವಿರಲಿಲ್ಲ. ಆದರೆ ಸಾವಿತ್ರಿಯ ಮನಸ್ಸು ನೋಯಬಾರದೆಂದು ಅಪ್ಪಣೆ ಕೊಟ್ಟನು. ಸಾವಿತ್ರಿಯು ಮುಂದೆ ಗಂಡನಿಗೆ ಒದಗುವ ಗಂಡಾತರದ ಕಲ್ಪನೆಯಿಂದ ತಲ್ಲಣಿಸಿ ಹೋಗಿದ್ದಳು. ಅವನೊಡನೆ ಘೋರವಾದ ವನಕ್ಕೆ ತೆರಳಿದಳು. ಹೃದಯದಲ್ಲಿ ದುಃಖ ಉಕ್ಕುತ್ತಿದ್ದರೂ ಎಲ್ಲವನ್ನು ಬಚ್ಚಿಟ್ಟುಕೊಂಡು, ಹುಸಿನಗೆಯನ್ನು ಸೂಸುತ್ತ ಗಂಡನೊಡನೆ ಮಾತನಾಡುತ್ತಿದ್ದಳು. ಗಿಡಬಳ್ಳಿಗಳ ಬಗ್ಗೆ ವಿಚಾರ ಮಾಡುತ್ತಿದ್ದಳು. ಮೊದಲೇ ಉಪವಾಸ, ಮೇಲೆ ದುರ್ಗಮ ಅರಣ್ಯಮಾರ್ಗ. ನಡೆ ನಡೆದು ಆಯಾಸವಾಗಿ ಆ ರಾಜಕುಮಾರಿಯು ಬಳಲಿಕೆಯಿಂದ ಬೆಂದು ಬಸವಳಿದಳು. ಅವಳಿಗೆ ಆ ಕಾಡಿನಲ್ಲಿ ಬಗೆಬಗೆಯ ಗಿಡಗಳನ್ನು, ಮೃಗಗಳನ್ನು ತೋರಿಸುತ್ತ ಸತ್ಯವಂತನು ಸಂತೈಸುತ್ತ ಮುಂದೆ ಕರೆದುಕೊಂಡು ನಡೆದನು.

*ಶ್ರೀ ಮತ್ಸ್ಯಮಹಾಪುರಾಣದಲ್ಲಿ ಎರಡನೂರಒಂಬತ್ತನೆಯ ಅಧ್ಯಾಯ ಮುಗಿದುದು*



ಸಾಯಲಿರುವವನಿಂದ, ನಿಸರ್ಗ ವರ್ಣನೆ

ಅಧ್ಯಾಯ - ೨೧೦

**ಸತ್ಯವಾನ್ ಉವಾಚ :**

**ವನೇSಸ್ಮಿನ್ ಶಾದ್ವಲಾಕೀರ್ಣೇ ಸಹಕಾರಂ ಮನೋಹರಂ ।**
**ನೇತ್ರಘ್ರಾಣಸುಖಂ ಪಶ್ಯ ವಸಂತಂ ರತಿವರ್ಧನಂ ॥**

**ಸತ್ಯವಾನ :-** ಪ್ರಿಯೇ, ಹೆಚ್ಚು ಹಸಿರುಹುಲ್ಲುಗಾವಲುಗಳು ಕಣ್ಣಿಗೆಸೆಯುವ ಈ ವನದಲ್ಲಿ ಆ ಮನೋಹರವಾದ ಮಾಮರವನ್ನು ನೋಡು. ಹಸಿರು ಕುಸುರು, ಕುಡಿ ಮಿಡಿ, ಹಣ್ಣುಕಾಯಿ, ಹಾಗೂ ಹೂಗಳ ಸುಗ್ಗಿಯನ್ನು ತಂದ ಈ ವಸಂತಮಾಸವು ಕುಸುಮವೃದ್ಧಿಯನ್ನು ಮಾಡಿ ಕಣ್ಣುಗಳಿಗೂ ಘಾಣೇಂದ್ರಿಯಕ್ಕೂ ಸುಖವನ್ನು ಸೊಂಪು ಕಂಪುಗಳಿಂದ ಬೀರುತ್ತದೆ. ಈ ವನದ ಕಡೆಗೆ ನೋಡು. ಈ ವಸಂತಮಾಸವು ಬಿರಿದ ಹೂಗಳಿಂದ ನನ್ನನ್ನೇ ನೋಡಿ ನಗುತ್ತಿರುವಂತೆ ತೋರುವದು. ವನಾಂತರದಿಂದ ಹರಿದುಬರುವ ಸುಗಂಧವನ್ನು ಬೀರುವ ತಂಗಾಳಿಯು ನಮ್ಮಿಬ್ಬರ ಮಾರ್ಗಾಯಾಸವನ್ನು ಪರಿಹರಿಸುತ್ತದೆ. ಈ ಪಶ್ಚಿಮ ನಿಟ್ಟಿನಲ್ಲಿ ಅರಳಿದ ಕರ್ಣಿಕಾರ ಹೂಗಳಿಂದ ವನಶ್ರೇಣಿಯು ಬಂಗಾರ ಬೆಟ್ಟದಂತೆ ಶೋಭಿಸುತ್ತದೆ. ಕುಸುಮಗಳ ಆಸವವನ್ನು ಹೀರಿ ಮತ್ತವಾದ ದುಂಬಿಗಳ ಝೇಂಕಾರವು ಕಾಮನ ಧನುಷ್ಯದಟಂಕಾರದಂತೆ ಕೇಳುತ್ತದೆ. ಹಣ್ಣು ಚಿಗುರು ತಿಂದು ಕೋಗಿಲೆಗಳು ಮಧುರಕಂಠದಿಂದ ಕೂಗುತ್ತವೆ. ಸುಂದರವಾದ ಆ ವೃಕ್ಷಗಳಿಂದ ಈ ವನಸ್ಥಳವು ತಿಲಕವನ್ನು ಹಚ್ಚಿಕೊಂಡ ನಿನ್ನನ್ನೇ ಹೋಲುತ್ತದೆ.

ಇಲ್ಲಿರುವ ಕೋಗಿಲೆ, ಕಾಗೆ, ಕಪಿಂಜಲ, ಕಲವಿಂಕ ಶುಕ ಮುಂತಾದ ಪಕ್ಷಿಗಳೆಲ್ಲವೂ ಪ್ರೇಮದಿಂದ ತಮ್ಮ ತಮ್ಮ ಪ್ರಿಯಾರಾಧನೆ ಮಾಡುತ್ತವೆ. ಇಲ್ಲಿಯ ತರುಣಸಿಂಹವು, ಸಿಂಹಿಣಿಯ ಕಾಲಿನ ನಡುವೆ ಮಲಗಿ ನಿದ್ರಿಸುತ್ತದೆ. ಅದೋ ಅತ್ತ ಹುಲಿ ದಂಪತಿಗಳು ಸ್ವಚ್ಛಂದ ವಿಹಾರದಲ್ಲಿ ತೊಡಗಿವೆ. ದ್ವೀಪಿಯು ನಾಲಿಗೆಯಿಂದ ತನ್ನ ಪ್ರೇಯಸಿಯನ್ನು ನೆಕ್ಕುತ್ತಲಿದೆ. ಅಲ್ಲಿ ಹೆಣ್ಣುಕೋತಿಯು ತನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ ವಾನರಪತಿಯ ಕೂದಲುಗಳಲ್ಲಿ ಸಿಕ್ಕ ಹುಳುಗಳನ್ನು ಹೆಕ್ಕಿ ತೆಗೆದು, ಪತಿಗೆ ಸುಖವನ್ನುಂಟುಮಾಡುತ್ತದೆ. ಮದ್ದಾನೆಯು ಸರೋವರದಲ್ಲಿ ಸ್ನಾನಮಾಡಿ ತನ್ನ ಪ್ರೇಯಸಿಯಾದ ಹೆಣ್ಣಾನೆಗೆ ಕಮಲದ ದೇಟುಗಳನ್ನು ತುತ್ತುಮಾಡಿ ಕೊಡುತ್ತಲಿದೆ. ಸುಂದರಿ, ನಾವಿಬ್ಬರೂ ಜೋಡಿಯಾಗಿ ನಡೆಯುವದನ್ನು ಚಿಗರೆಗಳು ಕೌತುಕದಿಂದ ನಿನ್ನಂತೆ ಚಂಚಲ ಕಟಾಕ್ಷದಿಂದ ನಿರೀಕ್ಷಿಸುತ್ತಲಿವೆ. ಅತ್ತಮತ್ತೊಂದು ಹೆಣ್ಣು ಚಿಗರೆಯು ತನ್ನ ಕೋಡಿನತುದಿಯಿಂದ ಗಂಡುಚಿಗರೆಯ ಮುಖವನ್ನು ಪ್ರೇಮಾದರದಿಂದ ಚುಂಬಿಸುತ್ತದೆ. ಅತ್ತ ನೋಡು ಅಲ್ಲಿ ಒಂದು ಚಮರಮೃಗವು ಅಚ್ಚಬಿಳಿ ಬಾಲವುಳ್ಳ ಚಮರೀ ಮೃಗಿಯನ್ನು ಕಾಮಾಂಧವಾಗಿ ಬೆನ್ನಹತ್ತಿದೆ. ಮಡದಿಯೊಡನೆ ನೆರಳಿನಲ್ಲಿ ಕುಳಿತು, ಮೆಲಕಾಡಿಸುತ್ತಾ ಹೆಗಲಮೇಲೆ ಕುಳಿತಕಾಗೆಯನ್ನು ಜಾಡಿಸುವ ಆ ಗವಯ ಪಶುವನ್ನು ನೋಡು, ಇವಲ್ಲದೆ ಮಡದಿಯೊಡನೆ ಚಕ್ಕಂದ ಆಡುತ್ತಿರುವ ಆ ಕೊಳದಲ್ಲಿಯ ಹಂಸ, ಚಕ್ರವಾಕ, ಕಾರಂಡವ ಮುಂತಾದ ಪಕ್ಷಿ ದಂಪತಿಗಳನ್ನು ನೋಡು.

ಸುಂದರಿ, ನಾನು ಈವರೆಗೆ ಹಣ್ಣುಗಳನ್ನು ಹರಿದಿದ್ದೇನೆ. ನೀನು ಹೂಗಳನ್ನು ಹರಿದಿದ್ದೀ. ಆದರೆ ಕಟ್ಟಿಗೆಯನ್ನು ಮಾತ್ರ ನಾವು ಸಂಗ್ರಹಿಸಿಲ್ಲ ಅದುದರಿಂದ ನಾನು ಈಗ ಕಟ್ಟಿಗೆಯನ್ನು ಒಟ್ಟುಗೂಡಿಸುತ್ತೇನೆ. ನೀನು ಈ ಸರೋವರದ ದಡದಲ್ಲಿಯ ಗಿಡದಡಿಯಲ್ಲಿ ಕ್ಷಣಹೊತ್ತು ವಿಶ್ರಮಿಸು. ಇಗೋ ನಾನೀಗ ಬಂದೆ. ನೀನು ಇಲ್ಲಿಯೇ ಕಾಯುತ್ತಿರು.

**ಸಾವಿತ್ರಿ** :- ಹಾಗೆಯೇ ಆಗಲಿ, ನೀನು ನನಗೆ ಕಣ್ಣಿಗೆ ಕಾಣದಂತೆ ದೂರ ಮಾತ್ರ ಹೋಗಬಾರದು. ಈ ಗೊಂಡಾರಣ್ಯದಲ್ಲಿ ನನಗೇಕೋ ಭಯವಾಗುತ್ತದೆ.'' 'ಹಾಗೆಯೇ ಆಗಲಿ' ಎಂದು ಹೇಳಿ, ಸಾವಿತ್ರಿಯ ಕಣ್ಣೆದುರಿಗೆ ಸತ್ಯವಾನನು, ಕಟ್ಟಿಗೆಯನ್ನು ಒಟ್ಟುಗೂಡಿಸಿ ಕಡಿಯತೊಡಗಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರ ಹತ್ತನೆಯ ಅಧ್ಯಾಯ ಮುಗಿದುದು.*



## ಸಾವಿತ್ರ್ಯುಪಾಖ್ಯಾನಮ್

**ಅಧ್ಯಾಯ - ೨೧೧**

**ಮತ್ಸ್ಯ ಉವಾಚ:**

**ತಸ್ಯ ಪಾಟಯತಃ ಕಾಷ್ಠಂ ಜಜ್ಞೇ ಶಿರಸಿ ವೇದನಾ ।**
**ಸ ವೇದನಾರ್ತಸ್ಸಂಗಮ್ಯ ಭಾರ್ಯಾಂ ವಚನಮಬ್ರವೀತ್ ॥**

**ಮತ್ಸ್ಯ** :- ಸತ್ಯವಾನನು ಸಾವಿತ್ರಿಯ ಎದುರು ಸರೋವರದ ದಂಡೆಯ ಮೇಲೆ ಸಮೀಪದಲ್ಲಿಯೇ ಕಟ್ಟಿಗೆಯನ್ನು ಕಡಿಯತೊಡಗಿದ್ದನು. ಕಟ್ಟಿಗೆ ಒಡೆಯುವಾಗ ಒಮ್ಮೆಲೆ ಅವನಿಗೆ ತಲೆ ಶೂಲೆ ಪ್ರಾರಂಭವಾಯಿತು. ತಲೆಶೂಲೆಯ ವೇದನೆಯಿಂದ ಬಳಲಿ ಕಟ್ಟಿಗೆ ಒಡೆಯುವುದನ್ನು ಬಿಟ್ಟು ಮಡದಿಯಾದ ಸಾವಿತ್ರಿಯ ಬಳಿಗೆ ಬಂದು ಹೇಳಿದನು.

''ಆಯಾಸದಿಂದ ನನಗೆ ಒಮ್ಮೆಲೆ ತಲೆಶೂಲೆ ಬಂದಿದೆ. ಕಣ್ಣು ಕತ್ತಲೆಗೂಡಿದೆ. ಯಾವದೂ ತಿಳಿಯದಂತಾಗಿದೆ. ಆದುದರಿಂದ ನಿನ್ನ ತೊಡೆಯ ಮೇಲೆ ತಲೆಯಿಟ್ಟು ಈಗ ಮಲಗಿಕೊಳ್ಳಬೇಕೆಂದು ಇಚ್ಛಿಸುತ್ತಿದ್ದೇನೆ'' ಎಂದು ಹೇಳಿ ಆ ತರಳೆಯ ತೊಡೆಯ ಮೇಲೆ ತಲೆಯಿಟ್ಟು ಮಲಗಿ ಬಿಟ್ಟನು. ಪರಮ ಪತಿವ್ರತೆಯಾದ ಸಾವಿತ್ರಿಯು ಆಗ ಅಲ್ಲಿಗೆ ಸ್ವಯಂ ಯಮಧರ್ಮನೇ ಬಂದುದನ್ನು ನೋಡಿದಳು. ಕನ್ನೈದಿಲೆಯಂತೆ ಕಪ್ಪು ಬಣ್ಣ, ದಪ್ಪದೇಹ, ಉಟ್ಟದ್ದು ಪೀತಾಂಬರ, ತೊಟ್ಟದ್ದು ಮಿಂಚಿನ ಎಳೆಗಳಿಂದ ಮಾಡಿದಂತಿದ್ದ ಒಂದು ಮೇಲ್ವಸ್ತ್ರ, ಸೂರ್ಯನಂತೆ ತಲೆಯ ಮೇಲೆ ಹೊಳೆಯುವ ಕಿರೀಟ, ಥಳಥಳಿಸುವ ಕುಂಡಲ, ಎದೆಯಲ್ಲಿ ಸುಂದರವಾದ ಹಾರ, ರತ್ನದ ತೋಳು ಬಂದಿ. ನೋಡಲಿಕ್ಕೆ ನೀರು ತುಂಬಿದ ಮೋಡದಂತೆ, ಅವನನ್ನು ಬೆಂಬಲಿಸಿ ಒಂದು ಕಾಳಮೂರ್ತಿ ಹಿಂದಿನಿಂದ ಬರುತ್ತಲಿತ್ತು.

ಯಮಧರ್ಮನು ಅಲ್ಲಿಗೆ ಬಂದು ಪಾಶವನ್ನು ಬೀಸಿ ಅವಳ ಪತಿ ಸತ್ಯವಾನನ ದೇಹದಿಂದ ಹೆಬ್ಬೆರಳು ಪ್ರಮಾಣದ ಜೀವ ಜ್ಯೋತಿಯನ್ನು ಸೆಳೆದನು. ಪಾಶದಿಂದ ಬಿಗಿದು ಎಳೆದು ತನ್ನ ವಶದಲ್ಲಿ ತೆಗೆದುಕೊಂಡು ದ್ರುತಗತಿಯಿಂದ ದಕ್ಷಿಣದಿಕ್ಕಿಗೆ ಹೊರಟು ಬಿಟ್ಟನು. ಸಾವಿತ್ರಿಯು ತನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ ಗಂಡನ ಪ್ರಾಣ ಹೋದದ್ದು ನೋಡಿ ಪತಿಯನ್ನು ಸೆಳೆದು ಒಯ್ಯುವ ಯಮಧರ್ಮನನ್ನೇ ಬೆಂಬತ್ತಿ ನಡೆದಳು. ಕೈಮುಗಿದು, ನುಡಿದಳು. ಅವಳ ಹೃದಯ ನಡುಗುತ್ತಲಿತ್ತು.

"ತಾಯಿಯನ್ನು ಭಕ್ತಿಯಿಂದ ಸೇವಿಸಿದರೆ ಈ ಲೋಕದಲ್ಲಿ ಇರುವವರೆಗೆ ಸುಖವು, ತಂದೆಯನ್ನು ಸೇವಿಸಿದರೆ ಸ್ವರ್ಗ. ಗುರುವನ್ನು ಸೇವಿಸಿದರೆ ಬ್ರಹ್ಮಲೋಕ. ಈ ಮೂವರನ್ನು ಸೇವೆ ಮಾಡುವವರು ಎಲ್ಲ ಧರ್ಮವನ್ನು ಮಾಡಿದಂತೆ. ಈ ಮೂವರ ಸೇವೆ ಮಾಡದಿದ್ದವರು ಎಷ್ಟು ಧರ್ಮಕಾರ್ಯ ಮಾಡಿದರೂ ವ್ಯರ್ಥವೇ ಸರಿ. ಈ ಮೂವರು ಬದುಕಿರುವವರೆಗೆ ಪುರುಷನು ಬೇರೆ ಧರ್ಮಕಾರ್ಯವನ್ನು ಇದನ್ನು ಬಿಟ್ಟು ಆಚರಿಸಬಾರದು. ಈ ಮೂವರ ಸೇವೆ ಶುಷ್ರೂಷೆ ಮಾಡುವದೇ ಧರ್ಮ. ನನ್ನ ಪತಿಯಾದ ಸತ್ಯವಾನನು ಈ ಮಾತನ್ನು ತಪ್ಪದೇ ಆಚರಿಸಿದನು. ಅಂದ ಬಳಿಕ ಸ್ವಧರ್ಮದಲ್ಲಿ ನಿರತನಾದ ನನ್ನ ಪತಿಯನ್ನು ಅಕಾಲದಲ್ಲಿ ಏಕೆ ಸೆಳೆದುಕೊಂಡು ಹೊರಟಿರುವೆ ? ನಾನು ಕೂಡ ತಾಯಿ, ತಂದೆ, ಗುರುಗಳ ಸೇವೆ ಮಾಡಿದ್ದಲ್ಲದೆ, ನನ್ನ ಪತಿಸೇವೆಯನ್ನೂ ಮಾಡುತ್ತಲಿದ್ದೇನೆ. ನನ್ನ ಪತಿಯ ಪ್ರಾಣಗಳನ್ನು ನೀನೇಕೆ ಎಳೆದುಕೊಂಡು ಹೊರಟಿರುವೆ ?"

**ಯಮ** :- ನೀನು ಗುರುಹಿರಿಯರ ಹಾಗೂ ಅತ್ತೆ ಮಾವ ಮತ್ತು ನಿನ್ನ ಪತಿಯ ಸೇವೆ ಮಾಡಿದ್ದು ನಿಜ. ನೀನು ಪರಮಪತಿವ್ರತೆ ಎಂಬುದನ್ನೂ ನಾನು ಬಲ್ಲೆ. ನೀನು ಇಷ್ಟು ದಿನ ನಿನ್ನ ಪತಿ ಸೇವೆ ಮಾಡಿದ್ದರಿಂದ ನಿನಗೆ ಪುಣ್ಯ ಬಂದಿದೆ. ನನ್ನನ್ನು ನೀನು ತಡೆಯಬೇಡ, ಅದರಿಂದ ನಿನಗೆ ವ್ಯರ್ಥವಾಗಿ ಆಯಾಸವಾಗುವದು. ಇಲ್ಲಿಂದಲೇ ನೀನು ತಿರುಗಿ ಹೋಗು.

**ಸಾವಿತ್ರಿ** :- ಸ್ತ್ರೀಯರಿಗೆ ಪತಿಯೇ ಪರದೇವತೆ. ಪತಿಯೇ ಜೀವನ ಸರ್ವಸ್ವ. ಪ್ರಾಣೇಶ್ವರನಾದ ಪತಿಯನ್ನು ಅನುಸರಿಸುವದು ಸ್ತ್ರೀಯರ ಮುಖ್ಯ ಧರ್ಮವಾಗಿದೆ. ಹೆಣ್ಣುಮಕ್ಕಳಿಗೆ ತಂದೆಯು ಎಷ್ಟುಕೊಟ್ಟರೂ ಪರಿಮಿತವಾದ ಸುಖ, ಸೌಭಾಗ್ಯಗಳನ್ನು ಕೊಡಬಲ್ಲ. ಅಣ್ಣನು ಅಳತೆಯಲ್ಲಿಯೇ ತಂಗಿಗೆ ಹಿತಮಾಡುವನು. ಮಕ್ಕಳೂ ಕೂಡ ಕ್ಲುಪ್ತವಾದ ಅಲ್ಪ ಸುಖವನ್ನು ಕೊಡಬಲ್ಲರು. ಸ್ತ್ರೀಯರಿಗೆ ಅಪರಿಮಿತವಾದ ಶಾಂತಿ, ಸಂತಸ, ಸೌಭಾಗ್ಯಗಳನ್ನು ಸಮೃದ್ಧವಾಗಿ ಕೊಡುವವನು ಗಂಡನೊಬ್ಬನೆ. ಇಂತಹ ಎದೆಯರಸನನ್ನು ಯಾವ ಹೆಣ್ಣುಮಗಳು ಪೂಜಿಸಲಿಕ್ಕಿಲ್ಲ! ದೇವಶ್ರೇಷ್ಠನೆ, ನನ್ನ ಗಂಡನು ಎಲ್ಲಿ ಎಲ್ಲಿ ಹೋಗುವನೋ, ಅಥವಾ ನಿನ್ನಿಂದ ಸೆಳೆದು ಒಯ್ಯಲ್ಪಡುವನೋ ಅಲ್ಲಿಗೆ ನಾನೂ ಯಥಾಶಕ್ತಿ ಬರುತ್ತೇನೆ. ನನ್ನ ಪತಿಯ ಪ್ರಾಣಗಳನ್ನು ಸೆಳೆದೊಯ್ಯುವ ನಿನ್ನನ್ನು ಎಲ್ಲಿಯವರೆಗೆ ಸಾಧ್ಯವೊ ಅಲ್ಲಿಯವರೆಗೆ ಹಿಂಬಾಲಿಸುತ್ತೇನೆ. ಯಾವಾಗ ನಿನ್ನನ್ನು ಹಿಂಬಾಲಿಸುವದು ಅಶಕ್ಯವಾಗುವದೋ ಆಗ ಕೂಡಲೇ ನನ್ನ ಜೀವನವನ್ನು ಬಿಟ್ಟುಬಿಡುತ್ತೇನೆ. ಯಾವ ಹೆಣ್ಣುಮಗಳು ಪತಿಯಿಂದ ಸೌಭಾಗ್ಯವತಿಯಾಗಿ ಮೆರೆದು ಆ ಬಳಿಕ 'ವಿಧವಾ' ಎಂಬ ಅಪಶಬ್ದದಿಂದ ದೂಷಿತಳಾಗುವಳೊ ಅವಳು ಬದುಕಿದ್ದರೂ ಸತ್ತಂತೆ. ಅಲಂಕಾರ ಮಾಡಿಕೊಂಡಿದ್ದರೂ, ಜೀವಂತಶವಇದ್ದಂತೆಯೇ.

**ಯಮ** :- ಮಹಾಪತಿವ್ರತೆಯಾದ ಸಾವಿತ್ರಿಯೇ, ನಿನ್ನ ಈ ಪತಿಭಕ್ತಿಯಿಂದ ಸಂತುಷ್ಟನಾಗಿದ್ದೇನೆ. ನಿನ್ನ ಪತಿಯ ಪ್ರಾಣವೊಂದನ್ನು ಬಿಟ್ಟು ಬೇಕಾದ ವರ ಕೇಳು ಕೂಡಲೇ ಕೊಡುತ್ತೇನೆ.

**ಸಾವಿತ್ರಿ** :- ಧರ್ಮರಾಜ, ರಾಜ್ಯಭ್ರಷ್ಟನಾದ ನನ್ನ ಮಾವನವರ ರಾಜ್ಯವು ಅವರಿಗೆ ಮರಳಿಬರಲಿ. ಇಂಗಿದ ಕಣ್ಣಿನಶಕ್ತಿ ಪುನಃ ಪ್ರಾಪ್ತವಾಗಿ ಅವರಿಗೆ ಕಣ್ಣು ಚೆನ್ನಾಗಿ ಕಾಣಲಿ.

**ಯಮ** :- ಹಾಗೆಯೇ ಆಗಲಿ; ಶುಭಾಂಗಿಯೇ, ನೀನು ಬೇಡಿದ ವರ ಕೊಟ್ಟಿದ್ದೇನೆ. ನಿನ್ನ ಮಾವನ ಅರಸೊತ್ತಿಗೆಯು ತಿರುಗಿ ದೊರಕುವದು. ಕಳೆದುಹೋಗಿ

ಕುರುಡಾದ ಅವನ ಕಣ್ಣುಗಳು ಮರಳಿ ಬರುವವು. ಇನ್ನಾದರೂ ನೀನು ತಿರುಗು. ನನ್ನನ್ನು ಬೆಂಬತ್ತಿ ದೂರ ಸಾಗಿ ಬಂದಿರುವೆ. ಇನ್ನು ನನ್ನನ್ನು ನೀನು ತಡೆದರೆ ನಿನಗೆ ಆಯಾಸ, ನನಗೆ ವಿಲಂಬ. ಆದುದರಿಂದ ಬೇಗ ಹಿಂದಿರುಗು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಹನ್ನೊಂದನೆಯ ಅಧ್ಯಾಯ ಮುಗಿದುದು*

—o—

## ಸಾವಿತ್ರಿಯ ಬೇಡಿಕೆ, ಯಮಧರ್ಮನ ನೀಡಿಕೆ | ಅಧ್ಯಾಯ - ೨೧೨

**ಸಾವಿತ್ರೀ ಉವಾಚ :**

**ಕುತಃ ಕ್ಲಮಃ ಕುತೋ ದುಃಖಂ ಸದ್ಭಿಃ ಸಹ ಸಮಾಗಮೇ ।**
**ಸತಾಂ ತಸ್ಮಾನ್ನ ಮೇ ಗ್ಲಾನಿಸ್ತ್ವತ್ಸಮೀಪೇ ಸುರೋತ್ತಮ ॥**

**ಸಾವಿತ್ರಿ** :- ದೊಡ್ಡವರ ಸಮಾಗಮವಾದ ಬಳಿಕ ಶ್ರಮವೆಲ್ಲಿ! ದುಃಖವೆಲ್ಲಿ? ದೇವಶ್ರೇಷ್ಠರಾದ ತಮ್ಮೊಡನೆ ನಡೆದಿರುವ ನನಗೆ ಇನಿತೂ ಆಯಾಸವಿಲ್ಲ. ಸಜ್ಜನರಿಗೆ ಸಜ್ಜನರೇ ಗತಿ. ಅಸಜ್ಜನರಿಗೂ ಸಜ್ಜನರು ದಾರಿ ತೋರುವರು. ಆದರೆ ದುರ್ಜನರು ಮಾತ್ರ ಯಾರಿಗೂ ಮಾರ್ಗದರ್ಶನ ಮಾಡಲಾರರು. ಹಾವು, ಬೆಂಕಿ, ತೀಕ್ಷ್ಣ ಶಸ್ತ್ರ ಮತ್ತು ವಿಷಗಳನ್ನು ಕಂಡರೆ ದೂರ ಹೋಗುವಂತೆ ದುರ್ಜನರನ್ನು ಕಂಡು ಭಯವಾಗಿ ದೂರ ಇರಬೇಕೆನಿಸುವದು. ಆದರೆ ಸಜ್ಜನರನ್ನು ಕಂಡರೆ ಅಷ್ಟೇ ಸಂತೋಷವಾಗುವದು. ಅವರು ತಮ್ಮ ಪ್ರಾಣ ಕೊಟ್ಟಾದರೂ ಪರರಿಗೆ ಉಪಕಾರ ಮಾಡುವರು. ದುರ್ಜನರಾದರೂ ತಮ್ಮ ಜೀವವಿರುವವರೆಗೆ ಪರರಿಗೆ ಪೀಡೆಯನ್ನುಂಟುಮಾಡುವರು. ಇಂತಹ ದುಷ್ಟರು ಮನೆ ಮನೆಗಳಲ್ಲಿ ಇರುವರು. ಅಂತಹ ದುರ್ಜನರನ್ನು ಶಾಸನ ಮಾಡಲಿಕ್ಕಾಗಿ ಬ್ರಹ್ಮದೇವರು ರಾಜರನ್ನು ಈ ಲೋಕದಲ್ಲಿ ನಿಯಮಿಸಿರುತ್ತಾನೆ. ರಾಜರು ಪರೀಕ್ಷೆ ಮಾಡಿ ದುರ್ಜನರನ್ನು ನಿಗ್ರಹಿಸಿ, ಸಜ್ಜನರನ್ನು ಪರಿಪಾಲಿಸಬೇಕು. ಆದರೆ ರಾಜರಿಗೂ ನಿಗ್ರಹಿಸಲು ಅಶಕ್ಯರಾದ ದುರ್ಜನರನ್ನು ಶಾಸನ ಮಾಡುವವನು ಯಮ ನೀನು. ನೀನು ಎಲ್ಲ ದೇವತೆಗಳಿಗಿಂತ ಮಿಗಿಲಾದವನೆಂದು ನನಗೆ ತೋರುತ್ತದೆ. ಈ ಜಗತ್ತು ಜೀವಿಸಿರುವುದು ಸತ್ಪುರುಷರಿಂದ. ಆ ಸತ್ಪುರುಷರದಲ್ಲಿ ಸರ್ವಶ್ರೇಷ್ಠನೆಂದರೆ ನೀನು. ನಿನ್ನಂತಹ ಮಹಾಪುರುಷನನ್ನು ಅನುಸರಿಸಿ ಬರುತ್ತಲಿರುವ ನನಗೆ ಕಿಂಚಿತ್ತಾದರೂ ಶ್ರಮವೆನಿಸುವದಿಲ್ಲ. ಆಯಾಸವಾಗುವದಿಲ್ಲ.

**ಯಮ** :- ವಿಶಾಲಾಕ್ಷಿ, ನಿನ್ನ ಮಾತುಗಳೆಲ್ಲವೂ ಧರ್ಮಸಂಗತವಾಗಿರುತ್ತವೆ. ನಿನ್ನ ಈ ವಚನಗಳಿಂದ ನನಗೆ ಪರಮ ಸಂತೋಷವಾಗಿದೆ. ಸತ್ಯವಂತನ ಪ್ರಾಣದ ಹೊರತಾಗಿ, ಬೇಕಾದ ವರವನ್ನು ಕೇಳು, ತಡಮಾಡಬೇಡ.

**ಸಾವಿತ್ರಿ**:-ಪ್ರಭು, ನನ್ನ ತಂದೆಗೆ ಮಕ್ಕಳಿಲ್ಲ, ನನಗೆ ಸಹೋದರರಿಲ್ಲ, ನನಗೆ ನೂರು ಜನ ಸಹೋದರರು ಹುಟ್ಟಿ, ನಮ್ಮ ತಂದೆಗೆ ಪುತ್ರ ಲಾಭದಿಂದ ಸಂತೋಷವಾಗಲಿ.

**ಯಮ** :- ದೋಷರಹಿತಳಾದ ಸಾವಿತ್ರಿಯೇ, ತಥಾಸ್ತು. ನಿನಗೆ ನೂರು ಜನ ಬಂಧುಗಳು ಆಗುವರು. ಇನ್ನಾದರೂ ಮನೆಗೆ ಹಿಂದಿರುಗಿ ನಿನ್ನ ಪತಿಯ ಮುಂದಿನ

ಮರಣೋತ್ತರ ಸಂಸ್ಕಾರ ಕಾರ್ಯಗಳನ್ನು ವಿಧಿಪೂರ್ವಕವಾಗಿ ನೆರವೇರಿಸು. ನಿನ್ನ ಪತಿಯು ಭೂಲೋಕ ತ್ಯಜಿಸಿ ಮತ್ತೊಂದು ಲೋಕಕ್ಕೆ ಹೋಗಿದ್ದಾನೆ. ಅವನನ್ನು ಪಡೆಯಲು ನಿನಗೆ ಶಕ್ಯವಿಲ್ಲ. ನೀನು ಮಹಾಪತಿವ್ರತೆ. ಆದುದರಿಂದ ಇಷ್ಟಾದರೂ ನನ್ನೊಡನೆ ನಡೆದು ಬರಲು ಶಕ್ಯವಾಯಿತು. ನೀನು ಗುರುಹಿರಿಯರ ಹಾಗೂ ನಿನ್ನ ಪತಿ ಸತ್ಯವಂತನ ಸೇವೆಯಿಂದ ಬಹಳ ಪುಣ್ಯವನ್ನು ಪಡೆದಿರುವೆ. ಅದರ ಪ್ರಭಾವದಿಂದಲೇ ನನ್ನ ಹಿಂದಿನಿಂದ ಈ ವರೆಗೆ ನಡೆಯಲಿಕ್ಕೂ, ನನ್ನೊಡನೆ ನುಡಿಯಲಿಕ್ಕೂ ನಿನಗೆ ಸರ್ವಶಕ್ತಿ ಬಂದಿದೆ. ಇನ್ನು ಮೇಲೆ ನಾನೇ ಇವನನ್ನು ಕರೆದೊಯ್ಯುವೆನು. ನಿನಗೆ ಇನ್ನು ಮುಂದೆ ಬರಲು ಶಕ್ತಿ ಸಾಲದು, ನಿನ್ನ ಪತಿಯಾದ ಸತ್ಯವಂತನು ಕೂಡ ತಾಯಿ, ತಂದೆ ಹಾಗೂ ಗುರುಗಳ ಸೇವೆಯನ್ನು ಬದುಕಿರುವವರೆಗೆ ಮಾಡಿ, ಸಂತೋಷಪಡಿಸಿದ್ದಾನೆ. ಆದುದರಿಂದ ಅವನಿಗೆ ಮುಂದೆ ಸ್ವರ್ಗಲೋಕವು ಸಿದ್ಧವಾಗಿದೆ. ಅವನ ಬಗ್ಗೆ ನೀನು ಯೋಚಿಸುವ ಕಾರಣವಿಲ್ಲ. ತಪಸ್ಸು ಬ್ರಹ್ಮಚರ್ಯ, ಅಗ್ನಿಕಾರ್ಯ, ಗುರುಸೇವೆ, ತಾಯಿ-ತಂದೆಗಳ ಸೇವೆ ಇವುಗಳಿಂದ ಮನುಷ್ಯರಿಗೆ ಸ್ವರ್ಗವು ದೊರಕುವದು. ಮನುಷ್ಯನು ತಾಯಿ, ತಂದೆ, ಗುರು, ಹಿರಿಯ ಅಣ್ಣ, ಈ ನಾಲ್ಕು ಜನರನ್ನು ಎಂದಿಗೂ ಅವಮಾನಿಸಬಾರದು. ವಿಶೇಷವಾಗಿ ಬ್ರಾಹ್ಮಣರನ್ನಂತೂ ಕಿಂಚಿತ್ತಾದರೂ ಅಪಮಾನ ಮಾಡಬಾರದು. ಆಚಾರ್ಯರು ಅರ್ಥಾತ್ ಗುರುಗಳು ಮೂರ್ತಿಮಂತ ಬ್ರಹ್ಮವು. ದೇವರಿದ್ದಂತೆ. ತಂದೆ ಮೂರ್ತಿಮಂತ ಪ್ರಜಾಪತಿ. ತಾಯಿ ಮೂರ್ತಿಮಂತ ಭೂದೇವಿ. ಅಣ್ಣನು ತನ್ನ ಆತ್ಮವೇ ಇದ್ದಂತೆ. ತಾಯಿ ತಂದೆಗಳು ಮಗುವನ್ನು ಹೆತ್ತು ಹೊತ್ತು ಬೆಳೆಸಿ ದೊಡ್ಡವನನ್ನು ಮಾಡುವವರೆಗೆ ಬಹಳ ಕಷ್ಟಪಟ್ಟಿರುತ್ತಾರೆ. ನೂರು ವರುಷ ಅವರ ಸೇವೆ ಮಾಡಿದರೂ ಅವರ ಉಪಕಾರ ತೀರುವದಿಲ್ಲ. ಆದುದರಿಂದ ಯಾವಾಗಲೂ ತಾಯಿ, ತಂದೆ, ಗುರುಗಳ ಸೇವೆಯನ್ನು ಬಿಟ್ಟುಬಿಡದೇ ಮಾಡುತ್ತಿರಬೇಕು. ಈ ಮೂವರನ್ನು ಸಂತೋಷಪಡಿಸಿದರೆ ಮಹಾ ತಪಸ್ಸನ್ನು ಮಾಡಿದಂತೆ. ಈ ಮೂವರ ಸೇವೆಯ ಹೊರತು ಬೇರೇ ತಪಸ್ಸೇ ಇಲ್ಲ. ಅವರ ಅಪ್ಪಣೆ ಪಡೆಯದೆ ಯಾವ ಧರ್ಮಕಾರ್ಯ ಮಾಡಬಾರದು. ಈ ಮೂವರನ್ನು ಸೇವಿಸಿದರೆ ಮೂರು ಲೋಕ ಗೆದ್ದಂತೆ. ಮೂರು ಆಶ್ರಮ ಧರ್ಮಪಾಲನೆ ಮಾಡಿದಂತೆ. ಇವರು ಮೂರು ಅಗ್ನಿಗಳಿದ್ದಂತೆ. ತಂದೆ, ಗಾರ್ಹಪತ್ಯಾಗ್ನಿ, ತಾಯಿ ದಕ್ಷಿಣಾಗ್ನಿ, ಗುರು ಆಹವನೀಯಾಗ್ನಿ ಇದ್ದಂತೆ. ಈ ಮೂವರ ಸೇವೆ ಅಗ್ನಿಹೋತ್ರ ಇಟ್ಟಿದುದಕ್ಕಿಂತ ಹೆಚ್ಚಿನ ಪುಣ್ಯ. ಈ ಮೂವರ ವಿಷಯದಲ್ಲಿ ಅನಾದರ ಮಾಡಿದ ಮನುಷ್ಯನಿಗೆ ಯಾವ ಪುಣ್ಯವೂ ಇಲ್ಲ. ಪರಲೋಕವೂ ಇಲ್ಲ. ಇವರ ಸೇವೆಯನ್ನು ಸರಿಯಾಗಿ ಮಾಡಿದವನು ಸ್ವರ್ಗದಲ್ಲಿ ದೇದೀಪ್ಯಮಾನನಾಗಿ ಸುಖ ಪಡೆಯುವನು. ನಿನ್ನ ಪತಿಯು ಈ ಮೂವರ ಸೇವೆಯನ್ನು ಇರುವವರೆಗೆ ತಪ್ಪದೆ ಆಲಸ್ಯವಿಲ್ಲದೆ ಮಾಡಿದ್ದಾನೆ. ಆದುದರಿಂದ ಇನ್ನು ಅವನಿಗೆ ಮರಣಾನಂತರ ಸ್ವರ್ಗ ಸುಖವು ನಿಶ್ಚಿತವಿದೆ. ಆದುದರಿಂದ ನೀನು ಈಗ ಇಲ್ಲಿಂದ ತಿರುಗಿ ಹೋಗು. ನೀನು ಕೇಳಿದ ವರಗಳನ್ನು ಕೊಟ್ಟಿದ್ದೇನೆ. ನಿನ್ನಿಂದ ಇನ್ನು ನನ್ನನ್ನು ಹಿಂಬಾಲಿಸಲು ಆಗದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಹನ್ನೆರಡನೆಯ ಅಧ್ಯಾಯ ಮುಗಿದುದು*

## ಸಾವಿತ್ರಿಯ ಧರ್ಮಾಧರ್ಮ ವಿವೇಕ



**ಸಾವಿತ್ರಿ ಉವಾಚ :**

**ಧರ್ಮಾರ್ಜನೇ ಸುರಶ್ರೇಷ್ಠ! ಕುತೋ ಗ್ಲಾನಿಃ ಕ್ಲಮಸ್ತಥಾ ।**
**ತತ್ಪಾದ ಮೂಲಸೇವಾ ಚ ಪರಮಂ ಧರ್ಮ ಕಾರಣಮ್ ॥**

**ಸಾವಿತ್ರಿ** :- ಸುರಶ್ರೇಷ್ಠನೇ, ಧರ್ಮಸಂಪಾದನೆ ಮಾಡಿದಲ್ಲಿ ಶ್ರಮವೇನು? ನಿನ್ನಂತಹ ದೊಡ್ಡವರ ಸೇವೆಮಾಡುವದು ಪರಮಧರ್ಮ. ಧರ್ಮಕಾರ್ಯ ಮಾಡುವದು ಎಲ್ಲ ಲಾಭಕ್ಕಿಂತಲೂ ವಿಶಿಷ್ಟವಾಗಿದೆ. ಧರ್ಮ, ಅರ್ಥ, ಕಾಮ ಈ ಮೂರು ಮಾನವ ಜನ್ಮದ ಸಫಲತೆಗಳು. ಧರ್ಮವನ್ನು ಬಿಟ್ಟರೆ ಅರ್ಥವೂ ಇಲ್ಲ, ಕಾಮವೂ ಇಲ್ಲ. ಧರ್ಮರಹಿತವಾದ ಕಾಮಾರ್ಥಗಳು ಬಂಜೆಯ ಮಕ್ಕಳಿದ್ದಂತೆ. ಧರ್ಮದಿಂದಲೇ ಕಾಮ, ಮೋಕ್ಷ, ಪರಲೋಕ ಮತ್ತು ಈ ಲೋಕದಲ್ಲಿ ಸುಖ. ಮನುಷ್ಯನು ಎಲ್ಲಿಯೇ ಹೋದರೂ ಅವನನ್ನು ಬೆಂಬಲಿಸಿ ಬರುವದು ಧರ್ಮ ಒಂದೇ. ಮನುಷ್ಯನ ಶರೀರದೊಂದಿಗೆ ಉಳಿದ ಎಲ್ಲವೂ ನಾಶವಾಗುತ್ತದೆ. ಒಂಟಿಯಾಗಿ ಜೀವಿಯು ಜನಿಸುತ್ತಾನೆ. ಒಂಟಿಯಾಗಿಯೇ ಸಾಯುತ್ತಾನೆ. ಬಂಧುಮಿತ್ರರು ಯಾರೂ ಅವನ ಜೊತೆಗೆ ಬರುವದಿಲ್ಲ. ಧರ್ಮವು ಮಾತ್ರ ಪರಲೋಕದಲ್ಲಿ ಅವನೊಂದಿಗೆ ಹಿಂಬಾಲಿಸುವದು. ಒಳ್ಳೆಯ ಧರ್ಮಾಚರಣೆಯಿಂದ ಮರಣದ ನಂತರ ಮಾನವನು ಸೌಂದರ್ಯ, ಸೌಭಾಗ್ಯಗಳನ್ನೂ ಇಂದ್ರಾದಿ ದೇವತಾಲೋಕಗಳನ್ನೂ ಪಡೆದು, ನಂದನವನ ಮುಂತಾದ ದಿವ್ಯ ಸ್ಥಾನಗಳಲ್ಲಿ ಆನಂದದಿಂದ ವಿಹರಿಸುವನು. ಅಪ್ಸರೆಯರೊಂದಿಗೆ ದೇವ ವಿಮಾನಗಳಲ್ಲಿ ಸಂಚಾರಗೈಯುವನು. ಆದುದರಿಂದ ಮನುಷ್ಯರು ಧರ್ಮವನ್ನು ಅವಶ್ಯವಾಗಿ ಮಾಡಬೇಕು. ಬ್ರಹ್ಮಚರ್ಯ, ಸತ್ಯ, ಪುಣ್ಯತೀರ್ಥಗಳಲ್ಲಿ ಮರಣ, ದೊಡ್ಡವರ ಸೇವೆ, ಸಜ್ಜನ-ಸಹವಾಸ, ದೇವತಾಪೂಜೆ, ಬ್ರಾಹ್ಮಣರ ಆರಾಧನೆ, ಬ್ರಹ್ಮಚರ್ಯ, ಮದಮತ್ಸರಾದಿ ದೋಷರಾಹಿತ್ಯ ಮುಂತಾದವು ಮುಖ್ಯ ಧರ್ಮಗಳಾಗಿರುತ್ತವೆ. ಮೃತ್ಯು ಯಾರನ್ನೂ ಕಾಯುವದಿಲ್ಲ. ಆದುದರಿಂದ ಬಾಲ್ಯದಲ್ಲಿಯೇ ಧರ್ಮವನ್ನು ಆಚರಿಸಲು ಸುರುಮಾಡಬೇಕು. ಸಾವು ಯಾರಿಗೆ ಎಂದು ಬರುವದು ಅನ್ನುವದನ್ನು ತಿಳಿದವರಾರು? ತನ್ನ ಕಣ್ಣೆದುರೇ ಅನೇಕ ಜನರು ಮರಣಹೊಂದುವದನ್ನು ನೋಡುತ್ತಲಿದ್ದರೂ ನರನು ತಾನೊಬ್ಬ ಚಿರಂಜೀವಿಯಂತೆ ನಡೆಯುತ್ತಾನೆ. ಇದು ಅತ್ಯಂತ ಆಶ್ಚರ್ಯ. ಬಾಲಕನು ಯೌವ್ವನ ಅಪೇಕ್ಷಿಸಿ, ಸಾವನ್ನು ಸಮೀಪಿಸುತ್ತಾನೆ. ಯುವಕನು ಹಿರಿತನ ಬಯಸಿ ಸಾವಿನ ತೊಡೆಯ ಮೇಲೇರುತ್ತಾನೆ. ಅದರಂತೆ ಸಾವಿನ ಬಾಯಲ್ಲೇ ಕುಳಿತ ಮುದುಕನು ತಾನು ಚಿರಂಜೀವಿ ಎಂದು ತಿಳಿದು ಲೌಕಿಕ ವ್ಯವಹಾರ ವಿಸ್ತಾರ ಮಾಡುತ್ತಲೇ ಇರುತ್ತಾನೆ. ಪ್ರಾಣಿಗಳಿಗೆ ಮುಪ್ಪು ಮರಣಗಳ ಭೀತಿ ತಪ್ಪಿದ್ದಲ್ಲ. ಅದರಲ್ಲಿ ಅಭಯ ಎನ್ನುವದು ಇಲ್ಲವೇ ಇಲ್ಲ. ಈ ಪ್ರಪಂಚದಲ್ಲಿ ನಿರ್ಭಯರೆಂದರೆ ಇರುವ ತನಕ ಧರ್ಮಮಾಡಿದ ಪುಣ್ಯಾತ್ಮರು. ಅವರಿಗೆ ಮರಣಾನಂತರ, ಅಪೂರ್ವವಾದ ಅನೇಕ ಸ್ವರ್ಗಾದಿ ಸುಖ

ಸೌಭಾಗ್ಯಗಳು ಕಾದಿರುತ್ತವೆ. ಆದುದರಿಂದ ಅವರಿಗೆ ಮರಣವೂ ಒಂದು ಸುಖ ಪ್ರಾಪ್ತಿಯೇ ಎನಿಸುವದು. ಧರ್ಮಿಷ್ಠರಿಗೆ ಬದುಕಿದ್ದಾಗಲೂ ಮರಣ ಹೊಂದಿದಾಗಲೂ ಸುಖ. ಆ ಕಾರಣದಿಂದ ಮಾನವರು ಅವಶ್ಯವಾಗಿ ಧರ್ಮಾಚರಣೆ ಮಾಡಬೇಕು.

**ಯಮ** :- ಸುಂದರಿ, ನಿನ್ನ ಧರ್ಮ, ವಚನಗಳಿಂದ ನನಗೆ ಬಹಳ ಸಂತೋಷವಾಗಿದೆ. ಸತ್ಯವಾನನ ಪುನರ್ಜೀವನವೊಂದನ್ನು ಬಿಟ್ಟು ಬೇಕಾದ ವರಬೇಡು?

**ಸಾವಿತ್ರಿ** :- ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲ ಎಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ಆದುದರಿಂದ ನನಗೆ ನೂರು ಮಂದಿ ಮಕ್ಕಳನ್ನು ಕರುಣಿಸು.

**ಯಮ** :- ತಥಾಸ್ತು. ನೀನು ಬಯಸಿದ ಫಲವನ್ನೆಲ್ಲ ಕೊಟ್ಟಿದ್ದೇನೆ. ಇದರಿಂದ ತೃಪ್ತಳಾಗಿ ನೀನು ಹಿಂತೆರಳಿ ಹೋಗು. ಇನ್ನು ಮೇಲೆ ನನ್ನೊಡನೆ ನಡೆದರೆ ಅಥವಾ ತಡೆದರೆ ನಿನಗೆ ದಣಿವು ಆಗುವದು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡುನೂರ ಹದಿಮೂರನೇಯ ಅಧ್ಯಾಯ ಮುಗಿದುದು*



## ಸತ್ತಗಂಡನನ್ನು, ಮೃತ್ಯುಮುಖದಿಂದ ಪಾರುಮಾಡಿದ ಮಹಾಸತಿ ಸಾವಿತ್ರಿ

**ಅಧ್ಯಾಯ - ೨೧೪**

**ಸಾವಿತ್ರ್ಯುವಾಚ**

**ಧರ್ಮಾಽಧರ್ಮ ವಿಧಾನಜ್ಞ ಸರ್ವ ಧರ್ಮ ಪ್ರವರ್ತಕ ।**
**ತ್ವಮೇವ ಜಗತೋ ನಾಥ ಪ್ರಜಾಸಂಯಮನೋ ಯಮಃ ॥**

**ಸಾವಿತ್ರಿ** :- ಧರ್ಮಾಧರ್ಮಗಳ ವಿಧಾನವನ್ನೆಲ್ಲ ತಿಳಿದ ಧರ್ಮ ಪ್ರವರ್ತಕನಾದ ಧರ್ಮರಾಜನೆ, ಈ ಜಗತ್ತಿಗೆಲ್ಲ ನೀನೇ ಒಡೆಯ. ಪ್ರಜೆಗಳನ್ನೆಲ್ಲಾ ಚೆನ್ನಾಗಿ ನೀನು ನಿಯಮನಮಾಡುವದರಿಂದ ನಿನಗೆ **ಯಮ** ಎಂಬ ಹೆಸರುಬಂದಿದೆ. ಎಲ್ಲ ಪ್ರಜೆಗಳನ್ನು ನೀನು ರಂಜಿಸುವದರಿಂದ ನಿನಗೆ ಧರ್ಮರಾಜ ಎಂದೂ ಕರೆಯುತ್ತಾರೆ. ಜನರು ಮರಣ ಹೊಂದಿದ ಬಳಿಕ ನಿನ್ನ ಬಳಿಗೆ ಬರುವದರಿಂದ ಮೃತ್ಯುವೆಂತಲೂ ಹೆಸರು. ಮರಣಕಾಲವನ್ನು ಅವರವರ ಕರ್ಮಾನುಸಾರವಾಗಿ ಜೀವಿಗಳಿಗೆ ನೀನು ತರುವದರಿಂದ ಕಾಲನೆಂದು. ಅಂತ್ಯವನ್ನು ಮಾಡುವದರಿಂದ ಅಂತಕನೆಂದು, ವಿವಸ್ವಂತ ಎಂದು ಕರೆಯಲ್ಪಡುವ ಸೂರ್ಯನ ಮಗನಾದುದರಿಂದ ವೈವಸ್ವತ ಎಂದೂ ಹೆಸರು ಬಂದಿದೆ. ಆಯುಷ್ಯ ಕ್ಷೀಣವಾದ ಬಳಿಕ ಪ್ರಾಣಿಗಳ ಪ್ರಾಣವನ್ನು ನೀನು ಸೆಳೆಯುವದರಿಂದ ಸರ್ವಪ್ರಾಣಹರನೆಂದು ಪ್ರಸಿದ್ಧನಾಗಿರುವೆ. ಸಜ್ಜನರಿಗೆ ನೀನೇ ಗತಿ. ನೀನೇ ಧರ್ಮ ಮರ್ಯಾದೆಯನ್ನು ಸಂರಕ್ಷಿಸುವವನು. ನಾನು ನಿನಗೇ ಶರಣು ಬಂದಿದ್ದೇನೆ. ದುಃಖತಪ್ತಳಾದ ನನ್ನ ಮತ್ತು ನನ್ನ ಪತಿಯ ತಾಯಿ ತಂದೆಗಳನ್ನು ನೀನೇ ರಕ್ಷಿಸು. ನನ್ನ ಪತಿಯನ್ನು ಬದುಕಿಸು. ನನಗೆ ಮಾಂಗಲ್ಯ ಸೌಭಾಗ್ಯವನ್ನು ಕರುಣಿಸು.

**ಯಮ** :- ಧರ್ಮಜ್ಞಳಾದ ಸಾವಿತ್ರಿಯೆ, ನಿನ್ನ ಈ ಸ್ತೋತ್ರದಿಂದ ಸಂತುಷ್ಟನಾದ ನಾನು ನಿನ್ನ ಪತಿಯಾದ ಸತ್ಯವಂತನನ್ನು ಬಿಟ್ಟುಬಿಟ್ಟಿದ್ದೇನೆ. ನೀನು ನಿನ್ನ

ಮನೋರಥವು ಪೂರ್ಣವಾದದ್ದರಿಂದ ಸಂತೋಷದಿಂದ ಹೋಗು. ನಿನ್ನ ಪತಿಯು ನಿನ್ನೊಡನೆ ಎಂಭತ್ತೈದುವರುಷ ಸಂಸಾರಮಾಡಿ ರಾಜ್ಯವಾಳಿ ಅನಂತರ ಸ್ವರ್ಗಲೋಕಕ್ಕೆ ಹೋಗಿ ದೇವತೆಗಳೊಡನೆ ವಿಹರಿಸುವನು. ಸತ್ಯವಂತನಿಂದ ನಿನಗೆ ನೂರುಜನಮಕ್ಕಳು ಜನಿಸುವರು. ದೇವತುಲ್ಯರಾದ ಆ ನಿನ್ನ ಮಕ್ಕಳೆಲ್ಲರೂ ರಾಜಾಧಿರಾಜರಾಗಿ ಮೆರೆಯುವರು. ಅವರಿಗೆಲ್ಲ **ಸಾವಿತ್ರರು** ಎಂದು ನಿನ್ನಿಂದ ಹೆಸರು ಬರುವದು. ನಿನ್ನ ತಾಯಿಯಾದ ಮಾಲವೀದೇವಿಗೆ ಮಾಲವ ಎಂಬ ಹೆಸರಿನ ನೂರು ಜನ ಮಕ್ಕಳು ಹುಟ್ಟುವರು. ಆ ನಿನ್ನ ಸಹೋದರರರಿಗೂ ಅವರ ಮಕ್ಕಳು ಮೊಮ್ಮಕ್ಕಳಿಗೂ ಮಾಲವರು ಎಂಬ ಹೆಸರೇ ಪ್ರಾಪ್ತವಾಗುವದು. ಈ ಸಾವಿತ್ರಿಯ ಕಥೆಯನ್ನು ಪ್ರಾತಃಕಾಲದಲ್ಲಿ ಪಠಿಸುವವರು ದೀರ್ಘಾಯುಷ್ಯ ಪಡೆಯುವರು. ಹೀಗೆ ಹೇಳಿ ಪೂಜ್ಯನಾದ ಯಮಧರ್ಮನು ಪಾಶದಿಂದ ಬಿಗಿದು ತಂದ ಸತ್ಯವಂತನನ್ನು ಬಿಟ್ಟ, ಮೃತ್ಯುವಿನೊಂದಿಗೆ ಅಲ್ಲಿಯೇ ತಾನು ಅದೃಶ್ಯನಾದನು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡುನೂರ ಹದಿನಾಲ್ಕನೇಯ ಅಧ್ಯಾಯ ಮುಗಿದುದು*



## ಪಾತಿವ್ರತ್ಯ ಪ್ರಭಾವದಿಂದ ಸೌಭಾಗ್ಯ, ಸಂತಾನ, ಸಾಮ್ರಾಜ್ಯ ಮೂರನ್ನೂ ಪಡೆದ ಮಹಾಸತಿ ಸಾವಿತ್ರಿ

ಅಧ್ಯಾಯ - ೨೧೫

ಮತ್ಸ್ಯವಾಚ :

**"ಸಾವಿತ್ರೀತು ತತಃ ಸಾಧ್ವೀ ಜಗಾಮ ವರವರ್ಣಿನೀ ।**
**ಪಥಾ ಯಥಾಗತೇನ್ಯೈವ ಯತ್ರಾऽಸೀತ್‌ಸತ್ಯವಾನ್‌ಮೃತಃ ॥"**

**ಮತ್ಸ್ಯ** :- ಅನಂತರ, ಸುಂದರಿಯೂ ಸಾಧ್ವೀಮಣಿಯೂ ಆದ ಸಾವಿತ್ರಿಯು ತಾನು ಬಂದ ದಾರಿಯಿಂದಲೇ ತಿರುಗಿ ಸತ್ಯವಂತನು ಮರಣಹೊಂದಿದ ಸ್ಥಾನಕ್ಕೆ ಬಂದಳು. ತನ್ನ ಪತಿಯ ದೇಹವು ಇದ್ದಲ್ಲಿಗೆ ಬಂದು, ತನ್ನ ತೊಡೆಯ ಮೇಲಿರುವ ಅವನ ತಲೆಯನ್ನು ಮೃದುವಾಗಿ ನೇವರಿಸಿದಳು. ಸತ್ಯವಂತನು ಮೆಲ್ಲಮೆಲ್ಲನೆ, ಎರಡೂ ಕಣ್ಣುಗಳನ್ನು ತೆರೆದನು. ಯಮಧರ್ಮನ ಪಾಶದಿಂದ ಬಿಡುಗಡೆಯಾದ ಬಳಿಕ ಸತ್ತಿದ್ದ ಸತ್ಯವಾನನು ತನ್ನಮೊದಲಿನ ಶರೀರದಲ್ಲಿ ಅವನು ಮತ್ತೆ ಪ್ರವೇಶಮಾಡಿ, ಕಣ್ಣು ತೆರೆದು, ಎದ್ದು ಕುಳಿತನು. ಪ್ರಾಣಸ್ಫುರಣವಾದ ಬಳಿಕ ಕಣ್ಣುಗಳನ್ನು ಅಗಲವಾಗಿ ಅರಳಿಸಿ ಸುತ್ತಲೂ ನೋಡಿ ಸಾವಿತ್ರಿಗೆ ಕೇಳಿದನು :

"ಪ್ರಿಯೆ, ನನ್ನನ್ನು ಸೆಳೆದೊಯ್ಯುತ್ತಿದ್ದ ಆ ಪುರುಷನು ಎಲ್ಲಿಗೆ ಹೋದನು? ಅವನು ಯಾರು? ನನಗೆ ಏನೂ ತಿಳಿಯದು? ಈ ವನದಲ್ಲಿ ನಿನ್ನ ತೊಡೆಯ ಮೇಲೆ ತಲೆಯಿಟ್ಟು ನಾನು ಮಲಗಿಕೊಂಡು ಬಿಟ್ಟೆ. ಅಬ್ಬಾ! ಇಂದು ನಾನು ಎಷ್ಟು ಹೊತ್ತು ನಿದ್ದೆಮಾಡಿದೆ! ಇಡೀ ದಿನವೆಲ್ಲ ನಿದ್ದೆಯಲ್ಲೇ ಕಳೆಯಿತು. ಹೊತ್ತು ಮುಳುಗಿ ಸಂಜೆ ಆಯಿತು. ಸಾವಿತ್ರಿ, ನೀನು ಉಪವಾಸದಿಂದ ಎಷ್ಟು ಬಳಲಿ ಹೋಗಿರುವೆ ? ನಿನಗೆ

ಬಹಳ ಸಂಕಟವಾಗುತ್ತಿರಬೇಕು. ನಾವು ಇಷ್ಟು ಹೊತ್ತಿನವರೆಗೆ ಮನೆಗೆ ಬರದಿರುವದರಿಂದ ನನ್ನ ತಾಯಿ ತಂದೆಗಳಿಗೂ ದುಃಖವಾಗಿರಬೇಕು. ಅವರನ್ನು ನೋಡಬೇಕೆಂದು ನನಗೆ ಇಚ್ಛೆಯಾಗಿದೆ. ಬೇಗ ನಡೆ ಹೋಗೋಣ.''

**ಸಾವಿತ್ರಿ** :- ಸೂರ್ಯನು ಅಸ್ತಮಿಸಿದ್ದಾನೆ. ತಮ್ಮ ಇಚ್ಛೆಯಂತೆ ಆಶ್ರಮಕ್ಕೆ ಹೋಗೋಣ. ಕಣ್ಣಿಲ್ಲದ ಮಾವ ಮತ್ತು ಅತ್ತೆಯರನ್ನು ಭೇಟಿಯಾಗೋಣ. ನಡೆದ ವೃತ್ತಾಂತವನ್ನೆಲ್ಲ ಆಶ್ರಮದಲ್ಲಿಯೇ ಹೇಳುತ್ತೇನೆ'' ಎಂದು ಹೇಳಿ ಪತಿಯೊಡನೆ ಮನೆಗೆ ಹೊರಟಳು.

ಇತ್ತ ಆಶ್ರಮದಲ್ಲಿ ದ್ಯುಮತ್ಸೇನ ಮಹಾರಾಜನಿಗೆ ಒಮ್ಮಿಂದೊಮ್ಮೆಲೇ ಎರಡೂ ಕಣ್ಣುಗಳು ಬಂದವು. ಎಂದೋ ಉಡುಗಿ ಹೋದ ಅವನ ಕಣ್ಣುಗಳ ದರ್ಶನ ಶಕ್ತಿಯು ಮರಳಿ ಬಂದು ಅವನಲ್ಲಿ ಒಳ್ಳೆ ನೇತ್ರಪಾಟವವು ಉಂಟಾಗಿತ್ತು. ಎಲ್ಲವೂ ನಿಚ್ಚಳವಾಗಿ ಕಾಣತೊಡಗಿತ್ತು. ಆದರೆ ಕಣ್ಣು ಬಂದ ಬಳಿಕ ತನ್ನಮಗ ಹಾಗೂ ಸೊಸೆಯಂದಿರನ್ನು ಕಣ್ತುಂಬ ನೋಡಬೇಕೆಂದು ತವಕಿಸುವ ಆ ಅರಸನಿಗೆ ಅವರಿಬ್ಬರೂ ಮನೆಯಲ್ಲಿ ಇಲ್ಲದ್ದು ನೋಡಿ ದುಃಖವಾಯಿತು. ಬೆಳಿಗ್ಗೆ ಹೋದವರು ಇನ್ನೂ ಬರಲಿಲ್ಲವೇಕೆಂದು ಚಿಂತೆ ಆಯಿತು. ಪ್ರೀತಿಯ ಮಗ. ಉಪವಾಸದಿಂದ ಸೊರಗಿದ ಸೊಸೆ ಇವರಿಬ್ಬರಿಗೂ ಕಾಡಿನಲ್ಲಿ ಏನಾಗಿದೆನೋ ? ಎಂಬ ಚಿಂತೆ ಸಂತಾಪಗಳಿಂದ ಅವರಿಬ್ಬರೂ ದುಃಖಿಸ ತೊಡಗಿದರು. ಆಶ್ರಮದ ಬಳಿಯಿರುವ ತಪಸ್ವಿಗಳು ಬಂದು ಅವರನ್ನುಸಮಾಧಾನ ಪಡಿಸಿದರು. ಅಷ್ಟರಲ್ಲಿ ಸಾವಿತ್ರಿ ಸತ್ಯವಾನರು ಬರುವದು ಕಾಣಿಸಿತು.

ಶುಭಾಂಗಿಯಾದ ಸಾವಿತ್ರಿಯು ಪತಿಯೊಡನೆ ಬಂದು, ಅತ್ತೆ ಮಾವಂದಿರ ಪಾದಮುಟ್ಟಿನಮಸ್ಕಾರಮಾಡಿದಳು. ದ್ಯುಮತ್ಸೇನನು ಪ್ರೀತಿಯಿಂದ ಮಗನನ್ನು ಬಿಗಿದಪ್ಪಿದನು. ಅನಂತರ ಅವರಿಬ್ಬರೂ ಅಲ್ಲಿ ನೆರೆದಿದ್ದ, ಋಷಿ ಮುನಿಗಳಿಗೆಲ್ಲ ನಮಸ್ಕಾರ ಮಾಡಿದರು. ಅಂದು ರಾತ್ರಿ ಸಾವಿತ್ರಿಯು ಎಲ್ಲಜನರೆದುರು ಕಾಡಿನಲ್ಲಿ ನಡೆದ ಸಮಾಚಾರವನ್ನೆಲ್ಲ ತಿಳಿಸಿದಳು. ಮತ್ತು ಆ ಎಲ್ಲಋಷಿಮುನಿಗಳ ಸಮಕ್ಷಮದಲ್ಲಿಯೇ ತಾನು ಕೈಕೊಂಡ ಸಾವಿತ್ರೀ ವ್ರತವನ್ನು ಯಥಾ ಸಾಂಗವಾಗಿ ಮಾಡಿ ಮುಗಿಸಿದಳು.

ಮರುದಿನ ಬೆಳಗಾದ ಕೂಡಲೆ, ದ್ಯುಮತ್ಸೇನನ ಪ್ರಜಾಜನರೆಲ್ಲರೂ ಅವನನ್ನು ರಾಜ್ಯ ಸಿಂಹಾಸನ ಏರಲು ಕರೆಯಲಿಕ್ಕೆ ಬಂದರು. ಮಂತ್ರಿಮಂಡಲದವರು ಬಂದು ಮಹಾರಾಜರಿಗೆ ಕೈಜೋಡಿಸಿ ಕೇಳಿಕೊಂಡರು. 'ಪ್ರಭುಗಳೇ, ತಮ್ಮ ಕಣ್ಣು ಒಮ್ಮೆಲೆ ಹೋದ ಬಳಿಕ ವೈರಿ ರಾಜರು ಬಂದು ನಮ್ಮ ರಾಜ್ಯವನ್ನು ಅಪಹರಿಸಿದ್ದರು. ಆ ರಾಜನನ್ನು ಮಂತ್ರಿಗಳು ಎಲ್ಲರೂ ಕೂಡಿ ಕೊಂದು ಹಾಕಿದ್ದಾರೆ. ಆದುದರಿಂದ ತಾವು ಈಗ ಅಲ್ಲಿಗೆ ದಯಮಾಡಿಸಬೇಕು.'

ಸಚಿವ ಸಂಪುಟದ ವಿಜ್ಞಪ್ತಿ ಕೇಳಿ ದ್ಯುಮತ್ಸೇನನು ತನ್ನ ಮಗ, ಮಡದಿ, ಸೊಸೆಯೊಂದಿಗೆ ಚತುರಂಗ ಬಲ ಸಮೇತನಾಗಿ ತನ್ನ ರಾಜಧಾನಿಯನ್ನು ವೈಭವದಿಂದ ಪ್ರವೇಶಮಾಡಿದನು. ಯಮಧರ್ಮನ ವರದ ಮಹಿಮೆಯಿಂದ ಅವನಿಗೆ ಸಕಲ ರಾಜ್ಯೈಶ್ವರ್ಯ ಪುನಃ ಪ್ರಾಪ್ತವಾದವು. ಅವನಿಗೆ ನೂರುಜನ ಗಂಡುಮಕ್ಕಳು ಜನಿಸಿದರು. ಹೀಗೆ ಸಾವಿತ್ರಿಯು ನೂರು ಜನ ಸೋದರರನ್ನುಪಡೆದು, ತಂದೆಯ ಕುಲವನ್ನು

ಉದ್ಧರಿಸಿದಳು. ಅದರಂತೆ, ಸಾವಿನ ಪಾಶಕ್ಕೆ ಕೊರಳು ಕೊಟ್ಟು ಮರಣ ಹೊಂದಿದ ಪತಿಯನ್ನು ಯಮನ ಮುಷ್ಟಿಯಿಂದ ಬಿಡಿಸಿಕೊಂಡುಬಂದು ಪತಿಕುಲವನ್ನು ಉದ್ಧರಿಸಿದಳು. ಆದುದರಿಂದ ಮನು ರಾಜನೇ, ಪತಿವ್ರತಾ ಸ್ತ್ರೀಯರನ್ನು ಎಲ್ಲ ಮಾನವರು ದೇವರಂತೆ ಪೂಜಿಸಬೇಕು.

**ತಸ್ಮಾತ್ಸಾಧ್ವೀ ಸ್ತ್ರಿಯಃ ಪೂಜ್ಯಾಃ ಸತತಂ ದೇವವನ್ನರೈಃ ।**
**ತಾಸಾಂ ರಾಜನ್ ಪ್ರಸಾದೇನ ಧಾರ್ಯತೇ ವೈ ಜಗತ್ತ್ರಯಮ್ ॥**
**ತಾಸಾಂ ತು ವಾಕ್ಯಂ ಭವತೀಹ ಮಿಥ್ಯಾ ನ ಜಾತು ಲೋಕೇಷು ಚರಾಚರೇಷು ।**
**ತಸ್ಮಾತ್ಸದಾ ತಾಃ ಪರಿಪೂಜನೀಯಾಃ ಕಾಮಾನ್ ಸಮಗ್ರಾನಭಿ ಕಾಮಯಾನೈಃ ॥**

ಸಾಧ್ವೀ ಸ್ತ್ರೀಯರು ದೇವರಂತೆ, ನರರಿಗೆ ಪೂಜ್ಯರಾಗಿದ್ದಾರೆ. ಮೂರು ಲೋಕಗಳು ಸ್ತ್ರೀಯರ ಪ್ರಸನ್ನತೆಯ ಮೇಲೆಯೇ ನಿಂತಿವೆ. ನಿಜವಾದ ಪತಿವ್ರತಾಸ್ತ್ರೀಯರ ಮಾತು ಈ ಪ್ರಪಂಚದಲ್ಲಿ ಎಂದೂ ಸುಳ್ಳಾಗುವದಿಲ್ಲ. ಆದುದರಿಂದ ತಮ್ಮ ಸರ್ವಕಾಮನೆಗಳು ಕೈಗೂಡಬೇಕು ಎಂದು ಬಯಸುವವರು ಸ್ತ್ರೀಯರು ಬೇಡಿದ್ದನ್ನು ಕೊಟ್ಟು, ಅವರ ಮನೋರಥಗಳನ್ನು ಪೂರ್ಣಮಾಡಿ ಅವರನ್ನು ಪೂಜಿಸಬೇಕು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡುನೂರ ಹದಿನೈದನೇಯ ಅಧ್ಯಾಯ ಮುಗಿದುದು*



## ರಾಜರಾದವರ ಕರ್ತವ್ಯ, ಕರ್ಮ ಮತ್ತು ವಿಹಿತಧರ್ಮ | ಅಧ್ಯಾಯ - ೨೧೬

**ಮನು ಉವಾಚ:**

**"ರಾಜ್ಞೋऽಭಿಷಿಕ್ತಮಾತ್ರಸ್ಯ ಕಿಂ ನು ಕೃತ್ಯತಮಮ್ ಭವೇತ್ ।**
**ಏತನ್ಮೇ ಸರ್ವಮಾಚಕ್ಷ್ವ ಸಮ್ಯಗ್ವೇತ್ತಿ ಯತೋ ಭವಾನ್ ॥"**

**ಮನು** :- ರಾಜನಿಗೆ ಪಟ್ಟಾಭಿಷೇಕವಾದ ಕೂಡಲೇ ಅವನು ಮುಖ್ಯವಾಗಿ ಮಾಡಬೇಕಾದದ್ದೇನು? ರಾಜ್ಯಾಭಿಷಿಕ್ತರಾದ ಅರಸರ ಕರ್ತವ್ಯ ಕಾರ್ಯಗಳನ್ನೆಲ್ಲ ನನಗೆ ಹೇಳಿರಿ. ಇದೆಲ್ಲವನ್ನು ಸರ್ವಜ್ಞಮೂರ್ತಿಯಾದ ನೀನು ಚೆನ್ನಾಗಿ ತಿಳಿದಿರುವೆ.

**ಮತ್ಸ್ಯ**:- ಅಭಿಷೇಕದ ನೀರು, ಮೈಮೇಲಿಂದ ಒಣಗುವದರೊಳಗಾಗಿ ರಾಜನು ಮೊದಲು ತನ್ನ ಸಮಗ್ರ ರಾಜ್ಯವನ್ನೆಲ್ಲ ನಿರೀಕ್ಷಿಸಬೇಕು. ತನ್ನ ರಾಜ್ಯದ ಆಡಳಿತವತನ್ನು ಸರಿಯಾಗಿ ನಿರ್ವಹಿಸಲು ಸಹಾಯಕ ಮಂಡಲವನ್ನು ರಾಜ್ಯದಲ್ಲೆಲ್ಲ ತಿರುಗಾಡಿ ಹುಡುಕಾಡಿ ಆರಿಸಿಕೊಳ್ಳಬೇಕು. ಎಷ್ಟೇ ಸಣ್ಣ ಕೆಲಸವಾದರೂ ಒಬ್ಬೊಂಟಿಗನಿಂದ ಮಾಡುವದು ಕಠಿಣವಾಗುತ್ತದೆ. ಅಂದ ಬಳಿಕ ಸಮಗ್ರ ರಾಜ್ಯದ ಸರಿಯಾದ ಆಡಳಿತವನ್ನು ಸಹಾಯವಿಲ್ಲದೆ ಯಾರಿಂದಲೂ ಮಾಡುವದು ಆಗುವದಿಲ್ಲ. ಆದ್ದರಿಂದ ಒಳ್ಳೆಯಕುಲದಲ್ಲಿ ಜನಿಸಿದ ಬಲಿಷ್ಠರಾದ ವಿವೇಕವುಳ್ಳ ಸಜ್ಜನರನ್ನು ತನ್ನ ಸಹಾಯಕರೆಂದು ಆಯ್ಕೆ ಮಾಡಬೇಕು. ಅವರಲ್ಲಿ ಕ್ಷಮಾಗುಣವು ಪ್ರಧಾನವಾಗಿರಬೇಕು.

ಎಂತಹ ದುಃಖ ಬಂದರೂ ಸಹಿಸುವ ತಾಳ್ಮೆ ಇರಬೇಕು. ಸತ್ವಶಾಲಿಗಳಾಗಿ ಇರಬೇಕು. ಧರ್ಮದ ರಹಸ್ಯ ಅರಿತು ಉತ್ಸಾಹದಿಂದ ಕಾರ್ಯಮಾಡುತ್ತ ಇರಬೇಕು. ರಾಜರಲ್ಲಿ ಭಕ್ತಿಯಿರಬೇಕು. ಇಂತಹ ಮಧುರವಾಗಿ ಮಾತನಾಡಿ ಹಿತವನ್ನು ಬೋಧಿಸಬಲ್ಲ ತಿಳುವಳಿಕೆಯುಳ್ಳ ಒಳ್ಳೆಯ ಜನರನ್ನು ಸಹಾಯಕರನ್ನಾಗಿ ಮಾಡಿಕೊಳ್ಳಬೇಕು.

ರಾಜನು ಬ್ರಾಹ್ಮಣ ಅಥವಾ ಕ್ಷತ್ರಿಯ ಜಾತಿಯ ಸೇನಾಪತಿಯನ್ನು ನಿಯಮಿಸಬೇಕು. ಮುಖ್ಯವಾಗಿ ಅವನಲ್ಲಿ ಶೀಲ, ವಾಕ್ಚಾತುರ್ಯ, ಕಷ್ಟಸಹಿಷ್ಣುತೆ, ಕೃತಜ್ಞತೆ, ಪ್ರಾಮಾಣಿಕತೆ, ಯುದ್ಧತಂತ್ರ - ಪ್ರಾವೀಣ್ಯ, ಧನುರ್ವಿದ್ಯಾ - ನೈಪುಣ್ಯ, ಆನೆ, ಕುದುರೆಗಳನ್ನು ಪರೀಕ್ಷಿಸುವಲ್ಲಿ ಕೌಶಲ್ಯ, ಶೌರ್ಯ, ಧೈರ್ಯ ಮುಂತಾದ ಗುಣಗಳು ಅವಶ್ಯವಾಗಿರಬೇಕು.

ಒಳ್ಳೇ ಎತ್ತರ ನಿಲುವು, ತೇಜಸ್ವಿ ಮುಖಮಂಡಲ, ಕಾರ್ಯದಕ್ಷತೆ, ಸವಿನುಡಿ, ಸೌಜನ್ಯ. ಇವು ದ್ವಾರಪಾಲಕನಲ್ಲಿ ಇರಬೇಕಾದ ಗುಣಗಳು. ರಾಜರು ಸ್ವದೇಶ, ವಿದೇಶಗಳಲ್ಲಿ ಒಳ್ಳೊಳ್ಳೆ ರಾಜದೂತರನ್ನು ನಿಯಮಿಸಬೇಕಾಗುವದು. ಅವರಲ್ಲಿ ದೇಶಕಾಲ ವಿಭಾಗದ ಪರಿಜ್ಞಾನ ಮತ್ತು ಎಲ್ಲ ಭಾಷಾಪಟುತ್ವ, ವಾಕ್ಚಾತುರ್ಯ, ಹೇಳಿದಂತೆ ಕೆಲಸ ಮಾಡಿಕೊಂಡು ಬರುವ ಜಾಣ್ಮೆ, ಸರ್ವಪ್ರಾಂತಗಳ ರಾಜಕೀಯ ಪರಿಸ್ಥಿತಿಯ ಪೂರ್ಣ ಅರಿವು, ಹೇಳದೆ ಕಾರ್ಯಮಾಡುವ ಚಾಣಾಕ್ಷತನ, ಈ ಗುಣಗಳು ಇದ್ದವರನ್ನು ರಾಜದೂತರೆಂದು ಆರಿಸಬೇಕು. ಎತ್ತರವಾಗಿ ದೇಹದಿಂದ, ದೃಢರಾಗಿ, ರಾಜರಲ್ಲಿ ನಿಷ್ಠೆಯುಳ್ಳ, ಕ್ಲೇಶವನ್ನು ಸಹಿಸಬಲ್ಲ ಶೂರರನ್ನು ಅಂಗರಕ್ಷಕರೆಂದು ನಿಯೋಜಿಸಬೇಕು. ನಂಬುಗೆಯ, ವಿನಯವುಳ್ಳ, ನಿಯಮಿತತನವುಳ್ಳ, ಗಂಡು ಅಥವಾ ಹೆಂಗಸನ್ನು ತಾಂಬೂಲಧಾರಿ ಎಂದು ಏರ್ಪಡಿಸಬೇಕು. ರಾಜ್ಯ ತಂತ್ರದ ಎಲ್ಲ ಅವಾಂತರಗಳನ್ನು, ಉಪಾಯಗಳನ್ನು ಚೆನ್ನಾಗಿ ಬಲ್ಲ, ರಾಜ್ಯಶಾಸ್ತ್ರದಲ್ಲಿ ಪಳಗಿದ, ಬೇರೆ ಬೇರೆ ಭಾಷೆಗಳನ್ನು ಮಾತನಾಡಬಲ್ಲ ರಾಜನೀತಿ ವಿಶಾರದ ಮನುಷ್ಯನನ್ನು ಸಂಧಿ ವಿಗ್ರಹ ಸಾಧಕನೆಂದು ಇರಿಸಬೇಕು. ಭೃತ್ಯರು ಮಾಡಿದ್ದನ್ನು ಬಿಟ್ಟಿದ್ದನ್ನು ತಿಳಿದುಕೊಂಡು ರಾಷ್ಟ್ರದ ಆದಾಯ ವೆಚ್ಚವನ್ನು ಸರಿಯಾಗಿ ಅರಿಯಬಲ್ಲ ಪುರುಷನನ್ನು ಜನಾಭಿಪ್ರಾಯದ ನಿವೇದಕ ಎಂದು ನಿಯಮಿಸಬೇಕು. ಆನೆ, ಕುದುರೆ, ರಥಗಳನ್ನು ನಡೆಸಬಲ್ಲ, ಕಷ್ಟಗಳಿಗೆ ಹೆದರದ ಒಳ್ಳೇ ತೇಜಸ್ವಿ ರಾಜಭಕ್ತ ತರುಣನನ್ನು ಖಡ್ಗಧಾರಿ ಎಂದೂ ನಿಯಮಿಸಬೇಕು. ಧನುರ್ಧಾರಿಯಾಗಿ ರಾಜಸೇವೆಗೆ ಬರುವ ಮನುಷ್ಯನಲ್ಲಿ ಬಲ, ಭಕ್ತಿ, ಯುಕ್ತಿ, ಕಷ್ಟಸಹಿಷ್ಣುತೆ ಮುಂತಾದ ಗುಣಗಳಿರಬೇಕು. ಸಾರಥಿಯು ಕುದುರೆಗಳನ್ನು ಪಳಗಿಸುವಲ್ಲಿ, ನಿಪುಣನಾಗಿದ್ದು, ಭೂಭಾಗದ ಮಾರ್ದವ ಕಾಠಿಣ್ಯಗಳನ್ನು ಮೇಲ್ನೋಟದಿಂದಲೇ ತಿಳಿಯಬಲ್ಲವನಾಗಿರಬೇಕು. ಎದುರಾಳಿಯ ಬಲಾಬಲಗಳನ್ನು ಸಕೃದ್ದರ್ಶನದಿಂದಲೇ ಅರಿತುಕೊಳ್ಳುವ ಜಾಣ್ಮೆ ಇರಬೇಕು. ಇಂತಹವರನ್ನೇ ಸಾರಥಿಯನ್ನಾಗಿ ಮಾಡಿಕೊಳ್ಳಬೇಕು.

ಆರೋಗ್ಯಶಾಸ್ತ್ರವನ್ನು ಚೆನ್ನಾಗಿ ಅರಿತು ರುಚಿಕರವಾದ ಮತ್ತು ಪೌಷ್ಟಿಕವಾದ ಅಡುಗೆಯನ್ನು ಮಾಡಬಲ್ಲ ಪಾಚಕನನ್ನು ಇಟ್ಟುಕೊಳ್ಳಬೇಕು. ಶತ್ರುಮಿತ್ರರಲ್ಲಿ ಸಮನಾದ, ಧರ್ಮ ಮತ್ತು ನೀತಿಶಾಸ್ತ್ರಗಳಲ್ಲಿ ನಿಪುಣನಾದ ಬ್ರಾಹ್ಮಣನನ್ನು ಧರ್ಮಾಧಿಕಾರಿಯೆಂದು ನಿಯೋಜಿಸಬೇಕು. ಎಲ್ಲ ಶಾಸ್ತ್ರಗಳಲ್ಲಿ ವಿಶಾರದರಾದ ಶತ್ರುಮಿತ್ರರಲ್ಲಿ ಸಮಾನರಾಗಿರುವ ದೊಡ್ಡಮನೆತನದ ಪಂಡಿತರನ್ನೇ ನ್ಯಾಯಾಧೀಶ

ರನ್ನಾಗಿ ಮಾಡಬೇಕು. ಎಲ್ಲ ದೇಶದ ಅಕ್ಷರ, ಲಿಪಿ, ಭಾಷೆಗಳನ್ನು ಆ ಭಾಷೆಯ ಜ್ಞಾನ, ವಿಜ್ಞಾನ, ವಾಙ್ಮಯ ಬಲ್ಲ ಶಾಸ್ತ್ರ ಪಂಡಿತರನ್ನು ಸಭಾಸದರನ್ನಾಗಿ ಆರಿಸಬೇಕು. ಇದರಂತೆ ಸರಿಯಾಗಿ ತಲೆಕಟ್ಟು ಹಾಕಿ ಸಮನಾದ ಸಾಲುಹಿಡಿದು ದುಂಡು ಅಕ್ಷರಗಳನ್ನು ಶೀಘ್ರ ಗತಿಯಿಂದ ಬರೆದುಕೊಳ್ಳಲು ಸಮರ್ಥರಾದ, ಹೇಳುವವರ ಮಾತು ಅಸ್ಪಷ್ಟವಾಗಿದ್ದರೂ ಅವರ ಅಭಿಪ್ರಾಯ ತಿಳಿದುಕೊಂಡು ಬರೆವವರನ್ನು ಲೇಖಕರೆಂದು ನಿಯೋಜಿಸಬೇಕು. ಕಬ್ಬಿಣ, ಬಟ್ಟೆ, ತೊಗಲು, ರತ್ನ ಮುಂತಾದವುಗಳ ವಿಧಾನವನ್ನು, ಬೆಲೆಯನ್ನು, ಬಲ್ಲ ನಿಪುಣನಾದ, ಜಾಗರೂಕ ಮನುಷ್ಯನನ್ನು ಧನಾಧ್ಯಕ್ಷನನ್ನು ನಿಯಮಿಸಬೇಕು.

ಪರಂಪರೆಯ ವೈದ್ಯ ಮನೆತನದಲ್ಲಿ ಹುಟ್ಟಿ, ಸರಿಯಾದ ಚಿಕಿತ್ಸಾಜ್ಞಾನ ಪಡೆದು ಆಯುರ್ವೇದದಲ್ಲಿ ಪಾರಂಗತನನ್ನು ವೈದ್ಯನೆಂದೂ, ಎಲ್ಲ ದೇಶದಲ್ಲಿಯ ವನಪ್ರದೇಶಗಳನ್ನು ಅರಿತು ಹಸ್ತಿಶಾಸ್ತ್ರ ಬಲ್ಲವನನ್ನು ಗಜಾಧ್ಯಕ್ಷನೆಂದೂ, ಕೆಟ್ಟ ಕುದುರೆಗಳನ್ನು ಪಳಗಿಸಬಲ್ಲ ಚಿಕಿತ್ಸಾವಿಶಾರದನನ್ನು ಅಶ್ವಾಧ್ಯಕ್ಷನೆಂದೂ, ವಾಸ್ತು ವಿದ್ಯೆಯಲ್ಲಿ ಪ್ರವೀಣನಾದ, ಶ್ರಮವಿಲ್ಲದೆ ಕೈಕೆಲಸವನ್ನು ಕುಶಲವಾಗಿ ಮಾಡಬಲ್ಲವನನ್ನು ಶಿಲ್ಪಿ ಎಂದೂ, ಒಳ್ಳೇ ಧೈರ್ಯದಿಂದ ಹಾಗೂ ಶೌರ್ಯದಿಂದ ತನ್ನ ಪ್ರಾಣಕ್ಕಿಂತ ಹೆಚ್ಚಾಗಿ, ಕೋಟೆಯನ್ನು ಕಾಯುವವನನ್ನು ದುರ್ಗಾಧ್ಯಕ್ಷನೆಂದೂ, ಎಲ್ಲ ವಿಧವಾದ ಶಸ್ತ್ರಾಸ್ತ್ರ ಪ್ರಯೋಗಗಳಲ್ಲಿ ಪರಿಣತನಾದವನನ್ನು ಅಸ್ತ್ರಾಚಾರ್ಯನೆಂದೂ, ದೊಡ್ಡಕುಲದಲ್ಲಿ ಜನಿಸಿದ ಧರ್ಮಬುದ್ಧಿಯುಳ್ಳ, ಮುದುಕನಾದ ಮನುಷ್ಯನನ್ನು ಅಂತಃಪುರದ ಅಧ್ಯಕ್ಷನೆಂದೂ ನಿಯಮಿಸಬೇಕು. ಹೀಗೆ ಏಳು ಅಧಿಕಾರಿಗಳನ್ನು ಪರೀಕ್ಷೆ ಮಾಡಿ, ವಿಚಕ್ಷಣರು, ವಿಶ್ವಾಸಿಕರು, ಆದ ಜನರನ್ನು ಸ್ಥಾಪಿಸಬೇಕು. ಕಾರ್ಯಗಳನ್ನು ನೋಡಿ, ನೋಡಿ, ಅದಕ್ಕೆ ತಕ್ಕ ಜನರನ್ನು ಚತುರತೆಯಿಂದ ಆಯ್ದು ನಿಯಮಿಸುವದು ರಾಜರ ಮುಖ್ಯಕರ್ತವ್ಯವಾಗಿದೆ.

ಮಹತ್ವದ ವಿಷಯದಲ್ಲಿ ರಾಜರು, ಬಲ್ಲವರಾದ ಅನೇಕ ಬುದ್ಧಿವಂತರನ್ನು ವಿಚಾರಿಸಿ ನಿರ್ಣಯವನ್ನು ಕೈಕೊಳ್ಳಬೇಕು. ಆದರೆ ಆ ವಿಚಾರಣೆಯು ಅಥವಾ ಗುಪ್ತಾಲೋಚನೆಯು ಮೊದಲು ಒಂದು ಸಲ ವೈಯಕ್ತಿಕವಾಗಿ, ಅನಂತರ ಎಲ್ಲರ ಸಮಕ್ಷಮ ನಡೆಯಬೇಕು. ಒಬ್ಬರ ಅಭಿಪ್ರಾಯವನ್ನು ಇನ್ನೊಬ್ಬರ ಎದುರು ಹೇಳಬಾರದು. ಎಲ್ಲರ ಅಭಿಪ್ರಾಯ ಕೇಳಿಕೊಂಡು ಯುಕ್ತಾಯುಕ್ತ ತಾನೇ ವಿಚಾರಿಸಿ, ತಾನೇ ನಿರ್ಣಯ ಕೈಕೊಳ್ಳಬೇಕು. ಶಾಸ್ತ್ರ, ವೇದ, ರಾಜನೀತಿಗಳಲ್ಲಿ ಪ್ರವೀಣರಾದ ಜ್ಞಾನವೃದ್ಧರ ಸೇವೆಮಾಡಿ ಅವರಿಂದ ಕಲಿತು ಅವರ ಮಾರ್ಗದರ್ಶನದಲ್ಲಿ, ರಾಜ್ಯವನ್ನು ಆಳಬೇಕು. ರಾಜರು ಜಿತೇಂದ್ರಿಯರಾಗಿದ್ದು ಪ್ರಜಾಕ್ಷೇಮಕ್ಕಾಗಿ ಅನೇಕ ಯಜ್ಞ, ಯಾಗ, ಮಾಡಬೇಕು. ಯಜ್ಞಗಳಲ್ಲಿ ಯೋಗ್ಯ ಋತ್ವಿಜರಿಗೆ ವಿಪುಲವಾಗಿ ದಾನ ದಕ್ಷಿಣೆ ನೀಡಬೇಕು. ಈ ಎಲ್ಲ ವೆಚ್ಚವನ್ನು ಸಮಗ್ರ ರಾಷ್ಟ್ರದಲ್ಲಿ ವರ್ಷಕ್ಕೆ ಒಂದು ಸಲ ಕರ ರೂಪದಿಂದ ಸಂಗ್ರಹಿಸಬೇಕು. ಪ್ರಜೆಗಳಿಗೆಲ್ಲ ರಾಜರು ತಂದೆಯಂತೆ ಇದ್ದು, ಜ್ಞಾನಪ್ರಸಾರ ಕಾರ್ಯವನ್ನು ಮುಖ್ಯವಾಗಿ ಕೈಕೊಳ್ಳಬೇಕು. ಗುರುಕುಲದಲ್ಲಿದ್ದು ಅಧ್ಯಯನ ಮಾಡಿದ ಪಂಡಿತರನ್ನು ಗೌರವಿಸಬೇಕು.

ಬ್ರಾಹ್ಮಣರ ಸೇವೆ, ಅನಾಥ, ಮುದುಕ, ವಿಧವೆ, ದೀನ, ಅಂಗಹೀನ, ದಟ್ಟದರಿದ್ರ, ರೋಗಿಷ್ಠ ಮುಂತಾದವರ ಯೋಗಕ್ಷೇಮವನ್ನು ರಾಜರೇ ನೋಡತಕ್ಕದ್ದು. ದೇಶದಲ್ಲಿ

ವರ್ಣಾಶ್ರಮ ಧರ್ಮವು ಸರಿಯಾಗಿ ನಡೆದಿದೆಯೋ ಇಲ್ಲವೋ ಎಂದು ಪರೀಕ್ಷಿಸಿ, ಧರ್ಮದ ದಾರಿ ಬಿಟ್ಟು ನಡೆದವರನ್ನು ಶಾಸನ ಮಾಡಿ ಧರ್ಮ ಪಥದಲ್ಲಿ ಸ್ಥಾಪಿಸಬೇಕು. ವಿದ್ಯೆಗಳು, ಋಜು, ವಕ್ರ ಎಂದು ಎರಡು ವಿಧ. ಇದರಲ್ಲಿ ಋಜು ಬುದ್ಧಿಯನ್ನು ಅವಲಂಬಿಸಿ, ವಕ್ರಬುದ್ಧಿಯು ತನ್ನನ್ನು ಬಾಧಿಸದಂತೆ ಜಾಗರೂಕನಾಗಿರಬೇಕು. ತನ್ನ ಛಿದ್ರವನ್ನು ಸೂಕ್ಷ್ಮವಾಗಿ ಗುರುತಿಸಬೇಕು. ತನ್ನಲ್ಲಿರುವ ಲೋಪದೋಷಗಳನ್ನು ಆಮೆಯು ತನ್ನ ಅಂಗಗಳನ್ನು ಗೌಪ್ಯಮಾಡುವಂತೆ ಗುಪ್ತವಾಗಿ ಇಟ್ಟಿರಬೇಕು. ತನ್ನ ಮೇಲೆ ವಿಶ್ವಾಸ ಇಲ್ಲದಿರುವವರನ್ನು ನಂಬಬಾರದು. ವಿಶ್ವಾಸವುಳ್ಳವರ ಮೇಲೆ ನಂಬಿಗೆ ಪೂರ್ಣ ಇಡಬಾರದು. ವಿಶ್ವಸ್ತಮನುಷ್ಯನಿಂದ ಭಯವು ಉತ್ಪನ್ನವಾದರೆ ಸಮೂಲ ನಾಶಮಾಡಿಬಿಡುತ್ತದೆ. ನಂಬಿದಂತಿರಬೇಕು, ನಂಬದೇ ಇರಬೇಕು.

ಸಾಧಿಸಬೇಕಾದ ಕಾರ್ಯದ ಬಗ್ಗೆ ಬಕಪಕ್ಷಿಯಂತೆ ತನ್ಮಯನಾಗಿ ಸಮಾಲೋಚಿಸ ಬೇಕು. ಸಿಂಹದಂತೆ ಪರರ ಮೇಲೆ ಆಕ್ರಮಣಮಾಡಬೇಕು. ತೋಳದಂತೆ ಪರರ ಮೇಲೇರಿ ತನಗೆ ಬೇಕಾದುದನ್ನು ಸೆಳೆದುಕೊಳ್ಳಬೇಕು. ಕಾಡುಹಂದಿಯಂತೆ ವೈರಿಗಳ ಸ್ಥಾನದ ಮೇಲೆ ದೃಢವಾಗಿ ಪ್ರಹರಿಸಬೇಕು. ಕೋಕಿಲದಂತೆ ರಾಜರು ಮಾತಾಡಬೇಕು. ಕಾಗೆಯಂತೆ ಎಲ್ಲ ಕಡೆಗೂ ಸಂಶಯ ದೃಷ್ಟಿಯಿಂದ ನೋಡಬೇಕು. ನವಿಲಿನಂತೆ ಚಿತ್ರವಿಚಿತ್ರವಾದ ಸುಂದರ ಆಕಾರವನ್ನು ಪ್ರದರ್ಶಿಸಬೇಕು. ನಾಯಿಯಂಥ ದೃಢಭಕ್ತರನ್ನು ಹತ್ತಿರ ಇರಿಸಿಕೊಳ್ಳಬೇಕು.

ಪರೀಕ್ಷೆ ಮಾಡದೇ ಆಹಾರಗಳನ್ನು ಊಟ ಮಾಡಬಾರದು. ಪರೀಕ್ಷಿಸದ ಹಾಸಿಗೆ, ಹೂ, ಹೊದಿಕೆ, ಆಭರಣ ಯಾವದನ್ನೂ ರಾಜರು ಉಪಯೋಗಿಸಬಾರದು. ಗುಂಪಿನಲ್ಲಿ ಹೋಗಬಾರದು. ಆಳ ತಿಳಿಯದೆ ನೀರಲ್ಲಿ ಇಳಿಯಬಾರದು. ಉನ್ಮತ್ತ ಆನೆಯ ಮೇಲೆ ಏರ ಬಾರದು; ಕೆಟ್ಟ ಕುದುರೆಯ ಮೇಲೆ ಹತ್ತಬಾರದು. ಅಪರಿಚಿತ ಹೆಣ್ಣುಗಳೊಡನೆ ಸಹವಾಸ ಮಾಡಬಾರದು. ದೇವರ ಉತ್ಸವಕ್ಕೆ ಹೋಗಿ ಅಲ್ಲಿಯೇ ಉಳಿದುಕೊಳ್ಳ ಬಾರದು.

ರಾಜರು ಧರ್ಮಕಾರ್ಯಗಳಲ್ಲಿ ಧರ್ಮಿಷ್ಠರನ್ನು, ಯುದ್ಧಕಾರ್ಯದಲ್ಲಿ ಶೂರರನ್ನು, ಹಣದ ವಿಷಯದಲ್ಲಿ ಜಿಪುಣರನ್ನು, ಅಂತಃಪುರದಲ್ಲಿ ಷಂಡರನ್ನು, ಎಲ್ಲ ಕಾರ್ಯಗಳಲ್ಲಿಯೂ ಪ್ರಾಮಾಣಿಕರನ್ನು ನಿಯಮಿಸಬೇಕು. ಗುಣವುಳ್ಳವರನ್ನು ಗೌರವಿಸಬೇಕು. ನಿರ್ಗುಣರನ್ನು ಶಾಸನ ಮಾಡಬೇಕು. ಒಳ್ಳೇ ಚತುರ ಹಾಗೂ ಕಷ್ಟಸಹಿಷ್ಣುಗಳಾದ ಗುಪ್ತಚಾರರನ್ನು ಎಲ್ಲೆಡೆಗೂ ಇಟ್ಟಿರಬೇಕು. ಯಾಕೆಂದರೆ 'ರಾಜಾನಃ ಚಾರಚಕ್ಷುಷಃ' ಎಂದು ಹೇಳಿದೆ. ರಾಜರಿಗೆ ಗುಪ್ತಚಾರರೇ ಕಣ್ಣುಗಳು ಎಂದು ಇದರ ಅರ್ಥ. ಈ ಗುಪ್ತಚಾರ ಕೆಲಸಕ್ಕೆ ಜನರೆಲ್ಲರೂ ಅತ್ಯಂತ ಸಂಭಾವಿತರು ಎಂದು ನಂಬಿದವರನ್ನೇ ನಿಯಮಿಸಬೇಕು. ವಿಶೇಷವಾಗಿ ಇಂತಹ ಕೆಲಸಕ್ಕೆ ಕುಶಲರಾದ ವ್ಯಾಪಾರಿಗಳನ್ನೂ, ಸನ್ಯಾಸಿವೇಷ ತಳೆದವರನ್ನೂ ನಿಯಮಿಸಬೇಕು. ಚಾರರು ಹೇಳಿದ್ದೆಲ್ಲವನ್ನು ರಾಜರು ನಂಬಿಯೇ ಬಿಡಬಾರದು. ಅದನ್ನು ವಿಚಾರಿಸಿ ಮಾಡಬೇಕಾದುದನ್ನು ಮಾಡಬೇಕು. ಒಬ್ಬರಿಗೊಬ್ಬರಿಗೆ ಗೊತ್ತಿಲ್ಲದಂತೆ ಅನೇಕಚಾರ ರನ್ನು ಒಂದೇ ಕೆಲಸಕ್ಕೆ ಕಳಿಸಬೇಕು. ಅಪರಿಚಿತರಾದ ಇಬ್ಬರೂ ಚಾರರು ಒಂದೇ ವಿಷಯ ಬಂದು ಹೇಳಿದರೆ ಅದನ್ನು ನಂಬಬೇಕು. ವೈರಿಗಳ ಹಾಗೂ ಪ್ರಜಾಜನರ

ರಹಸ್ಯ, ಸದ್ಗುಣ, ದುರ್ಗುಣ, ಲೋಪದೋಷ, ಗುಣ, ಗೌರವ, ಎಲ್ಲವೂ ಚತುರರಾದ ಚಾರರ ಮುಖಾಂತರ ರಾಜರಿಗೆ ಸಕಾಲದಲ್ಲಿ ತಿಳಿದು ಬರುವದು. ಅವರು ಜನರ ರಾಜನಿಷ್ಠೆ, ಅಥವಾ ದ್ವೇಷ ಎಲ್ಲವನ್ನು ಕಂಡ, ಕೇಳಿ ಬಂದು ತಿಳಿಸುವರು. ಅವರ ಮುಖಾಂತರ, ರಾಜನು ಯಾವುದರಿಂದ ಜನಾನುರಾಗವಾಗುವದು, ಅಥವಾ ಯಾವುದರಿಂದ ತನ್ನ ಬಗ್ಗೆ ಜನರಲ್ಲಿ ವಿರಾಗವುಂಟಾಗುವದು ಎಂಬುದನ್ನು ತಿಳಿದುಕೊಂಡು ಜನರಿಗೆ ತನ್ನ ವಿಷಯದಲ್ಲಿ ಅನುರಾಗ, ಆದರಗಳು ಹುಟ್ಟುವ ಕಾರ್ಯಕಗಳನ್ನು ಜಾಣ್ಮೆಯಿಂದ ಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಹದಿನಾರನೆಯ ಅಧ್ಯಾಯ ಮುಗಿದುದು*



## ರಾಜರು ಏನು ಮಾಡಬೇಕು, ಏನು ಮಾಡಬಾರದು ?

**ಅಧ್ಯಾಯ - ೨೧೭**

**ಮತ್ಸ್ಯ ಉವಾಚ :**

**ಯಥಾ ನ ವರ್ತಿತವ್ಯಂ ಸ್ಯಾನ್ಮನೊ ರಾಜ್ಞೋऽನುಜೀವಿನಾ ॥**
**ತಥಾ ತೇ ಕಥಯಿಷ್ಯಾಮಿ ನಿಬೋಧ ಗದತೋ ಮಮ ॥**

**ಮತ್ಸ್ಯ:-** ರಾಜನ್, ರಾಜರು ಹೇಗೆ ಇರಬೇಕು? ಏನು ಮಾಡಬೇಕು? ಎಂಬುದನ್ನು ತಿಳಿಸಿದೆ. ಇನ್ನು ಮೇಲೆ ರಾಜರನ್ನು ಸೇವಿಸುವವರು ಅರ್ಥಾತ್ ಅವರ ಉಪಜೀವಿಗಳು ಹೇಗೆ ಇರಬೇಕೆಂಬುದನ್ನು ಹೇಳುವೆನು ಕೇಳು. ಅರಸರ ಉಪಜೀವಿಗಳು ಸ್ವಯಂ

ರಾಜರು ಹೇಳಿದ ಮಾತನ್ನು ತಮಗೆ ಬೇಡವಾದರೂ ಕೇಳಬೇಕು. ಎಂದೂ ಅವರನ್ನು ಆಕ್ಷೇಪಿಸಿ ನುಡಿಯಬಾರದು. ಜನರ ಮಧ್ಯದಲ್ಲಿ ಅವರ ವಿರುದ್ಧವಾದದುನ್ನು ಹೇಳಬಾರದು. ಹೇಳಲೇಬೇಕಾದರೆ ಏಕಾಂತದಲ್ಲಿ ಹೇಳಬೇಕು. ಇನ್ನೊಬ್ಬರ ಸಲುವಾಗಿ ಹೇಳುವದಿದ್ದರೆ ರಾಜರು ಪ್ರಸನ್ನರಾಗಿದ್ದಾಗ ಹೇಳಬೇಕು. ತನ್ನ ಸಲುವಾಗಿ ಹೇಳುವದಾದರೆ ತಾನೇ ಹೇಳದೆ, ಅವರ ಮಿತ್ರರಿಂದ ಹೇಳಿಸಿ ಕಾರ್ಯ ಸಾಧಿಸಬೇಕು ರಾಜರ ಅಪ್ಪಣೆಯಿಲ್ಲದೆ ಅಂತಃಪುರದ ಜನರೊಂದಿಗೆ ಸಂಬಂಧ ಬೆಳೆಸಬಾರದು. ವೈರಿಗಳ ದೂತರೊಡನೆ ಸಂಪರ್ಕ ಇಟ್ಟುಕೊಳ್ಳಬಾರದು. ರಾಜನು ತನಗೆ ಮಾಡಿದ ಅವಮಾನವನ್ನಾಗಲಿ, ಸ್ನೇಹಶೂನ್ಯತೆಯನ್ನಾಗಲಿ ಇನ್ನೊಬ್ಬರ ಎದುರಿಗೆ ಹೇಳಬಾರದು. ರಾಜರ ದುರ್ಗುಣ ಪ್ರಚಾರ ಮಾಡಬಾರದು. ರಾಜರೆದುರು ಅತೀ ಮಾತನಾಡಬಾರದು. ಪೂರ್ತಿ ಮಾತನಾಡದೆಯೂ ಇರಬಾರದು. ಆತ್ಮಪ್ರಶಂಸೆ ಮಾಡಿಕೊಳ್ಳಬಾರದು. ಅವರು ಮಾಡಿದ ದುಷ್ಕೃತ್ಯಗಳನ್ನು ಅವರೆದುರು ಎಂದೂ ಉಚ್ಚರಿಸಬಾರದು. ಅವರು ಕೊಟ್ಟ ವಸ್ತ್ರ, ಅಲಂಕಾರ, ಅಸ್ತ್ರಗಳನ್ನು ಬೇರೊಬ್ಬರಿಗೆ ಕೊಡದೆ ತಾನೇ ಧರಿಸಬೇಕು. ರಾಜರ ಎಡ ಅಥವಾ ಬಲ ಆಸನದಲ್ಲಿ ಕುಳಿತುಕೊಳ್ಳಬೇಕು. ಅವರ ಹಿಂದೆ ಮುಂದೆ ಕುಳಿತುಕೊಳ್ಳಬಾರದು. ರಾಜರ ಎದುರು ಕುಳಿತು ಕೊಂಡಾಗ ಓದುವದು, ಅಟ್ಟಹಾಸ, ಆಕಳಿಸುವದು, ಸಿಟ್ಟು, ಆತ್ಮಪ್ರಶಂಸೆ, ಹುಬ್ಬು ಗಂಟಿಕ್ಕುವದು, ಬೇಸರಿಕೆ, ವಾಯು

ವಿಸರ್ಜನ, ಮುಂತಾದವುಗಳನ್ನು ಮಾಡಬಾರದು. ರಾಜಸೇವಕರು ಶಾಠ್ಯ, ಆಶೆ, ಚಾಡಿ ಹೇಳುವದು, ದೇವಲಂಡತನ, ಕ್ಷುದ್ರಬುದ್ಧಿ, ಚಂಚಲತೆ ಮುಂತಾದ ದೋಷಗಳಿಂದ ದೂರರಾಗಿರಬೇಕು. ರಾಜರ ಮಗ, ಮಂತ್ರಿ ಹೆಂಡತಿ ಇವರನ್ನು ನಮಿಸಿ ಗೌರವಿಸಬೇಕು ಕೇಳದೆ ಮಾತನಾಡಬಾರದು. ಅವರ ಮನಸ್ಸಿನ ಒಲುವು ನೋಡಿಕೊಂಡು ನುಡಿಯಬೇಕು, ನಡೆಯಬೇಕು, ಅವರ ಬೇಕು-ಬೇಡಗಳನ್ನು ಸೂಕ್ಷ್ಮವಾಗಿ ತಿಳಿದುಕೊಂಡು ವ್ಯವಹರಿಸಬೇಕು. ರಾಜನು ಸೇವಕನ ವಿಷಯದಲ್ಲಿ ವಿರಕ್ತನಾದರೆ ಬಿಟ್ಟು ಬಿಡುತ್ತಾನೆ ಆ ಸೇವಕನನ್ನು. ಅದುದರಿಂದ ಆ ಸೇವಕನು ತನ್ನಲ್ಲಿ ಅನುರಾಗ ಮೂಡುವಂತೆ ಮಾಡಬೇಕು. ಬೇಡವಾದವರನ್ನು ನಾಶ ಮಾಡುವದು ರಾಜರ ಸ್ವಭಾವವೇ ಇರುತ್ತದೆ.

ರಾಜರು ಇವನ ಬಗ್ಗೆ ಔದಾಸೀನ್ಯ ಅಥವ ತಿರಸ್ಕಾರ ಹೊಂದಿದ್ದಾರೆ ಎಂಬುದನ್ನು ಈ ಲಕ್ಷಣದಿಂದ ತಿಳಿದುಕೊಳ್ಳಬಹುದು. ಸೇವೆ ಮಾಡಿದಾಗಲೂ ಮಲಗಿಕೊಂಡಂತೆ, ಅಥವಾ ಕುಳಿತೇ ಕಣ್ಣು ಮುಚ್ಚಿದಂತೆ ತೋರಿಸುವದು, ಏನಾದರೂ ಹೇಳುವಾಗ ಮಾತಿನ ಮಧ್ಯದಲ್ಲಿಯೇ ಪ್ರಶ್ನೆ ಕೇಳುವದು, ಹೊಗಳುತ್ತಿರುವಾಗ ಮುಖ ತಿರುಗಿಸುವದು, ಬೇರೆ ಕಡೆ ಕಣ್ಣು ಹೊರಳಿಸುವದು, ಇವೆಲ್ಲವೂ ರಾಜರು ವಿರಕ್ತರಾದುದರ ಅಥವಾ ನೀವು ಅವರಿಗೆ ಬೇಡವಾದುದರ ಲಕ್ಷಣ.

ಅವರು ಅನುರಾಗವುಳ್ಳವರಾಗಿದ್ದುದರ ಲಕ್ಷಣಗಳಂತೂ ತಾನೇ ಕಾಣುತ್ತವೆ. ನೋಡಿದ ಕೂಡಲೇ ಪ್ರಸನ್ನನಾಗಿ, ಆದರಿಂದ ಮಾತನಾಡಿಸಿ, ಯೋಗಕ್ಷೇಮ ವಿಚಾರಿಸಿ, ಅಪ್ರಿಯವಾದ ನುಡಿಗಳನ್ನು ಆಡಿದರೂ ಅಭಿನಂದಿಸಿ, ಕೊಟ್ಟ ಕಾಣಿಕೆಗಳನ್ನು ಆದರದಿಂದ ಸ್ವೀಕರಿಸಿ, ಸ್ವಲ್ಪೇ ಕೊಟ್ಟರೂ ವಿಶೇಷವಾಯಿತೆಂದು ಉಪಚಾರ ಹೇಳಿ, ನಗೆಮುಖದಿಂದ ವ್ಯವಹರಿಸಿದರೆ ರಾಜರು ಪ್ರಸನ್ನರಿದ್ದಾರೆ ಎಂದು ತಿಳಿಯಬೇಕು. ಒಟ್ಟಿನಲ್ಲಿ ರಾಜರೊಡನೆ ಅವರ ಸ್ವಭಾವ ಒಲವು ಅಭಿರುಚಿ ನೋಡಿಕೊಂಡು ಅದಕ್ಕೆ ತಕ್ಕಂತೆ ನಡೆದು ಅವರ ಪ್ರೀತ್ಯಾದರಗಳನ್ನು ಸಂಪಾದಿಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಹದಿನೇಳನೆಯ ಅಧ್ಯಾಯ ಮುಗಿದುದು*

—o—

## ಅರಮನೆ ಹಾಗೂ ದುರ್ಗಗಳ ವ್ಯವಸ್ಥೆ

ಅಧ್ಯಾಯ - ೨೧೮

**ಮತ್ಸ್ಯ ಉವಾಚ :**

**"ರಾಜಾ ಸಹಾಯ ಸಂಯುಕ್ತಃ ಪ್ರಭೂತ ಸಸ್ಯೇಂಧನಂ"।**
**ರಮ್ಯಮಾನತಸಾಮಂತಂ ಮಧ್ಯಮಂ ದೇಶಮಾವಸೇತ್॥**

**ಮತ್ಸ್ಯ:-** ಸಹಾಯ ಸಂಪತ್ತುಗಳಿಂದ ಕೂಡಿದ ರಾಜನು ವಿಧೇಯರಾದ ಸಾಮಂತ ರಾಜರು ಸುತ್ತಲೂ ತಮ್ಮ ನಾಡುಗಳನ್ನು ಆಳುತ್ತಿರಲು, ನಡುವೆ ತೃಣ ಕಾಷ್ಠ ಸಮೃದ್ಧವಾಗಿ ರಮ್ಯವಾಗಿರುವ ದೇಶದಲ್ಲಿ ವಾಸಿಸಬೇಕು.

ರಾಜನು ವಾಸಮಾಡುವ ದೇಶವು ವೈಶ್ಯರಿಂದಲೂ ಶೂದ್ರರಿಂದಲೂ ತುಂಬಿರಬೇಕು. ಅಲ್ಪ ಸಂಖ್ಯೆಯಲ್ಲಿ ಬ್ರಾಹ್ಮಣರಿದ್ದರೂ ಸಾಕು. ಶತ್ರು ಆಕ್ರಮಣಕ್ಕೆ ಅದು ತುತ್ತಾಗಬಾರದು. ಅಲ್ಲಿ ಕೆಲಸಗಾರರು ಬಹಳ ಜನರಿರಬೇಕು. ಮಳೆಯನ್ನೇ

ನಂಬಿಕೊಂಡಿರದೇ ನದಿಯ ಆಸರೆಯಿಂದ ಭೂವ್ಯವಸಾಯವು ನಡೆಯುವ ಹಾಗಿರಬೇಕು. ಜನರಿಗೆ ರಾಜನಲ್ಲಿ ಪ್ರೀತಿ ಇರಬೇಕು. ಕಂದಾಯದ ಹೂರೆ ಹೆಚ್ಚಾಗಿರಬಾರದು. ಮರಗಳಲ್ಲಿ ಹೂ ಹಣ್ಣುಗಳು ತುಂಬಿರಬೇಕು. ಕಷ್ಟ ಕಾಲದಲ್ಲಿ ಶತ್ರು ಸೈನ್ಯಗಳು ರಾಜನ ವಾಸಗೃಹವನ್ನು ಮುತ್ತುವಂತಿರಬಾರದು. ಅದು ರಾಜನಿಗೆ ಪ್ರಿಯಕರವಾಗಿ, ಸುಖ ದುಃಖಗಳಲ್ಲಿ ಸಮಾನವಾಗಿ, ಮನಶ್ಯಾಂತಿಯನ್ನೀಯು ವಂತಿರಬೇಕು. ಹಾವುಗಳು, ಹುಲಿಗಳು, ಕಳ್ಳಕಾಕರು ಇವರ ಬಾಧೆಯಿರಬಾರದು. ಕೋಟೆಗಳಲ್ಲಿ ಆರು ವಿಧಗಳಿವೆ. ಧನುರ್ಧಾರಿಗಳಾದ ಶೂರರು ಸುತ್ತಲೂ ಕಾವಲಿದ್ದರೆ ಅದು ಧನುರ್ದುರ್ಗ, ಅಥವಾ ಬಿಲ್ಲಿನ ಕೋಟೆ ಎನಿಸುವದು. ಒಳಕ್ಕೆ ಪ್ರವೇಶಿಸುವ ಬಾಗಿಲು ಕಾಣದಂತೆ ನೆಲದಲ್ಲಿ ಸುರಂಗ ಮಾರ್ಗವಿದ್ದರೆ ಮಹೀದುರ್ಗವೆನ್ನುವರು.

ಶಸ್ತ್ರಯುದ್ಧ, ಮಲ್ಲಯುದ್ಧಗಳಲ್ಲಿ ಸಮರ್ಥರಾದ ಜನರಿಂದ ತುಂಬಿದ್ದರೆ ನರ ದುರ್ಗವೆಂದು ಹೆಸರು. ಸುತ್ತಲೂ ಎತ್ತರವಾದ ಮುಳ್ಳು ಮರಗಳು ಬೆಳೆದು ಪ್ರವೇಶಕ್ಕೆ ಅಸಾಧ್ಯವಾಗಿದ್ದರೆ ವೃಕ್ಷದುರ್ಗವೆಂದು ಹೇಳುತ್ತಾರೆ. ಹತ್ತುವದಕ್ಕಾಗದೆ, ಬೆಟ್ಟದ ಮೇಲೆ ಕೋಟೆ ಕಟ್ಟಿದ್ದರೆ ಗಿರಿದುರ್ಗವೆನಿಸುವದು. ಇವುಗಳಲ್ಲಿ ಗಿರುದುರ್ಗವೇ ಶ್ರೇಷ್ಠವಾದದ್ದು, ನೀತಿ ಶಾಸ್ತ್ರಜ್ಞನಾದ ರಾಜನು ಇವುಗಳಲ್ಲಿ ಒಂದನ್ನು ನಿರ್ಮಿಸಿ ಕೊಳ್ಳಬೇಕು. ಕೋಟೆಯ ಸುತ್ತಲೂ ಕಂದಕವಿರಬೇಕು. ಊರ ಗೋಡೆಯೂ ಮೇಲ್ಗಡೆ ಮುಗಿಲಟ್ಟಳೆಯೂ ಇರಬೇಕು, ಫಿರಂಗಿ ಮೊದಲಾದ ನೂರಾರು ಯಂತ್ರಗಳನ್ನು ಸುತ್ತಲೂ ಇಡಬೇಕು.

ದಿಡ್ಡಿಯ ಬಾಗಿಲು ಬಲವಾದ ಕಂದಕಗಳಿಂದ ಕೂಡಿ ಮನೋಹರವಾಗಿ ಕಾಣಬೇಕು. ಬಾವುಟವನ್ನು ಹಾರಿಸಿಕೊಂಡು ಆನೆಯನ್ನೇರಿ ರಾಜನು ನಗರವನ್ನು ಪ್ರವೇಸಿಸುವಷ್ಟು ಎತ್ತರವಾಗಿ ಇರಬೇಕು. ನಗರದಲ್ಲಿ ವಿಸ್ತಾರವಾದ ನಾಲ್ಕು ಬೀದಿಗಳನ್ನು ನಿರ್ಮಿಸಬೇಕು. ಅವುಗಳಲ್ಲಿ ಮೊದಲನೆಯದರ ಮುಂಭಾಗದಲ್ಲಿ ದೃಢವಾದ ದೇವಸ್ಥಾನವನ್ನು ಕಟ್ಟಿಸಬೇಕು. ಎರಡನೆಯ ಬೀದಿಯ ಮುಂಗಡೆಯಲ್ಲಿ ಅರಮನೆಯೂ, ಮೂರನೆಯದರಲ್ಲಿ ನ್ಯಾಯಸ್ಥಾನವೂ ನಿರ್ಮಿತವಾಗಬೇಕು. ನಾಲ್ಕನೆಯ ಬೀದಿಯ ಪ್ರಾರಂಭದಲ್ಲಿ ಹೆಬ್ಬಾಗಿಲನ್ನು ಕಟ್ಟಿಸಬೇಕು. ಪಟ್ಟಣವು ಚೌಕಾಗಿ ಇಲ್ಲವೆ ದುಂಡಗಾಗಿಯೇ ಇರಬೇಕು.

ರಾಜಾಜ್ಞೆಯಿಲ್ಲದೆ ಜನರು ಮನಸ್ಸು ಬಂದಂತೆ ನಗರದ ಹೊರಕ್ಕೆ ಹೋಗುವಂತಿರಬಾರದು. ಪಟ್ಟಣವು ತ್ರಿಕೋನಾಕಾರವಾಗಿರಬಹುದು. ಯವಧಾನ್ಯದಂತೆ ಮಧ್ಯದಲ್ಲಿ ಅಗಲವಾಗಿ ಪಾರ್ಶ್ವದಲ್ಲಿ ಕಿರಿದಾಗಿರಬಹುದು. ಅರ್ಧ ಚಂದ್ರಾಕಾರವಾಗಿ ಇರಬಹುದು. ಅಥವಾ ವಜ್ರಾಯುಧದ ಆಕಾರವಾಗಿರಬಹುದು. ನದೀ ತೀರಗಳಲ್ಲಿ ಪಟ್ಟಣವು ಅರ್ಧ ಚಂದ್ರಾಕಾರವಾಗಿರುವುದು ಒಳ್ಳೆಯದೆನ್ನುತ್ತಾರೆ. ನೀತಿಜ್ಞನಾದ ರಾಜನು ಬೇರೆ ಕಡೆಗಳಲ್ಲಿ ಹಾಗೆ ಕಟ್ಟಲು ಯತ್ನಿಸಬಾರದು. ಅರಮನೆಯ ಬಲಭಾಗದಲ್ಲಿ ಬೊಕ್ಕಸವನ್ನು, ಅದರ ಬಲಭಾಗದಲ್ಲಿ ಗಜ ಶಾಲೆಯನ್ನು ನಿರ್ಮಿಸಬೇಕು. ಗಜಶಾಲೆಯು ಪೂರ್ವಾಭಿಮುಖವಾಗಿಯೋ ಅಥವಾ ಉತ್ತರಾಭಿಮುಖವಾಗಿಯೋ ಇರಬೇಕು. ಅದರ ಆಗ್ನೇಯ ಭಾಗದಲ್ಲಿ ಆಯುಧ ಶಾಲೆಯನ್ನೂ, ಇನ್ನುಳಿದ ಕೆಲಸಗಳು ನಡೆಯುವ ಕರ್ಮ ಶಾಲೆಗಳನ್ನೂ ಕಟ್ಟಬೇಕು.

ಅರಮನೆಯ ಎಡಗಡೆಯಲ್ಲಿ ಪಾಕಶಾಲೆಯನ್ನು, ಪುರೋಹಿತನ ಮನೆಯನ್ನು ನಿರ್ಮಿಸಬೇಕು. ಮಂತ್ರಿಗಳ, ವೇದ ಶಾಸ್ತ್ರಜ್ಞರ ಮತ್ತು ರಾಜವೈದ್ಯರ ವಾಸಗೃಹಗಳನ್ನೂ ಉಗ್ರಾಣವನ್ನೂ ಆಕಡೆಯಲ್ಲಿಯೇ ಕಟ್ಟಬೇಕು.

ಹಸುಗಳ ಕೊಟ್ಟಿಗೆಗೂ, ಕುದುರೆಗಳ ಲಾಯಕ್ಕೂ ಇಲ್ಲೇ ಸ್ಥಳವನ್ನು ಗೊತ್ತು ಮಾಡಬೇಕು. ಅಶ್ವಶಾಲೆಯು ಉತ್ತರಾಭಿಮುಖವಾಗಿ ಇಲ್ಲವೆ ದಕ್ಷಿಣಾಭಿಮುಖವಾಗಿ ಇರಬೇಕು. ಕುದುರೆ ಲಾಯದಲ್ಲಿ ರಾತ್ರಿಯಲ್ಲಿ ದೀಪಗಳು ಉರಿಯುತ್ತಿರಬೇಕು. ಇದಲ್ಲದೆ ಕೋಳಿಗಳನ್ನು ಸಿಂಗಳೀಕಗಳನ್ನು, ಕರುವಿನೊಡನೆಕೂಡಿದ ಹಸುವನ್ನು ಅಶ್ವಶಾಲೆಯಲ್ಲಿ ಕಟ್ಟಿ ಹಾಕಬೇಕು. ಕುದುರೆಗಳ ಹಿತಕೋರುವ ರಾಜನು ಪ್ರಯತ್ನ ಪೂರ್ವಕವಾಗಿ ಆಡುಗಳನ್ನು ಸಾಕಬೇಕು. ಏಕೆಂದರೆ ಕುದುರೆಗಳ ರೋಗಕ್ಕೆ ಕೋಳಿ, ಕಪಿ, ಆಡು ಮುಂತಾದ ಪ್ರಾಣಿಗಳ ರಕ್ತ, ಮಾಂಸ, ಮೂತ್ರ ಮೊದಲಾದವು ಉಪಯೋಗಕ್ಕೆ ಬರುತ್ತವೆಂದು ಅಶ್ವಶಾಸ್ತ್ರಜ್ಞರಾದ ಶಾಲಿ ಹೋತ್ರರು ಹೇಳಿದ್ದಾರೆ.

ಸೂರ್ಯನು ಮುಳುಗಿದ ತರುವಾಯ ಗೋಶಾಲೆ ಗಜಶಾಲೆ ಮತ್ತು ಅಶ್ವಶಾಲೆ ಮೊದಲಾದವುಗಳ ಗೊಬ್ಬರವನ್ನು ಹೊರಕ್ಕೆ ಹಾಕಬಾರದು. ರಾಜನು ಅವರವರ ಯೋಗ್ಯತೆ ಅರಿತು ಸಾರಥಿಗಳು, ಯೋಧರು, ಶಿಲ್ಪಿಗಳು, ಇವರಿಗೆಲ್ಲ ತಕ್ಕಂತೆ ಕ್ರಮವಾಗಿ ವಾಸಕ್ಕೆ ಸ್ಥಾನವನ್ನು ಕೊಡಬೇಕು.

ಜೋತಿಷ್ಕರಿಗೂ, ಮಂತ್ರ ಶಾಸ್ತ್ರಜ್ಞರಿಗೂ ಕೋಟೆಯೊಳಗೆ ಒಳ್ಳೆಯ ಮನೆಗಳನ್ನು ಕಟ್ಟಿಸಿಕೊಡಬೇಕು. ಹಲವರು ಗೋವೈದ್ಯರು, ಅಶ್ವವೈದ್ಯರು ಮತ್ತು ಗಜವೈದ್ಯರಿಗೆ ಆಶ್ರಯ ಕೊಟ್ಟು ಇಟ್ಟುಕೊಂಡಿರಬೇಕು. ಸಂಗೀತಗಾರರಿಗೂ, ಬ್ರಾಹ್ಮಣರಿಗೂ, ಕೋಟೆಯೊಳಗೆ ಸ್ಥಳ ಕೊಡಬೇಕು. ಕೆಲಸವಿಲ್ಲದೆ ಬಹಳ ಮಂದಿ ದುರ್ಗದೊಳಗೆ ವಾಸ ಮಾಡಬಾರದು. ಕೋಟೆಯ ಕಾವಲಿಗಾಗಿ ಬಗೆಬಗೆಯ ಆಯುಧಗಳನ್ನು ಧರಿಸಿ ಸಾವಿರಾರು ಮಂದಿಯನ್ನು ಕೊಲ್ಲಬಲ್ಲ ವೀರರು ಸಿದ್ಧರಾಗಿ ಇರಬೇಕು.

ರಾಜನು ದುರ್ಗದೊಳಗೆ ರಹಸ್ಯವಾದ ಸುರಂಗಗಳನ್ನುಮಾಡಿಸಬೇಕು. ಎಲ್ಲ ಬಗೆಯ ಆಯುಧಗಳನ್ನು ಸಂಗ್ರಹಿಸಿ ಇಡಬೇಕು. ಬಿಲ್ಲುಗಳು, ಕವಣೆಗಳು, ತೋಮರಗಳು, ಬಾಣಗಳು, ಕತ್ತಿಗಳು, ಕವಚಗಳು, ದೊಣ್ಣೆಗಳು, ಗದೆಗಳು, ಪಟ್ಟಿಶಗಳು, ಕೊಡಲಿಗಳು, ಪ್ರಾಸಗಳು, ಚಕ್ರಗಳು, ಕವಚಗಳು, ಗುರಾಣಿಗಳು, ಗುದ್ದಲಿಗಳು, ಹಗ್ಗಗಳು, ಬೆತ್ತಗಳು, ಹಲಿಗೆಗಳು, ಹೊಟ್ಟು, ಇದ್ದಲಿಗಳನ್ನು ಕೂಡಿಡಬೇಕು. ಶಿಲ್ಪಕಾರ್ಯಗಳಿಗೆ ಬೇಕಾದ ಎಲ್ಲ ಉಪಕರಣಗಳನ್ನು ಸಕಲ ವಾದ್ಯಗಳನ್ನು, ಮೂಲಿಕೆಗಳನ್ನು ಇಲ್ಲಿ ಶೇಖರಿಸಬೇಕು.

ಹಾವುಗಳನ್ನು ಗಡಿಗೆಗಳಲ್ಲಿ ಇಟ್ಟು ಸಾಕಬೇಕು. ಇವನ್ನೇ ಘಟಸರ್ಪ ಗಳೆನ್ನುವರು. ಮದಿಸಿದ ಆನೆ, ಹುಲಿ, ಸಿಂಹ, ಪಾರಿವಾಳಗಳನ್ನು ಸಾಕಬೇಕು.

ಅರಸನು ತನಗೆ ವಿರೋಧಿಗಳಾದವರ ಸ್ಥಾನಗಳ ಮೇಲೆ ಬೇರೆ ಬೇರೆಯಾಗಿ ಕಾವಲನ್ನು ಇರಿಸಿ ಎಚ್ಚರಿಕೆಯಿಂದ ಇರಬೇಕು. ಮೇಲೆ ಹೇಳಿದವುಗಳನ್ನು ರಾಜನು ಜನರ ಹಿತಕ್ಕಾಗಿ ನಗರದಲ್ಲಿ ಚೆನ್ನಾಗಿ ರಕ್ಷಿಸಿ ಇಡಬೇಕು.

ರಾಜನು ಈ ಮುಂದೆ ಹೇಳುವ ಗಿಡಮೂಲಿಕೆಗಳನ್ನು ತನ್ನ ನಗರದಲ್ಲಿ ಶೇಖರಿಸಿ ಇಡಬೇಕು. ಜೀವಕ, ಋಷಭಕ, ಕಾಕೊಲು, ನೆಲ್ಲಿ, ಅಡುಸೋಗೆ, ಮೂರೆಲೆ ಹೊನ್ನೆ, ಒಂದೆಲೆ ಹೊನ್ನೆ, ಕಾಡುಹೆಸರು, ಕಾಡುಉದ್ದು, ಮೇದೆ, ಮಹಾಮೇದೆ, ನೆಲಮಾಗಳಿ, ಕಳ್ಳಂಗಡಲೆ, ಕುರುಬೆ, ವಾಸಂತಿ, ನೆಲನೆಲ್ಲಿ, ನೆಲಗುಳ್ಳ, ಹೆಗ್ಗುಳ್ಳ, ಕರ್ಕಾಟಕಿಶೃಂಗಿ, ಶೃಂಗಾಟಿಕಿ, ನೀಲಿಕಹಿ ಬಸಿರಿ, ರೇಣುಕಿದರ್ಭೆ ಅಮೃತಬಳ್ಳಿ, ನೆಲಗುಂಬಳ, ಹಾಲುಗಂಬಳ, ಮಹಾಪೀಠ, ಮಹಾಕಸ, ಗೇರು, ಸಹದೇವಿ, ಕಟುಕರೋಣಿ, ಹರಳು, ಅತಿಬಜೆ, ಸಬ್ಬಸಿಗೆ, ದ್ರಾಕ್ಷಿ, ಫಲ್ಗು, ಅತಿಮಧುರ, ಬಿದಿರುಪ್ಪು,ಅತಿಶುಕ್ರ, ಶಿವನಿ, ಕೋತಂಬರಿ, ಲಾಳಿಕಡ್ಡಿ, ನಾನಾ ಜಾತಿಯ ಕಬ್ಬುಗಳು, ಬೆಲ್ಲ, ಕಾಕಂಬಿ, ಮುಳ್ಳುಬದನೆ, ಮಧೂಲಿಕ, ಶತಾವರಿ, ಮಾಧೂಕ, ಹಿಪ್ಪಲಿ, ತಾಲ, ಆತ್ಮಗುಪ್ತ, ಧಾರ್ಮಿಕಾ, ರಾಜಶೀರ್ಷಿಕಿ, ಧಾನ್ಯಾಕ, ಋಷ್ಯಪ್ರೋಕ್ತ, ಕಾಕಜಿಹ್ವೆ, ಉರುಪುಷ್ಪಿ, ಪರ್ವತ, ಅಪುಸ, ಮಧುವಲ್ಲಿ, ಕುಲಿಂಗಾಕ್ಷಿ, ಪುನರ್ನವ, ಕಶೇರು, ಕಾಶ್ಮೀರಿ, ಬಿಲ್ವ, ಕೇಸರ, ತುಷಧಾನ್ಯ, ಶವಿಧಾನ್ಯ ಹಾಲುಜೇನು, ಮಜ್ಜಿಗೆ, ಎಣ್ಣೆ, ಮಜ್ಜಾವಸಾ, ಘೃತ, ನೀಪ, ಅರಿಷ್ಟಕ, ಅಮಾಸೋಮ, ಬಾಣ ಮುಂತಾದ ಔಷಧಕ್ಕೆ ಅವಶ್ಯಕವಾದ ಸಾಮಗ್ರಿಗಳು ಮಧುರಗಣಕ್ಕೆ ಸೇರಿದವು.

ದಾಡಿಮ, ಆವ್ಯಂತಕ, ತಿಂತಿಡೀಕ, ಆಮ್ರಾತಕ, ಆಮ್ಲಾಕ, ಆಮ್ಲವೇತಸ, ಭವ್ಯ, ಕರ್ಕಂಧು, ಲಕುಚ, ಕರಮರ್ದ, ಬೀಜಪೂರ, ಕಂಡೂರ ಮಾಲತಿ, ರಾಜಬಂಧುಕ, ಎರಡು ಜಾತಿಯಕೋಲುಕಗಳು ಮತ್ತು ಅವುಗಳ ಎಲೆಗಳು, ಎರಡು ಬಗೆಯ ಆಮಾತ್ರಕಗಳು ಮತ್ತು ಅವುಗಳ ಎಲೆಗಳು, ಪರಾವತ, ನಾಗರಕ, ಪ್ರಾಚೀನಾರುಕ, ಕಪಿತ್ಥ, ಆಮಲಕ, ದಂತಶರ, ಜಾಂಬವ, ನವನೀತ, ಸೌವೀರ, ಕರುಕ್ಕೋದಕ, ಸುರಾ, ಆಸವ, ಮದ್ಯ ಮೊದಲಾದ ಮಾದಕ ದ್ರವ್ಯಗಳು, ದ್ರವ ವಸ್ತುಗಳ ಮೇಲ್ಗಡೆಯ ಹೆಪ್ಪು ಮಜ್ಜಿಗೆ, ಇವು ಶುಕ್ರ ಜಾತಿಯವು. ಅಮ್ಲಗಣಕ್ಕೆ ಸೇರಿದವು. ರಾಜನು ಇವೆಲ್ಲವನ್ನು ಸಂಗ್ರಹಿಸಬೇಕು.

ಸೈಂಧವ, ಉದ್ಭಿಧ, ಪಾಠೇಯ, ಪಾಕ್ಯ, ಸಾಮುದ್ರಲೋಮಕ, ಕೌಪ್ಯ, ಸೌವರ್ಣ, ಲವಿಡ, ಬಾಲಕೇಯ, ಓರ್ವ, ಕ್ಷಾರ, ಕಾಲಿಭಸ್ಮ, ಇವುಗಳ ಲವಣಗಣಕ್ಕೆ ಸಂಬಂಧಪಟ್ಟವು. ಇವುಗಳನ್ನು ರಾಜನು ಸಂಗ್ರಹಿಸಿ ಇಡುವ ವ್ಯವಸ್ಥೆ ಮಾಡಬೇಕು. ಹಿಪ್ಪಲಿ, ಹಿಪ್ಪಲಿ ಮೂಲ ಚವ್ಯಚಿತ್ರಕ, ಭಿಲ್ಲಾತ, ಅಜಮೋಜ, ಹಿಂಗು, ಮೂಲಿಕ, ಕುಂಜಿಕಾ, ಕಾರವಿ, ಧಾನ್ಯಕ, ಸುಮುಖಾ, ಕಲಮಾಲಿಕಾ, ಲಶುನ, ಸುರಸ, ಕಾಯನೌಭಿ, ಹರಿತಾಲ, ಮನಕಿಶಿಲಾ, ಅಮೃತಾ, ರುದಂತೀ, ರೋಹಿಷ, ಹಂಜಿಕಾ, ಅತಿವಿಷ, ಕುಂಕುಮ, ಏರಂಡ, ಕಾಂಡೀರ, ಹಂಜಿಕಾ, ಅತಿ ವಿಷ, ಹಿಂಗುಪತ್ರಿಕಾ ಇವೆಲ್ಲವೂ ಔಷಧಕ್ಕೆ ಉಪಯುಕ್ತವಾದ ವಸ್ತುಗಳು. ಇವುಗಳಲ್ಲದೆ, ಅನೇಕ ಪ್ರಾಣಿಗಳ ಪಿತ್ತರಸ, ಮೂತ್ರ, ನಾನಾ ಜಾತಿಯ ಗಿಡಬಳ್ಳಿಗಳು, ಬೇರುಗಳು ಅವಶ್ಯವಾದವುಗಳು. ಇವೆಲ್ಲವು ಕಟುಗಣಕ್ಕೆ ಸೇರಿದವು. ಇವನ್ನೆಲ್ಲ ರಾಜನು ತನ್ನ ದುರ್ಗದಲ್ಲಿ ಶೇಖರಿಸಿಡುವ ವ್ಯವಸ್ಥೆ ಮಾಡಬೇಕು.

ಅಲ್ಲದೆ, ಮಸ್ತ, ಚಂದನ, ಕೃತಮಾಲ, ದಾರು, ಹರಿದ್ರಾ, ನಲದ, ಉಶೀರ, ವಕ್ತಮಾಲ, ಕದಂಬಕ, ದೂರ್ವಾ, ಪಟೋಲ, ಕಟುಕಾ, ದಂತೀತ್ವಕ್, ಪತ್ರಕ, ಕಿರಾತ,

ತಿಕ್ತ, ಆತಿವಿ,, ತಾಲಿಪತ್ರ, ತಗರ, ಸಪ್ತಪರ್ಣ, ವಿಕಂಕತ, ಸುರೋದಭವಾ, ರೋಹಿಣಿ, ಜಟಾಮಾಂಸಿ, ಪರ್ಪಟ, ದಂತಿಕಾ, ರಸಾಂಜನ, ಭೃಂಗರಾಜ, ಪತಂಗಿ, ಪರಿಪೇಲವ, ದುಸ್ಪರ್ಶಾ, ಗುರುಣೀ, ಕಾಮಾ, ಶ್ಯಾಮಾಕ, ಗಂಧ ನಾಕುಲಿ, ತುಷಪರ್ಣಿ, ವ್ಯಾಘ್ರನಖಿ, ಮಂಜಿಷ್ಠಾ, ಚತುರಂಗುಲಾ, ರಂಭಾ, ರಂಭಾಂಕುರ, ಸ್ಫೋತಾ, ತಾಲಾಸ್ಫೋತಾ, ಹರೇಣುಕಾ, ವೇತಾಗ್ರ, ವೇತಸ, ತುಂಬಿ, ವಿಷಾಣಿ, ಲೋಧ್ರಪುಷ್ಪಿಣೀ, ಮಾಲತಿ, ಕರಕೃಷ್ಣಾ, ವೃಶ್ಚಿಕಾ, ಜೀವಿತಾ, ಪರ್ಣಿಕಾ, ಗಡೂಚಿ, ಇವುಗಳು ತಿಕ್ತಗಣಕ್ಕೆ ಸೇರಿದವು. ಇವುಗಳನ್ನು ಸಂಗ್ರಹಿಸಿಡಬೇಕು.

ಎರಡು ಜಾತಿಯ ಅಭಯಗಳು, ಆಮಲಕಗಳು, ಬಭೀತಕ, ಪ್ರಿಯಂಗು, ಧಾತಕೀಪುಷ್ಪ, ಮೋಟಾ, ಅರ್ಜುನ, ಆಸನ, ಅನಂತಾ, ಸ್ತ್ರೀತುವರಿಕಾ, ಶ್ಯೋಣಾಕ, ಕಟ್ಫಲ, ಭೂರ್ಜಪತ್ರ, ಶಿಲಾಪತ್ರ, ಪಾಟಲಾಪತ್ರ, ಲೋಮಕ ಸಮಂಗಾಮೂಲ, ತ್ರಿವೃತಾಮೂಲ, ಕಾರ್ಪಾಸ, ಗೈರಿಕಾಂಜನ, ವಿದ್ರುಮ, ಮಧೂ ಚಿಷ್ಟ, ಕುಂಭಿಕಾ, ಕುಮುದ, ಉತ್ಪಲ, ನ್ಯಗ್ರೋಧ, ಅಶ್ವತ್ಥ, ರೆಂಶುಕಿ, ಶಿಂಶಪ, ಶಮಿ, ಪ್ರಿಯಾಲ, ಪೀಲು, ಕಾಶಾರಿ, ಶಿರೀಷ, ಬಿಲ್ವ, ಅಗ್ನಿಮಂಥ, ಅಶೋಕ, ಬದರ ಕದಂಬ, ಖದಿರದ್ವಯ, ಇವುಗಳ ಎಲೆ ಬೇರು ಹೂವು ಇವೆಲ್ಲ ಕಷಾಯಗಣಕ್ಕೆ ಸೇರಿದವುಗಳು. ಭೂಪತಿಯು ಪ್ರಯತ್ನಪಟ್ಟು ಇವುಗಳನ್ನು ಸಂಗ್ರಹಿಸಿ ಇಡಬೇಕು.

ಶತ್ರುಗಳನ್ನು ಕೊಲ್ಲುವುದಕ್ಕೂ, ಅಂಗಹೀನರನ್ನಾಗಿ ಮಾಡುವುದಕ್ಕೂ ಗಾಳಿ, ಹೊಗೆ, ನೀರು ಇವುಗಳ ಸಂಚಾರಮಾರ್ಗದಲ್ಲಿ ಸೇರಿ ರೋಗವನ್ನು ಹರಡುವದಕ್ಕೂ ಶಕ್ತಿಯುಳ್ಳ ಕ್ರಿಮಿ ಕೀಟಗಳನ್ನು, ವಿಷಪದಾರ್ಥಗಳನ್ನು ರಾಜನು ಸಂಗ್ರಹಿಸಿಡಬೇಕು. ಬಗೆ ಬಗೆಯ ವಿಷದ್ರವ್ಯಗಳನ್ನು, ವಿಷ ಪರಿಹಾರಕವಾದ ವಿಚಿತ್ರ ಶಕ್ತಿಯುಳ್ಳ ಔಷಧಗಳನ್ನು ಭೂಪಾಲಕನು ಪ್ರಯತ್ನದಿಂದ ಸಂಗ್ರಹಿಸಿ ಇಡಬೇಕು.

ರಾಕ್ಷಸರು, ಭೂತ, ಪಿಶಾಚಿಗಳು, ಪಾಪಿಷ್ಠರು ಇವರನ್ನು ಅಡಗಿಸಿ ಪುಷ್ಟಿಯನ್ನು ಕೊಡಬಲ್ಲ ಮಣಿಮಂತ್ರ, ಮೂಲಿಕೆಗಳನ್ನು ಸಂಪಾದಿಸಬೇಕು. ಗೀತ ನೃತ್ಯಾದಿ ಕಲೆಗಳಲ್ಲಿ ಪರಿಣತರಾದವರಿಗೆ ಆಶ್ರಯ ಕೊಟ್ಟು, ತನ್ನ ಆಸ್ಥಾನದಲ್ಲಿ ಇರಿಸಿಕೊಳ್ಳಬೇಕು. ಅಲ್ಲದೆ ಹೇಡಿಗಳು, ಉನ್ಮತ್ತರು, ಕೋಪಿಷ್ಠರು, ಅವಮಾನಿತರು, ಕೆಟ್ಟನಡತೆಯ ಅಧಿಕಾರಿಗಳು ಪಾಪಸ್ವಭಾವದವರು ಇಂತವರನ್ನು ರಾಜನು ತನ್ನ ಪಟ್ಟಣದಲ್ಲಿ ಇರಗೊಡಬಾರದು.

ಯಂತ್ರಗಳು, ಆಯುಧಗಳು, ಅಟ್ಟಲೆಗಳು ಇವುಗಳಿಂದ ಕೂಡಿ, ಧಾನ್ಯಗಳಿಂದಲೂ, ಔಷಧಿಗಳಿಂದಲೂ, ವರ್ತಕರಿಂದಲೂ, ಪರಿಪೂರ್ಣವಾಗಿ ಬಲವಾದ ರಕ್ಷಣೆಯಿಂದ ಯುಕ್ತವಾದ, ಕೋಟೆಯೊಳಗೆ ಭೂಪಾಲಕನು ವಾಸ ಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ನೂರಾ ಹದಿನೆಂಟನೆಯ ಅಧ್ಯಾಯ ಮುಗಿದುದು*

—o—

## ರಾಜರು ಸಂಗ್ರಹಿಸಬೇಕಾದ ಔಷಧಿ ವನಸ್ಪತಿಗಳು

## ಅಧ್ಯಾಯ - ೨೧೯

**ಮನುರುವಾಚ :**

**"ರಕ್ಷೋಘ್ನಾನಿ ವಿಷಘ್ನಾನಿ ಯಾನಿ ಧಾರ್ಯಾಣಿ ಭೂಭುಜಾ।**
**ಅಗದಾನಿ ಸಮಾಚಕ್ಷ್ವ ತಾನಿ ಧರ್ಮಭೃತಾಂ ವರ॥"**

**ಮನು** :- ಧರ್ಮಧಾರಿಗಳಲ್ಲಿ ಅಗ್ರಗಣ್ಯನಾದ ಓ ದೇವಾ, ರಾಕ್ಷಸರ ಬಾಧೆಯನ್ನು, ವಿಷಯಗಳ ದೋಷವನ್ನು ಪರಿಹರಿಸುವ ಸಲುವಾಗಿ ಯಾವ ಯಾವ ಔಷಧಗಳನ್ನು ರಾಜನು ಸಂಗ್ರಹಿಸಿ ಇಡಬೇಕು ಅದನ್ನು ನನಗೆ ತಿಳಿಸು.

**ಮತ್ಸ್ಯ** :- ಬಿಲ್ವಪತ್ರೆಯ ಹೀಚು, ಯವಕ್ಷಾರಿ, ಪಾದರಿ ಚಕ್ಕೆ, ಹಿಂಗು, ಮೆಣಸು, ಶಿವನಿಬೇರು, ನಾಯಿ ಬೇಲದ ಚಕ್ಕೆ, ಇವುಗಳ ಕಷಾಯವನ್ನು ವಿಷ ಮಿಶ್ರವಾದ ಪದಾರ್ಥಗಳ ಮೇಲೆ ಚಿಮುಕಿಸಿದರೆ ಕೂಡಲೇ ವಿಷವು ಪರಿಹಾರವಾಗುವದು. ಯವಧಾನ್ಯ, ಸೈಂಧವ ಲವಣ, ಪಾನದ್ರವ್ಯ, ವಸನ, ಶಯನ, ಆಸನ, ಉದಕ, ಇಂತಹ ಉಪಯುಕ್ತ ಪದಾರ್ಥಗಳನ್ನು ಈ ಕಷಾಯದಿಂದ ಪ್ರೋಕ್ಷಿಸಿದರೆ ಇವುಗಳಲ್ಲಿ ವಿಷದ ದೋಷವು ನಾಶವಾಗುವದು.

ಚಳ್ಳೆ, ಪಾದರಿ, ಅತಿಬಜೆ, ನುಗ್ಗೆ, ಕೊರಚಗೆ, ಕೋವೆ, ಮಂಜಿಷ್ಠೆ, ಅಡಸೋಗೆ, ಬೇಲ, ಅರಳಿ, ಕೆಂಪುಗಂಧ, ಸಹದೇವಿ, ಅರಿಸಿನ, ಮರದರಿಸಿನ, ಇವೆಲ್ಲವೂ ವಿಷನಾಶನಿಗಳು, ಇವಗಳ ಕಷಾಯವನ್ನು ಕವಚ, ಅಭರಣ, ಛತ್ರ, ಚಾಮರ, ಗೃಹ ಇವುಗಳಿಗೆ ಪ್ರೋಕ್ಷಿಸಿದರೆ ವಿಷದ ಬಾಧೆ ತೊಲಗುವದು, ಅಲ್ಲದೆ, ಅರಗು ವ್ರೇಂಖಣದ ಚಕ್ಕೆ, ಮಂಜಿಷ್ಠೆ, ಏಲಕ್ಕಿ, ರೇಣುಕೆಯಬೀಜ, ಅತಿಮಧುರ, ಇವುಗಳನ್ನು ಮುಂಗಸಿಯಪಿತ್ತರಸದೊಡನೆ ಬೆರಸಿ, ಎತ್ತಿನ ಕೊಂಬಿನಲ್ಲಿಟ್ಟು ಏಳು ರಾತ್ರಿ ನೆಲದೊಳಗೆ ಹೂಳಬೇಕು. ಬಳಿಕ ಅದನ್ನು ಚೆನ್ನಾಗಿ ಅರೆದು, ಮಣಿಗಳಾಗಿ ಮಾಡಿ, ಚಿನ್ನದ ತಂತಿಯಲ್ಲಿ ಪೋಣಿಸಿ ಕೈಗೆ ಕಟ್ಟಿಕೊಳ್ಳಬೇಕು. ವಿಷಮಿಶ್ರಿತವಾದ ಪದಾರ್ಥ ಗಳಿಗೆ ಅದು ತಗಲಿದ ಕೂಡಲೇ ವಿಷದ ದೋಷವು ದೂರವಾಗುವದು. ಮತ್ತು ಮೆಣಸೆಲೆ, ಬನ್ನಿಎಲೆ, ತುಂಬೇಎಲೆ ಬಿಳಿಸಾಸುವೆ, ಬೇಲದ ಹಣ್ಣಿನ ಕರಟ, ಚಂಗುಲ ಕೋಷ್ಠಿ, ಮಂಜಿಷ್ಠ ಇವುಗಳನ್ನು ನಾಯಿಯ ಅಥವಾ ಕಪಿಲವರ್ಣದ ಹಸುವಿನ ಪಿತ್ತರಸದಲ್ಲಿ ನುಣ್ಣಗೆ ಅರೆದು ಮತ್ತೊಂದು ಬಗೆಯ ವಿಷನಾಶಕ ಔಷಧ ಸಿದ್ಧಪಡಿಸಬಹುದು.

ಏಲಕ್ಕಿಯ ಬೇರು, ಚಕ್ರವರ್ತಿನಿ ಎಂಬ ವನಸ್ಪತಿಯ ಬೇರು ಇವುಗಳಿಂದಲೂ ಮೇಲೆ ಹೇಳಿದಂತೆ ವಿಷನಾಶಕ ಮಣಿಗಳನ್ನು ಮಾಡಬಹುದು. ಇವುಗಳನ್ನು ಕೈಗೆ ಕಟ್ಟಿಕೊಂಡರೂ ವಿಷ ದೋಷ ಪರಿಹಾರವಾಗುವದು.

ರೇಣುಕೆಯ ಬೀಜ, ಜಟಾಮಾಂಸಿ ಮಂಜಿಷ್ಠೆ ಅರಿಸಿನ, ಅತಿಮಧುರ, ಜೇನು ತುಪ್ಪ, ತಾರೆಯ ಚಕ್ಕೆ, ಈಶ್ವರೀ ಬೇರು, ಅರಗು, ಇವುಗಳನ್ನು ನಾಯಿಯ ಪಿತ್ತರಸದಲ್ಲಿ ಬೆರಿಸಿ, ಹಿಂದೆ ಹೇಳಿದಂತೆ ಏಳು ದಿನ ನೆಲದಲ್ಲಿ ಹೂಳಿಟ್ಟು, ಹಿಟ್ಟಿನಂತೆ

ಚೆನ್ನಾಗಿ ಅರೆಯಬೇಕು. ಅದನ್ನು ವಾದ್ಯಗಳಿಗೂ, ಬಾವುಟಗಳಿಗೂ ಲೇಪಿಸಬಹುದು. ಈ ಔಷಧವನ್ನು ನೋಡಲಿ, ಮೂಸಿ ನೋಡಲಿ, ಕೊನೆಗೆ ಇದರ ಹೆಸರನ್ನಾದರೂ ಕೇಳಲಿ. ಕೂಡಲೇ ವಿಷವು ಪರಿಹಾರವಾಗುವದು.

ಅಲ್ಲದೆ ಹಿಪ್ಪಲಿ, ಮೆಣಸು, ಶುಂಠಿ ಸಮುದ್ರಲವಣ, ಸೈಂಧಲವಣ, ಬಿಡವಲಣ, ಕಾಚಲವಣ, ಸೌವರ್ಚಲವಣ, ಮಂಜಿಷ್ಠೆ, ಅರಿಸಿನ, ಮರದರಿಸಿನ, ಕರೆಏಲಕ್ಕಿ, ತಿಗಡೆಯೆಲೆ, ವಾಯಿವಡಂಗ, ಹಾವು ಮೆಕ್ಕೆ, ಅತಿಮಧರ, ನೀರಂಜಿ, ಚಕ್ಕೆ ಜೇನುತುಪ್ಪ ಇವುಗಳನ್ನು ಹಸುವಿನ ಕೊಂಬಿನೊಳಗಿಟ್ಟು, ನೆಲದಲ್ಲಿ ಏಳುದಿನ ಹೂಳಬೇಕು ತರುವಾಯ ಚೂರ್ಣ ಮಾಡಿ, ಪ್ರಮಾಣಾನುವಾಗಿ ಊಟಕ್ಕೆ ಮೊದಲು ಬಿಸಿ ನೀರಿನಲ್ಲಿ ಸೇವಿಸಬೇಕು. ಆಹಾರದಲ್ಲಿ ಸೇರಿದ ವಿಷವು ಇದರಿಂದ ಜೀರ್ಣವಾಗುವದು. ವಿಷ ನಿವೃತ್ತಿಯಾದ ಮೇಲೂ ಸೇವಿಸುತ್ತಿದ್ದರೆ, ಪಿತ್ತ ದೋಷ ಉಂಟುಮಾಡುವದು.

ಬಿಳಿ ಜೀರಿಗೆ, ಧೂಪ, ಸಾಸುವೆ, ಏಲಾವಾಲುಕ, ಗಂಗುಂಗೆ ಬೀಜ, ಕಾಗೆ ತೊಂಡೆ, ದೇವದಾರು ಚೆಕ್ಕೆ, ಇವುಗಳನ್ನು ಮತ್ತಿಯ ಹೂವಿನೊಡನೆ ಸೇರಿಸಿ, ಪುಡಿಮಾಡಿ, ವಾಸದ ಮನೆಯಲ್ಲಿ ಹೊಗೆ ಹಾಕಿದರೆ ಚರಾಚರ ವಸ್ತು ಸಂಬಂಧವಾದ ವಿಷವು ನಾಶವಾಗುವದು. ಅಲ್ಲಿ ಕ್ರಿಮಿ ಕೀಟಗಳು, ಕಪ್ಪೆಗಳು, ಬೇರೆ ತೆರನಾದ ವಿಷಪ್ರಾಣಿಗಳು ಯಾವವೂ ಸುಳಿಯುವುದಿಲ್ಲ. ಈ ಪುಡಿಯ ಧೂಪವನ್ನು ಹಾಕಿದ ಕಡೆಯಲ್ಲಿ ಮಾಟ, ಮಾಯೆ ಇವುಗಳ ಕಾಟವೂ ತಪ್ಪುವದು.

ಶ್ರೀಗಂಧ, ಹಾಲೆ ತೊಗಟೆ, ಮುತ್ತುಗದ ತೊಗಟೆ, ಕೊರಟಿಗೆ ಏಲಾವಾಲು, ಕೆಂಪು ತಿಗಡೆಯ ಚಕ್ಕೆ, ಈಶ್ವರೀಬೇರು ಕಿರುಗುಸೋಲೆ ಸಪ್ಪು, ಗಣಿಕೇ ಗಿಡು ಇವುಗಳ ಕಷಾಯವು ಸ್ನಾನ ಪಾನಾದಿ ಸಕಲವಿಧಕಾರ್ಯಗಳಿಗೂ ಪ್ರಶಸ್ತವಾದುದು, ಅಲ್ಲದೆ ಗೋರೋಚನ, ತಾಳೇಶಪತ್ರ, ಮೆಣಸೆಲೆ, ಕುಂಕುಮ ಕೇಸರಿ, ಇವುಗಳ ಚೂರ್ಣದಿಂದ ತಿಲಕವನ್ನು ಹಚ್ಚಿಕೊಂಡವನಿಗೆ ವಿಷದ ಬಾಧೆ ತಟ್ಟದು. ಆತನ ಪುರುಷರ, ಸ್ತ್ರೀಯರ ಮತ್ತು ಅರಸನ ಪ್ರೀತಿಗೆ ಪಾತ್ರನಾಗುವನು.

ಅರಿಸಿನ, ಮಂಜಿಷ್ಠೆ, ಉತ್ತರಣೆ, ಹಿಪ್ಪಲಿ, ಬೇವಿನ ಚಕ್ಕೆ, ಇವುಗಳ ಚೂರ್ಣವನ್ನು ಮೈಗೆ ಹಚ್ಚಿಕೊಂಡರೆ ಎಲ್ಲ ಬಗೆಯ ವಿಷದ ಬಾಧೆಗಳು ದೂರವಾಗುವವು. ಬಾಗೆಯ ಕಾಯಿ, ಎಲೆ, ಹೂ, ಚಕ್ಕೆ, ಬೇರು ಇವುಗಳನ್ನು ಗೋಮೂತ್ರದಲ್ಲಿ ಅರೆದು ಸಿದ್ದಪಡಿಸಿದ ಔಷಧವು ಎಲ್ಲ ಬಗೆಯ ವಿಷದ ಮೇಲೂ ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲದು.

ಸುಪ್ರಸಿದ್ಧವಾದ ಮೂಲಿಕೆಗಳು ಇಂತಿವೆ: ಕಾಡುಹಾಗಲ, ಕರ್ಕೋಟಕಿ, ವಿಷ್ಣುಕ್ರಾಂತಿ, ಲವಂಗ, ಶತಮೂಲಿ, ಬಾವಂತಿ, ರಾಮಫಲ, ಕಳ್ಳಂಗಡಲೆ, ಬೂರುಗ, ಪಡವಲ, ಬಂದೆಲಗ, ಖರ್ಜೂರ, ಅರಿಸಿನ, ದಗ್ಧರುಹಾ, ನೆಲದಾಹರೆ, ಹಾವು ಮೆಕ್ಕೆ, ಗಿರಿಕರ್ಣಿಕೆ, ಇಲಿಕಿವಿ, ಆನೆಹಿಪ್ಪಲಿ, ಕೊರಟಗೆ, ಆಡುಮುಟ್ಟದ ಸೊಪ್ಪು, ಉತ್ತರಣೆ, ಕೆಂಪು ಉತ್ತರಣೆ, ಬರ್ಹಿಶಿಖಾ, ಹೀರೆ, ಹೊಂಗೆ, ಪ್ರಿಯಾಲ, ಕಗ್ಗಲಿ, ವಾರುಣಿ, ವಸುಗಂಧಾ, ನಂಜಾರೆ, ಈಶ್ವರಿ, ಶಿವಗಂಧಾ, ಅಶ್ವಗಂಧಾ, ವಂಶನಾಳಿಕಾ, ಜತುಕಾಲಿ, ನೆಲಗುಂಬಳ, ಬಿಳೇಗುಳ್ಳ, ಇಷ್ಟಮುಧಕ, ವಜ್ರಕ ದೇವದಾರು, ಲಕ್ಕಿ, ಜೀವದ್, ನಂದಾ

ಮೇದೆ, ಗ್ರಂಥಿಕ ತತಗರ, ಒಣಶುಂಠಿ, ನೆಗ್ಗಿಲು, ನಾಲ, ಜಾಲಿ, ಜಾತಿ, ಅಲೆದೆಲೆ, ಕಾರ್ತಸ್ವರ, ಮಹಾನೀಲ, ಧೂಪ, ಹಂಸಪಾದಿ, ಮಂಡೂಕ, ಪರ್ಣಿ, ವಾರಾಹಿ, ಕಿರುಗುಸೋಲೆ, ಸರ್ಪಾಕ್ಷಿ, ಲವಲಿ, ಬ್ರಾಹ್ಮಿ, ಅತಿಬಜೆ, ಸುಖಾಕಾರ, ರುಜಾಪಹಾ, ವೃದ್ಧಿಕರಿ ಶಲ್ಯದಾ, ಲವಂಗಪತ್ರೆ, ಕಟುಕರೋಣಿ, ಬದನಿಕೆ, ದತ್ತೂರ, ಚಿತ್ರಫಲಾ, ಕಾಕೋಲಿ, ಕ್ಷೀರಕಾಕೋಲಿ, ಪೀಲುಕರ್ಣಿ, ಕೇಶಿನಿ, ಚೇಳುಕೊಂಡಿ, ಮಹಾನಾಗಾ, ಆಷಾಢೀ, ಗರುಡೇವೇಗಾ, ನೀರುನೈದಿಲೆ, ನೆಲನೈದಿಲೆ. ಮಹಾಭೂಮಿಲತೆ ಉನ್ಮಾದಿನಿ, ಸೋಮರಾಜ, ಇವೆಲ್ಲವೂ ಅತಿ ಶ್ರೇಷ್ಠವಾದುವು, ಇವುಗಳನ್ನು ರಾಜನು ಅವಶ್ಯವಾಗಿ ಸಂಗ್ರಹಿಸಿಡಬೇಕು. ಅಲ್ಲದೆ ಬಗೆ ಬಗೆಯ ರತ್ನಗಳನ್ನು ಅದರಲ್ಲೂ ಮುಖ್ಯವಾಗಿ ಮಣಿಗಳನ್ನೂ ಕೀಟಪಕ್ಷಿಗಳನ್ನು, ಸರ್ಪ, ಗಜ, ಮುಂತಾದ ಪ್ರಾಣಿಗಳ ಶರೀರದಲ್ಲಿ ಉತ್ಪನ್ನವಾದ ಮಣಿ ವಿಶೇಷಗಳನ್ನು ಶೇಖರಿಸಿ ಇಡಬೇಕು.

ರಾಕ್ಷಸರ ಭೀತಿಯನ್ನು, ವಿಷದ ಬಾಧೆಯನ್ನು, ಭೂತ-ಬೇತಾಳಗಳ ಉಪದ್ರವವನ್ನು ಪರಿಹರಿಸುವ ಮಣಿ-ಮಂತ್ರೌಷಾಧಿಗಳನ್ನು ಸಂಪಾದಿಸಬೇಕು. ಆನೆ, ಕುದುರೆ, ಹಸು, ಕತ್ತೆ, ಒಂಟೆ, ಹಾವು, ಹಸುಬನಹಕ್ಕಿ, ನರಿ, ಮುಂಗಸಿ, ಕಪ್ಪೆ, ಸಿಂಹ, ಹುಲಿ, ಬೆಕ್ಕು, ಕಪಿ, ಜಾತಕ, ಹೆಣ್ಣಾನೆ, ಕೋಣ, ಜಿಂಕೆ ಇವುಗಳ ದೇಹದಲ್ಲಿರುವ ಮಣಿ ಅಥವಾ ಗ್ರಂಥಿ ವಿಶೇಷಗಳನ್ನು ರಾಜನು ಶೇಖರಿಸಿಡಬೇಕು.

ಮೇಲೆ ಹೇಳಿದ ಎಲ್ಲ ಬಗೆಯ ಉತ್ತಮವಾದ ವಸ್ತುಗಳಿಂದ ಅರಸನು ವಿಷದಬಾಧೆ, ಭೂತಪೀಡೆ ಮುಂತಾದವುಗಳಿಂದ ರಕ್ಷಣೆಯನ್ನು ಪಡೆದು, ನಿರ್ಮಲವೂ, ಸಲಕ್ಷಣವೂ, ಸುಗುಣಪೂರ್ಣವೂ ಆದ ಅರಮನೆಯಲ್ಲಿ ವಾಸ ಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರಹತ್ತೊಂಬತ್ತನೆಯ ಅಧ್ಯಾಯ ಮುಗಿದುದು*



## ರಾಜಧರ್ಮ ವರ್ಣನೆ

**ಅಧ್ಯಾಯ - ೨೨೦**

**ಮತ್ಸ್ಯ ಉವಾಚ :**

**ರಾಜನ್! ಪುತ್ರಸ್ಯ ರಕ್ಷಾ ಚ ಕರ್ತವ್ಯಾ ಪೃಥಿವೀಕ್ಷಿತಾ।**
**ಆಚಾರ್ಯಶ್ಚಾತ್ರಕರ್ತವ್ಯೋ ನಿತ್ಯಯುಕ್ತಶ್ಚ ರಕ್ಷಿಭಿಃ॥**

ರಾಜನೇ, ಮಹಾರಾಜರು, ತಮ್ಮ ಮಕ್ಕಳ, ರಕ್ಷಣೆಯನ್ನು ಜಾಗರೂಕತೆಯಿಂದ ಮಾಡಬೇಕು. ಒಳ್ಳೇ ಗುರುವನ್ನು ಎಲ್ಲ ವಿಧವಾದ ರಕ್ಷಣೆ ಒದಗಿಸಿ, ತನ್ನ ಮಕ್ಕಳಿಗೆ ಪಾಠಹೇಳಿಕೊಡಲು ನಿಯಮಿಸಬೇಕು. ರಾಜಕುಮಾರರಿಗೆ ಧರ್ಮ, ಕರ್ಮ, ಅರ್ಥ ಶಾಸ್ತ್ರ, ಧನುರ್ವೇದ ಕಲಿಸಬೇಕು. ಆನೆ, ಕುದುರೆಗಳನ್ನು ಓಡಿಸುವದು, ರಥ ನಡೆಸುವದು ಅವರಿಗೆ ಚನ್ನಾಗಿ ಗೊತ್ತಿರಬೇಕು. ಪ್ರತಿದಿನವೂ ಮಕ್ಕಳಿಂದ ವ್ಯಾಯಾಮ ಮಾಡಿಸಬೇಕು. ಶಿಲ್ಪವಿದ್ಯೆಯೂ ಅವಶ್ಯಕ. ಮುಂಗೋಪಿ, ಹಾಗೂ ಲೋಭಿಗಳ ಸಹವಾಸವು ಮಕ್ಕಳಿಗೆ ಆಗದಂತೆ ಎಚ್ಚರಿಕೆ ವಹಿಸಬೇಕು. ಯೌವ್ವನ ಬಂದಾಗ ಅವರು

ಇಂದ್ರಿಯ ಲೋಲುಪರಾಗಿ ದಾರಿ ಬಿಟ್ಟು ಹೋಗದಂತೆ ಶೀಲಸಂಯಮಗಳ ಬಂಧನದಲ್ಲಿ ಅವರನ್ನು ರಕ್ಷಿಸುತ್ತಿರಬೇಕು. ಅವಿನೀತ ಮಕ್ಕಳಾದರೆ ಬೇಟೆ, ಕುಡಿತ, ಜೂಜಾಟ, ಇವು ರಾಜನಿಗೆ ತಗಲಿಕೊಳ್ಳುವ ಸಾಮಾನ್ಯ ಚಟಗಳಾಗಿವೆ, ಅವುಗಳಿಂದ ಮಕ್ಕಳನ್ನು ದೂರ ಇಡಬೇಕು. ಹಗಲು ಹೊತ್ತು ಮಕ್ಕಳು ಬಹಳ ನಿದ್ದೆ ಮಾಡದಂತೆ ನೋಡಿಕೊಳ್ಳಬೇಕು. ಬಹಳ ಉಗ್ರವಾಗಿ ರಾಜಕುಮಾರರರನ್ನು ದಂಡಿಸಬಾರದು. ಬಿರುಸು ಮಾತುಗಳಿಂದ ನಿಂದಿಸಬಾರದು. ಬೆನ್ನ ಹಿಂದೆ ಅವರನ್ನು ಹಳಿಯಬಾರದು.

ರಾಜರು ಎರಡು ವಿಧವಾದ ಅರ್ಥದ ದೂಷಣವನ್ನು ಮಾಡಬಾರದು. ಕೋಟೆಯ ಭದ್ರವಾದ ಗೋಡೆ, ಪ್ರಾಕಾರ ಮತ್ತು ಉಳಿದ ಸಂರಕ್ಷಣೆಯ ವಿಭಾಗವನ್ನು ನಾಶಪಡಿಸುವದು ಒಂದು ಅರ್ಥದೂಷಣೆ ಎನಿಸುತ್ತದೆ. ಅಕಾಲದಲ್ಲಿ ಅಪಾತ್ರದಲ್ಲಿ, ಅನಾವಶ್ಯಕವಾಗಿ ಹಣದ ದುಂದುಗಾರಿಕೆ ಮಾಡುವದು ಇನ್ನೊಂದು ತರಹದ ಅರ್ಥದೂಷಣೆ. ಈ ಎರಡೂ ತರಹದ ದೂಷಣೆಯನ್ನು ರಾಜರು ವರ್ಜಿಸಬೇಕು. ರಾಜರು ತ್ಯಜಿಸಬೇಕಾದ ದೋಷಗಳೆಂದರೆ ಕಾಮ, ಕ್ರೋಧ, ಮದ, ಪ್ರತಿಷ್ಠೆಯಆಸೆ, ಜಿಪುಣತನ, ಅಲ್ಪತೃಪ್ತಿ. ಈ ಎಲ್ಲ ದೋಷಗಳನ್ನು ಗೆದ್ದು, ರಾಜರು ಅನಂತರ ಪ್ರಜಾಕೋಟಿಯ ಮನಸ್ಸನ್ನು ಗೆಲ್ಲಬೇಕು. ಇದು ಅಂತರಂಗ ವಿಜಯ ಎನಿಸುವದು. ಇದಾದ ಬಳಿಕ ಬಾಹು ವಿಜಯವನ್ನು ರಾಜರು ಸಾಧಿಸಬೇಕು. ಸೇವೆ, ಶುಶ್ರೂಷೆಗಳಿಂದ ಗುರು ಹಿರಿಯರ ಮನಸ್ಸನ್ನು ಗೆದ್ದು ಕೊಳ್ಳಬೇಕು. ರಕ್ಷಣ, ಭರಣ, ಯೋಗಕ್ಷೇಮ ಚಿಂತನದಿಂದ ಪ್ರಜೆಗಳ ಪ್ರೀತಿಯನ್ನು ಗಳಿಸಬೇಕು.

ರಾಜ್ಯವು ಸಪ್ತಾಂಗವಾಗಿದೆ, ರಾಜ, ಮಂತ್ರಿ, ಹಳ್ಳಿಯ ಹಾಗೂ ಶಹರಗಳಲ್ಲಿಯ ಜನರು, ದುರ್ಗಗಳು, ದಂಡ, ಕೋಶ, ಮಿತ್ರ, ಇವೇ ರಾಜ್ಯದ ಏಳು ಅಂಗಗಳು. ಇದಕ್ಕೆಲ್ಲ ಮೂಲ ರಾಜನೇ. ಈ ರಾಜ್ಯದ ಸಪ್ತಾಂಗಗಳನ್ನು ರಾಜನಾದವನು ಪ್ರಯತ್ನದಿಂದ ರಕ್ಷಿಸಬೇಕು. ಇದರಲ್ಲಿ ಯಾವುದಾದರೂ ಒಂದು ಅಂಗಕ್ಕೆ ದ್ರೋಹ ಬಗೆದವರನ್ನು ಪರೀಕ್ಷಿಸಿ, ಹುಡುಕಿ ತೆಗೆದು ಬಂಧಿಸಿ, ಶಾಸನ ಮಾಡಬೇಕು. ಮಿತ್ರರಾರು ಶತ್ರುಗಳಾರು ಎಂಬುದನ್ನು ವಿಚಾರಿಸಿ ತಿಳಿದುಕೊಳ್ಳಬೇಕು.

ರಾಜರು ಅತಿ ಮೆತ್ತಗಾದರೂ ಉಪಯೋಗವಿಲ್ಲ, ಬಹಳೇ ಬಿರುಸಾದರೂ ಉಪಯೋಗವಿಲ್ಲ. ಕಾಲ ಬಂದಾಗ ಕ್ರೂರರೂ ಆಗಬೇಕು. ಪ್ರಸಂಗ ಬಂದಾಗ ಮೃದುವೂ ಎನಿಸಬೇಕು, ಆಳು ಮಕ್ಕಳೊಡನೆ ವಿನೋದ, ಹಾಸ್ಯಗಳನ್ನು ಮಾಡಬಾರದು. ಯಾವ ದುರ್ವ್ಯಸನಗಳಿಗೂ ವಶರಾಗಬಾರದು. ಲೋಕ ಸಂಗ್ರಹಕ್ಕಾಗಿ ಕೆಲವೊಂದು ನಿರಪಾಯವಾದ ವ್ಯಸನಗಳನ್ನು ಇಟ್ಟುಕೊಂಡಿರಬೇಕು. ಯಾವಾಗಲೂ ರಾಜರು ನಗುತ್ತಲೇ ಮಾತನಾಡಬೇಕು. ಸೆರೆಮನೆಯಲ್ಲಿ ಇದ್ದವರ ಜೊತೆಗೂ ಕೂಡ ಹುಬ್ಬು ಗಂಟಿಕ್ಕಿ ಸಿಟ್ಟಿನಿಂದ ಮಾತನಾಡಬಾರದು. ಕ್ಷುದ್ರ ಮನಸ್ಸು, ಕ್ಷುಲ್ಲಕ ವಿಚಾರ, ಜಿಪುಣತನ, ಮುಂತಾದ ದೋಷಗಳು ರಾಜರನ್ನು ಗೌರವಗಲಿತರನ್ನಾಗಿ ಮಾಡುತ್ತವೆ.

ರಾಜರಲ್ಲಿ ಆಲಸ್ಯ ಎಂಬುವದು ದೊಡ್ಡ ದೋಷ, ಆದರಿಂದ ಅನೇಕ ಕೆಲಸಗಳು ಕೆಟ್ಟುಹೋಗುವವು. ಅದಕ್ಕಾಗಿ ಅರಸರಲ್ಲಿ ಶೀಘ್ರ ನಿರ್ಣಯ ಹಾಗೂ ತ್ವರಿತ ಪ್ರವೃತ್ತಿ

ಇರುವದು, ಒಳ್ಳೆಯದು. ಆದರೆ ಕ್ರೋಧ, ದರ್ಪ, ದ್ರೋಹ, ಪಾಪಕಾರ್ಯ ಮತ್ತು ಅಪಾಯಕಾರ್ಯ, ಅವಮಾನ ಮುಂತಾದವುಗಳನ್ನು ಮಾಡುವಾಗ ಮಾತ್ರ, ಅಲಸ್ಯ ಮಾಡಿದಷ್ಟು ಒಳ್ಳೆಯದು. ರಾಜಕಾರ್ಯಗಳೆಲ್ಲವೂ ಗುಟ್ಟಾಗಿರಬೇಕು. ಗುಟ್ಟು ರಟ್ಟಾದರೆ ಆಪತ್ತು ಬರುವದು ಖಂಡಿತ. ರಾಜ್ಯದ ರಹಸ್ಯವೆಲ್ಲವೂ ಬಯಲಾದರೆ, ಶಾಸನ ಯಂತ್ರವು ಕುಸಿದು ಬೀಳುವುದರಲ್ಲಿ ಸಂದೇಹವಿಲ್ಲ. ಇದರಿಂದ ಬಹಳ ಜನ ರಾಜರ ಸಾಮ್ರಾಜ್ಯಗಳು ನಷ್ಟವಾಗಿವೆ. ರಾಜಕೀಯ ವ್ಯಕ್ತಿಗಳ ಆಕಾರ, ಇಂಗಿತ, ನಡೆ, ನುಡಿ, ಮುಖಚರ್ಯೆ, ನೋಟ, ಮುಂತಾದವುಗಳಿಂದಲೇ ಕುಶಲರಾದವರು ಗೌಪ್ಯ ವಿಷಯವನ್ನೆಲ್ಲ ತಿಳಿದು ಬಿಡುತ್ತಾರೆ. ಆದುದರಿಂದ ರಹಸ್ಯ ವಿಷಯಗಳನ್ನು ಬಹಳ ಜನರ ಜೊತೆಗೆ ವಿಚಾರಿಸಬಾರದು.

ರಾಜರು ರಾಷ್ಟ್ರವನ್ನು ಮಕ್ಕಳಂತೆ ರಕ್ಷಿಸಬೇಕು. ಪ್ರಜೆಗಳು ಕ್ಷೀಣರಾಗದಂತೆ ನೋಡಿಕೊಳ್ಳಬೇಕು. ಹೆಚ್ಚು ಕರಹಾಕಿ ಜನರ ಶೋಷಣೆ ಮಾಡಬಾರದು. ಅಲ್ಪ ಸ್ವಲ್ಪವಾಗಿ ಶ್ರೀಮಂತರಾದ ಜನರಿಂದ ಬಂಗಾರ, ಧಾನ್ಯ, ಭೂಮಿ ಮುಂತಾದವುಗಳನ್ನು ಪಡೆಯಬೇಕು. ಅದರಿಂದ ರಾಜನೂ ರಾಷ್ಟ್ರವೂ ಎರಡೂ ಪರಸ್ಪರ ಅಭಿವೃದ್ಧಿ ಹೊಂದುವವು. ಸ್ವಯಂ ರಾಜನು ಕೈ ಬಿಗಿ ಹಿಡಿದು, ಇಂದ್ರಿಯಗಳನ್ನು, ಮನಸ್ಸನ್ನು ಬಿಗಿ ಹಿಡಿದು ವ್ಯಸನಾಧೀನನಾಗದೆ, ವೈಯಕ್ತಿಕ ವೆಚ್ಚವನ್ನು ಹೆಚ್ಚು ಮಾಡದೆ, ಪ್ರಜೆಗಳಿಂದ ಬಂದ ಹಣವನ್ನು ರಾಷ್ಟ್ರದ ಅಭಿವೃದ್ಧಿ ಯೋಜನೆಗಳಿಗೆ ವಿನಿಯೋಗಿಸಬೇಕು. ಇದರಿಂದ ರಾಷ್ಟ್ರದ ಅಭಿವೃದ್ಧಿ ಕೋಶ ಸಮೃದ್ಧಿ, ಮತ್ತು ಜನಾನುರಾಗ, ಸರ್ವಕ್ಷೇಮಗಳು ಉಂಟಾಗುವವು. ಜನಾನುರಾಗದಿಂದ ಬೇಕಾದಷ್ಟು ಧನಪಾಪ್ತಿ.ಧನಪ್ರಾಪ್ತಿಯಿಂದ ಮತ್ತೆ ರಾಷ್ಟ್ರಾಭಿವೃದ್ಧಿ. ಅದರಿಂದ ರಾಜರಿಗೆ ಗೌರವ ಮತ್ತು ಸುಖ, ಸೌಭಾಗ್ಯ ಅದರಿಂದ ದೇಶಕ್ಕೆಲ್ಲ ಕ್ಷೇಮ ಅಭ್ಯುದಯ.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರು ಇಪ್ಪತ್ತನೇಯ ಅಧ್ಯಾಯ ಮುಗಿದುದು*



## ದೈವ ಮತ್ತು ಪೌರುಷಗಳಲ್ಲಿ ಯಾವುದು ಶ್ರೇಷ್ಠ ಮನುವಿನ ಪ್ರಶ್ನೆ, ಮತ್ಸ್ಯನ ಉತ್ತರ.

ಅಧ್ಯಾಯ - ೨೨೧

**ಮನುರುವಾಚ :**

**ದೈವೇ ಪುರುಷಕಾರೇ ಚ ಕಿಂ ಜ್ಯಾಯಸ್ತದ್ ಬ್ರವೀಹಿ ಮೇ।**
**ಅತ್ರ ಮೇ ಸಂಶಯೋ ದೇವ! ಛೇತ್ತುಮರ್ಹಸ್ಯಶೇಷತಃ॥**

ಮನು :- ದೈವ ಮತ್ತು ಪೌರುಷ ಇವುಗಳಲ್ಲಿ ಯಾವುದು ಶ್ರೇಷ್ಠ? ಈ ವಿಷಯದಲ್ಲಿ ನನಗೆ ಸಂಶಯವಿದೆ. ಅದನ್ನು ದೂರಮಾಡಲು ನೀನು ಒಬ್ಬನೇ ಸಮರ್ಥ. ಅವೆರಡರಲ್ಲಿ ಯಾವುದು ಬಲವತ್ತರ ಹೇಳು?

**ಮತ್ಸ್ಯ :-** ಜನ್ಮಾಂತರದಲ್ಲಿ ತಾನು ಮಾಡಿದ ಕರ್ಮವೇ ದೈವ ಅನಿಸಿಕೊಳ್ಳುತ್ತದೆ. ಆದುದರಿಂದ ದೈವಕ್ಕಿಂತ ಪೌರುಷವೇ ಶ್ರೇಷ್ಠ. ಶಾಸ್ತ್ರವಿಹಿತವಾದ ಸದಾಚಾರ, ಪ್ರಯತ್ನ,

ಉತ್ಸಾಹ, ನಿರಾಲಸ ಕರ್ಮಗಳಿಂದ ದೈವವು ಪ್ರತಿಕೂಲವಾಗಿದ್ದರೂ, ಅದನ್ನು ಹೊಡೆದುಹಾಕಿ ಪೌರುಷದಿಂದ ಮನುಷ್ಯನು ಉತ್ಕರ್ಷ ಹೊಂದಲು ಸಮರ್ಥನಾಗುವನು. ಪೂರ್ವಕೃತ ಒಳ್ಳೇ ಕರ್ಮ ಬಲಿಷ್ಠವಾಗಿದ್ದರೆ ಒಮ್ಮೊಮ್ಮೆ ಪೌರುಷವಿಲ್ಲದಿದ್ದರೂ ಸಮೃದ್ಧಿ ಸೌಭಾಗ್ಯವನ್ನು ಪಡೆಯಬಹುದು. ಕರ್ಮದಿಂದ ರಾಜಸ, ತಾಮಸ ಫಲಗಳು ದೊರಕಬಹುದು. ಆದರೆ ಪೌರುಷದಿಂದ ಮಾತ್ರ ಬಯಸಿದ ಫಲವನ್ನು ಮನುಷ್ಯನು ಸತತ ಪ್ರಯತ್ನದಿಂದ ಪಡೆಯಲು ಸಮರ್ಥನಾಗುತ್ತಾನೆ. ಸಾಹಸಮಾಡದ ಶಕ್ತಿಯಿಲ್ಲದ ದುರ್ಬಲರು ದೈವವೇ ತಮ್ಮ ತಾರಕ ಎಂದು ತಿಳಿದು ಅಧೋ ಗತಿಯನ್ನು ಹೊಂದುತ್ತಾರೆ. ದೈವವು ಹಿಂದಿನ ಕರ್ಮ, ಮುಂದಿನ ಅದೃಷ್ಟ, ಈಗಿನ ಪ್ರಯತ್ನಗಳಿಂದ ಸಫಲವಾಗುವದು. ಪೌರುಷವು ದೈವದ ಬೆಂಬಲದಿಂದ ಸಕಾಲದಲ್ಲಿ ಫಲವನ್ನು ಕೊಡುತ್ತದೆ. ದೈವ, ಪೌರುಷ ಮತ್ತು ಕಾಲ ಮೂರೂ ಕೂಡಿ ಮನುಷ್ಯನಿಗೆ ಫಲವನ್ನು ಕೊಡುತ್ತವೆ. ಆದುದರಿಂದ ಮನುಷ್ಯನು ಯಾವಾಗಲೂ ಧರ್ಮನಿಷ್ಠನಾಗಿ ಪ್ರಯತ್ನವನ್ನುಎಡೆಬಿಡದೆ ಮಾಡಲಿಕ್ಕೇ ಬೇಕು. ಸಂಕಟಕಾಲದಲ್ಲೂ ಕೂಡ, ಧರ್ಮಾನುಬದ್ಧವಾದ ಸಾಹಸವನ್ನು ಆಚರಿಸಬೇಕು. ಅದರಿಂದ ಈ ಲೋಕದಲ್ಲಿ ಉನ್ನತಿ, ಪರಲೋಕದಲ್ಲಿ ಸದ್ಗತಿ ಇವೆರಡೂ ನಿಶ್ಚಿತ. ಬರಿ ದೈವವೆಂದು ಕುಳಿತ ಆಲಸಿ ಸ್ವಭಾವದವರಿಗೆ ಯಾವ ಫಲವೂ ದೊರಕಲಾರದು. ಆದುದರಿಂದ ಸರ್ವ ಪ್ರಯತ್ನದಿಂದ ಶಾಸ್ತ್ರೋಕ್ತವಾದ ಧರ್ಮಾಚರಣೆಯನ್ನು, ಪುರುಷರು ಮಾಡತಕ್ಕದ್ದು. ಭಾಗ್ಯಲಕ್ಷ್ಮಿಯು ಮುಗ್ಗಲ ಜನರನ್ನು ಬಿಟ್ಟು ಪ್ರಯತ್ನವನ್ನು ಅವಲಂಬಿಸಿ, ಮೇಲಕ್ಕೆ ಎದ್ದುನಿಂತು ತನ್ನ ಪೌರುಷದಿಂದಲೇ ಮೆರೆಯುವವರನ್ನು ಹುಡುಕಿಕೊಂಡು ಇದ್ದಲ್ಲಿ ಬಂದು ವಾಸಿಸುತ್ತಾಳೆ. ಆದುದರಿಂದ ಮನುಷ್ಯನು ಯಾವಾಗಲೂ ಉನ್ನತಿಯ ಪಥದಲ್ಲಿ ಮಹಾ ಪ್ರಯತ್ನಮಾಡಿ, ಮುಂದೆ ಹೆಜ್ಜೆ ಹಾಕುತ್ತಲೇ ಇರಬೇಕು, ಪೌರುಷವನ್ನು ಮಾಡುತ್ತಲೇ ಇರಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು*

—○—

## ಸಾಮಪ್ರಯೋಗ

**ಅಧ್ಯಾಯ - ೨೨೨**

**<u>ಮನುರುವಾಚ:</u>**

**ಉಪಾಯಾಂಸ್ತ್ವಂ ಸಮಾಚಕ್ಷ್ವ ಸಾಮಪೂರ್ವಾನ್ ಮಹಾದ್ಯುತೇ।**
**ಲಕ್ಷಣಂ ಚಂ ತಥಾ ತೇಷಾಂ ಪ್ರಯೋಗಂ ಚ ಸುರೋತ್ತಮ॥**

ಮನು:- ಸಾಮ, ದಾನ,ಭೇದ, ದಂಡ ಎಂಬ ನಾಲ್ಕು ವಿಧ ಉಪಾಯಗಳ ಲಕ್ಷಣವೇನು? ಅವುಗಳನ್ನು ಪ್ರಯೋಗಿಸುವ ಪದ್ಧತಿ ಯಾವದು ತಿಳಿಸು! ಹಾಗೂ ಇವಲ್ಲದೆ ಇನ್ನೂ ಬೇರೆ ಉಪಾಯಗಳಿದ್ದರೆ ಅವುಗಳನ್ನೂ, ಅವುಗಳ ಲಕ್ಷಣಗಳನ್ನೂ ಹಾಗೂ ಪ್ರಯೋಗ, ಪ್ರಕಾರಗಳನ್ನೂ ಹೇಳು ?

ಮತ್ಸ್ಯ:- ರಾಜನೇ, ಉಪಾಯಗಳು ಒಟ್ಟು ಏಳು, ಸಾಮ, ಭೇದ, ದಾನ, ದಂಡ, ಉಪೇಕ್ಷಾ, ಮಾಯಾ, ಇಂದ್ರಜಾಲ, ಎಂದು. ಇವುಗಳಲ್ಲಿ ಮೊದಲನೆಯದಾದ ಸಾಮವು

ತಥ್ಯ, ಅತಥ್ಯ, ಎಂದು ಎರಡು ವಿಧವಾಗಿದೆ. ಅದರಲ್ಲಿ ಅತಥ್ಯ ಸಾಮವನ್ನು ಸಜ್ಜನರ ಮೇಲೆ ಪ್ರಯೋಗಿಸಬಾರದು. ದೊಡ್ಡ ಕುಲದಲ್ಲಿ ಹುಟ್ಟಿದ, ಜಿತೇಂದ್ರಿಯರಾದ, ಧರ್ಮನಿಷ್ಠ ಸಜ್ಜನರ ಮೇಲೆ ತಥ್ಯಸಾಮವನ್ನೇ ಪ್ರಯೋಗಿಸಬೇಕು. ಅಂದರೆ ಅವರ ಕುಲ-ಶೀಲಗಳನ್ನು ಹೊಗಳಿ, ಅವರು ಮಾಡಿದ ಸತ್ಕಾರ್ಯಗಳನ್ನು ಬಣ್ಣಿಸಿ ಮತ್ತು ಅವರ ಉಪಕಾರವನ್ನು ನೆನೆಸಿ, ಕೃತಜ್ಞತೆ ವ್ಯಕ್ತಪಡಿಸಿ, ಅವರನ್ನು ಅಭಿನಂದಿಸಬೇಕು. ದುರ್ಜನರ ಮೇಲೆ ಇಂತಹ ಸಾಮೋಪಾಯದಿಂದ ಏನೂ ಪ್ರಯೋಜನವಾಗುವದಿಲ್ಲ. ಅವರ ಮೇಲೆ ಅತಥ್ಯ ಸಾಮವನ್ನೇ ಪ್ರಯೋಗಿಸಬೇಕು. ಸಜ್ಜನರ ಮೇಲೆ ತಥ್ಯಸಾಮವನ್ನೇ ಪ್ರಯೋಗಿಸಬೇಕು.

*ಶ್ರೀ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಭೇದ ಪ್ರಯೋಗ ವರ್ಣನೆ

**ಅಧ್ಯಾಯ - ೨೨೩**

**ಮತ್ಸ್ಯ ಉವಾಚ:**

**"ಪರಸ್ಪರಂ ತು ಯೇ ದುಷ್ಟಾಃ ಕ್ರುದ್ಧಾ ಭೀತಾವಮಾನಿತಾಃ।**
**ತೇಷಾಂ ಭೇದಂ ಪ್ರಯುಂಜೀತ ಭೇದಸಾಧ್ಯಾ ಹಿ ತೇ ಮತಾಃ॥**

**ಮತ್ಸ್ಯ:-** ದುಷ್ಟರು, ಕೋಪಿಷ್ಠರು, ಭಯಭ್ರಾಂತರು, ಅವಮಾನಿತರು ಆದ ಜನರ ಮೇಲೆ ಭೇದೋಪಾಯವನ್ನೇ ಪ್ರಯೋಗಿಸಬೇಕು. ಇಂಥವರೆಲ್ಲರೂ ಭೇದಸಾಧ್ಯರು. ದುರ್ಜನರಿಗೆ ಏನಾದರೂ ಆಮಿಷವನ್ನು ತೋರಿಸಿ ಮತ್ತು ಪರರಿಂದ ಹೆದರಿಕೆಯನ್ನು ಪ್ರದರ್ಶಿಸಿ, ಬುದ್ಧಿಭೇದವನ್ನು ಉಂಟುಮಾಡತಕ್ಕದ್ದು. ಅನಂತರ, ಭೇದವು ಅವರಲ್ಲಿ ಪಸರಿಸಿದ ಬಳಿಕ ಒಡಕಿನಿಂದ ವಿರಸ ಉಂಟಾಗಿ ಅವರು ಪರಸ್ಪರ ವಿಘಟಿತರಾದ ಅನಂತರ ತನ್ನ ವಶಮಾಡಿಕೊಳ್ಳಬೇಕು. ಬಹು ಜನರು ಗುಂಪು ಗೂಡಿದಾಗ ಭೇದವಿಲ್ಲದೆ ಅವರನ್ನು ಸೋಲಿಸುವದು ಇಂದ್ರನಿಗೂ ಕೂಡ ಅಶಕ್ಯ. ಆದುದರಿಂದ ನೀತಿ ವಿಶಾರದರು. ಭೇದವನ್ನೇ ಪ್ರಶಂಸಿಸುತ್ತಾರೆ. ವೈರಿಗಳಲ್ಲಿ ಈ ಭೇದಬುದ್ಧಿಯನ್ನು ತನ್ನ ಮುಖದಿಂದಲೇ ಆಗಲಿ ಅಥವಾ ಪರರ ಮುಖಾಂತರ ವಾಗಲಿ ಹುಟ್ಟಿಸಬೇಕು. ಅದರಲ್ಲೂ ಪರಮುಖದಿಂದ ಆದದ್ದು ಒಳ್ಳೇದು.

ರಾಜಪರಿವಾರದಲ್ಲಿ ಭೇದ ಬುದ್ಧಿಯನ್ನುಹುಟ್ಟಿಸಬೇಕಾದರೆ ಮೊದಲು ಕೋಪ ಬುದ್ಧಿಯನ್ನು ಉದ್ದೀಪಿಸಬೇಕು. ಈ ಕೋಪವು ಎರಡು ವಿಧ. ಅಂತಃ ಕೋಪ, ಬಹಿಃಕೋಪ. ಸೇನಾಪತಿ, ಯುವರಾಜ, ಪಟ್ಟದರಸಿ, ಇವರಲ್ಲಿ ಪರಸ್ಪರ ಹುಟ್ಟಿದ ಕೋಪ ತಾಪಗಳು ಅಂತಃಕೋಪ ಎನಿಸುತ್ತವೆ ಈ ಅಂತಃಕೋಪವು ಕುಲನಾಶಕ. ಬಾಹ್ಯಕೋಪವೆಂದರೆ ಉಳಿದ ಸಂಬಂಧಿಕರು ಹಾಗೂ ಪ್ರಜಾ ಜನರು ವೈರಿಗಳು ಇವರ ಮೇಲಿನ ಕೋಪ. ಈ ಬಾಹ್ಯಕೋಪವನ್ನು ಉದ್ದೀಪಿಸಬೇಕಾದರೆ ಜ್ಞಾತಿಗಳಲ್ಲಿ ಪರಸ್ಪರ ದ್ವೇಷವನ್ನು ಉಂಟುಮಾಡಬೇಕು ಅದಕ್ಕಾಗಿ ರಾಜ ಕುಟುಂಬದ ಸಂಬಂಧಿಕರಲ್ಲಿ ಪರಸ್ಪರ ಭೇದ ಬುದ್ಧಿಯನ್ನು ಹುಟ್ಟಿಸಬೇಕು. ತನ್ನ ಮನೆಯಲ್ಲಿಯೇ ಅಂತಹ ಜ್ಞಾತಿ

ಭೇದ, ಬಂಧು ವೈರಸ್ಥ ಉಂಟಾದರೆ ಅವರು ಬೇಡಿದಷ್ಟು ಕೊಟ್ಟು ಅವರನ್ನು ವಿಶ್ವಾಸದಲ್ಲಿ ಇಟ್ಟುಕೊಳ್ಳಬೇಕು. ಯಾಕೆಂದರೆ ಕುಟುಂಬದಲ್ಲಿಯ ಒಡಕು ಸರ್ವನಾಶಕ್ಕೆ ಕಾರಣ. ಮಹಾ ಪ್ರಯತ್ನದಿಂದ ವೈರಿ ರಾಜರಲ್ಲಿ ಅಂತಃಕೋಪ, ತಾಪ ಹುಟ್ಟಿಸಿಬಿಟ್ಟರೆ ಅತ್ಯಲ್ಪ ಸಮಯದಲ್ಲಿಯೇ ವೈರಿಗಳನ್ನು ಗೆಲ್ಲಬಹುದು. ಆದುದರಿಂದ ಸಂಘಟಿತರಾಗಿ ಬಹು ಪ್ರಮಾಣದಲ್ಲಿ ಇದ್ದ ವೈರಿಗಳಲ್ಲಿ ನೀತಿ ಶಾಸ್ತ್ರ ಪಂಡಿತರು ಭೇದವನ್ನು ಮಾಡಬೇಕು ಎಂದುಹೇಳಿದ್ದಾರೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು*



## ರಾಜಧರ್ಮ ವರ್ಣನೆಯಲ್ಲಿ ದಾನಪ್ರಯೋಗ ವರ್ಣನೆ

**ಅಧ್ಯಾಯ - ೨೨೪**

**ಮತ್ಸ್ಯ ಉವಾಚ:**

**ಸರ್ವೇಷಾಮಪ್ಯುಪಾಯಾನಾಂ ದಾನಂ ಶ್ರೇಷ್ಠತಮಂ ಮತಮ್।**
**ಸುದತ್ತೇನೇಹ ಭವತಿ ದಾನೇನೋಭಯಲೋಕಜಿತ್॥**

**ಮತ್ಸ್ಯ:-** ಎಲ್ಲ ಉಪಾಯಗಳಲ್ಲಿ ದಾನವು ಶ್ರೇಷ್ಠತಮವಾದದ್ದು. ವಿಧಿ ಪೂರ್ವಕವಾಗಿ ಕೊಟ್ಟ ಸಾತ್ವಿಕದಾನದಿಂದ ಇಹಪರಗಳಲ್ಲಿ ಮನುಷ್ಯನಿಗೆ ಗೆಲವು ಲಭಿಸುವದು. ದಾನದಿಂದ ವಶರಾಗದ ಮಾನವರು ಯಾರು ಈ ಭೂಮಂಡಲದಲ್ಲಿ? ದೇವತೆಗಳೂ ಕೂಡ ದಾನದಿಂದ ಮಾನವರಿಗೆ ವಶರಾಗುತ್ತಾರೆ. ರಾಜರ ದಾನದಿಂದಲೇ ಎಲ್ಲ ಪ್ರಜೆಗಳೂ ಉಪಜೀವಿಸುತ್ತಾರೆ. ದಾನನೀಡುವವನು ಎಲ್ಲರಿಗೂ ಅತ್ಯಂತ ಪ್ರಿಯನೂ, ಇಷ್ಟನೂ ಆಗುತ್ತಾನೆ. ದಾನಶೀಲನಾದ ಕೊಡುಗೈ ದೊರೆಯು ವೈರಿಗಳನ್ನು ಸುಲಭವಾಗಿ ಗೆಲ್ಲುತ್ತಾನೆ. ವೈರಿಗಳಲ್ಲಿ ಒಡಕನ್ನು ಹುಟ್ಟಿಸಲು ದಾನವೂ ದಾನಿಯ ಕೀರ್ತಿಯೂ ಕಾರಣವಾಗುತ್ತದೆ. ಆದುದರಿಂದ ಎಲ್ಲ ಉಪಾಯಗಳಲ್ಲಿ ದಾನೋಪಾಯ ಶ್ರೇಷ್ಠವೆಂದು ಹೊಗಳುತ್ತಾರೆ. ದಾನನೀಡುವ ಉದಾರಿಗಳು ಈ ಲೋಕವನ್ನು ಮಾತ್ರವಲ್ಲ; ದೇವಲೋಕವನ್ನೂ ಕೂಡ ಸುಕೃತದಿಂದ ಗೆಲ್ಲುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು*



ರಾಜಧರ್ಮ ಮತ್ತು ದಂಡೋಪಾಯ ವರ್ಣನೆ

ಅಧ್ಯಾಯ - ೨೨೫

**ಮತ್ಸ್ಯ ಉವಾಚ :**

**"ನ ಶಕ್ಯಾ ಯೇ ವಶೇ ಕರ್ತುಮುಪಾಶ್ರಿತ್ಯ ತ್ರಯೇಣ ತು।**
**ದಂಡೇನ ತಾನ್ ವಶೀ ಕುರ್ಯಾತ್ ದಂಡೋ ಹಿ ವಶಕೃನ್ನೃಣಾಮ್॥"**

**ಮತ್ಸ್ಯ** :- ಸಾಮ, ಭೇದ, ದಾನ, ಈ ಮೂರು ಉಪಾಯಗಳಿಂದ ವಶಪಡಿಸಿಕೊಳ್ಳಲು ಶಕ್ಯವಿಲ್ಲದವರನ್ನು ದಂಡೋಪಾಯದಿಂದ ಕೈವಶ ಮಾಡಿಕೊಳ್ಳಬೇಕು. ಆ ದಂಡೋಪಾಯವನ್ನು ಒಳ್ಳೇ ಬುದ್ಧಿವಂತಿಕೆಯಿಂದ ನೀತಿಶಾಸ್ತ್ರಕ್ಕೆ ಅನುಸಾರವಾಗಿ ತನ್ನ ನಂಬುಗೆಯ ಜನರ ನೆರವಿನಿಂದ ಪ್ರಯೋಗಿಸಬೇಕು. ದಂಡದಿಂದ ರಾಜ್ಯದಲ್ಲಿ ಎಲ್ಲೆಡೆಗೂ ಶಿಸ್ತು, ಶಾಂತಿ ನೆಲಿಸುತ್ತದೆ.

ತಪ್ಪು ಮಾಡಿದವನನ್ನು ದಂಡಿಸುವದು ರಾಜಕಾರ್ಯ. ಬ್ರಹ್ಮಚಾರಿಯಾಗಲಿ ಗೃಹಸ್ಥಾಶ್ರಮಿಯಾಗಲಿ, ಸನ್ಯಾಸಿಯಾಗಲಿ, ತಪ್ಪು ಮಾಡಿದ ಪೂಜ್ಯನಾದ ಗುರುವೇ ಆಗಲಿ ತಪ್ಪಿಗೆ ದಂಡವಿಧಿಸಲೇಬೇಕು. ಇಂಥವರಿಗೆ ದಂಡ ಮಾಡಬಾರದು ಎಂದಿಲ್ಲ. ಧರ್ಮವಂತನಾದ ರಾಜನು, ಅಪರಾಧ ಮಾಡಿದವರೆಲ್ಲರಿಗೂ ದಂಡವನ್ನು ವಿಧಿಸಲೇ ಬೇಕು. ದಂಡಕ್ಕೆ ಅನರ್ಹರಾದ ನಿರಪರಾಧಿಗಳನ್ನು ದಂಡಿಸಿದರೆ, ದಂಡನೀಯರಾದ ಗುಂಡಾಗಳನ್ನು ದಂಡಿಸದೆ ಬಿಟ್ಟರೆ ಅರಸನು ರಾಜ್ಯ ಭ್ರಷ್ಟನಾಗುವನು. ಮುಂದೆ ನರಕದಲ್ಲಿ ಬೀಳುವನು. ಆದುದರಿಂದ, ಧರ್ಮಶಾಸ್ತ್ರಕ್ಕೆ ಅನುಸಾರವಾಗಿ ಲೋಕಕ್ಷೇಮಕ್ಕಾಗಿ ರಾಜನು ದಂಡವನ್ನು ಮಾಡಬೇಕು.

ರಾಜರು ದುಷ್ಟರನ್ನು ದಂಡಿಸದೆ ಉದಾಸೀನರಾಗಿದ್ದರೆ, ಜಗತ್ತಿನಲ್ಲಿ ಮಕ್ಕಳು, ಮುದುಕರು, ರೋಗಿಗಳು, ಸನ್ಯಾಸಿಗಳು, ಬ್ರಾಹ್ಮಣರು, ವಿಧವೆಯರು, ಸ್ತ್ರೀಯರು, ಅಂಗಹೀನರು ಬದುಕಿ ಬಾಳುವ ಪರಿಸ್ಥಿತಿಯೇ ಉಳಿಯಲಿಕ್ಕಿಲ್ಲ. ಮೀನುಗಳಂತೆ ಬಲಿಷ್ಠರು ದುರ್ಬಲರನ್ನು ನುಂಗಿ ನೀರುಕುಡಿದು, ಮುಂಗೈ ಜೋರಿನ ಮೇಲೆ ಎಲ್ಲರನ್ನು ಹಿಂಸಿಸತೊಡಗುವರು. ದಂಡ ಭಯವಿಲ್ಲದಿದ್ದರೆ ಪಶುಗಳು, ಪಕ್ಷಿಗಳು ಕೂಡ ಮಾನವರನ್ನು ಹರಿದು ತಿನ್ನಬಹುದು. ದೇವ ದೈತ್ಯರೂ ಹಾವುಚೇಳುಗಳೂ ಕಚ್ಚಿ ಕಾಡಬಹುದು. ಬ್ರಾಹ್ಮಣರ ಶಾಪ, ಆಯುಧ, ಶೂರರಕೋಪ ರಾಜರ ಆಜ್ಞೆ ಮುಂತಾದವುಗಳಲ್ಲಿ ದಂಡವನ್ನು ವಿಧಿಸುವ ಶಕ್ತಿಯಿದೆ. ದೇವತೆಗಳಲ್ಲಿಯೂ ಸಹ ದಂಡಿಸುವ ದೇವತೆಗಳನ್ನು ಮಾತ್ರ ಜನರು ಪೂಜಿಸುತ್ತಾರೆ. ಬ್ರಹ್ಮ, ಪೂಷ ಮುಂತಾದ ಸೌಮ್ಯರಾದ ದೇವತೆಗಳನ್ನುಯಾರೂ ಪೂಜಿಸುವದಿಲ್ಲ. ಆದರೆ ಚಂಡ ಕೋಪನಾದ ರುದ್ರನನ್ನು ಭಯದಿಂದ ಜನರು ಪೂಜಿಸುವರು. ಸುಟ್ಟು ಹಾಕೀತೆಂದು ಅಗ್ನಿಯನ್ನು ಪೂಜಿಸುವರು. ಮಳೆ ಕೊಡಲಿಕ್ಕಿಲ್ಲವೆಂದು ಇಂದ್ರನನ್ನು ಪೂಜಿಸುವರು. ಬೆಳಕು

ಕೊಡದಿದ್ದರೆ ಬೆಳದಿಂಗಳನ್ನು ಕೊಡದಿದ್ದರೆ, ಎಂದು ಹೆದರಿ ಸೂರ್ಯ ಚಂದ್ರರನ್ನು ಪೂಜಿಸುತ್ತಾರೆ. ಹಿರಣ್ಯಕಶಿಪು, ರಾವಣರನ್ನು ವಧಿಸಿದ ವಿಷ್ಣುವನ್ನು ಪೂಜಿಸುತ್ತಾರೆ.

ಒಟ್ಟಾರೆ ಪ್ರಜಾಜನರನ್ನೆಲ್ಲ ಶಾಸನ ಮಾಡುವದು ದಂಡ, ಸಂರಕ್ಷಿಸುವದು ದಂಡ, ಪಾಪಿಗಳು ಪಾಪ ಮಾಡದಿರುವದಕ್ಕೆ, ರಾಜದಂಡದ ಭಯವೇ ಕಾರಣ. ಪರಸ್ಪರ ಭಯದಿಂದಲೂ ಜನರು ದುಷ್ಕರ್ಮಗಳಿಂದ ದೂರರಾಗಿ ಸತ್ಕರ್ಮಗಳನ್ನು ಆಚರಿಸುವರು. ದಂಡವಿರದಿದ್ದರೆ ಜಗತ್ತೆಲ್ಲವೂ ಅಂಧಕಾರದಲ್ಲಿಯೇ ಮುಳುಗಿ ಹೋಗುತ್ತಿತ್ತು. ದುಷ್ಕರ್ಮ ಮಾಡಿದವರನ್ನು ದಮನಮಾಡಿ ದಂಡಿಸುವದರಿಂದ ಇದಕ್ಕೆ ದಂಡವೆಂದು ಹೆಸರು ಬಂದಿದೆ. ದಂಡದ ಭಯದಿಂದಲೇ ದೇವತೆಗಳು ಶಿವನ ಯಜ್ಞದಲ್ಲಿ ಗಾಬರಿಯಾಗಿ ಯಜ್ಞ ಭಾಗಗಳನ್ನು ಸ್ವೀಕರಿಸಿದರು. ತಾರಕಾಸುರನು ಮಾಡುವ ದಂಡದ ಭಯದಿಂದಲೇ ದೇವತೆಗಳು ಸ್ಕಂದನಿಗೆ ಸೇನಾ ಪತಿತ್ವವನ್ನು ಕೊಟ್ಟರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರು ಇಪ್ಪತ್ತೈದನೆಯ ಅಧ್ಯಾಯ ಮುಗಿದುದು*



## ರಾಜಧರ್ಮ ವರ್ಣನೆ ರಾಜಾಪ್ರತ್ಯಕ್ಷ ದೇವತಾ | ಅಧ್ಯಾಯ - ೨೨೬

**ಮತ್ಸ್ಯ ಉವಾಚ :**

**"ದಂಡ ಪ್ರಣಯನಾರ್ಥಾಯ ರಾಜಾ ಸೃಷ್ಟಃ ಸ್ವಯಂಭುವಾ।**
**ದೇವಭಾಗಾನುಪಾದಾಯ ಸರ್ವಭೂತಾದಿ ಗುಪ್ತಯೇ॥"**

**ಮತ್ಸ್ಯ:-** ಬ್ರಹ್ಮದೇವರು ದೇವತೆಗಳೆಲ್ಲರ ಒಂದೊಂದು ಅಂಶವನ್ನು ತೆಗೆದು ಕೊಂಡು ಎಲ್ಲ ಪ್ರಾಣಿಗಳ ಸಂರಕ್ಷಣೆಗಾಗಿ ಹಾಗೂ ದುಷ್ಟ ಜನರನ್ನು ದಂಡಿಸುವದಕ್ಕಾಗಿ ರಾಜರನ್ನು ನಿರ್ಮಿಸಿದ್ದಾನೆ. ರಾಜರಲ್ಲಿ ಎಲ್ಲ ದೇವತೆಗಳ ಅಂಶವಿದ್ದುದು ಸಾಮಾನ್ಯವಾಗಿ ಎಲ್ಲರಿಗೂ ಅನುಭವಕ್ಕೆ ಬರುವ ವಿಷಯವಾಗಿದೆ. ರಾಜರನ್ನು ಧೈರ್ಯದಿಂದ ಕಣ್ತೆರೆದು ನೋಡಲಿಕ್ಕಾಗುವದಿಲ್ಲ. ಇದು ಅವನಲ್ಲಿರುವ ಸೂರ್ಯನ ಸ್ವಭಾವ. ರಾಜನಲ್ಲಿ ಚಂದ್ರನ ಅಂಶ ಇರುವದರಿಂದ ರಾಜನು ಯಾರನ್ನಾದರೂ ಪ್ರಸನ್ನಮುಖದಿಂದ ನೋಡಿದರೆ ಜನರು ಆನಂದಪಡುತ್ತಾರೆ. ನೀಚಕಾರ್ಯ ಮಾಡುವ ರಾಷ್ಟ್ರದ್ರೋಹಿಗಳಿಗೆ ರಾಜನು ಯಮನಂತೆಯೇ ಕಾಣುತ್ತಾನೆ. ದುಷ್ಕರ್ಮಗಳಿಂದ ಜನರನ್ನು ರಾಜನು ಪಾಶಹಾಕಿ ಜಗ್ಗಿದಂತೆ ತಿರುಗಿಸಿ, ಕೆಟ್ಟಕೆಲಸ ಮಾಡಬಾರದೆಂದು ಬಂಧನಹಾಕಿ ಸನ್ಮಾರ್ಗಕ್ಕೆ ಹಚ್ಚುವದು ಅವನಲ್ಲಿರುವ ವರುಣ ದೇವನ ಸನ್ನಿಧಾನದ ಮಹಿಮೆ. ದುಷ್ಟರಾಗಿ ಬಂಡಾಯ ಹೂಡಿ ಒಳಸಂಚು ನಡೆಸಿದ ಘಾತಕ ಸಾಮಂತ ರಾಜರ ವಿಷಯದಲ್ಲಿ ತೇಜಸ್ವಿಯೂ, ಸ್ವಾಭಿಮಾನಿಯೂ ಆದ ಮಹಾರಾಜನು ಸಾಕ್ಷಾತ್ ಅಗ್ನಿಯ ಅವತಾರವೇ ಆಗಬೇಕಾಗುವದು.

ಅರಸರು ಇಂದ್ರಾದಿ ದೇವತೆಗಳ ಕಾರ್ಯಗಳನ್ನು ಜನರ ಯೋಗಕ್ಷೇಮಕ್ಕಾಗಿ ಮಾಡಬೇಕಾಗುವದು. ಇದು ಆ ದೇವತೆಗಳ ಒಂದು ವ್ರತ ಎನಿಸುವದು. ಇಂದ್ರನು

ಮಳೆಗರೆಯುವಂತೆ, ಜನರ ಮೇಲೆ ಸಂಪತ್ತಿನ ಮಳೆಗರೆದರೆ ರಾಜನು ಇಂದ್ರವ್ರತ ಮಾಡಿದಂತಾಯಿತು. ಜನರಿಂದ ಕರವನ್ನು ತೆಗೆದುಕೊಂಡು ಸೂರ್ಯನಂತೆ ಅವರಿಗೆ ಅದರ ಹತ್ತುಪಟ್ಟು ಸುಖ, ಸೌಕರ್ಯ, ಸಂಪತ್ತುಗಳನ್ನು ಒದಗಿಸಿದರೆ ಅದು ಸೂರ್ಯವ್ರತ. ವೈರಿಗಳನ್ನು ಸಂಹಾರ ಮಾಡುವದು ಅಗ್ನಿವ್ರತ. ಚಾರರ ಮುಖಾಂತರ ಎಲ್ಲ ಕಡೆಗೂ ಸುತ್ತಾಡಿ ಬರುವದು ವಾಯುವ್ರತ. ದೇಶದ್ರೋಹಿಗಳನ್ನು ವಧಿಸುವದು ಯಮವ್ರತ. ಹೀಗೆ ಎಲ್ಲ ದೇವತೆಗಳ ಅಂಶ ಇರುವ ರಾಜರು ಈ ಎಲ್ಲ ದೇವತಾ ವ್ರತಗಳನ್ನು ಪಾಲಿಸಿ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ, ಲೋಕ ಕ್ಷೇಮವನ್ನು ಉಂಟುಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಇಪ್ಪತ್ತಾರನೆಯ ಅಧ್ಯಾಯ ಮುಗಿದುದು*



## ಯಾರಿಗೆ ಯಾವುದಕ್ಕೆ ಎಷ್ಟು ದಂಡ ? | ಅಧ್ಯಾಯ - ೨೨೭

**ಮತ್ಸ್ಯ ಉವಾಚ :**

**ನಿಕ್ಷೇಪಸ್ಯ ಸಮಂ ಮೂಲ್ಯಂ ದಂಡ್ಯೋ ನಿಕ್ಷೇಪಭುಕ್ತಥಾ।**
**ವಸ್ತ್ವಧಿಕ ಸಮಸ್ತಸ್ಯ ತದಾ ಧರ್ಮೋ ನ ಹೀಯತೇ॥**

**ಮತ್ಸ್ಯ :-** ಜೋಪಾನವಾಗಿ ಇಟ್ಟಿರಬೇಕೆಂದು ಕೊಟ್ಟ ಪದಾರ್ಥವನ್ನು ತಾನೇ ಬಳಸಿಕೊಂಡವನಿಗೆ ಆ ಪದಾರ್ಥದ ಬೆಲೆಯಷ್ಟು ಹಣವನ್ನು ರಾಜನು ದಂಡ ಹಾಕಬೇಕು. ವಸ್ತ್ರ ಮುಂತಾದವುಗಳ ದುರುಪಯೋಗದ ವಿಷಯದಲ್ಲಿಯೂ ಹೀಗೆಯೇ. ಇದರಿಂದ ಧರ್ಮಕ್ಕೆ ಲೋಪಬಾರದು. ರಕ್ಷಣೆಗೋಸ್ಕರ ಇಟ್ಟ ವಸ್ತುವನ್ನು ಯಾವನು ಹಿಂದಕ್ಕೆ ಕೊಡುವದಿಲ್ಲವೋ ಅಥವಾ ಪದಾರ್ಥವನ್ನೇ ಇಡದೆ ಯಾವನು ಕೊಡಬೇಕೆಂದು ಕೇಳುತ್ತಾನೋ ಅವರಿಬ್ಬರನ್ನು ಕಳ್ಳರೆಂದು ಪರಿಗಣಿಸಿ ಶಿಕ್ಷಿಸಬೇಕು ಮತ್ತು ಪದಾರ್ಥದ ಬೆಲೆಯ ಇಮ್ಮಡಿಯಷ್ಟು ಹಣವನ್ನು ದಂಡವಾಗಿ ವಿಧಿಸಬೇಕು. ಕಪಟೋಪಾಯಗಳಿಂದ ಕಂಡವರ ಸ್ವತ್ತನ್ನು, ಧನವನ್ನು ಯಾವನು ಅಪಹರಿಸುವನೋ ಅವನನ್ನೂ ಅವನಿಗೆ ಸಹಾಯ ಮಾಡುವವನನ್ನೂ ಚಿತ್ರಹಿಂಸೆಯಿಂದ ದಂಡಿಸಬೇಕು. ಪದಾರ್ಥವನ್ನು ಕೇಳಿ ತೆಗೆದುಕೊಂಡ ಬಳಿಕ ಅದನ್ನು ಕಾಲನಿಯಮಾನುಸಾರ ಹಿಂದಕ್ಕೆ ಕೊಡದವನನ್ನು ಶಿಕ್ಷಿಸಿ, ಅವನಿಂದ ಆ ಪದಾರ್ಥವನ್ನು ಅದರ ಒಡೆಯನಿಗೆ ಕೊಡಿಸಬೇಕು. ಮತ್ತು ಅದರ ಬೆಲೆಯ ಎರಡರಷ್ಟು ಹಣವನ್ನು ದಂಡವಾಗಿ ತೆಗೆದುಕೊಳ್ಳಬೇಕು.

ತನ್ನಲ್ಲಿದ್ದ ಮತ್ತೊಬ್ಬನ ಪದಾರ್ಥವನ್ನು ತಿಳಿಯದೆ ಮಾರಿದರೆ ದೋಷಕ್ಕೆ ಗುರಿಯಾಗುವದಿಲ್ಲ. ತಿಳಿದೂ ಮಾರಿದರೆ ಅವನನ್ನು ಕಳ್ಳನಂತೆ ಭಾವಿಸಿ ಮರಣದಂಡನೆ ವಿಧಿಸಬೇಕು. ಯಾವನು ನಿಯಮಾನುಸಾರ ಧನವನ್ನು ತೆಗೆದುಕೊಂಡು ವಿದ್ಯೆಯನ್ನಾಗಲಿ, ಶಿಲ್ಪ ಚಮತ್ಕಾರವನ್ನಾಗಲಿ ಹೇಳಿ ಕೊಡುವದಿಲ್ಲವೋ ಅವನಿಗೆ ಧರ್ಮಜ್ಞನಾದ ರಾಜನು ತೆಗೆದುಕೊಂಡಿದ್ದ ಹಣವನ್ನು ಹಿಂದಕ್ಕೆ ಕೊಡಿಸುವದಲ್ಲದೆ ಸರಕಾರಕ್ಕೂ ದಂಡವನ್ನು ತೆಗೆದುಕೊಳ್ಳಬೇಕು. ಬ್ರಾಹ್ಮಣರೆಲ್ಲರಿಗೂ ಸಂತರ್ಪಣೆ

ಮಾಡಿಸುವಾಗ, ನೆರ ಮನೆಯವನನ್ನು ಊಟಕ್ಕೆ ಕರೆಯದವನಿಗೆ ಮಾಷ ಪ್ರಮಾಣ (ಐದು ಗುಲಗಂಜಿ ತೂಕದ ಚಿನ್ನದ ನಾಣ್ಯ) ದಂಡ ಹಾಕಬೇಕು. ಇದರಿಂದ ಅವನಿಗೆ ಆ ಪಾಪವು ಸಂಬಂಧಿಸುವುದಿಲ್ಲ.

ಭೋಜನಕ್ಕೆ ಬರುವದಾಗಿ ಒಪ್ಪಿಕೊಂಡು ಮನೆಯಲ್ಲಿ ಇದ್ದು, ತಕ್ಕ ಕಾರಣವಿಲ್ಲದೆ ಕರೆದವನ ಮನೆಗೆ ಯಾವನು ಹೋಗದಿರುವನೋ ಅವನಿಗೆ ಎಂಟುನೂರು ದುಡ್ಡು ದಂಡ ಹಾಕಬೇಕು. ಕೊಡುವದಾಗಿ ಮಾತುಕೊಟ್ಟ ಪದಾರ್ಥವನ್ನು ಕೊಡದಿರತಕ್ಕವನಿಗೆ ಒಂದು ಸುವರ್ಣ ದಂಡ ತೆರಿಸಬೇಕು. ಸ್ವಾಮಿಯ ಅಪ್ಪಣೆ ನಡೆಸದೆ, ಗರ್ವದಿಂದ ಮನಸ್ಸು ಬಂದಂತೆ ಕೆಲಸ ಮಾಡುವ ಸೇವಕನಿಗೆ ಎಂಟು ಕೃಷ್ಣಲಗಳನ್ನು (ಗುಲಗಂಜಿಯ ತೂಕದ ನಾಣ್ಯ) ದಂಡ ಹಾಕಬೇಕು. ಅವನಿಗೆ ಸಂಬಳ ಕೊಡಬಾರದು.

ಹಿಂದಿನಿಂದ ಕೆಲಸ ಮಾಡಿದುದಕ್ಕಾಗಿ ಸೇವಕನಿಗೆ ಸಲ್ಲಿಸಬೇಕಾದ ಒಟ್ಟು ಸಂಬಳವನ್ನು ಸಕಾಲದಲ್ಲಿ ಕೊಡದಿದ್ದರೂ, ಅವನನ್ನು ಆ ಕಾಲದಲ್ಲಿ ಕೆಲಸದಿಂದ ಬಿಡಿಸಿದರೂ ಯಜಮಾನನಿಗೆ ನೂರು ಕಾರ್ಷಾಪಣ (ಹದಿನಾರು ಹಣಗಳಿಗೆ ಒಂದು ಕಾರ್ಷಾಪಣದ) ದಂಡ ಹಾಕಬೇಕು.

ಗ್ರಾಮ, ದೇಶ, ಸಮಾಜ, ಇವುಗಳ ಸೇವೆಯನ್ನು ಮಾಡುವೆನೆಂದು ಸತ್ಯ ಪೂರ್ವಕವಾಗಿ ಪ್ರತಿಜ್ಞೆಮಾಡಿ, ಲೋಭದಿಂದ ಅದರಂತೆ ನಡೆಯದಿರುವ ಮನುಷ್ಯನನ್ನು ಅರಸನು ದೇಶದಿಂದ ಹೊರಡಿಸಬೇಕು. ಯಾವುದಾದರೊಂದು ಪದಾರ್ಥವನ್ನು ಒಬ್ಬನಿಂದ ಕೊಂಡು, ಅಥವಾ ಮಾರಿ, ಬಳಿಕ ಮನಸ್ಸಿಗೆ ಆ ವ್ಯಾಪಾರವು ಸರಿ ಹೋಗದೆ, ಪಶ್ಚಾತ್ತಾಪಹುಟ್ಟಿದರೆ, ಹತ್ತು ದಿನಗಳೊಳಗೆ ಆ ವಸ್ತುವನ್ನು ಹಿಂದಕ್ಕೆ ಕೊಡಬಹುದು ಅಥವಾ ತೆಗೆದು ಕೊಳ್ಳಬಹುದು. ಆ ಅವಧಿಯೊಳಗೆ ಪದಾರ್ಥವನ್ನು ಕೊಡಲು ಅಥವಾ ತೆಗೆದುಕೊಳ್ಳಲು ಒಪ್ಪದಿದ್ದರೆ ರಾಜನು ಆರುನೂರುಹಣ ಬೆಳ್ಳಿಯ ನಾಣ್ಯ ದಂಡ ವಿಧಿಸಬೇಕು.

ಕನ್ಯೆಯರಲ್ಲಿರುವ ದೋಷವನ್ನು ತಿಳಿಸದೆ, ಮುಚ್ಚಿಟ್ಟು ಮದುವೆ ಮಾಡಿ ಕೊಡುವಾತನಿಗೆ ರಾಜನು ತೊಂಬತ್ತಾರು ಹಣ ಬೆಳ್ಳಿಯ ನಾಣ್ಯ ದಂಡ ಹಾಕಬೇಕು. ತನ್ನ ಮಗಳಲ್ಲಿ ದೋಷವಿರುವ ಕಾರಣ ಅವಳನ್ನು ತನ್ನ ಮಗಳೇ ಅಲ್ಲವೆಂದು ಹೇಳಿ ದೋಷವನ್ನು ಹೊರಪಡಿಸದಿರುವ ಮನುಷ್ಯನಿಗೆ ನೂರು ಹಣ ದಂಡ ವಿಧಿಸಬೇಕು.

ವರನಿಗೆ ಮೊದಲು ಒಬ್ಬಳನ್ನು ತೋರಿಸಿ ಆಮೇಲೆ ಬೇರೊಬ್ಬಳನ್ನು ಕೊಟ್ಟು ಮದುವೆ ಮಾಡುವದಕ್ಕೆ ಪ್ರಯತ್ನಿಸುವವನ ಅಪರಾಧವನ್ನು ಅತ್ಯಂತ ದೊಡ್ಡದೆಂದು ಭಾವಿಸಿ,ಅದಕ್ಕೆ ತಕ್ಕಂತೆ ಐನೂರಕ್ಕೆ ಕಡಿಮೆಯಿಲ್ಲದಂತೆ ಸಾವಿರ ಕಾರ್ಷಾಪಣಗಳವರೆಗೆ ದಂಡ ಹಾಕಬೇಕು. ವರನು ತನ್ನ ದೋಷಗಳನ್ನು ತಿಳಿಸದೆ, ಕನ್ಯೆಯನ್ನು ಬೇಡಿದಾಗ ಅವಳನ್ನುಕೊಡುವದಾಗಿ ಮಾತು ಕೊಟ್ಟಿದ್ದರೂ, ವಾಸ್ತವಾಂಶವು ತಿಳಿದುಬಿಟ್ಟರೆ ಮಾತು ಕೊಡದಂತೆಯೇ ಭಾವಿಸಬೇಕು. ಅವನಿಗೆ ರಾಜನು ಇನ್ನೂರು ಕಾರ್ಷಾಪಣ ದಂಡವನ್ನು ಹಾಕಬೇಕು. ತನ್ನ ಮಗಳನ್ನು ಒಬ್ಬನಿಗೆ ಕೊಡುವದಾಗಿ ಮಾತುಕೊಟ್ಟು, ನಿಷ್ಕರ್ಷೆ ಮಾಡಿದ ಮೇಲೆ ಬೇರೊಬ್ಬನಿಗೆ ಅವಳನ್ನು ಮದುವೆ ಮಾಡಿಕೊಟ್ಟರೆ, ಆ ತಂದೆಗೆ ಮೊದಲನೆಯ ಮಟ್ಟದ ದಂಡಕ್ಕೆ ಇಮ್ಮಡಿಯಾಗಿ ದಂಡಿಸಬಹುದು. ಇದು ಧರ್ಮದ

ವ್ಯವಸ್ಥೆಗೆ ಅವಶ್ಯಕವಾದುದು. ತನ್ನ ಪದಾರ್ಥವನ್ನು ಮಾರುವದಾಗಿ ಪ್ರಮಾಣ ಪೂರ್ವಕವಾಗಿಯೋ ಬರಿಯ ಮಾತಿನಿಂದಲೊ ಮಾತುಕೊಟ್ಟು ದುರಾಸೆಯಿಂದ ಬೇರೊಬ್ಬನಿಗೆ ಅದನ್ನು ಮಾರುವವನು ಆರು ನೂರು ಹಣ ದಂಡತೆರಬೇಕು.

ಮಗಳಿಗೆ ಅವಳ ಗಂಡನೋ ಇತರ ಬಂಧುಗಳೋ ಹೊದಿಸಿದ ಭೂಷಣಾದಿ ವಸ್ತುಗಳನ್ನು ಮಾರುವದು ಅಥವಾ ತನ್ನಲ್ಲಿ ಆ ವಸ್ತುವೇ ಇಲ್ಲವೆಂದು ಆಣೆಮಾಡಿ ಹೇಳುವದು ಹೀಗೆ ಮಾಡುವಾತನಿಗೆ ಇಮ್ಮಡಿಯಾಗಿ ದಂಡ ಹಾಕಬೇಕು. ಹೀಗೆ ಮಾಡಿದರೆ ಧರ್ಮವು ನಿಲ್ಲುವದು. ಪದಾರ್ಥವನ್ನು ಕೊಂಡವನು ಅದರ ಬೆಲೆಯಲ್ಲಿ ಸ್ವಲ್ಪ ಭಾಗ ಕೊಟ್ಟು ತರುವಾಯ ಉಳಿದುದನ್ನು ಕೊಡದೇ ಹೋದರೆ ಅದು ಮಧ್ಯಮ ಸಾಹಸ ಎಂದರೆ ಎರಡನೆಯ ದರ್ಜೆಯ ಅಪರಾಧವಾಗುತ್ತದೆ. ಅದಕ್ಕೆ ನೂರರ ಮೇಲೆ ಐನೂರರ ಒಳಗೆ ದಂಡ ವಿಧಿಸಬೇಕು. ಅವನು ಕೊಂಡುಕೊಂಡಿದ್ದ ಪದಾರ್ಥವನ್ನು ಹಿಂದಕ್ಕೆ ಕೊಡಿಸಬೇಕು. ದನಕಾಯುವವನು ವೇತನವನ್ನು ತೆಗೆದುಕೊಂಡು, ಹಸುವನ್ನು ಸರಿಯಾಗಿ ಕಾಯದೆ, ಅದರ ಹಾಲನ್ನು ಕರೆದುಕೊಂಡರೆ ರಾಜನು ಅವನಿಗೆ ಒಂದು ನೂರು ಹೊನ್ನುಗಳ ದಂಡ ವಿಧಿಸಬೇಕು. ದಂಡವನ್ನು ತೆತ್ತಬಳಿಕ ಅವನು ತನ್ನ ಒಡೆಯನಿಂದ ತನ್ನ ಅಪರಾಧ ಸೂಚಕವಾದ ಗುರುತನ್ನು ಮಾಡಿಸಿಕೊಂಡು ಆ ಕೆಲಸವನ್ನು ಬಿಡಬೇಕು. ಕಬ್ಬಿಣದ ಸರಪಳಿಯನ್ನು ಕಾಲಿಗೆ ಕಟ್ಟಿಕೊಂಡು ಯಜಮಾನನ ಸೇವಕನಾಗಿ ಅವನು ಹೇಳಿದ ಕೆಲಸವನ್ನು ಮಾಡುತ್ತಿರಬೇಕು.

ಹಳ್ಳಿಯ ಸುತ್ತಲೂ ನೂರು ಬಿಲ್ಲುಗಳ ಅಳತೆಯಷ್ಟು ವಿಸ್ತಾರವಾದ ಬಯಲನ್ನು ಬಿಡಬೇಕು. (ಒಂದು ಬಿಲ್ಲಿನ ಅಳತೆಯೆಂದರೆ ನಾನೂರು ಮೊಳ) ನಗರದ ವಿಷಯದಲ್ಲಿ ಈ ಪ್ರಮಾಣವು ಇಮ್ಮಡಿಯಾಗಿ ಇರಬಹುದು. ಅದರ ಹೊರಗೆ ಒಂಟೆಗೆ ಸಹ ಕಾಣದಷ್ಟು ಎತ್ತರವಾದ ಬೇಲಿಯನ್ನು ಹಾಕಬೇಕು. ನಾಯಿ ಹಂದಿ ಮುಂತಾದ ಪ್ರಾಣಿಗಳು ನುಗ್ಗುವದಕ್ಕೆ ಆಗದಂತೆ ಸಂದುಗಳನ್ನು ಮುಚ್ಚಬೇಕು. ಬೇಲಿಯಿಲ್ಲದ ಹೊಲಕ್ಕೆ ಹಸುಗಳು ನುಗ್ಗಿ ಹೋಗಿ ಧಾನ್ಯವನ್ನು ತಿಂದು ನಷ್ಟಗೊಳಿಸಿದರೆ ರಾಜನು ದನಕಾಯುವವನಿಗೆ ಯಾವ ಶಿಕ್ಷೆಯನ್ನು ಮಾಡಬೇಕಾಗಿಲ್ಲ. ಕರುಹಾಕಿದ ಹತ್ತುದಿನದ ಹಸು, ಗೂಳಿ, ದೇವಸ್ಥಾನದ ಹಸು ಇವುಗಳನ್ನು ಹೊಡೆಯಬಾರದು. ಇವು ಪ್ರವೇಶಿಸದಂತೆ ಬೇಲಿಯ ಸಂದುಗಳನ್ನೆಲ್ಲ ಮುಚ್ಚಬೇಕು. ಹೀಗೆಂದು ಮನು ಚಕ್ರವರ್ತಿ ಹೇಳಿದ್ದಾನೆ. ಮೇಲೆ ಹೇಳಿದಂತೆ ಅಲ್ಲದೆ ಬೇರೆ ವಿಧದಲ್ಲಿ ಧಾನ್ಯವು ನಷ್ಟವಾದರೆ ಅದು ಕ್ಷತ್ರಿಯನಿಗೆ ಸಂಬಂಧಪಟ್ಟಲ್ಲಿ ದನಕರುಗಳನ್ನು ಕಾಯುತ್ತಿದ್ದವನ ಯಜಮಾನನು ನಷ್ಟದ ಹತ್ತರಲ್ಲಿ ಒಂದು ಪಾಲನ್ನು ದಂಡ ಕೊಡಬೇಕು.

ಧಾನ್ಯವನ್ನು ತಿಂದು ಹಸುವು ಅಲ್ಲಿಯೇ ಮಲಗಿದ್ದರೆ ಮೇಲಿನ ಶಿಕ್ಷೆ ಎರಡರಷ್ಟು ಹೆಚ್ಚುವುದು. ಕ್ಷತ್ರಿಯನ ಪದಾರ್ಥವನ್ನು ವೈಶ್ಯನು ನಷ್ಟಪಡಿಸಿದರೆ ಅವನಿಗೆ ಹತ್ತರಷ್ಟು ಶಿಕ್ಷೆಯನ್ನು ಕೊಡಬೇಕು. ಮನೆ, ಕೆರೆ, ತೋಟ, ಹೊಲ ಇವುಗಳನ್ನು ಅಪಹರಿಸುವವನು ಐದುನೂರು ಹಣ ದಂಡ ಕೊಡಬೇಕು.

ಅಪರಾಧವು ಅಜ್ಞಾನದಿಂದ ಆಗಿದ್ದರೆ ಇನ್ನೂರು ಹಣ ದಂಡ ಹಾಕಬೇಕು. ಹೊಲ, ಗದ್ದೆಗಳ ಎಲ್ಲೆ ಕಟ್ಟುಗಳನ್ನು ನಿಬಂಧನ ಮಾಡುವಾಗ ನ್ಯಾಯವಾದದ್ದನ್ನು

ಬಿಟ್ಟು ಬೇರೆ ಎಲ್ಲೆಯನ್ನು ಗೊತ್ತು ಮಾಡುವವನಿಗೂ ಅದಕ್ಕೆ ಅನುಕೂಲವಾಗಿ ಸಂಕೇತದಿಂದ ಸನ್ನೆ ಮಾಡುವವನಿಗೂ ನಾಲಿಗೆಗಳನ್ನು ಕತ್ತರಿಸಬೇಕು. ಜ್ಞಾನ ಪೂರ್ವಕವಾಗಿ ಮತ್ತೊಬ್ಬನ ಭೂಮಿಯನ್ನು ಒತ್ತರಿಸಿ, ಹೊಲ ಗದ್ದೆಗಳ ಎಲ್ಲೆಯನ್ನು ವ್ಯತ್ಯಾಸ ಮಾಡತಕ್ಕವನಿಗೆ ಒಂದು ಸಾವಿರ ಹಣವನ್ನು ದಂಡವಾಗಿ ವಿಧಿಸಬೇಕೆಂದು ಸ್ವಾಯಂಭೂ ಮನು ಹೇಳಿದ್ದಾನೆ.

ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ಮೂರು ವರ್ಣದವರಲ್ಲಿ ಆಕಾರ್ಯ ಮಾಡಿದವರು ಯಾರೇ ಆಗಲಿ ವಿಶೇಷವೇನೂ ಇಲ್ಲದೆ ಪ್ರಾಯಶ್ಚಿತ್ತ ಮಾಡಿಕೊಳ್ಳುವಂತೆ ವಿಧಿಸಬೇಕು. ಅಸತ್ಯ ವಚನಗಳಿಂದ ಸ್ತ್ರೀಯನ್ನು ವಂಚಿಸಿ ಕೊಂದವನು ಶೂದ್ರ ಹತ್ಯಾಪ್ರಾಯಶ್ಚಿತ್ತವನ್ನು ಮಾಡಬೇಕು. ದುಡ್ಡು, ಕಾಸುಗಳನ್ನು ಕೊಟ್ಟು ಹಾವು ಮುಂತಾದ ಪ್ರಾಣಿಗಳನ್ನು ಕೊಲ್ಲಿಸಿದ ಬ್ರಾಹ್ಮಣನು ಆ ಪಾಪ ಪರಿಹಾರಕ್ಕಾಗಿ ವಿಶೇಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಸಾಧ್ಯವಿಲ್ಲದಿದ್ದರೆ ಒಂದು ಕೃಚ್ಛ್ರ (ಅಂದರೆ ಪ್ರತಿ ದಿನ ಒಂದು ಬೊಗಸೆ ನೀರನ್ನು ಕುಡಿದು ಒಂಬತ್ತು ದಿನ ಉಪವಾಸ ವಿರುವದು) ಮಾಡಬೇಕು. ಹಣ್ಣು ಬಿಡುವ ಮರಗಳನ್ನು, ಹೂ ಬಿಡುವ ಗಿಡ ಬಳ್ಳಿಗಳನ್ನು ಕತ್ತರಿಸಿ ಹಾಕಿದರೆ ಆ ಪಾಪದ ಪರಿಹಾರಕ್ಕಾಗಿ ನೂರು ಋಕ್ಕುಗಳನ್ನು ಜಪಿಸಬೇಕು. ಮೂಳೆಯಿರುವ ಪ್ರಾಣಿಗಳನ್ನು ಬಹಳವಾಗಿ ಕೊಂದರೂ, ಗಾಡಿಯ ತುಂಬ ಹೊರೆಯನ್ನು ಹೇರಿ ಎತ್ತು ಎಳೆಯಲಾರದಿರುವಾಗ ತಾನು ಅದರಲ್ಲಿ ಕುಳಿತು ಕೊಂಡರೂ ಶೂದ್ರಹತ್ಯಾವ್ರತವನ್ನು ಆಚರಿಸಬೇಕು. ಮೂಳೆಯಿರುವ ಪ್ರಾಣಿಗಳನ್ನು ಅಜ್ಞಾನದಿಂದ ವಧಿಸಿದಾಗ, ಬ್ರಾಹ್ಮಣನಿಗೆ ಏನಾದರೂ ದಾನಮಾಡಬೇಕು. ಮೂಳೆಯಿಲ್ಲದುದನ್ನು ಕೊಂದರೆ ಪ್ರಾಣಾಯಾಮವೇ ಪ್ರಾಯಶ್ಚಿತ್ತ. ಅನ್ನ ಮೊದಲಾದವುಗಳಲ್ಲಿ, ರಸಗಳಲ್ಲಿ, ಫಲ ಪುಷ್ಪಗಳಲ್ಲಿ ಹುಟ್ಟಿದ ಪ್ರಾಣಿಗಳನ್ನು ಕೊಂದ ಪಾಪವು ತುಪ್ಪವನ್ನು ಪ್ರಾಶನಮಾಡುವುದರಿಂದ ಪರಿಹಾರವಾಗುತ್ತದೆ.

ನೆಲವನ್ನು ಉತ್ತು ಬೆಳೆಸಿದ ಪೈರು ಪಚ್ಚೆಗಳನ್ನು ಕಾಡಿನಲ್ಲಿ ತಾನಾಗಿಯೇ ಬೆಳೆದ ಗಿಡವನ್ನು ವ್ಯರ್ಥವಾಗಿ ಕತ್ತರಿಸಿದರೆ ಒಂದು ದಿನ ಪಯೋವ್ರತದಿಂದ (ಜಲಪ್ರಾಶನ) ಇರಬೇಕು. ಪ್ರಾಣಿ ಹಿಂಸಾಜನ್ಯವಾದ ಪಾಪವು ಮೇಲೆ ಹೇಳಿದಂತೆ ವ್ರತಗಳಿಂದ ಪರಿಹಾರವಾಗುವದು. ಕಳ್ಳತನದಿಂದ ಬಂದ ಪಾಪವು ಹೋಗುವ ಉತ್ತಮವಾದ ವ್ರತವನ್ನು ಹೇಳುತ್ತೇನೆ, ಕೇಳು:

ಬ್ರಾಹ್ಮಣನು ಬ್ರಾಹ್ಮಣನ ಮನೆಯಲ್ಲಿ ಧಾನ್ಯ, ಅನ್ನ, ಧನ ಇವುಗಳನ್ನು ಉದ್ದೇಶಪೂರ್ವಕವಾಗಿ ಕದ್ದರೆ ಅರ್ಧ ಕೃಚ್ಛ್ರವನು ಮಾಡಿ ಪರಿಶುದ್ಧನಾಗಬೇಕು. ಮನುಷ್ಯರೂ ಸ್ತ್ರೀಯರೂ, ಹೊಲ, ಮನೆ, ಭಾವಿ, ಕೊಳ, ನೀರು ಇವುಗಳನ್ನು ಅಪಹರಿಸಿದರೆ, ಚಾಂದ್ರಾಯಣವ್ರತದಿಂದ ಪಾಪ ಪರಿಹಾರವಾಗುವದು. ಕಂಡವರ ಮನೆಯಿಂದ ಸ್ವಲ್ಪಬೆಲೆಯ ಅಲ್ಪ ವಸ್ತುಗಳನ್ನು ಕದ್ದವನು ಅವುಗಳನ್ನು ಒಡೆಯನಿಗೆ ಹಿಂದಕ್ಕೆ ಕೊಡುವದಲ್ಲದೆ, ಆ ಪಾಪದ ಪರಿಹಾರಕ್ಕಾಗಿ ಸಾಂತಪನ ಕೃಚ್ಛ್ರವನ್ನು ಮಾಡಬೇಕು. (ಪಂಚಗವ್ಯ ಪ್ರಾಶನ ಮಾಡಿ ಆ ದಿನ ಉಪವಾಸವಿರಬೇಕು) ಭಕ್ಷ ಭೋಜ್ಯಗಳು ವಾಹನ, ಹಾಸಿಗೆ, ಆಸನ, ಹೂ, ಗೆಣಸು, ಹಣ್ಣು, ಕದ್ದ, ಪಾಪವು

ಪಂಚಗವ್ಯಪ್ರಾಶನದಿಂದ ಪರಿಹಾರವಾಗುವದು. ಹುಲ್ಲು, ಸೌದೆ, ಮರ, ಒಣಗಿಸಿದ ಆಹಾರ, ಪದಾರ್ಥ, ಬೆಲ್ಲ, ಬಟ್ಟೆ, ಚರ್ಮ, ಭೋಗ್ಯ ವಸ್ತುಗಳು ಇವುಗಳನ್ನು ಅಪಹಾರ ಮಾಡಿದವನು ಮೂರು ದಿವಸ ಉಪವಾಸವಿದ್ದು, ಆ ದೋಷವನ್ನು ಕಳೆದುಕೊಳ್ಳಬೇಕು.

ಮಣಿ, ಮತ್ತು ಹವಳ, ತಾಮ್ರ, ಬೆಳ್ಳಿ, ಕಬ್ಬಿಣ, ಕಂಚು ಕಲ್ಲು ಮುಂತಾದವುಗಳನ್ನು ಕದ್ದರೆ ಹನ್ನೆರಡು ದಿನ ಕಣಾನ್ನ (ನುಚ್ಚಕ್ಕಿಯಅನ್ನ) ಭಕ್ಷಿಸಬೇಕು. ಹತ್ತಿ, ರೇಶಿಮೆ, ಉಣ್ಣೆ, ಗೊರಸು ಸೀಳಿದ ಪ್ರಾಣಿಗಳು, ಪಕ್ಷಿಗಳು, ಗಂಧ ವಸ್ತುಗಳು, ಮೂಲಿಕೆಗಳು, ಹಗ್ಗ ಇವುಗಳನ್ನು ಅಪಹರಿಸಿದವನು ಮೂರು ದಿನ ಜಲಪಾನವ್ರತಮಾಡಬೇಕು. ಹಿಂದೆ ಹೇಳಿದ ವ್ರತಗಳನ್ನು ಮಾಡಿ ಬ್ರಾಹ್ಮಣನು ಕಳ್ಳತನದಿಂದ ಬಂದ ಪಾಪಗಳನ್ನು ಕಳೆದುಕೊಳ್ಳಬೇಕು. ಆಗಮ್ಯಾಗಮನದಿಂದ ಒದಗುವ ಪಾತಕಗಳನ್ನು ಈ ಮುಂದಿನ ವ್ರತಗಳಿಂದ ಪರಿಹರಿಸಿಕೊಳ್ಳಬಹುದು.

ಬಂಧು ಸ್ತ್ರೀಯರಲ್ಲಿಯೂ, ಪುತ್ರ, ಮಿತ್ರರ, ಸ್ತ್ರೀಯರಲ್ಲಿಯೂ, ಕುಮಾರಿಯರಲ್ಲಿಯೂ ಪ್ರವೇಶಿಸಿ, ರೇತಸ್ಸೇಚನ ಮಾಡಿದರೆ ಗುರುತಲ್ಪಗಮನ ಪ್ರಾಯಶ್ಚಿತ್ತವನ್ನು ಮಾಡಬೇಕು. ಸೋದರತ್ತೆಯ ಮಗಳು, ಸೋದರಿ, ಸೋದರಿಯ ಮಗಳು, ಚಿಕ್ಕಮ್ಮನ ಅಥವಾ ದೊಡ್ಡಮ್ಮನ ಮಗಳು, ಸೋದರಮಾವನ ಪತ್ನಿ ಮುಂತಾದವರಲ್ಲಿ ರತಿಗಮನ ಮಾಡಿದರೆ ಚಾಂದ್ರಾಯಣ ವ್ರತ ಮಾಡಬೇಕು. ಮೇಲೆ ಹೇಳಿದ ಸ್ತ್ರೀಯರನ್ನು, ಜ್ಞಾತಿಗಳ ಸ್ತ್ರೀಯರನ್ನು, ಪತಿತನ ಆಶ್ರಯದಲ್ಲಿರುವ ಸ್ತ್ರೀಯರನ್ನು ಪ್ರೇಮಕಾಮಕ್ರಿಯೆಗೆ ಬರಮಾಡಿಕೊಳ್ಳಬಾರದು. ಮನುಷ್ಯೇತರ ಪ್ರಾಣಿಗಳಲ್ಲಿಯೂ, ರಜಸ್ವಲೆಯಲ್ಲಿಯೂ, ಆಸ್ಥಾನದಲ್ಲಿಯೂ, ನೀರಿನಲ್ಲಿಯೂ, ರೇತಸ್ಸೇಚನ ಮಾಡಿದರೆ ಸಾಂತಪನಕೃಚ್ಛ್ರವನ್ನು ಆಚರಿಸಬೇಕು. ಎಂದರೆ ಪಂಚಗವ್ಯ ಪ್ರಾಶನ ಮಾಡಿ, ಒಂದು ದಿನ ಉಪವಾಸವಿರಬೇಕು. ಎತ್ತಿನ ಗಾಡಿಯಲ್ಲಿ, ನೀರಿನಲ್ಲಿ, ಹಗಲು ಹೊತ್ತಿನಲ್ಲಿ ಸ್ತ್ರೀ ಪುರುಷರು ಸೇರಿರುವುದನ್ನು ನೋಡಿದರೆ ಬ್ರಾಹ್ಮಣನು ಉಟ್ಟ ಬಟ್ಟೆಯೊಡನೆ ಸ್ನಾನ ಮಾಡಬೇಕು.

ಅಜ್ಞಾನವಶದಿಂದ ಚಂಡಾಲ ಸ್ತ್ರೀಯರೊಡನೆ ಸೇರಿದರೆ ಊಟ ಮಾಡಿದರೆ, ಅವಳಿಂದ ಉಪಭೋಗ ವಸ್ತುಗಳನ್ನು ಸ್ವೀಕರಿದರೂ ಬ್ರಾಹ್ಮಣನು ಪತಿತನಾಗುತ್ತಾನೆ. ಬುದ್ಧಿಪೂರ್ವಕವಾಗಿ ಮಾಡಿದರೆ ಚಾಂಡಾಲನಿಗೆ ಸಮಾನನೇ ಆಗುತ್ತಾನೆ. ಪತ್ನಿಯು ದುಷ್ಟಳಾದರೆ ಪತಿಯು ಅವಳನ್ನು ಒಂದು ಮನೆಯಲ್ಲಿ ಹಾಕಿ ನಿರ್ಬಂಧದಿಂದ ಇರಿಸಬೇಕು. ಪರಸ್ತ್ರೀಗಮನಮಾಡುವ ಪುರುಷನಿಗೆ ವಿಧಿಸಿರುವ ಶಿಕ್ಷೆಯನ್ನೇ ಅವಳಿಗೂ ಕೊಡಬೇಕು. ಅವಳು ತನ್ನಂತೆಯೇ ದುಷ್ಟಚರಿತ್ರನಾದ ಪರ ಪುರುಷನೊಡನೆ ಆಲೋಚನೆ ಮಾಡಿಕೊಂಡು ಮತ್ತೆ ದುರ್ಮಾರ್ಗಕ್ಕೆ ಬಿದ್ದರೆ ಅವಳಿಂದ ಚಾಂದ್ರಾಯಣ ಕೃಚ್ಛ್ರವನ್ನು ಮಾಡಿಸಬೇಕು. ಅದರಿಂದ ಆಕೆ ಶುದ್ಧಳಾಗುವಳು. ಬ್ರಾಹ್ಮಣನು ಒಂದು ರಾತ್ರಿ ಶೂದ್ರ ಸ್ತ್ರೀಸಂಗ ಮಾಡಿ, ಅವಳು ಪಾಕ ಮಾಡಿದ ಭಕ್ಷ್ಯ ಭೋಜ್ಯಗಳನ್ನು ತಿಂದರೆ ಆ ದೋಷ ಪರಿಹಾರಕ್ಕಾಗಿ ಮೂರು ವರುಷ ಕಾಲ ಪ್ರತಿದಿನವೂ ಮಂತ್ರ ಜಪ ಮಾಡಬೇಕು.

ಫಲವೃಕ್ಷವನ್ನು ಕಡಿದವನು ಎಂಬತ್ತು ಗುಲಗಂಜಿ ತೂಕದ ಸುವರ್ಣನಾಣ್ಯದಂಡ ತೆರಬೇಕು. ಆ ವೃಕ್ಷವು ಮಾರ್ಗದ ಪಕ್ಕದಲ್ಲಿಯೂ, ಎಲ್ಲೆಗಟ್ಟಿನಲ್ಲಿಯೂ ಕೆರೆ ಕಟ್ಟೆಗಳ

ಸಮೀಪದಲ್ಲಿಯೂ ಇದ್ದರೆ ಶಿಕ್ಷೆಯು ಅದರ ಇಮ್ಮಡಿಯಾಗಬೇಕು. ಇಂತಹ ಕಡೆಗಳಲ್ಲಿ ಬೆಳೆದಿರುವ ಮರಗಳನ್ನು, ಅವು ಹಣ್ಣು ಬಿಡದಿದ್ದರೂ ಸರಿಯೇ ಕತ್ತರಿಸಬಾರದು. ಕತ್ತರಿಸಿದರೆ ಎರಡನೇ ದರ್ಜೆಯ ದಂಡವನ್ನು ವಿಧಿಸಬೇಕು. ತನಗೆ ಸಂಬಂಧಪಡದ ಗಿಡ-ಬಳ್ಳಿಗಳನ್ನು ಪೊದೆಗಳನ್ನು ಕಡಿದವನಿಂದ ಐದು ಗುಲಗಂಜಿ ತೂಕದ ಚಿನ್ನವನ್ನು ದಂಡವಾಗಿ ತೆಗೆದುಕೊಳ್ಳಬೇಕು. ನಿಷ್ಪ್ರಯೋಜನವಾಗಿ ಒಂದು ಹುಲ್ಲುಕಡ್ಡಿಯನ್ನು ಕೂಡ ಕೀಳಬಾರದು. ಹಾಗೆ ಮಾಡಿದವನು ಒಂದು ಕಾರ್ಷಾಪಣವನ್ನು ದಂಡ ಕೊಡಬೇಕು. ಹೀಗೆಯೇ ಪ್ರಾಣಿಗಳನ್ನು ಹೊಡೆದು, ಬಡಿದು, ಹಿಂಸಿಸುವವನಿಗೆ ಮೂರು ಕೃಷ್ಣಲಗಳನ್ನು ದಂಡರೂಪವಾಗಿ ಕೊಡಬೇಕು.

ಇತರರ ಮರ ಮೊದಲಾದವುಗಳನ್ನು ಕಡಿದರೆ ದೇಶ, ಕಾಲಗಳಿಗೆ ಅನುಸಾರವಾಗಿ, ಅವುಗಳ ಬೆಲೆಯನ್ನು ಗೊತ್ತು ಮಾಡಿ ಅದನ್ನು ಪದಾರ್ಥದ ಒಡೆಯನಿಗೆ ಕೊಡಿಸಬೇಕು. ಗಾಡಿ ನಡೆಸುವವನು ಅತ್ತಿತ್ತ ಹೋಗಿರುವಾಗ ಎತ್ತುಗಳು ದಾರಿ ತಪ್ಪಿ ನಡೆದು ಅದರಿಂದ ಅನಾಹುತವು ಸಂಭವಿಸಿದರೆ ಗಾಡಿಯ ಯಜಮಾನನು ದೇಶ ಕಾಲಾನುಗುಣವಾದ ಶಿಕ್ಷೆಗೆ ಒಳಗಾಗುವನು. ನಡೆಸುವವನು ಎದುರಿಗೆ ಇದ್ದು ಅನರ್ಥವು ಸಂಭವಿಸಿದರೆ ಅವನಿಗೇ ಶಿಕ್ಷೆಯನ್ನು ಕೊಡಬೇಕು. ಆದರೆ ಅನಾಹುತವು ಸಂಭವಿಸುವದಕ್ಕೆ ಅವನು ಯಾವ ವಿಧದಲ್ಲಿಯೂ ಕಾರಣವಲ್ಲದಿದ್ದರೆ ಅವನಿಗೆ ಶಿಕ್ಷೆಯಿಲ್ಲ.

ಮತ್ತೊಬ್ಬನ ಪದಾರ್ಥಗಳನ್ನು ಅವನಿಗೆ ತಿಳಿದೋ, ತಿಳಿಯದೆಯೋ, ಅಪಹರಿಸಿದವನು ಆ ಪದಾರ್ಥಗಳನ್ನು ಅಥವಾ ಅವುಗಳ ಬೆಲೆಯನ್ನೇ ಕೊಡುವದರ ಮೂಲಕ ಒಡೆಯನಿಗೆ ಸಮಾಧಾನವನ್ನುಂಟುಮಾಡಬೇಕು. ಬಳಿಕ ತಾನು ಮಾಡಿದ ತಪ್ಪಿಗಾಗಿ ರಾಜನಿಗೆ ದಂಡವನ್ನು ಕೊಡಬೇಕು.

ಪ್ರಯಾಣಿಕರು ಬಾವಿಯಲ್ಲಿ ನೀರು ಸೇದಿ ಕುಡಿಯಲೆಂದು ಅರವಟ್ಟಿಗೆಗಳಲ್ಲಿ ಇಟ್ಟಿರುವ ಹಗ್ಗ, ಬಿಂದಿಗೆ ಮುಂತಾದವುಗಳನ್ನು ಅಪಹರಿಸುವದು, ಅಥವಾ ಆ ಅರವಟ್ಟಿಗೆಗೆ ಅಪಾಯ ಉಂಟುಮಾಡುವದು, ಇಂತಹ ಅಪರಾಧಗಳನ್ನು ಮಾಡಿದವನು ತನ್ನಿಂದ ಆದ ನಷ್ಟವನ್ನು ಸರಿಪಡಿಸುವದಲ್ಲದೆ, ಐದು ಗುಲಗಂಜಿ ತೂಕದ ಚಿನ್ನದ ನಾಣ್ಯವನ್ನು ರಾಜನಿಗೆ ದಂಡ ಕೊಡಬೇಕು. ಹತ್ತು ಗಡಿಗೆಗಳಿಗಿಂತ ಹೆಚ್ಚಾಗಿ ಧಾನ್ಯ ಕದ್ದರೆ ಅವನಿಗೆ ಮರಣದಂಡನೆ ವಿಧಿಸಬೇಕು. ಇದಕ್ಕಿಂತ ಕಡಿಮೆಯಾಗಿ ಕದ್ದ ಸಂದರ್ಭದಲ್ಲಿ ಅವನು ಕದ್ದುದಕ್ಕಿಂತ ಹನ್ನೊಂದು ಪಾಲು ಅಧಿಕವಾದ ಧಾನ್ಯವನ್ನು ಅವನಿಂದ ತೆಗೆದುಕೊಳ್ಳಬೇಕು. ಇದೇ ಅವನಿಗೆ ಶಿಕ್ಷೆ.

ಭಕ್ಷ್ಯ, ಭೋಜ್ಯ, ಪಾನ ವಸ್ತುಗಳನ್ನು ಹೆಚ್ಚಾಗಿ ಕದ್ದರೂ, ದಂಡ ವಿಧಿಸಬಾರದು, ಚಿನ್ನ, ಬೆಳ್ಳಿ ಬೆಲೆಬಾಳುವ ಬಟ್ಟೆ, ಸದ್ವಂಶಜರಾದ ಪುರುಷರನ್ನು, ಅದರಲ್ಲೂ ಸ್ತ್ರೀಯರನ್ನು ಉತ್ತಮವಾದ ಪಶುಗಳನ್ನು, ಶಸ್ತ್ರಗಳನ್ನು, ಔಷಧಗಳನ್ನು, ಶ್ರೇಷ್ಠವಾದ ರತ್ನಗಳನ್ನು ಅಪಹರಿಸಿದವನು ವಧೆಗೆ ಗುರಿಯಾಗುವನು, ಮೊಸರು, ಹಾಲು, ಮಜ್ಜಿಗೆ, ಪಾನಕ, ರಸದ್ರವ್ಯ, ಬಿದಿರಿನ ಅಂಡೆ, ಮೊರ ಮುಂತಾದ ಸಾಮಾನುಗಳು, ಉಪ್ಪು, ಎಲ್ಲ ಬಗೆಯ ಮಣ್ಣಿನ ಪದಾರ್ಥಗಳು ಮಣ್ಣು, ಬೂದಿ ಇವುಗಳನ್ನು ಕದ್ದರೆ ರಾಜನು ಸಮಯಾನುಸಾರ ಶಿಕ್ಷೆ ಕೊಡಬೇಕು.

ಬ್ರಾಹ್ಮಣನ ಮನೆಯಲ್ಲಿಯ ಹಸು, ಎಮ್ಮೆ, ಕುದುರೆ ಇವನ್ನು ಕದ್ದರೆ ಕೂಡಲೇ ಅವನ ಕಾಲನ್ನು ಮುರಿಯಬೇಕು. ದಾರ, ಹತ್ತಿ, ಮಾದಕದ್ರವ್ಯ,ಸಗಣಿ, ಬೆಲ್ಲ, ಮೀನು, ಪಕ್ಷಿ, ಎಣ್ಣೆ, ತುಪ್ಪ, ಮಾಂಸ, ಜೇನು, ಉಪ್ಪು ಮೊದಲಾದ ಉಳಿದ ವಸ್ತುಗಳು ಮದ್ಯ,ಅನ್ನ, ಆಹಾರ ಯೋಗ್ಯವಾದ ಎಲ್ಲ ಬಗೆಯ ಪಕ್ವ ಪದಾರ್ಥಗಳು ಇವುಗಳ್ನು ಕದ್ದರೆ ಅವುಗಳ ಬೆಲೆಗೆ ಇಮ್ಮಡಿಯಾಗಿ ದಂಡ ತೆರಿಸಬೇಕು. ಅಲ್ಲದೆ ಹೂಗಳು, ಹಸಿಯ ಧಾನ್ಯ ಪೊದೆ, ಬಳ್ಳಿ, ಲತೆ, ಪೂರ್ಣವಾಗಿ ಸಿದ್ಧಪಡಿಸಿದ ಅನ್ನ ಇವುಗಳನ್ನು ಅಪಹರಿಸಿದರೆ ಐದು ಮಾಷಕಗಳ ದಂಡ ವಿಧಿಸಬೇಕು. ಕಾಳು-ಕಡ್ಡಿಗಳನ್ನು ಬೇರ್ಪಡಿಸಿ ಅಚ್ಚುಕಟ್ಟುಮಾಡಿದ ಧಾನ್ಯಗಳು, ಕಾಯಿಪಲ್ಲೆಗಳು, ಗಡ್ಡೆ-ಗೆಣಸುಗಳು, ಹಣ್ಣು, ಹಂಪಲುಗಳು ಇವುಗಳನ್ನು ಕದ್ದವನಿಗೆ ಒಬ್ಬಂಟಿಗನಾಗಿ ಬಂದಿದ್ದರೆ ನೂರುನಾ ಕರೂ ಪಾಯಿಯಷ್ಟು ಹಣ ಕಾರ್ಷಾಪಣಗಳನ್ನು ಜೊತೆಯಾಗಿ ಬಂದಿದ್ದಲ್ಲಿ ಇನ್ನೂರು ಕಾರ್ಷಾಪಣಗಳನ್ನು ದಂಡ ವಿಧಿಸಬೇಕು. ಇತರರ ಪದಾರ್ಥಗಳನ್ನು ಅಪಹರಿಸುವದಕ್ಕಾಗಿ ಕಳ್ಳನು ತನ್ನ ಯಾವ ಯಾವ ಅಂಗದಿಂದ ಕೆಲಸ ಮಾಡಿರುವನೋ ಆಯಾ ಅಂಗಗಳನ್ನೆಲ್ಲ ರಾಜನು ಭಂಗೊಳಿಸಬೇಕು. ಇದರಿಂದ ಆ ವ್ಯಾಪಾರ ತಪ್ಪಿಸಿದಂತಾಗುವದು. ದಾರಿ ನಡೆದು ಶಕ್ತಿಗುಂದಿರುವ ದ್ವಿಜನು ಎರಡು ಕಬ್ಬಿನ ಜಲ್ಲೆಗಳನ್ನು ಎರಡು ಗೆಣಸುಗಳನ್ನು, ಎರಡು ಕಕ್ಕರಿಕೆ ಅಥವಾ ಸೌತೇಕಾಯಿಗಳನ್ನು, ಯಾವುದಾದರೂ ಎರಡು ಹಣ್ಣುಗಳನ್ನು ಕೈಯಲ್ಲಿ ಹಿಡಿದುಕೊಳ್ಳಬಹುದಾದಷ್ಟು ಧಾನ್ಯವನ್ನೂ, ಅದೇ ಪ್ರಮಾಣದಲ್ಲಿ ಕೀಕೆ ಮುಂತಾದ ಸೊಪ್ಪನ್ನು ಒಡೆಯನನ್ನು ಕೇಳದೆ ಒಂದು ವೇಳೆ ತೆಗೆದುಕೊಂಡರೆ ಅದನ್ನು ಅಪರಾಧವೆಂದು ಪರಿಗಣಿಸಬಾರದು.

ಹಣ್ಣು ಹಂಪಲು, ಗಡ್ಡೆ-ಗೆಣಸುಗಳನ್ನು, ಅಗ್ನಿ ಕಾರ್ಯಕ್ಕಾಗಿ ಬೇಕಾದ ಕಟ್ಟಿಗೆಯನ್ನು, ಹಸುವಿಗೆ ಹಾಕುವದಕ್ಕಾಗಿ ಹುಲ್ಲನ್ನೂ ಸ್ವಾಮಿಯ ಆಜ್ಞೆಯಿಲ್ಲದೆ ತೆಗೆದುಕೊಂಡರೆ ಚೌರ್ಯ ದೋಷ ಬಾರದೆಂದು ಮನುವು ಹೇಳಿರುವನು. ದೇವರ ಪೂಜೆಗಾಗಿ ದೇವಸ್ಥಾನಕ್ಕೆ ಸೇರಿರುವದನ್ನು ಬಿಟ್ಟು ಬೇರೆಯವರ ತೋಟದಿಂದ ಹೂವನ್ನು ಕೇಳದೇ ತಂದರೆ ಯಾವ ಅಪರಾಧವೂ ಇಲ್ಲ. ತೀಕ್ಷ್ಣವಾದ ಕೊಂಬು, ಉಗುರು, ಕೋರೆಹಲ್ಲು ಇವುಗಳಿಂದ ಮನುಷ್ಯನನ್ನು ಕೊಲ್ಲಬರುವ ಯಾವ ಪ್ರಾಣಿಯನ್ನು ಸಂಹಸಿರಿದರೂ ಪಾಪವು ಬಾರದು.

ಮನೆಮಠಗಳಿಗೆ ಬೆಂಕಿಯಿಡುವವನು, ವಿಷವನ್ನು ಹಾಕುವವನು, ಕೈಯಲ್ಲಿ ಶಸ್ತ್ರವನ್ನು ಹಿಡಿದು ಯಾವಾಗಲೂ ನಿಷ್ಕಾರಣವಾಗಿ ಹಿಂಸಿಸುವನು. ಕಂಡವರ ಸೊತ್ತನ್ನು ಅಪಹರಿಸುವವನು, ಇತರರ ಹೊಲಗದ್ದೆಗಳನ್ನು ಸ್ತ್ರೀಯನ್ನೂ ಆಕ್ರಮಿಸಿ ಕೊಳ್ಳುವವನು. ಈ ಆರು ಮಂದಿಗೆ ಆತತಾಯಿ ಎನ್ನುವರು. ಅಂಥವನು ಬರುವದನ್ನು ಕಂಡರೆ, ಅವನು ಬಾಲಕ, ವೃದ್ಧ, ಸಕಲಶಾಸ್ತ್ರಜ್ಞ, ಬ್ರಾಹ್ಮಣ ಇವರಲ್ಲಿ ಯಾರೇ ಆಗಲಿ ಹಿಂದು ಮುಂದು ನೋಡದೇ ಕೊಂದುಹಾಕಬೇಕು. ಆತತಾಯಿಯ ವಧೆಯಿಂದ ಯಾವ ಪಾಪವೂ ಇಲ್ಲ.

ಎದುರಿನಲ್ಲಿ ಇರುವವನ ಮೇಲೂ, ಪರೋಕ್ಷದಲ್ಲಿ ಇರುವವನ ಮೇಲೂ ಕೋಪಗೊಳ್ಳುವವನು. ಮನೆಮಠಗಳನ್ನು, ಹೊಲಗದ್ದೆಗಳನ್ನು ಅಪಹರಿಸುವವನು, ಹೋಗಬಾರದ ಕಡೆಗೆ ಹೋಗುವವನು, ಬೆಂಕಿ ಹಾಕುವವನು, ವಿಷ ಕೊಡುವವನು,

ಯಾವಾಗಲೂ ಹೊಡೆಯುವದಕ್ಕೆ ಸಿದ್ಧವಾಗಿ ಆಯುಧ ಎತ್ತಿ ಹಿಡಿದಿರುವವನು, ಮಾಟವನ್ನು ಮಾಡುವವನು, ಅರಸನಿಗೆ ಚಾಡಿ ಹೇಳುವವನು ಇವರನ್ನೆಲ್ಲ ಧರ್ಮಜ್ಞರು ಆತತಾಯಿಗಳೆಂದು ಕರೆಯುತ್ತಾರೆ.

ಭಿಕ್ಷುಕ, ಭಿಕ್ಷುಕಿ, ಅಥವಾ ತಿರುಪೆಗಾಗಿ ಬರುವ ಯಾವನಾದರೂ ಹಾಡುಗಾರ ಇವರು ಬೇಡ ಬೇಡವೆನ್ನುತ್ತಿದ್ದರೂ ಮನೆಗೆ ನುಗ್ಗಿದರೆ ಇಮ್ಮಡಿಯ ದಂಡಕ್ಕೆ ಗುರಿಯಾಗುವರು. ಪುಣ್ಯತೀರ್ಥ, ಅರಣ್ಯ, ಗೃಹ ಅಥವಾ ನದಿಸಂಗಮದಲ್ಲಿ ಪರಸ್ತ್ರೀಯರೊಡನೆ ಸಂಭಾಷಿಸುವವನನ್ನು ಸೆರೆಯಲ್ಲಿ ಹಾಕಬೇಕು. ಪರಸ್ತ್ರೀಯರೊಡನೆ ಸಲ್ಲಾಪ ಸಲ್ಲದು. ಅದು ನಿಷಿದ್ಧ. ಪರನಾರಿಯರೊಡನೆ ಮಾತನಾಡುವವನಿಗೆ ಒಂದು ಸುವರ್ಣ ನಾಣ್ಯ ದಂಡವಿಧಿಸಬೇಕು. ತನ್ನ ಸಹಾಯದಿಂದಲೇ ಉಪಜೀವಿಸುವ ನರ್ತಕಿಯರ ವಿಷಯದಲ್ಲಿ ಮೇಲೆ ಹೇಳಿದ ಶಿಕ್ಷೆಯ ನಿರ್ಬಂಧವಿಲ್ಲ. ಏಕೆಂದರೆ ಅವರು ಮನುಷ್ಯರೊಡನೆ ಬೆರೆಯುತ್ತಾರೆ, ಅಲ್ಲದೆ ರಹಸ್ಯವಾಗಿ ಸಂಚರಿಸುತ್ತಾರೆ ಆದರೂ ಅವರೊಡನೆಯೂ, ತನ್ನ ಸೇವಕಿಯರೊಡನೆಯೂ ಮನೆ-ಮಠಗಳಲ್ಲದೆ ತಿರುಗುವ ಸ್ತ್ರೀಯರೊಡನೆಯೂ ಅಕ್ಷೇಪಕರವಾದ ರೀತಿಯಲ್ಲಿ ಮಾತನಾಡಿದವನಿಗೆ ರಾಜನು ಯಥೋಚಿತವಾದ ರೀತಿಯಲ್ಲಿ ದಂಡ ವಿಧಿಸಬೇಕು.

ಅಲ್ಲದೆ, ಇಷ್ಟವಿಲ್ಲದಾಕೆಯನ್ನು ಬಲಾತ್ಕಾರದಿಂದ ಕೆಡಿಸುವವನನ್ನು ಕೂಡಲೇ ವಧಿಸಬೇಕು. ಇಷ್ಟಪಟ್ಟ ಪರಸ್ತ್ರೀಯರೊಡನೆ ಕೂಡಿದವನಿಗೆ ಇನ್ನೂರು ಕಾರ್ಷಾಪಣ (ಕ್ಲಪ್ತಧನ) ದಂಡವಿಧಿಸಬೇಕು. ಮೇಲೆ ಹೇಳಿದ ಅಕೃತ್ಯಗಳಿಗೆ ಸಹಾಯಕನಾದವನಿಗೂ ಅದೇ ಶಿಕ್ಷೆಯನ್ನು ಕೊಡಬೇಕು. ಪರಸ್ತ್ರೀಗಮನವನ್ನು ಮಾಡಿದವನಿಗೆ ಯಾವ ದಂಡವೋ ಅದೇ ದಂಡವು ಆ ಕಾರ್ಯಕ್ಕೆ ಅವಕಾಶ ಕೊಟ್ಟವನಿಗೂ ಅನ್ವಯಿಸುವದು. ಬಲ ಪ್ರಯೋಗದಿಂದ ಪರಸ್ತ್ರೀಸಂಗ ಮಾಡಿದ ಮನುಷ್ಯನಿಗೆ ವಧೆಯೇ ಶಿಕ್ಷೆ. ಅವಮಾನಕ್ಕೆ ಗುರಿಯಾದ ಸ್ತ್ರೀಯ ಮೇಲೆ ಯಾವ ದೋಷವೂ ಇಲ್ಲ.

ಮೂರು ಸಾರಿ ರಜಸ್ವಲೆಯಾಗುವವರೆಗೂ ತಂದೆ-ತಾಯಿಗಳು ಮದುವೆಯನ್ನೇ ಮಾಡದ ಕನ್ಯೆಯು ಆ ಬಳಿಕ ತನಗೆ ಇಚ್ಛೆ ಬಂದವನನ್ನು ತಾನಾಗಿಯೇ ವರಿಸಿದರೆ ರಾಜನು ಅವಳನ್ನು ದಂಡಿಸಬಾರದು. ತನ್ನ ದೇಶದಲ್ಲಿ ಮಗಳಿಗೆ ಮದುವೆ ಮಾಡಿಕೊಟ್ಟು ಬಳಿಕ ಅವಳೊಡನೆ ಪರದೇಶಕ್ಕೆ ಹೊರಟು ಹೋಗುವ ತಂದೆಯನ್ನು ಮರಣದಂಡನೆಗೆ ಗುರಿಮಾಡಬೇಕು. ಏಕೆಂದರೆ ಅವನು ಸ್ತ್ರೀ ಚೋರನೆಂದು ಪರಿಗಣಿಸಲ್ಪಡುವನು. ಪತಿಯನ್ನು ಕಳೆದುಕೊಂಡು ದುಡ್ಡುಕಾಸಿಲ್ಲದೆ ತೊಳಲುತ್ತಿರುವ ಸ್ತ್ರೀಯನ್ನು ಇಟ್ಟುಕೊಂಡವನು ಅಪರಾಧಕ್ಕೆ ಗುರಿಯಾಗುವದಿಲ್ಲ. ಅವಳೂ ಐಶ್ವರ್ಯವಂತಳಾಗಿದ್ದರೆ ಅಂಥವನು ಕೂಡಲೇ ಶಿಕ್ಷೆಗೆ ಗುರಿಯಾಗುವನು. ಕನ್ಯೆಯು ಉತ್ಕೃಷ್ಟನಾದವನನ್ನು ತಾನಾಗಿಯೇ ಆರಿಸಿ ಸೇರಿದ್ದರೆ ಅವಳನ್ನು ಅವನಿಗೇ ಕೊಟ್ಟು ಮದುವೆ ಮಾಡಬೇಕು. ನೀಚರನ್ನು ಸೇವಿಸಿದ್ದರೆ ಅವಳನ್ನು ಮನೆಯ ನಿರ್ಬಂಧನದಲ್ಲಿ ಇರಿಸಬೇಕು. ತನಗಿಂತ ಉತ್ತಮ ವರ್ಣದವಳಾದ ಸ್ತ್ರೀಯನ್ನು ಕೂಡಿರುವ ಪುರುಷನು ಮರಣದಂಡನೆಗೆ ಅರ್ಹನಾಗುವನು, ಹಾಗೆಯೇ ಮುಂದೆ ಹೇಳಿದ ಶಿಕ್ಷೆಯನ್ನು ವಿಧಿಸಬೇಕು.

ರಾಜನ ಹೆಸರನ್ನು ಹೇಳಿ ಕಪಟದ ಆಜ್ಞೆಯನ್ನು ಹೊರಡಿಸುವವರು ಪ್ರಜೆಗಳ ಮನಸ್ಸನ್ನು ಕೆಡಿಸುವವರು, ಸ್ತ್ರೀಯರ ಬಾಲಕರ ಮತ್ತು ಬ್ರಾಹ್ಮಣರ ಕೊಲೆ ಮಾಡುವವರು, ರಾಜನ ಶತ್ರುಗಳ ಕಡೆಗೆ ಸೇರಿದವರು ಇವರನ್ನು ವಧಿಸಬೇಕು. ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೆ ನ್ಯಾಯಕ್ಕೆ ವಿರೋಧವಾಗಿ ವರ್ತಿಸುವ ಸಚಿವನ ಅಥವಾ ನ್ಯಾಯಾಧಿಪತಿಯ ಆಸ್ತಿಯೆಲ್ಲವನ್ನೂ ಅರಸನು ಮುಟ್ಟುಗೋಲು ಹಾಕಿಕೊಂಡು ಅವನನ್ನು ಗಡೀಪಾರು ಮಾಡಬೇಕು. ಬ್ರಾಹ್ಮಣನನ್ನು ಕೊಂದವನು, ಮದ್ಯವನ್ನು ಕುಡಿದವನು, ಕಳ್ಳತನ ಮಾಡಿದವನು, ಗುರುಪತ್ನಿಯೊಡನೆ ಕೂಡಿದವನು ಇವರೆಲ್ಲರೂ ಪಾತಕಿಗಳು. ಇವರನ್ನು ಸಮಾಜದಿಂದ ಬೇರೆಯಾಗಿಟ್ಟು ಶಿಕ್ಷಿಸಬೇಕು.

ಮೇಲೆ ಹೇಳಿದ ಮಹಾಪಾತಕಿಗಳನ್ನು ವಧಿಸಬೇಕು. ಬ್ರಾಹ್ಮಣನು ಆ ಪಾಪವನ್ನು ಮಾಡಿದ್ದರೆ ಅವನ ಮೈಮೇಲೆ ಗುರುತನ್ನು ಮಾಡಿ ಸ್ವದೇಶದಿಂದ ಓಡಿಸಬೇಕು. ಗುರುತಿನ ಆಕಾರವನ್ನು ಹೇಳುವೆನು: ಗುರು ಪತ್ನೀ ಗಮನದಲ್ಲಿ ಯೋನಿಯನ್ನೂ ಸುರಾಪಾನದಲ್ಲಿ ಮದ್ಯಗ್ರಹಣದ ಬಾವುಟವನ್ನೂ, ಕಳ್ಳತನದಲ್ಲಿ ನಾಯಿಯ ಹೆಜ್ಜೆಯನ್ನೂ ಬ್ರಾಹ್ಮಣ ವಧದಲ್ಲಿ ತಲೆಯಿಲ್ಲದ ಮನುಷ್ಯನನ್ನೂ ಗುರುತು ಮಾಡಬೇಕು.

ಮಹಾ ಪಾತಕಿಗಳೊಡನೆ ಮಾತನಾಡಬಾರದು, ಊಟ ಮಾಡಬಾರದು, ಸತ್ತರೆ ಅವರ ಶವವನ್ನು ಹೊರಬಾರದು. ಜ್ಞಾತಿಗಳು, ಸಂಬಂಧಿಗಳು ಮತ್ತು ಬಂಧುಗಳು ಅವನೊಡನೆ ಸಂಬಂಧವನ್ನು ತೊರೆಯಬೇಕು. ಮಹಾಪಾತಕವನ್ನು ಮಾಡಿದವನ ಹಣ ಕಾಸುಗಳನ್ನು ರಾಜನು ತಾನೇ ಕೊಂಡೊಯ್ದು ನೀರಿನಲ್ಲಿ ಹಾಕಬೇಕು. ಅವನಿಗೆ ವಿಧಿಸಿದ ದಂಡವನ್ನು ಜಲಮಾತೆಯಾದ ವರುಣನಿಗೆ ಅರ್ಪಿಸಬೇಕು. ಧರ್ಮ ನಿರತನಾದ ರಾಜನು ಕದ್ದ ಪದಾರ್ಥವು ಸಿಕ್ಕದಿರುವಾಗ ಕಳ್ಳನನ್ನು ವಧಿಸಬಾರದು. ಕಳುವಿನ ಪದಾರ್ಥವೂ ಉಪಕರಣಗಳೂ ಸಿಕ್ಕಿದೊಡನೆ ತಡ ಮಾಡದೆ ವಧಿಸಬೇಕು.

ಕಳ್ಳರಿಗೆ ಆಹಾರ ಕೊಡುವವರೂ ಅವರ ಸಾಮಾನುಗಳನ್ನಿಡಲು ಅವಕಾಶ ಕೊಡುವವರೂ ಗ್ರಾಮಗಳಲ್ಲಿದ್ದರೆ ಅವರೆಲ್ಲರನ್ನು ಮರಣ ದಂಡನೆಗೆ ಗುರಿ ಮಾಡಬೇಕು. ರಾಷ್ಟ್ರಗಳಲ್ಲಿ ರಾಜನಿಂದ ನಿಯಮಿಸಲ್ಪಟ್ಟ ಅಧಿಕಾರಿಗಳೂ ಸಾಮಂತ ರಾಜರೂ ಪ್ರಜೆಗಳ ಮನಸ್ಸನ್ನು ಕೆಡಿಸುತ್ತ ಶತ್ರುಗಳು ಮುತ್ತಿದಾಗ ಸಹಾಯಕ್ಕೆ ಬಾರದೆ ತಟಸ್ಥರಾಗಿದ್ದರೆ ಅಂತಹವರನ್ನು ಕಳ್ಳರಂತೆ ಪರಿಗಣಿಸಿ ಕೂಡಲೇ ಶಿಕ್ಷಿಸಬೇಕು.

ಗ್ರಾಮದಲ್ಲಿ ಅನಾಹುತ ಸಂಭವಿಸಿದಾಗ, ಮನೆಮಠಗಳಿಗೆ ಅಪಾಯ ಒದಗಿದಾಗ, ಮಾರ್ಗಸ್ಥರನ್ನು ಕಳ್ಳರನ್ನು ಮುತ್ತಿ ಸುಲಿಗೆ ಮಾಡುವಾಗ ತಮ್ಮ ಶಕ್ತಿಗೆ ತಕ್ಕಂತೆ ಮುಂದೆ ನುಗ್ಗಿ ಸಹಾಯ ಮಾಡದವರನ್ನು ರಾಜನು ಪರಿವಾರ ಸಮೇತವಾಗಿ ದೇಶದಿಂದ ಹೊರಡಿಸಬೇಕು. ಅರಸನ ಬೊಕ್ಕಸದಲ್ಲಿ ಕಳ್ಳತನ ಮಾಡುವವರು, ವಿರೋಧ ಪಕ್ಷಕ್ಕೆ ಸೇರಿದವರು,ಶತ್ರುಗಳಿಗೆ ಉಪಕಾರ ಮಾಡುವವರು, ಇವರೆಲ್ಲರನ್ನೂ ಚಿತ್ರ ಹಿಂಸೆಗಳಿಗೆ ಗುರಿಪಡಿಸಬೇಕು.

ಕೆರೆಯೊಡೆದವನನ್ನು ನೀರಿನಲ್ಲಿ ಮುಳುಗಿಸಿ ಕೊಲ್ಲಬೇಕು. ಜನರ ಮತ್ತು ಕರುಗಳ ಉಪಯೋಗಕ್ಕಾಗಿ ಕೂಡಿಟ್ಟಿರುವ ನೀರನ್ನು ನಿರರ್ಥಕವಾಗಿ ಬಿಟ್ಟು ಬಿಡುವದು, ಕೆರೆಗೆ ನೀರು ಬರುವ ಕಾಲುವೆಯನ್ನು ಒಡೆಯುವದು ಹೀಗೆ

ಮಾಡಿದವನಿಗೆ ಮೇಲೆ ಹೇಳಿದ ಶಿಕ್ಷೆಯನ್ನೇ ವಿಧಿಸಬೇಕು ಉಗ್ರಾಣ ಆಯುಧ ಶಾಲೆ, ದೇವಾಲಯ ಇವುಗಳನ್ನು ಒಡೆಯುವ ದುರ್ಮಾರ್ಗಿಗಳನ್ನು ಶೀಘ್ರವಾಗಿ ಘಾತಿಸಬೇಕು. ರೋಗಾದ್ಯುಪದ್ರವಗಳಿಲ್ಲದೆ ಸ್ವಸ್ಥವಾಗಿರುವ ರಾಜಮಾರ್ಗದಲ್ಲಿ ಮಲವಿಸರ್ಜನೆ ಮಾಡುವವನಿಗೆ ಕಾರ್ಷಾಪಣ ದಂಡ ಹಾಕಬೇಕು. ಮತ್ತು ಅವನಿಂದಲೇ ಮಲವನ್ನು ತೆಗೆದು ಹಾಕಿಸಿ ಆ ಸ್ಥಳವನ್ನು ಶುಚಿ ಮಾಡಿಸಬೇಕು.

ರಾಜ ಸಂಬಂಧವಾದ ಛತ್ರ, ಧ್ವಜದಂಡ, ಪ್ರತಿಮೆ ಇವುಗಳನ್ನು ಮುರಿದು ಹಾಕುವವರು ಅವುಗಳನ್ನು ಪುನಃ ಸರಿಪಡಿಸಬೇಕು. ಅಲ್ಲದೆ ಐದುನೂರು ಹಣ ದಂಡ ತರಬೇಕು. ನಿರ್ದುಷ್ಟವಾದ ವಸ್ತುಗಳನ್ನು ಕೆಡಿಸಲಿ ಅಥವಾ ರತ್ನಗಳನ್ನು ಒಡೆಯಲಿ ಅವನಿಗೆ ಸಾಧಾರಣ ದಂಡ ೨೭೦ ಕಾರ್ಷಾಪಣ ವಿಧಿಸಬೇಕು.

ಸಮಾನವಾದ ವಸ್ತುಗಳಿಗೆ ಬೆಲೆಯಲ್ಲಿ ವ್ಯತ್ಯಾಸವನ್ನು ಮಾಡತಕ್ಕವನಿಗೆ ಸಾಧಾರಣ ದಂಡ, ಯೋಗ್ಯತೆಯಲ್ಲಿ ಹೆಚ್ಚು ಕಡಿಮೆಯಿರುವ ವಸ್ತುಗಳಿಗೆ ಒಂದೇ ಬೆಲೆಯನ್ನು ಕಟ್ಟುವವನಿಗೆ ಮಧ್ಯಮ ದಂಡವನ್ನು ವಿಧಿಸಬೇಕು. ಸೆರೆ ಮನೆಗಳನ್ನೆಲ್ಲ ರಾಜಮಾರ್ಗದಲ್ಲಿ ನಿರ್ಮಿಸಬೇಕು. ರಾಜ ಶಾಸನಗಳನ್ನು ಮೀರಿ ನಡೆದವರು ವಿಕಾರವಾದ ರೂಪದಿಂದ ಕಷ್ಟಪಡುತ್ತಿರುವದು ಎಲ್ಲರಿಗೂ ಕಾಣುವಂತಿರಬೇಕು. ಕೋಟೆ, ಕಂದಕ, ಹೆಬ್ಬಾಗಿಲು ಇವುಗಳಿಗೆ ಅಪಾಯ ತರುವ ದುಷ್ಕರ್ಮಿಗಳನ್ನು ಒಡನೆ ಪಟ್ಟಣದಿಂದ ಹೊರಡಿಸಬೇಕು. ಯಕ್ಷಿಣಿ, ಮಾಟ ಮುಂತಾದವನ್ನು ಮಾಡಿ ಜನರನ್ನು ಮೋಸಗೊಳಿಸುವವರಿಗೆ ಇನ್ನೂರು ಹಣಗಳ ದಂಡ ಹಾಕಬೇಕು. ಒಪ್ಪಿಗೆಯಂತೆ ಬಿತ್ತನೆ, ಬೀಜವನ್ನೂ ಕಿತ್ತು ಹಾಕುವವನೂ ಬಾಂದುಗುಡ್ಡೆ, ಮತ್ತು ಗಡಿಯಲ್ಲಿ ಕಲ್ಲುಗಳನ್ನು ನಾಶ ಪಡಿಸುವವನೂ ಘೋರವಾದ ವಧೆಗೆ ಗುರಿಯಾಗಬೇಕು.

ಬೆಳ್ಳುಳ್ಳಿ, ಈರುಳ್ಳಿ, ಹಂದಿ, ಊರುಕೋಳಿ, ಹಂದಿ ಭಕ್ಷ್ಯಾರ್ಹವಲ್ಲವೆಂದು ಶಾಸ್ತ್ರಗಳಲ್ಲಿ ಹೇಳಿರುವ ಐದು ಉಗುರಿನ ಪ್ರಾಣಿಗಳು, ಇವುಗಳನ್ನು ತಿನ್ನುವ ಬ್ರಾಹ್ಮಣನನ್ನು ಓಡಿಸಿ ನಾಡಿನಿಂದ ಹೊರದೂಡಬೇಕು. ಭಕ್ಷಿಸುವದಕ್ಕೆ ಅನರ್ಹವಾದ ಪದಾರ್ಥಗಳನ್ನು ಭಕ್ಷಿಸಿದರೆ ಶೂದ್ರನಿಗೆ ಒಂದು, ಬ್ರಾಹ್ಮಣನಿಗೆ ನಾಲ್ಕು, ವೈಶ್ಯನಿಗೆ ಎರಡು, ಕ್ಷತ್ರಿಯನಿಗೆ ಮೂರು ಕೃಷ್ಣಲಗಳನ್ನು ದಂಡ ಹಾಕಬೇಕು. ಇತರರಿಂದ ಅಪರಾಧ ಮಾಡಿಸುವಾತನಿಗೆ ಅಪರಾಧಿಯ ಇಮ್ಮಡಿಯಾಗಿ ಶಿಕ್ಷೆ ಕೊಡಬೇಕು. ''ಎಷ್ಟಾದರೂ ಆಗಲಿ ನಾನು ಕೊಡುತ್ತೇನೆ'' ಎಂದು ಉಬ್ಬಿಸಿ, ಅಕೃತ್ಯ ಮಾಡಿಸುವವನು ನಾಲ್ಕರಷ್ಟು ಶಿಕ್ಷೆಯನ್ನು ಅನುಭವಿಸಬೇಕು. ಒಪ್ಪಿಕೊಂಡದ್ದನ್ನು ಕೊಡದವನು, ತಕ್ಕ ಅಧಿಕಾರವಿಲ್ಲದೆ ಮನೆಗೆ ಹಾಕಿದ ಮುದ್ರೆಯನ್ನು ಒಡೆಯುವವನು ಇವರಿಬ್ಬರಿಗೂ ರಾಜನು ಐವತ್ತು ಹಣಗಳ ದಂಡವನ್ನು ಹಾಕಬೇಕು.

ಅಸ್ಪೃಶ್ಯನನ್ನು ಮುಟ್ಟುವ ಉತ್ತಮ ವರ್ಣದವನು, ಯೋಗ್ಯನ ಕರ್ಮವನ್ನು ಮಾಡುವ ಅಯೋಗ್ಯನು, ಪಶುಗಳ ಪುಂಸ್ತ್ವವನ್ನು ನಿಷ್ಕಾರಣವಾಗಿ ತಪ್ಪಿಸುವವನು, ದಾಸಿಯ ಗರ್ಭವನ್ನು ವಿನಾಶ ಗೊಳಿಸುವವನು, ದೇವಕರ್ಮ, ಪಿತೃಕರ್ಮಗಳಲ್ಲಿ ಭ್ರಷ್ಟಭಿಕ್ಷುವಿಗೆ ಭೋಜನ ಮಾಡಿಸುವವನು, ಊಟಕ್ಕೆ ಬರುವುದಾಗಿ ಹೇಳಿ ಒಪ್ಪಿಕೊಂಡು, ನಿಷ್ಕಾರಣವಾಗಿ ಹೋಗದಿರುವವನು ಇವರೆಲ್ಲರಿಗೂ ರಾಜನು ಒಂದು

ನೂರು ಕಾರ್ಷಾಪಣ ದಂಡ ಹಾಕಬೇಕು. ಅಪಾಯವನ್ನುಂಟುಮಾಡುವ ಪದಾರ್ಥವನ್ನು ತಂದು ಮನೆಯಲ್ಲಿ ಇರಿಸುವಾತನಿಗೆ ಕೃಷ್ಣಲವನ್ನು ದಂಡ ವಿಧಿಸಬೇಕು. ತಂದೆ ಮಕ್ಕಳ ಜಗಳದಲ್ಲಿ ಸಾಕ್ಷಿಯಾಗಿ ಹೋಗತಕ್ಕವನು ಇನ್ನೂರು ಕಾರ್ಷಾಪಣ ದಂಡ ತೆರಬೇಕು. ಈ ಜಗಳವನ್ನು ಹೆಚ್ಚಿಸುವ ಸಲುವಾಗಿ ಮೂರನೆಯ ಮನುಷ್ಯನು ಪ್ರವೇಶಿಸಿದರೆ ಅವನು ಎಷ್ಟೇ ಪೂಜ್ಯನಾಗಿರಲಿ ಅವನಿಗೆ ಎಂಟುನೂರು ಕಾರ್ಷಾಪಣಗಳನ್ನು ದಂಡವನ್ನು ಹೊರಿಸಬೇಕು.

ತೂಕ, ಅಳತೆ, ಕಾನೂನು, ರತ್ನ ಇವುಗಳಲ್ಲಿ ಕೃತ್ರಿಮವನ್ನು ನಡೆಸುವಾತನಿಗೂ, ಇವನಿಗೆ ಸಹಾಯವಾಗಿರುವವನಿಗೂ ಉತ್ತಮ ದಂಡವನ್ನು ಎಂದರೆ ಒಂದು ಸಾವಿರ ಕಾರ್ಷಾಪಣ ದಂಡ ವಿಧಿಸಬೇಕು. ವಿಷ ಕೊಡುವವಳ, ಬೆಂಕಿ ಹಾಕುವವಳ, ಪತಿಯನ್ನೂ, ಗುರುಗಳನ್ನು ಮಕ್ಕಳನ್ನೂ ಕೊಲ್ಲುವವಳ ಮೂಗನ್ನು ತುಟಿಗಳನ್ನು ಕತ್ತರಿಸಿ ಅವಳನ್ನು ಎತ್ತುಗಳಿಂದ ತುಳಿಸಿ ಕೊಲ್ಲಿಸಬೇಕು. ಊರು, ಹೊಲ, ಗದ್ದೆ, ಮತ್ತು ಮನೆಗೆ ಬೆಂಕಿಯಿಡುವವರನ್ನು ರಾಜಪತ್ನಿಯಲ್ಲಿ ಸಮಾಗಮ ಮಾಡುವವರನ್ನೂ ಕಟ್ಟಾಗ್ನಿಯಿಂದ ಸುಡಬೇಕು.

ರಾಜಾಜ್ಞೆಯನ್ನು ಹೆಚ್ಚುಕಡಿಮೆಮಾಡಿ ಬರೆಯತಕ್ಕವನಿಗೂ, ಪರಸ್ತ್ರೀಯರನ್ನು ಅಪಹರಿಸಿದವನಿಗೂ ಒಂದು ಸಾವಿರ ಕಾರ್ಷಾಪಣ ದಂಡ ವಿಧಿಸಬೇಕು. ಭಕ್ಷ್ಯಾರ್ಹವಲ್ಲದ ದೂಷ್ಯವಸ್ತುವನ್ನು ಬ್ರಾಹ್ಮಣನಿಗೆ ಕೊಟ್ಟರೆ ಉತ್ತಮ ದಂಡವನ್ನೂ, ಕ್ಷತ್ರಿಯನಿಗೆ ಕೊಟ್ಟರೆ ಮಧ್ಯಮ ದಂಡವನ್ನೂ, ವೈಶ್ಯನಿಗೆ ಕೊಟ್ಟರೆ ಪ್ರಥಮ ದಂಡವನ್ನೂ, ಶೂದ್ರನಿಗೆ ಕೊಟ್ಟರೆ ಅರ್ಧ ದಂಡವನ್ನೂ ವಿಧಿಸಬೇಕು ಅಂದರೆ ಕ್ರಮವಾಗಿ ಸಾವಿರ, ಐದುನೂರು, ಇನ್ನೂರೈವತ್ತು, ನೂರಿಪ್ಪತ್ತೈದು ಕಾರ್ಷಾಪಣ ದಂಡ ವಿಧಿಸಬೇಕು.

ವಧಾರ್ಹನಲ್ಲದವನನ್ನು ವಧಿಸಿದರೆ ಎಷ್ಟು ದೋಷವೋ ವಧಾರ್ಹನನ್ನು ರಕ್ಷಿಸಿದರೂ ಅಷ್ಟೇ ದೋಷವು. ಈ ಎರಡರಿಂದಲೂ ರಾಜನಿಗೆ ಅಧರ್ಮವು ಪ್ರಾಪ್ತವಾಗುವದು. ಎಷ್ಟೇ ಪಾಪಗಳನ್ನು ಮಾಡಿರಲಿ ಬ್ರಾಹ್ಮಣನನ್ನು ಮಾತ್ರ ಕೊಲ್ಲಲೆ ಬಾರದು. ಎಲ್ಲ ಆಸ್ತಿಪಾಸ್ತಿಗಳೊಡನೆ ಅವನನ್ನು ರಾಷ್ಟ್ರದಿಂದ ಹೊರಕ್ಕೆ ಹೊರಡಿಸಬೇಕು. ಬ್ರಾಹ್ಮಣನನ್ನು ಎಂದಿಗೂ ವಧಿಸಬಾರದು. ಅದರಿಂದ ಬಹು ಪಾಪವು ಬರುತ್ತದೆ ಆದ ಕಾರಣ ಸಕಲ ಪ್ರಯತ್ನದಿಂದಲೂ ಬ್ರಹ್ಮಹತ್ಯೆಯನ್ನು ದೂರ ಮಾಡಬೇಕು.

ನಿರಪರಾಧಿಗಳನ್ನು ದಂಡಿಸುವವರಿಂದಲೂ ಅಪರಾಧಿಗಳನ್ನು ದಂಡಿಸದೇ ಬಿಡುವವರಿಂದಲೂ ರಾಜನಿಗೆ ಬಹಳ ಅಪಕೀರ್ತಿ ಬರುತ್ತದೆ, ನರಕ ಪ್ರಾಪ್ತಿ ಆಗುತ್ತದೆ. ಆದ್ದರಿಂದ ಅರಸನು ಮುಖ್ಯ ಅಪರಾಧ, ಅದನ್ನು ಮಾಡಿದ ಸಮಯ. ನ್ಯಾಯ ನಿರ್ಣಯಕ್ಕಾಗಿ ನಿಯಮಿಸಲ್ಪಟ್ಟ ನ್ಯಾಯಾಧೀಶರ ಅಭಿಪ್ರಾಯ. ಇವೆಲ್ಲವನ್ನು ವಿಮರ್ಶಿಸಿ ಅಪರಾಧಿಗಳಿಗೆ ದಂಡವನ್ನು ವಿಧಿಸಬೇಕು. ಪಾಪ ಪರಿಹಾರಕ್ಕಾಗಿ ಏನೇನು ಮಾಡಬೇಕೋ ಅದೆಲ್ಲವನ್ನೂ ಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು.*

## ರಾಜ ರಕ್ಷಣೆಯ ರಹಸ್ಯ ಸಾಧನೆಗಳು

**ಅಧ್ಯಾಯ - ೨೨೮**

**ಮನುರುವಾಚ :**

**"ರಾಜರಕ್ಷಾರಹಸ್ಯಾನಿ ಯಾನಿ ದುರ್ಗೇ ನಿಧಾಪಯೇತ್।**
**ಕಾರಯೇದ್ವಾ ಮಹೀಭರ್ತಾ ಬ್ರೂಹಿ ತತ್ವಾನಿ ತಾನಿ ಮೇ॥"**

**ಮನು:**- ರಾಜನ ರಕ್ಷಣೆಗಾಗಿ ಅವಶ್ಯವಾಗಿ ಬೇಕಾದ ಯಾವ ಯಾವ ರಹಸ್ಯ ಸಾಧನೆಗಳು ದುರ್ಗದಲ್ಲಿ ಇರಬೇಕು? ಅಥವಾ ಏರ್ಪಡಿಸಬೇಕು? ಅವುಗಳನ್ನು ನನಗೆ ಹೇಳು.

**ಮತ್ಸ್ಯ:**- ಎಲೈ ರಾಜನೇ, ಬಾಗೇ ಹೂ, ಅತ್ತಿಯ ಚಕ್ಕೆ ಇವುಗಳ ಚೂರ್ಣವನ್ನು ಮಾದಳದ ಹಣ್ಣಿನ ರಸದಲ್ಲಿ ಕಲಸಿ, ತುಪ್ಪದಲ್ಲಿ ಬೆರಸಿ ಹದಿನೈದು ದಿನಗಳು ಹಾಗೆಯೇ ಇಟ್ಟಿದ್ದು ಬಳಿಕ ಸೇವಿಸಿದರೆ ಹಸಿವನ್ನು ತಡೆಯುವ ಸಾಮರ್ಥ್ಯ ಉಂಟಾಗುವದು. ಕೊನ್ನಾರೆಗಡ್ಡೆ, ಅಂಕೋಲೆಬೇರು, ಕಬ್ಬಿನಬೇರು. ತಾವರೆದಂಟು ಇವುಗಳನ್ನು ಗರಿಕೆ, ಹಾಲು ಮತ್ತು ತುಪ್ಪಗಳಿಂದ ಸಿದ್ಧಪಡಿಸಿದ ಗಂಜಿಯಲ್ಲಿ ಒಂದು ತಿಂಗಳ ಕಾಲ ಇಟ್ಟಿದ್ದು ಸೇವನೆ ಮಾಡಿದರೆ ಶಸ್ತ್ರಘಾತವನ್ನು ಪಡೆದ ಮನುಷ್ಯನಿಗೆ ಮರಣವು ಬಾರದು.

ಕಲ್ಮಾಷವೇಣುವಿನಿಂದ (ಒಂದು ಜಾತಿಯ ಬಿದಿರ) ಅಗ್ನಿಯನ್ನು ನಿರ್ಮಿಸಿ ಅದನ್ನು ಮೂರು ಸಾರೆ ಅಪ್ರದಕ್ಷಿಣವಾಗಿ ಬಳಸಿತೆಂದರೆ ಆ ಮನೆಗೆ ಬೇರೆ ವಿಧವಾದ ಅಗ್ನಿ ಬಾಧೆ ಉಂಟಾಗದು. ಹಾವಿನ ಮೂಳೆಯನ್ನು ಪುಡಿಮಾಡಿ ಹತ್ತಿಯೊಡನೆ ಬೆರಸಿ ಮನೆಯಲ್ಲಿ ಅದರ ಹೊಗೆ ಹಾಕುತ್ತಿದ್ದರೆ ಹಾವು ಆ ಕಡೆಗೆ ಸುಳಿಯುವದಿಲ್ಲ. ಸಮುದ್ರದ ಉಪ್ಪು, ಯವಕ್ಷಾರ, ಸಿಡಿಲುಬಡಿಗೆ, ನೆಲದಮಣ್ಣು ಇವುಗಳನ್ನು ಬೆರಸಿ ನೆಲಕ್ಕೂ ಗೋಡೆಗೂ ಬಳಿದರೆ ಆ ಮನೆಗೆ ಬೆಂಕಿಯು ತಗಲುವದಿಲ್ಲ. ಕೋಟೆಯೊಳಗೆ ಬೆಂಕಿಯಿಂದ ಅನಾಹುತಗಳು ಆಗದಂತೆ ಹಗಲು ರಾತ್ರಿಯೂ ಎಚ್ಚರಿಕೆಯಿಂದ ಇರಬೇಕು. ಅದರಲ್ಲೂ ಗಾಳಿ ಬೀಸುವಾಗ ಬಹು ಜಾಗರೂಕರಾಗಿರಬೇಕು. ರಾಜನಿಗೆ ವಿಷದಿಂದ ಅಪಾಯ ವಾಗದಂತೆ ನೋಡಿಕೊಳ್ಳುವದು ಅವಶ್ಯಕ. ಅದರ ಯುಕ್ತಿಯನ್ನೇ ಹೇಳುವೆನು ಕೇಳು:

ರಾಜನು ಕ್ರೀಡಾರ್ಥವಾಗಿ ಮೃಗಗಳನ್ನೂ ಪಕ್ಷಿಗಳನ್ನೂ ಸಾಕಬೇಕು. ಊಟ ಮಾಡುವ ಮೊದಲು ಅನ್ನವನ್ನು ಬೆಂಕಿಯ ಮೂಲಕವೂ, ಮೃಗ ಪಕ್ಷಿಗಳಲ್ಲಿ ಒಂದರ ಮೂಲಕವೂ ಪರೀಕ್ಷಿಸಬೇಕು. ವಸ್ತ್ರ, ಪುಷ್ಪ, ಆಭರಣ, ಭೋಜನ, ಆಚ್ಛಾದನ ಇವುಗಳನ್ನು ಮೊದಲು ಪರೀಕ್ಷೆ ಮಾಡದೆ, ರಾಜನು ಕೈಯಿಂದ ಸಹ ಮುಟ್ಟಬಾರದು.

ವಿಷವನ್ನು ಹಾಕಿದವನ ಮುಖದಲ್ಲಿ ಸಂತಾಪವು ವ್ಯಕ್ತವಾಗುತ್ತದೆ. ಅವನ ಗಾಬರಿಯಿಂದ ನೋಡುತ್ತಾನೆ. ವಿಷವನ್ನು ಪರೀಕ್ಷೆಮಾಡುವದಕ್ಕೆ ತೊಡಗಿದಾಗಲಂತೂ ಅವನ ಸ್ಥಿತಿಯನ್ನು ಹೇಳತೀರದು. ಅವನು ಉಟ್ಟ ಬಟ್ಟೆ ಜಾರಿಬೀಳುತ್ತದೆ. ಮನಸ್ಸು ಪೆಚ್ಚಾಗುತ್ತದೆ. ಅವನು ಕಂಬದ ಹಿಂದೆ, ಅಥವಾ ಗೋಡೆಯ ಹಿಂದೆ ಅವಿತುಕೊಳ್ಳುತ್ತಾನೆ. ನಾಚಿಕೆಯಿಂದ ಚಡಪಡಿಸುತ್ತಾನೆ. ತಲೆಯನ್ನು ಪರಚಿಕೊಳ್ಳುತ್ತಾನೆ. ಕುತ್ತಿಗೆಯನ್ನು ಅಲುಗಾಡಿಸುತ್ತಾನೆ. ಮುಖವನ್ನು ಉಜ್ಜಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ನಡತೆಗೆ

ವಿರುದ್ಧವಾದ ಇನ್ನೂ ಎಷ್ಟೋ ವ್ಯಾಪಾರಗಳಲ್ಲಿ ತೊಡಗುತ್ತಾನೆ. ವಿಷಹಾಕುವವನಲ್ಲಿ ಕಾಣುವ ಇಂತಹಲಕ್ಷಣಗಳನ್ನು ಗಮನದಿಂದ ಪರೀಕ್ಷಿಸಬೇಕು.

ತಡಮಾಡದೆ ಆ ಅನ್ನವನ್ನು ಉರಿಯುವ ಬೆಂಕಿಯಲ್ಲಿ ಹಾಕಬೇಕು. ಆಗ ಕಾಮನ ಬಿಲ್ಲಿನ ಬಣ್ಣ ಉಂಟಾಗಿ ಭಯಂಕರ ಸಿಡಿತ ಉಂಟಾಗುವದು. ಜ್ವಾಲೆಯು ಒಂದು ಸಾರಿ ಸುತ್ತಿ ಕೆಟ್ಟವಾಸನೆ ಬರುವದು. ಚಟಚಟವೆಂದು ಸದ್ದಾಗುವದು. ಆ ಹೊಗೆಯನ್ನು ಕುಡಿದರೆ ತಲೆನೋವು ಬರುವದು, ಮೇಲಾಗಿ ವಿಷಬೆರೆತ ಅನ್ನದ ಮೇಲೆ ನೊಣಗಳು ಕುಳಿತುಕೊಳ್ಳುವುದಿಲ್ಲ. ಒಂದು ವೇಳೆ ಕುಳಿತರೆ ಕೂಡಲೆ ಸಾಯುವವು. ವಿಷಯುಕ್ತವಾದ ಪದಾರ್ಥವು ಗೋಚರಿಸಿದಾಗ ಚಕೋರಪಕ್ಷಿಯ ದೃಷ್ಟಿ ಕಳೆಗುಂದುತ್ತದೆ. ಅಲ್ಲದೆ ಕೋಗಿಲೆಯ ಧ್ವನಿಯು ವಿಕಾರವಾಗುತ್ತದೆ. ಹಂಸದ ನಡಿಗೆ ತಬ್ಬಿಬ್ಬಾಗುತ್ತದೆ. ದುಂಬಿ ಕೂಗಿಕೊಳ್ಳುತ್ತದೆ. ಹುಂಜವು ಅರಚಿ ಕೊಳ್ಳುತ್ತದೆ. ಕ್ರೌಂಚಕ್ಕೆ ಮದವೇರುತ್ತದೆ. ಗಿಳಿಯು ಗೋಳಿಡುತ್ತದೆ. ಸಾರಿಕೆಯು ವಾಂತಿಮಾಡುತ್ತದೆ, ಚಾಮೀಕರವು ಆ ಸ್ಥಳವನ್ನೇ ಬಿಟ್ಟು ಬೇರೆ ಕಡೆಗೆ ಓಡುತ್ತದೆ, ನೀರು ಕೋಳಿ ಕೂಡಲೇ ಸಾಯುತ್ತದೆ.

ರಾಜನೇ ವಿಷಮಿಶ್ರ ಆಹಾರ ಕಂಡಾಗ ಕಪಿಲ ಗೋವಿಗೆ ಮಲಮೂತ್ರಗಳಾಗುವವು. ಹೆಬ್ಬಕ್ಕಿ ಕಂದಿ ಹೋಗುತ್ತದೆ. ಮುಂಗಸಿಯ ಮೈಗೂದಲು ಏಳುತ್ತದೆ, ಜಿಂಕೆ ಅಳುತ್ತದೆ, ನವಿಲು ಹರ್ಷಗೊಳ್ಳುತ್ತದೆ, ವಿಷಮಿಶ್ರ ಆಹಾರವು ಪಕ್ವವಾಗ ಬೇಕಾದರೆ ಬಹಳ ಹೊತ್ತು ಹಿಡಿಯುತ್ತದೆ. ಅದನ್ನು ಬೆಳದಿಂಗಳಿನಲ್ಲಿ ಇಟ್ಟರೆ ಸ್ವಲ್ಪ ಹೊತ್ತಿನಲ್ಲಿ ರಸಗಂಧಹೀನವಾಗಿ ಹದಿನೈದು ದಿನಗಳ ತಂಗಳ ಅನ್ನದಂತೆ ನಾರುತ್ತದೆ. ರಾಜಾ ಅದರ ಸುದ್ದಿಯನ್ನು ಕೇಳುವದಕ್ಕೆ ಕೂಡ ಅಸಹ್ಯ ನಾಗುತ್ತದೆ.

ವಿಷ ಸಂಬಂಧವಾದಾಗ ವ್ಯಂಜನಗಳು ಒಣಗುವವು ದ್ರವವಸ್ತುಗಳಲ್ಲಿ ಗುಳ್ಳೆಗಳು ಏಳುವವು. ಉಪ್ಪು ಹಾಕಿದ ಪದಾರ್ಥಗಳ ಮೇಲೆ ನೊರೆ ಕಟ್ಟಿಕೊಳ್ಳುವದು. ವಿಷವು ತಗಲಿದರೆ ಸಸ್ಯಗಳು ಕೆಂಪೇರುವವು. ಹಾಲು ನೀಲವರ್ಣವಾಗುವದು. ಮದ್ಯ, ನೀರೂ ಕೊಗಿಲೆಯ ಬಣ್ಣದಂತೆ ಕಪ್ಪಾಗುವವು. ಗಂಜಿಯ ಬಣ್ಣವು ಕಪ್ಪೇರುವದು. ಹಾರಕದ ಅನ್ನವು ಗೋರೋಚನದ ವರ್ಣಕ್ಕೆ ತಿರುಗುವದು. ಮಜ್ಜಿಗೆಯು ಜೇನುತುಪ್ಪದಂತೆ ಎಳಗಪ್ಪಾಗವದು. ನೀಲ ಅಥವಾ ಹೊಂಬಣ್ಣವೂ ಆಗವದುಂಟು. ತುಪ್ಪಕ್ಕೆ ನೀರಿನ ಬಣ್ಣ ಬರುವದು. ಮೊಸರಿನ ಕೆನೆ ಪಾರಿವಾಳದ ಬಣ್ಣವನ್ನು ತಾಳವದು. ಜೇನುತುಪ್ಪವು ಹಸುರಾಗುವದು. ಎಣ್ಣೆ ಕೆಂಪಾಗುವದು.

ವಿಷಸಂಬಂಧವೊದಗಿದಾಗ ಹಸರು ಕಾಯಿಗಳು ಬೇಗನೇ ಮಾಗುತ್ತವೆ. ಮಾಗಿದಂತಹವು ಕಳಿತುಹೊಗುತ್ತವೆ. ಹೂಮಾಲೆ ಬಾಡುತ್ತದೆ. ಕಠಿನವಾದ ವಸ್ತುಗಳು ಮೃದುವಾಗುವವು. ಮೃದು ಪದಾರ್ಥಗಳು ಕಠಿನವಾಗುತ್ತವೆ. ಸೂಕ್ಷ್ಮವಾದ ಪದಾರ್ಥಗಳು ರೂಪವನ್ನು ಕಳೆದುಕೊಂಡು ಅಲ್ಪಕಾಲ ಬಾಳುವವು. ವಿಷವು ಬಟ್ಟೆಗಳ ಮೇಲೆ ಗುಂಡಗೆ ಕಪ್ಪಾದ ಮಚ್ಚೆಯಾಗುವದು ಲೋಹ ರತ್ನಗಳಿಗೆ ಕಿಲುಬು ತರುವದು. ಮೈಗೆ ಲೇಪಿಸಿಕೊಳ್ಳುವ ಗಂಧಾದಿವಸ್ತುಗಳು ಮತ್ತು ಹೂ ಮಾಲೆಗಳ ಪರಿಮಳವು ಬತ್ತಿ ಹೋಗುವವು. ಹೂ ಬಾಡುವದು. ನೀರು ಹೊಂಬಣ್ಣವಾಗುವದು.

ಹೊಟ್ಟೆಯೊಳಗೆ ವಿಷ ಸೇವಿಸಿದರೆ ಹಲ್ಲು, ತುಟಿ ಮತ್ತು ಚರ್ಮಗಳು ನೀಲವಾಗುವವು. ಶಕ್ತಿ ಕುಗ್ಗುವದು. ಮುಂತಾದ ಲಕ್ಷಣಗಳು ಕಾಣುತ್ತವೆ.

ಆದುದರಿಂದ ರಾಜನು ಮೇಲೆ ಹೇಳಿದ ಮಣಿ, ಮಂತ್ರ, ಮೂಲಿಕೆ ಮತ್ತು ಔಷಧಗಳಿಂದ ಆತ್ಮರಕ್ಷಣೆಯನ್ನು ಸದಾ ಮಾಡಿಕೊಳ್ಳುತ್ತಿರಬೇಕು. ಮೈಮರೆತಿರಬಾರದು. ಪ್ರಜೆಗಳೆಂಬ ಮರಕ್ಕೆ ರಾಜನೇ ಬೇರು. ಅವನು ಸುರಕ್ಷಿತವಾಗಿದ್ದರೆ ರಾಷ್ಟ್ರವು ವೃದ್ಧಿಗೆ ಬರುವದು. ಸೂರ್ಯವಂಶತಿಲಕನಾದ ಎಲೈ ಮನು ಚಕ್ರವರ್ತಿ, ಪ್ರತಿಯೊಬ್ಬ ಪ್ರಜೆಯೂ ರಾಜನನ್ನು ರಕ್ಷಿಸಲು ಪ್ರಯತ್ನಿಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರು ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು.*



## ತ್ರಿವಿಧ ಮಹೋತ್ಪಾತಗಳಿಗೆ ಶಾಂತಿ ವಿಧಾನವು

ಅಧ್ಯಾಯ - ೨೨೯

**ಮನುರುವಾಚ :**

**"ದಿವ್ಯಾಂತರಿಕ್ಷ ಭೌಮೇಷು ಯಾ ಶಾಂತಿರಭಿಧೀಯತೆ।**
**ತಾಮಹಂ ಶ್ರೋತುಮಿಚ್ಛಾಮಿ ಮಹೋತ್ಪಾತೇಷು ಕೇಶವ॥"**

**ಮನು** :- ದೈವಿಕ ಉತ್ಪಾತಗಳಲ್ಲಿ, ಅಂತರಿಕ್ಷ ಉತ್ಪಾತಗಳಲ್ಲಿ, ಭೂಲೋಕ ಸಂಬಂಧಿ ಉತ್ಪಾತಗಳಲ್ಲಿ ಮಾಡಬೇಕಾದ ಶಾಂತಿ ವಿಧಾನದ ಬಗ್ಗೆ ಶಾಸ್ತ್ರಗಳಲ್ಲಿ ಹೇಳಿದ್ದನ್ನು ಕೇಳಬೇಕೆಂದು ಇಚ್ಛಿಸುತ್ತೇವೆ. ಈ ತ್ರಿವಿಧ ಉತ್ಪಾತಗಳು ಸಂಭವಿಸಿದಾಗ ಯಾವ ಶಾಂತಿಯನ್ನು ಎಂತು ಆಚರಿಸಬೇಕು ಎಂಬುದನ್ನು ದಯವಿಟ್ಟು ತಿಳಿಸಬೇಕು.

ಮತ್ಸ್ಯ:- ಇನ್ನು ಮುಂದೆ ನೀನು ಕೇಳಿದ ಮೂರು ವಿಧವಾದ ವಿಶೇಷವಾಗಿ ಭೌಮಶಾಂತಿಯನ್ನೇ ಹೇಳುತ್ತೇನೆ ಕೇಳು: ಅಂತರಿಕ್ಷದ ಉತ್ಪಾತಗಳಲ್ಲಿ ಅಭಯಶಾಂತಿ ಮಾಡಬೇಕು. ದೈವಿಕ ಆಪತ್ತುಗಳಲ್ಲಿ ಸೌಮ್ಯಶಾಂತಿ ಮಾಡಬೇಕು. 'ಶತ್ರುಗಳನ್ನು ಗೆಲ್ಲಬೇಕು. ಐಶ್ವರ್ಯ ಪಡೆಯಬೇಕು.' ಎಂಬ ಇಚ್ಛೆಯುಳ್ಳ ರಾಜರು ಅಭಯಶಾಂತಿಯನ್ನು ನೆರವೇರಿಸಬೇಕು. ಇದರಂತೆ ಪರಚಕ್ರದ ದಾಳಿಯಾಗಿ ಶತ್ರುಗಳು ಯುದ್ಧಕ್ಕೆ ಬಂದಾಗ ಅಥವಾ ಅವರ ಅಭಿಚಾರ, ಮಾಟ, ಮಂತ್ರಾದಿಗಳನ್ನು ಪ್ರಯೋಗಿಸಿ ಸಂದೇಹ ಬಂದಾಗಲೂ ಈ ಅಭಯಶಾಂತಿ ಮಾಡುತ್ತಾರೆ. ಕ್ಷಯ ಮೊದಲಾದ ರೋಗಗಳಿಂದ ದೇಹವು ಕ್ಷೀಣವಾಗಿದ್ದರೆ, ಸೌಮ್ಯಶಾಂತಿಯನ್ನು ಮಾಡುವದು ಪ್ರಶಸ್ತ. ಯಜ್ಞ ಕಾರ್ಯ ಪ್ರಾರಂಭದಲ್ಲೂ ಸೌಮ್ಯಶಾಂತಿ ಮಾಡುತ್ತಾರೆ.

ಭೂಕಂಪ, ಬೆಳಗಳಹಾನಿ, ಅತಿವೃಷ್ಟಿ, ಕೀಟಗಳ ಉಪದ್ರವ, ಕ್ಷಾಮ, ಚೋರ ಉಪದ್ರವ ಹೆಚ್ಚಾದಾಗ ವೈಷ್ಣವೀಶಾಂತಿಯನ್ನು ಹೇಳಿದ್ದಾರೆ. ಮನುಷ್ಯರಿಗೂ, ಪಶುಗಳಿಗೂ ರೋಗ ಬಂದು, ಹಿಂಡಿದಂತಾಗಿ ಮರಣವು ಬರತೊಡಗಿದರೆ, ರೌದ್ರೀಶಾಂತಿಯನ್ನು ಮಾಡಬೇಕು. ದೇಶದಲ್ಲಿ ನಾಸ್ತಿಕ ಜನರು ಹೆಚ್ಚಾಗಿ ವೇದ ದ್ವೇಷವು ಬೆಳೆದರೆ ಹಾಗೂ ಜನರೆಲ್ಲರೂ ಅಪೂಜ್ಯನಾದ ದುಷ್ಟನನ್ನು

ಪೂಜಿಸತೊಡಗಿದರೆ ಬ್ರಾಹ್ಮೀಶಾಂತಿಯನ್ನು ಮಾಡಬೇಕು. ರಾಜ್ಯಾಭಿಷೇಕವು ಸನ್ನಿಹಿತವಾದಾಗ, ಪರಚಕ್ರವು ಬಾಧಿಸುವಾಗ, ರಾಷ್ಟ್ರದಲ್ಲಿ ಒಡಕು ಉಂಟಾದಾಗ, ಶತ್ರುಗಳ ಸಂಹಾರ ಸಂದರ್ಭವು ಬಂದಾಗ ರೌದ್ರೀಶಾಂತಿಯೇ ಪ್ರಶಸ್ತವಾದುದು. ಯಾವುದಾದರೂ ವಾತವಿಕಾರವಾದಾಗ, ವಾತಾವರಣ ದೂಷಿತವಾಗಿ ತಿನ್ನುವ ಪದಾರ್ಥಗಳೆಲ್ಲವೂ ದೂಷಿತವಾದಾಗ, ವಾಯವೀಶಾಂತಿಯನ್ನು ಮಾಡಬೇಕು. ಮಳೆಯಿಲ್ಲದೆ ಬರಬಿದ್ದಾಗ, ಮತ್ತು ಅಕಾಲವೃಷ್ಟಿಯಿಂದ ಜನರೆಲ್ಲರೂ ಸಂತ್ರಸ್ತರಾದಾಗ, ಜಲಾಶಯದಲ್ಲಿಯ ನೀರು ಕೆಟ್ಟುಹೋದಾಗ ವಾರುಣೀಶಾಂತಿ ಮಾಡಬೇಕು. ಅಭಿಶಾಪದ ಭಯವು ಪ್ರಾಪ್ತವಾದಾಗ ಭಾರ್ಗವೀಶಾಂತಿ, ಮನೆಯಲ್ಲಿ ಹೆಣ್ಣು ಮಕ್ಕಳಿಗೆ ಪ್ರಸೂತಿ ತೊಂದರೆಯಾದಾಗ ಪ್ರಾಜಾಪತ್ಯಶಾಂತಿ, ಮಕ್ಕಳಿಗೆ ಶಾಂತಿ ಆರೋಗ್ಯ ಲಾಭವಾಗಲು ಕೌಮಾರೀಶಾಂತಿ, ಬೆಂಕಿಯ ಅನಾಹುತ ತಪ್ಪಿಸಲು ಆಗ್ನೇಯಶಾಂತಿ ಮಾಡಬೇಕು.

ರಾಜರ ಅಜ್ಞಾಭಂಗವಾದಾಗ ಎಂದರೆ ಅವರ ಅಪ್ಪಣೆಯನ್ನು ಯಾರೂ ಕೇಳುದಂತಾದಾಗ ಮತ್ತು ಸೇವಕ ವರ್ಗದವರು ನಾಶ ಹೊಂದತೊಡಗಿದಾಗ ಮತ್ತು ಕುದುರೆಗಳ ತಳಿ ಬೆಳೆಯಬೇಕೆಂದು ಬಯಸಿದಾಗ, ಹಾಗೂ ಕುದುರೆಗಳಿಗೆ ರೋಗ ಬಂದಾಗ ಗಾಂಧರ್ವೀಶಾಂತಿಯನ್ನು ಹೇಳಿದ್ದಾರೆ. ಆನೆಗಳಿಗೆ ರೋಗಾದಿಗಳು ಬಂದಿದ್ದರೆ ಅವೆಲ್ಲವೂ ಪರಿಹಾರವಾಗಿ ತನ್ನ ಗಜಬಲಕ್ಕೆ ಶಾಂತಿ ಆರೋಗ್ಯ, ದೊರಕಬೇಕೆಂದು ಬಯಸುವವರು ಅಂಗೀರಸಶಾಂತಿಯನ್ನು ಮಾಡಬೇಕು. ಭೂತ ಪ್ರೇತ, ಪಿಶಾಚಾದಿಭಯ ಪರಿಹಾರಕ್ಕಾಗಿ ನೈಋತಿಶಾಂತಿ, ಅಪಮೃತ್ಯುವಿನ ಅಂಜಿಕೆ ದೂರಾಗಲಿಕ್ಕೆ, ಮತ್ತು ದುಃಸ್ವಪ್ನಗಳು ಬೀಳುವದನ್ನು ತಪ್ಪಿಸಲು ಯಾಮ್ಯಶಾಂತಿ, ಬಡತನ ಬಂದಾಗ ಕುಬೇರಶಾಂತಿ, ಮನೆಯಲ್ಲಿದ್ದ ದ್ರವ್ಯವು ಹಾಳಾಗುವ ಪ್ರಸಂಗದಲ್ಲಿ ಮತ್ತೆ ಐಶ್ವರ್ಯ ಪ್ರಾಪ್ತವಾಗ ಬೇಕೆಂಬ ಇಚ್ಛೆಯಿದ್ದರೆ ಪಾರ್ಥಿವಶಾಂತಿಯನ್ನು ವಿಧಿಪೂರ್ವಕವಾಗಿ ಮಾಡಿಸಬೇಕು.

ದಿವಸದ ಪ್ರಥಮ ಪ್ರಹರ ಅಥವಾ ರಾತ್ರಿಯಲ್ಲಿ ಹಸ್ತಾ, ಸ್ವಾತಿ, ಚಿತ್ರಾ, ಅಶ್ವಿನಿ ಮುಂತಾದ ನಕ್ಷತ್ರಗಳಿಂದ ಉತ್ಪಾತಗಳಾದರೆ ವಾಯವ್ಯಶಾಂತಿ ಮಾಡಬೇಕು. ದಿನದ ದ್ವಿತೀಯ ಯಾಮ ಅಥವಾ ರಾತ್ರಿಯಲ್ಲಿ ವಿಶಾಖಾ, ಭರಣಿ, ಮುಂತಾದ ನಕ್ಷತ್ರಗಳಲ್ಲಿ ಉತ್ಪಾತಗಳಾದರೆ ಆಗ್ನೇಯಶಾಂತಿ, ಮೂರನೆಯ ಯಾಮರಾತ್ರಿಕಾಲದಲ್ಲಿ ರೋಹಿಣಿ, ಜ್ಯೇಷ್ಠಾ, ಮುಂತಾದ ನಕ್ಷತ್ರಗಳಲ್ಲಿ ಉತ್ಪಾತವಾದರೆ ಐಂದ್ರೀ ಶಾಂತಿಯನ್ನು ಮಾಡಬೇಕು. ಹಗಲಿನ ನಾಲ್ಕನೆಯ ಯಾಮ ರಾತ್ರಿ ಆರಿದ್ರಾ, ಪುಷ್ಯ, ಮೂಲಾ ನಕ್ಷತ್ರಗಳಲ್ಲಿ ಉತ್ಪಾತವಾದರೆ ವಾರುಣೀಶಾಂತಿಯನ್ನು ಮಾಡಬೇಕು. ಕವಚ ತೊಟ್ಟುಕೊಂಡವರಿಗೆ ಬಾಣ ಪ್ರಹಾರದ ಅಂಜಿಕೆ ಇಲ್ಲದಿರುವಂತೆ ಶಾಂತಿ ಕರ್ಮ ಮಾಡುವರಿಗೆ ದೈವಿಕ ಆಪತ್ತುಗಳು ಬರುವದಿಲ್ಲ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಶಾಂತಿ ವಿಧಾನ ವರ್ಣನೆ ಶುಭಾಶುಭ ಶಕುನಗಳು | ಅಧ್ಯಾಯ - ೨೩೦

**ಮನುಃ ಉವಾಚ :**

**"ಅದ್ಭುತಾನಾಂ ಫಲಂ ದೇವಶಮನಂ ಚ ತಥಾ ವದ।**
**ತ್ವಂ ಹಿ ವೇತ್ಸಿ ವಿಶಾಲಾಕ್ಷ! ಜ್ಞೇಯಂ ಸರ್ವಮಶೇಷತಃ॥"**

**ಮನು :-** ಅದ್ಭುತಗಳ ಫಲ, ಮತ್ತು ಅವುಗಳ ಪರಿಹಾರಕವಾದ ಶಾಂತಿ ವಿಧಾನವನ್ನು ತಿಳಿದುಕೊಳ್ಳಬೇಕಾಗಿದೆ. ಅದೆಲ್ಲವನ್ನು ಬಲ್ಲ ಮೀನದೇವನೇ, ನೀನು ನನಗೆ ತಿಳಿಯುವಂತೆ ಹೇಳು.

**ಮತ್ಸ್ಯ:-** ಧಾರ್ಮಿಕರಲ್ಲಿ ಶ್ರೇಷ್ಠನಾದ ಮಹಾತೇಜಸ್ವಿ ಅತ್ರಿ ಮುನಿಯು ಸರಸ್ವತಿ ನದಿಯ ಪ್ರವಾಹದ ದಂಡೆಯ ಮೇಲೆ ಸುಖವಾಗಿ ಕುಳಿತುಕೊಂಡು ಮುನಿಜನ ಜನಪ್ರಿಯನಾದ ಗರ್ಗಯ ಋಷಿಯನ್ನು ಪ್ರಶ್ನೆ ಮಾಡಿದನು.

**ಅತ್ರಿ :-** ನಾಶ ಹೊಂದುತ್ತಿರುವ ಜನರ ಮತ್ತು ನಗರಗಳ ಪೂರ್ವ ಲಕ್ಷಣಗಳು ಹೇಗಿರುತ್ತವೆ ಎನ್ನುವುದನ್ನು ಹೇಳು?

**ಗರ್ಗ :-** ಮನುಷ್ಯರು ಮಾಡಿದ ಅಧರ್ಮ, ಅನಾಚಾರ, ಅಪಚಾರಗಳಿಂದ ದೇವತೆಗಳು ಕುಪಿತರಾಗುತ್ತಾರೆ. ಅದರಿಂದ ಉತ್ಪಾತಗಳು ಉಂಟಾಗುತ್ತವೆ. ದಿವ್ಯ, ಅಂತರಿಕ್ಷ, ಭೌಮ ಎಂದು ಈ ಉಪಸರ್ಗ, ಅಥವಾ ಉತ್ಪಾತಗಳು ಮೂರು ಬಗೆಯಾಗಿವೆ. ಗ್ರಹ, ನಕ್ಷತ್ರಗಳಲ್ಲಿ ಉಂಟಾಗುವ ವಿಕಾರವು ದಿವ್ಯ ಎನಿಸುವದು. ಉಲ್ಕಾಪಾತ, ದಿಕ್ಕುಗಳಲ್ಲಿ ಉರಿ, ಸೂರ್ಯ ಚಂದ್ರರಿಗೆ ಮಂಡಲ ಕಟ್ಟುವದು, ಗಂಧರ್ವನಗರ, ಅತಿವೃಷ್ಟಿ ಅಥವಾ ಅನಾವೃಷ್ಟಿ ಇವೆಲ್ಲವೂ ಅಂತರಿಕ್ಷದ ಉತ್ಪಾತಗಳು. ಭೂಕಂಪ, ಚರ, ಸ್ಥಿರ, ವಸ್ತುಗಳಿಗೆ ಆಗುವ ವಿಕಾರ, ಜಲಾಶಯಗಳಲ್ಲಿಯ ನೀರು ಕಲುಷಿತವಾಗುವದು ಇದೆಲ್ಲವೂ ಭೌಮ ಉತ್ಪಾತ ಎನಿಸುವದು. ಈ ಎಲ್ಲ ಅದ್ಭುತಗಳಿಗೆ ಶಾಂತಿ ವಿಧಾನವೇ ಉಪಾಯವಾಗಿದೆ.

ಈ ಅದ್ಭುತಗಳು ಒಮ್ಮೊಮ್ಮೆ ಋತುಮಾನಕ್ಕೆ ಅನುಸಾರವಾಗಿ ಶುಭಕಾರಕವೂ ಆಗಿರುತ್ತವೆ. ವಸಂತ ಋತುವಿನಲ್ಲಿ ಗಿಡಗಳಿಂದ ಅಂಟು ಸೋರುವದು, ಹಣ್ಣು ಹೂ ಕಾಯಿಗಳು ಚಿಗಿಯುವದು, ಹಸುಗಳು ಹೆಚ್ಚು ಹಾಲು ಹಿಂಡುವದು, ಹೂಗಳಲ್ಲಿ ಜೇನು ತುಳುಕುವದು ಶುಭಕರ: ಗ್ರೀಷ್ಮ ಋತುವಿನಲ್ಲಿ ಸೂರ್ಯ ಚಂದ್ರ ಮಂಡಲವು ತುಸು ಕಪ್ಪಾದರೆ, ಮುಗಿಲು ಕಪ್ಪು, ಬಿಳಿ, ಹಳದಿ ಬಣ್ಣವನ್ನು ತಳೆದರೆ, ನದಿಗಳಲ್ಲಿ ನೀರು ಒಣಗಿದರೆ ಶುಭ ಎಂದು ತಿಳಿಯಬೇಕು. ವರ್ಷಾಕಾಲದಲ್ಲಿ ಕಾಮನ ಬಿಲ್ಲು, ವಿದ್ಯುತ್ ಸ್ಫುರಣ, ಉಲ್ಕಾಪಾತ, ನದಿಗಳಲ್ಲಿ ನೀರಿನ ಸಮೃದ್ಧಿ ಇವೆಲ್ಲವೂ ಶುಭಕರ ಎನಿಸುತ್ತದೆ. ಹೇಮಂತಕಾಲದಲ್ಲಿ ತಣ್ಣಗಿನ ಗಾಳಿ, ಮೃಗ ಪಕ್ಷಿಗಳ ಕೂಗಾಟ ಅಶರೀರವಾಣಿ, ದಿಕ್ಕುಗಳಲ್ಲಿ ಹೊಗೆ, ಮೋಡ ಇವೆಲ್ಲ ಶುಭಕರ. ದಿವ್ಯಸ್ತ್ರೀರೂಪ

ವಿಮಾನ ಮುಂತಾದವುಗಳ ದರ್ಶನ, ಗ್ರಹನಕ್ಷತ್ರಗಳ ದರ್ಶನ, ಅಶರೀರವಾಣಿ, ಹಾಗೂ ಪರ್ವತಗಳಲ್ಲಿ ವಾದ್ಯ, ಸಂಗೀತ ಧ್ವನಿ, ಬೆಳೆಗಳ ಅಭಿವೃದ್ಧಿ ಇವು ಶರತ್ ಕಾಲದಲ್ಲಿ ಶುಭಕರವಾಗಿವೆ, ಶಿಶಿರ ಋತುವಿನಲ್ಲಿ ಹಿಮಪಾತ, ಬಿರುಗಾಳಿ, ಆಕಾಶದಲ್ಲಿ ಕಪ್ಪು ಬಣ್ಣ, ಸ್ತ್ರೀಯರಲ್ಲಿ ವಿಚಿತ್ರವಾದ ಗರ್ಭ ಉತ್ಪತ್ತಿ, ಎಲೆ, ಬಳ್ಳಿಗಳಲ್ಲಿ ಬದಲಾವಣೆ (ಬಣ್ಣ, ಆಕಾರಗಳಲ್ಲಿ), ಶುಭಕರವಾಗಿರುತ್ತವೆ. ಇವೆಲ್ಲವೂ ಋತುಪ್ರಭಾವ. ಇದಕ್ಕೆ ವಿಪರೀತವಾಗಿ ಅದ್ಭುತಗಳು ಏನಾದರೂ ಆಗುವದು ಕಂಡರೆ. ಶಾಸ್ತ್ರದಲ್ಲಿ ಹೇಳಿದಂತೆ ಕೂಡಲೇ ರಾಜರು ಶಾಂತಿಯನ್ನು ಮಾಡತಕ್ಕದ್ದು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡು ನೂರು ಮೂವತ್ತನೇಯ ಅಧ್ಯಾಯ ಮುಗಿದುದು*



## ಅಶುಭ ಶಕುನಗಳ ಶಾಂತಿ ವಿಧಾನ ವರ್ಣನೆ | ಅಧ್ಯಾಯ - ೨೩೧

**ಗರ್ಗ ಉವಾಚ:**

**"ದೇವತಾರ್ಚಾಃ ಪ್ರನೃತ್ಯಂತಿ ವೇಪಂತೇ ಪ್ರಜ್ವಲಂತಿ ಚ।**
**ವಮಂತ್ಯಗ್ನಿಂ ಸ್ನೇಹಧೂಮೌ ರಕ್ತಂ ಸ್ವೇದಂ ತಥಾ ವಸಾಮ್॥**

**ಗರ್ಗ :-** ದೇವಾಲಯದಲ್ಲಿರುವ ದೇವರ ಪ್ರತಿಮೆಗಳು ಒಮ್ಮೊಮ್ಮೆ ಕುಣಿಯುವದು, ನಡುಗುವದು, ಉರಿಯುವದು, ಕೆಂಡವನ್ನು ಉಗುಳುವದು, ಹೊಗೆ ಹಾಯುವದು, ರಕ್ತಸುರಿಸುವದು ಕಂಡುಬರುವದು. ಒಮ್ಮೊಮ್ಮೆ ಈ ದೇವ ಪ್ರತಿಮೆಗಳು ಅಳುವಂತೆ, ಬೆವತಂತೆ, ನಗುವಂತೆ, ಕುಳಿತಂತೆ, ಎದ್ದು ನಿಂತಂತೆ, ಓಡುವಂತೆ, ಉಬ್ಬಿದಂತೆ ತೋರುವದು. ಕೈಯಲ್ಲಿರುವ ಧ್ವಜಗಳನ್ನು ತೂರಾಡುವದು, ಕೆಳಗೆ ಮುಖಮಾಡುವದು. ಒಂದು ಸ್ಥಾನದಿಂದ ಇನ್ನೊಂದು ಸ್ಥಾನಕ್ಕೆ ಓಡಾಡುವದು. ಪ್ರತಿಷ್ಠಾಪಿಸಿದ ಲಿಂಗಗಳೂ ಕೂಡ ಒಮ್ಮೊಮ್ಮೆ ಸ್ಥಾನಪಲ್ಲಟ ಮಾಡುವವು. ಇಂತಹ ಗುಡಿಗಳಲ್ಲಿ ಯಾರೂ ವಾಸಮಾಡಬಾರದು. ಇದು ರಾಜರಿಗೆ ಅನಿಷ್ಟ. ರಾಷ್ಟ್ರಕ್ಕೆ ಅಶುಭ. ವಿನಾಶಸೂಚಕ, ದೇವರ ಮೆರವಣಿಗೆ ನಡೆದಾಗ ಏನಾದರೂ ಉತ್ಪಾತವು ಸಂಭವಿಸಿದರೆ ರಾಜ್ಯಕ್ಕೆ ಗಂಡಾಂತರ. ಇದಕ್ಕೆಲ್ಲ ಶಾಂತಿಯನ್ನು ಬಲ್ಲವರಿಂದ ಅವಶ್ಯ ಮಾಡಿಸಬೇಕು.

ರಾಜರಿಗೆ ಇಂತಹ ದುಃಶಕುನಗಳು ಲೋಕಪಾಲರ ವ್ಯಾಕೋಪದಿಂದ ಉಂಟಾಗುತ್ತವೆ. ಪಶುಗಳಿಗೆ ರುದ್ರದೇವರ ಕೋಪದಿಂದ ರೋಗ-ರುಜಿನಾದಿಗಳು ಬರುತ್ತವೆ. ಷಣ್ಮುಖನ ಕೋಪದಿಂದ ಸೇನಾಪತಿಗಳಿಗೆ ಅಳಿಗಾಲ ಬರುತ್ತದೆ. ಸೈನಿಕರಿಗೆ ವಿನಾಯಕನಿಂದ ಅನಿಷ್ಟ ಸಂಭವಿಸುವದು. ರಾಜಸ್ತ್ರೀಯರಿಗೆ ದೇವದೂತರ ಕೋಪದಿಂದ ಅಶುಭವು ಉಂಟಾಗುವದು. ಗಗನಕ್ಷೇತ್ರಗಳಿಗೆ ಹಾಗೂ ಉಳಿದ ಲೋಕಕ್ಕೆಲ್ಲ ಅನಿಷ್ಟವಾಗಲು ಮುಖ್ಯಕಾರಣ ಶ್ರೀ ವಿಷ್ಣುವಿನ ನಿಗ್ರಹ. ಅರ್ಥಾತ್ ಅನುಗ್ರಹದ ಅಭಾವ. ಅದಕ್ಕಾಗಿ ದೇವತಾ ಮೂರ್ತಿಗಳಲ್ಲಿ ಏನಾದರೂ ಇಂತಹ ವಿಕಾರಗಳು ಕಂಡು ಬಂದರೆ, ವೇದ, ಶಾಸ್ತ್ರ ಬಲ್ಲ ಪುರೋಹಿತರು ಸ್ನಾನ ಮಾಡಿ ಬಂದು,

ಮೂರ್ತಿಗಳಿಗೆ ಪಂಚಾಮೃತ ಸ್ನಾನಮಾಡಿಸಿ ಅನಂತರ ಶುದ್ಧೋದಕದಿಂದ ಅಭಿಷೇಕ ಅಲಂಕಾರ ಮಾಡಿ, ಹೂ, ಗಂಧ, ತುಳಸಿ ಏರಿಸಿ ವಿವಿಧ ಪಕ್ವಾನ್ನ ನೈವೇದ್ಯಮಾಡಿ ಭಕ್ತಿಯಿಂದ ಪೂಜೆ ಮಾಡಬೇಕು. ಏಳು ದಿನ ಹೋಮ ಹವನ ನಡೆಯಿಸಬೇಕು. ಮಧುರವಾದ ಬಗೆಬಗೆಯ ಮೃಷ್ಟಾನ್ನ ಭೋಜನ ಮಾಡಿಸಿ, ವಿಪ್ರಪಂಡಿತರನ್ನು ಪೂಜಿಸಬೇಕು. ವಿಪುಲವಾಗಿ ದಾನ ದಕ್ಷಿಣೆ ನೀಡಬೇಕು. ಹೀಗೆ ಏಳು ಹಗಲು, ಏಳು ರಾತ್ರಿ, ಪೂಜೆ, ಪುರಸ್ಕಾರ, ಯಜ್ಞ ಯಾಗ, ಧ್ಯಾನ, ಭಜನ, ಬ್ರಾಹ್ಮಣ ಸಮಾರಾಧನೆ ಮುಂತಾದವುಗಳನ್ನು ಮಾಡಿಸಿ, ಎಂಟನೆಯ ದಿನ, ಗೋದಾನ, ಭೂದಾನ, ಸುವರ್ಣದಾನಗಳನ್ನು ವಿಶೇಷವಾಗಿ ಮಾಡಬೇಕು. ಇದರಿಂದ ರಾಜರಿಗೂ, ರಾಜ್ಯಕ್ಕೂ ಬಂದ ಅನಿಷ್ಟವು ಶಾಂತವಾಗಿ ಶುಭೋದಯವಾಗುವದು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರು ಮೂವತ್ತೊಂದನೇಯ ಅಧ್ಯಾಯ ಮುಗಿದುದು.*

—o—

## ರಾಷ್ಟ್ರಕ್ಕೇ ಅನಿಷ್ಟ ಬಂದರೆ ಮಾಡಬೇಕಾದ ಶಾಂತಿವಿಧಾನ ವರ್ಣನೆ

ಅಧ್ಯಾಯ - ೨೩೨

**ಗರ್ಗ ಉವಾಚ:**

**ಅನಗ್ನಿ ದೀಪ್ಯತೇ ಯತ್ರ ರಾಷ್ಟ್ರೇ ವಹ್ನಿಃ ನಿರಿಂಧನಃ।**
**ನ ದೀಪ್ಯತೆ ಚೇಂಧನವಾನ್ ತದ್ರಾಷ್ಟ್ರಂ ಪೀಡ್ಯತೇ ನೃಪೈಃ ॥**

**ಗರ್ಗ :-** ಅಗ್ನಿಯಿಲ್ಲದೆ, ಸೌದೆಯಿಲ್ಲದೆ, ಬೆಂಕಿ ಉರಿಯತೊಡಗಿದರೆ, ಅಥವಾ ಸೌದೆ ಹಾಕಿದರೂ, ಬೆಂಕಿ ಹೊತ್ತದೆ, ಇದ್ದರೆ, ಅದು ರಾಷ್ಟ್ರಕ್ಕೆ ಅನಿಷ್ಟ, ರಾಜರಿಗೂ ಅಶುಭ. ಪ್ರಾಕಾರ, ತೋರಣ, ಬಾಗಿಲು, ಅರಮನೆ, ದೇವಸ್ಥಾನಗಳಿಗೆ ಉರಿ ಹತ್ತಿದರೆ ರಾಜರಿಗೆ ಅನಿಷ್ಟ. ಸಿಡಿಲು ಎರಗಿ, ನಗರದಲ್ಲಿ ಕಟ್ಟಡಗಳು ಹಾಳಾದರೂ, ರಾಜರಿಗೆ ಭಯ. ಹಗಲು ಹೊತ್ತಿನಲ್ಲಿ ಕತ್ತಲೆ, ಧೂಳು ಇಲ್ಲದೆ ಅಗ್ನಿ, ಮೋಡವಿಲ್ಲದ ಮುಗಿಲಿನಲ್ಲಿ ಮಿಂಚು, ಹಗಲು ಹೊತ್ತಿನಲ್ಲಿ ಮುಗಿಲಿನಲ್ಲಿ ನಕ್ಷತ್ರ ದರ್ಶನ. ಗ್ರಹ, ನಕ್ಷತ್ರಗಳು ವಿಕಾರವಾಗಿ ಕಂಡುಬಂದರೆ ಅಶುಭ. ಊರಿನಲ್ಲಿ ವಾಹನಗಳಲ್ಲಿ, ಹೊಗೆ ತುಂಬಿದಂತಾದರೆ ಅಪಶಕುನ. ಅಗ್ನಿಯಿಲ್ಲದೆ ಕಿಡಿ ಹಾರುವಿಕೆ, ಆಯುಧಗಳು ಮಣಿಯುವದು ಇದೆಲ್ಲವೂ ಯುದ್ಧದ ಸೂಚಕ. ಇದಕ್ಕಾಗಿ ಪುರೋಹಿತರು ಮೂರು ರಾತ್ರಿ ಉಪವಾಸವಿದ್ದು, ಕ್ಷೀರವೃಕ್ಷಗಳ ಸಮಿಧೆಗಳಿಗೆ ತುಪ್ಪಸವರಿ ಸಾಸಿವೆಗಳಿಂದ ವೇದಮಂತ್ರಉಚ್ಚರಿಸಿ, ಯಜ್ಞಮಾಡಬೇಕು. ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸಬೇಕು. ಹೊನ್ನು, ಹಸು, ಭೂಮಿ, ಬಟ್ಟೆ ಮುಂತಾದವುಗಳನ್ನು ಯಥಾ ಶಕ್ತಿದಾನ ಕೊಡಬೇಕು. ಇದರಿಂದ ಈ ಅಪಶಕುನಗಳಿಂದ ಆಗಬಹುದಾದ ಭಯಾಪಾಯಗಳು ಶಮನಗೊಳ್ಳುವವು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಮೂವತ್ತೆರನೆಯ ಅಧ್ಯಾಯ ಮುಗಿದುದು*

—o—

## ಪಟ್ಟಣಗಳ ಅನಿಷ್ಟಕ್ಕೆ ಶಾಂತಿ ವಿಧಾನ ವರ್ಣನೆ | ಅಧ್ಯಾಯ - ೨೩೩

**ಗರ್ಗ ಉವಾಚ:**

**ಪುರೇಷು ಯೇಷು ದೃಶ್ಯಂತೇ ಪಾದಪಾ ದೇವಚೋದಿತಾಃ**
**ರುದಂತೋ ವಾ ಹಸಂತೋ ವಾ ಸ್ರವಂತೋ ವಾ ರಸಾನ್ ಬಹೂನ್।**

**ಗರ್ಗ:-** ಯಾವ ಪಟ್ಟಣಗಳಲ್ಲಿ ಗಿಡಗಳು ಕಣ್ಣೀರು ಹಾಕಿದಂತೆ, ನಕ್ಕಂತೆ ತೋರುವವೋ ಅಥವಾ ನೀರನ್ನು ಇಲ್ಲವೆ, ಬಗೆ ಬಗೆಯ ರಸವನ್ನು ಸುರಿಸುವವೋ ಅಥವಾ ಯಾವ ರೋಗ ಇಲ್ಲದೆ ಗಾಳಿಯಿಲ್ಲದೆ ಟೊಂಗೆಗಳು ಮುರಿದು ಬೀಳುವವೋ ಅದು ಆ ಊರಿಗೆ ಅನಿಷ್ಟವೆಂದು ತಿಳಿಯಬೇಕು. ಮತ್ತು ಅಕಾಲದಲ್ಲಿ ಹಣ್ಣು, ಹೂ, ಕಾಯಿಗಳಾದರೆ, ಮತ್ತು ಗಿಡಗಳಿಂದ ಹಾಲು, ನೀರು, ರಕ್ತ, ಜೇನು ಒಸರಿದರೆ, ಇಲ್ಲವೆ ಯಾವ ರೋಗವೂ ಇಲ್ಲದೆ ವಯಸ್ಸಾಗದ, ಚಿಕ್ಕ ಚಿಕ್ಕ ಗಿಡಗಳು ಒಣಗಿಹೋದರೆ, ಅಥವಾ ಒಣಗಿ ಹೋದ ಮೋಟು ಮರಗಳು ಚಿಗಿತು ಬೆಳೆಯತೊಡಗಿದರೆ, ಅಪಶಕುನವೆಂದು ತಿಳಿಯಬೇಕು. ಇದರ ಫಲ ಪರಿಣಾಮಗಳನ್ನು ಹೇಳುತ್ತೇನೆ. ಗಿಡಗಳು ಅತ್ತಂತೆ ತೋರಿದರೆ ದೇಶದಲ್ಲಿ ಬೇನೆ ಹಬ್ಬುತ್ತದೆ. ನಕ್ಕಂತೆ ತೋರಿದರೆ ದೇಶಕ್ಕೆ ಅಪಾಯ. ಟೊಂಗೆಗಳು ತಾವಾಗಿ ಆಕಸ್ಮಿಕ ಮುರಿದು ಬಿದ್ದರೆ ಯುದ್ಧದಲ್ಲಿ ಆ ದೇಶದ ವೀರರು ನಾಶಹೊಂದುವರು. ಗಿಡವು ದೊಡ್ಡದಾಗದೆ ಹಣ್ಣು, ಹೂ ಕಾಯಿಗಳು, ಗಿಡದಲ್ಲಿ ಉಂಟಾದರೆ, ರಾಜ್ಯದಲ್ಲಿ ಮಕ್ಕಳ ಮರಣವು ಸಂಭವಿಸುವದು. ಗಿಡಗಳಿಂದ ಹಾಲು ಸುರಿದರೆ ಎಲ್ಲೆಡೆಗೂ ಕ್ಷಯ, ಎಣ್ಣೆ ಸುರಿದರೆ ದುರ್ಭಿಕ್ಷೆ ಉಂಟಾಗುವದು. ಮದ್ಯವು ಗಿಡಗಳಿಂದ ಸುರಿದರೆ ವಾಹನಗಳಿಗೆ ವಿನಾಶ. ರಕ್ತವು ಸೋರಿದರೆ, ಯುದ್ಧ. ಜೇನು ಹೊಮ್ಮಿದರೆ, ರೋಗ ಪ್ರಸಾರ, ನೀರು ಗಿಡದಿಂದ ಹರಿದರೆ ಅನಾವೃಷ್ಟಿ, ರೋಗ ವಿಲ್ಲದೆ ಗಿಡಗಳು ಸಿಡಿಹಾಯ್ದು ಒಣಗಿದರೆ ಬರಗಾಲ, ಮೋಟುಮರ ಮತ್ತೆ ಚಿಗಿತರೆ, ರಾಷ್ಟ್ರದಲ್ಲಿ ಒಡಕು. ಗಿಡಗಳು ಸ್ಥಾನಪಲ್ಲಟಮಾಡಿದರೆ ರಾಜ್ಯವು ಒಡೆದು ಇಬ್ಭಾಗವಾಗುವದು. ಗಿಡಗಳಲ್ಲಿ ಬೆಂಕಿ ಬಿದ್ದು ಉರಿಯಹತ್ತಿದರೆ, ಅಥವಾ ಅಳುವುದು ಕಂಡುಬಂದರೆ, ದ್ರವ್ಯನಾಶ. ಹಣ್ಣು,ಕಾಯಿ ಮುಂತಾದ ಗಿಡಗಳ ಫಲಗಳಲ್ಲಿ ಏನಾದರೂ ವಿಕಾರ ಉಂಟಾದರೆ ರಾಜರಿಗೆ ಮೃತ್ಯುಸೂಚಕ.

ಇಂತಹ ಸಂದರ್ಭಗಳಲ್ಲಿ ಈ ವೃಕ್ಷೋತ್ಪಾತಗಳಿಗೆ ಪರಿಹಾರ ರೂಪವಾಗಿ ಆ ಗಿಡಗಳನ್ನೆಲ್ಲ ಪೂರ್ಣ ಮುಚ್ಚಿ ಗಂಧ-ಮಾಲೆಗಳಿಂದ ಅಲಂಕರಿಸಬೇಕು. ಆ ಗಿಡಗಳ ಮೇಲೆ ಛತ್ರವನ್ನಿಟ್ಟು ಶಿವನನ್ನು ಪೂಜೆಮಾಡಬೇಕು. ಭಕ್ಷ್ಯಗಳನ್ನು ನಿವೇದಿಸಬೇಕು. ''ರುದ್ರ ಯೇಮಧ್ಯಾ'' ಎಂದು ವೃಕ್ಷಗಳಲ್ಲಿ ಹೋಮಮಾಡಿ ಅವನ್ನೇ ಬ್ರಾಹ್ಮಣರಿಗೆ ಬಡಿಸಿ, ಊಟಕ್ಕೆ ಹಾಕಬೇಕು. ಒಳ್ಳೇ ವಿದ್ವಾಂಸರಾದ ವಿಪ್ರರಿಗೆ ಭೂದಾನ ಮಾಡಬೇಕು. ಜನರ ಪಾಪಗಳಿಂದ ವೃಕ್ಷಗಳಲ್ಲಿ ಅನಿಷ್ಟ ಸೂಚಕವಾದ ಇಂತಹ ಅವಲಕ್ಷಣಗಳು ಕಂಡುಬರುತ್ತವೆ. ಈ ಲೋಕದ ಪಾಪ ಕಳೆಯಲಿಕ್ಕೆ ಮಹಾದೇವರನ್ನು ಗಿಡಗಳಲ್ಲಿ ಹೋಮ, ಹವನ, ಭೋಜನ, ಹಾಡು ಕುಣಿತ, ಭಜನ, ಧ್ಯಾನ, ಮುಂತಾದವುಗಳಿಂದ ಪೂಜಿಸಿ ಭಕ್ತಿಯಿಂದ ಶಿವಾರಾಧನೆ ಮಾಡಬೇಕು.

*ಶ್ರೀ ಮತ್ಸ್ಯಮಹಾಪುರಾಣದಲ್ಲಿ ಎರಡುನೂರು ಮೂವತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಅತಿವೃಷ್ಟಿ ಅನಾವೃಷ್ಟಿಗಳಿಗೆ ಶಾಂತಿವಿಧಾನ ವರ್ಣನೆ

ಅಧ್ಯಾಯ - ೨೩೪

**ಗರ್ಗ ಉವಾಚ:**

**"ಅತಿವೃಷ್ಟಿರನಾವೃಷ್ಟಿ: ದುರ್ಭಿಕ್ಷಾದಿ ಭಯಂ ಮತಮ್।**
**ಅನೃತೌ ತು ದಿವಾಽನಂತಾ ವೃಷ್ಟಿರ್ಜ್ಞೇಯಾ ಭಯಾನಕಾ॥"**

**ಗರ್ಗ :-** ಅತಿವೃಷ್ಟಿ, ಅನಾವೃಷ್ಟಿ ಬರಗಾಲ ಇವೆಲ್ಲವೂ ದೇಶಕ್ಕೆ ಭಯ ಸೂಚಕವಾಗಿವೆ. ಮಳೆಗಾಲ ಇಲ್ಲದಾಗ ಹಗಲುಹೊತ್ತು ಬಹಳ ಮಳೆ ಸುರಿಯುವದು ರಾಷ್ಟ್ರಕ್ಕೆ ಅಪಾಯ ಸೂಚಕ. ಮೋಡ ಇಲ್ಲದಾಗ, ಮಿಂಚು, ಗುಡುಗು ಕಂಡು ಬಂದರೆ ರಾಜರಿಗೆ ಮೃತ್ಯು. ಚಳಿಗಾಲದಲ್ಲಿ ಭಯಂಕರ ಸೆಕೆ, ಬೇಸಿಗೆಯಲ್ಲಿ ಚಳಿ ಇವೆರಡೂ ರಾಜರಿಗೆ ಶತ್ರುಭಯಸೂಚಕವಾಗಿವೆ. ರಕ್ತದ ಮಳೆಯಾದರೆ ಶಸ್ತ್ರಾಸ್ತ್ರಗಳಿಂದ ರಾಷ್ಟ್ರಕ್ಕೆ ಭಯ. ಕೆಂಡ ಅಥವಾ ಧೂಳಿಯ ಮಳೆಗರೆದರೆ ನಗರ ನಾಶ, ಮೂಳೆ, ಮಾಂಸ, ಮಜ್ಜಾ ಇವುಗಳ ಮಳೆಯಾದರೆ ಜನರಿಗೆ ಮರಣ ಭಯ. ಧೂಳು, ಮೋಡ ಯಾವುದೂ ಇಲ್ಲದೆ ಸೂರ್ಯನು ಕಾಣದಂತಾದರೆ, ಕಂಡರೂ ವಿಕೃತವಾಗಿ ಕಂಡರೆ ದೇಶಕ್ಕೆ ಭಯ. ಮೋಡವಿಲ್ಲದೆ ಮುಗಿಲಿನಲ್ಲಿ ರಾತ್ರಿ ಕಾಲದಲ್ಲಿ ಕಾಮನಬಿಲ್ಲು ಅಥವಾ ಉಲ್ಕಾಪಾತ, ದಿಗಂತಗಳಲ್ಲಿ ಉರಿ, ಅಥವಾ ಕಣಕಟ್ಟುವದು, ಗಂಧರ್ವನಗರ ಕಂಡಂತಾಗವದು, ಇವೆಲ್ಲ ಪರಚಕ್ರ ಭಯ ಮುಂತಾದವರು ದೇಶಕ್ಕೆ ಉಪದ್ರವ ಸೂಚಿಸುವವು. ಇದಕ್ಕಾಗಿ ಸೂರ್ಯ, ಚಂದ್ರ, ವರುಣ, ವಾಯು ಮುಂತಾದ ದೇವತೆಗಳನ್ನು ಉದ್ದೇಶಿಸಿ ಯಜ್ಞಯಾಗಮಾಡಿಸಬೇಕು. ಹಣ, ಹಸು, ಹೊನ್ನು ಮುಂತಾದವುಗಳನ್ನು, ಭೋಜನಹಾಕಿ ಬ್ರಾಹ್ಮಣರಿಗೆ ದಾನ ಕೊಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರಾ ಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಜಲಾಶಯಗಳ ಶಾಂತಿ ವಿಧಾನ ವರ್ಣನೆ

ಅಧ್ಯಾಯ - ೨೩೫

**ಗರ್ಗ ಉವಾಚ**

**"ನಗರಾದಪಸರ್ಪಂತೇ ಸಮೀಪಮುಪಯಾಂತಿ ಚ।**
**ನದ್ಯೋ ಹ್ರದಃ ಪ್ರಸ್ರವಾಣಿ ವಿರಸಾಶ್ಚ ಭವಂತಿ ಚ॥"**

**ಗರ್ಗ:-** ನದಿಗಳು, ಸರೋವರಗಳು, ಝರಿಗಳು ನಗರದಿಂದ ಬಹುದೂರಕ್ಕೆ ಸರಿಯುವದಾಗಲಿ, ಅಥವಾ ಪ್ರವಾಹ ಬದಲಿಸಿ ಊರನ್ನೇ ಕೊಚ್ಚಿಕೊಂಡು ಹೋಗುವಷ್ಟು ಸಮೀಪದಲ್ಲಿ ಹರಿಯುವದಾಗಲಿ, ಅಥವಾ ಜಲಾಶಯಗಳ ನೀರು ರುಚಿಕೆಟ್ಟು ಉಪ್ಪು ಅಥವಾ ಕಹಿಯಾಗುವದು ಒಳ್ಳೆಯ ಲಕ್ಷಣವಲ್ಲ. ಜಲಾಶಯಗಳಲ್ಲಿ ಹುಳಗಳಾಗಿ ಬಣ್ಣಗೆಟ್ಟು, ರಾಡಿಯಾಗಿ, ಬುರುಗುತುಂಬಿ, ಕುದಿದಂತಾಗಿ ಎಣ್ಣೆ ಬಸೆದು, ಹಾಲುತೇಲಿ,

ಮದ್ಯಕೂಡಿ, ಒಮ್ಮೊಮ್ಮೆ ರಕ್ತವು ಕೂಡ ಜಲಾಶಯಗಳಿಂದ ಹರಿಯುವದುಂಟು. ಹೀಗಾದರೆ ಆರು ತಿಂಗಳಲ್ಲಿ ಪರಚಕ್ರದ ದಾಳಿಯಾಗುವದೆಂದು ತಿಳಿಯಬೇಕು.

ಒಮ್ಮೊಮ್ಮೆ ಈ ಜಲಾಶಯಗಳು ಉರಿಯಹತ್ತಿದಂತೆ, ಗುಡುಗುಹಾಕಿದಂತೆ ಬೆಂಕಿಯ ಜ್ವಾಲೆಗಳನ್ನು ಚಾಚುವಂತೆ, ಹೊಗೆಯನ್ನೇ ಉಗುಳುವಂತೆ ಕಂಡುಬರುತ್ತವೆ. ಒಮ್ಮೊಮ್ಮೆ ನೀರಿನೊಳಗಿಂದ ಸಂಗೀತ ಶಬ್ದವೂ ಕೇಳಿಬರುವದುಂಟು. ಇದೆಲ್ಲವೂ ಜನರ ಮರಣಭಯಸೂಚಕ. ಇಂತಹ ಸಂದರ್ಭದಲ್ಲಿ ವರುಣದೇವನ ತಾರಕ ಮಂತ್ರ ಜಪಮಾಡಿ, ಜೇನುತುಪ್ಪ, ತುಪ್ಪ, ಎಳ್ಳು, ಇವುಗಳಿಂದ ನೀರಿನಲ್ಲಿಯೇ ಹೋಮ ಮಾಡಬೇಕು. ಅನಂತರ ತುಪ್ಪ, ಜೇನು, ಬೆರಿಸಿದ ಪರಮಾನ್ನವನ್ನು ದ್ವಿಜರಿಗೆ ಕೊಟ್ಟು ಭೋಜನಮಾಡಿಸಬೇಕು. ಬಿಳಿ ಬಟ್ಟೆ ಹೊದಿಸಿದ ಉದಕುಂಭಗಳನ್ನು ಹಾಗೂ ಗೋವುಗಳನ್ನು ನೀರಿನ ದೋಷ ಶಾಂತಿಗಾಗಿ ದಾನ ಮಾಡಬೇಕು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡು ನೂರಾ ಮೂವತ್ತೈದನೇಯ ಅಧ್ಯಾಯ ಮುಗಿದುದು*

—o—

## ಸ್ತ್ರೀಯರ ಅಕಾಲ ಪ್ರಸೂತಿಗೆ ಶಾಂತಿವಿಧಾನ ವರ್ಣನೆ

ಅಧ್ಯಾಯ - ೨೩೬

**ಗರ್ಗ ಉವಾಚ :**

**"ಅಕಾಲ ಪ್ರಸವಾ ನಾರ್ಯಃ ಕಾಲಾತೀತ ಪ್ರಜಾಸ್ತಥಾ।**
**ವಿಕೃತ ಪ್ರಸವಾಶ್ಚೈವ ಯುಗ್ಮ ಸಂಪ್ರಸವಾಸ್ತಥಾ॥**

**ಗರ್ಗ**:- ಸ್ತ್ರೀಯರು ದಿನ ತುಂಬುವದಕ್ಕಿಂತ ಮೊದಲೆ ಹಡೆದರೆ, ಅಥವಾ ಹತ್ತು ತಿಂಗಳು ಆದ ಬಳಿಕ ಮತ್ತೆ ತಡೆದು ಕೆಲ ದಿನಗಳ ಮೇಲೆ ಹಡೆಯತೊಡಗಿದರೆ, ದೇಶದ ತುಂಬ ಅವಳಿ ಮಕ್ಕಳೇ ಜನಿಸತೊಡಗಿದರೆ, ಅಥವಾ ವಿಕೃತ ಪ್ರಸೂತಿಯಾದರೆ ದೇಶಕ್ಕೆ ಅನಿಷ್ಟ. ಹುಟ್ಟಿದ ಕೂಸುಗಳಿಗೆ ಮನುಷ್ಯರಂತೆ ಆಕಾರವಿಲ್ಲದೆ ದೆವ್ವಗಳಂತೆ ಆಕಾರವಿದ್ದರೆ, ಅನಾರುಂಡವಾಗಿ ಹುಟ್ಟಿದರೆ, ಅಂಗಹೀನವಾಗಿ ಜನಿಸಿದರೆ, ಅಥವಾ ಆರು ಬೆರಳುಗಳು, ಮೂರು ಕಣ್ಣುಗಳು, ಎರಡು ತಲೆ ಹೀಗೆ ಅಧಿಕ ಅಂಗಾಗವುಳ್ಳವುಗಳಾಗಿ ಉದ್ಭವಿಸಿದರೆ ದೇಶದ ವಿನಾಶದ ಸೂಚನೆ ಆದಂತೆ. ಪಶು, ಪಕ್ಷಿ, ಅಥವಾ ಹಾವುಗಳಲ್ಲಿಯೂ ಹೀಗೆ ಉತ್ಪತ್ತಿಯಲ್ಲಿ ವಿಕಾರವು ಕಂಡು ಬಂದರೆ ಅದು ಕೂಡ ಅಶುಭವೇ ಸರಿ. ಅಂತಹ ವಿಕೃತ ಸೃಷ್ಟಿಯನ್ನು ನಗರದಿಂದ ಹೊರಗೆ ಸಾಗಿಸಿ. ಅಂತಹ ವಿಕೃತಜಂತುಗಳಿಗೆ ಜನ್ಮಕೊಟ್ಟ ತಾಯಂದಿರನ್ನು ಗೌರವಿಸಬೇಕು. ಒಂದೊಂದು ಸಲ ಮನುಷ್ಯಯೋನಿಯಿಂದ ಹಾವು, ಹಕ್ಕಿಗಳ ಸೃಷ್ಟಿಯಾಗುವದುಂಟು. ಇಂತಹ ವೈಪರೀತ್ಯಕ್ಕೆಲ್ಲ ವೇದೋಕ್ತ ಶಾಂತಿ ಕರ್ಮಗಳನ್ನು ನೆರವೇರಿಸಿ, ವಿಪ್ರಭೋಜನ, ದೇವತಾರಾಧನ, ದಾನ ಧರ್ಮಾದಿಗಳನ್ನು ಹಿಂದೆ ಹೇಳಿದಂತೆ ವಿಧಿಪೂರ್ವಕವಾಗಿ ನೆರವೇರಿಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಮೂವತ್ತಾರನೆಯ ಅಧ್ಯಾಯ ಮುಗಿದುದು.*

## ದೇಶಕ್ಕೆ ಅಪಾಯ ಬಂದಾಗ ಶಾಂತಿವಿಧಾನ ವರ್ಣನೆ

ಅಧ್ಯಾಯ - ೨೩೭

**ಗರ್ಗ ಉವಾಚ:**

**"ಯಾಂತಿ ಯಾನಾನ್ಯಯುಕ್ತಾನಿ ಯುಕ್ತಾನ್ಯಪಿ ನ ಯಾಂತಿ ಚ।**
**ಚೋದ್ಯಮಾನಾನಿ ತತ್ರಸ್ಯಾತ್ ಮಹದ್ ಭಯಮುಪಸ್ಥಿತಮ್॥**

ಗಾರ್ಗ್ಯ:- ಕುದುರೆಗಳನ್ನು ಹೂಡಿದರೂ ವಾಹನಗಳು ಮುಂದೆ ಹೋಗದಿದ್ದರೆ ಹೂಡದೇ ಇದ್ದಾಗ ತಾವಾಗಿ ಚಲಿಸತೊಡಗಿದರೆ, ಗಂಡಾಂತರ ಕಾದಿದೆ ಎಂದು ಭಾವಿಸಬೇಕು. ಚಲವು ಅಚಲವಾಗುವದು. ಅಚಲವು ಚಲಿಸುವದು ದುರ್ಲಕ್ಷಣ. ಮುಗಿಲಿನಲ್ಲಿ ಬಜಂತ್ರಿ ಬಾರಿಸಿದಂತೆ, ಗಂಧರ್ವರು ಹಾಡಿದಂತೆ, ಕಟ್ಟಿಗೆಗಳು ಹೊಡೆದಾಡಿದಂತೆ, ಖಡ್ಗ ಝಳಪಿಸಿದಂತೆ, ಸೌಟುಬಾರಿಸಿದಂತೆ ಸದ್ದಾದರೆ ಅನಿಷ್ಟ ಸೂಚನೆ. ಆಕಳುಗಳು, ಸ್ತ್ರೀಯರು, ಮೈ, ಕೈ, ಬಾಲ, ಬೆರಳುಗಳಿಂದ ಹೊಡೆದಾಡಿದರೆ, ದೇಶಕ್ಕೆ ಶಸ್ತ್ರದಿಂದ ಭಯವು ಬರುವದೆಂದು ತಿಳಿಯಬೇಕು. ಅಂತಹ ಸಂದರ್ಭದಲ್ಲಿ ವಾಯುದೇವರ ಪೂಜೆಮಾಡಿ, ಶಾಸ್ತ್ರದಲ್ಲಿ ಹೇಳಿದಂತೆ ಹೋಮ ಹವನ, ಮಂತ್ರ, ಜಪ, ದೇವಪೂಜೆ ಮುಂತಾದವುಗಳನ್ನು ನೆರವೇರಿಸಿ ಶಾಂತಿಹೋಮ ಮಾಡಿಸಿ ವಿಪುಲವಾಗಿ ವರಮಾನವನ್ನು ಕೊಟ್ಟು ಒಳ್ಳೇ ವಿಪ್ರರಿಗೆ ದಕ್ಷಿಣೆ ಕೊಡಬೇಕು. ಇದರಿಂದ ಬಂದ ಆಪತ್ತು ದೂರವಾಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಮೂವತ್ತೇಳನೆಯ ಅಧ್ಯಾಯ ಮುಗಿದುದು*



## ಎಲ್ಲವಿಧ ಅನಿಷ್ಟಸೂಚನೆಗಳ ಶಾಂತಿವಿಧಾನ ವರ್ಣನೆ

ಅಧ್ಯಾಯ - ೨೩೮

**ಗರ್ಗ ಉವಾಚ:**

**"ಪ್ರವಿಂಶತಿ ಯದಾ ಗ್ರಾಮಮಾರಣ್ಯ ಮೃಗ ಪಕ್ಷಿಣಃ।**
**ಅರಣ್ಯಂ ಯಾಂತಿ ವಾ ಗ್ರಾಮ್ಯಾಃ ಸ್ಥಲಂ ಯಾಂತಿ ಜಲೋದ್ಭವಾಃ"॥**

ಗಾರ್ಗ್ಯ:- ಅರಣ್ಯದಲ್ಲಿ ವಾಸಿಸುವ ಕ್ರೂರಪಶುಗಳು, ಕಾಡುಹಕ್ಕಿಗಳು ನಾಡಿನಲ್ಲಿ ಪ್ರವೇಶಿಸಿದರೆ, ಅಥವಾ ನಾಡಿನಲ್ಲಿ ನೆಲಸಿದ ಜಲಚರ, ಸ್ಥಲಚರ, ಪ್ರಾಣಿಗಳು ಊರುಬಿಟ್ಟು, ಕಾಡಿನಲ್ಲಿ ಹೊಕ್ಕರೆ, ಅವಲಕ್ಷಣ ಎಂದು ತಿಳಿಯಬೇಕು. ನೆಲದ ಮೇಲಿನ ಪ್ರಾಣಿಗಳು, ನೀರಿನಲ್ಲಿ ನೀರಿನಲ್ಲಿಯ ಪ್ರಾಣಿಗಳು ಮೇಲೆ ಬಂದು ಊರುಗಳಲ್ಲಿ ಹೊಕ್ಕು ಘೋರವಾಗಿ ಧ್ವನಿಗೈದರೆ, ಅರಮನೆಯ ಮುಂದೆ ಮತ್ತು ನಗರದ ಅಗಸೆಬಾಗಿಲದಲ್ಲಿ ನರಿಗಳು ಕೂಗಿದರೆ ಆ ಊರು ಬೇಗನೇ ಹಾಳಾಗುವದು. ಜನರೆಲ್ಲರೂ ಆ ಊರು ತ್ಯಜಿಸುವರು ಎಂದು ಸೂಚನೆ. ಸಾಯಂಕಾಲದಲ್ಲಿ ಕೋಳಿಯ ಕೂಗು, ಹೇಮಂತ ಋತುವಿನಲ್ಲಿ ಕೋಗಿಲೆ ಕುಕಿಲು, ಸೂರ್ಯೋದಯಕ್ಕೆ ನರಿಗಳ ಕೂಗಾಟ, ಮನೆಯಲ್ಲಿ ಕಾಡುಪ್ರಾಣಿಗಳ ಪ್ರವೇಶ, ತಲೆಯ ಮೇಲೆ ಕಾಗೆ ಕೂಡುವದು,

ಮನೆಯಲ್ಲಿ ಜೇನುನೊಣ ಗೂಡುಕಟ್ಟುವದು, ಯಜಮಾನನ ಮೃತ್ಯುಸೂಚಕವಾಗಿವೆ. ಮನೆಯ ಒಳಗೆ ಮತ್ತು ಮನೆಯ ಮುಂದೆ ಕಟ್ಟಿದ ತೋರಣದ ಮೇಲೆ ಧ್ವಜಗಳ ಮೇಲೆ, ಆಯುಧಗಳ ಮೇಲೆ ಕಾಗೆ ಬಂದು ಕುಳಿತು ಹೊಡೆದರೂ ಹೋಗದಿದ್ದರೆ, ಮನೆತುಂಬ ಹುತ್ತಗಳು ಹುಟ್ಟಿದರೆ, ಜೇಡ ಕಟ್ಟಿದರೆ, ಜೇನುಗೂಡಿನಿಂದ ಜೇನು ಹನಿದರೆ, ದೇಶಕ್ಕೆ ಅನಿಷ್ಟ. ರಾಜರಿಗೆ ಆಪತ್ತು.

ಊರಲ್ಲಿ ಇಲಿಗಳು ದೀಪದ ಹುಳುಗಳು ಬಹಳವಾಗಿ ಕಾಣಿಸಿಕೊಂಡರೆ, ನಗರದ ತುಂಬಾ ಹಸಿವೆಯ ಹಾಹಾಕಾರ ಎದ್ದರೆ, ಬಾಯಲ್ಲಿ ಉರಿಯುವ ಕೊಳ್ಳಿ, ಎಲುವು ಕೋಡನ್ನು ಕಚ್ಚಿಹಿಡಿದ ನಾಯಿ, ಕೋತಿಗಳು ಓಡಾಡಿದರೆ ದುರ್ಭಿಕ್ಷ ಸೂಚನೆ. ಕಾಗೆಗಳು ಬಾಯಲ್ಲಿ ಕಾಳುಗಳನ್ನು ಹಿಡಿದುಕೊಂಡು ಜನರ ಮೇಲೆ ಎರಗಿದರೆ ಯುದ್ಧ ಸೂಚನೆ. ಬಿಳಿಯ ಕಾಗೆ, ಭೋಗಮಾಡುವದನ್ನು ನೋಡಿದರೆ ರಾಜನಿಗೂ, ರಾಷ್ಟ್ರಕ್ಕೂ ವಿನಾಶದ ಭಯ. ಅರಮನೆಯ ಬಾಗಿಲ ಅಥವಾ ಮನೆಯ ಒಳಗಡೆ ಗೂಗೆ ಹೊಕ್ಕದ್ದು ಕಂಡರೆ ಯಜಮಾನನ ಸಾವು ಮತ್ತು ದೃಷ್ಟಿನಾಶ.

ಇಂತಹ ಪ್ರಸಂಗಗಳಲ್ಲಿ ಐದು ಮಂದಿ ಬ್ರಾಹ್ಮಣರನ್ನು ಕರೆದು ಜಪ ಮಾಡಿಸಿ, ಹೋಮ ಹವನಗಳನ್ನು ನೆರವೇರಿಸಿ, ಗೋದಾನ ನೀಡಬೇಕು. ವಿಧಿಪೂರ್ವಕವಾಗಿ ದ್ವಿಜರಿಗೆ ಜೋಡುವಸ್ತ್ರ, ಬಂಗಾರದಕ್ಷಿಣೆ ಮುಂತಾದವುಗಳನ್ನು ಕೊಟ್ಟು ಪೂಜಿಸಬೇಕು. ಇದರಿಂದ ಮೃಗ, ಪಕ್ಷಿಗಳಿಂದಾದ ಅನಿಷ್ಟವೂ ಅದರ ಮೂಲಕವಾದ ಪಾಪವು ಶಮನಗೊಂಡು ಶಾಂತಿ ದೊರಕುವದು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರು ಮೂವತ್ತೆಂಟನೇಯ ಅಧ್ಯಾಯ ಮುಗಿದುದು*

## ರಾಜರಾಷ್ಟ್ರಗಳ ಅಪಾಯಗಳಿಗೆ ಶಾಂತಿವಿಧಾನ ವರ್ಣನೆ

**ಅಧ್ಯಾಯ - ೨೩೯**

**ಗರ್ಗ ಉವಾಚ:**

**"ಪ್ರಾಸಾದ ತೋರಣಾಟ್ಟಾಲ ದ್ವಾರ ಪ್ರಾಕಾರವೇಶ್ಮನಾಮ್।**
**ನಿರ್ನಿಮಿತ್ತಂ ತು ಪತನಂ ದೃಢಾನಾಂ ರಾಜಮೃತ್ಯವೇ॥"**

**ಗರ್ಗ:-** ಅರಮನೆ, ತೋರಣ, ಊರಲ್ಲಿಯ ಬೇರೆ ಭವ್ಯ ಕಟ್ಟಡ, ಅಟ್ಟ, ಬಾಗಿಲು, ಬುರುಜು, ಮುಂತಾದವುಗಳು ಗಟ್ಟಿಯಿದ್ದು, ಯಾವ ಕಾರಣವಿಲ್ಲದೆ ಬೀಳ ತೊಡಗುವದು, ರಾಜರ ಮರಣ ಸೂಚಕವಾಗಿದೆ. ಹುಡಿ, ಹೊಗೆ, ಧೂಳುಗಳಿಂದ ದಿಕ್ಕುಗಳೆಲ್ಲ ತುಂಬಿ ಹೋಗಿ ಸೂರ್ಯ, ಚಂದ್ರ, ನಕ್ಷತ್ರಗಳು ಕಳೆಗೆಟ್ಟಂತೆ ಕಂಡರೆ ಮಹಾಭೀತಿ. ಬ್ರಾಹ್ಮಣರು ಧರ್ಮಾಂತರಮಾಡಿ ರಾಕ್ಷಸರಂತಾದರೆ, ದೇಶಕ್ಕೆ ಅನಿಷ್ಟ ಬೇಸಿಗೆಯಲ್ಲಿ ಋತುಗಳು ವಿಪರೀತವಾಗಿ, ಮಳೆಗಾಲದ ಲಕ್ಷಣ, ಬೇಸಿಗೆಯ ಸೆಕೆ ಮಳೆಗಾಲದಲ್ಲಿ, ಚಳಿಗಾಲದಲ್ಲಿ ಬಿಸಿಲಿನ ಝಳ ಇವೆಲ್ಲವೂ ಅನಿಷ್ಟ ಸೂಚಕ. ದುಷ್ಟರಿಗೆ ಗೌರವ ಪ್ರಾಪ್ತವಾದರೆ, ವಿನಾಶಕಾಲ ಸಮೀಪಿಸಿದೆ ಎಂದರ್ಥ. ನಕ್ಷತ್ರಗಳು

ಒಂದಕ್ಕೊಂದು ಸಿಡಿದರೆ, ಧೂಮಕೇತವು ಉದಿಸಿದರೆ, ಚಂದ್ರ ಸೂರ್ಯಮಂಡಲದಲ್ಲಿ ಛಿದ್ರಕಂಡರೆ, ಅನಿಷ್ಟಕಾದಿದೆ ಎಂದು ತಿಳಿಸಬೇಕು.

ಸ್ತ್ರೀಯರಲ್ಲಿ ಪರಸ್ಪರ ಹೊಡೆದಾಟ, ಬಾಲಕರಲ್ಲಿ ಬಡಿದಾಟ. ಧರ್ಮಕಾರ್ಯಗಳ ವಿಚ್ಛೇದ, ಹೋಮಾಗ್ನಿಯ ಆಕಸ್ಮಿಕ ಶಾಂತಿ, ಉತ್ತರ ದಿಕ್ಕಿನಲ್ಲಿ ಇರುವೆಗಳ ಪ್ರಯಾಣ, ಪೂರ್ಣ ಕುಂಭಗಳ ಸೋರುವಿಕೆ, ಯಜ್ಞದ ಹವಿರ್ಭಾಗಗಳ ಕಳವು, ಅಮಂಗಳ ಧ್ವನಿ ಅವಲಕ್ಷಣ. ಮತ್ತು ದೇವಾಲಯಗಳಲ್ಲಿ ಬಾರಿಸಿದರೂ ವಾದ್ಯಗಳಿಂದ ಧ್ವನಿ ಹೊರಡದಿರುವಿಕೆ, ಇವೆಲ್ಲವೂ ಬರಲಿರುವ ದೇಶದ ಉತ್ಪಾತಗಳನ್ನು ಸೂಚಿಸುತ್ತವೆ.

ಗುರುಗಳ ತಿರಸ್ಕಾರ, ಮಿತ್ರದ್ವೇಷ,ವೈರಿಗಳ ಪೂಜೆ, ಬ್ರಹ್ಮದ್ವೇಷ, ನಾಸ್ತಿಕ್ಯ, ಶಾಂತಿಯಜ್ಞ ಮುಂತಾದ ಧರ್ಮಕಾರ್ಯಗಳಲ್ಲಿ ಶ್ರದ್ಧೆಯ ಅಭಾವ, ಗುರು ಹಿರಿಯರ ನಿಂದೆ ಇವು ಪ್ರಚುರವಾಗಿ ದೇಶದಲ್ಲಿ ನಡೆದರೆ ಆ ದೇಶವಾದರೂ ಹಾಳಾಗುವದು, ಇಲ್ಲವೆ ಆ ದೇಶದ ಅರಸನಾದರೂ ಸಾಯುವನು.

ರಾಜರ ವಿನಾಶವು ಅನೇಕಬಗೆಯಾಗಿ ಮುಂಗಡ ಸೂಚನೆಯನ್ನು ಕೊಡುತ್ತದೆ. ರಾಜರಿಗೆ ವಿನಾಶಕಾಲ ಬಂದಾಗ ಮೊದಲು ಬ್ರಹ್ಮದ್ವೇಷ ಉಂಟಾಗುತ್ತದೆ. ಜೊತೆಗೆ ವಿರೋಧವೂ ಬೆಳೆಯುತ್ತದೆ. ತತ್ವಜ್ಞಾನಿಗಳನ್ನೆಲ್ಲ ಹಿಂಸೆಮಾಡಿ, ಅವರ ದ್ರವ್ಯವನ್ನು ರಾಜರು ಅಪಹರಿಸುತ್ತಾರೆ. ಧರ್ಮಕಾರ್ಯಗಳಲ್ಲಿ ವಿದ್ವಾಂಸರನ್ನು ನೆನೆಯುವದೇ ಇಲ್ಲ. ಏನಾದರೂ ಬೇಡಿದರೆ ಸಿಟ್ಟಿಗೇಳುತ್ತಾರೆ. ಪಂಡಿತರನ್ನು ನಿಂದಿಸುವದರಲ್ಲೆ ಅರಸರಿಗೆ ಆನಂದ. ಅವರ ಒಳ್ಳೆಯ ಮಾತುಗಳನ್ನು ಕೇಳುವದಿಲ್ಲ. ಜನರ ಮೇಲೆ ಹೊಸ ಹೊಸ ಕರಗಳನ್ನು ಹೇರಿ ಪ್ರಜೆಗಳಿಗೆಲ್ಲ ಉಪದ್ರವಕೊಡಲು ಆರಂಭಿಸುತ್ತಾರೆ. ಇವೆಲ್ಲವೂ ರಾಜರ ಮುಂದಿನ ವಿನಾಶ ಪೂರ್ವದ ಚಿಹ್ನೆಗಳಾಗಿವೆ. ದುರ್ದೈವದಿಂದ ರಾಜರಿಂದ ಇಂತಹ ದುಷ್ಕೃತ್ಯಗಳು ನಡೆದು ಅವರ ವಿನಾಶಕಾಲವು ಒದಗಿಬಂದಾಗ ಅವರಿಗೆ ಸದ್ಬುದ್ಧಿ ಹುಟ್ಟಿ ಪಶ್ಚಾತ್ತಾಪ ಎನಿಸಿದರೆ ಪ್ರಾಯಶ್ಚಿತ್ತ ರೂಪವಾಗಿ ಶಚಿ ಮತ್ತು ಇಂದ್ರ ದಂಪತಿಗಳನ್ನು ಪೂಜೆ ಮಾಡಬೇಕು. ದೇವತೆಗಳಿಗೆ ಬಲಿ ನೀಡಬೇಕು. ವಿವಿಧ ಭಕ್ಷ್ಯಭೋಜ್ಯ ನೈವೇದ್ಯಮಾಡಿ ದೇವರಿಗೆ ನಿವೇದಿಸಬೇಕು. ಸಜ್ಜನರನ್ನು ಗೌರವಿಸಬೇಕು. ಬ್ರಾಹ್ಮಣರನ್ನು ಗೌರವಿಸಬೇಕು. ಅವರಿಗೆ ದಾನ ದಕ್ಷಿಣೆ ನೀಡಬೇಕು. ಗೋದಾನ, ಭೂದಾನ, ವಸ್ತ್ರದಾನ ಮುಂತಾದವುಗಳನ್ನು ಮಾಡಿ ಹೋಮಕಾರ್ಯ ನೆರವೇರಿಸಿ, ದೇವತಾಪೂಜೆಯನ್ನು ಭಕ್ತಿಯುಕ್ತನಾಗಿ ಮಾಡಬೇಕು. ಇದರಿಂದ ಪಾಪಕಾರ್ಯಗಳಿಂದ ಅವರಿಗೆ ಬಂದ ಅನಿಷ್ಟವು ಪರಿಹಾರವಾಗಿ ಸೌಖ್ಯವು ದೊರಕುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಗ್ರಹ ಯಜ್ಞಾದಿಗಳ ವಿಧಾನ ವರ್ಣನೆ

**ಅಧ್ಯಾಯ - ೨೪೦**

**ಮನುರುವಾಚ :**

**ಗ್ರಹಯಜ್ಞಃ ಕಥಂ ಕಾರ್ಯೋ ಲಕ್ಷ ಹೋಮಃ ಕಥಂ ನೃಪೈಃ ।**
**ಕೋಟಿ ಹೋಮೋಽಪಿ ವಾ ದೇವ! ಸರ್ವಪಾಪ ಪ್ರಣಾಶನಃ ॥''**

**ಮನು** :- ಗ್ರಹಯಜ್ಞ ಹೇಗೆ ಮಾಡಬೇಕು? ರಾಜರು ನೆರವೇರಿಸುವ ಸರ್ವಪಾಪ ಪರಿಹಾರ ಮಾಡುವ ಲಕ್ಷ ಹೋಮ, ಕೋಟಿಹೋಮಗಳ ವಿಧಿವಿಧಾನಗಳನ್ನು ಶಾಸ್ತ್ರೋಕ್ತವಾಗಿ ತಿಳಿಸು.

**ಮತ್ಸ್ಯ**:- ಲಕ್ಷ ಹೋಮಗಳಿಂದ ಕೂಡಿದ ಗ್ರಹಯಜ್ಞವನ್ನು ಎರಡು ನದಿಗಳ ಸಂಗಮ ಕ್ಷೇತ್ರದಲ್ಲಿ ಅಥವಾ ದೇವಮೂರ್ತಿಗಳ ಎದುರು ಸಮನಾದ ಭೂಭಾಗದಲ್ಲಿ ನೆರವೇರಿಸಬೇಕು. ಗುರುಗಳನ್ನು ಪುರೋಹಿತರನ್ನು ಕರೆತಂದು ಭೂಮಿಯನ್ನು ಪರೀಕ್ಷಿಸಿ ಯೋಗ್ಯವಾದ ನೆಲವನ್ನು ಆಯ್ಕೆ ಮಾಡಬೇಕು. ಚಚ್ಚೌಕಾರದ ಒಂದು ಮೊಳ ಅಳತೆಯುಳ್ಳ ಅಗ್ನಿಕುಂಡತೆಗೆಯಬೇಕು. ಲಕ್ಷ ಹೋಮವಾದರೆ ಎರಡು ಮೊಳ. ಕೋಟಿ ಹೊಮವಾದರೆ ಎಂಟು ಮೊಳ ಉದ್ದವಾದ ಅಗಲವಾದ ಹೋಮ ಕುಂಡ ನಿರ್ಮಿಸಬೇಕು. ವೇದಪಾರಂಗತರಾದ ಎಂಟು ಜನ ಋತ್ವಿಜರನ್ನು ನಿಯಮಿಸಬೇಕು. ಪುರೋಹಿತರೆಲ್ಲರೂ ಗಡ್ಡೆ, ಗೆಣಸು, ಹಣ್ಣುಹಂಪಲು, ಹಾಲು, ಮೊಸರು ತಿಂದು, ಊಟ ಬಿಟ್ಟು ಯಜ್ಞಕಾರ್ಯ ಮಾಡಿಸಬೇಕು. ವೇದಿಕೆಯ ಮೇಲೆ ವಿವಿಧ ರತ್ನಗಳನ್ನು ಇರಿಸಬೇಕು. ನೆರಳಿನ ಪರಿವೇಷವನ್ನು ಕಟ್ಟಿ, ಅಗ್ನಿಯನ್ನು ಮಂತ್ರದಿಂದ ಉದ್ದೀಪನಗೈಯಬೇಕು. ಗಾಯತ್ರಿಯಿಂದ ಹತ್ತು ಸಾವಿರ ಹೋಮ ಮಾಡಬೇಕು. ಆರು ಸಾವಿರ, 'ಮನಸ್ತೋಕೇ' ಎಂಬ ಮಂತ್ರದಿಂದಲೂ ಮೂವತ್ತು ಸಾವಿರ ಗ್ರಹಾದಿ ಮಂತ್ರಗಳಿಂದಲೂ ಐದು ಸಾವಿರ ಕೂಷ್ಮಾಂಡ ಮಂತ್ರಗಳಿಂದಲೂ, ಹದಿನಾರು ಸಾವಿರ ಕುಸುಮಾದಿಗಳಿಂದಲೂ, ಹತ್ತುಸಾವಿರ ಬಾದಿರಾಜಗಳಿಂದಲೂ, ಹದಿನಾಲ್ಕು ಸಾವಿರ ಶ್ರೀಸೂಕ್ತಗಳಿಂದಲೂ, ಐದುಸಾವಿರ ಇಂದ್ರ ಸೂಕ್ತಗಳಿಂದಲೂ ಒಟ್ಟು ಒಂದು ಲಕ್ಷ ಹೋಮ ಮಾಡಬೇಕು.

ಹೀಗೆ ಲಕ್ಷ ಹೋಮಮಾಡಿ; ಹದಿನಾರು ಕೊಡಗಳಲ್ಲಿ ಬಂಗಾರ ಮಂತ್ರಾಕ್ಷತೆಗಳನ್ನು ಹಾಕಿ ಆ ಪೂರ್ಣ ಕಲಶಗಳಿಂದ ಋತ್ವಿಜರು ಯಜಮಾನನಿಗೆ ಪುಣ್ಯಸ್ನಾನ ಮಾಡಿಸಬೇಕು. ಈ ತರಹದ, ಶಾಂತಿಕಾರ್ಯದಿಂದ ಯಜಮಾನನಿಗೆ ಬಂದಿರುವ ಗ್ರಹಾದಿ ಪೀಡೆಗಳೆಲ್ಲ ನಾಶವಾಗಿ ಅವನಿಗೆ ಶಾಂತಿ ಸಂತಸಗಳು ಉಂಟಾಗುವವು. ಈ ಲಕ್ಷಯಜ್ಞದಲ್ಲಿ ದಾನಕ್ಕೆ ಪ್ರಾಧಾನ್ಯ ಬಹಳ. ಯೋಗ್ಯರಾದ ಪಂಡಿತರಿಗೆ ಆನೆ, ಕುದುರೆ, ರಥ, ವಾಹನ, ಭೂಮಿ, ವಸ್ತ್ರದ ಜೋಡುಗಳು, ಎತ್ತು, ನೂರಾರು ಹಸುಗಳು, ಮುಂತಾಗಿ ಬಗೆ ಬಗೆಯ ಬೆಲೆ ಬಾಳುವ ಪದಾರ್ಥಗಳನ್ನು ದಾನಕೊಟ್ಟು ವಿಶೇಷವಾಗಿ ದಕ್ಷಿಣೆ ನೀಡಬೇಕು. ಜಿಪುಣತನಮಾಡದೆ ತನ್ನ ವೈಭವಕ್ಕೆ ಅನುಸಾರವಾಗಿ ವಿಧಿ ಪೂರ್ವಕವಾಗಿ ಒಂದು ತಿಂಗಳಲ್ಲಿ ಈ ಲಕ್ಷ ಹೋಮದ ವಿಧಿಯನ್ನು ಪೂರ್ತಿಗೊಳಿಸಬೇಕು.

ಇನ್ನು ಕೋಟಿ ಹೋಮದ ವಿಧಾನ ಹೇಳುತ್ತೇನೆ ಕೇಳು. ಕೋಟಿ ಹೋಮವನ್ನು ಗಂಗಾ, ಯಮುನಾ, ಸರಸ್ವತೀ, ನರ್ಮದಾ, ಮುಂತಾದ ಯಾವುದಾದರೂ ಪುಣ್ಯ ನದೀತೀರದಲ್ಲಿ ನೆರವೇರಿಸಬೇಕು. ಇದಕ್ಕೆ ಹದಿನಾರು ಜನ ಋತ್ವಿಜರು.

ಆಚಾರ್ಯರು, ಋತ್ವಿಜರು ಸಹಿತವಾಗಿ ಯಜಮಾನನು ಒಂದು ವರ್ಷಕಾಲ ಯಜ್ಞದೀಕ್ಷೆಯನ್ನು ಹೊಂದಿ ಹೋಮವನ್ನು ಪ್ರಾರಂಭಿಸಬೇಕು. ಇದನ್ನು ಚೈತ್ರ ಅಥವಾ ಕಾರ್ತೀಕ ಮಾಸದಲ್ಲಿ ಪ್ರಾರಂಭಿಸಬೇಕು. ಒಂದು ವರ್ಷದವರೆಗೂ ಯಜಮಾನನು ಹಾಲು ಹಣ್ಣುಗಳನ್ನು ತಿಂದು ಫಲಾಹಾರಿಯಾಗಿಯೇ ಇರಬೇಕು. ಎಳ್ಳು, ಉದ್ದು, ನೆಲ್ಲು, ಅಕ್ಕಿಕಾಳು, ಸಾಸಿವೆ, ತುಪ್ಪ ಇವುಗಳಿಂದ ಹೋಮಕಾರ್ಯವನ್ನು ನೆರವೇರಿಸಬೇಕು. ಪಲಾಶ ವೃಕ್ಷದ ಸಮಿಧೆಗಳು ಇದಕ್ಕೆ ಪ್ರಶಸ್ತವಾಗಿವೆ. ಪುರೋಹಿತರಿಗೆ ಮೊದಲನೇ ತಿಂಗಳ ಕ್ಷೀರ ಭೋಜನ, ಎರಡನೆಯ ತಿಂಗಳು ಕೃಶರಮೂರನೆಯ ತಿಂಗಳ ಸಂಯಾವ, ನಾಲ್ಕನೇ ತಿಂಗಳು ಮೋದಕ, ಐದನೇ ತಿಂಗಳು ಮೊಸರನ್ನ, ಆರನೆಯ ತಿಂಗಳು ಸಕ್ತುಭೋಜನ ಏಳನೆಯ ತಿಂಗಳು ಅಪೂಪ ಎಂಟನೇಯ ತಿಂಗಳು ಘೃತಾಪೂಪ ಒಂಭತ್ತನೆಯ ತಿಂಗಳು ಸಮಾಷ ಭೋಜನ ಮಾಡಿಸಬೇಕು. ಪ್ರತಿತಿಂಗಳು ದಕ್ಷಿಣೆ ಕೊಡಬೇಕು. ಅಹತವಾಸನಾಗಿ ಸಂವೀತ ಮುದ್ರೆಯಲ್ಲಿ ಅರ್ಧದಿನ ಶುಚಿರ್ಭೂತನಾಗಿ ಹೋಮಮಾಡಬೇಕು.

ದೇವತೆಗಳನ್ನು ಉದ್ದೇಶಿಸಿ, ಪಶ್ವಾಲಂಭನವನ್ನು ಮಾಡದೆ, ಎಲ್ಲ ವಿಧವಾದ ದಾನಗಳನ್ನುಮಾಡಿ ಅಗ್ನಿಷ್ಟೋಮಾದಿ ವಿಧಿಗಳನ್ನು ಮಾಡಿಸಬೇಕು, ಒಂದು ನೂರು ಆಹುತಿ ಆದ ಕೂಡಲೇ ಪೂರ್ಣಾಹುತಿ ನೀಡಬೇಕು. ಹೀಗೆ ಒಂದು ಲಕ್ಷ ಹೋಮವಾಗುವವರೆಗೆ ಆಹುತಿಗಳನ್ನು ಹಾಕಿ ಯಜ್ಞವನ್ನು ಸಾಂಗವಾಗಿ ನೆರವೇರಿಸಬೇಕು. ಅನಂತರ ಋತ್ವಿಜರು ದೇವತೆಗಳ ಸಲುವಾಗಿ ಪುರೋಡಾಶವನ್ನು ಸಾಧಿಸಬೇಕು. ದ್ವಿಜರನ್ನು ಪೂಜಿಸಬೇಕು. ಎಲ್ಲ ದೇವತೆಗಳನ್ನು ಪಿತೃಗಳನ್ನು, ತೃಪ್ತಿಪಡಿಸಬೇಕು. ಕ್ರಮವಾಗಿ ಪಿತೃಗಳಿಗೆ ಪಿಂಡಪ್ರದಾನವನ್ನು ಶಾಸ್ತ್ರೋಕ್ತ ವಿಧಿಯಿಂದ ಮಾಡಬೇಕು. ಈ ಕೋಟಿ ಹೋಮವು ವಿಧಿಪೂರ್ವಕವಾಗಿ ಮುಗಿದ ಬಳಿಕ ಬ್ರಾಹ್ಮಣರಿಗೆ ಕೈತುಂಬ ದಕ್ಷಿಣೆ ಕೊಡಬೇಕು.

ನಂತರ ಒಂದು ತಕ್ಕಡಿ ಮಾಡಿ, ಅದಕ್ಕೆ ಎರಡು ಪರಡಿಗಳನ್ನು ಎರಡೂ ಬದಿಯಲ್ಲಿ ತೂಗು ಹಾಕಬೇಕು. ಒಂದು ಪರಡಿಯಲ್ಲಿ ತಾನು ಕುಳಿತು ಬಂಗಾರದಿಂದ ಮೊದಲು ತೂಗಿಸಿಕೊಳ್ಳಬೇಕು. ಅನಂತರ ಹೆಂಡತಿಯನ್ನು ಅದೇ ಪರಡಿಯಲ್ಲಿ ಕೂಡಿಸಿ ಬೆಳ್ಳಿ ತೂಕ ಮಾಡಿಸಬೇಕು. ತನ್ನ ಹಾಗೂ ಪತ್ನಿಯ ತೂಕದ ಬೆಳ್ಳಿ ಬಂಗಾರಗಳನ್ನು ಅಲಂಕಾರವಿಲ್ಲದೆ ನಮ್ರನಾಗಿಯೇ ದಾನ ಕೊಡಬೇಕು. ಬಂಗಾರದ ಒಂದು ಸಹಸ್ರ ನಾಣ್ಯಗಳನ್ನು ಅಥವಾ ಬೆಳ್ಳಿಯ ಒಂದು ಲಕ್ಷನಾಣ್ಯಗಳನ್ನು ದಾನ ಕೊಡಬೇಕು. ಅಥವಾ ತನ್ನ ಸರ್ವಸ್ವವನ್ನು ಅಂದು ದಾನ ಕೊಡಬೇಕು. ಇದರಿಂದ ರಾಜಸೂಯಯಜ್ಞಮಾಡಿದ ಪುಣ್ಯವು ಬರುವದು. ಈ ಯಜ್ಞದಿಂದ ಸರ್ವ ಯಜ್ಞಗಳ ಅಧಿಪತಿಯಾದ ವಿಷ್ಣುವು ಪ್ರೀತನಾಗುತ್ತಾನೆ. ಹರಿಯು ಸಂತುಷ್ಟನಾದರೆ, ಇದರಿಂದ ದೇವತೆಗಳಿಂದಾಗಲಿ, ಮಾನವರಿಂದಾಗಲಿ ಬರಬಹುದಾದ ಎಲ್ಲ ವಿಧದ ಪೀಡೆ, ಭಯಾಪಾಯಗಳು

ಪರಿಹಾರವಾಗಿ, ಸರ್ವಾರಿಷ್ಟಗಳು ಶಾಂತವಾಗಿ ಮನುಷ್ಯನಿಗೆ ನಿಜವಾದ ಶ್ರೇಯಸ್ಸು ಪ್ರೇಯಸ್ಸು, ಉಂಟಾಗುವವು. ಅಂತರಂಗದಲ್ಲಿ ನಿರಂತರ ಶಾಂತಿ. ನೆಲೆಸುವದು. ಸಂತಸ ದೊರೆಯುವದು, ಸದ್ಗತಿ ಆಗುವದು, ಈ ಕೋಟಿ ಹೋಮವನ್ನು ಒಮ್ಮೆ ಮಾಡಿದರೆ ಸಾಕು. ಅವನಿಗೆ ಜನ್ಮಾಂತರಗಳ ದುಃಖವೇ ತಪ್ಪಿಹೋಗುವದು.

ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದರೆ, ವೇದೋಕ್ತವಾದ ಎಲ್ಲ ಯಜ್ಞಗಳನ್ನು ಆಚರಿಸಿದರೆ ಯಾವ ಫಲವು ಪ್ರಾಪ್ತವಾಗಬೇಕೋ, ಅಂತಹ ಫಲವು ಈ ಗ್ರಹ ಯಜ್ಞ, ಲಕ್ಷಹೋಮ, ಕೋಟಿಹೋಮ ಈ ಮೂರು ಧರ್ಮಕರ್ಮಗಳಿಂದ ಖಂಡಿತವಾಗಿಯೂ ದೊರಕುತ್ತದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ನಲವತ್ತನೆಯ ಅಧ್ಯಾಯ ಮುಗಿದುದು*



## ಯಾತ್ರಾಕಾಲ ವಿಧಾನ ವರ್ಣನೆ

**ಅಧ್ಯಾಯ - ೨೪೧**

**ಮನುರುವಾಚ**

**ಇದಾನೀಂ ಸರ್ವಧರ್ಮಜ್ಞ ಸರ್ವ ಶಾಸ್ತ್ರವಿಶಾರದ ।**
**ಯಾತ್ರಾ ಕಾಲ ವಿಧಾನಂ ಮೇ ಕಥಯಸ್ವ ಮಹೀಕ್ಷಿತಾಮ್ ॥''**

**ಮನು** :- ಸರ್ವಜ್ಞನೂ, ಧರ್ಮಜ್ಞನೂ, ಸರ್ವಶಾಸ್ತ್ರಗಳನ್ನು ಬಲ್ಲವನೂ ಆದ ಮತ್ಸ್ಯಮಹಾಪ್ರಭುವೇ, ಈಗ ರಾಜರು, ದಂಡಯಾತ್ರೆಗೆ ಹೊರಡುವ ಕಾಲವನ್ನು ನನಗೆ ತಿಳಿಸು.

**ಮತ್ಸ್ಯ** :- ರಾಜರು ದಂಡಯಾತ್ರೆ ಮಾಡಬೇಕಾದರೆ, ವೈರಿಗಳು ಬಹಳ ದುಷ್ಟರಾಗಿ, ತನಗೆ ಉಪದ್ರವ ಕೊಡ ತೊಡಗಿದರೆ, ತನ್ನ ಸೈನ್ಯ ಬಲವೆಲ್ಲವೂ ವೈರಿಗಳನ್ನು ಮರ್ದನಮಾಡಿ ತನ್ನ ದೇಶವನ್ನು ರಕ್ಷಿಸಲು ಸಮರ್ಥವಿದೆ ಎಂದು ವಿಶ್ವಾಸವಿದ್ದರೆ ಮಾತ್ರ ದಂಡಯಾತ್ರೆ ಕೈಕೊಳ್ಳುವದು ಪ್ರಶಸ್ತವಾಗಿದೆ. ಶತ್ರುವು ಸಂಕಟದಲ್ಲಿದ್ದ ಕಾಲವು ಆಕ್ರಮಣಕ್ಕೆ ಒಳ್ಳೇ ಸುಸಂಧಿ. ದೈವಿಕ, ಭೌತಿಕ, ಭೌಮಿಕ ಉತ್ಪಾತಗಳಿಂದ ಮತ್ತು ಅಂತಃ ಕಲಹಗಳಿಂದ ವೈರಿಯು ಸಂತ್ರಸ್ತನಾದಾಗ ರಾಜರ ದಂಡಯಾತ್ರೆ ಫಲಕಾರಿಯಾಗುವದು. ಬರಗಾಲ, ಸೇನೆಯಲ್ಲಿಯ ಬಡಕು, ಕ್ರಿಮಿ ಕೀಟಗಳಿಂದ ಬೆಳೆಗಳ ನಾಶ, ಅತಿ ವೃಷ್ಟಿಯಿಂದ ಜನರ ಪೀಡೆ, ಮಂತ್ರಿ ಮಂಡಲದಲ್ಲಿ ವಿರಸ, ನೀತಿಗೆಟ್ಟ ಪ್ರಜೆ ಮುಂತಾದಗಳನ್ನು ನೋಡಿಕೊಂಡು ವೈರಿಯ ಮೇಲೆ ಏರಿ ಹೋಗಬೇಕು. ಸೇನಾಪತಿಯ ಬಗ್ಗೆ ದ್ವೇಷಹುಟ್ಟಿ, ಸೈನಿಕರಲ್ಲಿ ದ್ವೇಷಾಸೂಯೆಗಳು ಬೆಳೆದಿದ್ದರೆ. ರಾಜನು ದುರ್ವ್ಯಸಗಳಿಗೆ ತುತ್ತಾಗಿ ಅಶಕ್ತನಾಗಿದ್ದರೆ, ಸೈನಿಕರ ಶಸ್ತ್ರಾಸ್ತ್ರಗಳು ಮೊಂಡಾಗಿ ಬಿದ್ದಿದ್ದರೆ, ಸಂಧಿ, ಸಾಧಿಸಿ ರಾಜರ ಮೇಲೆ ಆಕ್ರಮಣ ಮಾಡಲು ಅಡ್ಡಿಯಿಲ್ಲ.

ಆಕ್ರಮಣಮಾಡುವ ರಾಜರು ತಮ್ಮ ಸೈನಿಕರನ್ನು ವಸ್ತ್ರ, ಧನ, ಕನಕ ಕೊಟ್ಟು ಸಂತೋಷಪಡಿಸಿ ಅವರೆಲ್ಲರಲ್ಲಿಯೂ ಉತ್ಸಾಹವನ್ನು ತುಂಬಿ, ರಭಸದಿಂದ ವೈರಿಗಳ

ಮೇಲೆ ಎರಗಬೇಕು. ಹೋಗುವಾಗ ಶಕುನಗಳನ್ನು ತನ್ನ ಅಂಗ ಸ್ಫುರಣಗಳನ್ನು ನೋಡಿಕೊಂಡು ಜ್ಯೋತಿಷಿಗಳಿಂದ ಒಳ್ಳೇ ಮುಹೂರ್ತ ತಿಳಿದುಕೊಂಡು, ಸರಿಯಾದ ಕಾಲದಲ್ಲಿ ದಿಗ್ವಿಜಯವನ್ನು ಬೆಳೆಸಬೇಕು. ಹೀಗೆ ದೈವ, ಪೌರುಷ, ದೇಶ, ಕಾಲ, ಜನಾನುರಾಗ, ಮುಂತಾದ ಸಕಲ ವಿಧವಾದ ಅನುಕೂಲ ನೋಡಿಕೊಂಡು ಯಾತ್ರೆಗೆ ಹೊರಡಬೇಕು. ತನ್ನ ಸ್ಥಾನದಲ್ಲಿದ್ದ ಮೊಸಳೆಯು ಆನೆಯನ್ನು ಕೂಡಾ ಕೊಂದು ಹಾಕುತ್ತದೆ. ಆದರೆ ನೆಲದ ಮೇಲೆ ಬಂದರೆ ಮೊಸಳೆಯನ್ನು ಆನೆಯು ತುಳಿದು ಹೊಡೆದು ಕೊಲ್ಲುತ್ತದೆ, ಗೂಗೆಯೂ ಕಾಗೆಯನ್ನು ರಾತ್ರಿ ಕೊಂದು ಹಾಕುತ್ತದೆ. ಅದರಂತೆ ಕಾಗೆಯು ಹಗಲಿನಲ್ಲಿ ಗೂಗೆಯನ್ನು ಕುಕ್ಕುತ್ತಿದೆ. ಇದರ ಮೇಲಿಂದ ಸ್ಥಾನ ದೇಶ, ಕಾಲಗಳು ಜಯಪರಾಜಯಗಳಿಗೆ ಕಾರಣವಾಗುತ್ತವೆ ಎಂಬುದನ್ನು ಅರಿತು ದೇಶ,ಕಾಲಾನುಕೂಲತೆ ನೋಡಿಕೊಂಡು ರಾಜರು ದಿಗ್ವಿಜಯಕ್ಕಾಗಿ ಪಯಾಣಗೈಯಬೇಕು.

ಮಳೆಗಾಲದಲ್ಲಿ ಯುದ್ಧಕ್ಕೆ ಹೊರಡುವಾಗ ಕಾಲಾಳುಗಳನ್ನು ಸೈನ್ಯದಲ್ಲಿ ಹೆಚ್ಚಾಗಿ ಉಪಯೋಗಿಸಬೇಕು. ಚಳಿಗಾಲದಲ್ಲಿರಥ, ಕುದುರೆ, ಆನೆ, ಮುಂತಾದ ಚತುರಂಗ ಸೈನ್ಯವನ್ನು ತೆಗೆದುಕೊಂಡು ಯುದ್ಧಮಾಡಬೇಕು. ಬಿಸಿಲುಕಾಲದಲ್ಲಿ ಒಂಟೆ, ಹೇಸರುಗತ್ತೆ ಮುಂತಾದವುಗಳನ್ನು ಹೆಚ್ಚಾಗಿ ಉಪಯೋಗಿಸಿಕೊಂಡು ಯುದ್ಧಕ್ಕೆ ಹೊರಡಬೇಕು. ವಸಂತ ಅಥವಾ ಶರತ್‌ಕಾಲದಲ್ಲಿ ಎಲ್ಲ ವಿಧ ಚತುರಂಗ ಬಲವನ್ನು ತೆಗೆದುಕೊಂಡು ಹೋಗಿ ಶತ್ರುವನ್ನು ಸೋಲಿಸಬೇಕು. ಸಮವಾದ ಬೀದಿಯಲ್ಲಿ ನಡೆದು ಹೋಗುವ ಶತ್ರುಗಳ ಮೇಲೆ ಅಶ್ವಾರೋಹಿ, ಸೈನ್ಯದೊಂದಿಗೆ ಹೋಗಿ ಆಕ್ರಮಿಸಿ ಸೋಲಿಸಬೇಕು.

ಒಟ್ಟಿನ ಮೇಲೆ ರಾಜರು ಚತುರರಾದ ಮಂತ್ರಿ ಹಾಗೂ ಸೇನಾಪತಿ, ಗುಪ್ತಚಾರರೊಂದಿಗೆ ವಿಚಾರಮಾಡಿ ಯಾವಕಾಲದಲ್ಲಿ ಯಾವದೇಶವನ್ನು ಹೇಗೆ ಆಕ್ರಮಣಮಾಡಿದರೆ ವೈರಿಗಳು ಪರಾಜಯ ಹೊಂದಬಹುದು ಎಂಬುದನ್ನು ವಿವೇಚಿಸಿ, ಅದರಂತೆ ದೂರ ದೃಷ್ಟಿಯಿಂದ ಆಲೋಚನೆ ಮಾಡಿ, ದಂಡಯಾತ್ರೆಯನ್ನು ಕೈಕೊಳ್ಳಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಇನ್ನೂರ ನಲವತ್ತೊಂದನೆಯ ಅಧ್ಯಾಯ ಮುಗಿದುದು*

—o—

## ಅಂಗಸ್ಫುರಣ ವಿಚಾರ ವರ್ಣನೆ

ಅಧ್ಯಾಯ - ೨೪೨

**ಮನುರುವಾಚ :**

**"ಬ್ರೂಹಿ ಮೇ ತ್ವಂ ನಿಮಿತ್ತಾನಿ ಅಶುಭಾನಿ ಶುಭಾನಿ ಚ ।**
**ಸರ್ವಧರ್ಮ ಭೃತಾಂ ಶ್ರೇಷ್ಠ! ತ್ವಂಹಿಸರ್ವವಿದುಚ್ಯಸೆ ॥"**

**ಮನು** :- ಧರ್ಮ ಧುರಂಧರರಲ್ಲಿ ಶ್ರೇಷ್ಠನಾದ ಮತ್ಸ್ಯಾವತಾರಿಯೇ, ಸರ್ವಜ್ಞನಾದ ನೀನು ಶುಭಾಶುಭ ನಿಮಿತ್ತಗಳನ್ನು ನನಗೆ ತಿಳಿಸಿ ಹೇಳು.

**ಮತ್ಸ್ಯ**:- ಅವಯವಗಳ ಬಲಭಾಗದಲ್ಲಿ ಸ್ಫುರಣವಾದರೆ ಶುಭ. ಅದರಂತೆ ಬೆನ್ನಿನ ಎಡಭಾಗದಲ್ಲಿ ಸ್ಫುರಣವಾದರೂ, ಹೃದಯದ ಎಡಭಾಗದಲ್ಲಿ ಸ್ಫುರಣವಾದರೂ ಶುಭ. ತಲೆ, ಹಣೆ, ಹಾರಿದರೆ ಪೃಥ್ವೀಲಾಭ. ಮೂಗು ಹುಬ್ಬು ಹಾರಿದರೆ ಇಷ್ಟಜನರ ಭೆಟ್ಟಿಯಾಗುವದು. ಕಣ್ಣು ಹಾರಿದರೆ ಒಳ್ಳೇ ಸೇವಕ ಸಿಗುವನು. ಕಡೆಗಣ್ಣು ಸ್ಫುರಿಸಿದರೆ ದ್ರವ್ಯಪ್ರಾಪ್ತಿ. ನಡುಗಣ್ಣು ಹಾರಿದರೆ ದಾರಿ ಕಾಯುವವರ ಆಗಮನ. ಕಣ್ಣಿನ ಅಂಚಿನ ಭಾಗ ಅದುರಿದರೆ ಸ್ತ್ರೀಭೋಗ. ಮೂಗು ಹಾರಿದರೆ ಪ್ರೀತಿ, ಸೌಖ್ಯ. ತುಟಿ ತುಸು ಕಂಪಿಸಿದರೆ ಸಂತಾನ ಪ್ರಾಪ್ತಿ, ಕೊರಳು ಕಂಪಿಸಿದರೆ ಭೋಗಲಾಭ, ಹೆಗಲು ಹಾರಿದರೆ ಭೋಗವೃದ್ಧಿ. ತೋಳುಗಳು ಸ್ಫುರಿದರೆ ಗೆಳೆಯರ ಸ್ನೇಹ, ಕೈಗಳು ಸ್ಪಂದಿಸಿದರೆ ದ್ರವ್ಯಲಾಭ, ಬೆನ್ನು ನಡುಗಿದರೆ ಸೋಲು, ಎದೆ ಸ್ಫುರಿಸಿದರೆ ಗೆಲುವು, ಹೊಟ್ಟೆಯ ಎಡ ಬಲ ಬದಿಗಳು ಸ್ಫುರಿಸಿದಂತಾದರೆ ಪತ್ನೀ ಪ್ರೇಮ. ಹೊಕ್ಕಳದಲ್ಲಿ ಸ್ಫುರಣವಾದರೆ ಸ್ಥಾನಭ್ರಂಶ, ಮೊಳಕಾಲ ಸಂದುಗಳು ಹಾರಿದರೆ ಬಲಿಷ್ಠರಾದ ವೈರಿಗಳೊಂದಿಗೆ ಸಂಧಾನ. ಮೊಳಕಾಲಿನಲ್ಲಿ ಸ್ಫುರಣವಾದರೆ ಅಧಿಕಾರನಾಶ, ಪಾದಗಳಲ್ಲಿಯ ಸ್ಫುರಣದಿಂದ ಉತ್ತಮ ಸ್ಥಾನ. ಅಂಗಾಲಿನಲ್ಲಿ ಹಾರುವಿಕೆ ಸಂಭವಿಸಿದರೆ ಪ್ರಯಾಣ. ಸಾಮಾನ್ಯವಾಗಿ ಗಂಡಸರಿಗೆ ದೇಹದ ದಕ್ಷಿಣ ಭಾಗದಲ್ಲಿ ಸ್ಫುರಣವಾದರೆ ಶುಭ. ಹೆಣ್ಣು ಮಕ್ಕಳಿಗೆ ಎಡಭಾಗದಲ್ಲಿ ಆದರೆ ಶುಭ. ಇಲ್ಲಿ ಹೇಳಿದಂತೆ ಅವಶ್ಯ ಚಿಹ್ನೆಗಳು ಕಾಣಿಸಿಕೊಂಡರೆ ದ್ವಿಜರಿಗೆ ಭೋಜನಮಾಡಿಸಿ ಸುವರ್ಣ ದಾನಮಾಡಿ ತೃಪ್ತಿಯನ್ನುಉಂಟುಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರಾ ನಲವತ್ತೆರಡನೆಯ ಅಧ್ಯಾಯ ಮುಗಿದುದು.*

—o—

## ಯಾವ ಕನಸು ಶುಭ ? ಯಾವ ಕನಸು ಅಶುಭ ? | ಅಧ್ಯಾಯ - ೨೪೩

**ಮನುರುವಾಚ :**

**ಸ್ವಪ್ನಾಖ್ಯಾನಂ ಕಥಂ ದೇವ ಗಮನೇ ಪ್ರತ್ಯುಪಸ್ಥಿತೇ।**
**ದೃಶ್ಯಂತೇ ವಿವಿಧಾಕಾರಾಃ ಕಥಂ ತೇಷಾಂ ಫಲಂ ಭವೇತ್॥**

**ಮನು :-** ಸ್ವಪ್ನ ವಿಷಯದ ಕಡೆಗೆ ಗಮನ ಹರಿದಾಗ, ಸ್ವಾಮಿ ನಿಮಗೆ ಏನು ಎನಿಸುವದು? ಕನಸಿನಲ್ಲಿ ಬಗೆಬಗೆಯ ಆಕಾರಗಳು ಹೇಗೆ ತೋರುತ್ತವೆ? ಅವುಗಳ ಫಲವೇನು?

**ಮತ್ಸ್ಯ:-** ಸ್ವಪ್ನ ದರ್ಶನದ ಬಗ್ಗೆ ಹೇಳುತ್ತೇನೆ ಕೇಳು. ಮೊದಲು ದುಃಸ್ವಪ್ನಗಳನ್ನು ವಿವರಿಸುತ್ತೇನೆ- ಹೊಕ್ಕಳದ ಹೊರತು ಬೇರೆ ಅವಯವದ ಮೇಲೆ ಹುಲ್ಲು ಗಿಡಗಳು ಬೆಳೆದಂತೆ ಕನಸು ಬಿದ್ದರೆ ಅಶುಭ. ತಲೆಯ ಮೇಲೆ ಕಂಚಿನ ಪಾತ್ರೆಯಿಂದ ತಿಕ್ಕುವದು, ತಲೆ ಬೋಳಿಸುವದು, ದಿಗಂಬರನಾಗಿರುವದು, ಹೊಲಸು ಬಟ್ಟೆ ಧರಿಸುವದು, ಎರೆದು ಕೊಳ್ಳುವದು, ಕೆಸರು ಮೆತ್ತುವದು, ಎತ್ತರದಿಂದ ಬೀಳುವದು, ಜೋಕಾಲಿ ಜೀಕುವದು. ಕುದುರೆ ಕೊಲ್ಲುವದು, ಹುಲಿ, ಕರಡಿ, ಕತ್ತೆ, ಒಂಟೆ, ಏರುವುದು, ಬೇಯಿಸದ ಮಾಂಸ ತಿನ್ನುವದು, ಇವೆಲ್ಲ ಕನಸಿನಲ್ಲಿ ಕಂಡರೆ ಅವು ದುಃಸ್ವಪ್ನ ಎನಿಸುವದು.

ಇದರಂತೆ ನಗೆ, ನರ್ತನ, ಮದುವೆ, ಹಾಡು, ವಾದ್ಯಬಾರಿಸುವದು, ಪ್ರವಾಹದಲ್ಲಿ ಈಸುವಿಕೆ, ಸೆಗಣಿ ನೀರಿನಲ್ಲಿ ಸ್ನಾನ, ಕೆಸರು ನೀರಿನಲ್ಲಿ ಮುಳುಗುವದು, ನಿಂತ ನೀರಿನಲ್ಲಿ ಸ್ನಾನಮಾಡುವದು, ತಾಯಿಯ ಹೊಟ್ಟೆಯಲ್ಲಿ ಪ್ರವೇಶ, ಚಿತೆಯ ಮೇಲೇರುವದು, ಇಂದ್ರಧ್ವಜದ ಪತನ, ಸೂರ್ಯ-ಚಂದ್ರರು ಕೆಳಗೆ ಬಿದ್ದಂತೆ ತೋರುವದು, ಬ್ರಾಹ್ಮಣ ಹಾಗೂ ರಾಜ, ಗುರು ಇವರ ಕೋಪ, ಕನ್ಯೆಯರ ಅಲಿಂಗನ, ತನ್ನ ಅವಯವಗಳ ಛೇದ, ಮಂತ್ರಿಯ ದಕ್ಷಿಣ ದಿಕ್ಕಿಗೆ ಪ್ರಯಾಣ, ರೋಗ ಬಾಧೆ, ಮನೆ ಬೀಳುವದು, ಮನೆ ಉಡುಗುವದು, ದೆವ್ವ, ರಾಕ್ಷಸ, ಕೋತಿ,ಕರಡಿಗಳ ಜೊತೆಗೆ ಆಟ, ವೈರಿಗಳಿಂದ ಸೋಲು, ಸಂಕಟ ದುಃಖ, ಕಾವಿ,ಶ್ಯಾಟ ಧಾರಣ, ಸ್ತ್ರೀಸಂಭೋಗ, ಎಣ್ಣೆ ಕುಡಿಯುವದು, ಎಣ್ಣೆಯಲ್ಲಿ ಮುಳುಗುವದು, ಕೆಂಪು ಮಾಲೆ ಧರಿಸುವದು, ಕೆಂಪು ಗಂಧ ಬಳಿದುಕೊಳ್ಳುವದು, ಇವೆಲ್ಲವೂ ಕನಸ್ಸಿನಲ್ಲಿ ಕಂಡರೆ, ದುಃಸ್ವಪ್ನ ಎಂದು ತಿಳಿಯಬೇಕು. ಇಂತಹ ಕೆಟ್ಟ ಕನಸು ಬಿದ್ದ ಬಳಿಕ ಅವುಗಳನ್ನು ಬೇರೆಯವರಿಗೆ ಹೇಳಬೇಕು. ಹಾಗೂ ಮತ್ತೊಮ್ಮೆ ಮಲಗಿಕೊಳ್ಳಬೇಕು. ಈ ದುಃಸ್ವಪ್ನಗಳಿಂದ ಆಗಬಹುದಾದ ದುಷ್ಟ ಫಲಗಳನ್ನು ತಪ್ಪಿಸಲಿಕ್ಕಾಗಿ, ಎಳ್ಳಿನಿಂದ ಹೋಮಮಾಡಿ, ಬ್ರಾಹ್ಮಣರ ಆರಾಧನೆಗೈದು, ವಾಸುದೇವನ ಸ್ತೋತ್ರಮಾಡಿ, ಮತ್ತು ಗಜೇಂದ್ರ ಮೋಕ್ಷಕತೆಯನ್ನು ಶ್ರವಣಮಾಡಿದರೆ ದುಸ್ವಪ್ನನಾಶವಾಗುವವು. ರಾತ್ರಿಯ ಮೊದಲನೆಯ ಯಾಮದಲ್ಲಿ ಬಿದ್ದ ಕನಸುಗಳ ಪರಿಣಾಮ ಒಂದು ವರುಷ.

ಎರಡನೆಯ ಯಾಮದಲ್ಲಿ ಬಿದ್ದ ಕನಸು ಆರು ತಿಂಗಳ, ರಾತ್ರಿಯ ಕೊನೆಯ ಯಾಮದಲ್ಲಿ ಬಿದ್ದಕನಸುಗಳ ಪರಿಣಾಮ ತೀವ್ರ ಆಗುವದು.

ಅರುಣೋದಯದಲ್ಲಿ ಕಂಡ ಕನಸಿನ ಫಲ ಹತ್ತು ದಿನಗಳಲ್ಲಿ ಆಗುವದು. ಒಂದು ರಾತ್ರಿಯಲ್ಲಿ ಎಷ್ಟೋ ಶುಭಾಶುಭ ಕನಸುಗಳನ್ನು ಮನುಷ್ಯನು ನೋಡುವನು. ಕೊನೆಗೆ ಕಂಡ ಕನಸೇ ಫಲವನ್ನು ನಿರ್ದೇಶನ ಮಾಡುವದು. ಆದುದರಿಂದ ಒಳ್ಳೇ ಕನಸು ಬಿದ್ದ ಬಳಿಕ ಮುಂದೆ ಕೆಟ್ಟ ಕನಸು ಬೀಳದಂತೆ ಜಾಗರೂಕನಾಗಿಯೇ ಇರಬೇಕು.

ಇನ್ನು ಶುಭಕರವಾದ ಒಳ್ಳೇ ಕನಸುಗಳನ್ನು ಹೇಳುತ್ತೇನೆ ಕೇಳು: ಗುಡ್ಡ ಏರುವದು, ಭವ್ಯ ಭವನದ ಮೇಲೆ ಹತ್ತುವದು, ಆನೆ, ಕುದುರೆ, ಎತ್ತುಗಳ ಸವಾರಿ ಮಾಡುವದು, ಕನಸ್ಸಿನಲ್ಲಿ ಹಿತಕರವಾಗಿದೆ. ಗಿಡಗಳ ಬಿಳಿ ಹೂಗಳು ಕನಸಿನಲ್ಲಿ ಕಂಡರೆ ಶುಭ. ನಾಭಿಯಲ್ಲಿ ಗಿಡ ಹುಟ್ಟಿದಂತೆ ಆದರೆ ಒಳ್ಳೇಯದು. ಅನೇಕ ತೋಳು, ಅನೇಕ ತಲೆ, ಬಿಳಿಹೂವಿನ ಮಾಲೆ ಧರಿಸುವದು, ಬಿಳಿಬಟ್ಟೆ ಉಡುವದು ಸೂರ್ಯ,ಚಂದ್ರ, ನಕ್ಷತ್ರಗಳನ್ನು ಕೈಯಲ್ಲಿ ಹಿಡಿಯುವದು, ಇಂದ್ರ ಧ್ವಜವನ್ನು ಆಲಿಂಗಿಸುವದು, ಎತ್ತಿ ನಿಲ್ಲಿಸುವದು, ಶತ್ರುಗಳ ಸಂಹಾರ, ವಾಕ್ಯಾರ್ಥ, ಜೂಜಾಟ ಯುದ್ಧಗಳಲ್ಲಿ ಗೆಲುವು, ಹಸಿ ಮಾಂಸ, ಮೀನ ಪಾಯಸಗಳ ಭಕ್ಷಣ, ರಕ್ತದರ್ಶನ ಅಥವಾ ರಕ್ತದಲ್ಲಿ ಸ್ನಾನ ಸ್ವಪ್ನದಲ್ಲಿಯೇ ಸೆರೆ, ರಕ್ತ, ಹಾಲುಕುಡಿಯುವದು, ನಿರ್ಮಲವಾದ ಆಕಾಶ, ಬಾಯಿಂದಲೇ ಆಕಳು, ಎಮ್ಮೆಯ ಹಾಲು ಹಿಂಡಿ ಕುಡಿಯುವದು, ಹೆಣ್ಣು ಸಿಂಹ, ಹೆಣ್ಣಾನೆ, ಹೆಣ್ಣು ಕುದುರೆಗಳ ಹಾಲು ಹಿಂಡುವದು, ಬ್ರಾಹ್ಮಣ, ಗುರುಗಳು, ದೇವತೆಗಳ ಅನುಗ್ರಹವಾಗುವದು ಇವೆಲ್ಲವೂ ಸ್ವಪ್ನದಲ್ಲಿ ಆದರೆ ಶುಭ ಎಂದು ತಿಳಿಯಬೇಕು. ಚಂದ್ರನಿಂದ ಸುರಿಯತಕ್ಕ ನೀರಿನಿಂದ ಅಥವಾ ಹಸುಗಳ ಕೊಂಬಿನ ನೀರಿನಿಂದ ಕನಸಿನಲ್ಲಿ ಅಭಿಷೇಕವಾದರೆ ರಾಜ್ಯಪ್ರಾಪ್ತಿ. ಪಟ್ಟಾಭಿಷೇಕ, ತಲೆಯನ್ನು ಕಡಿಯುವದು, ಸಾವು, ಬೆಂಕಿಯ ಅನಾಹುತ, ಮನೆಯೆಲ್ಲವೂ ಅಗ್ನಿಯಲ್ಲಿ ದಗ್ಧವಾಗುವದು, ರಾಜ್ಯದ ಲಕ್ಷಣಗಳಾದ ಛತ್ರ ಚಾಮರಗಳ ಪ್ರಾಪ್ತಿ, ತಂತಿಯ ವಾದ್ಯಗಳನ್ನು ಬಾರಿಸುವದು, ನದಿ ದಾಟುವದು, ಗಿರಿಗಳನ್ನು ಲಂಘಿಸುವದು, ಆನೆ, ಕುದುರೆ, ಆಕಳುಗಳು ಮನೆಯಲ್ಲಿ ಈಯುವದು, ಕುದುರೆ ಸವಾರಿ, ಆಳುವದು, ಒಳ್ಳೇ ಸುಂದರ ಸ್ತ್ರೀಯರ ಲಾಭ, ಅವರ ಆಲಿಂಗನ, ಕೈ, ಕಾಲುಗಳಿಗೆ ಬೇಡಿ, ಮೈಯೆಲ್ಲ ಹೊಲಸು, ಉಪ್ಪು ಮೆತ್ತುವದು, ಬದುಕಿದ್ದ ರಾಜ, ಹಾಗೂ ಗೆಳೆಯರ ಭೇಟಿಯಾಗುವದು, ದೇವದರ್ಶನ ಇವೆಲ್ಲವೂ ಸ್ವಪ್ನದಲ್ಲಿ ಕಂಡು ಬಂದರೆ ಶುಭಕರ. ಇವುಗಳಿಂದ ಮನುಷ್ಯನು ಪ್ರಯತ್ನವಿಲ್ಲದೆ ದ್ರವ್ಯಲಾಭವನ್ನು ಹೊಂದುವನು ಒಳ್ಳೆಯ ಸ್ವಪ್ನದರ್ಶನದಿಂದ ರೋಗಿಷ್ಠ ಮನುಷ್ಯನ ಬೇನೆಗಳೂ ಕೂಡ ಪರಿಹಾರವಾಗುತ್ತವೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರಾ ನಲವತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಯಾತ್ರಾಸಮಯದಲ್ಲಿ ಮಂಗಳ, ಅಮಂಗಳ ಸೂಚಕ ಶಕುನ ವರ್ಣನೆ

ಅಧ್ಯಾಯ - ೨೪೪

**ಮನುರುವಾಚ :**

**"ಗಮನಂ ಪ್ರತಿ ರಾಜ್ಞಾಂ ತು ಸಮ್ಮುಖಾದ್ ದರ್ಶನಾಚ್ಚ ಕಿಮ್।**
**ಪ್ರಶಸ್ತಾಂಶ್ಚೈವ ಸಂಭಾಷ್ಯ ಸರ್ವಾನೇತಾಂಶ್ಚ ಕೀರ್ತಯ"॥**

**ಮನು :-** ರಾಜರು ಪ್ರಯಾಣಕ್ಕೆ ಹೊರಡುವಾಗ ಯಾವ ಯಾವ ವಸ್ತುಗಳು ಸಮ್ಮುಖದಲ್ಲಿ ಬಂದರೆ ಅಥವಾ ಕಂಡರೆ ಶುಭ? ಮತ್ತು ಯಾವುಗಳನ್ನು ನೋಡಿದರೆ ಅಶುಭ ಇವೆಲ್ಲವನ್ನು ತಿಳಿಸು?

**ಮತ್ಸ್ಯ :-** ಉಪಯೋಗಿಸದಿದ್ದ ಔಷಧಗಳು, ಕಪ್ಪುಧಾನ್ಯ, ಅರಳೆ, ಹುಲ್ಲು, ಒಣಗಿದ ಗೋಮಯ (ಕುಳ್ಳು), ಸೌದೆ, ಕೆಂಡ, ಬೆಲ್ಲ, ಎಣ್ಣೆ ಇವೆಲ್ಲವೂ ಪ್ರಯಾಣಕ್ಕೆ ಹೊರಡುವಾಗ ಎದುರು ಬಂದರೆ ಶುಭ. ಎಣ್ಣೆಹಚ್ಚಿಕೊಂಡವ, ಮಲಿನ ಮುಂಡನ ಮಾಡಿಸಿದವ, ನಗ್ನ(ಬೆತ್ತಲೆ) ಮನುಷ್ಯ, ಕೂದಲು ಬಿಟ್ಟವ, ರೋಗಿಷ್ಟ. ಕಾವಿಬಟ್ಟೆ ಧರಿಸಿದವ, ಹುಚ್ಚ, ದೀನ, ನಪುಂಸಕ, ಕಬ್ಬಿಣ, ಕೆಸರು, ಚರ್ಮ, ಕಟ್ಟಿದ ಕೂದಲು, ಚಾಂಡಾಲ, ಶ್ವಪಚ, (ನಾಯಿಯ ಮಾಂಸ ತಿನ್ನುವ) ಹಂತಕ, ಪಾಪಿಗಳು, ಗರ್ಭಿಣಿಸ್ತ್ರೀ,ಬೂದಿ. ತಲೆಬುರುಡೆ, ಮೂಲೆ, ಒಡಕಪಾತ್ರೆ, ಇವೆಲ್ಲವೂ ಹೊರಡುವಾಗ ಎದುರಿಗೆ ಕಂಡರೆ ಅಶುಭ. 'ಇತ್ತಬಾ' ಎಂಬ ಶಬ್ದವು ಮುಂದೆ ಕೇಳಿದರೆ ಶುಭ. ಹಿಂದೆ ಕೇಳಿದರೆ ಅಶುಭ. 'ಹೋಗು' ಎಂದು ಹಿಂದೆ ಹೇಳಿದರೆ ಅಶುಭ 'ಎಲ್ಲಿಹೋಗುತ್ತಿ', 'ಹೋಗಬೇಡ' 'ನೀನು ಅಲ್ಲಿ ಹೋದರೆ ಏನಾಗುವದು? ಮುಂತಾದ ಶಬ್ದಗಳು ಮುಂಬರುವ ಆಪತ್ತನ್ನು ಸೂಚಿಸುತ್ತವೆ. ಹೊರಡುವಾಗ ಧ್ವಜದ ಮೇಲೆ ಕಾಗೆ ಕುಳಿತರೆ ಅಶುಭ. ವಾಹನಗಳು ಮುಗ್ಗುರಿಸಿದರೆ, ಒಡ್ಡಿನಲ್ಲಿಯಾದರೂ ಸಿಕ್ಕಿಕೊಂಡರೆ, ಹೊರಟು ನಿಂತಾಗ ಬಾಗಿಲಕ್ಕೆ ತಲೆ ಬಡಿದರೆ, ಛತ್ರ, ಧ್ವಜ, ವಸ್ತುಗಳು ಕೆಳಗೆ ಬಿದ್ದರೆ, ಅಶುಭವೆಂದು ತಿಳಿಯಬೇಕು. ಈ ಎಲ್ಲ ಅಶುಭ ಸೂಚನೆಗಳು ಮೊದಲು ಕಂಡುಬಂದರೆ ಊಹಿಸಿ, ದೊಡ್ಡವರು ಮಾಡಿದ ಸ್ತೋತ್ರಗಳಿಂದ ಪರಮಾತ್ಮನನ್ನು ಪ್ರಾರ್ಥಿಸಬೇಕು. ಎರಡನೆಯ ಸಲ ಹೊರಟಾಗ ಇಂಥವೇ ಅಶುಭ ಚಿಹ್ನೆಗಳು ಕಂಡು ಬಂದರೆ ಪ್ರಯಾಣ ರಹಿತ ಗೊಳಿಸಬೇಕು.

ಇನ್ನುಪ್ರಯಾಣಕಾಲದಲ್ಲಿ ಸಮ್ಮುಖದಲ್ಲಿ ಕಾಣಬಹುದಾದ ಮಂಗಲದ್ರವ್ಯ ಹೇಳುತ್ತೇನೆ ಕೇಳು; ಬಿಳಿಹೂ, ಪೂರ್ಣಕುಂಭ, ಕಮಲ, ಪಕ್ಷಿ, ಮೀನು, ಆಕಳ, ಕುದುರೆ, ಆನೆ, ಆಡು, ಗೆಳೆಯರು, ಬ್ರಾಹ್ಮಣರು, ಉರಿಯುವ ಅಗ್ನಿ, ವೇಶ್ಯಾ, ಹುಲ್ಲು, ಹಸಿಗೋಮಯ, ಬೆಳ್ಳಿ, ತಾಮ್ರ, ರತ್ನಗಳು, ಔಷಧಗಳು, ಅಕ್ಕಿ, ರಾಜರಯಾನ, ಅವರು ಕೂಡುವ ಪೀಠ, ಖಡ್ಗ, ಚಕ್ರ, ಧ್ವಜ, ಮಣ್ಣು, ಆಯುಧ ರಾಜರ ಚಿಹ್ನೆಗಳು,

ಹಾಲು, ಮೊಸರು, ತುಪ್ಪ, ಹಣ್ಣುಹಂಪಲು, ಮಂಗಳವಾದ್ಯ ಧ್ವನಿ, ಗಾಂಧಾರಾದಿ ಸ್ವರಗಳು, ಇವೆಲ್ಲವೂ ಎದುರುಬಂದರೆ, ಕಂಡರೆ, ಶುಭಸೂಚಕಗಳಾಗುತ್ತವೆ.

ಎಲ್ಲ ಕಡೆಗೂ ಬೀಸುವ ಉಸುಕು ತೂರುವ ಗಾಳಿಯು, ಪ್ರಯಾಣಮಾಡುವ ದಿಕ್ಕಿನಲ್ಲಿ ವಿರುದ್ಧ ಬೀಸಿದರೆ ಅಪಾಯಕಾರಿ. ಆದರೆ ಅನುಕೂಲವಾಗಿ ಸುಖಸ್ಪರ್ಶ ವಾಗುವಂತೆ, ಬೆನ್ನ ಹಿಂದೆ, ಮೃದುವಾಗಿ ಬೀಸಿದರೆ ಶುಭ. ಮೋಡಗಳು ಆನೆ ಘೀಳಿಡುವಂತೆ ಮಧುರವಾಗಿ ಗುಡುಗುಹಾಕಿದರೆ ಶುಭ. ಮಿಂಚು ಕಾಮನಬಿಲ್ಲಿನಿಂದ ಒಡಗೂಡಿ, ಮಳೆಗರೆಯುತ್ತಿದ್ದರೆ ಅಪ್ರಶಸ್ತ. ಸಮ್ಮುಖದಲ್ಲಿ ಬಂದ ಗ್ರಹಗಳು ಅದರಲ್ಲೂ ಗುರು ಶುಭಕರನಾಗಿದ್ದಾನೆ. ಪೂಜ್ಯರ ಪೂಜೆ, ಧರ್ಮಕಾರ್ಯ, ಸೇವೆ, ಶ್ರದ್ಧೆ, ದಾರಿಯಲ್ಲಿ ಕಂಡರೆ ಅಥವಾ ಮನಸ್ಸಿಗೆ ಪ್ರಿಯಕರ ಸನ್ನಿವೇಶ ಕಣ್ಣಿಗೆ ಬಿದ್ದರೆ ಶುಭಕರವೆಂದು ಭಾವಿಸಬೇಕು.

ಎಲ್ಲಕ್ಕಿಂತಲೂ ಮನಸ್ಸಿನ ತುಷ್ಟಿ, ಸಮಾಧಾನವು, ಉಲ್ಹಾಸವು ಶುಭಲಕ್ಷಣ ಎಂದು ತಿಳಿಯಬೇಕು. ಮಂಗಲಕರ ವಸ್ತುಗಳ ದರ್ಶನ, ಶಬ್ದಗಳ ಶ್ರವಣವು ಯಾವಾಗಲೂ ಗೆಲುವನ್ನು ತಂದುಕೊಡುತ್ತದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ನಲವತ್ತನಾಲ್ಕನೆಯ ಅಧ್ಯಾಯ ಮುಗಿದುದು*



## ವಾಮನಾವತಾರ ಚರಿತ್ರೆಯವರ್ಣನೆ

ಅಧ್ಯಾಯ - ೨೪೫

**ಋಷಿಯ ಉವಾಚ:**

**ರಾಜಧರ್ಮಾಸ್ತ್ವಯಾ ಸೂತ ಕಥಿತೋ ವಿಸ್ತರೇಣ ತು ॥**
**ತಥೈವಾದ್ಭುತ ಮಂಗಲ್ಯಂ ಸ್ವಪ್ನ ದರ್ಶನಮೇವ ಚ ॥**

**ಋಷಿಗಳು** :- ಸೂತನೇ, ನೀನು ಅದ್ಭುತ, ಮಂಗಲ, ಸ್ವಪ್ನದರ್ಶನ, ಮುಂತಾದವುಗಳನ್ನೆಲ್ಲ ವಿಸ್ತಾರವಾಗಿ ಹೇಳಿದೆ, ಆದರಂತೆ ರಾಜಧರ್ಮ ನಿರೂಪಿಸಿದೆ. ಈಗ ಮತ್ತೆ ಶ್ರೀ ವಿಷ್ಣುವಿನ ಮಹಾಮಹಿಮೆಯನ್ನು ಹೇಳು. ಆ ಪರಮಾತ್ಮನು ವಾಮನನಾಗಿ ಬಲಿಚಕ್ರವರ್ತಿಯನ್ನು ಹೇಗೆ ನಿಗ್ರಹಿಸಿದನು? ಮೂರು ಲೋಕಗಳನ್ನು ತನ್ನ ಪಾದಗಳಿಂದ ಆಕ್ರಮಿಸುವ ಹರಿಯ ರೂಪವು ಹೇಗಿದ್ದಿತು?

**ಸೂತ** :- ಪೂರ್ವಕಾಲದಲ್ಲಿ ಕುರುಕ್ಷೇತ್ರದಲ್ಲಿ ಶೌನಕರು ಅಲ್ಲಿರುವ ವಾಮನ ದೇವರ ಮಂದಿರದಲ್ಲಿ ಕುಳಿತುಕೊಂಡಿದ್ದರು. ಆಗ ಅರ್ಜುನನು ತೀರ್ಥಯಾತ್ರೆಗೈಯುತ್ತ ಅಲ್ಲಿಗೆ ಬಂದನು. ಪಂಚಪಾಂಡವರು ತಮ್ಮ ತಮ್ಮಲ್ಲಿನಿಯಮ ಮಾಡಿಕೊಂಡಿದ್ದರು. ದ್ರೌಪದಿಯ ಜೊತೆಗೆ ಒಬ್ಬರು ಕೂಡಿ ಇರುವದನ್ನು ಕಂಡರೆ ಒಂದು ವರ್ಷ ತೀರ್ಥಯಾತ್ರೆ ಮಾಡಬೇಕೆಂಬುದು ನಿಯಮ. ಧರ್ಮರಾಜನು ದ್ರೌಪದಿಯೊಡನೆ ಏಕಾಂತದಲ್ಲಿರುವಾಗ, ಅರ್ಜುನನು ಅಸ್ತ್ರವನ್ನು ತೆಗೆದುಕೊಳ್ಳಲು ಅನಿರ್ವಾಹದಿಂದ ಅಲ್ಲಿಗೆ ಬರಲೇಬೇಕಾಯಿತು. ಅಲ್ಲಿ ಧರ್ಮರಾಜ ಮತ್ತು ದ್ರೌಪದಿಯರನ್ನು ನೋಡಿ, ನಿಯಮದಂತೆ ತೀರ್ಥಯಾತ್ರೆಗೆ ಹೊರಟನು. ತೀರ್ಥಾಟನ

ಮಾಡುತ್ತ ಅರ್ಜುನನು ಧರ್ಮಕ್ಷೇತ್ರವಾದ ಕುರುಕ್ಷೇತ್ರಕ್ಕೆ ಬಂದನು. ಅಲ್ಲಿ ಕುಳಿತಿರುವ ಶೌನಕರನ್ನು ಕುರಿತು ವಾಮನದೇವರ ವಿಷಯದಲ್ಲಿ ಪ್ರಶ್ನೆ ಮಾಡಿದನು.

**ಅರ್ಜುನ** :- ಈ ಭಗವಂತನು ಹೀಗೆ ವಾಮನಾಕಾರವನ್ನು ತಳೆಯಲು ಏನು ಕಾರಣ? ವರಾಹರೂಪಿ ಭಗವಂತನು ಏಕೆ ಪೂಜ್ಯನಾಗಿದ್ದನು? ಹಾಗೂ ಈ ಕುರುಕ್ಷೇತ್ರವು ವಾಮನದೇವರಿಗೆ ಪ್ರೀತ್ಯಾಸ್ಪದ ಕ್ಷೇತ್ರವಾಗಲು ಕಾರಣವೇನು?

**ಶೌನಕ** :- ವರಾಹದೇವರ ಹಾಗೂ ವಾಮನದೇವರ ಚರಿತ್ರೆ ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ದೈತ್ಯರು, ದೇವತೆಗಳನ್ನು ಗೆದ್ದು ಇಂದ್ರನನ್ನು ಸ್ವರ್ಗ ಸಿಂಹಾಸನದಿಂದ ಕೆಳಗೆ ಇಳಿಸಿ ದೂರ ಓಡಿಸಿದ ಬಳಿಕ, ದೇವತೆಗಳ ತಾಯಿಯಾದ ಅದಿತಿದೇವಿಯು ಘೋರವಾದ ತಪಸ್ಸನ್ನು ಮಾಡಿದಳು. ಒಂದು ಸಾವಿರ ವರುಷ ಉಗ್ರತಪೋನುಷ್ಠಾನಗೈದು ಶ್ರೀ ಕೃಷ್ಣನನ್ನು ನಿರಾಹಾರಳಾಗಿ ನಿಂತುಕೊಂಡು ಆರಾಧಿಸಿದಳು. ''ನನ್ನ ಮಕ್ಕಳೆಲ್ಲರೂ, ದೈತ್ಯರಿಂದ ಹೊಡೆದೋಡಿಸಲ್ಪಟ್ಟಿದ್ದರಿಂದ ನಾನು ಬಂಜೆ ಯಾದಂತೆಯೇ ಸರಿ'' ಎಂದು ಚಿಂತಿಸಿ ಅವಳಿಗೆ ಬಹಳ ದುಃಖವಾಯಿತು. ಆದುದರಿಂದ ಅವಳು ವಿರಕ್ತಳಾಗಿ ಭಕ್ತಿಯಿಂದ ಭಗವಂತನನ್ನು ಮೊರೆಯಿಟ್ಟು ಅರ್ಥ ಪೂರ್ಣ ಸ್ತೋತ್ರದಿಂದ ಸರ್ವೇಂದ್ರಿಯ ನಿಯಾಮಕನಾದ ಆ ದೇವೇಶನನ್ನು ಪ್ರಾರ್ಥಿಸ ತೊಡಗಿದಳು.

**॥ ಅದಿತಿಃ ಉವಾಚ ॥**

''ನಮಃ ಸ್ಮೃತಾರ್ತಿ ನಾಶಾಯ ನಮಃ ಪುಷ್ಕರಮಾಲಿನೇ।
ನಮಃ ಪರಮ ಕಲ್ಯಾಣ ಕಲ್ಯಾಣಾಯಾದಿ ವೇಧಸೇ॥

ನಮಃ ಪಂಕಜ ಸಂಭೂತಿ ಸಂಭವಾಯಾತ್ಮ ಯೋನಯೇ।
ನಮಃ ಶಂಖಾಸಿಹಸ್ತಾಯ ನಮಃ ಕನಕರೇತಸೇ॥

ತಥಾತ್ಮ ಜ್ಞಾತ ವಿಜ್ಞಾತ ಯೋಗಿ ಚಿಂತ್ಯಾತ್ಮ ಯೋಗಿನೇ।
ನಿರ್ಗುಣಾಯಾऽವಿಶೇಷಾಯ ಹರಯೇ ಬ್ರಹ್ಮರೂಪಿಣೇ॥

ಜಗತ್ಪ್ರತಿಷ್ಠಿತಂ ಯತ್ರ ಜಗತಾಯೋನ ದೃಶ್ಯತೇ।
ನಮಃ ಸ್ಥೀತಾತಿಸೂಕ್ಷ್ಮಾಯ ತಸ್ಮೈ ದೇವಾಯ ಶಂಖಿನೇ॥

ಯನ್ನ ಪಶ್ಯಂತಿ ಪಶ್ಯಂತೊ ಜಗದಪ್ಯಖಿಲಾರಾಃ।
ಅಪಶ್ಯದ್ಭಿರ್ಜಗತ್ಯತ್ರ ನದೇವೋಹೃದಿ ಸಂಸ್ಥಿತಃ॥

ಯಸ್ಮಿನ್ನನ್ನಂ ಪಯಶ್ಚೈವ ನದ್ಯಶ್ಚೈವಾಖಿಲಂ ಜಗತ್।
ತಸ್ಮೈ ಸಮಸ್ತ ಜಗಲೌಮಾಧಾರಾಯ ನಮೋನಮಃ॥

ಆದ್ಯಃ ಪ್ರಜಾಪತಿ ಪತಿಃಯಃ ಪ್ರಭೂಣಾಂ ಪತಿಃಪರಃ
ಪತಿಃ ಸುರಾಣಾಂ ಯಸ್ತಸ್ಮೈ ನಮಃ ಕೃಷ್ಣಾಯ ವೇಧಸೇ॥

ಯಃ ಪ್ರವೃತ್ತೌ ನಿವೃತ್ತೌ ಚ ಇಜ್ಯತೇ ಕರ್ಮಭಿಃ ಸ್ವಕೈಃ।
ಸ್ವರ್ಗಾಽ ಪವರ್ಗ ಫಲದೊ ನಮಸ್ತಸ್ಮೈ ಗದಾಭೃತೇ।

ಯಶ್ಚಿಂತ್ಯಮಾನೋ ಮನಸಾ ಸದ್ಯಃ ಪಾಪಂ ವ್ಯಪೋಹತಿ।
ನಮಸ್ತಸ್ಮೈ ವಿಶುದ್ಧಾಯ ಪರಾಯ ಹರಿವೇಧಸೇ ॥

ಯಂ ಬುದ್ಧ್ವಾ ಸರ್ವಭೂತಾನಿ ದೇವ ದೇವೇಶಮವ್ಯಯಮ್ ।
ನ ಪುನರ್ಜನ್ಮ ಮರಣೇ ಪ್ರಾಪ್ನುವಂತಿ ನಮಾಮಿ ತಮ್ ॥

ಯೋ ಯಜ್ಞೇ ಯಜ್ಞ ಪರಮೈರಿಜ್ಯತೇ ಯಜ್ಞ ಸಂಜ್ಞಿತಃ ।
ತಂ ಯಜ್ಞ ಪುರುಷಂ ವಿಷ್ಣುಂ ನಮಾಮಿ ಪ್ರಭುಮೀಶ್ವರಮ್ ॥

ಗೀಯತೇ ಸರ್ವದೇವೇಷು ವೇದವಿದ್ಭಿರ್ವಿದಾಂಪತಿಃ।
ಯಸ್ತಸ್ಮೈ ವೇದ ವೇದ್ಯಾಯ ವಿಷ್ಣವೇ ಜಿಷ್ಣವೇ ನಮಃ॥

ಯತೋ ವಿಶ್ವಂ ಸಮುತ್ಪನ್ನಂ ಯಸ್ಮಿಂಶ್ಚ ಲಯಮೇಷ್ಯತಿ।
ವಿಶ್ವಾಗಮ ಪ್ರತಿಷ್ಠಾಯ ನಮಸ್ತಸ್ಮೈ ಮಹಾತ್ಮನೇ॥

ಬ್ರಹ್ಮಾದಿ ಸ್ತಂಭ ಪರ್ಯಂತಂ ಯೇನ ವಿಶ್ವಮಿದಂ ತತಮ್।
ಮಾಯಾಜಾಲಂ ಸಮುತ್ತರ್ತುಂ ತಮುಪೇಂದ್ರಂ ನಮಾಮ್ಯಹಮ್॥

ಯಸ್ತುತೋಯ ಸ್ವರೂಪಸ್ಥೋ ಬಿಭರ್ತ್ಯಖಿಲಮೀಶ್ವರಃ।
ವಿಶ್ವ ಪ್ರಜಾಪತಿಂ ವಿಷ್ಣುಂ ತಂ ನಮಾಮಿ ಪ್ರಜಾಪತಿಮ್॥

ಯಮಾರಾಧ್ಯ ವಿಶುದ್ಧೇನ ಮನಸಾ ಕರ್ಮಣಾಗಿರಾ।
ತರಂತ್ಯವಿದ್ಯಾಮಖಿಲಾಂ ತಮುಪೇಂದ್ರಂ ನಮಾಮ್ಯಹಮ್॥

ಉಪಾರತಸ್ತೋಽಪರೋಷ್ವೈಯೋರ್ಽಜಸ್ರಂ ಸುಖದುಃಖಜೈಃ।
ನೃತ್ಯತ್ಯಖಿಲ ಭೂತಸ್ಥಸ್ತಮುಪೇಂದ್ರಂ ನಮಾಮ್ಯಹಮ್॥

ಮೂರ್ತಂ ತಮೋಽಸುರಮಯಂ ತದ್ವಧಾತ್ ವಿನಿಹಂತಿ ಯಃ।
ರಾತ್ರಿ ರೂಪೀ ಸೂರ್ಯರೂಪೀ ತಮುಪೇಂದ್ರಂ ನಮಾಮ್ಯಹಮ್॥

ಯಸ್ಯಾಕ್ಷಿಣೀ ಚಂದ್ರಸೂರ್ಯೌ ಸರ್ವಲೋಕ ಶುಭಾಶುಭಮ್।
ಪಶ್ಯತಃ ಕರ್ಮ ಸತತಮುಪೇಂದ್ರಂ ತಂ ನಮಾಮ್ಯಹಮ್॥

ಯಸ್ಮಿನ್ ಸರ್ವೇಶ್ವರೇ ಸರ್ವಂ ಸತ್ಯಮೇತನ್ಮಯೋದಿತಮ್।
ನಾನೃತಂ ತಮಜಂ ವಿಷ್ಣುಂ ನಮಾಮಿ ಪ್ರಭವಾವ್ಯಯಮ್॥

ಯಚ್ಚೈತತ್ಸತ್ಯಮುಕ್ತಂ ಮೇ ಭೂಯಾಂಶ್ಚಾತೋ ಜನಾರ್ದನಃ।
ಸತ್ಯೇನ ತೇನ ಸಕಲಾಃ ಪೂರ್ಯಂತಾಂ ಮೇ ಮನೋರಥಾಃ॥

ಸ್ಮರಣೆ ಮಾಡಿದವರ ಸಂಕಟ ದೂರಮಾಡುವ ವಿಷ್ಣುವಿಗೆ ನಮಸ್ಕಾರ. ಕಮಲದ ಮಾಲೆ ಧರಿಸಿದವನಿಗೆ ವಂದನೆ. ಜಗತ್ತಿಗೆಲ್ಲ ಕಲ್ಯಾಣಮಾಡುವ ಬ್ರಹ್ಮ ರುದ್ರಾದಿ ದೇವತೆಗಳಿಗೂ ಕಲ್ಯಾಣವನ್ನುಂಟುಮಾಡುವ ಪರಬ್ರಹ್ಮನಿಗೆ ನಮಸ್ಕಾರ. ತಾವರೆಗಣ್ಣನ ಪದ್ಮನಾಭನಿಗೆ ವಂದನೆ. ಲಕ್ಷ್ಮಿಯಪತಿಯಾದ ಚಕ್ರಧರನಿಗೆ ನಮೋನಮಃ ಬ್ರಹ್ಮದೇವರ ಉತ್ಪತ್ತಿಗೆ ಕಾರಣನಾದ ಶಂಖ, ಚಕ್ರ, ಗದಾ, ಖಡ್ಗಗಳನ್ನು ಧರಿಸಿದ ಸ್ವಯಂಭೂ ಶ್ರೀಹರಿಗೆ ಪ್ರಣಾಮ. ಆತ್ಮಜ್ಞಾನಿಗಳಿಂದ ತಿಳಿಯಲ್ಪಡುವ ಯೋಗಿ ಗಮ್ಯನಾದ, ಸತ್ವಾದಿಗುಣರಹಿತನಾದ, ಪರಬ್ರಹ್ಮಸ್ವರೂಪಿ ಶ್ರೀಹರಿಗೆ ವಂದನೆ. ಜಗತ್ತೆಲ್ಲವನ್ನು ಕಾಣುವವರು ಜಗದಂತರ್ಯಾಮಿಯನ್ನು ಕಾಣಲಾರರು. ಜಗತ್ತಿನ ತುಂಬ ತುಂಬಿರುವ ಅವನನ್ನು ಅಲ್ಲಿ ಕಾಣದವರು ತಮ್ಮ ಹೃದಯದಲ್ಲಿಯೂ ಅವನನ್ನು ಕಾಣಲಾರರು. ಹೃದಯದಲ್ಲಿಯೇ ವಾಸವಾಗಿದ್ದರೂ ಮಾನವರು ಅವನನ್ನು ಅರಿಯಲಾರರು. ಅನ್ನ, ನೀರು, ನೆಲ, ಬಯಲು, ಬಾನು, ಬೆಟ್ಟ, ಮುಂತಾದ ಎಲ್ಲ ಚರಾಚರ ಪ್ರಪಂಚವು ಅವನನ್ನೇ ಆಧರಿಸಿ ನಿಂತಿದೆ. ಇಂತಹ ಜಗದಾಧಾರನಿಗೆ ನಮೋನಮಃ. ಪ್ರಜಾಪತಿಗಳಿಗೆಲ್ಲ ನೀನೇ ಪತಿ, ದೇವತೆಗಳಿಗೆಲ್ಲ ಒಡೆಯ. ಇಂತಹ ಕೃಷ್ಣರೂಪಿ ಬ್ರಹ್ಮನಿಗೆ ವಂದನೆ. ಪ್ರವೃತ್ತಿ ನಿವೃತ್ತಿ ಕರ್ಮಗಳಿಂದ ಸಕಲರಿಂದಲೂ ಆರಾಧಿಸಲ್ಪಡುವ, ಮೋಕ್ಷಕೊಡುವ ಧ್ಯಾನಮಾಡಿದವರ ಪಾಪಪರಿಹರಿಸುವ, ಪರಾತ್ಪರನಾದ ಗದಾಧರನಿಗೆ ವಂದನೆ. ದೇವದೇವನಾದ ಹರಿಯನ್ನು ಅರಿತು ಭಜನೆ ಮಾಡಿದರೆ ಮತ್ತೆ ಭೂಲೋಕದಲ್ಲಿ ಮರಳಿ ಹುಟ್ಟುವುದಿಲ್ಲ. ಸರ್ವಯಜ್ಞಗಳು ಅವನ ಉದ್ದೇಶದಿಂದಲೇ ಪ್ರವರ್ತ್ತವಾಗುತ್ತವೆ. ಆದುದರಿಂದ ಅವನಿಗೆ ಯಜ್ಞಪುರುಷನೆಂದೇ ಹೆಸರು. ವೇದಗಳು ಹೊಗಳಿಹಾಡುವದು ಆ ಸರ್ವಜ್ಞಮೂರ್ತಿಯನ್ನೇ. ವಿಶ್ವದ ಆಗುಹೋಗುಗಳಿಗೆಲ್ಲ ಪರಮಾತ್ಮನೇ ಮೂಲ ಕಾರಣ. ಬ್ರಹ್ಮದೇವರಿಂದ ಒಂದು ಹುಲ್ಲು ಜೀವದವರೆಗೆ ಇರುವ ಅಖಂಡ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿ ನಿಂತ ಉಪೇಂದ್ರನನ್ನು ಈ ಮಾಯಾ ಜಾಲದಿಂದ ಪಾರಾಗಿ ಬರಲಿಕ್ಕಾಗಿ ನಾನು ನಮಸ್ಕರಿಸುತ್ತೇನೆ. ಈ ಉಪೇಂದ್ರನ ಆರಾಧನೆಯಿಂದ ಅಜ್ಞಾನವೆಲ್ಲವೂ ನಾಶವಾಗುತ್ತದೆ. ಸ್ವಕರ್ಮಾನುಸಾರವಾಗಿ ಉಂಟಾಗುವ ತೋಷರೋಷ ವಿಷಾದಗಳಿಂದ ಜಗತ್ತನ್ನೆಲ್ಲ ಕುಣಿಸುವ, ಎಲ್ಲರ ಹೃದಯಾಂತರಂಗದಲ್ಲಿ ನರ್ತಿಸುವ, ಜಲಜನಾಭನಾಗಿ ವಿಶ್ವವನ್ನೇ ಧರಿಸುವ ಉಪೇಂದ್ರನಿಗೆ ವಂದನೆ. ಅಸುರ ರೂಪವಾದ ಕತ್ತಲೆ ಕಳೆಯುವ ಸೂರ್ಯರೂಪಿ ಉಪೇಂದ್ರನಿಗೆ ನಮಸ್ಕಾರ.

ಸೂರ್ಯಚಂದ್ರ ರೂಪವಾದ ತನ್ನ ಕಣ್ಣುಗಳಿಂದ ಸರ್ವಲೋಕಗಳ ಶುಭಾಶುಭ ಕರ್ಮಗಳನ್ನು ಸಾಕ್ಷೀಭೂತವಾಗಿ ನಿರೀಕ್ಷಿಸುವ ಉಪೇಂದ್ರನ ಅಡಿದಾವರೆಗಳನ್ನು ನೆನೆಯುತ್ತೇನೆ. ಯಾವ ಜಗದೀಶ್ವರನಲ್ಲಿ ನಾನು ಹೇಳಿದ ಗುಣಗಳು ಪರಮಾರ್ಥ ವಾಗಿಯೇ ಸತ್ಯವಾಗಿರುತ್ತವೆಯೋ, ಇದರಲ್ಲಿ ಯಾವುದು ಮಿಥ್ಯವಾಗಿರುವದಿಲ್ಲವೋ ಅಂತಹ ಉಪೇಂದ್ರನನ್ನು ನೆನೆಸುತ್ತೇನೆ. ನಾನು ಇಲ್ಲಿ ಹೇಳಿದ್ದೆಲ್ಲವೂ ಅಕ್ಷರಶಃ ಪಾರಮಾರ್ಥಿಕವಾಗಿ ಸತ್ಯವಾಗಿದ್ದರೆ ಆ ಸತ್ಯದ ಮಹಿಮೆಯಿಂದ ನನ್ನ ಮನೋರಥಗಳೆಲ್ಲವೂ ಪೂರ್ಣವಾಗಲಿ.

**ಶೌನಕ** :- ಅದಿತಿದೇವಿಯು ಸ್ತೋತ್ರಮಾಡಿದ ಬಳಿಕ ಷಡ್ಗುಣೈಶ್ವರ್ಯ ಸಂಪನ್ನನಾದ, ಸರ್ವಪ್ರಾಣಿಗಳ ಅಧೀಶ್ವರನಾದ ಪರಮಾತ್ಮನು ಅದಿತಿದೇವಿಯ ಭಕ್ತಿಯಿಂದ ಪ್ರಸನ್ನನಾಗಿ ಹೀಗೆ ಹೇಳಿದನು. "ಧರ್ಮಜ್ಞಳಾದ ಅದಿತಿದೇವಿಯೇ, ನೀನು ಮನಸ್ಸಿನಲ್ಲಿ ಬಯಸಿದ್ದನ್ನೆಲ್ಲವನ್ನು ನನ್ನ ಅನುಗ್ರಹದಿಂದ ಪಡೆಯುವೆ, ಇದಕ್ಕೆ ಸಂದೇಹ ಬೇಡ. ನನ್ನ ದರ್ಶನವು ಎಂದೂ ನಿಷ್ಫಲವಾಗುವದಿಲ್ಲ. ಆದುದರಿಂದ ನಿನಗೇನು ಬೇಕು ಕೇಳು. ನಿನಗೆ ಕಲ್ಯಾಣವಾಗಲಿ.

**ಅದಿತಿ** :- ಭಕ್ತವತ್ಸಲನಾದ ದೇವನೆ, ನೀನು ನನ್ನ ಮೇಲೆ ನಿಜವಾಗಿ ಪ್ರಸನ್ನನಾಗಿದ್ದರೆ, ನನ್ನ ಮಗನಾದ ಇಂದ್ರನು ಮತ್ತೆ ಮೂರು ಲೋಕಗಳಿಗೆ ಒಡೆಯನಾಗಲಿ, ಇಂದ್ರನ ರಾಜ್ಯವನ್ನೆಲ್ಲ ದೈತ್ಯರು ಕಸಿದಿದ್ದಾರೆ. ಅವರಿಗೆ ಬರುವ ಯಜ್ಞಭಾಗಗಳನ್ನು ಅಪಹರಿಸಿದ್ದಾರೆ. ಬಯಸಿದ ವರ ನೀಡುವ ನಿನ್ನ ಪ್ರಸಾದದಿಂದ ಇಂದ್ರಾದಿ ದೇವತೆಗಳು ಮತ್ತೆ ಮೊದಲಿನಂತೆ ಯಜ್ಞಾಹುತಿಗಳನ್ನು ಪಡೆಯುವಂತಾಗಲಿ, ಕಳೆದುಹೋದ ರಾಜ್ಯವು ಮರಳಿ ದೊರೆಯಲಿ.

**ಭಗವಂತ** :- ದೇವಿ, ನಿನ್ನ ಮನೋರಥವು ಪೂರ್ಣವಾಗುವದು. ನಾನು ಅನುಗ್ರಹಿಸಿದ್ದೇನೆ. ನನ್ನ ಪೂರ್ಣಾಂಶದಿಂದ ಕಶ್ಯಪ ಋಷಿಗಳಿಂದ ನಿನ್ನ ಗರ್ಭದಿಂದ ಉದಿಸಿ ಬರುತ್ತೇನೆ. ನಿನ್ನ ಹೊಟ್ಟೆಯಿಂದ ಹುಟ್ಟಿ ಬಂದ ಬಳಿಕ ನಾನು ನಿನ್ನ ಪುತ್ರರ ಶತ್ರುಗಳಾದ ದೈತ್ಯದಾನವರನ್ನು ಸಂಹರಿಸುತ್ತೇನೆ. ನೀನು ನಿಶ್ಚಿಂತಳಾಗಿ ಸಂತಸದಿಂದ ಇರು

**ಅದಿತಿ** :- ದೇವೇಶನೆ, ನಿನಗೆ ನಮಸ್ಕರಿಸಿ ಬೇಡಿಕೊಳ್ಳುತ್ತೇನೆ, ನನ್ನ ಮೇಲೆ ಪ್ರಸನ್ನನಾಗು. ವಿಶ್ವಾಧಾರನಾದ ನಿನ್ನನ್ನು ನಾನು ನನ್ನ ಚಿಕ್ಕ ಹೊಟ್ಟೆಯಲ್ಲಿ ಹೊರಲು ಹೇಗೆ ಸಮರ್ಥಳಾದೇನು? ಹದಿನಾಲ್ಕು ಲೋಕಗಳು ನಿನ್ನಲ್ಲಿ ಪ್ರತಿಷ್ಠಿತವಾಗಿವೆ. ಅಂತಹ ನಿನ್ನನ್ನು ನಾನು ಗರ್ಭದಲ್ಲಿ ಹೊರಲಾರೆ.

**ವಿಷ್ಣು** :- ಅದಿತಿ, ನೀನು ಹೇಳಿದ್ದು ನಿಜ. ಜಗದಾಧಾರನಾದ ನನ್ನನ್ನು ಇಂದ್ರಾದಿ ದೇವತೆಗಳೂ ಕೂಡ ಹೊರಲು ಸಾಧ್ಯವಿಲ್ಲ. ಆದರೂ ನೀನು ಯೋಚಿಸ ಬೇಕಾಗಿಲ್ಲ ನಾನು ನಿನ್ನ ಗರ್ಭದಲ್ಲಿದ್ದುಕೊಂಡೇ ಎಲ್ಲ ಲೋಕಗಳನ್ನು, ದೇವದಾನವ, ಮಾನವರನ್ನು, ಸ್ಥಾವರ, ಜಂಗಮ ಪ್ರಪಂಚವನ್ನೂ, ನಿನ್ನನ್ನು, ನಿನ್ನ ಗಂಡನನ್ನು, ಕೂಡ ಹಗುರಾಗಿ ಹೊರುತ್ತೇನೆ. ನೀನು ಗಾಬರಿಯಾಗಬೇಡ. ನಾನು ನಿನ್ನ ಗರ್ಭದಲ್ಲಿ ಬಂದು ಕುಳಿತರೂ ನಿನಗೆ ಏನೂ ಆಯಾಸವಾಗದಂತೆ ನೋಡಿಕೊಳ್ಳುತ್ತೇನೆ. ನಿನಗೆ ನಾನು ನಿನ್ನ ಗರ್ಭಗತನಾಗಿದ್ದು ಕಲ್ಪನೆ ಬಾರದಂತೆ, ಹೊಟ್ಟೆಗೆ ಭಾರ ಎನಿಸದಂತೆ, ಮೈ ಬೆವರದಂತೆ, ಆಯಾಸ ಆಗದಂತೆ, ನಾನು ನಿನ್ನ ಗರ್ಭದಲ್ಲಿ ಇದ್ದು, ನಿನ್ನನ್ನೇ ನಾನು ಧರಿಸುತ್ತೇನೆ. ನೆಪಕ್ಕಾಗಿ ನೀನು ನನ್ನನ್ನು ಧರಿಸಿದರೆ ಸಾಕು. ನಾನು ನಿನ್ನ ಗರ್ಭದಲ್ಲಿ ಇದ್ದಾಗಲೇ ನಿನ್ನ ಮಕ್ಕಳ ವೈರಿಗಳಾದ ದೈತ್ಯರ ತೇಜೋಭಂಗ ಮಾಡಿಬಿಡುತ್ತೇನೆ. ನೀನು ದುಃಖಪಡಬೇಡ.

**ಶೌನಕ** :- ಹೀಗೆ ಆಶ್ವಾಸನವಿತ್ತು ಆ ಜಗದೀಶ್ವರನು ಅಲ್ಲಿಯೇ ಅಂತರ್ಧಾನ ಹೊಂದಿದನು. ಅದಿತಿಯು ಕೆಲವು ಕಾಲದ ಬಳಿಕ ಗರ್ಭ ಧರಿಸಿದಳು. ಅದಿತಿಯ ಗರ್ಭದಲ್ಲಿ ಆ ಮಹಾವಿಷ್ಣುವು ತೇಜೋರೂಪದಿಂದ ಸನ್ನಿಹಿತನಾದಾಗ ಭೂಮಿ ನಡುಗಿತು. ಬೆಟ್ಟಗಳು

ಕಂಪಿಸಿದವು. ಸಮುದ್ರಗಳು ಘೂರ್ಮಿಸಿದವು. ಅದಿತಿ ದೇವಿಯು ಹೆಜ್ಜೆಯಿಟ್ಟಲ್ಲೆಲ್ಲ ನೆಲವು ಅವಳ ಗರ್ಭದ ಭಾರದಿಂದ ಬಗ್ಗಿ, ಬೆವತು, ನಮಿಸಿ, ನತವಾಗುತ್ತಿತ್ತು. ಆ ಪರಮಾತ್ಮ ಹೇಳಿದಂತೆ ಆ ಪೊಡವಿಯೊಡೆಯನು ಆ ಅದಿತಿಯ ಒಡಲಿನಲ್ಲಿ ಮೂಡಿದ ಕೂಡಲೆ ದೈತ್ಯದಾನವರು ತೇಜಸ್ಸು ಒಮ್ಮೆಲೆ ಕಳೆಗುಂದಿತು.

ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ನಲವತ್ತೈದನೆಯ ಅಧ್ಯಾಯ ಮುಗಿದುದು



## ಬಲಿಪ್ರಲ್ಹಾದರ ಸಂವಾದ

ಅಧ್ಯಾಯ - ೨೪೬

**ಶೌನಕ ಉವಾಚ :**

**ನಿಸ್ತೇಜಸೋಽಸುರಾನ್ ದೃಷ್ಟ್ವಾ ಸಮಸ್ತಾನಸುರೇಶ್ವರಃ।**
**ಪ್ರಲ್ಹಾದಮಥ ಪಪ್ರಚ್ಛ ಬಲಿರಾತ್ಮ ಪಿತಾಮಹಮ್॥**

**ಶೌನಕ :-** ಅಸುರರೆಲ್ಲರೂ ಒಮ್ಮೆಲೆ ತೇಜೋಹೀನರಾದದ್ದು ಕಂಡು ದೈತ್ಯರ ದೊರೆಯಾದ ಬಲಿರಾಜನು ತನ್ನ ಅಜ್ಜನಾದ ಪ್ರಲ್ಹಾದನ ಬಳಿಗೆ ಬಂದು ಪ್ರಶ್ನೆ ಕೇಳಿದನು.

**ಬಲಿ :-** ತಾತ, ಎಲ್ಲ ದೈತ್ಯರು ಬ್ರಹ್ಮದಂಡದಿಂದ ಹತರಾದಂತೆ, ಬೆಂಕಿಯಲ್ಲಿ ಬೆಂದು ಹೋದಂತೆ ಒಮ್ಮೆಲೆ ಕಳೆಗುಂದಿ ಕಾಂತಿಹೀನರಾಗಿದ್ದಾರೆ. ದಾನವರ ಈ ಆಕಸ್ಮಿಕ ತೇಜೋ. ಭಂಗಕ್ಕೆ ಏನು ಕಾರಣ ? ದೇವತೆಗಳು, ದೈತ್ಯರ ವಿನಾಶಕ್ಕಾಗಿ ಯಾವುದಾದರೂ ಕೃತ್ಯಗಳನ್ನು ನಿರ್ಮಿಸಿರುವರೊ ? ಇದರಿಂದ ನಮ್ಮ ಅಸುರಕುಲಕ್ಕೆ ಯಾವ ಅನಿಷ್ಟವು ಬರಲಿದೆ ?

ಮೊಮ್ಮಗನ ಈ ಮಾತು ಕೇಳಿ, ದೈತ್ಯರ ಪತಿಯಾದ ಪ್ರಲ್ಹಾದನು ಬಹಳ ಹೊತ್ತು ವಿಚಾರಮಾಡಿ, ಬಲಿರಾಜನಿಗೆ ಇಂತು ನುಡಿದನು.

**ಪ್ರಲ್ಹಾದ :-** ದಾನವೇಶ್ವರ, ಬೆಟ್ಟಗಳಲ್ಲಿ ಕಂಪ, ನೆಲದಲ್ಲಿ ನಡುಕ, ಸಮುದ್ರಗಳಲ್ಲಿ ಕ್ಷೋಭೆ, ದೈತ್ಯರೆಲ್ಲರ ತೇಜೋಭಂಗ, ಗ್ರಹಮಂಡಲದಲ್ಲಿ ಗಡಿಬಿಡಿ, ದೇವತೆಗಳಲ್ಲಿ ಕಾಂತಿಯ ಉಕ್ಕು. ಇವೆಲ್ಲವೂ ನಿರ್ನಿಮಿತ್ತವಾಗಿ ನಡೆಯಲಾರವು. ಇವೆಲ್ಲರ ಹಿಂದೆ ದೊಡ್ಡ ಕಾರಣವು ಇದೆ. ಅದನ್ನು ನಾನು ಕಂಡುಹಿಡಿಯಲು ಆ ಪರಮಾತ್ಮನ ಧ್ಯಾನಮಾಡುತ್ತೇನೆ ತುಸು ತಡೆ.

ಹೀಗೆ ಪ್ರಲ್ಹಾದನು ತನ್ನ ಮೊಮ್ಮಗನಾದ ಬಲಿಚಕ್ರವರ್ತಿಗೆ ಹೇಳಿ ಕಣ್ಣುಮುಚ್ಚಿ ಅಂತರ್ಮುಖಿಯಾಗಿ ಶ್ರೀಹರಿಯನ್ನು ಧ್ಯಾನಮಾಡತೊಡಗಿದನು. ವಿಷ್ಣುವಿನ ಏಕಾಂತ ಭಕ್ತನಲ್ಲವೇ ಪ್ರಲ್ಹಾದ! ಅವನು ಧ್ಯಾನ ಸಮಾಧಿಯಿಂದ ನಿಮೀಲಿತ ನಯನನಾಗಿ ಕುಳಿತುಕೊಂಡಾಗ ಅದಿತಿದೇವಿಯ ಉದರದಲ್ಲಿ ಸನ್ನಿಹಿತನಾದ ವಾಮನರೂಪಿ ಪರಮಾತ್ಮನು ಅವನ ಕಣ್ಣಿಗೆ ಬಿದ್ದನು. ದೇವಮಾತೆಯ ಗರ್ಭಸ್ಥನಾದ ಆ ಶಿಶುರೂಪಿ ಶ್ರೀಹರಿಯು ಸಪ್ತಲೋಕಗಳನ್ನು ತನ್ನ ಉದರದಲ್ಲಿ ಧರಿಸಿದ್ದನು. ಅಲ್ಲಿ ಬ್ರಹ್ಮ, ರುದ್ರ, ಅಷ್ಟವಸುಗಳು, ಅಶ್ವಿನಿದೇವತೆಗಳು, ಮರುದ್ಗಣ, ವಿಶ್ವ, ಸಾಧ್ಯ, ಆದಿತ್ಯ ಮುಂತಾದ

ದೇವತಾಗಣಗಳು ಗಂಧರ್ವ, ಸರ್ಪ, ರಾಕ್ಷಸ, ಮೊದಲಾದವರೂ, ಅಲ್ಲಿ ಕಂಡುಬಂದರು. ಇವರಲ್ಲದೆ, ಆ ವಾಮನದೇವರ ಉದರದಲ್ಲಿ ಸ್ವಯಂ ಪ್ರಲ್ಹಾದನಾದ ತಾನು ನಿಂತದ್ದು ಕೂಡ ಕಾಣಿಸಿತು. ತನ್ನ ಪಕ್ಕದಲ್ಲಿ ತನ್ನ ಮೃತ ಪುತ್ರ ವಿರೋಚನನೂ ಅವನ ಮಗನಾದ ಬಲಿಚಕ್ರವರ್ತಿಯೂ ಇದ್ದುದು ಕಂಡುಬಂದಿತು. ಜಂಭ, ಕುಜಂಭ, ನರಕ, ಮೊದಲಾದ ದೈತ್ಯದಾನವರೂ ಅಲ್ಲಿದ್ದರು. ಇದರಂತೆ ಭೂಮಿ, ಆಕಾಶ, ವಾಯು, ನೀರು, ಸಪ್ತಸಮುದ್ರಗಳು, ಗಿಡಗಳು, ನದಿಗಳು, ಸರೋವರಗಳು, ಪಶುಪಕ್ಷಿಗಳು, ಖಡ್ಗ, ಮೃಗಗಳು, ಹಾವುಗಳು ಒಟ್ಟಾರೆ ಚರಾಚರಾತ್ಮಕ ಪ್ರಪಂಚವೆಲ್ಲ ಹೊರಗಿನಂತೆ ಒಳಗೂ ಇದ್ದಿತು, ಅದನ್ನೆಲ್ಲಾ ನೋಡಿ ಪ್ರಲ್ಹಾದನು ಆಶ್ಚರ್ಯಚಕಿತನಾಗಿ, ದೇಹಪುಲಕಿತನಾಗಿ, ಭಕ್ತಿಭರಿತನಾಗಿ, ಬಾಷ್ಪಗದ್ಗದನಾಗಿ, ಕಣ್ಣು ತೆರೆದನು. ಅವರ ಎದುರು ಬಲಿರಾಜನು ಕೈಮುಗಿದುಕೊಂಡು ನಿಂತಿದ್ದನು. ಆಗ ಪ್ರಲ್ಹಾದನು ಆ ಮೊಮ್ಮಗನನ್ನು ಕುರಿತು ನುಡಿದನು.

**ಪ್ರಲ್ಹಾದ :-** ವತ್ಸಾ, ಈಗ ನನಗೆ ಎಲ್ಲವೂ ತಿಳಿಯಿತು. ನಿಮ್ಮೆಲ್ಲರ ತೇಜೋಹಾನಿ ಆದದ್ದರ ಕಾರಣವು ಸ್ಪಷ್ಟವಾಯಿತು, ಹೇಳುತ್ತೇನೆ ಕೇಳು. ಜಗಜ್ಜನ್ಮಾದಿ ಕಾರಣನಾದ, ಅನಾದಿ ಮೂರುತಿಯಾದ ದೇವದೇವನಾದ ಶ್ರೀಹರಿಯು ಇಂದ್ರಾದಿ ದೇವತೆಗಳಿಗೆಲ್ಲ ಅನುಗ್ರಹಮಾಡಬೇಕೆಂದು ದೇವಮಾತೆಯಾದ ಅದಿತಿ ದೇವಿಯಗರ್ಭದಲ್ಲಿ ಬಂದು ನಿಂತಿದ್ದಾನೆ. ಅವನ ಅವತಾರದಿಂದ, ಈ ಮೂರು ಲೋಕಗಳು ಉದ್ಧಾರವಾಗಲಿವೆ. ಅರಸರಿಗೆಲ್ಲ ಅರಸನಾದ. ದೇವತೆಗಳಿಗೆಲ್ಲ ಮಹಾದೇವನಾದ ಆ ವಿಷ್ಣುವು ಏಳುಲೋಕಗಳ ಗುರುವು. ಅವನಿಗೆ ಆದಿಯೂ ಇಲ್ಲ. ಅಂತ್ಯವೂ ಇಲ್ಲ. ಇಂದ್ರ, ರುದ್ರ, ಬ್ರಹ್ಮ, ಸೂರ್ಯ, ಚಂದ್ರ ಮುಂತಾದ ದೇವತೆಗಳು, ಮರೀಚಿ ಮೊದಲಾದ ಮಹರ್ಷಿಗಳೂ ಆ ಪರಮಾತ್ಮನ ನಿಜವಾದ ಸ್ವರೂಪವನ್ನು ಪೂರ್ಣರೂಪದಲ್ಲಿ ಅರಿಯಲಾರರು. ಅಂತಹ ಪರಚೇತನಗಳಿಗೆಲ್ಲ ಅನುಗ್ರಹಮಾಡುವ ಪರಂಜ್ಯೋತಿ ಸ್ವರೂಪಿಯಾದ ವಿಷ್ಣುರೂಪಿ ಪರಮಾತ್ಮನು ಈಗ ಆದಿತಿಯ ಗರ್ಭದಿಂದ ಭೂಮಂಡಲದಲ್ಲಿ ಅವತರಿಸಿದ್ದಾನೆ. ಅದೇ ಶ್ರೀಹರಿಯು ಹಿಂದೆ ನನ್ನ ತಂದೆಯಾದ ಹಿರಣ್ಯಕಶಿಪುವನ್ನು ನರಸಿಂಹರೂಪದಿಂದ ಬಂದು ಕೊಂದುಹಾಕಿದನು. ವಿದ್ವಾಂಸರು ಅವನನ್ನು ತಿಳಿದು ಅಜ್ಞಾನದಿಂದ ತಮ್ಮ ಪಾಪಗಳನ್ನು ತೊಳೆದು ಅವನ ಚರಣಗಳಿಗೆ ಮೊರೆಹೊಕ್ಕು ಉದ್ಧೃತರಾಗುತ್ತಾರೆ. ಅಂತಹ ವಾಸುದೇವನಿಗೆ ನಾನು ನಿತ್ಯವು ನಮಸ್ಕಾರಮಾಡುತ್ತೇನೆ. ವರಾಹರೂಪದಿಂದ ಅದೇ ವಾಸುದೇವನು ಈ ಚರಾಚರ ಪ್ರಪಂಚವನ್ನು ಉದ್ಧರಿಸಿದನು. ನಮ್ಮ ಇಂದ್ರಿಯಗಳಿಗೆ ಅವನು ಗೋಚರನಾಗಲಾರ, ಮನಸ್ಸಿಗೆ ನಿಲುಕಲಾರ. ವೇದಗಳಿಗೆ ಗೋಚರನಾಗಲಾರ, ಅಂತಹ ಭಗವಂತನನ್ನು ಯೋಗಿಗಳು ಅವನ ಅನುಗ್ರಹದಿಂದಲೇ ತಮ್ಮ ಯೋಗ್ಯತಾನುಸಾರ ಕಿಂಚಿತ್ತು ತಿಳಿದು ಉಪಾಸನೆಗೈಯುತ್ತಾರೆ. ನಾನು ಕೂಡ ಅವನ ಪ್ರಸಾದದಿಂದಲೇ ಆ ಭಗವಂತನನ್ನು ನನ್ನ ಶಕ್ತ್ಯನುಸಾರ ಹಾಡುತ್ತಿದ್ದೇನೆ. ಅದಿತಿ ಗರ್ಭದಲ್ಲಿ ಮೂಡಿ ಅವತರಿಸಿದ ಆ ವಾಸುದೇವನಿಂದಲೇ ನಿಮ್ಮೆಲ್ಲ ಅಸುರರ ತೇಜೋಹಾನಿಯು ಆಗಿರುತ್ತದೆ. ಆ ಅದಿತಿಯ ಮಗನಾದ ವಾಮನಾವತಾರಿ ಶ್ರೀಹರಿಗೆ ಪುನಃ ನಮಸ್ಕರಿಸುತ್ತೇನೆ.

**ಬಲಿ:-** ಅಜ್ಜ, ಈ ಹರಿ ಯಾರು ? ವಾಮನ ಯಾರು ? ನನ್ನ ಬಲದ ಮುಂದೆ ಅವನೆಷ್ಟರವನು! ನಮಗೇನು ಇವನ ಅಂಜಿಕೆ ! ಈ ವಾಮದೇವನಿಗಿಂತ ಬಲಿಷ್ಠರಾದ ನೂರಾರು ದೈತ್ಯರು ನನ್ನ ಸೈನ್ಯದಲ್ಲಿ ಇದ್ದಾರೆ. ವಿಪ್ರಚಿತ್ತಿ, ಶಿಬಿ, ಶಂಕು, ಅಶ್ವಶಿರ, ಹಯಶಿರ, ಮಹಾಹನು, ಪ್ರಘಸ, ಶಂಭು, ಕುಕ್ಕರ, ಸುಧೋಪಯ ಮುಂತಾದ ಮಹಾವೀರರು, ಮಹಾಶೂರರು, ನನ್ನ ದಾನವ ದಂಡಿನಲ್ಲಿ ಮೆರೆಯುತ್ತಿದ್ದಾರೆ. ಇವರಲ್ಲಿ ಒಬ್ಬೊಬ್ಬರೂ ಬೇಕೆಂದರೆ ಭೂಮಂಡಲವನ್ನೇ ಎತ್ತಿ ಇಡಬಲ್ಲರು. ಆ ನಿನ್ನ ವಾಸುದೇವನು, ನನ್ನ ಈ ದೈತ್ಯ ವೀರರಲ್ಲಿ ಒಬ್ಬನಿಗೂ ಸಮನಾಗಲಾರನು. ಇವರೆಲ್ಲರ ಮುಂದೆ ಆ ಕೃಷ್ಣನು ಏನು ಮಹಾ ?

**ಶೌನಕ:-** ಮೊಮ್ಮಗನ ಈ ಮಾತು ಕೇಳಿ ದೈತ್ಯ ಶ್ರೇಷ್ಠನಾದ ಪ್ರಲ್ಹಾದನಿಗೆ ಸಿಟ್ಟು ಬಂದಿತು. "ಶ್ರೀ ಹರಿಯನ್ನು ತೆಗಳಿ ಮಾತನಾಡುವ ನಿನಗೆ ಧಿಕ್ಕಾರವಿರಲಿ" ಧಿಕ್ ದೈತ್ಯಾಧಮ. ಎಂದು ಶಪಿಸಿ, ಹೀಗಳೆದು, ಮತ್ತೆ ನಿಷ್ಠುರವಾಗಿ ನುಡಿಯತೊಡಗಿದನು. "ನಿನ್ನಂತಹ ದುಷ್ಟಬುದ್ಧಿಯ ಅವಿವೇಕಿಯನ್ನು ರಾಜನನ್ನಾಗಿ ಹೊಂದಿದ ದೈತ್ಯರೆಲ್ಲರೂ ಬೇಗನೇ ನಾಶಹೊಂದುವರು. ದೇವದೇವನಾದ ವಾಸುದೇವನನ್ನು ನಿನ್ನಂತಹ ದುರ್ಬುದ್ಧಿಯ ದುರುಳ ದಾನವನ ಹೊರತು ಬೇರೆ ಯಾರು ಬೈಯ್ದಾರು? ನೀನು ಹೇಳಿದ ವಿಪಚಿತ್ತ, ಶಿಬಿ, ಶಂಕು, ಮುಂತಾದ ದೈತ್ಯವೀರರು, ಬ್ರಹ್ಮಾದಿ ಎಲ್ಲ ದೇವತೆಗಳು ಸಮುದ್ರ, ದ್ವೀಪ ಮುಂತಾದ ಚರಾಚರ ಜಗತ್ತು ನಾನು, ನೀನು ಎಲ್ಲವೂ ಕೂಡಿದರೂ ಕೂಡ ಆ ಕೇಶವನಿಗೆ ಸಮಾನ ವಾಗಲಾರದು. ನಿನಗೆ ವಿನಾಶದ ಕಾಲವು ಸಮೀಪವಾಗಿದೆ. ಆದುದರಿಂದಲೇ ಇಂತಹ ದುರ್ಬುದ್ಧಿ ಹುಟ್ಟಿ, ಹಿರಿಯರ ಮಾತನ್ನು ಮೀರಿ ನಡೆಯುತ್ತಲಿರುವೆ. ನೀನೂ ನಿನ್ನಂತಹ ಪಾಪಿಗೆ ಜನ್ಮಕೊಟ್ಟ ನಿನ್ನ ತಂದೆಯೂ ನನ್ನ ವಂಶದಲ್ಲಿ ಹುಟ್ಟಿದುದಕ್ಕೆ ನನಗೆ ಬಹಳ ದುಃಖವಾಗಿದೆ. ಶ್ರೀಹರಿಯು ನನಗೆ ಪ್ರಾಣಕ್ಕಿಂತಲೂ ಪ್ರೀಯನಾದ ಗುರುವಾಗಿದ್ದಾನೆ. ನನ್ನೆದುರು ನನ್ನ ಗುರುವಿನ ನಿಂದೆಮಾಡಿದರೆ ನನಗೇ ಅಪಮಾನ. ನಿನ್ನ ತಂದೆಯತಂದೆಯಾದ ನನಗೂ ಸರ್ವಜಗತ್ತಿಗೂ ಗುರುವಾದ ನಾರಾಯಣನನ್ನು ನಿಂದಿಸಿದ್ದರಿಂದ ಕೂಡಲೇ ಐಶ್ವರ್ಯ ಭ್ರಷ್ಟನಾಗು. ನನ್ನ ಶಿರಚ್ಛೇದ ಮಾಡಿದ್ದರಕ್ಕಿಂತ ಹೆಚ್ಚಿನ ದುಃಖ ನನಗಾಗಿದೆ. ಈ ಕೃಷ್ಣನ ನಿಂದಾಶ್ರವಣ ನನಗೆ ನಿನ್ನಿಂದ ಆದ್ದರಿಂದ ನೀನು ರಾಜ್ಯಭ್ರಷ್ಟನಾಗಿ ಪತಿತನಾಗು.

ಪ್ರಲ್ಹಾದನ ಈ ಸಿಟ್ಟಿನ ಮಾತುಗಳನ್ನು ಕೇಳಿ ಬಲಿರಾಜನು ಅವನ ಪಾದಗಳ ಮೇಲೆ ಬಿದ್ದು ನಮಸ್ಕರಿಸಿ ಹೇಳಿಕೊಂಡನು.

"ಅಜ್ಜನೇ, ಪ್ರಸನ್ನನಾಗು. ಅಜ್ಞಾನದಿಂದ ಮೂಢನಾದ ನನ್ನ ಮೇಲೆ ಕೋಪ ಮಾಡಬೇಡ. ಪರಾಕ್ರಮದ ಗರ್ವದಿಂದ ಹೀಗೆ ಮಾತಾಡಿದೆ. ನನ್ನಂತಹ ದುರಾಚಾರಿಗೆ ಶಾಪಕೊಟ್ಟಿದ್ದೇ ಸರಿ. ನನ್ನ ಉದ್ಧಟತನಕ್ಕೆ ಐಶ್ವರ್ಯ ಹಾನಿ, ರಾಜ್ಯಭ್ರಂಶಗಳು ಆದದ್ದೂ ಒಂದು ರೀತಿಯಿಂದ ಒಳ್ಳೇಯದೇ. ಏನೇ ಆಗಲಿ ನೀನು ಮಾತ್ರ ಕೋಪದಿಂದ ನಮ್ಮನ್ನು ಬಿಡಬೇಡ. ಮೂರುಲೋಕದ ಸಾಮ್ರಾಜ್ಯವಾಗಲಿ, ಅಧಿಕಾರವಾಗಲಿ, ಸಿಗಲಾರದ ವಸ್ತುಗಳೆಲ್ಲ ಹೇಗಾದರೂ ಸಿಗಬಹುದು. ಆದರೆ

ನಿನ್ನಂತಹ ಹಿತೋಪದೇಶಕ ಗುರುಗಳು ಸಿಗುವದು ದುರ್ಲಭ. ನಿನ್ನ ಕೋಪಕ್ಕೆ ಬೆದರಿದಷ್ಟು ನಿನ್ನ ಶಾಪಕ್ಕೆ ನಾನು ಬೆದರುವದಿಲ್ಲ.

**ಪ್ರಲ್ಹಾದ** :- ಹರಿನಿಂದಾ ಶ್ರವಣದಿಂದ ನನಗೆ ತಡೆಯಲಾರದಷ್ಟು ಕೋಪ ಬಂದಿತ್ತು. ಅದಕ್ಕಾಗಿ ನಾನು ಶಾಪಕೊಟ್ಟೆ ಆ ಶಾಪ ಸುಳ್ಳಾಗಲಾರದು. ಇನ್ನು ಮೇಲಾದರೂ ಇಂದಿನಿಂದ ಶ್ರೀಹರಿಯಲ್ಲಿ ಭಕ್ತಿಮಾಡು. ಆ ಭಕ್ತಿಯಿಂದ ಶ್ರೀ ಹರಿಯು ಪ್ರಸನ್ನನಾಗಿ ನಿನ್ನನ್ನು ರಕ್ಷಿಸುವನು. ನೀನು ನನ್ನನ್ನು ಸಂಕಟ ಬಂದಾಗ ನೆನೆಸು. ನಿನಗೆ ಶ್ರೇಯಸ್ಸು ಉಂಟಾಗುವಂತೆ ನಾನು ಪ್ರಯತ್ನಿಸುವೆನು'' ಎಂದು ಸಂತೈಸಿದನು.

ಇತ್ತ ಶ್ರೀ ವಿಷ್ಣುವು ವಾಮನರೂಪದಿಂದ ಅದಿತಿ ದೇವಿಯ ಗರ್ಭದಿಂದ ಪ್ರಕಟನಾದನು. ಹರಿಯು ಅವತರಿಸಿದ ಕೂಡಲೇ ದೇವತೆಗಳ ಹಾಗೂ ಅದಿತಿಯ ದುಃಖವೆಲ್ಲ ಪರಿಹಾರವಾಯಿತು. ಹಿತಕರವಾದ ಗಾಳಿ ಬೀಸಿತು. ಎಲ್ಲ ಪ್ರಾಣಿಗಳಲ್ಲಿ ಧರ್ಮಬುದ್ಧಿ ಹುಟ್ಟಿತು.

ಭಗವಂತನು ಅವತಾರಮಾಡಿದ ಕೂಡಲೇ ಬ್ರಹ್ಮದೇವರು ಆ ಕೂಸಿಗೆ ಜಾತಕರ್ಮಾದಿಗಳನ್ನು ಮಾಡಿ ಭಕ್ತಿಯಿಂದ ಸ್ತೋತ್ರ ಮಾಡಿದರು.

## ಬ್ರಹ್ಮೋವಾಚ

**ಜಯಾಽದ್ಯೇಶ! ಜಯಾಽ'ಜೇಯ! ಜಯ ಸರ್ವಾತ್ಮಕಾತ್ಮಕ॥**
**ಜಯ ಜನ್ಮಜರಾಽಪೇತ ಜಯಾಽನಂತ! ಜಯಾಽಚ್ಯುತ॥**

**ಜಯಾಽಜಿತ! ಜಯಾಽಮೇಯ! ಜಯಾಽವ್ಯಕ್ತಸ್ಥಿತೇ ಜಯ॥**
**ಪರಮಾರ್ಥಾರ್ಥ ಸರ್ವಜ್ಞ! ಜ್ಞಾನಜ್ಞೇಯಾತ್ಮನೇ ನಮಃ॥**

**ಜಯಾಽಶೇಷ ಜಗತ್ಸಾಕ್ಷಿನ್! ಜಗತ್ಕರ್ತಃ ಜಗದ್ಗುರೋ।**
**ಜಗತೋಽಸ್ಯಾಂತಕೃದ್ದೇವ! ಸ್ಥಿತಿಂ ಪಾಲಯಿತುಂ ಜಯ॥**

**ಜಯಾಶೇಷ ಜಯಾಶೇಷ! ಜಯಾಖಿಲ ಹೃದಿ ಸ್ಥಿತ।**
**ಜಯಾದಿಮಧ್ಯಾಂತ ಜಯ ಸರ್ವಜ್ಞಾನನಿಧೇ ಜಯ।**

**ಬ್ರಹ್ಮ** :- ಜನನ, ಮುಪ್ಪು, ಮರಣಗಳಿಂದ ಅತೀತನಾದ, ಅಚ್ಯುತನಾದ, ಸರ್ವಜ್ಞಮೂರ್ತಿಯಾದ ಜಗದ್ಗುರುವೇ, ನಿನಗೆ ಗೆಲುವು ಆಗಲಿ ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವ, ಸರ್ವರ ಹೃದಯಾಂತರ್ಯಾಮಿಯಾದ ಅಚ್ಯುತನೇ, ಜಯ ಜಯ. ವೈರಿಯಾದ ಹಿರಣ್ಯ ಕಶಿಪುವಿನ ವಕ್ಷಸ್ಥಳ ಸೀಳಿದ ನರಸಿಂಹರೂಪಿ, ನಾರಾಯಣನಿಗೆ ನಮಸ್ಕಾರ. ನಾನಾಗಲಿ ಇಂದ್ರರುದ್ರಾದಿಗಳಾಗಲಿ ಸನಕಾದಿ ಬ್ರಹ್ಮಜ್ಞಾನಿ ಮುನಿಗಳಾಗಲಿ ನಿನ್ನನ್ನು ತಿಳಿಯಲು ಸಾಧ್ಯವಿಲ್ಲ. ನಿನ್ನ ಮಾಯೆ ಎಂಬ ಬಟ್ಟೆಯಿಂದ ಸುತ್ತಲ್ಪಟ್ಟ ಪ್ರಾಣಿಗಳಲ್ಲಿ ಯಾರೂ ನಿನ್ನ ಪ್ರಸಾದವಿಲ್ಲದೆ ನಿನ್ನನ್ನು ಅರಿಯಲಾರರು. ಪರಮಾನುಗ್ರಹ ಪೂರ್ಣವಾದ ನಿನ್ನ ಪ್ರಸಾದ ಹೊಂದಿದ ಜ್ಞಾನಿಗಳು

ಮಾತ್ರ ನಿನ್ನನ್ನು ಚೆನ್ನಾಗಿ ತಿಳಿಯಬಲ್ಲರು. ನಂದೀಶ್ವರನ ಒಡೆಯನಾದ ಮಹಾದೇವನಿಗೂ ಕೂಡ ಈಶ್ವರನೆನಿಸಿದ ಮಹಾವಿಷ್ಣುವೇ, ಈ ವಿಶ್ವಕ್ಕೆಲ್ಲ ನೀನು ಕ್ಷೇಮವನ್ನುಂಟುಮಾಡು."

ಬ್ರಹ್ಮದೇವರ ಈ ಸೋತ್ರವನ್ನು ಕೇಳಿ, ವಾಮನಾಕೃತಿಯ ಈ ವಿಷ್ಣುವು ನಸುನಕ್ಕು ಗಂಭೀರವಾಗಿ ಮಾತನಾಡಿದನು. "ಪೂರ್ವದಲ್ಲಿ ನಾನು, ಇಂದ್ರ ಮೊದಲಾದ ದೇವತೆಗಳಿಂದಲೂ ನಿನ್ನಿಂದಲೂ ಕಶ್ಯಪಮುನಿಯಿಂದಲೂ ಸ್ತುತಿಸಲ್ಪಟ್ಟೆ. ಆಗಲೇ ನಾನು ಇಂದ್ರನಿಗೆ ಮೂರುಲೋಕದ ಆಧಿಪತ್ಯವನ್ನು ಗೆದ್ದು ಕೊಡುತ್ತೇನೆ" ಎಂದು ವಚನ ಕೊಟ್ಟಿದ್ದೆ. ಅನಂತರ ಅದಿತಿದೇವಿ ತಪಸ್ಸು ಮಾಡಿದಾಗಲೂ ಅವಳಿಗೆ ಇದೇ ಮಾತನ್ನೇ ಹೇಳಿದ್ದೆ. ಈಗ ಅದರಂತೆ ಮಾಡಲು ನಾನು ಅವತರಿಸಿ ಬಂದಿದ್ದೇನೆ. ಇನ್ನು ಮೇಲೆ ಸಾವಿರ ಕಣ್ಣಿನ ಈ ಶಚೀಪತಿಯು ಸ್ವರ್ಗಾದಿ ಮೂರು ಲೋಕಗಳ ಅಧಿಪತಿ ಆಗುವನು. ಅವನ ವಿಘ್ನಗಳನ್ನೆಲ್ಲ ನಾನು ಪರಿಹರಿಸುವೆನು."

ಅನಂತರ ಬ್ರಹ್ಮದೇವರು, ಆ ಹೃಷೀಕೇಶನಿಗೆ ಕೃಷ್ಣಾಜಿನವನ್ನು ಕೊಟ್ಟರು. ಬೃಹಸ್ಪತಿ ಜನಿವಾರವನ್ನೂ, ಮರೀಚಿ ಮುನಿಯು ದಂಡವನ್ನು, ವಶಿಷ್ಠ ಮುನಿ ಕಮಂಡಲವನ್ನು, ಅಂಗಿರಸ ಋಷಿಯ ವೇದಗಳನ್ನು, ಪುಲಹನು ಅಕ್ಷಸೂತ್ರವನ್ನೂ ಪುಲಸ್ತ್ಯ ಋಷಿಯು ಎರಡು ಬೆಳ್ಳಗಿನ ಬಟ್ಟೆಯನ್ನೂ ಕೊಟ್ಟು ಕೈಮುಗಿದರು. ಓಂಕಾರ ಸಹಿತವಾದ ಆ ನಾಲ್ಕು ವೇದಗಳು ವಾಮನದೇವರ ಸೇವೆಗೆ ಉಪಸ್ಥಿತವಾದವು. ಅದರಂತೆ ಸಾಂಖ್ಯ, ಯೋಗ, ಬ್ರಹ್ಮಮೀಮಾಂಸೆ ಮುಂತಾದ ಶಾಸ್ತ್ರಗಳೆಲ್ಲವೂ ಹರಿಯ ಸೇವೆಗೆ ಅಣಿಯಾಗಿ ಬಂದವು. ಆ ವಟು ವಾಮನನು ಜಟಾಧಾರಣಮಾಡಿ, ದಂಡ ಹಿಡಿದು ಛತ್ರಧರಿಸಿ, ಕಮಂಡಲು ಕೈಕೊಂಡು, ಸರ್ವ ದೇವತಾಮಯನಾಗಿ, ಬಲಿಚಕ್ರವರ್ತಿಯ ಯಜ್ಞಮಂಟಪಕ್ಕೆ ನಡೆದನು. ಆ ವಾಮನನು ನಡೆಯತೊಡಗಿದಾಗ ಬೆಟ್ಟ ಬಯಲು, ಸಮುದ್ರ, ದ್ವೀಪಗಳಿಂದ ಸಹಿತವಾಗಿ ಅಖಂಡ ಮಹೀಮಂಡಲವೆಲ್ಲವೂ ಕಂಪಾಯಮಾನವಾಯಿತು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರು ನಲವತ್ತಾರನೆಯ ಅಧ್ಯಾಯ ಮುಗಿದುದು.*

—o—

**ಶೌನಕ ಉವಾಚ:**

**ಸಪರ್ವತವನಾಮೂರ್ವೀಂ ದೃಷ್ಟ್ವಾ ಸಂಕ್ಷೋಭಿತಾಂ ಬಲಿಃ ।**
**ಪಪ್ರಚ್ಛೋಶನಸಂ ಶುದ್ಧಂ ಪ್ರಣಿಪತ್ಯ ಕೃತಾಂಜಲಿಃ ॥**

**ಶೌನಕ :-** ಪರ್ವತ, ಪುರ, ವನ, ಸಮುದ್ರ ಸಹಿತವಾಗಿ ಭೂಮಂಡಲವೆಲ್ಲವೂ ಪ್ರಕ್ಷುಬ್ಧವಾದುದನ್ನು ಕಂಡು ಬಲಿಚಕ್ರವರ್ತಿಯು ಕೈಮುಗಿದು ಗುರುಗಳಾದ ಶುಕ್ರಾಚಾರ್ಯರನ್ನು ನಮಸ್ಕರಿಸಿ ಕೇಳಿದನು.

**ಬಲಿ :-** ಗುರುಗಳೆ, ಶೈಲ, ಸಾಗರ, ಸಹಿತವಾದ ಭೂಮಿ ಎಲ್ಲವೂ ಕ್ಷೋಭೆಗೊಂಡಿದೆ. ಹೋಮಕುಂಡದಲ್ಲಿಯ ಅಗ್ನಿಗಳು ಅಸುರ ಭಾಗಗಳನ್ನು ಸ್ವೀಕರಿಸುತ್ತಿಲ್ಲ. ಇದಕ್ಕೆ ಕಾರಣವೇನು?

ಬಲಿಚಕ್ರವರ್ತಿಯ ಈ ಪ್ರಶ್ನೆಯನ್ನು ಕೇಳಿ ದೈತ್ಯಗುರುಗಳೂ ವೇದಪಾರಂಗತರೂ ಆದ ಶುಕ್ರಾಚಾರ್ಯರು ಬಹುಕಾಲ ಧ್ಯಾನಗೈದು, ವಿಚಾರಮಾಡಿ ಉತ್ತರ ಕೊಟ್ಟರು.

''ಜಗತ್‌ಕಾರಣನಾದ ಶ್ರೀಹರಿಯು ವಾಮನರೂಪದಿಂದ ಕಶ್ಯಪ ಮುನಿಯ ಮನೆಯಲ್ಲಿ ಅವತಾರಮಾಡಿದ್ದಾನೆ. ಆ ಭಗವಂತನು ಈಗ ದಾನವಪತಿಯಾದ ನಿನ್ನ ಯಜ್ಞಮಂಟಪಕ್ಕೆ ದಯಮಾಡಿಸುತ್ತಿದ್ದಾನೆ. ಅವನ ಹೆಜ್ಜೆಯ ವಿನ್ಯಾಸದಿಂದ ಈ ಭೂಮಿಯು ಕ್ಷೋಭೆಗೊಂಡು, ಕಂಪಿಸುತ್ತಿದೆ. ಗುಡ್ಡಗಳು ನಡುಗುತ್ತಿವೆ. ಸಮುದ್ರಗಳು ಅಲ್ಲೋಲ ಕಲ್ಲೋಲವಾಗಿವೆ. ಈ ಜಗತ್ಪತಿಯನ್ನು ಹೊರಲು ಧರಣಿಯು ಸಮರ್ಥಳಲ್ಲ, ಅವನೇ ಈ ಭೂಮಿಯನ್ನು ಇದರ ಮೇಲಿರುವ ಗುಡ್ಡ ಗಿಡಗಳನ್ನು ಪ್ರಕ್ಷುಬ್ಧ ಸಾಗರಗಳನ್ನೂ ದೇವ, ದಾನವ, ಮಾನವ ಕಿನ್ನರ, ಗಂಧರ್ವರನ್ನೂ ಕಿಂಬಹುನಾ ಚರಾಚರ ಪ್ರಪಂಚವನ್ನೇ ಧರಿಸಿದ್ದಾನೆ. ತನ್ನನ್ನು ಧರಿಸಿದ ಶ್ರೀಹರಿಯೇ ಈಗ ತನ್ನ ಮೇಲೆ ಹೆಜ್ಜೆಯಿಡುತ್ತ ನಡೆದು ಬರುತ್ತಿರುವದರಿಂದ ಈ ಭೂಮಿಯು ಕುಸಿಯುತ್ತಿದೆ. ಅವನ ಅವತಾರವಾದ ಮೇಲೆ ದೈತ್ಯರಿಗೆ ಇನ್ನು ಯಜ್ಞಭಾಗವು ದೊರೆಯಲಾರದು. ಅವರಿಗಾಗಿ ಅಗ್ನಿಗಳು ಹವಿಸ್ಸುಗಳನ್ನು ಸ್ವೀಕರಿಸುವದಿಲ್ಲ.

**ಬಲಿ :-** ಗುರುಗಳೇ, ಹಾಗಾದರೆ ನಾನು ಪರಮಧನ್ಯನೇ ಸರಿ. ನನ್ನಂತಹ ಪುಣ್ಯವಂತರಾರು! ಯಜ್ಞಪುರುಷನಾದ ಸಾಕ್ಷಾತ್ ಶ್ರೀಹರಿಯೇ ನನ್ನ ಯಜ್ಞಮಂಟಪದವರೆಗೆ ನಡೆದು ಬರುವನೆಂದ ಬಳಿಕ ನನ್ನಂತಹ ಭಾಗ್ಯವಂತರಾರಿದ್ದಾರೆ ಈ ಭೂಮಂಡಲದಲ್ಲಿ? ಸರ್ವೇಶ್ವರನಾದ ಶ್ರೀ ಕೃಷ್ಣನು ನನ್ನ ಯಜ್ಞಮಂಟಪಕ್ಕೆ ದಯಮಾಡಿಸಿದಾಗ ನಾನು ಏನು ಮಾಡಬೇಕೆಂಬುದನ್ನು ತಿಳಿಸಿರಿ.

**ಶುಕ್ರಾಚಾರ್ಯ :-** ವೇದಗಳು ಪರಮ ಪ್ರಮಾಣ. ಆ ವೇದವಚನಾನುಸಾರವಾಗಿ ದೇವತೆಗಳೇ ವಾಸ್ತವಿಕವಾಗಿ ಯಜ್ಞಭಾಗಕ್ಕೆ ಅಧಿಕಾರಿಗಳು. ಆದರೆ ನೀನು ನಿನ್ನ ಶಕ್ತಿಯಿಂದ ದೈತ್ಯರನ್ನೆಲ್ಲ ಯಜ್ಞಭಾಗದ ಅಧಿಕಾರಿಗಳನ್ನಾಗಿ ಮಾಡಿದ್ದಿ. ವೇದೋಕ್ತಪದ್ಧತಿಯಿಂದ ಧರ್ಮಕಾರ್ಯಗಳು ನೆರವೇರುವಂತೆ ಮಾಡುವದು

ಮರ್ಯಾದಾ ಪುರುಷೋತ್ತಮನಾದ ಶ್ರೀ ಹರಿಯ ಇಚ್ಛೆ. ಆದುದರಿಂದ ಆ ಭಗವಂತನು, ನಿನ್ನ ಮನೆಗೆ ನಿನ್ನ ಯಜ್ಞಮಂಟಪಕ್ಕೆ ಆಗಮಿಸುತ್ತಿದ್ದಾನೆ. ದೇವತೆಗಳಿಗೆ ಐಶ್ವರ್ಯ ತಂದು ಕೊಡುವ ಆ ವಾಮನನು ಏನಾದರೂ ಬೇಡಿದರೆ, ನೀನು ಯತ್ಕಿಂಚಿದಪಿ ದಾನಕೊಡಕೊಡದು, ಸೌಮ್ಯವಾಗಿ, 'ದೇವಾ ನಿನಗೆ ನಾನು ಏನನ್ನು ಕೊಡಲೂ ಸಮರ್ಥನಿಲ್ಲ' ಎಂದು ಇಷ್ಟೇ ಹೇಳತಕ್ಕದ್ದು.

**ಬಲಿ:-** ಗುರುಗಳೇ, ಯಾರು ಬೇಡಿದರೂ ನಾನು ಇಂದಿನವರೆಗೆ 'ಇಲ್ಲ' ಎಂದಿಲ್ಲ. ಸಂಸಾರದಿಂದ ಪಾರುಮಾಡುವ ಆ ಕಂಸಾರಿಯೇ ಮನೆಯವರೆಗೆ ಬಂದು ಬೇಡಿದಾಗ ನಾನು ಬಾಯಿಯಿಂದ ''ನಾಸ್ತಿ'' ಎಂದು ಹೇಗೆ ಹೇಳಲಿ ? ವ್ರತ, ಉಪವಾಸ, ಬಗೆಬಗೆಯ ಯಜ್ಞಯಾಗಗಳಿಂದ ತಪಸ್ಸುಗಳಿಂದ ಯಾವ ಹರಿಯನ್ನು ಅರ್ಚಿಸಿ, ಮೆಚ್ಚಿಸಿ, ಜ್ಞಾನಿಗಳು ಪ್ರಸನ್ನಗೊಳಿಸುವರೋ ಅಂತಹ ಭಗವಂತ ತಾನಾಗಿ ನನ್ನ ಬಾಗಿಲವರೆಗೆ ಬಂದು 'ದೇಹಿ' ಎಂದು ನುಡಿದರೆ, ಇನ್ನೇನು ಬೇಕು? ಯಾವನ ಪ್ರೀತ್ಯರ್ಥವಾಗಿ ಶಿಷ್ಟರು, ನಾನಾ ವಿಧ ಯಜ್ಞಯಾಗಗಳನ್ನು ಮಾಡುವರೋ, ಅಂತಹ ಯಜ್ಞಮೂರ್ತಿಯೇ ನನ್ನ ಬಳಿಗೆ ಬಂದು ಯಾಚನೆ ಮಾಡುವನೆಂದ ಬಳಿಕ ನಾನು ಮಾಡುವ ಕರ್ಮವೆಲ್ಲವೂ ಸಾರ್ಥಕವಾಯಿತು. ನಾನು ಜನ್ಮಾಂತರದಲ್ಲಿ ದಿವ್ಯ ತಪಸ್ಸನ್ನು ಬಹುಕಾಲ ಮಾಡಿರಬಹುದು. ಅಸಂಖ್ಯ ಪುಣ್ಯಕರ್ಮಗಳನ್ನುಗೈದಿರಬಹುದು. ಅದುದರಿಂದಲೇ ಇಂದು ನಾನು ಕೊಟ್ಟದ್ದನ್ನು ಸ್ವಯಂ ಶ್ರೀಹರಿಯೇ ತನ್ನ ಕೈಯಿಂದಲೇ ಸ್ವೀಕರಿಸುತ್ತಾನೆ. ಇಂತಹ ಜಗತ್ಪ್ರಭುವು ನನ್ನ ಎದುರು ಬಂದು ಕೈ ಒಡ್ಡಿ 'ದೇಹಿ' ಎಂದಾಗ ನಾನು 'ನಾಸ್ತಿ ನಾಸ್ತಿ' ಎಂದರೆ ನನ್ನಂತಹ ದುರ್ಭಾಗ್ಯನಾರು! ಈ ಯಜ್ಞದಲ್ಲಿ ಯಜ್ಞಪತಿ ಜನಾರ್ದನನು ಬಂದು 'ಕೊಡು' ಎಂದು ಕೇಳಿದರೆ ಹಿಂದು ಮುಂದು ವಿಚಾರಿಸದೇ ನನ್ನ ತಲೆಯನ್ನೇ ಕೊಟ್ಟುಬಿಡುತ್ತೇನೆ. ಎಂತೆಂತಹ ಬಡ ಭಿಕ್ಷುಗಳು ಬಂದಾಗಲೂ ನಾನು 'ಇಲ್ಲ' ವೆಂದು ಅಂದಿಲ್ಲ. ಎಂದೂ ಅಭ್ಯಾಸವಿರದ ಆ 'ನಾಸ್ತಿ' ಎಂಬ ಶಬ್ದವನ್ನು ಮೊದಲು ಶ್ರೀಹರಿಯ ಮುಂದೆ ಪ್ರಯೋಗಮಾಡಿ ನಾಚಿಕೆಬಿಟ್ಟು ನಾಸ್ತಿ ಎಂದು ಬಾಯಿ ತೆರೆದು ಹೇಳಲೆ? ವೀರರಿಗೆ ದಾನ ಕೊಡುವದರಿಂದ ಏನಾದರೂ ಆಪತ್ತು ಬಂದರೆ ಅದು ಶ್ಲಾಘನೀಯವೇ. ಸರಿ. ಗುರುಗಳೇ, ದಾನಕ್ಕೆ ಈ ಹರಿಯು ಬಹಳ ದೊಡ್ಡಪಾತ್ರ. ನಿಮ್ಮ ಅನುಗ್ರಹದಿಂದಲೇ ನನಗೆ ದಾನನೀಡಲು ಶ್ರೀಹರಿಯಂತಹ ಸತ್ಪಾತ್ರವು ದೊರಕಿತು. ಶ್ರೀಹರಿಯೇ ನನ್ನ ದಾನವನ್ನು ಸ್ವೀಕರಿಸಿದ ಬಳಿಕ ನಾನು ಇನ್ನು ಈ ಜನ್ಮದಲ್ಲಿ ಪಡೆಯತಕ್ಕದ್ದು ಏನಿದೆ? ನನ್ನ ದಾನದಿಂದ ನನ್ನ ಎಲ್ಲ ಐಶ್ವರ್ಯವನ್ನು ಸ್ವೀಕರಿಸಿ, ಆ ಭಗವಂತನು ಎಲ್ಲ ದೇವತೆಗಳನ್ನು ಪೋಷಿಸಿದರೆ ನನ್ನ ಗಳಿಕೆ, ಉಳಿಕೆ, ದಾನ ಎಲ್ಲವೂ ಸಾರ್ಥಕವಾಯಿತೆಂದು ಭಾವಿಸುತ್ತೇನೆ. ನೀವು ನನ್ನ ಮುಖಾಂತರ ಮಾಡಿಸಿದ ಈ ಯಜ್ಞದ ಉದ್ದೇಶವು ಶ್ರೀಹರಿಯ ಪ್ರಸಾದವೇ ಅಲ್ಲವೆ? ಈ ವಾಮನನ ಆಗಮನದಿಂದ ತಮ್ಮ ಉದ್ದೇಶವು ಸಫಲವಾಯಿತು. ಆ ಭಗವಂತನೇ ತಾನಾಗಿ ದಕ್ಷಿಣೆ ಪಡೆಯಲು ಇಲ್ಲಿಯವರೆಗೆ ದಯಮಾಡಿಸಿದ್ದಾನೆ. ಇದೊಂದು ನನ್ನ ಮೇಲೆ ಭಗವಂತನ ಮಾಡಿದ ದೊಡ್ಡ ಉಪಕಾರವೇ ಸರಿ.

ಇನ್ನು ದೇವತೆಗಳ ಭಾಗವನ್ನು ಕಸಿದು ದೈತ್ಯರಿಗೆ ಕೊಟ್ಟು ಅಪರಾಧಮಾಡಿದ ನನ್ನನ್ನು ಕೊಲ್ಲಬೇಕೆಂದು ಆ ಹರಿಯು ಇಲ್ಲಿಗೆ ಬಂದರೆ ಇನ್ನೂ ಒಳ್ಳೆಯದಾಯಿತು. ಹರಿಯ ಕೈಯಿಂದ ಮರಣವಾದರೆ ನನ್ನಂತಹ ಭಾಗ್ಯವಂತರಾರು? ನನ್ನ ಜೀವವೇ ಶ್ಲಾಘ್ಯವಾಗುವದು. ಗುರುಗಳೇ, ಈ ವಿಶ್ವವೆಲ್ಲವೂ ಅವನದೇ ಅಲ್ಲವೇ? ಅವನಿಗೆ ದೊರೆಯದಿದ್ದುದು ಯಾವುದಿದೆ. ಈ ಪ್ರಪಂಚವೇ ಹರಿಯ ವಸ್ತು, ಹರಿಯ ಸೃಷ್ಟಿ, ಅಂತಹ ಹರಿಯೇ ನನ್ನ ಬಳಿಗೆ ಬೇಡಲಿಕ್ಕೆ ಬರುವನೆಂದರೆ ಅದರ ಉದ್ದೇಶ ಅನುಗ್ರಹದ ಹೊರತು ಬೇರೆ ಇರಲಾರದು. ಬರಿಯ ನನ್ನನ್ನು ಕೊಲ್ಲಬೇಕಾದರೆ ಅದಕ್ಕೇಕಿಷ್ಟು ಅಟ್ಟಹಾಸ! ಆ ಭಗವಂತನು ಕುಳಿತಲ್ಲಿಯೇ ಸಂಕಲ್ಪಮಾತ್ರದಿಂದ ಸಂಹರಿಸಬಹುದು ನನ್ನನ್ನು. ಅದಕ್ಕಾಗಿ ವಟುವೇಷವೇಕೆ? ಇಲ್ಲಿಯವರೆಗೆ ನಡೆದು ಬರುವದೇಕೆ? ಈ ಭಿಕ್ಷೆ ಬೇಡುವ ನಾಟಕವೇಕೆ? ಇದು ಯಾವುದೂ ಕಾರಣವಲ್ಲ. ಆದುದರಿಂದ ಇವೆಲ್ಲದಕ್ಕೂ ಮೂಲವೆಂದರೆ ಆ ಸ್ವಾಮಿಗೆ ನನ್ನ ಮೇಲೆ ಅನುಗ್ರಹ ಮಾಡಬೇಕೆಂದು ಅಭಿಲಾಷೆ ಮೂಡಿದೆ. ಇದು ನನ್ನ ಭಾಗ್ಯ. ಆದುದರಿಂದ ಗುರುಗಳೇ, ಜಗದೊಡೆಯನಾದ ಆ ಗೋವಿಂದನು ನನ್ನ ಮನೆಯವರೆಗೆ ಬಂದಾಗ, ಬಾಗಿಲ ಬಳಿ ನಿಂದಾಗ, ಏನಾದರೂ ಕೊಡು ಎಂದಾಗ ಕೈಒಡ್ಡಿ ಯಾಚನೆಮಾಡಿದಾಗ ಸ್ವಸಂತೋಷದಿಂದ ಭಕ್ತಿಯಿಂದ ನಾನು ಆ ಪರಮಾತ್ಮನಿಗೆ ನೀಡಲಿರುವ ದಾನಕ್ಕೆ ದಯಮಾಡಿ ತಾವು ವಿಘ್ನಮಾಡಬೇಡಿ.''

ಬಲಿ ಚಕ್ರವರ್ತಿಯು ತನ್ನ ಗುರುಗಳ ಜೊತೆಗೆ ಹೀಗೆ ಮಾತನಾಡುತ್ತಿರುವಾಗ ಸರ್ವದೇವಮಯನಾದ ವಾಮನಮೂರ್ತಿಯು ಅಲ್ಲಿಗೆ ಬಂದನು. ಯಜ್ಞ ಮಂಟಪದಲ್ಲಿ ತೇಜಃಪುಂಜನಾದ ಆ ಬ್ರಾಹ್ಮಣ ವಟು ಕಾಲು ಇರಿಸಿದ ಕೂಡಲೆ ಸಭಿಕರೆಲ್ಲರಿಗೂ ದಿಗಿಲು. ಹೋಮಕುಂಡದಲ್ಲಿಯ ಅಗ್ನಿಗಳು ಕೂಡ ಅವನ ಮುಖದ ವರ್ಚಸ್ಸಿನಿಂದ ನಿಷ್ಪ್ರಭವಾದಂತೆ ಕಂಡವು. ಮುನಿಗಳೆಲ್ಲರೂ ತಾವು ಜಪಮಾಡುವ ಮಂತ್ರ ಮೂರ್ತಿಯು ಯಜ್ಞಮಂಟಪಕ್ಕೆ ತಾನಾಗಿ ನಡೆತಂದಿದೆ ಎಂದು ಕೈಮುಗಿದು ಎದ್ದು ನಿಂತರು. ಎಲ್ಲ ಋತ್ವಿಜರು ತಮ್ಮ ಮನಸ್ಸಿನಿಂದಲೇ ಆ ಭಗವಂತನನ್ನು ಪೂಜಿಸಿದರು. ಇದ್ದಲ್ಲಿಯೇ ತಲೆಬಾಗಿಸಿದರು. ಬಲಿರಾಜನಂತೂ ತನ್ನ ಜನ್ಮವೇ ಸಫಲವಾಯಿತು ಎಂದುಕೊಂಡನು. ಋಷಿಗಳೆಲ್ಲರೂ ಅವನ ಅಡಿದಾವರೆಯ ಪುಡಿಯನ್ನು ತಮ್ಮ ಮುಡಿಗಳಲ್ಲಿ ಧರಿಸಿದರು.

ಇದನ್ನೆಲ್ಲನೋಡಿ ದೇವದೇವನಾದ ಆ ವಾಮನನು, ಯಜಮಾನನನ್ನು ಹೊಗಳಿದನು. ಋತ್ವಿಜರನ್ನು ಹರಿಸಿದನು. ಸದಸ್ಯರನ್ನು ಕೊಂಡಾಡಿದನು. ಅವನ ಪ್ರಶಂಸಾವಚನದಿಂದ ಎಲ್ಲರೂ ಸುಪ್ರಸನ್ನರಾದರು. ಬಲಿರಾಜನಿಗಂತೂ ಹೃದಯತುಂಬ ಹಿಗ್ಗು. ಮೈ ತುಂಬ ಮುಳ್ಳು, ಕಣ್ತುಂಬ ನೀರು, ಬಿಗಿದ ಕೊರಳಿನಿಂದ ಕೈಮುಗಿದು ಆ ಗೋವಿಂದನನ್ನು ಕುರಿತು ಭಕ್ತಿಯಿಂದ ಆ ಅಸುರರಾಜನು ಇಂತು ನುಡಿದನು

''ವಾಮನನೆ, ನಿನಗೆ ಏನು ಬೇಕು ಅದನ್ನು ಬೇಡು, ನೀನು ಕೇಳಿದ್ದನ್ನು ಕೊಡುವೆನು. ಬಂಗಾರ, ಬೆಳ್ಳಿ, ಮುತ್ತು, ರತ್ನ, ಆನೆ, ಕುದುರೆ, ನಾರಿಯರು, ನಯವಾದ ವಸ್ತ್ರಗಳು, ಅಲಂಕಾರ, ಅಥವಾ ಗ್ರಾಮಗಳು ಇಲ್ಲವೆ ನನ್ನ ಸರ್ವಸ್ವ ಬೇಕೆಂದರೆ

ಈ ಭೂಮಂಡಲವೆಲ್ಲವನ್ನು ನಿನಗೆ ನೀಡಲು ನಾನು ಸಿದ್ಧನಾಗಿದ್ದೇನೆ. ಯಾವುದನ್ನಾದರೂ ನೀನು ಕೇಳಬಹುದು. ಕೇಳಿದ್ದನ್ನೆಲ್ಲ ಕೊಡುತ್ತೇನೆ. ನೀನು ಬಯಸಿದ್ದನ್ನು ನೀಡುತ್ತೇನೆ.''

ಬಲಿರಾಜನ ಈ ಪ್ರೇಮಪೂರ್ಣ ನುಡಿಗಳನ್ನು ಆಲಿಸಿ, ವಾಮನ ದೇವರು ನಗುತ್ತ ನುಡಿದರು. ''ಬಲಿರಾಜನೇ, ನನಗೊಂದು ಅಗ್ನಿಶಾಲೆ ಕಟ್ಟಿಸಲು ಸ್ಥಳ ಬೇಕಾಗಿದೆ. ಅದಕ್ಕಾಗಿ ಮೂರು ಪಾದ ಭೂಮಿ ಕೊಟ್ಟರೆ ಸಾಕು. ಬಂಗಾರ, ರತ್ನ, ಗ್ರಾಮಗಳನ್ನೆಲ್ಲ ದೇಹಿದವರಿಗೆ, ಬೇಡಿದವರಿಗೆ ನೀನು ಕೊಡಬಹುದು. ನನಗೆ ತ್ರಿಪಾದ ಪರಿಮಿತ ನೆಲ ಮಾತ್ರವೇ ಸಾಕು.

**ಬಲಿ** :- ಈ ಮೂರು ಪಾದ ಪರಿಮಿತವಾದ ಭೂಮಿಯಿಂದ ನಿನಗೇನು ಪ್ರಯೋಜನವಾದೀತು ! ಆದುದರಿಂದ ಲಕ್ಷಪಾದದಷ್ಟು ಭೂಮಿ ಕೇಳು ಕೊಡುತ್ತೇನೆ.

**ವಾಮನ** :- ದೈತ್ಯರಾಜ, ನನಗೆ ಇಷ್ಟೇ ಸಾಕು ಈ ಮೂರು ಪಾದ ಭೂಮಿಯಿಂದಲೇ ನಾನು ಕೃತಕೃತ್ಯ. ನಿನ್ನಲ್ಲಿ ಯಾಚನೆಮಾಡುವ ಬೇರೆ ಭಿಕ್ಷುಕರಿಗೆ ನೀನು ಅವರಿಗೆ ಬೇಡಿದ್ದನ್ನು ನೀಡು.

ವಾಮನರೂಪಿ ಭಗವಂತನ ಮಾತು ಕೇಳಿ, ಬಲಿಚಕ್ರವರ್ತಿಯು ಅತ್ಯಂತ ಸಂತೋಷದಿಂದ ವಾಮನಾವತಾರಿ ಪರಮಾತ್ಮನಿಗೆ ಮೂರು ಪಾದ ಭೂಮಿಯನ್ನು ಸಂಕಲ್ಪಪೂರ್ವಕವಾಗಿ ನೀರುಬಿಟ್ಟು ದಾನಕೊಟ್ಟನು. ಮೂರು ಪಾದ ಭೂಮಿಯದಾನ ಸಂಕಲ್ಪದ ನೀರು ಕೈಯಲ್ಲಿ ಬಿದ್ದ ಕೂಡಲೇ ಆ ವಾಮನನು ಒಮ್ಮೆಲೇ ಬೆಳೆಯತೊಡಗಿದನು. ಬೃಹದಾಕಾರವಾಗಿ ಆಕಾಶದವರೆಗೆ ಬೆಳೆದು ವಿರಾಟರೂಪಿಯಾಗಿ ನಿಂತುಕೊಂಡನು.

ವಿಶ್ವವ್ಯಾಪಿಯಾದ ವಿರಾಡ್ರೂಪಿ ವಾಮನನ ಅರ್ಥಾತ್ ತ್ರಿವಿಕ್ರಮನ ಜಗದ್ವ್ಯಾಪಿ ರೂಪದಲ್ಲಿ ಚಂದ್ರ ಸೂರ್ಯರೇ ಎರಡು ಕಣ್ಣುಗಳಾಗಿ ಹೊಳೆದರು. ಆಕಾಶವೇ ತಲೆ. ಕಾಲುಗಳೇ ಭೂಮಿ. ಪಾದದ ಬೆರಳುಗಳೇ ಪಿಶಾಚಗಳು. ಕೈಬೆರಳು ಗುಹ್ಯಕ. ವಿಶ್ವದೇವತೆಗಳು ಮೊಳಕಾಲಿನಲ್ಲಿ, ಉಗುರಿನಲ್ಲಿ ಯಕ್ಷರು ಹಾಗೂ ಅಪ್ಸರೆಯರು, ದೃಷ್ಟಿಯಲ್ಲಿ ನಕ್ಷತ್ರಗಳು, ಕೂದಲುಗಳಲ್ಲಿ ಸೂರ್ಯಕಿರಣಗಳು, ಚುಕ್ಕೆಗಳು ರೋಮ ಕೂಪಗಳು, ರೋಮಗಳೇ ಋಷಿಗಳು. ಬಾಹುಗಳು ಉಪದಿಕ್ಕು, ಕಿವಿಗಳೇ ದಿಕ್ಕು, ಅಶ್ವಿನೀದೇವತೆಗಳೇ ಶ್ರವಣೇಂದ್ರಿಯ, ವಾಯುವೇ ಘ್ರಾಣೇಂದ್ರಿಯ, ಸತ್ಯವೇ ವಾಣಿ. ನಾಲಿಗೆಯೇ ಸರಸ್ವತಿ, ದಿತಿಯೇ ಕೊರಳು, ಚತುರ್ದಶ ವಿದ್ಯೆಗಳು ಕೈಯಲ್ಲಿಯ ಕಡಗ, ಮುಖವೇ ಅಗ್ನಿ. ಹೃದಯವೇ ಬ್ರಹ್ಮ. ಕಶ್ಯಪಮುನಿಯೇ ಪುಂಸ್ತ್ವ.

ಆ ವಿರಾಡ್ರೂಪಿಯಾದ ವಾಮನನ ಪೃಷ್ಠದಲ್ಲಿ ಅಷ್ಟವಸುಗಳು, ದೇಹದ ಸಂದುಗಳಲ್ಲಿ ಮರುದ್ಗಣಗಳು, ಹಲ್ಲುಗಳಲ್ಲಿ ಎಲ್ಲ ವೇದಸೂಕ್ತಗಳು, ವಕ್ಷಸ್ಥಳದಲ್ಲಿ ಮಹಾದೇವನು, ಅವನ ದೇಹದಲ್ಲಿ ಸಾಗರಗಳು, ಉದರದಲ್ಲಿ ಗಂಧರ್ವರು, ಲಕ್ಷ್ಮೀ, ಮೇಧಾ, ಶಚೀ, ಕಾಂತಿ ಎಲ್ಲ ವಿದ್ಯೆಗಳು ಅವನ ನಡುವಿನಲ್ಲಿಯೂ, ಎಲ್ಲ ಜ್ಯೋತಿಗಳು ಅವನ ಶ್ರೇಷ್ಠವಾದ ತೇಜೋರೂಪಗಳಲ್ಲಿಯೂ ನಾಲ್ಕು ವೇದಗಳು ಅವನ ಸ್ತನ ಮತ್ತು ಕುಕ್ಷಿಗಳಲ್ಲಿಯೂ ಎಲ್ಲ ಯಜ್ಞಗಳು ಅವನ ಉದರದಲ್ಲಿಯೂ ಆಶ್ರಯ ಪಡೆದವು. ಬ್ರಾಹ್ಮಣರ ಎಲ್ಲ ಯಜ್ಞಯಾಗಗಳು ಅವನ ಕಣ್ಣಿನಲ್ಲಿ ನೆಲೆ ನಿಂತವು.

ಹೀಗೆ ವಿರಾಡ್ರೂಪಿಯಾದ, ಆ ಶ್ರೀವಾಮನಮೂರ್ತಿಯ ದೇವತಾಮಯವಾದ ರೂಪವನ್ನು ನೋಡಿ ದೈತ್ಯರೆಲ್ಲರೂ ಹೊಡೆಯಬೇಕೆಂದು ಆಯುಧಗಳನ್ನೆತ್ತಿಕೊಂಡು ಆ ಹರಿಯಮೇಲೆ ಆಕ್ರಮಿಸ ಬಂದರು. ದೀಪದ ಹುಳಗಳೆಲ್ಲ ಕೆಂಡದ ಮೇಲೆ ಎರಗಿದಂತಿತ್ತು. ಈ ದೈತ್ಯರನ್ನು ನಿಗ್ರಹಿಸಲು ಆ ಅದಿತಿನಂದನನು ಯಾವ ಆಯುಧವನ್ನೂ ಉಪಯೋಗಿಸಲಿಲ್ಲ ಏರಿಬಂದವರಲ್ಲಿ ಹಲವರನ್ನು ಕಾಲಿನಿಂದ ಒದೆದು ಕೊಂದನು. ಉಳಿದವರನ್ನು ಅಂಗೈಯಿಂದ ಏಟು ಹಾಕಿ ಸಂಹರಿಸಿದನು. ಹೀಗೆ ವಿರಾಟರೂಪದಿಂದ ವಿಶ್ವವನ್ನೇ ವ್ಯಾಪಿಸಿ ನಿಂತ ಆ ತ್ರಿವಿಕ್ರಮನು ಮಹಾ ಕಾಯವನ್ನು ತಳೆದು ನಿಂತುಕೊಂಡಾಗ ಚಂದ್ರ ಸೂರ್ಯರು ಅವನ ಮೋರೆಯ ಭಾಗದಲ್ಲಿ ಲೀನರಾಗಿದ್ದರು. ಆ ಭಗವಂತನು ಮೇಲೇರಿ ಬಂದಾಗ, ಆ ಚಂದ್ರ, ಸೂರ್ಯರು, ಹೊಕ್ಕಳಕ್ಕೆ, ಅನಂತರ ತೊಡೆಯ ಪ್ರದೇಶಕ್ಕೆ, ಅನಂತರ ಮೊಳಕಾಲಿಗೆ ಬಂದು ಕೊನೆಗೆ ಅವನ ಪಾದಮೂಲದಲ್ಲಿ ಶೋಭಿಸತೊಡಗಿದರು.

ಹೀಗೆ ಆ ಭಗವಂತನು ಬೆಳೆದು, ಎಲ್ಲ ದೈತ್ಯರನ್ನು ಕೊಂದು ಮೂರು ಲೋಕದ ಆಧಿಪತ್ಯವನ್ನು ದೇವೇಂದ್ರನಿಗೆ ಕೊಟ್ಟನು. ಭೂಲೋಕದ ಕೆಳಗಿರುವ ಸುತಲವೆಂಬ ಅಧೋಲೋಕವನ್ನು ಆ ಬಲಿರಾಜನಿಗೆ ಶ್ರೀಹರಿಯು ಕೊಟ್ಟು ಕರುಣಿಸಿದನು. ದೈತ್ಯ ರಾಜನಾದ ಆ ಬಲಚಕ್ರವರ್ತಿಯನ್ನು ಕುರಿತು ಸರ್ವೇಶ್ವರನಾದ ಭಗವಂತನು ಹೀಗೆ ನುಡಿದನು.

"ಬಲಿರಾಜ, ನೀನು ಮೂರುಪಾದ ಭೂಮಿಯನ್ನು ಕೊಡುವದಾಗಿ ಸಂಕಲ್ಪಮಾಡಿ ನನ್ನ ಕೈಯಲ್ಲಿ ನೀರು ಬಿಟ್ಟು ದಾನವನ್ನು ಕೊಟ್ಟೆ. ನಿನ್ನ ಕೈಯಿಂದ ನಾನು ನೀರು, ನೆಲ ಸ್ವೀಕರಿಸಿದೆ. ಆ ಪುಣ್ಯದಿಂದ ನಿನಗೆ ಒಂದು ಕಲ್ಪಕಾಲ ಆಯುಷ್ಯ ಕರುಣಿಸಿದ್ದೇನೆ. ಈ ವೈವಸ್ವತ ಮನ್ವಂತರ ಮುಗಿದ ಬಳಿಕ ಸಾವರ್ಣಿ ಮನ್ವಂತರದಲ್ಲಿ ನಿನ್ನನ್ನೇ ಇಂದ್ರನನ್ನಾಗಿ ಮಾಡಿ ಸ್ವರ್ಗಸಾಮ್ರಾಜ್ಯದ ಸುರಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಿಸುತ್ತೇನೆ.

ಈಗ ನಾನು ದೇವರಾಜನಿಗೆ ತ್ರೈಲೋಕ್ಯದ ಆಧಿಪತ್ಯ ಕೊಡುತ್ತೇನೆ. ಎಂಬ ಪ್ರತಿಜ್ಞೆ ಮಾಡಿದ್ದೇನೆ. ಅವನು ನನ್ನನ್ನು ಪೂರ್ವದಲ್ಲಿಯೇ ಆರಾಧನೆ ಮಾಡಿದ್ದರಿಂದ, ಈ ವೈವಸ್ವತ ಮನ್ವಂತರದಲ್ಲಿ ಇಂದ್ರ ಪದವಿಯನ್ನು ಕೊಡುತ್ತೇನೆ. ಎಂದು ವಚನ ಕೊಟ್ಟಿದ್ದರಿಂದ ನಿನ್ನನ್ನು ನಿಗ್ರಹಿಸಬೇಕಾಗಿ ಬಂದಿತು. ಅದಕ್ಕಾಗಿ ನೀನು ಈಗ ಸುತಲ ಎಂಬ ಹೆಸರಿನ ಪಾತಾಲಲೋಕಕ್ಕೆ ಹೋಗಿ ನನ್ನ ಆಜ್ಞೆಯಂತೆ ಅಲ್ಲಿ ವಾಸಮಾಡು. ಅದು ಕೂಡ ಸ್ವರ್ಗದಂತೆ ಅತ್ಯಂತ ಮನೋಹರ ಪ್ರದೇಶ. ನಂದನವನದಂತೆ ಅನೇಕ ವನಗಳಿವೆ. ಅಲ್ಲಿ ಭವ್ಯ ಭವನಗಳಿಗಂತೂ ಲೆಕ್ಕವೇ ಇಲ್ಲ. ಅರಳಿದ ಹೊಂದಾರವರೆಗಳಿಂದ ಸುಂದರವಾಗಿ ಕಂಗೊಳಿಸುವ ತಿಳಿನೀರಿನ ಕೊಳಗಳು ಅಲ್ಲಲ್ಲಿ ಕಣ್ಣಿಗೆ ಎಸೆಯುತ್ತವೆ. ಆ ಸುತಲದಲ್ಲಿ ಎಲ್ಲಿ ನೋಡಿದಲ್ಲೆಲ್ಲ ಸುಗಂಧಿ, ಪರಿಮಳ ದ್ರವ್ಯ, ದಿವ್ಯವಸ್ತ್ರ, ಮನೋಹರ ಹಾರಗಳು, ಅಲ್ಲಿನ ನರನಾರಿಯರ ಅಂಗಾಂಗಳಲ್ಲಿ ಹೊಳೆಯುವ ಆಭರಣಗಳು, ಮೈತುಂಬ ಚಂದನ, ವಸ್ತ್ರ, ಅಲಂಕಾರ. ಅಲ್ಲಿ ವಾಸಿಸುವ ನರರಿಗೆ ಸರ್ವದಾ ಆನಂದ, ಯಾವಾಗಲೂ ಹಾಡು ಕುಣಿತ, ಮಣಿತ, ಉತ್ಸಾಹ, ಉಲ್ಲಾಸ, ಆನಂದ, ಬಯಸಿದ ಭೋಗ, ಬೇಡಿದ ಪಕ್ವಾನ್ನ, ಬಗೆಬಗೆಯ ಮೃಷ್ಟಾನ್ನ,

ವಿವಿಧ ಉಪಹಾರ, ಪ್ರೀತಿಯ ಉಪಚಾರ, ಸರ್ವವಿಧ ಸಂತೋಷ ಭೋಗ. ದೈತ್ಯರಾಜ, ಒಟ್ಟಾರೆ ಅಲ್ಲಿ ಎಲ್ಲವು ಸುಖಮಯ, ಇಂತಹ, ಪರಮ ರಮಣೀಯವಾದ ಭೋಗಲೋಕಕ್ಕೆ ಹೋಗಿ ನೀನು ನನ್ನ ಆಜ್ಞೆಯಂತೆ ಈ ವೈವಸ್ವತ ಮನ್ವಂತರ ಮುಗಿಯುವವರೆಗೆ ವಾಸಮಾಡು. ನಾನು ನಿನ್ನ ಬಳಿಯೇ ಇರುತ್ತೇನೆ. ಆದರೆ ಒಂದು ಮಾತನ್ನು ನೆನಪಿಡು: ನಾನು ಈ ವರೆಗೂ ಹೇಳಿದ ರಾಗ. ಭೋಗ, ಭಾಗ್ಯ, ಐಶ್ವರ್ಯ, ಅಧಿಕಾರ, ಆನಂದ, ಇವೆಲ್ಲವೂ ನೀನು ಬ್ರಾಹ್ಮಣರ ಹಾಗೂ ದೇವತೆಗಳ ವಿರೋಧವನ್ನು ಮಾಡದಿರುವವರೆಗೆ ಮಾತ್ರ ಲಭಿಸುವವು. ನೀನು ಎಂದಾದರೂ ದೇವಬ್ರಾಹ್ಮಣರ ದ್ವೇಷವನ್ನು ಮಾಡಿದರೆ ಮಾತ್ರ ಈ ಎಲ್ಲ ಭೋಗ ಭಾಗ್ಯ, ಸೌಭಾಗ್ಯಗಳು ತಕ್ಷಣವೇ ಲೋಪವಾಗಿ ನಿನ್ನಿಂದ ದೂರವಾಗಿ ಮಾಯವಾಗುವವು. ಇಷ್ಟೇ ಅಲ್ಲ ವರುಣ ಪಾಶಗಳು ಬಂದು ನಿನ್ನನ್ನು ಬಿಗಿದು ಒಗೆಯುವವು. ಎಚ್ಚರ. ಇಷ್ಟೆಲ್ಲ ನಾನು ತಿಳಿಸಿದ ಮೇಲಾದರೂ ನೀನು ನನ್ನ ಆಜ್ಞೆಯಿಂದ ದೇವತೆಗಳ ವಿರೋಧ ಬಿಡು. ಬ್ರಾಹ್ಮಣರ ದ್ವೇಷವನ್ನು ಮಾಡಬೇಡ ''ಭಗವಂತನು ಹೀಗೆ ನುಡಿದ ಬಳಿಕ ಬಲಿರಾಜನು ಅತ್ಯಂತ ಸಂತೋಷಭರಿತನಾಗಿ ನಮಸ್ಕರಿಸಿ ಕೇಳಿದನು.

**ಬಲಿ** :- ಸ್ವಾಮಿ, ನಿನ್ನ ಅಪ್ಪಣೆಯಂತೆ, ನಾನು ಪಾತಾಳಲೋಕದಲ್ಲಿ ನೆಲಿಸಿದ ಬಳಿಕ ನನ್ನ ಉಪಭೋಗಕ್ಕೆ ಆಹಾರವೇನು?''

ಬಲಿರಾಜನ ಈ ಪ್ರಶ್ನೆಕೇಳಿ, ಶ್ರೀಹರಿ ಹೇಳಿದನು :

**ವಾಮನ** :- ದೈತ್ಯರಾಜ, ವಿಧಿಯನ್ನು ಬಿಟ್ಟು ನೀಡಿದ ದಾನಗಳು, ವೇದ ಓದದ ಬ್ರಾಹ್ಮಣರಿಗೆ ಶ್ರಾದ್ಧದಲ್ಲಿ ಕೊಟ್ಟ ದಾನಗಳು, ವಿಶ್ವಾಸವಿಲ್ಲದೆ ಮಾಡಿದ ಹೋಮಗಳು ನಿನಗೆ ಮುಟ್ಟುತ್ತವೆ. ದಕ್ಷಿಣೆಯಿಲ್ಲದೆ ಮಾಡಿದ ಯಜ್ಞ, ವಿಧಿ ವಿಧಾನಗಳನ್ನು ಬಿಟ್ಟು ಮಾಡಿದ ಪುಣ್ಯಕಾರ್ಯ, ವ್ರತ ಇಲ್ಲದೆ ಮಾಡಿದ ಅಧ್ಯಯನಗಳೆಲ್ಲ ನಿನಗೆ ಬಂದು ಸೇರುವವು. ವಿಧಿವಿಹಿತವಾಗದ ಸತ್ಕಾರ್ಯಗಳಿಂದ ಬರುವ ಪುಣ್ಯವೆಲ್ಲ ಮಾಡಿದವನಿಗೆ ಸೇರದೆ ನಿನಗೇ ಬರುವದು. ಅದೇ ನಿನ್ನ ಸುತಳದಲ್ಲಿಯ ಸ್ವಾದಿಷ್ಟ ಆಹಾರವಾಗುವದು.

**ಶೌನಕ** :- ಕೃಷ್ಣಪರಮಾತ್ಮನು, ಬಲಿರಾಜನಿಗೆ ಹೀಗೆ ಒಂದು ವರವನ್ನೂ ದೇವೇಂದ್ರನಿಗೆ ಮೂರು ಲೋಕದ ಆಧಿಪತ್ಯವನ್ನೂ ಸ್ವರ್ಗದ ಒಡೆತನವನ್ನೂ ಕೊಟ್ಟು ಕರುಣಿಸಿ, ತನ್ನ ವಿಶ್ವವ್ಯಾಪಿಯಾದ ವಿರಾಡ್ರೂಪವನ್ನು ಉಪಸಂಹರಿಸಿ ಅಲ್ಲಿಯೇ ಅದೃಶ್ಯನಾದನು. ದೇವೇಂದ್ರನು ಮೊದಲಿನಂತೆ ಮೂರು ಲೋಕಗಳಿಂದ ಪೂಜಿತನಾಗಿ ಸ್ವರ್ಗ ಸಾಮ್ರಾಜ್ಯವನ್ನು ಆಳತೊಡಗಿದನು. ಬಲಿರಾಜನು ಪಾತಾಳಲೋಕದಲ್ಲಿದ್ದು ಕೊಂಡು, ತನಗೆ ಬೇಕಾದ ಭೋಗಭಾಗ್ಯಗಳನ್ನು ಅನುಭವಿಸಿದನು.

ಧರ್ಮಸೋದರನಾದ ಅರ್ಜುನನೇ, ಈ ವಾಮನಾವತಾರದ ಚರಿತ್ರೆಯನ್ನು ನೀನು ಕೇಳಿದೆಯೆಷ್ಟೇ! ಆ ವಾಮನ ರೂಪಿ ಕೃಷ್ಣನು ಬೇರೆ ಯಾರೋ ಆಗಿರದೆ ನಿನ್ನ ಸಮೀಪದ ಸಂಬಂಧಿಯಾದ ದ್ವಾರಕೆಯಲ್ಲಿ ಇರುವ ಯಾದವ ಕೃಷ್ಣನೇ. ಅದೇ ವಾಮನದೇವರು ಭೂಮಿಯ ಭಾರ ಇಳಿಸಲಿಕ್ಕಾಗಿ ಮತ್ತೆ ಯದುಕುಲದಲ್ಲಿ ಕೃಷ್ಣರೂಪದಿಂದ ಅವತಾರ ಮಾಡಿ, ನಿಮ್ಮ ಪಾಂಡವರ ವೈರಿಗಳಾದ ದುರ್ಯೋಧನಾದಿಗಳನ್ನು ನಿಗ್ರಹಮಾಡಲಿಕ್ಕಾಗಿ

ನಿನಗೆ ಸಹಾಯ ಮಾಡಲು ನಿನ್ನ ಸಾರಥಿಯಾಗಿ ನಿನ್ನರಥವನ್ನು ಹೊಡೆದನು. ನಿನ್ನರಥದ ಚಾಲಕನಾದ ಆ ಕೃಷ್ಣನು ಜಗತ್ ಚಾಲಕನಾದ ಸಾಕ್ಷಾತ್ ಮಹಾವಿಷ್ಣುವೇ ಎನ್ನುವದರಲ್ಲಿ ಸಂದೇಹವಿಲ್ಲ. ಆ ಮಹಾವಿಷ್ಣುವು ವಾಮನಾವತಾರ ಮಾಡಿ ಬಲಿಯನ್ನು ನಿಗ್ರಹಿಸಿದ್ದು ಕುರುಕ್ಷೇತ್ರದ ಇದೇ ಸ್ಥಳದಲ್ಲಿಯೇ. ಆದುದರಿಂದ ಈ ಸ್ಥಳವು ವಾಮನದೇವರ ಪುಣ್ಯ ಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಇವೆಲ್ಲ ವಾಮನಾವತಾರಚರಿತ್ರೆಯನ್ನು ನೀನು ಕೇಳಬೇಕೆಂದು ಬಯಸಿದ್ದರಿಂದ ನಿನ್ನ ಪ್ರಶ್ನೆಗೆ ಉತ್ತರರೂಪವಾಗಿ ನಾನು ಹೇಳಿದ್ದೇನೆ.

**ಅರ್ಜುನ :-** ಮುನಿಗಳೆ, ತಾವು ಹೇಳಿದ ಕೇಶವನ ಮಹಾಮಹಿಮೆ ಕೇಳಿ ನಾನು ಧನ್ಯನಾದೆ. ತೀರ್ಥಯಾತ್ರೆಗಾಗಿ ಹೊರಟ ನಾನು ಇನ್ನು ಮುಂದೆ ಗಂಗಾದ್ವಾರಕ್ಕೆ ಹೋಗುತ್ತೇನೆ. ನನಗೆ ಅಪ್ಪಣೆ ನೀಡಿರಿ, ಹೀಗೆ ಹೇಳಿ ಶೌನಕರ ಅಪ್ಪಣೆ ಪಡೆದು ಅರ್ಜುನನು ಹೊರಟುಹೋದನು. ಶೌನಕರು ಕೂಡ ತಾವು ನೈಮಿಷಾರಣ್ಯವನ್ನು ಕುರಿತು ತೆರಳಿದರು. ಈ ವಾಮನಾವತಾರದ ಚರಿತ್ರೆ ಹಾಗೂ ಬಲಿಚಕ್ರವರ್ತಿಯ ಕತೆಯನ್ನು ಪಠಿಸಿದವನಿಗೂ ಶ್ರವಣ ಮಾಡಿದವರಿಗೂ ರೋಗ ರುಜಿನಾದಿಗಳು ಬಾಧಿಸುವದಿಲ್ಲ. ಮನಸ್ಸಿನ ಚಿಂತೆಗಳೆಲ್ಲವೂ ದೂರವಾಗುವವು. ರಾಜ್ಯಭ್ರಷ್ಟನಾದವನು ರಾಜ್ಯವನ್ನೂ, ಬಂಧುಜನರಿಂದ ಆಗಲಿರುವವರು ಅವರೊಡನೆ ಪುನರ್‌ಮಿಲನವನ್ನು ಹೊಂದಿ ಆನಂದಿತರಾಗುತ್ತಾರೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ನಲವತ್ತೇಳನೆಯ ಅಧ್ಯಾಯ ಮುಗಿದುದು*



## ವರಾಹಾವತಾರ ವಿಷಯದಲ್ಲಿ ಅರ್ಜುನನ ಪ್ರಶ್ನೆ | ಅಧ್ಯಾಯ - ೨೪೮

**ಅರ್ಜುನ ಉವಾಚ:**

**"ಪ್ರಾದುರ್ಭಾವಾನ್ ಪುರಾಣೇಷು ವಿಷ್ಣೋರಮಿತತೇಜಸಃ**
**ಸತಾಂ ಕಥಯತಾಂ ವಿಪ್ರ ವಾರಾಹ ಇತಿ ನಃ ಶ್ರುತಮ್**
**ನ ಜಾನೇ ತಸ್ಯ ಚರಿತಂ ನ ವಿಧಿಂ ನ ಚ ವಿಸ್ತರಮ್॥"**

**ಅರ್ಜುನ :-** ಪುರಾಣಗಳಲ್ಲಿ ತೇಜೋನಿಧಿಯಾದ ಶ್ರೀ ವಿಷ್ಣುವಿನ ಅವತಾರಗಳನ್ನು ಹೇಳುವಾಗ ವರಾಹ ಎಂಬ ಅವತಾರ ಇದೆ ಎಂದು ಕೇಳಿದ್ದೇನೆ. ಆದರೆ ಆ ವರಾಹ ಅವತಾರದ ವಿಸ್ತಾರವಾದ ಚರಿತ್ರೆಯನ್ನಾಗಲಿ ಆಗ ಮಾಡಿದ ಭಗವಂತನ ಕಾರ್ಯ, ಲೀಲೆಗಳನ್ನಾಗಲಿ ನಾನು ಕೇಳಲಿಲ್ಲ. ಆದುದರಿಂದ ತಾವು ಇಲ್ಲಿ ಸೇರಿದ ಎಲ್ಲ ಬ್ರಾಹ್ಮಣರಿಗೂ ವರಾಹರೂಪಿ ಶ್ರೀಹರಿಯ ಅವತಾರದ ಕಥೆಯನ್ನು ಸವಿಸ್ತಾರವಾಗಿ ತಿಳಿಸಬೇಕು.

**ಶೌನಕ :-** ಈ ವರಾಹದೇವರ ದಿವ್ಯಚರಿತ್ರವು ವೇದಕ್ಕೆ ಸಮಾನವಾದದ್ದು. ಅದ್ಭುತ ಪ್ರಭಾವವುಳ್ಳ ಕೃಷ್ಣನ ವರಾಹಲೀಲೆ ಬಿತ್ತರಿಸುತ್ತೇನೆ ಕೇಳು.

ಹಿಂದೆ, ಸಹಸ್ರಯುಗಗಳು ಪೂರ್ಣಮುಗಿದ ಬಳಿಕ ಎಲ್ಲ ದೇವತೆಗಳು, ಋಷಿಗಳು, ದಾನವರು, ಮಾನವರು, ಪ್ರಾಣಿಗಳು, ಜೀವ ಎಂಬ ಹೆಸರಿನ ಸಕಲ ವಸ್ತುಗಳು ವಿನಾಶವನ್ನು ಹೊಂದಿದವು. ಆಗ ಪರಮಾತ್ಮನು ಅಗ್ನಿ ರೂಪದಿಂದ ತನ್ನ

ಮುಖದಿಂದ ಉರಿಯಜ್ವಾಲೆಗಳನ್ನು ಹೊರಹೊಮ್ಮಿಸಿ ಎಲ್ಲ ಪ್ರಪಂಚವನ್ನು ಸುಟ್ಟು ಹಾಕಿದನು. ವೇದ, ಇತಿಹಾಸ, ಪುರಾಣ ಹಾಗೂ ಎಲ್ಲ ವಿದ್ಯೆಗಳು ಒಮ್ಮೆಲೆ ಅದೃಶ್ಯವಾದವು. ಮೂವತ್ತುಮೂರು ಕೋಟಿ ದೇವತೆಗಳು, ಬ್ರಹ್ಮ ದೇವರನ್ನು ಮುಂದೆ ಮಾಡಿಕೊಂಡು, ಆ ಪರಮಾತ್ಮನಲ್ಲಿ ಪ್ರವೇಶ ಮಾಡಿದರು. ಹೀಗೆ ತಾನೇ ಸೃಷ್ಟಿಸಿದ ಪ್ರಪಂಚವನ್ನು ತಾನೇ ಕಲ್ಪಾಂತದಲ್ಲಿ ಉಪಸಂಹರಿಸಿ, ಸೂರ್ಯ, ಚಂದ್ರ, ನಕ್ಷತ್ರಗಳಾವವೂ ಇಲ್ಲದೆ ಎತ್ತೆತ್ತಲೂ ಕತ್ತಲೆ ಮುತ್ತಿದ ಆ ಪ್ರಳಯಕಾಲದಲ್ಲಿ ಎಲ್ಲವೂ ಅದೃಶ್ಯವಾಗಿ, ಪ್ರಪಂಚವೆಲ್ಲವೂ ಶೂನ್ಯವಾದಾಗ, ಆ ಏಕಾರ್ಣವ ಸಮುದ್ರದಲ್ಲಿ ಆ ಭಗವಂತನು ಶಯನವನ್ನು ಮಾಡುತ್ತಾನೆ. ನಾರಾಯಣ ರೂಪಿಯಾದ ಆ ಕೃಷ್ಣನು ಕಪ್ಪು ಮೋಡದಂತಿರುವ ಶಾಮಸುಂದರ ದೇಹದಿಂದ ಹೊಳೆಯುತ್ತ ಪೀತಾಂಬರ ಉಟ್ಟುಕೊಂಡು ಸಹಸ್ರ ಶೀರ್ಷನಾಗಿ ಶ್ರೀವತ್ಸ ಲಕ್ಷಣದಿಂದ ಒಡಗೂಡಿ, ಆ ಪ್ರಳಯೋದಧಿಯಲ್ಲಿ ಶೋಭಿಸುತ್ತಾನೆ. ಅವನ ದೇಹವನ್ನು ಆಲಿಂಗಿಸಿಕೊಂಡು ಲಕ್ಷ್ಮೀದೇವಿಯು ಅವನ ಸೇವೆ ಮಾಡುತ್ತಿರುತ್ತಾಳೆ. ಹಾಗೇ ಆ ಶಾಂತ ಮೂರ್ತಿಯು ಯೋಗನಿದ್ರೆ ಹೊಂದಿ ಒಂದು ಸಹಸ್ರಯುಗ ಪರ್ಯಂತರ ಶಯನ ಮಾಡುತ್ತಾನೆ. ಅನಂತರ ಸಾವಿರಯುಗ ಕಳೆದ ಬಳಿಕ ತಾನಾಗಿಯೇ ಉದ್ಬುದ್ಧನಾಗಿ ಪುನಃ ಹೊಸ ಸೃಷ್ಟಿಮಾಡಲು ಉಪಕ್ರಮಿಸುತ್ತಾನೆ ಅನಂತರ ದೇವತೆಗಳನ್ನು ಮಾನವರನ್ನು ಎಲ್ಲ ಚರಾಚರ ಪ್ರಪಂಚವನ್ನು ತಾನೇ ಬ್ರಹ್ಮನಲ್ಲಿ ನಿಂತುಕೊಂಡು ಸೃಷ್ಟಿ ಮಾಡುತ್ತಾನೆ. ಸೃಷ್ಟಿ ಮಾಡಿ ತನ್ನ ನಾರಾಯಣ ರೂಪದಿಂದ ಎಲ್ಲರನ್ನು ರಕ್ಷಿಸುತ್ತಾನೆ. ಕೊನೆಗೆ ಸಂಕರ್ಷಣ ರೂಪದಿಂದ ಸಂಹರಿಸುತ್ತಾನೆ. ಆದುದರಿಂದ ಈ ಜಗತ್ತಿನ ಕರ್ತನೂ ಅವನೇ, ಪೋಷಿಸುವ ಭರ್ತನೂ ಅವನೇ ಕೊಲ್ಲುವ ಸಂಹರ್ತನೂ ಅವನೇ. ಈ ಪ್ರಪಂಚಕ್ಕೆ ಸೃಷ್ಟ್ಯಾದಿಗಳನ್ನೆಲ್ಲ ಅವನೇ ಮಾಡುವದರಿಂದ ಅವನಿಗೆ ಸರ್ವ ಎಂದು ಹೆಸರು. ಅವನ ನಿಜವಾದ ರೂಪವನ್ನು ಯಾವ ದೇವಾಧಿದೇವತೆಗಳೂ ಕಾಣಲಾರರು. ಅವನು ತಾನಾಗಿ ಅನುಗ್ರಹಿಸಿ ತೋರಿಸಿದ ಹಲವಾರು ರೂಪಗಳನ್ನು ಮಾತ್ರ ಋಷಿಮುನಿ, ದೇವತೆಗಳು ಬಲ್ಲರು. ಇಂತಹ ಪರಾತ್ಪರ ಪರಂಜ್ಯೋತಿಯಾದ ಭಗವಾನ್ ನಾರಾಯಣನು ಪ್ರಪಂಚವನ್ನೆಲ್ಲ ಸಂಹರಿಸಿ, ಉಪಸಂಹರಿಸಿ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡಿದ್ದನು. ಅದನ್ನು ತನ್ನ ಉದರದಲ್ಲಿ ಸಾವಿರ ವರುಷಗಳ ವರೆಗೆ ಇಟ್ಟುಕೊಂಡು, ಆ ಬ್ರಾಹ್ಮೀರಾತ್ರಿಯು ಕಳೆದ ಬಳಿಕ ಸಾವಿರ ಯುಗಗಳು ಕಳೆದ ನಂತರ ತನ್ನ ಉದರದಲ್ಲಿ ಇರಿಸಿಕೊಂಡ ಚರಾಚರ ಪ್ರಪಂಚವನ್ನೆಲ್ಲ ಹೊರಗೆ ತೆಗೆದು, ಮೊಟ್ಟೆಯಾಕಾರವಾಗಿ, ತೇಲಿಬಿಟ್ಟನು. ಅನಂತರ ಬ್ರಹ್ಮದೇವರು, ಪರಮಾತ್ಮನ ಆದೇಶದಂತೆ, ಸುರ, ಅಸುರ, ನರ, ಉರಗ, ಮರ ಕಿನ್ನರ, ಯಕ್ಷ, ಕಾಡು, ನಾಡು, ಔಷಧ, ಹೆಣ್ಣು, ಗಂಡು, ಅಪ್ಸರೆ, ಪಶು, ಪಕ್ಷಿ, ಕ್ರಿಮಿ, ಕೀಟ ಮುಂತಾದ ಅಸಂಖ್ಯ ಜೀವ ಜಂತು ಹಾಗೂ ಸಮುದ್ರ, ಪರ್ವತ, ಆಕಾಶ, ಪಂಚ ಮಹಾಭೂತ ಮುಂತಾದ ಚರಾಚರವಸ್ತುಗಳಿಂದ ಒಡಗೂಡಿದ ಸಮಸ್ತ ಪ್ರಪಂಚವನ್ನು ನಿರ್ಮಿಸಿದನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡ ನೂರ ನಲವತ್ತೆಂಟನೆಯ ಅಧ್ಯಾಯ ಮುಗಿದುದು*

—○—

## ವರಾಹಾವತಾರ ಚರಿತ್ರ ವರ್ಣನೆ

**ಅಧ್ಯಾಯ - ೨೪**

**ಶೌನಕ ಉವಾಚ:**

**ಜಗದಂಡಮಿದಂ ಪೂರ್ವಮಾಸೀದ್ದಿವ್ಯಂ ಹಿರಣ್ಮಯಮ್।**
**ಪ್ರಜಾಪತೇರಿಯಂ ಮೂರ್ತಿರಿತೀಯಂ ವೈದಿಕೀ ಶ್ರುತಿಃ॥**

**ಶೌನಕ** :- ಮೊಟ್ಟ ಮೊದಲು ಈ ಜಗದಂಡವು ಒಂದು ಬಂಗಾರದ ಮೊಟ್ಟೆಯಂತೆ ಇದ್ದಿತು. ಇದು ಒಂದು ಬ್ರಹ್ಮದೇವರ ಮೂರ್ತಿ ಎಂದು ವೇದದಲ್ಲಿ ಹೇಳುತ್ತಾರೆ. ಸಾವಿರ ವರುಷಗಳಾದ ಬಳಿಕ ಈ ಜಗದ್‌ರೂಪವಾದ ಮೊಟ್ಟೆಯು ಮೇಲೆ ಬಿರಿಯಿತು. ಅದರಂತೆ ಜಗತ್ತಿನ ಸೃಷ್ಟಿಗಾಗಿ ಕೆಳಗಡೆಯೂ ಒಡೆಯಿತು. ವಿಷ್ಣುವು ಲೋಕಸೃಷ್ಟಿಗಾಗಿ ಆ ಜಗದಂಡವನ್ನು ಎಂಟು ವಿಧವಾಗಿ ಭೇದಿಸಿದನು. ಮೇಲಿನ ಭಾಗವು ಆಕಾಶ ಎನಿಸಿತು. ಕೆಳಗೆ ಬಿರಿದದ್ದೇ ರಸಾತಲ. ಈ ಅಂಡದಲ್ಲಿ ಬಸಿದ ನೀರೆಲ್ಲವೂ ಮೇರು ಪರ್ವತವಾಯಿತು. ಅನೇಕ ಯೋಜನ ವಿಸ್ತಾರವಾದ ದೊಡ್ಡ ದೊಡ್ಡ ಪರ್ವತ ಜಾಲದಿಂದ ಭೂಮಿಯೆಲ್ಲವೂ ವಿಷಮವಾಯಿತು. ಈ ಪರ್ವತಗಳ ಭಾರವನ್ನು ತಾಳಲಾರದೇ ಭೂಮಿಯು ಕುಸಿದು ಕೆಳಗೆ ಜರಿದು ಈ ಬ್ರಹ್ಮಾಂಡದ ಎಲ್ಲದಕ್ಕಿಂತ ಕೆಳಗಿರುವ ರಸಾತಲಕ್ಕೆ ಇಳಿದುಬಿಟ್ಟಿತು. ಹೀಗೆ ಪೃಥ್ವಿಯು ರಸಾತಲದ ಆಳಕ್ಕೆ ಜರಿದು ಇಳಿದು ಹೋದದ್ದು ಕಂಡು ಭಗವಂತನು ಹುದುಲಿನಲ್ಲಿ ಬಿದ್ದು, ಹಸುವಿನಂತೆ ಒದ್ದಾಡುವ ಆ ಭೂಮಾತೆಯನ್ನು ಮೇಲಕ್ಕೆ ಎತ್ತಬೇಕೆಂದು ಸಂಕಲ್ಪಿಸಿದನು. ಆಗ ಭೂದೇವಿಯು ಭಕ್ತಿಯಿಂದ ಭಗವಂತನಿಗೆ ನಮಸ್ಕರಿಸಿ ಪ್ರಾರ್ಥನೆ ಮಾಡಿದಳು.

**ಪೃಥ್ವೀ ಉವಾಚ :**

**ತ್ರಿವಿಕ್ರಮಾಯಾऽಮಿತ ವಿಕ್ರಮಾಯ ಮಹಾವರಾಹಾಯ ಸುರೋತ್ತಮಾಯ।**
**ಶ್ರೀ ಶಾಂರ್ಙ್ಗ ಚಕ್ರಾಸಿ ಗದಾಧರಾಯ ನಮೋऽಸ್ತು ತೇ ದೇವವರ ಪ್ರಸೀದ॥"**

ಅಪರಿಮಿತ ಪರಾಕ್ರಮ ಉಳ್ಳ ತ್ರಿವಿಕ್ರಮರೂಪಿಯಾದ ಮಹಾವರಾಹನಿಗೆ ನಮಸ್ಕಾರ. ಎಲ್ಲ ದೇವತೆಗಳಲ್ಲಿ ಸರ್ವಶ್ರೇಷ್ಠನಾದ ಶಂಖ ಚಕ್ರ ಗದಾ ಪದ್ಮಗಳನ್ನು ಬಾಹುಗಳಲ್ಲಿಯೂ ಶ್ರೀದೇವಿಯನ್ನು ವಕ್ಷಸ್ಥಳದಲ್ಲಿಯೂ ಧರಿಸಿದ ದೇವೋತ್ತಮನಾದ ಶ್ರೀಹರಿಗೆ ನಮೋನಮಃ. ನೀನು ನನ್ನ ಮೇಲೆ ಪ್ರಸನ್ನನಾಗು. ಭೂಭಾರವನ್ನು ಇಳಿಸುವದಕ್ಕಾಗಿ, ಸಜ್ಜನರ ಉದ್ಧಾರಕ್ಕಾಗಿ, ದುರ್ಜನರ ಶಾಸನಕ್ಕಾಗಿ ನೀನು ಯುಗಯುಗಗಳಲ್ಲಿ ಅವತಾರ ತಾಳುವೆ. ಕೃತಯುಗದಲ್ಲಿ ನೀನು ಶುಭ್ರವರ್ಣನಾಗಿರುವೆ. ತ್ರೇತಾಯುಗದಲ್ಲಿ ಸಂಪಿಗೆ ಹೂವಿನಂತೆ ಬಣ್ಣ. ದ್ವಾಪರಯುಗದಲ್ಲಿ ಹೊಂಬಣ್ಣ. ಕಲಿಯುಗದಲ್ಲಿ ಕೃಷ್ಣ ಕಪ್ಪುಬಣ್ಣ, ಎಲ್ಲ ಪ್ರಾಣಿಗಳನ್ನು ಹುಟ್ಟಿಸಿ, ಬೆಳೆಸಿ, ಉಳಿಸಿ, ನಗಿಸಿ, ಅಳಿಸಿ, ಕೊನೆಗೆ ಸಂಹರಿಸುವವನು ನೀನೇ ಆಗಿರುವೆ. ಪ್ರಾಣಿಗಳಿಗೆಲ್ಲ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವದರಿಂದ ಕೊನೆಗೆ ಕಾಲರೂಪಿಯಾಗಿ ಸಂಹರಿಸುವದರಿಂದ ನಿನಗೆ 'ಕಾಲ' ಎಂಬ ಹೆಸರು ಬಂದಿದೆ. ಪ್ರಳಯಕಾಲದಲ್ಲಿ ನಿಖಿಲ ಪ್ರಪಂಚ

ನಾಶವಾದರೂ ನೀನೊಬ್ಬನೇ ಅವಶೇಷಿತನಾಗಿ ಶೇಷಶಾಯಿಯಾಗಿ ಇದ್ದು ಅನಂತರ ಈ ಪ್ರಪಂಚವನ್ನೆಲ್ಲ ವಿಶೇಷವಾಗಿ ಬೆಳೆಸಿ ಮತ್ತೆ ಎಲ್ಲರನ್ನು ನಿಶ್ಶೇಷವಾಗಿ ಸಂಹರಿಸಿ ನೀನೊಬ್ಬನೇ ಪರಿಶೇಷವಾಗಿ ಉಳಿಯುವೆ. ಆದ್ದರಿಂದ ನಿನಗೆ 'ಶೇಷ' ಎಂದೂ ಹೆಸರು.

ಬ್ರಹ್ಮಾದಿದೇವತೆಗಳು ಸ್ಥಾನ, ಮಾನ ಮತ್ತು ಜೀವನದಿಂದಲೇ ಕೊನೆಗೆ ಚ್ಯುತರಾಗುತ್ತಾರೆ. ನೀನು ಎಂದೂ, ಯಾವುದರಿಂದಲೂ ಚ್ಯುತನಾಗದೇ ಉಳಿಯುವದರಿಂದ ನೀನು ಅಚ್ಯುತ. ಇಂದ್ರ, ಯಮ, ವರುಣ, ರುದ್ರ, ಬ್ರಹ್ಮ, ಮುಂತಾದವರೆಲ್ಲರನ್ನು ಕೊನೆಗೆ, ಸಂಹರಿಸುವದರಿಂದ ನಿನಗೆ 'ಹರಿ' ಎಂದು ಹೆಸರು. ಬ್ರಹ್ಮಾದಿ ದೇವತೆಗಳಿಗೂ, ಬ್ರಹ್ಮಜ್ಞಾನಿಗಳಿಗೂ ನಿನ್ನ ಅಂತವು ಹತ್ತುವದಿಲ್ಲ. ಅಂದರೆ ನಿನ್ನ ಕೊನೆ, 'ಇದಮಿತ್ಥಂ' ಎಂದು ನಿಷ್ಕೃಷ್ಟವಾಗಿ ನಿನ್ನ ನಿಜಸ್ವರೂಪ ತಿಳಿಯುವದಿಲ್ಲ ಆದುದರಿಂದ ನೀನು 'ಅನಂತ' ಎಂದು ಕರೆಯಲ್ಪಡುವೆ. ಕೋಟಿಕೋಟಿ ವರುಷಗಳಾದರೂ ನಿನಗೆ ಕ್ಷಯವಿಲ್ಲ. ನೀನು ಸವೆಯುವದಿಲ್ಲ. ನಿನಗೆ 'ಅಕ್ಷರ'ನೆಂದು ಹೆಸರು. ಈ ಪ್ರಪಂಚವನ್ನೆಲ್ಲ ನೀನು ಅಪ್ಪಿ ಹಿಡಿದಿರುವೆ. ನಾಶವಾಗದಂತೆ ತಡೆದಿರುವೆ. ಅಂತಃಪ್ರವಿಷ್ಟನಾಗಿ ಹೊತ್ತಿರುವೆ, ಒಳಗೆಲ್ಲ ವ್ಯಾಪಿಸಿಕೊಂಡು ಧರಿಸಿರುವೆ. ಆದುದರಿಂದ ನಿನಗೆ 'ವಿಷ್ಣು' ಎಂದು ಹೆಸರು ಬಂದಿದೆ. ನಾರ ಅಂದರೆ ನೀರು. ಆ ನೀರನ್ನು ಆಶ್ರಯಿಸಿಕೊಂಡು ಪ್ರಳಯ ಜಲಧಿಯಲ್ಲಿ ಶಯನ ಮಾಡಿದ್ದರಿಂದ ನಿನಗೆ ನಾರಾಯಣ ಎಂದೂ ಕರೆಯುವರು. ಯುಗಯುಗಗಳಲ್ಲಿ ಮರೆತುಹೋದ ವೇದಗಳ ರಾಶಿಯನ್ನು, ರಸಾತಳಕ್ಕೆ ಇಳಿದ ಭೂದೇವಿಯನ್ನು ನೀನು ಎತ್ತಿ ಹಿಡಿದು ಮತ್ತೆ ಪ್ರತಿಷ್ಠಾಪಿಸಿ, ರಕ್ಷಿಸುವದರಿಂದ ನಿನಗೆ 'ಗೋವಿಂದ' ಎಂದು ಹೆಸರು 'ಹೃಷಿಕ' ಎಂದರೆ ಇಂದ್ರಿಯಗಳು. ಅವುಗಳನ್ನು ನಿಯಂತ್ರಿಸುವದರಿಂದ ನೀನು 'ಹೃಷೀಕೇಶ' ಎಂದು ಕರೆಯಲ್ಪಡುವೆ. ಪ್ರಾಣಿಗಳೆಲ್ಲವೂ ನಿನ್ನನ್ನು ಆಧರಿಸಿ ಕೊಂಡು ನಿಂತಿವೆ. ನೀನು ಎಲ್ಲ ಪ್ರಾಣಿಗಳಲ್ಲಿಯೂ ವಾಸವಾಗಿರುವೆ. ಅದುದರಿಂದ ನಿನಗೆ 'ವಾಸುದೇವ' ಎಂದು ಹೆಸರು ಇದೆ. ಪ್ರತಿಯೊಂದು ಕಲ್ಪದಲ್ಲಿ ಎಲ್ಲ ಪ್ರಾಣಿಗಳನ್ನು ನೀನು ಕೊನೆಗಾಲದಲ್ಲಿ 'ಕರ್ಷಣ' ಮಾಡಿ ಸೆಳೆದುಕೊಳ್ಳುವದರಿಂದ 'ಸಂಕರ್ಷಣ' ಎಂದು ನಿನ್ನನ್ನು ಕರೆಯುವರು. ಪ್ರಕೃಷ್ಟವಾದ ಕಾಂತಿಯಿಂದಲೂ, ಪ್ರಪಂಚವೆಲ್ಲ ನಿನ್ನಿಂದಲೇ ದಿವ್ಯಜ್ಞಾನವನ್ನು ಸ್ಥಿತಿಯನ್ನು ಉದ್ಭವವನ್ನು ಹೊಂದುವದರಿಂದಲೂ ನಿನಗೆ 'ಪ್ರದ್ಯುಮ್ನ' ಎಂದು ಹೆಸರು ಬಂದಿದೆ. ಪ್ರಾಣಿಗಳು ಯಾರೂ ನಿನ್ನನ್ನು ತಡೆಯುವದಿಲ್ಲ ಆದುದರಿಂದ ನಿನಗೆ 'ಅನಿರುದ್ಧ'ನೆಂದು ಋಷಿಗಳು ಕರೆದಿದ್ದಾರೆ. ಹೀಗೆ ಅನೇಕ ಹೆಸರುಗಳಿಂದ ಬ್ರಹ್ಮಜ್ಞಾನಿಗಳಿಂದ ಪೂಜಿಸಲ್ಪಡುವ ನಾರಾಯಣನೇ, ಈ ಜಗತ್ತನ್ನೆಲ್ಲ ಮುಖ್ಯವಾಗಿ ಧರಿಸುವವನು ನೀನು. ಅನಂತರ ನೀನು ಧರಿಸಿದ ಪ್ರಪಂಚವನ್ನೇ ನಿಮಿತ್ತ ಮಾತ್ರಕ್ಕೆ ನಾನು ಧರಿಸುತ್ತೇನೆ. ನೀನು ಧರಿಸಲಾರದ್ದನ್ನು ನಾನು ಎಂದೂ ಹೊರಲಾರೆ. ಯುಗಯುಗಗಳಲ್ಲಿ ನೀನೇ ಅವತಾರಮಾಡಿ ನನ್ನ ಭಾರವನ್ನು ಇಳಿಸುವೆ. ನಿನ್ನ ತೇಜಸ್ಸಿನಿಂದ ವಿಭ್ರಾಂತಳಾದ ನಾನು ರಸಾತಲಕ್ಕೆ ಇಳಿಯುತ್ತಿದ್ದೇನೆ. ನನ್ನನ್ನು ರಕ್ಷಿಸು. ದಾನವರಿಂದ ಪೀಡಿತಳಾದ ನನಗೆ ನಿನ್ನ ಹೊರತು ಬೇರೆ ಯಾರು ಗತಿ? ನಿನಗೆ ಶರಣು ಬರುವವರೆಗೆ ನನಗೆ ಭಯ. ಅನಂತರ ಯಾವ ಭಯವೂ ಇಲ್ಲ. ಇದು ನನ್ನ ನೂರಾರು ಸಲದ ಅನುಭವ. ನಿನಗೆ ಇಂದ್ರಾದಿ ದೇವತೆಗಳು ಉಪಮೆಯನ್ನು ಹೇಳಲಾರರು.

ನಿನ್ನಂತಿರುವ ವಸ್ತು ನೀನೇ. ನಿನಗೆ ಸದೃಶರು ಯಾರು ಅಂದರೆ ಅದಕ್ಕೆ ಎಲ್ಲರೂ ನಿರುತ್ತರ. ಅದೇ ಅದರ ಉತ್ತರ.

**ಶೌನಕ:-** ಭೂದೇವಿಯ ಈ ದಿವ್ಯವಾದ ಸ್ತೋತ್ರ ಕೇಳಿ ಪ್ರೀತನಾದ ಆ ಪರಮಾತ್ಮನು ಅವಳಿಗೆ ಹೇಳಿದನು.

**ವಿಷ್ಣು:-** 'ಭೂದೇವಿ ಬೆದರಬೇಡ. ಶಾಂತಳಾಗು, ನನ್ನ ಮುಂದೆ ನಡೆ, ನಾನು ನಿನ್ನನ್ನು ಯೋಗ್ಯವಾದ ಸ್ಥಾನದಲ್ಲಿ ಕೂಡಿಸುತ್ತೇನೆ.

**ಶೌನಕ:-** ಭೂದೇವಿಯನ್ನು ಇಂತು ವಿಷ್ಣುವು ಸಮಾಧಾನಪಡಿಸಿ ಹೀಗೆ ವಿಚಾರ ಮಾಡಿದನು- 'ನಾನು ಯಾವ ರೂಪವನ್ನು ಧರಿಸಿ ಧರಾದೇವಿಯನ್ನು ಉದ್ಧರಿಸಲಿ ?' ಹೀಗೆ ವಿಚಾರಮಾಡಿ, ಜಲಕ್ರೀಡೆ ಆಡಲು ಉಚಿತವಾದ ವರಾಹದೇಹವನ್ನು ಆ ಭಗವಂತನು ಧರಿಸಿದನು.

ನೂರು ಯೋಜನ ವಿಸ್ತಾರ, ನೂರು ಯೋಜನ ಎತ್ತರವಾದ ಆ ವರಾಹ ಮೂರ್ತಿಯು ಕಪ್ಪು ಮೋಡದಂತೆ, ನೀಲವರ್ಣದಿಂದ ಶೋಭಿಸುತ್ತಿದ್ದನು. ಮೇಘ ಗುಡುಗಿದಂತೆ ಧ್ವನಿ. ಬೆಟ್ಟದಂತಹ ಬೃಹದಾಕಾರ. ತೀಕ್ಷ್ಣವಾದ ಬೆಳ್ಳಗಿನ ಕೋರೆದಾಡೆ. ಕಟಿಭಾಗದಲ್ಲಿ ಎತ್ತಿನ ಲಕ್ಷಣ. ಬೆಂಕಿಯ ಬೆಟ್ಟದಂತೆ ತೇಜೋರೂಪ, ಮಿಂಚಿನ ಮಂಚದಂತೆ ಹೊಳೆಯವ ಕಣ್ಣು. ಸಾವಿರ ಸೂರ್ಯರ ಅದ್ಭುತ ತೇಜಸ್ಸು. ಇಂತಹ ದಿವ್ಯ ರೂಪವನಾಂತ ವರಾಹದೇವನು ಪೃಥ್ವಿಯ ಉದ್ಧಾರಕ್ಕಾಗಿ ಸಮುದ್ರದಲ್ಲಿ ಹೊಕ್ಕು ರಸಾತಲವನ್ನು ಪ್ರವೇಶಮಾಡಿದನು.

ಆ ವರಾಹ ದೇವರು ಸಾಕ್ಷಾತ್ ಯಜ್ಞಮೂರ್ತಿ. ನಾಲ್ಕು ವೇದಗಳೇ ಅವನ ನಾಲ್ಕು ಪಾದಗಳು. ಆ ಕೋರೆದಾಡಿಯೇ ಯಜ್ಞಸ್ಥಂಭ, ಕ್ರತುಗಳೇ ಹಲ್ಲು, ಮುಖವೇ ಆಗ್ನಿಕುಂಡ, ನಾಲಿಗೆಯೇ ಹೋಮಾಗ್ನಿ, ಮೈಮೇಲಿನ ಕೂದಲುಗಳೇ ದರ್ಭೆ. ಶಿಕ್ಷಾ, ಕಲ್ಪ, ವ್ಯಾಕರಣ, ಛಂದಸ್ಸು, ನಿರುಕ್ತ, ಜೋತಿಷ್ಯ ಈ ಆರು ವೇದಾಂಗಗಳೇ ಕಿವಿಯ ಭೂಷಣಗಳು. ಅವನ ಮೂಗೇ ತುಪ್ಪ, ಮುಖವೇ ಸೌಟು, ಸಾಮವೇದ ಘೋಷವೇ ಧ್ವನಿ. ಪ್ರಾಯಶ್ಚಿತ್ತವೇ ನಖ. ಮೊಳಕಾಲೇ ಪಶು. ಯಜ್ಞವೇ ಆಕಾರ. ಅವನ ರಕ್ತವೇ ಸೋಮರಸ. ಅವನ ಗಂಧವೇ ಹವಿಸ್ಸು, ಹೃದಯವೇ ದರ್ಪಣ. ತುಟಿಯ ಬಣ್ಣವೇ ಉಪಾಕರ್ಮ. ಅನೇಕ ಛಂದಸ್ಸುಗಳೇ ಅವನ ಗತಿಲೀಲೆ. ಗುಹ್ಯಾಂಗವೇ ಉಪನಿಷತ್ತು, ಇಂತಹ ಯಜ್ಞಮೂರ್ತಿ ಎನಿಸಿದ ಆ ಯಜ್ಞವರಾಹನು ರಸಾತಲಕ್ಕೆ ಇಳಿದು ಅಲ್ಲಿಯೇ ಮುಳುಗಿ ಹೋದ ಭೂಮಂಡಲವನ್ನು ತನ್ನ ಕೋರೆ ದಾಡೆಯಿಂದ ಎತ್ತಿ, ಮೇಲೆ ತಂದನು. ತನ್ನ ಸ್ಥಾನಕ್ಕೆ ಬಂದು ಆ ಭೂಮಿಯನ್ನು ಸ್ವಸ್ಥಾನದಲ್ಲಿ ಇರಿಸಿ ವೈಕುಂಠಕ್ಕೆ ಪ್ರಯಾಣಮಾಡಿದನು.

ಅನಂತರ ಭೂದೇವಿಯು ಆ ಭಗವಂತನು ಎತ್ತಿ ಹಿಡಿದದ್ದರಿಂದ ಧರಾ, ಧರಣಿ, ಎಂದು ಹೆಸರನ್ನು ಹೊಂದಿ ಆ ಪರಮಾತ್ಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ನಲವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—○—

## ಕ್ಷೀರೋದ ಮಥನ ಪ್ರಕರಣ

ಅಧ್ಯಾಯ - ೨೫೦

**ಋಷಿ ಉವಾಚ**

**ನಾರಾಯಣಸ್ಯ ಮಾಹಾತ್ಮ್ಯಂ ಶ್ರುತ್ವಾ ಸೂತ ಯಥಾಕ್ರಮಮ್।**
**ನ ತೃಪ್ತಿರ್ಜಾಯತೇಽಸ್ಮಾಕಮತಃ ಪುನರಿಹೋಚ್ಯತಾಮ್॥**

**ಋಷಿಗಳು** :- ಸೂತನೇ, ನಾರಾಯಣನ ಮಹಿಮೆಯನ್ನು ಯಥಾಕ್ರಮದಿಂದ ಕೇಳಿದರೂ, ನಮಗೆ ತೃಪ್ತಿ ಆಗಲಿಲ್ಲ. ಆದುದರಿಂದ ಮತ್ತೆ ಆ ಭಗವಂತನ ಮಹಿಮೆಯನ್ನು ಹೇಳು. ಹಿಂದೆ ದೇವತೆಗಳೆಲ್ಲರೂ ಯಾವ ತಪಸ್ಸಿನಿಂದ, ಯಾರ ಅನುಗ್ರಹ ದಿಂದ ಅಮರತ್ವವನ್ನು ಹೊಂದಿ ಮೃತ್ಯುವನ್ನು ಮೀರಿ ನಿಂತರು? ಇದನ್ನು ತಿಳಿಸಿರಿ.

**ಸೂತ** :- ನಾರಾಯಣದೇವರೂ, ಶೂಲಪಾಣಿಮಹಾದೇವರೂ ದೈತ್ಯ ದಾನವರಿಗೆ ಸಾವನ್ನು ಮೆಟ್ಟಿ ನಿಲ್ಲಲು ಸಹಾಯಕರಾಗಿದ್ದಾರೆ. ಪೂರ್ವಕಾಲದಲ್ಲಿ ದೇವದಾನವರ ಯುದ್ಧಗಳಲ್ಲಿ ದೇವತೆಗಳ ಶಸ್ತ್ರಾಸ್ತ್ರಗಳಿಂದ ಅಸಂಖ್ಯ ದಾನವರು ಮೃತರಾಗಿ ಬಿದ್ದರು. ಆಗ ದೈತ್ಯ ಗುರು ಶುಕ್ರಾಚಾರ್ಯರು 'ಮಹಾದೇವರು ಪ್ರಸನ್ನರಾಗಿ ತನಗೆ ಕೊಟ್ಟ ಸಂಜೀವಿನೀ ವಿದ್ಯೆಯ ಪ್ರಭಾವದಿಂದ, ಸತ್ತ ದಾನವರೆಲ್ಲರನ್ನು ಮತ್ತೆ ಬದುಕಿಸುತ್ತಿದ್ದರು. ಮೃತರಾದವರನ್ನು ಮರಳಿ ಬದುಕಿಸುವ ಈ ಮೃತ ಸಂಜೀವಿನೀ ವಿದ್ಯೆಯು ಮಹೇಶ್ವರನ ಮುಖದಿಂದ ಹೊರಟಿದ್ದರಿಂದ ಇದಕ್ಕೆ ಮಾಹೇಶ್ವರೀವಿದ್ಯೆ ಎಂದು ಹೆಸರು ಬಂದಿತ್ತು. ಈ ವಿದ್ಯೆಯ ಪ್ರಭಾವದಿಂದ ದಾನವರೆಲ್ಲರೂ ಅಮರರಾದರು. ಆದರೆ ದೇವತೆಗಳಿಗಾಗಲಿ, ನಾಗಗಳಿಗಾಗಲಿ, ಋಷಿಗಳಿಗಾಗಲಿ, ಬ್ರಹ್ಮ, ಇಂದ್ರ, ವಿಷ್ಣು ಮುಂತಾದ ದೇವತೆಗಳಲ್ಲಿಯಾಗಲಿ ಆ ವಿದ್ಯೆ ಇರಲಿಲ್ಲ. ಆ ಮೃತಸಂಜೀವಿನಿವಿದ್ಯೆಯಿಂದ ದೈತ್ಯರೆಲ್ಲರೂ ಅಮರರಾಗಿ ಉನ್ಮತ್ತರಾಗಿ ದೇವತೆಗಳ ಜೊತೆಗೆ, ಕಾದಾಡಲು ದೇವಲೋಕಗಳ ಮೇಲೆ ಏರಿಬಂದರು. ಶೌರ್ಯದಿಂದ ಕಾದಿದರು, ಯುದ್ಧದಲ್ಲಿ ಸತ್ತವರನ್ನೆಲ್ಲ ಗುರು ಶುಕ್ರಾಚಾರ್ಯರು ತಮ್ಮ ಸಂಜೀವಿನೀವಿದ್ಯೆಯ ಪ್ರಭಾವದಿಂದ ಬದುಕಿಸಿ ಬಿಡುತ್ತಿದ್ದರು, ದೇವತೆಗಳ ಶಸ್ತ್ರಾಸ್ತ್ರಗಳ ಪ್ರಭಾವದಿಂದ ಗತ ಪ್ರಾಣರಾಗಿ, ಹೆಣವಾಗಿ ನೆಲಕ್ಕೆ ಬಿದ್ದ ದಾನವರೆಲ್ಲರೂ ಅರೆಚಣದಲ್ಲಿ ಮಲಗಿದವರು ಎದ್ದು ಕೂಡುವಂತೆ ಸಂಜೀವಿನೀ ವಿದ್ಯೆಯಿಂದ ತಕ್ಷಣವೇ ಮೇಲೆದ್ದು ಸಿಂಹನಾದಮಾಡುತ್ತಿದ್ದರು. ದೈತ್ಯರಿಗೆ, ಸತ್ತು ಬದುಕುವದೂ ಒಂದು ಆಟವಾಯಿತು. ಆಗ ದೇವತೆಗಳಿಗೆ ಮಾತ್ರ ಇದೊಂದು ಪ್ರಾಣಸಂಕಟ. ದೈತ್ಯರಿಂದ ಅವರು ಯುದ್ಧದಲ್ಲಿ ಪ್ರಚಂಡ ಪ್ರಮಾಣದಲ್ಲಿ ಗೆಲ್ಲಲ್ಪಟ್ಟರು ಮತ್ತು ಕೊಲ್ಲಲ್ಪಟ್ಟರು. ಆದರಿಂದ ಇಂದ್ರಾದಿ ದೇವತೆಗಳು ಖಿನ್ನವಿಷಣ್ಣರಾಗಿ ಸೋತು ಸುಣ್ಣಾಗಿ ಸೊರಗಿ ಸಣ್ಣಾಗಿ ಬ್ರಹ್ಮದೇವರ ಬಳಿಗೆ ಬಂದರು. ಮೇರು ಪರ್ವತದ ಮೇಲ್ಭಾಗದಲ್ಲಿ ನೆರೆದ ಸುರಪುರದ ನಾಗರಿಕರನ್ನು ಉದ್ದೇಶಿಸಿ ಬ್ರಹ್ಮದೇವರು ಇಂತು ನುಡಿದರು.

**ಬ್ರಹ್ಮ**:- ದೇವತೆಗಳೆ, ನನ್ನ ಮಾತನ್ನು ಕೇಳಿರಿ. ನೀವು ಈಗ ದಾನವರ ಜೊತೆಗೆ ದ್ವೇಷ ಬಿಟ್ಟು, ಸ್ನೇಹ ಬೆಳೆಸಿರಿ. ದೈತ್ಯರ ಸಹಾಯದಿಂದ ಹಾಲಿನ ಸಮುದ್ರವನ್ನು ಅಮೃತವನ್ನು ಪಡೆಯಲಿಕ್ಕಾಗಿ, ಕಡೆಯಿರಿ. ಅದಕ್ಕಾಗಿ ವರುಣನನ್ನು ಕೇಳಿಕೊಳ್ಳಿರಿ. ಚಕ್ರಪಾಣಿಯಾದ ಶ್ರೀ ಹರಿಯ ಸಹಾಯವು ಅತ್ಯಂತ ಮುಖ್ಯ. ಅವನ ಬೆಂಬಲದಿಂದ ಮಂದರ ಪರ್ವತವನ್ನು ಕಡೆಗೋಲನ್ನಾಗಿಮಾಡಿ, ಶೇಷನನ್ನೇ ಹಗ್ಗವನ್ನಾಗಿಮಾಡಿ, ಕ್ಷೀರ ಸಮುದ್ರ ಮಂಥನಮಾಡಿರಿ. ಅದಕ್ಕಾಗಿ ದೈತ್ಯೇಂದ್ರನಾದ ಬಲಿಚಕ್ರವರ್ತಿ ಯೊಡನೆ ಕೆಲವು ಕಾಲ ಸ್ನೇಹ ಸಂಧಾನ ಬೆಳೆಸಿರಿ. ದಾನವರನ್ನೆಲ್ಲರನ್ನೂ ಈ ಕಾರ್ಯಕ್ಕಾಗಿ ಕರೆತನ್ನಿರಿ. ಆ ಕಾಲದಲ್ಲಿ ಕೂರ್ಮರೂಪದಿಂದ ಇರುವ ಮಹಾವಿಷ್ಣುವನ್ನು ಪ್ರಾರ್ಥಿಸಿರಿ. ಮಂದರಬೆಟ್ಟವನ್ನು ಬೇಡಿಕೊಳ್ಳಿರಿ, ಕಡೆಯುವ ಕಾರ್ಯ ಪ್ರಾರಂಭಿಸಿರಿ.'' ಬ್ರಹ್ಮದೇವರ ಈ ಮಾತನ್ನು ಕೇಳಿ, ದೇವತೆಗಳೆಲ್ಲರೂ, ದಾನವೇಶ್ವರನಾದ ಬಲಿಯ ಮನೆಗೆ ಬಂದರು. ಅವನಿಗೆ ಹೇಳಿದರು.

''ದೈತ್ಯರಾಜ, ಇನ್ನು ನಮ್ಮ ನಿಮ್ಮಲ್ಲಿ ವಿರೋಧವು ಸಾಕು, ಬಲಿರಾಜ ನೀನು ಇನ್ನು ಮೇಲೆ ನಮ್ಮೆಲ್ಲ ದೇವತೆಗಳಿಗೂ ಅಧಿರಾಜ, ಇನ್ನು ನಾವಿಬ್ಬರೂ ಸೇರಿ, ಹಾಲ್ಗಡಲನ್ನು ಕಡೆಯೋಣ. ಆ ಅಮೃತವನ್ನು ಪಡೆಯೋಣ, ಆದಿಶೇಷನನ್ನೇ ಹಗ್ಗವನ್ನಾಗಿ ಮಾಡೋಣ. ಮಂದರ ಪರ್ವತವನ್ನು ಕಡಗೋಲನ್ನಾಗಿಮಾಡಿ, ಕ್ಷೀರ ಸಮುದ್ರವನ್ನು ಮಂಥನ ಮಾಡಿದರೆ ಅಮೃತವು ಪ್ರಾಪ್ತವಾಗುತ್ತದೆ. ನಿಮ್ಮ ಸಹಾಯದಿಂದ ಅಮೃತವು, ದೊರಕಿದ ಬಳಿಕ ಅದನ್ನು ಪಾನಮಾಡಿ, ಎಲ್ಲರೂ, ಅಮರರಾಗೋಣ, ದೇವತೆಗಳಿಗೂ ದಾನವರಿಗೂ ಮುಂದೆ ಮರಣದ ಭಯವೇ ತಪ್ಪಿ ಹೋಗುವದು.''

ದೇವತೆಗಳ ಈ ಮಾತನ್ನು ಕೇಳಿ, ದೈತ್ಯೇಂದ್ರನಾದ ಬಲಿರಾಜನಿಗೆ ಬಹಳ ಆನಂದವಾಯಿತು. ಅವನು ಉತ್ಸಾಹದಿಂದ ಹೇಳಿದನು ''ದೇವತೆಗಳೇ, ನೀವು ಹೇಳಿದಂತೆ ಈಗ ನಾನು ಮಾಡುತ್ತೇನೆ. ಕ್ಷೀರಸಮುದ್ರವನ್ನು ನಾನೊಬ್ಬನೇ, ಕಡೆಯಲು ಮತ್ತು ಅಮೃತವನ್ನು ಪಡೆಯಲು ಸಮರ್ಥನಿದ್ದೇನೆ. ನೀವು ಬಹು ದೂರದಿಂದ ನನ್ನ ಮನೆಗೆ ಬಂದಿದ್ದೀರಿ. ನನಗೆ ನಮಿಸಿ ನಿಂತಿದ್ದೀರಿ, ನೀವು ವೈರಿಗಳಾದರೂ ಇಂದ್ರ, ನೀವೆಲ್ಲರೂ ನನ್ನ ಮನೆಗೆ ಬಂದ ಬಳಿಕ ನನ್ನ ಅತಿಥಿಗಳು. ಮನೆಗೆ ಬಂದ ಅತಿಥಿಗಳನ್ನು ಭಕ್ತಿಯಿಂದ ಪೂಜಿಸದಿದ್ದರೆ, ಆ ಮನುಷ್ಯನಿಗೆ ಇಹದಲ್ಲಿ ಸುಖವಿಲ್ಲ. ಸತ್ತ ಬಳಿಕ ಸದ್ಗತಿಯಿಲ್ಲ. ಆದ್ದರಿಂದ ನಾನು ವೈರಿಗಳಾದರೂ ನಿಮ್ಮನ್ನು ಸ್ನೇಹದಿಂದ ರಕ್ಷಿಸುವೆನು. ಇನ್ನು ಮೇಲೆ ನಾವಿಬ್ಬರೂ ಮಿತ್ರರು, ಒಬ್ಬ ತಂದೆಯ ಮಕ್ಕಳು.

ಹೀಗೆ ಹೇಳಿ, ಆ ದೈತ್ಯ ದೊರೆಯು ದೇವತೆಗಳೊಂದಿಗೆ ಮಂದರ ಗಿರಿಯ ಬಳಿಗೆ ಹೋಗಿ, ಬೇಡಿಕೊಂಡನು, ದೇವತೆಗಳೂ ದನಿ ಕೂಡಿಸಿದರು.

''ಗಿರಿರಾಜಾ, ನೀನು ನಮ್ಮ ಮಿತ್ರ. ಹಾಲಿನ ಸಾಗರವನ್ನು ಕಡೆದು ನಾವೆಲ್ಲ ದೇವಾಸುರರು ಕೂಡಿ ಅಮೃತವನ್ನು ಪಡೆಯಬೇಕೆಂದು ಸಂಕಲ್ಪಮಾಡಿದ್ದೇವೆ. ಅದಕ್ಕಾಗಿ ನೀನು ಕಡೆಗೋಲಾಗಿ ನಮಗೆ ಸಹಾಯ ಮಾಡಬೇಕು. ಇದೊಂದು ದೊಡ್ಡ ಕಾರ್ಯ.''

ಸುರಾಸುರರ ಈ ಬಿನ್ನಹಕ್ಕೆ ಮಂದರ ಪರ್ವತವು ಸಮ್ಮತಿಸಿ, 'ನೀವು ಹೇಳಿದಂತೆ ಆಗಬಹುದು. ಆದರೆ ನನಗೆ ಏನಾದರೂ ಆಧಾರ ಬೇಕು. ಅದರ ಮೇಲೆ ನಿಂತು ನಾನು

ತಿರುಗುತ್ತೇನೆ. ಮತ್ತು ಸಮುದ್ರವನ್ನು ಕಡೆಯುತ್ತೇನೆ. ಅದಕ್ಕಾಗಿ ನನಗೆ ನಿಲ್ಲಲು ಒಂದು ವಿಸ್ತಾರವಾದ ವಸ್ತುವನ್ನು ಗೊತ್ತುಪಡಿಸಿರಿ. ಹಾಗೂ ಕಡೆಗೋಲಾಗಿ, ಕಡೆಯಲು ಹಗ್ಗವಾಗಬಲ್ಲ ಯಾರನ್ನಾದರೂ ಕರೆದುಕೊಂಡು ಬನ್ನಿ'' ಮಂದರ ಪರ್ವತವು ಹೀಗೆ ನುಡಿದ ಬಳಿಕ ಪಾತಾಳ ಲೋಕದಿಂದ, ಆದಿಶೇಷ, ಆದಿಕೂರ್ಮರು ಎದ್ದು ಮೇಲೆ ಬಂದರು. ಅವರು ದೈತ್ಯ ದೇವತೆಗಳನ್ನು ಉದ್ದೇಶಿಸಿ ಹೇಳಿದರು. ''ಸುರಾಸುರರೆ, ನೀವು ಚಿಂತಿಸಬೇಡಿರಿ. ನಾವಿಬ್ಬರೂ ಶ್ರೀಹರಿಯ ಅಂಶ ಹಾಗೂ ಅನುಗ್ರಹದಿಂದ ಮೂರು ಲೋಕಗಳನ್ನೆಲ್ಲ ಧಾರಣಮಾಡಲಿಕ್ಕಾಗಿ ಬ್ರಹ್ಮಾಂಡದ ಮೂಲದಲ್ಲಿ ನೆಲಸಿದ್ದೇವೆ. ಹದಿನಾಲ್ಕು ಲೋಕಗಳನ್ನೇ ಹೊತ್ತು ನಿಂತರೂ ನಮಗೆ ಕಿಂಚಿತ್ತಾದರೂ ಶ್ರಮವಿಲ್ಲ. ಅತ್ಯಂತ ಫಲಪ್ರದವಾದ ಈ ಮಂದರ ಪರ್ವತವನ್ನು ನಾವು ಸಹಜವಾಗಿ ಇನಿತೂ ಆಯಾಸವಿಲ್ಲದೆ ಹೊರಬಲ್ಲೆವು. ನಮ್ಮ ದೃಷ್ಟಿಯಲ್ಲಿ ಈ ಮಂದರಾಚಲವು ಚಿಕ್ಕದಾದ ಒಂದು ಮಣ್ಣಿನ ಮಡಿಕೆಯಿದ್ದಂತೆ.''

**ಶೇಷ :-** ಬ್ರಹ್ಮಾಂಡವನ್ನೇ ಸುತ್ತುಹಾಕುವಷ್ಟು ನನ್ನ ದೇಹ ವಿಸ್ತಾರವಿದೆ. ಮಂದರ ಪರ್ವತವನ್ನು ನಾನು, ಬಲವಾಗಿ ಸುತ್ತಿಕೊಂಡು, ಲೀಲೆಯಿಂದಲೇ ಎತ್ತಿ ತಂದು ಈ ಹಾಲ್ಗಡಲಿನಲ್ಲಿ ಇರಿಸುತ್ತೇನೆ. ಈ ಆದಿಕೂರ್ಮನು ಕೆಳಗೆ ನಿಂತು ಅದನ್ನು ಎತ್ತಿ ಹಿಡಿಯುತ್ತಾನೆ. ನೀವೆಲ್ಲರೂ ದೇವದಾನವರು ಕೂಡಿ ಅದನ್ನು ಕಡೆಯಿರಿ. ಅದರಿಂದ ಅಮೃತವನ್ನು ಪಡೆಯಿರಿ. ''ಎಂದು ಹೇಳಿದನು. ಅದರಂತೆ ಆದಿಶೇಷನು ಮಂದರ ಬೆಟ್ಟವನ್ನು ತನ್ನ ವಿಶ್ವವಿಶಾಲವಾದ ವಿರಾಟದೇಹದ ಸುರಳಿ ಬಿಚ್ಚಿ, ಬೃಹದಾಕಾರವಾದ ಆ ಬೆಟ್ಟಕ್ಕೆ ಸುತ್ತುಹಾಕಿ ಬಿಗಿದು ಅದನ್ನು ಕಿತ್ತು, ಎತ್ತಿತಂದು ಕ್ಷೀರಸಮುದ್ರದಲ್ಲಿ ಇಟ್ಟನು. ಅನಂತರ ದೇವತೆಗಳೂ, ದಾನವರೂ ಕೂಡಿ ಆದಿಶೇಷನನ್ನೇ ಕಡೆಯುವ ಹಗ್ಗವನ್ನಾಗಿ ಮಾಡಿ, ಸಮುದ್ರಮಂಥನವನ್ನು ಮಾಡತೊಡಗಿದರು. ನಿರಾಧಾರವಾದ ಆ ಪರ್ವತವು ನೀರಿನಲ್ಲಿ ಮುಳುಗಹತ್ತಿತು. ಆಗ ಅದನ್ನು ಕೂರ್ಮರೂಪಿಯಾದ ಮಹಾವಿಷ್ಣುವು ಅದನ್ನು ತನ್ನ ಬೆನ್ನ ಮೇಲೆ ಹೊತ್ತು ನಿಂತನು. ದೈತ್ಯದೇವತೆಗಳೆಲ್ಲರೂ ಮೈಕೈಯಲ್ಲಿಯ ಬಲವನ್ನೆಲ್ಲ ಉಪಯೋಗಿಸಿ ಕಡೆಯತೊಡಗಿದರು. ಭರದಿಂದ ಕಡೆಕಡೆದು ಅವರೆಲ್ಲರ ಕೈಗಳು ಸೋತವು. ಮೈ ಬೆವರಿತು. ಮುಖ ಒಣಗಿತು. ಇಷ್ಟಾದರೂ ಇನ್ನೂ ಅಮೃತವು ದೊರಕಲಿಲ್ಲ. ಮುಂದೆ ಕಡೆಯಲು ಯಾರಲ್ಲಿಯೂ ಶಕ್ತಿ ಉಳಿಯಲಿಲ್ಲ ಆಗ ಸುರಾಸುರರೆಲ್ಲರೂ ಖಿನ್ನವಿಷ್ಣರಾಗಿ, ಬಲಿಚಕ್ರವರ್ತಿಯನ್ನು ಮುಂದೆ ಮಾಡಿಕೊಂಡು ನಾರಾಯಣ ದೇವರ ಬಳಿಗೆ ಬಂದರು.

ಯೋಗನಿದ್ರೆಯಲ್ಲಿ ಪವಡಿಸಿದ ಪೀತಾಂಬರಧಾರಿಯಾದ ಶ್ರೀಹರಿಯನ್ನು ಕಣ್ತುಂಬ ನೋಡಿದರು. ಕೊರಳಲ್ಲಿ ಹಾರ, ಕೈಗಳಲ್ಲಿ ಕಂಕಣ, ಆದಿಶೇಷನ ಮೈ ಮಂಚದ ಮೇಲೆ ಸುಖವಾಗಿ ಶಯನಮಾಡಿದ ಆ ಶ್ರೀಹರಿಯ ಪಾದಕಮಲಗಳನ್ನು ಇಂದಿರಾದೇವಿಯು ತನ್ನ ಮಿದುಗೈಗಳಿಂದ ನೀವುತ್ತಿದ್ದಾಳೆ. ಪಕ್ಕದಲ್ಲಿಯೇ ಗರುಡನು ನಿಂತು ತನ್ನ ರೆಕ್ಕೆಗಳನ್ನು ಮೆಲ್ಲಮೆಲ್ಲನೆ ಅಲುಗಾಡಿಸಿ ಗಾಳಿ ಬೀಸುತ್ತಿದ್ದಾನೆ. ಸುತ್ತಲೂ ಋಷಿಗಳು ಹೊಗಳು ಭಟ್ಟಂಗಿಗಳಂತೆ ಸ್ತೋತ್ರಮಾಡುತ್ತಿದ್ದಾರೆ. ನಾಲ್ಕು ವೇದಗಳು ಮೂರ್ತಿಮಂತಾಗಿ ಬಂದು ನಿಂತು ಅವನನ್ನು ಹಾಡಿ ಹೊಗಳುತ್ತಿವೆ. ತನ್ನ

ಬಲಗೈಯನ್ನು ದಿಂಬನ್ನಾಗಿ ಇಟ್ಟುಕೊಂಡು, ಶಯನಮಾಡಿದ ಸ್ವಾಮಿ ಶ್ರೀಹರಿಯನ್ನು ಎಲ್ಲ ದೇವತೆಗಳೂ ಸಾಷ್ಟಾಂಗ ನಮಸ್ಕಾರಮಾಡಿ ಕೈ ಜೋಡಿಸಿ ಪ್ರಾರ್ಥಿಸಿದರು.

**||ದೇವದಾನವ ಉವಾಚ:||**

''ನಮೋ ಲೋಕತ್ರಯಾಧ್ಯಕ್ಷ! ತೇಜಸಾಽಮಿತ ಭಾಸ್ಕರ|
ನಮೋ ವಿಷ್ಣೋ! ನಮೋ ಜಿಷ್ಣೋ! ನಮಸ್ತೇ ಕೈಟಭಾರ್ದನ!
ನಮಃ ಸರ್ಗ ಕ್ರಿಯಾಕರ್ತ್ರೇ ಜಗತ್ಪಾಲಯತೇ ನಮಃ|
ರುದ್ರರೂಪಾಯ ಶರ್ವಾಯ ನಮಃ ಸಂಹಾರಕಾರಿಣೇ||
ನಮಃ ಶೂಲಾಯುಧಾದ್ಯಂತರ್ಯಾಮಿನೇ ದೈತ್ಯಘಾತಿನೇ |
ನಮಃ ಕ್ರಮತ್ರಯಾಕ್ರಾಂತ ತ್ರೈಲೋಕ್ಯಾಯಾಽಭಯಾಯ ಚ |
ನಮಃ ಪ್ರಚಂಡ ದೈತ್ಯೇಂದ್ರಕುಲಕಾಲ ಮಹಾನಲ ||
ನಮೋ ನಾಭೀಹೃದೋದ್‌ಭೂತಪದ್ಮಗರ್ಭ ಮಹಾಚಲ |
ಪದ್ಮಭೂತ! ಮಹಾಭೂತ! ಕರ್ತ್ರೆ ಹರ್ತ್ರೇ ಜಗತ್ರಯ-
ಜನಿತ್ರೇ ಸರ್ವಲೋಕೇಶ! ಕ್ರಿಯಾಕಾರಣಕಾರಿಣೇ!
ಅಮರಾರಿ ವಿನಾಶಾಯ ಧ್ರಿಯತಾಂ ಧ್ರಿಯತಾಮಯಮ್|
ಮಂದರಃ ಸರ್ವ ಶೈಲಾನಾಂ ಅಯುತಾಯತ ವಿಸ್ತೃತಃ|
ಅನಂತಬಲ ಬಾಹುಭ್ಯಾಂ ಅವಷ್ಟಭ್ಯೈಕಪಾಣಿನಾ|
ಮಥ್ಯತಾಮಮೃತಂ ದೇವ! ಸ್ವಧಾ ಸ್ವಾಹಾರ್ಥಕಾಮಿನಾಮ್|
ತತಃ ಶ್ರುತ್ವಾ ಸ ಭಗವಾನ್ ಸ್ತೋತ್ರಪೂರ್ವಂ ವಚಸ್ತ್ವಿದಂ|
ವಿಹಾಯ ಯೋಗನಿದ್ರಾಂ ತಾನುವಾಚ ಮಧುಸೂದನಃ||''

ಮೂರು ಲೋಕದ ಅಧ್ಯಕ್ಷನಾದ, ತೇಜಸ್ಸಿನಿಂದ ಅಸಂಖ್ಯ ಸೂರ್ಯರಂತೆ ಹೊಳೆಯುವ, ಕೈಟಭ ದೈತ್ಯರನ್ನು ಮರ್ದಿಸಿದ, ಜಗತ್ತಿನ ಸೃಷ್ಟಿಕಾರ್ಯಮಾಡುವ ಹಾಗೂ ಸಂರಕ್ಷಣೆ ಮಾಡುವ ಜಯಶೀಲ ವಿಷ್ಣುವಿಗೆ ನಮಸ್ಕಾರ.

ರುದ್ರರೂಪದಿಂದ, ಸರ್ವ ಪ್ರಪಂಚವನ್ನು ಸಂಹಾರಮಾಡುವ, ಶೂಲಾಯುಧವನ್ನು ಹಿಡಿದ ಶಿವನ ಅಂತರ್ಯಾಮಿಯಾದ ರುದ್ರರೂಪಿ ಜನಾರ್ದನನಿಗೆ ನಮಸ್ಕಾರ. ಮೂರು ಪಾದಗಳ ಹೆಜ್ಜೆಗಳಿಂದ ಮೂರು ಲೋಕಗಳನ್ನು ವ್ಯಾಪಿಸಿದ ಪ್ರಚಂಡ ದೈತ್ಯ ಕುಲ ದಾವಾನಲದಂತಿದ್ದ ಶ್ರೀ ಹರಿಗೆ ನಮಸ್ಕಾರ.

ಹೊಕ್ಕಳದ ತಾವರೆಯಿಂದ ಬ್ರಹ್ಮದೇವರನ್ನು ಉತ್ಪಾದಿಸಿದ, ಜಗತ್ತಿನ ಹುಟ್ಟು ಸಾವುಗಳಿಗೆ ಕಾರಣನಾದ ಜಗದೀಶ್ವರನಿಗೆ ನಮಸ್ಕಾರ. ಸರ್ವಲೋಕದ ಒಡೆಯನೂ ಎಲ್ಲ ಕಾರ್ಯಕಾರಣ ಪ್ರೇರಕನೂ, ದೈತ್ಯ ನಾಶಕನೂ ಲಕ್ಷ್ಮೀದೇವಿಯ ಮುಖ ಕಮಲದಲ್ಲಿ ಭೃಂಗದಂತೆ, ಮೋಹಗೊಂಡವನೂ, ಕೀರ್ತಿಶಾಲಿಯೂ ಆದ ಶ್ರೀ ಹರಿಗೆ ನಮ್ಮ ನಮಸ್ಕಾರ. ಸ್ವಾಮಿ ನಾವೆಲ್ಲರೂ ಅಮರತ್ವವನ್ನು ಪಡೆಯುವದಕ್ಕಾಗಿಯೇ ಅಮೃತವನ್ನು

ಹೊಂದಬೇಕೆಂದು ಕ್ಷೀರಸಾಗರದಲ್ಲಿ ಮಂದರ ಪರ್ವತವಿಟ್ಟು ಕಡೆಯುತ್ತಿದ್ದೇವೆ. ಇದನ್ನು ಗಟ್ಟಿಯಾಗಿ ಹಿಡಿಯುವದಾಗಲಿ, ಕಡೆಯುವದಾಗಲಿ. ಅಶ್ಯಕವಾಗಿದೆ, ಅದುದರಿಂದ, ಅನೇಕ ಶೈಲ ಶ್ರೇಣಗಳಿಂದ ಒಡಗೂಡಿದ; ಸಹಸ್ರಾರು ಮೈಲು ಉದ್ದ, ಅಗಲವುಳ್ಳ ಹೆಬ್ಬೆಟ್ಟವನ್ನು ನೀನು ಕೆಳಗೆ ಕೂರ್ಮರೂಪದಿಂದ ಎತ್ತಿ ಹಿಡಿದು, ಮೇಲೆ ನಿನ್ನ ಅನಂತ ಬಾಹುಗಳಿಂದ ಗಟ್ಟಿಯಾಗಿ ಹಿಡಿದು, ನಡುವೆ ಅನಂತ ಹಸ್ತಗಳಿಂದ ನೀನೇ ಕಡೆಯಬೇಕು. ನಮ್ಮೆಲ್ಲರಿಗೂ ಕ್ಷೀರಾಬ್ಧಿಯನ್ನು ಮಂಥನ ಮಾಡಿ ಅಮೃತವನ್ನು ನೀಡಬೇಕು.''

ದೇವತೆಗಳ ಪ್ರಾರ್ಥನಾಪೂರ್ವಕವಾದ ಈ ಸ್ತೋತ್ರವನ್ನು ಕೇಳಿ ಯೋಗ ನಿದ್ರೆಯಿಂದ ಎಚ್ಚತ್ತ ಮಧುಸೂದನನು ಮಧುರವಾಗಿ ಮಾತನಾಡಿದನು.

**ಶ್ರೀವಿಷ್ಣು:-** ದೇವತೆಗಳೇ ನಿಮ್ಮೆಲ್ಲರಿಗೂ ಸುಸ್ವಾಗತ, ನೀವು ಇಲ್ಲಿಯವರೆಗೂ ಬಂದ ಕಾರಣವೇನು? ನನ್ನಿಂದಾಗಬೇಕಾದ ಕಾರ್ಯವೇನು ಹೇಳಿರಿ.

**ದೇವತೆಗಳು :-** ಅಮರರಾಗಬೇಕೆಂಬ ಆಸೆಯಿಂದ ಸಮುದ್ರವನ್ನು ಮಂಥನ ಮಾಡುತ್ತಿದ್ದೇವೆ. ನಮಗೆ ಅಮೃತ ದೊರಕುವಂತೆ ಮಾಡುವದು ನಿನ್ನ ಕೆಲಸ. ನಿನ್ನ ಹೊರತು ಅಮೃತ ಅಥವಾ ಅಮರತ್ವ ಪ್ರಾಪ್ತಿಯಾಗಲಾರದು. ಆದುದರಿಂದ ನೀನು ಮುಂದಾಗಿ ನಮಗೆ ಅಮೃತಸಿದ್ಧಿ ಆಗುವಂತೆ ಮಾಡಬೇಕು.''

ಮಂಥನಕಾರ್ಯ ಮುಂದುವರಿಯಿತು. ಸುರಾಸುರರೆಲ್ಲರೂ ಕೂಡಿ ಕಡಲನ್ನು ಕಡೆದರು. ಮತ್ತೆ ಕಡೆದರು. ಮತ್ತೂ ಕಡೆದರು ಕಡೆದೇಕಡೆದರು. ದೇವಮಾನದಿಂದ ನೂರು ವರುಷಗಳವರೆಗೆ ಈ ಅಮೃತ ಮಂಥನಕಾರ್ಯ ನಡೆಯಿತು. ಕೊನೆಗೆ ದೇವತೆಗಳು ದಣಿದು ಹೋದರು. ದೈತ್ಯರು ಬಳಲಿದರು. ಹೀಗೆ ದೇವದಾನವರಿಬ್ಬರೂ ನಿರಂತರ ಕಡೆತದಿಂದ ಸೋತು ನಿಂತಾಗ, ಬೆವತು ಬಳಲಿದಾಗ, ದೇವೇಂದ್ರನು ಮೇಘರೂಪದಿಂದ ಮಳೆಗರೆದು, ಅವರೆಲ್ಲರ ಮೇಲೆ ತಣ್ಣೀರು ಚಿಮುಕಿಸಿ, ತಂಪನ್ನುಂಟುಮಾಡಿದನು. ತಂಗಾಳಿಯು ತೀಡಿ ಅವರ ಬಳಲಿಕೆ ಬಾಯಾರಿಕೆ ಪರಿಹರಿಸಿತು. ದೇವತೆಗಳು ಶ್ರಾಂತಕ್ಲಾಂತರಾಗಿ ನಿಂತು ಕೊಂಡಾಗ ಬ್ರಹ್ಮ ದೇವನು ''ಕಡೆಯಿರಿ. ಈಗ ಶ್ರಮಪಟ್ಟರೆ ಮುಂದೆ ನಿಮಗೆ ಅದರ ಫಲವು ಅಮೃತರೂಪದಿಂದ ದೊರೆಯುವದು'' ಎಂದು ಹುರಿದುಂಬಿಸುತ್ತಿದ್ದನು.

ಹೀಗೆ ಹಿರಿಯರ ಹುರಿದುಂಬಿಸುವ ಮಾತಿನಿಂದ ಮತ್ತೆ ಹುರುಪುಗೊಂಡು ದೇವದಾನವರು. ಮಂಥನ ಮಾಡತೊಡಗಿದಾಗ ಆ ಬೆಟ್ಟದಿಂದ ಅನೇಕ ಆನೆಯ ಹಿಂಡುಗಳು. ಅಸಂಖ್ಯ, ಹಂದಿ, ಶರಭ, ಹುಲಿ, ಸಿಂಹಗಳು ಲಕ್ಷ ಲಕ್ಷವಾಗಿ ಹೊರಬಿದ್ದು, ಮಂಥನದ ರಭಸದಿಂದ ದಿಕ್ಕಟ್ಟು ಸಮುದ್ರದಲ್ಲಿ ಬಿದ್ದವು. ಗಿಡಗಳು ಉರುಳಿದವು. ಶಿಖರಗಳು ಹೊರಳಿದವು. ಬೆಟ್ಟಗಳು ಪುಡಿಪುಡಿಯಾದವು. ಹೆಬ್ಬಂಡೆಗಳು ಚೂರು ಚೂರಾದವು. ಹೂವಿನ ಗಿಡಬಳ್ಳಿಗಳು ಹಾರಿ ತೂರಿಬಿದ್ದವು.

ಆ ಮಂದರ ಬೆಟ್ಟದಲ್ಲಿರುವ ಅಸಂಖ್ಯ ಹಣ್ಣು, ಹೂವು, ಕಾಯಿ, ವನಸ್ಪತಿ, ರಸ ಔಷಧಿಗಳು ಸೋರಿ ಹಾಗೂ ಬೆಟ್ಟದ ಸಂಘರ್ಷಣೆ ಸೇರಿ ಕಡಲಿನಲ್ಲಿಯ ಹಾಲೆಲ್ಲವೂ ಹುಳಿಯೊಡೆದು ಮೊಸರಾಯಿತು. ಅನಂತರ ಬೆಟ್ಟದಿಂದ ಕೈಕಾಲು ಜಜ್ಜಿ ಮಂಥನದ

ರಭಸಕ್ಕೆ ಛಿನ್ನವಿಛ್ಛಿನ್ನ ದೇಹಗಳಾಗಿ ನೀರಿಗೆ ಬಿದ್ದ ಕೋಟ್ಯಾವಧಿ ಪ್ರಾಣಿಗಳ ದೇಹದಿಂದ ಬಸಿದ ನೆತ್ತರದಿಂದ ಹಾಗೂ ವೇಗದಮಂಥನದಿಂದ ಹುಟ್ಟಿದ ಒಂದು ವಿಲಕ್ಷಣ ಪಾಕದಿಂದ ಆ ನೀರೆಲ್ಲವೂ ಶೆರೆಯಂತಾಯಿತು. ಅದರ ಸುಗಂಧ ವಾಸನೆಯಿಂದ ದೇವತೆಗಳಿಗೆಲ್ಲ ಆನಂದವಾಯಿತು. ಸೋತ ಕೈಗಳಲ್ಲಿ ಉತ್ಸಾಹ ತುಂಬಿತು. ಅದನ್ನು ಕುಡಿದು ಮತ್ತೆ ಎಲ್ಲರ ದೇಹದಲ್ಲಿ ಬಲ ಬಂದಂತಾಯಿತು. ಅನಂತರ ಇಮ್ಮಡಿಸಿದ ಉತ್ಸಾಹದಿಂದ ಎಲ್ಲರೂ ಕೂಡಿ ಮತ್ತೆ ಕಡೆಯತೊಡಗಿದರು.

ಒಂದು ಕಡೆ, ಸಾಕ್ಷಾತ್ ವಿಷ್ಣುವು; ಅವನ ಹಿಂದೆ ದೇವೇಂದ್ರ. ಅನಂತರ ಮಹಾದೇವ, ಅಷ್ಟ ವಸುಗಳು, ಅನೇಕ ಕೋಟಿ ದೇವತೆಗಳು, ಮತ್ತೊಂದು ಕಡೆ ಬಲಿ, ನಮುಚಿ, ವಿಪ್ರ ಚಿತ್ತಿ, ರುದ್ರ, ವಜ್ರದಂಷ್ಟ್ರ, ರಾಹು, ಮುಂತಾದವರು. ಹೀಗೆ ದೇವ ದೈತ್ಯ ಧುರೀಣರೆಲ್ಲರೂ ಉತ್ಸಾಹದಿಂದ ಆ ಮಂದರ ಪರ್ವತವನ್ನು ಕಡೆಯತೊಡಗಿದಾಗ ಕೋಟಿ ಮೇಘಗಳು ಗುಡುಗಿದಂತೆ ಧ್ವನಿಯು ಕೇಳಿ ಬರುತ್ತಿತ್ತು. ಅದರಿಂದ ಸಂಘರ್ಷದ ವೇಗದಿಂದ ಬೆಂಕಿಯ ಕಿಡಿಗಳು ಹಾರಿ ಮುಗಿಲಿನಲ್ಲಿ ಮಿಂಚಿನ ಗೊಂಚಲಗಳನ್ನು ತೂರಾಡಿದಂತೆ ಮಾಡುತ್ತಿತ್ತು. ಆ ಮಂಥನದ ಹೊಡೆತಕ್ಕೆ ಅಸಂಖ್ಯ ಆನೆ, ಸಿಂಹ ಮುಂತಾದ ಪ್ರಾಣಿಗಳು, ಹೊರಬಿದ್ದು ಆ ನೀರಿನ ಪಾಲಾದವು. ಪಾತಾಳ ಲೋಕದಿಂದ ಎಷ್ಟೋ ಪ್ರಾಣಿಗಳು ಮೇಲೆದ್ದು ಉಸಿರು ಕಟ್ಟಿ ಜಲಸಮಾಧಿ ಹೊಂದಿದವು. ಕಡೆದಂತೆ, ಬೆಟ್ಟದಲ್ಲಿರುವ ಮಹೌಷಧಿ ವನಸ್ಪತಿಗಳಿಂದ ಬಸಿದ ರಸವು ಬಗೆಬಗೆಯ ರೂಪವನ್ನು ತಾಳುತ್ತಿತ್ತು. ಅದೆಲ್ಲವು ಮತ್ತೆ ಮಂಥನದ ಸಂಭ್ರಮದಿಂದ ಕರಗಿನೀರಾಗಿ ಬೆಟ್ಟದಸುತ್ತಲೂ ತಿರುಗುತ್ತಿತ್ತು. ಇಷ್ಟಾದರೂ ಅಮೃತವು ಉದ್ಭವಿಸಲಿಲ್ಲ. ಎಲ್ಲ ದೇವದಾನವರು ಕಡೆ ಕಡೆದು ದಣಿದರು. ಅವರ ಕಡೆಯುವ ಕೈಗಳು ನಿಂತುಹೋದವು. ಅವರೆಲ್ಲರೂ ಶ್ರಾಂತೋದ್‌ಭ್ರಾಂತರಾಗಿ ಅಮೃತದ ಆಶೆಬಿಟ್ಟು ಬ್ರಹ್ಮದೇವರಿಗೆ ಸ್ಪಷ್ಟವಾಗಿ ಹೇಳಿದರು.

''ಸ್ವಾಮಿ, ನಾವೆಲ್ಲರೂ ಮಂಥನಮಾಡಿಮಾಡಿ, ಶ್ರಾಂತರಾಗಿದ್ದೇವೆ. ಇನ್ನು ನಾವೆಲ್ಲರೂ ದಣಿದು, ದುಡಿದು, ಕಡೆದರೂ, ಅಮೃತವು ಉದ್ಭವಿಸಲೇ ಇಲ್ಲ. ಒಬ್ಬ ನಾರಾಯಣನ ಹೊರತು ನಾವೆಲ್ಲರೂ ದೇವದಾನವರು ಸೋತುಹೋಗಿದ್ದೇವೆ. ನಮೆಲ್ಲರ ಉದ್ದಿಷ್ಟವಾದ ಆ ಅಮೃತವೋ ಇನ್ನೂ ದೂರದ ಬಿಸಿಲುಗುದುರೆಯಾಗಿದೆ''.

ದೇವತೆಗಳ ಈ ನುಡಿಯನ್ನು ಆಲಿಸಿ ಬ್ರಹ್ಮದೇವರು ಶ್ರೀಮನ್ ನಾರಾಯಣನಿಗೆ ''ಸ್ವಾಮಿ ಇನ್ನು ಮೇಲೆ ಇವರೆಲ್ಲರಿಗೂ ನೀನೇ ಗತಿ. ನೀನೇ ಇವರೆಲ್ಲರಿಗೂ ಬಲವನ್ನು ತುಂಬು. ಇವರ ಕಾರ್ಯವನ್ನು ಸಾಧಿಸು.'' ಎಂದು ಬಿನ್ನವಿಸಿದರು.

**ವಿಷ್ಣು** :- ಕಡಲನ್ನು ಕಡೆಯಲು ಕೈ ಹಚ್ಚಿದವರಿಗೆಲ್ಲ ನಾನು ಬಲವನ್ನು ನೀಡುವೆನು. ಮತ್ತೆ ಕಡೆಯಿರಿ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ಐವತ್ತನೆಯ ಅಧ್ಯಾಯ ಮುಗಿದುದು.*

—o—

## ಕ್ಷೀರೋದ ಮಥನ

ಅಧ್ಯಾಯ - ೨೫೧

**ಸೂತ ಉವಾಚ :**

**"ನಾರಾಯಣವಚಃ ಶ್ರುತ್ವಾ ಬಲಿನಸ್ತೇ ಮಹೋದಧಿಮ್**
**ತತ್‌ಪಯಃ ಸಹಿತಾ ಭೂತ್ವಾ ಚಕ್ರಿರೇ ಭೃಶಮಾಕುಲಮ್"**

**ಸೂತ** :- ನಾರಾಯಣನ ಮಾತನ್ನು ಕೇಳಿ, ಬಲಿಷ್ಠರಾದ ದೇವ ದಾನವರು ಒಟ್ಟು ಸೇರಿ, ಆ ಹಾಲಿನ ಹೆಗ್ಗಡಲನ್ನು ಒಳ್ಳೇ ತುರುಸಿನಿಂದ ಕಡೆಯತೊಡಗಿದರು. ಆಗ ಆ ಕ್ಷೀರಸಾಗರದಿಂದ ನೂರಾರು ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಪ್ರಸನ್ನವಾದ ಪ್ರಭೆಯುಳ್ಳ ಚಂದ್ರನು ಹುಟ್ಟಿದನು. ಅನಂತರ ಹೆಪ್ಪುಗಟ್ಟಿದ ತುಪ್ಪವೇ ತೇಲುತ್ತಿರುವ ಆ ಕ್ಷೀರಸಾಗರವನ್ನು ಸುರಾಸುರರೆಲ್ಲರೂ ಸಂಭ್ರಮದಿಂದ ಕಡೆಯತೊಡಗಿದಾಗ ಧವಲ ಮುಕುಟ ಧರಿಸಿದ ಶ್ರೀ ದೇವಿಯು ಹುಟ್ಟಿದಳು. ಅನಂತರ ಶೆರೆ. ಉಚ್ಚೈಶ್ರವ ಎಂಬ ಕುದುರೆ, ಕೌಸ್ತುಭ ಎಂಬ ದಿವ್ಯರತ್ನ ಮುಂತಾದವು ಹುಟ್ಟಿದವು. ಅಮೃತದಿಂದ ಜನಿಸಿದ ಕೌಸ್ತುಭರತ್ನವು ಶ್ರೀಮಾನ್ ನಾರಾಯಣನ ಹೃದಯವನ್ನು ಅಲಂಕರಿಸಿ ತನ್ನ ಕಾಂತಿಕಿರಣಗಳಿಂದ ಅವನ ವಕ್ಷಸ್ಥಳದಲ್ಲಿ ಅರಳಿ ನಿಂತಿತು. ಆ ಬಳಿಕ ಬಿರಿದ ಹೂಗಳ ಅಸಂಖ್ಯ ಗೊಂಚಲಗಳಿಂದ ಸುಂದರವಾಗಿ ಕಣ್ಣಿಗೆ ಎಸೆಯುವ ಪಾರಿಜಾತ ಕಲ್ಪವೃಕ್ಷವು ಲಭಿಸಿತು. ಅನಂತರ ಒಮ್ಮಿಂದೊಮ್ಮೆಲೆ ಎಲ್ಲ ದಿಕ್ಕುಗಳಲ್ಲಿ ಹೊಗೆ ಹಬ್ಬಿತು. ದಶದಿಕ್ಕುಗಳಲ್ಲಿ ಉರಿಯು ಭಗ್ಗನೇ ಎದ್ದಿತು. ಅದರ ಜ್ವಾಲೆಯಿಂದಲೇ ಎಷ್ಟೋ ದಾನವರು ಸುಟ್ಟು ಹೋದರು. ಅನೇಕ ಕಪ್ಪು ಹಾವುಗಳು ಕಾಲಕೂಟದ ಮರಿಯಾಗಿ ಹೊರ ಬಿದ್ದವು. ನೊಣ, ಗುಂಗಾಡು, ದೀಪದಹುಳ ಮೊದಲಾದ ಅನೇಕ ವಿಷಜಾತಿಯ ಪ್ರಾಣಿಗಳು ಹುಟ್ಟಿ ಹರಿದವು. ಅನಂತರ,ಭಯಂಕರವಾದ ಕಾಲಕೂಟ ವಿಷವು ಮೂರ್ತಿಮಂತ ಒಬ್ಬ ಪುರುಷನ ವೇಷದಿಂದ ಅಲ್ಲಿ ಉದ್ಭವಿಸಿತು. ಇದ್ದಲೆಯಂತೆ ಕಪ್ಪುಬಣ್ಣದ ದಪ್ಪದೇಹದ ಅಗ್ನಿ ಪುರುಷನನ್ನು ಕುರಿತು ವಿಷ್ಣುವು ಕೇಳಿದನು.

**ವಿಷ್ಣು** :- ಯಮನಂತಿರುವ ನೀನಾರು? ನಿನಗೆ ಬೇಕಾದುದೇನು? ನಿನಗೆ ಏತರಿಂದ ಸಂತೋಷವಾಗುವದು! ನೀನು ಎಲ್ಲಿಂದ ಬಂದೆ? ಏಕೆ ಬಂದೆ?

ಆಗ ಆ ಕಾಲಪುರುಷನು ಒಡಕು ಜಾಗಟೆಯಂತೆ ಇದ್ದ ಧ್ವನಿಯಿಂದ ನುಡಿದನು. "ನಾನು ಕಾಲಕೂಟವೆಂಬ ವಿಷ. ಈ ದೇವ ದಾನವರೆಲ್ಲರನ್ನು ಸಂಹರಿಸಲಿಕ್ಕಾಗಿ ನಾನು ಹುಟ್ಟಿದ್ದೇನೆ. ನೀವೆಲ್ಲರೂ ನನ್ನನ್ನು ಕುಡಿಯಿರಿ. ಇಲ್ಲದಿದ್ದರೆ ನಾನೇ ನಿಮ್ಮನ್ನು ಸುಡುತ್ತೇನೆ. ಕುಡಿದರೂ ಮರಣ. ಕುಡಿಯದಿದ್ದರೂ ಮರಣ. ಆದರೆ ನಿಮಗೆ ನನ್ನಿಂದ ಬದುಕಬೇಕೆಂಬ ಇಚ್ಛೆಯಿದ್ದರೆ ಎಲ್ಲರೂ ಮಹಾದೇವರ ಹತ್ತಿರ ಹೋಗಿರಿ"

ಕಾಲಕೂಟ ವಿಷದ ಅಧಿದೇವತೆಯಾದ ಆ ಕಾಲಪುರುಷನ ಈ ನುಡಿ ಕೇಳಿ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು ಶಂಕರನ ಬಳಿಗೆ ಬಂದರು. ಮಂದರ ಪರ್ವತದ ದಿವ್ಯವಾದ ಒಂದು ಗುಹೆಯಲ್ಲಿ ಒಂದು ರತ್ನವೇದಿಕೆಯ ಮೇಲೆ ಕುಳಿತುಕೊಂಡ ಶಿವನನ್ನು ಕುರಿತು ದೇವಾಸುರರು ವಂದಿಸಿ ಮಾತನಾಡಿದರು.

ದೇವದಾನವ ಉವಾಚಃ

**ನಮಸ್ತುಭ್ಯಂ ವಿರೂಪಾಕ್ಷ। ಸರ್ವತೋಽನಂತ ಚಕ್ಷುಷೆ।**
**ನಮಃ ಪಿನಾಕಹಸ್ತಾಯ ವಜ್ರಹಸ್ತಾಯ ಧನ್ವಿನೇ।**

ದೇವತೆಗಳ ಈ ಪ್ರಾರ್ಥನೆ ಕೇಳಿ ಮಹಾದೇವರು, ''ನೀವೆಲ್ಲರೂ ಇಲ್ಲಿಗೆ ಏಕೆ ಬಂದಿದ್ದೀರಿ? ನಿಮ್ಮ ಮುಖಗಳನ್ನು ನೋಡಿದರೆ ಸಂತ್ರಸ್ತರಾದಂತೆ ಕಾಣುತ್ತದೆ. ನಿಮಗೆ ಏನು ಬೇಕು ಹೇಳಿರಿ? ನಿಮ್ಮ ಅಭೀಷ್ಟವನ್ನೆಲ್ಲ ನಾನು ಈಗಲೇ ಪೂರೈಸುತ್ತೇನೆ'' ಎಂದು ಆಶ್ವಾಸನೆಯನ್ನಿತ್ತು ನುಡಿದನು. ಆಗ ದೇವಾಸುರರು ಆ ಪರಮೇಶ್ವರನಿಗೆ ಬಿನ್ನಹ ಮಾಡಿಕೊಂಡರು. ''ಮಹಾದೇವಾ, ಅಮೃತದ ಸಲುವಾಗಿ ನಾವು ಕ್ಷೀರಾಬ್ಧಿಯನ್ನು ಮಂಥನ ಮಾಡುವಾಗ ಅದ್ಭುತವಾದ ವಿಷ ಹುಟ್ಟಿದೆ. ಅದು ಎಲ್ಲ ಲೋಕಗಳನ್ನು ಸುಟ್ಟು ಹಾಕುತ್ತಿದೆ. ಅದು ಈಗ 'ನೀವೆಲ್ಲರೂ ನನ್ನನ್ನು ಅರ್ಥಾತ್ ಕಾಲಕೂಟ ವಿಷವನ್ನು ಪಾನಮಾಡಿರಿ. ಇಲ್ಲದಿದ್ದರೆ ನಾನು ನಿಮ್ಮೆಲ್ಲರನ್ನು ಈಗ ಸುಟ್ಟುಬಿಡುತ್ತೇನೆ, ಕೊಂದುಬಿಡುತ್ತೇನೆ'' ಎನ್ನುತ್ತದೆ. ಅದನ್ನು ಕುಡಿದು ಆ ವಿಷವನ್ನು ನಾವು ದಕ್ಕಿಸಿಕೊಳ್ಳಲಾರೆವು. ಕುಡಿಯದಿದ್ದರೆ ಅದು ನಮ್ಮನ್ನೇ ಸುಟ್ಟು ಹಾಕುತ್ತದೆ. ಆ ಕಾಲಕೂಟ ವಿಷದ ಅಭಿಮಾನಿ ಪುರುಷನ ನಿಟ್ಟುಸಿರಿನಿಂದಲೇ ಬಂಗಾರದ ಬಣ್ಣದ ವಿಷ್ಣುವು ಒಮ್ಮೆಲೆ ಕಪ್ಪಾಗಿ ಬಿಟ್ಟಿದ್ದಾನೆ. ಯಮನೂ ವಿಕಾರವಾಗಿದ್ದಾನೆ. ಎಲ್ಲರೂ ಮೂರ್ಛೆ ತಳೆದಿದ್ದಾರೆ. ಅದುದರಿಂದ ಈ ನಮ್ಮೆಲ್ಲರನ್ನು ಈ ಸಂಕಟದಿಂದ ಪಾರುಮಾಡಬೇಕು. ಭಕ್ತವತ್ಸಲನಾದ, ಜಗದೀಶ್ವರನಾದ, ಮನ್ಮಥ ವೈರಿಯಾದ ನೀನೊಬ್ಬನೇ ಈಗ ಈ ಕಾಲಕೂಟ ಭಯದಿಂದ ಸಂರಕ್ಷಿಸು ಮಹಾಪ್ರಭು. ದೇವತೆಗಳಿಗೆ ಹಾಗೂ ದೈತ್ಯರಿಗೂ ಕಲ್ಯಾಣಉಂಟು ಮಾಡುವವನು ಎಂದಾದರೂ ಕೈಲಾಸಪತಿಯೇ ಅಲ್ಲವೆ!''

ದೇವತೆಗಳ ಈ ಬಿನ್ನಹವನ್ನು ಕೇಳಿ, ವಿರೂಪಾಕ್ಷನು ಹೇಳಿದನು, ''ಸುರರೇ, ಬೆದರಬೇಡಿರಿ, ಈ ಘೋರವಾದ ಕಾಲಕೂಟ ವಿಷವನ್ನು ನಾನು ಈಗಲೇ ಕುಡಿದು ಬಿಡುತ್ತೇನೆ. ದೇವ ದೈತ್ಯರಿಗೆ ಹಿತವಾಗುವ ಇನ್ನೂ ಏನಾದರೂ ಕಠಿಣ ಕಾರ್ಯವಿದ್ದರೆ ತಿಳಿಸಿರಿ. ನಾನು ಮಾಡುತ್ತೇನೆ. ನೀವು ನಿಶ್ಚಿಂತರಾಗಿ ಸುಖದಿಂದ ನಿಮ್ಮ ಸ್ಥಾನಗಳಿಗೆ ಹೋಗಿರಿ.''

ಮಹಾದೇವನ ಈ ಮಾತುಗಳನ್ನುಕೇಳಿ ದೇವತೆಗಳೆಲ್ಲರಿಗೂ ಪರಮಾನಂದವಾಗಿ ಹರ್ಷಬಾಷ್ಪಗಳು ಉದುರಿದವು. ಬ್ರಹ್ಮಾದಿ ದೇವತೆಗಳು ಸಂತೋಷದಿಂದ ಕ್ಷೀರ ಸಾಗರದತ್ತನಡೆದರು. ಮಹಾದೇವರು ತನ್ನ ನಂದೀಶ್ವರನನ್ನು ಏರಿ ಆಕಾಶ ಮಾರ್ಗದಿಂದಲೇ ಹಾಲ್ಗಡಲಿನತೀರಕ್ಕೆ ಬಂದನು. ದಾರಿಯಲ್ಲಿ ಬರುವಾಗ ಇಂದ್ರ, ಬಲಿ ಮುಂತಾದಸುರಾಸುರ ನಾಯಕರು ತಮ್ಮ ತಮ್ಮ ವಾಹನ ಏರಿ ಅವನ ಹಿಂದೆ ಓಡುತ್ತ ಬರುತ್ತಿದ್ದರು. ದುಗ್ಧಾಬ್ಧಿಯ ದಂಡೆಯಲ್ಲಿ ಬಂದಿಳಿದು ಮಹಾದೇವನು ಅತಿಘೋರವಾದ ಕಾಲಕೂಟ ವಿಷವನ್ನು ಎಡಗೈಯಲ್ಲಿ ತೆಗೆದುಕೊಂಡು ಕುಡಿದು ಬಿಟ್ಟನು. ಆಗ ದೇವತೆಗಳು ದೈತ್ಯರು ಆನಂದದಿಂದ ಹಾಡಿದರು, ಪಾಡಿದರು, ಕುಣಿದರು, ಸಿಂಹನಾದ ಮಾಡಿದರು.

ವಿಷಪ್ರಾಶನ ಮಾಡಿದ ಬಳಿಕ ಮಹಾದೇವರ ಮುಖದಲ್ಲಿ ಆ ವಿಷವು ಇಳಿದು ಕೊರಳಿಗೆ ಬಂದಾಗ ಅವನ ಕಂಠವೆಲ್ಲವೂ ಕಪ್ಪುಬಣ್ಣದ್ದಾಯಿತು. ಆಗ ಬ್ರಹ್ಮಾದಿ ದೇವತೆಗಳು ಬಲಿರಾಜ ಮುಂತಾದ ದೈತ್ಯರು ಮಹಾದೇವರನ್ನು ಪ್ರಾರ್ಥಿಸಿಕೊಂಡರು.

''ಪ್ರಭು, ಕುಂದ ಕುಸುಮದಂತೆ ಅತಿ ಧವಲವಾದ ಈ ನಿನ್ನ ದೇಹದ ಕಂಠದಲ್ಲಿ ಈ ವಿಷವು, ಆ ವಿಷದಿಂದ ನಿನ್ನ ಕಂಠವು ಶೋಭಾಯಮಾನವಾಗಿದೆ. ಅದು ಅಲ್ಲಿಯೇ ಇರಲಿ, ಅದನ್ನು ಕೆಳಗೆ ಇಳಿಸುವದು ಬೇಡ. ನೀನು ನೀಲಕಂಠ, ವಿಷಕಂಠನೆಂದು ಜಗತ್ಪೂಜ್ಯನಾಗು'' ದೇವದಾನವರ ಈ ಪ್ರಾರ್ಥನೆಯನ್ನು ಕೇಳಿ ಮಹಾದೇವರು ''ಹಾಗೆಯೇ ಆಗಲಿ'' ಎಂದು ಹೇಳಿ ಆ ಕಾಲಕೂಟ ವಿಷವನ್ನು ತನ್ನ ಕಂಠದಲ್ಲಿ ನಟ್ಟನಡುವೆ, ಉಗುಳದಂತೆ ಕೊರಳಿನಲ್ಲಿಯೇ ಇಟ್ಟುಕೊಂಡನು. ಹೀಗೆ ವಿಷಪಾನ ಮಾಡಿ, ಮಹಾದೇವರು ಅಲ್ಲಿಂದ ತನ್ನ ಮಂದರಾಚಲಕ್ಕೆ ಹೊರಟು ಹೋದನು. ಅನಂತರ ದೇವತೆಗಳು ಮತ್ತೆ ಆ ಹಾಲಿನ ಹೆಗ್ಗಡಲನ್ನು ಹುರುಪಿನಿಂದ ಕಡೆಯತೊಡಗಿದರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರಾ ಐವತ್ತೊಂದನೆಯ ಅಧ್ಯಾಯ ಮುಗಿದುದು*



## ಹಾಲಿನ ಸಮುದ್ರ ಮಥನ

**ಅಧ್ಯಾಯ - ೨೫೨**

**ಸೂತ ಉವಾಚ :**

**''ಮಥ್ಯಮಾನೇ ಪುನಸ್ತಸ್ಮಿನ್ ಜಲಧೌ ಸಮದೃಶ್ಯತ।**
**ಧನ್ವಂತರಿಃ ಸ ಭಗವಾನ್ ಆಯುರ್ವೇದ ಪ್ರಜಾಪತಿಃ॥''**

**ಸೂತ :-** ಮತ್ತೆ ದೇವಾಸುರರೆಲ್ಲರೂ ಕೂಡಿ ಆ ಹಾಲಿನ ಸಮುದ್ರವನ್ನು ಕಡೆದಾಗ ವಿಶಾಲ ಆಯುರ್ವೇದದ ಮೂಲ ಪುರುಷನಾದ, ವೈದ್ಯವಿದ್ಯೆಯ ಬ್ರಹ್ಮದೇವ ಎನಿಸಿದ, ಪೂಜ್ಯ ಧನ್ವಂತರಿಯು ಕಾಣಿಸಿಕೊಂಡನು. ಅನಂತರ ಸುಂದರಳಾದ ಲಕ್ಷ್ಮೀದೇವಿಯು ಸಾಗರದಿಂದ ಉದ್ಭವಿಸಿದಳು. ಅನಂತರ ಅಮೃತವು ಉತ್ಪನ್ನವಾಯಿತು. ತರುವಾಯ ಕಾಮಧೇನು ಜನಿಸಿತು. ಸಾಗರದಿಂದ ಜನಿಸಿದ ಲಕ್ಷ್ಮೀದೇವಿಯನ್ನೂ ಮತ್ತು ಕೌಸ್ತುಭರತ್ನವನ್ನೂ ವಿಷ್ಣುವು ಸ್ವೀಕರಿಸಿದನು. ಐರಾವತ ಮತ್ತು ಉಚ್ಚೈಶ್ರವ ಎಂಬ ಆನೆ ಕುದುರೆಗಳನ್ನು ದೇವೇಂದ್ರನು ತೆಗೆದುಕೊಂಡನು. ಶರಧಿ ಸಂಭೂತನಾದ ಧನ್ವಂತರಿಯನ್ನು ಸೂರ್ಯನು ಸ್ವೀಕರಿಸಿದನು. ವರುಣನು ಛತ್ರವನ್ನು, ಇಂದ್ರನು ಎರಡು ಕುಂಡಲಗಳನ್ನು, ವಾಯುವು ಪಾರಿಜಾತ ವೃಕ್ಷವನ್ನು ಪರಿಗ್ರಹಿಸಿದರು.

ಧನ್ವಂತರಿಯ ಕೈಯಲ್ಲಿ ಒಂದು ಬಿಳಿಯ ಕಮಂಡಲು ಇದ್ದಿತು. ಅದರಲ್ಲಿ ದೇವಾಸುರರು ಅಪೇಕ್ಷಿಸಿದ ಮುಪ್ಪು ಮರಣಗಳ ಭಯತಪ್ಪಿಸುವ ಅಮೃತವು ಇದ್ದಿತು ಅದನ್ನು ಕಂಡಕೂಡಲೇ ದಾನವರೆಲ್ಲರೂ ''ಅದು ನನ್ನದು ನನ್ನದು..'' ಎಂದು ಕೂಗಾಟ ರೇಗಾಟ, ಚೀರಾಟಗೈದರು. ಅದಕ್ಕಾಗಿ ಅವರಲ್ಲಿ ಹೋರಾಟಗಳೂ ನಡೆದವು. ಅನಂತರ ವಿಷ್ಣುವು ಅಮೃತದ ಸಲುವಾಗಿ ನಡೆದ ಕೋಲಾಹಲವನ್ನು ಕಂಡು, ಮೋಹಿನೀ ವೇಷವನ್ನು ಧರಿಸಿದನು.

ಅತ್ಯಂತ ಸುಂದರಳಾದ ಆ ಜಗನ್ಮೋಹಿನಿಯನ್ನು ಕಂಡು ದೈತ್ಯರೆಲ್ಲರೂ ಮರುಳಾಗಿಹೋದರು. ಧನ್ವಂತರಿಯ ಕೈಯಲ್ಲಿಯ ಅಮೃತದ ಗಿಂಡಿಯನ್ನು ಕಸಿದು, ಮೋಹಿನಿಯ ಕೈಯಲ್ಲಿ ತಂದು ಕೊಟ್ಟರು. ಮೋಹಿನಿಯ ವೇಷದಲ್ಲಿದ್ದ ವಿಷ್ಣುವು ಆ ಅಮೃತವನ್ನು ತಂದು, ದೇವತೆಗಳಿಗೆ ಕೊಟ್ಟು ಬಿಟ್ಟನು. ಎಲ್ಲ ದೇವತೆಗಳಿಗೆ ಅದು ಒಂದು ವರವಾಯಿತು. ಎಲ್ಲ ದೇವತೆಗಳೂ ಆನಂದದಿಂದ ಶ್ರೀಹರಿಯ ಅನುಗ್ರಹದಿಂದ ಅಮೃತವನ್ನು ಪಾನಮಾಡಿ ಅಮರರಾದರು.

ದೇವತೆಗಳೆಲ್ಲರೂ ಅಮೃತವನ್ನು ಮೋಹಿನಿಯ ಕೈಯಿಂದ ಕುಡಿಯುತ್ತಿರುವದನ್ನು ಕಂಡು ದೈತ್ಯಗಣದ ರಾಹು ರಾಕ್ಷಸನು ತಾನೂ ದೇವತೆಗಳ ವೇಷಧರಿಸಿ, ಸುರರ ಪಂಕ್ತಿಯಲ್ಲಿ ಬಂದು ಕುಳಿತು ಅಮೃತವನ್ನು ಕುಡಿಯತೊಡಗಿದನು. ಸೂರ್ಯಚಂದ್ರರು ಇದನ್ನು ವಿಷ್ಣುವಿಗೆ ಅರುಹಿದರು. ಕೂಡಲೇ ಶ್ರೀಹರಿಯು ತನ್ನ ಚಕ್ರಾಯುಧದಿಂದ ರಾಹುವಿನ ಶಿರಸ್ಸನ್ನು ಕತ್ತರಿಸಿದನು. ಅಷ್ಟರಲ್ಲಿಯೇ, ಆ ರಾಹುವಿನ ಗಂಟಲಲ್ಲಿ ಅಮೃತವು ಇಳಿದುಬಿಟ್ಟಿದ್ದರಿಂದ ಕತ್ತರಿಸಿ ಹಾಕಿದರೂ ಅವನ ರುಂಡ ಹಾಗೂ ಮುಂಡಗಳು ಅಮರವಾದವು. ಅವರೇ ರಾಹು, ಕೇತು ಎಂಬ ಹೆಸರಿನಿಂದ ಸೂರ್ಯ, ಚಂದ್ರರನ್ನು ಗ್ರಹಣರೂಪದಿಂದ ಇಂದಿಗೂ ಪೀಡಿಸುತ್ತಲಿದ್ದಾರೆ.

ಹೀಗೆ ದೇವತೆಗಳೆಲ್ಲರಿಗೂ ಅಮೃತವನ್ನು ಪಾನಮಾಡಿಸಿ ಮಹಾವಿಷ್ಣುವು ತ್ರಿಲೋಕ ಸುಂದರವಾದ ತನ್ನ ಮೋಹಿನೀ ರೂಪವನ್ನು ತ್ಯಜಿಸಿದನು. 'ಹರಿಯು ಸ್ತ್ರೀ ರೂಪದಿಂದ ತಮ್ಮನ್ನು ವಂಚಿಸಿ ದೇವತೆಗಳಿಗೆ ಮಾತ್ರ ಅಮೃತವನ್ನು ಹಂಚಿದನು' ಎಂಬುದು ದೈತ್ಯರಿಗೆ ನಂತರ ತಿಳಿದು ಬಂದಿತು. ಆಗ ಅವರೆಲ್ಲರೂ ಕ್ರೋಧದಿಂದ ಉರಿದು ಎದ್ದರು. ಭೀಕರವಾದ ಶಸ್ತ್ರಾಸ್ತ್ರಗಳನ್ನು ಹಿರಿದು ದೇವತೆಗಳ ಮೇಲೆ ಏರಿ ಬಂದರು. ಆಗ ದೇವತೆಗಳು ಕೂಡ ಅಮೃತಪಾನದಿಂದ ಅಮರರಾಗಿ ಉತ್ಸಾಹದಿಂದ ದಾನವರಿಗೆ ತಮ್ಮ ತೀಕ್ಷ್ಣವಾದ ಶಸ್ತ್ರಾಸ್ತ್ರಗಳಿಂದ ಸರಿಯಾಗಿ ಉತ್ತರ ಕೊಟ್ಟರು. ದೇವದೈತ್ಯರ ನಡುವೆ ಭೀಕರವಾದ ಯುದ್ಧವು ನಡೆಯಿತು. ಶಸ್ತ್ರಾಸ್ತ್ರಗಳ ಪರಸ್ಪರ ಪ್ರಹಾರದಿಂದ ಬ್ರಹ್ಮಾಂಡ ಬಿರಿಯುವಂತೆ ಭಯಂಕರ ಸದ್ದು ಗದ್ದಲವಾಯಿತು. ಎಲ್ಲಿ ನೋಡಿದಲ್ಲೆಲ್ಲ ಜಯಘೋಷ. ಕಡಿ, ಕೊಲ್ಲು, ಓಡು, ಬಡಿದು ಬೀಳಿಸು ಮುಂತಾದ ವೀರರ ಸೊಲ್ಲು ಗುಲ್ಲು ಕೇಳಿಬರುತ್ತಿತ್ತು. ಆಗ ನರನಾರಾಯಣರಿಬ್ಬರೂ ಯುದ್ಧರಂಗಕ್ಕೆ ಆಗಮಿಸಿದರು. ವಿಷ್ಣುವು ತನ್ನ ಸುದರ್ಶನ ಚಕ್ರವನ್ನು ನೆನೆದನು. ಕೂಡಲೇ ಬೆಂಕಿಯ ಜ್ವಾಲೆಗಳನ್ನೇ ಉಗುಳುತ್ತ ಪ್ರತಿ ಸೂರ್ಯ ಮಂಡಲದಂತೆ ಸುದರ್ಶನ ಚಕ್ರವು ಆಕಾಶಮಾರ್ಗದಿಂದ ಎಲ್ಲೆಡೆಗೂ ತನ್ನ ಉರಿಯ ಕೆನ್ನಾಲಿಗೆಗಳನ್ನು ಚಾಚುತ್ತ ಬಂದು ವಿಷ್ಣುವಿನ ಕೈಯನ್ನು ಅಲಂಕರಿಸಿತು. ಕೇಶವನು ತನ್ನ ಅತ್ಯುಗ್ರವಾದ ಆ ಅಸ್ತ್ರವನ್ನು ದೈತ್ಯರ ಮೇಲೆ ಪ್ರಯೋಗಿಸಿದನು. ಆಗ ಆ ಸುದರ್ಶನ ಚಕ್ರವು ಗಿರಿಗಿರಿ ತಿರುಗುತ್ತ ಕಿಡಿಗಳನ್ನು ಭೂಮ್ಯಾಕಾಶಗಳಲ್ಲಿ ತೂರುತ್ತ ದೈತ್ಯರ ಶಿರಸ್ಸುಗಳನ್ನು ಸರಸರ ಹರಿದು ತರಿಯತೊಡಗಿತು. ಆಗ ಅಸಂಖ್ಯ ರಾಕ್ಷಸರು ತಲೆ ಕಡಿದು, ಕೈಕಾಲು ಮುರಿದು, ಛಿನ್ನ ವಿಚ್ಛಿನ್ನ ದೇಹರಾಗಿ ನೆತ್ತರು ಕಾರುತ್ತ ಗಿರಿ ಶಿಖರಗಳಂತೆ ನೆಲಕ್ಕುರುಳಿದರು. ಇತ್ತ

ನಾರಾಯಣನ ಆಜ್ಞೆಯಂತೆ ನರನೂ ಕೂಡ ಭಯಂಕರ ಬಾಣ ಪ್ರಯೋಗದಿಂದ ದೈತ್ಯ ಸೈನಿಕರನ್ನೆಲ್ಲಾ ಹೊಡೆದು, ಹಿಂಡು ಹಿಂಡಾಗಿ ಕೊಂದು ಹಾಕಿದನು. ಹೀಗೆ ನರ ನಾರಾಯಣರೀರ್ವರ ಶಸ್ತ್ರಾಸ್ತ್ರ ಪ್ರಹಾರಗಳಿಂದ ರಾಕ್ಷಸರೆಲ್ಲರೂ ಕ್ಷತವಿಕ್ಷತರಾದರು. ಅಳಿದುಳಿದವರು ದಿಕ್ಕುಗಾಣದೆ ತೋಚಿದತ್ತ ಓಡಿ ಹೋದರು.

ಆಗ ಶ್ರೀಹರಿಯು ಮಿಂಚಿನ ತಬಕದಂತೆ, ಬೆಂಕಿಯ ಬಳ್ಳಿಯಂತೆ, ಜ್ವಾಲೆಯ ಮಾಲೆಯಂತೆ ಸುತ್ತಲೂ ಗರಗರ ತಿರುಗಿ, ದೈತ್ಯರ ಕತ್ತುಗಳೆಲ್ಲ ಸವರಿ, ಸಂಹರಿಸಿ, ಇನ್ನೂ ಪ್ರಜ್ವಲಿಸುತ್ತಿರುವ ತನ್ನ ಸುದರ್ಶನ ಚಕ್ರವನ್ನು ಉಪಸಂಹರಿಸಿದನು. ಮಿತ್ರನಾದ ನರನನ್ನು ಯುದ್ಧದಿಂದ ಹಿಂದಿರುಗುವಂತೆ ಮಾಡಿ ದೇವತೆಗಳಿಗೆಲ್ಲ, ವಿಜಯಶ್ರೀ ಮಾಲೆಹಾಕುವಂತೆ ಮಾಡಿದನು. ಸುರವೃಂದಕ್ಕೆಲ್ಲ ಗೆಲುವು ತಂದುಕೊಟ್ಟು, ಆ ಎಲ್ಲ ಅಮರರಿಂದ ಪೂಜಿತನಾಗಿ ತನ್ನ ಸ್ಥಾನವಾದ ವೈಕುಂಠಕ್ಕೆ ಹೊರಟುಹೋದನು. ಅನಂತರ ದೇವತೆಗಳು ದುರ್ಲಭವಾದ ಆ ದಿವ್ಯ ಅಮೃತವನ್ನು ಚೆನ್ನಾಗಿ ರಕ್ಷಿಸಲು ದೇವೇಂದ್ರನಿಗೆ ಒಪ್ಪಿಸಿದರು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರಾ ಐವತ್ತೆರಡನೇಯ ಅಧ್ಯಾಯ ಮುಗಿದುದು.*



## ವಾಸ್ತು ಎಂದರೆ ಏನು ಅದರ ಪ್ರವರ್ತಕರಾದ ಹದಿನೆಂಟು ಋಷಿಗಳು ಯಾರು ?

**ಅಧ್ಯಾಯ - ೨೫೩**

**ಋಷಿಯ ಉವಾಚ**

**"ಪ್ರಾಸಾದ ಭವನಾದೀನಾಂ ನಿವೇಶಂ ವಿಸ್ತರಾದ್ವದ।**
**ಕುರ್ಯ್ಯಾತ್ಕೇನ ವಿಧಾನೇನ ಕಶ್ಚ ವಾಸ್ತುರುದಾಹೃತಃ॥"**

**ಋಷಿಗಳು :-** ಅರಮನೆ, ಹಾಗೂ ದೊಡ್ಡ ದೊಡ್ಡಮನೆಗಳ ನಿವೇಶನವನ್ನು ಹೇಗೆ ಮಾಡಬೇಕು ತಿಳಿಸಿರಿ? ಮನೆ ಕಟ್ಟುವ ವಿಧಾನ ಯಾವುದು? ವಾಸ್ತು ಎಂದರೆ ಏನು? ಇದೆಲ್ಲವನ್ನೂ ತಿಳಿಸು.

**ಸೂತ :-** ಗ್ರಹ ನಿರ್ಮಾಣ ಶಾಸ್ತ್ರಕ್ಕೆ ವಾಸ್ತುಶಾಸ್ತ್ರ ಎಂದು ಅನ್ನುವರು. ಈ ವಾಸ್ತುಶಾಸ್ತ್ರದ ಮೂಲ ಉಪದೇಶಕರು ಹದಿನೆಂಟು ಜನ. ಭೃಗು, ಅತ್ರಿ ವಶಿಷ್ಠ, ವಿಶ್ವಕರ್ಮ, ಮಯ, ನಾರದ, ನಗ್ನಜಿತ್, ವಿಶಾಲಾಕ್ಷ, ಪುರಂದರ, ಬ್ರಹ್ಮ, ಕುಮಾರ, ನಂದೀಶ್ವರ, ಶೌನಕ, ಗರ್ಗ, ವಾಸುದೇವ, ಅನಿರುದ್ಧ, ಶುಕ್ರ, ಬೃಹಸ್ಪತಿ. ಈ ಅಷ್ಟಾದಶ ಆಚಾರ್ಯರು ವಾಸ್ತುಶಾಸ್ತ್ರ ಪ್ರವರ್ತಕ ಮಹಾಪುರುಷರೆಂದು ಪ್ರಸಿದ್ಧರಾಗಿದ್ದಾರೆ. ಈ ವಾಸ್ತುಶಾಸ್ತ್ರವನ್ನು ಮೂಲತಃ ಮತ್ಸ್ಯ ರೂಪಿ ಶ್ರೀಹರಿಯು ಮನು ಮಹಾರಾಜನಿಗೆ ಮೊದಲು ಉಪದೇಶಿಸಿದನು. ಅದನ್ನೇ ಈ ಹದಿನೆಂಟು ಮಂದಿ ಉಪದೇಶಕರು ಪಂಪರೆಯಾಗಿ ಹದಿನೆಂಟು ಮುಖಗಳಿಂದ ಕೇಳಿಕೊಂಡು ಭೂಲೋಕದಲ್ಲಿ ಪ್ರಸಾರ

ಗೈದರು. ಈ ಅಷ್ಟಾದಶ ಮಹನೀಯರು ಉಪದೇಶಿಸಿದ ಶಾಸ್ತ್ರಕ್ಕೆ ವಾಸ್ತುಶಾಸ್ತ್ರವೆಂದು ಹೆಸರು. ಅದನ್ನೇ ನಾನು ನಿನಗೆ ಈಗ ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಮಹಾದೇವರು ಅಂಧಕಾಸುರನನ್ನು ಸಂಹಾರ ಮಾಡುವಾಗ ಅವರ ಮೈಯೆಲ್ಲ ಬೆವತು ಹೋಗಿತ್ತು. ಅವರ ಹಣೆಯಿಂದ ಬೆವರಿನ ನೀರು ಉರುಳಿ ನೆಲದ ಮೇಲೆ ಬಿದ್ದಿತು. ಆ ಬೆವರು ಹನಿಗಳಿಂದ ಕರಾಳಮುಖದ ಅತ್ಯದ್ಭುತವಾದ ಒಂದು ಭೂತವು ಉದ್ಭೂತವಾಯಿತು. ಆಕಾಶವನ್ನೇ ನುಗುವಂತೆ ಸಮಗ್ರ ಭೂಮಂಡಲವನ್ನೇ ಕಬಳಿಸುವಂತೆ ಘೋರ ರೂಪದಿಂದ ಬಾಯಿತೆರೆದು ನಿಂತು ಆ ಭೂತವು ಅಂಧಕಾಸುರನ ದೇಹದಿಂದ ನೆಲಕ್ಕೆ ಬಸಿದುಬಿದ್ದ ಬಿಸಿ ನೆತ್ತರವನ್ನೆಲ್ಲ ನೆಕ್ಕಿ, ಪಾನಮಾಡಿ ಗರ್ಜಿಸಿತು. ಮೂಲ ಅಂಧಕಾಸುರನ ಪ್ರತಿಬಿಂಬರಾದ ಅನೇಕಮಾಯಾ ಅಂಧಕಾಸುರರ ರಕ್ತವನ್ನೆಲ್ಲ ಆ ಭೂತವು ಗಟಗಟ ಕುಡಿದು ಬಿಟ್ಟಿತು. ಇಷ್ಟಾದರೂ ಅದರ ದಾಹ ಶಾಂತಿಯಾಗಲಿಲ್ಲ. ಹಸಿವೂ ಹಿಂಗಲಿಲ್ಲ. ತೃಪ್ತಿಯೂ ಆಗಲಿಲ್ಲ. ಭಯಂಕರ ಹಸಿವೆ ಆ ಭೂತವನ್ನು ಹಿಂಸಿಸುತ್ತಲೇ ಇತ್ತು. ಕ್ಷುಧಾಕ್ರಾಂತವಾದ ಆ ಮಹಾಭೂತವು ಮೂರುಲೋಕವನ್ನೆಲ್ಲ ತಿಂದುಬಿಡಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯಿಂದ ಮಹಾದೇವರನ್ನು ಕುರಿತು ತಪಸ್ಸನ್ನು ಮಾಡಿತು. ಆ ದೆವ್ವದ ತಪಸ್ಸು ಕೂಡ ಅದರ ಆಕಾರದಷ್ಟೇ ಭೀಕರ. ಅದರ ಸ್ವಭಾವದಷ್ಟೇ ಉಗ್ರ. ಆ ದುಷ್ಟ ಭೂತದ ದಾರುಣ ತಪಸ್ಸಿಗೆ ದೇವದೇವನಾದ ಧೂರ್ಜಟಿಯು ಸಂತುಷ್ಟನಾಗಿ, 'ವರವನ್ನು ಕೇಳಿಕೋ' ಎಂದು ಹೇಳಿದ.

ಆಗ ಆ ಭೂತವು ಮಹಾದೇವನಿಗೆ ''ನನಗೆ ಮೂರು ಲೋಕ ನುಂಗಿ ನೀರು ಕುಡಿಯುವ ಶಕ್ತಿಯನ್ನು ಕೊಡು'' ಎಂದು ಕೇಳಿಕೊಂಡಿತು.ಮಹಾದೇವರು ಅದಕ್ಕೆ 'ತಥಾಸ್ತು' ಎಂದು ವರವಿತ್ತರು. ಆಗ ಆ ಭೂತವು ಭೂಮ್ಯಾಕಾಶಗಳೆರಡನ್ನು ನುಂಗಬೇಕು ಎಂದು ಹೊರಟಿತು. ಆಗ ಆ ಭೂತದ ಈ ದುಷ್ಟ ಉದ್ದೇಶ ತಿಳಿದು ಬೆದರಿ ಹೋದ ಬ್ರಹ್ಮ, ಹಾಗೂ ಮಹಾದೇವರಿಬ್ಬರೂ ಉಳಿದೆಲ್ಲ ದೇವತೆಗಳೂ ಅದನ್ನು ನೆಲದ ಮೇಲೆ ಇದ್ದಲ್ಲಿಯೇ ಬಿಗಿದು ತಡೆದರು. ಹೀಗೆ ಎಲ್ಲ ದೇವತೆಗಳಿಂದ ಇದ್ದ ಸ್ಥಳದಲ್ಲಿಯೇ ಆಕ್ರಮಿಸಿ, ಆಚೀಚೆ ಹೋಗದಂತೆ ಕಟ್ಟಿ ಹಾಕಲ್ಪಟ್ಟ ಆ ಭೂತವು ನೆಲಿಸಿದ ಸ್ಥಳದಲ್ಲಿ ಸುತ್ತಲೂ ದೇವತೆಗಳು ನಿಗ್ರಹಿಸಲು ವಾಸಮಾಡುವದರಿಂದ ಆ ಭೂತವು 'ವಾಸ್ತು' ಎಂದು ಅಂದಿನಿಂದ ಕರೆಯಲ್ಪಟ್ಟಿತು. ಆಗ ಆ ಭೂತವು ಎಲ್ಲ ಕಡೆಗೂ ದೇವತೆಗಳಿಂದ ಸ್ಥಾನಬದ್ಧತೆಯಲ್ಲಿ ಇಡಲ್ಪಟ್ಟಿದ್ದಾಗಿ ಅವರಿಗೆ ಪ್ರಾರ್ಥಿಸಿಕೊಂಡಿತು. ''ಸುರೋತ್ತಮರೆ, ಶಿವನ ವರದಿಂದ ಭೂಮ್ಯಾಕಾಶಗಳನ್ನು ವ್ಯಾಪಿಸಿ, ಮೂರು ಲೋಕಗಳನ್ನೇ ನುಂಗಲು ಹೊರಟ ನನ್ನನ್ನು ನೀವು ನಾನು ಇದ್ದು ಬಿದ್ದಲ್ಲಿಯೇ ಬಂದು, ನಿರ್ಬಂಧಪಡಿಸಿ, ಬಿಗಿದು, ತಡೆದು, ಕಟ್ಟಿಹಾಕಿ ಬಿಟ್ಟಿದ್ದೀರಿ. ಹೀಗೆ ಅಸಂಖ್ಯ ದೇವತೆಗಳಿಂದ ಭೂಮ್ಯಾಕಾಶಗಳ ಪ್ರತಿಯೊಂದು ಭಾಗ, ಸ್ಥಾನಗಳಲ್ಲಿಯೂ ನಿರ್ಬಂಧದಿಂದ ಬಂಧಿಸಿ ಸ್ತಬ್ಧನಾಗಿ ಮಾಡಲ್ಪಟ್ಟ ನನಗೆ ಎಲ್ಲಿಯೂ ಆಚೀಚೆ ಚಲಿಸಲು ಬಾರದಂತಾಗಿದೆ. ನಾನು ಇದ್ದಲ್ಲೆಲ್ಲ ದೇವತೆಗಳ ಪಡೆಯು

ಸುತ್ತಲೂ ಹತ್ತಿಮುತ್ತಿ ಒತ್ತೈಸಿ, ನನಗೆ ಅಲುಗಾಡಲು ಬಾರದಂತೆ ಸ್ಥಾನಬದ್ಧತೆಯನ್ನು ಏರ್ಪಡಿಸಿದ್ದಾರೆ. ಈಗ ನಾನು ಹೇಗೆ ಇರಬೇಕು? ಎಲ್ಲಿ ಇರಬೇಕು? ನನಗೆ ಆಹಾರವೇನು! ಆಕಾರವೇನು! ತಿಳಿಸಿರಿ. ನನ್ನ ಮೇಲೆ ಪ್ರಸನ್ನರಾಗಿರಿ'' ಎಂದು ಬೇಡಿಕೊಂಡಿತು.

ಆಗ ಬ್ರಹ್ಮಾದಿದೇವತೆಗಳು ಆ ಭೂತಕ್ಕೆ ಹೇಳಿದರು. ''ಇನ್ನು ಮೇಲೆ, ವಾಸ್ತುವಿನ ಮಧ್ಯದಲ್ಲಿ ವೈಶ್ವದೇವದ ಅನಂತರ ನಿನಗೆ ಆಹಾರವಾಗಿ ಬಲಿಯಿಡುವರು. ವಾಸ್ತು ಪೂಜೆಯನ್ನು ಮಾಡದೇ ಇದ್ದರೂ ನಿನಗೆ ಆ ಬಲಿಯೇ ಆಹಾರವಾಗುವದು. ಅಜ್ಞಾನದಿಂದ ಮಾಡಿದ ಯಜ್ಞವೂ ನಿನ್ನ ಆಹಾರ. ಯಜ್ಞ ಮತ್ತು ಉತ್ಸವಾದಿಗಳಲ್ಲಿ ನಿನಗಾಗಿ ನೀಡಿದ ಬಲಿಯೂ ನಿನಗೆ ಆಹಾರ.'' ಹೀಗೆ ಹೇಳಿದ ಬಳಿಕ ಆ ಭೂತವು ಸಂತುಷ್ಟವಾಯಿತು. ಅದಕ್ಕೆ **ವಾಸ್ತು** ಎಂದು ಹೆಸರು ಬಂದಿತು. ಆ ಭೂತಶಾಂತಿಗಾಗಿ ಅಂದಿನಿಂದ ವಾಸ್ತುಯಜ್ಞವನ್ನುಮಾಡುವ ಸಂಪ್ರದಾಯ ಪ್ರಾರಂಭವಾಯಿತು.

ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರು ಐವತ್ತಮೂರನೆಯ ಅಧ್ಯಾಯ ಮುಗಿದುದು

—○—

## ಗೃಹನಿರ್ಮಾಣ ಕಾಲ ವರ್ಣನೆ

ಅಧ್ಯಾಯ - ೨೫೪

**ಸೂತ ಉವಾಚ :**

**''ಅಥಾತಃ ಸಂಪ್ರವಕ್ಷ್ಯಾಮಿ ಗೃಹ ಕಾಲ ವಿನಿರ್ಣಯಮ್**
**ಯಥಾ ಕಾಲಂ ಶುಭಂ ಜ್ಞಾತ್ವಾ ಸದಾ ಭವನಮಾರಭೇತ್॥**

**ಸೂತ** :- ಇನ್ನು ಮುಂದೆ ಗೃಹ ನಿರ್ಮಾಣದ ಕಾಲನಿರ್ಣಯ ಹೇಳುತ್ತೇನೆ. ಯಾವಾಗಲೂ ಶುಭಕಾಲವನ್ನು ನೋಡಿಕೊಂಡೇ ಮನೆಯನ್ನು ಕಟ್ಟಲು ಪ್ರಾರಂಭಿಸಬೇಕು. ಚೈತ್ರ ಮಾಸದಲ್ಲಿ ಮನೆಕಟ್ಟಲು ಆರಂಭಿಸಿದರೆ ರೋಗಾದಿ ಉಪದ್ರವ ಉಂಟಾಗುವವು. ವೈಶಾಖದಲ್ಲಿ ಹಸು ಮತ್ತು ರತ್ನಗಳ ಪ್ರಾಪ್ತಿ ಆಗುವದು. ಜ್ಯೇಷ್ಠದಲ್ಲಿ ಮೃತ್ಯು. ಆಷಾಢದಲ್ಲಿ ಸೇವಕರು ಮತ್ತು ರತ್ನಗಳ ಪ್ರಾಪ್ತಿ ಹಾಗೂ ಪಶುವರ್ಗವು ಲಭಿಸುವದು. ಶ್ರಾವಣ ಮಾಸದಲ್ಲಿ ಭೃತ್ಯಲಾಭ ಉಂಟು. ಭಾದ್ರಪದದಲ್ಲಿ ಮನೆಯನ್ನು ಆರಂಭಿಸಿದರೆ ಹಾನಿ. ಅಶ್ವೀಜದಲ್ಲಿ ಪತ್ನೀನಾಶ. ಕಾರ್ತಿಕದಲ್ಲಿ ಧನಧಾನ್ಯ. ಮಾರ್ಗಶೀರ್ಷದಲ್ಲಿ ಭೋಗ, ಅನ್ನಲಾಭ. ಪುಷ್ಯಮಾಸದಲ್ಲಿ ಕಳ್ಳರ ಭಯ. ಮಾಘ ಮಾಸದಲ್ಲಿ ಒಳ್ಳೇ ಲಾಭ. ಫಾಲ್ಗುಣ ಮಾಸದಲ್ಲಿ ಸುವರ್ಣ ಮತ್ತು ಪುತ್ರಪ್ರಾಪ್ತಿ. ಹೀಗೆ ಕಾಲಬಲದಿಂದಾಗುವ ಶುಭಅಶುಭಗಳನ್ನು ವಿಚಾರಿಸಿ, ಮನೆಕಟ್ಟಲು ಆರಂಭಿಸಬೇಕು.

ಗ್ರಹಾರಂಭಕ್ಕೆ ಅಶ್ವಿನಿ, ರೋಹಿಣಿ, ಮೂಲಾ, ಉತ್ತರಾ ನಕ್ಷತ್ರ, ಸ್ವಾತಿ, ಹಸ್ತಾ ಅನುರಾಧಾ ಇಷ್ಟು ನಕ್ಷತ್ರಗಳು ಶುಭಕರ. ಆದಿತ್ಯವಾರ ಮಂಗಳವಾರ ಬಿಟ್ಟು ಎಲ್ಲ ವಾರಗಳು ನೂತನ ಗೃಹ ನಿರ್ಮಾಣಕ್ಕೆ ಪ್ರಶಸ್ತ. ವ್ಯಾಘಾತ, ಶೂಲ, ವ್ಯತೀಪಾತ, ಗಂಡ

ಮುಂತಾದವುಗಳು ಗೃಹಾರಂಭಕ್ಕೆ ವರ್ಜ್ಯವಾಗಿವೆ. ನಿಷ್ಕಂಭ, ಗಂಡ, ಪರಿಘ, ವಜ್ರಯೋಗಗಳಲ್ಲಿ ಮನೆ ಆರಂಭಿಸಬೇಕು. ಅಭಿಜಿನ್ ರೋಹಿಣಿ, ಮಹೀಂದ್ರ, ಗಂಧರ್ವ, ವೈರಾರಿಸಾವಿತ್ರ ಮುಂತಾದ ಮುಹೂರ್ತಗಳು ಗೃಹಾರಂಭಕ್ಕೆ ವಿಹಿತವಾಗಿವೆ.

ಚಂದ್ರಬಲ, ಸೂರ್ಯಬಲ ಶುಭಲಗ್ನ ಮುಂತಾದವುಗಳನ್ನು ನೋಡಿ ದೈವಜ್ಞರ ಸಲಹೆಯಂತೆ ಗೃಹನಿರ್ಮಾಣ ಪ್ರಾರಂಭಿಸಬೇಕು. ಅರಮನೆಗಳನ್ನು ಸಿರಿಮನೆ, ಭವ್ಯ ಭವನಗಳನ್ನು, ಬಾವಿ ಕೆರೆಗಳನ್ನು ಕಟ್ಟಿಸುವಾಗಲೂ ಇದೇ ರೀತಿ ಶುಭಮುಹೂರ್ತ ನೋಡಿಕೊಂಡು ಪ್ರಾರಂಭ ಮಾಡಬೇಕು.

ಇದಕ್ಕಿಂತ ಮೊದಲು ಭೂಮಿಯನ್ನು ಪರೀಕ್ಷಿಸಬೇಕು. ಬ್ರಾಹ್ಮಣರಿಗೆ ನೆಲವು ಬೆಳ್ಳಗಿದ್ದರೆ ಪ್ರಶಸ್ತ. ಬಿಳಿಯ ಮಣ್ಣು ಶುಭಕರ. ಕ್ಷತ್ರಿಯರಿಗೆ ಕೆಂಪು, ವೈಶ್ಯರಿಗೆ ಹಳದಿ, ಶೂದ್ರರಿಗೆ ಕರಿ ನೆಲ ಶುಭ. ಇವಿದ್ದರೆ ಒಳ್ಳೆಯದು. ಭೂಮಿಯ ಮಣ್ಣನ್ನು ಕೂಡ ರುಚಿ ಮೇಲಿಂದಲೂ ಪರೀಕ್ಷಿಸಬೇಕು. ಸಿಹಿಯಿದ್ದರೆ ಬ್ರಾಹ್ಮಣರಿಗೆ ಶುಭ. ವಗರು ಇದ್ದರೆ ಕ್ಷತ್ರಿಯರಿಗೆ, ಖಾರ ಇದ್ದರೆ ವೈಶ್ಯರಿಗೆ, ಕಹಿಯಿದ್ದರೆ ಶೂದ್ರರಿಗೆ ಶುಭ.

ಭೂಮಿಯನ್ನು ಇನ್ನೂ ಒಂದು ರೀತಿಯಿಂದ ಪರೀಕ್ಷಿಸಬಹುದು. ಒಂದು ಮೊಳ ಭೂಮಿ ಅಗೆದು ಅದರ ಸುತ್ತಲೂ ಸಾರಿಸಿ ನಡುವೆ ತುಪ್ಪ ತುಂಬಿದ ಅಗಲವಾದ ಪಾತ್ರೆಯನ್ನು ಇರಿಸಬೇಕು. ಅದರಲ್ಲಿ ನಾಲ್ಕು ಬತ್ತಿಗಳನ್ನು ಇಟ್ಟು ದೀಪ ಹಚ್ಚಬೇಕು. ಆ ದೀಪದ ಕುಡಿಗಳು ಪೂರ್ವಾಭಿಮುಖವಾದರೆ ಬ್ರಾಹ್ಮಣರಿಗೆ, ಪಶ್ಚಿಮಾಭಿಮುಖವಾದರೆ ವೈಶ್ಯರಿಗೂ, ಉತ್ತರಾಭಿಮುಖವಾದರೆ ಶೂದ್ರರಿಗೂ ಒಳ್ಳೆಯದು. ಎಲ್ಲ ಕಡೆಗೂ ಸಮಾನವಾಗಿ ದೀಪದ ಕುಡಿಗಳು ಚಾಚಿದರೆ ಎಲ್ಲ ವರ್ಣದವರಿಗೆ ಶುಭ. ಅದಕ್ಕೆ ಸಾಮೂಹಿಕ ವಾಸ್ತು ಅನ್ನುವರು.

ಅಥವಾ ನೇಗಿಲದಿಂದ ಭೂಮಿಯನ್ನು ಹರಗಿ, ಅಲ್ಲಿ ಎಲ್ಲ ತರಹದ ಬೀಜಗಳನ್ನು ಬಿತ್ತಬೇಕು. ಆ ಬೀಜಗಳು ಮೂರು ದಿನಕ್ಕೆ ಮೊಳಕೆ ಒಡೆದರೆ ಉತ್ತಮ. ಐದು ದಿನಗಳಲ್ಲಿ ಅಂಕುರಿಸಿದರೆ ಮಧ್ಯಮ. ಏಳು ದಿನಗಳಲ್ಲಿ ಅಂಕುರಿಸಿದರೆ ಕನಿಷ್ಠ. ಕನಿಷ್ಠವಾದರೆ ಅದನ್ನು ಬಿಡಬೇಕು. ಹೀಗೆ ಪರೀಕ್ಷೆಮಾಡಿ ಆರಿಸಿ, ಉತ್ತಮ ಸ್ಥಳದಲ್ಲಿ ಮನೆಕಟ್ಟಬೇಕು. ಶ್ರೇಷ್ಠವೆನಿಸಿದ ಸ್ಥಾನದಲ್ಲಿ ಮೊದಲು ಪಂಚಗವ್ಯ ಹಾಗೂ ಔಷಧಿ ಮಿಶ್ರಿತ ನೀರುಗಳಿಂದ ಎಲ್ಲ ಕಡೆಗೂ ಥಳಿಹಾಕಬೇಕು. ಅನಂತರ, ಆ ಸ್ಥಳದ ತುಂಬ ಪೂರ್ವಾಭಿಮುಖವಾಗಿ ಹತ್ತು ಗೆರೆಗಳನ್ನು ಕೊರೆಯಬೇಕು. ಅನಂತರ ಅದೇ ಹತ್ತು ಗೆರೆಗಳ ಮೇಲೆ ಉತ್ತರಾಭಿಮುಖವಾಗಿ ಅಡ್ಡವಾಗಿ ಹತ್ತುಗೆರೆ ಬರೆಯಬೇಕು.

ಎಲ್ಲ ವಿಧವಾದ ಕಟ್ಟಡಗಳ ವಾಸ್ತುವಿಭಾಗಗಳಲ್ಲಿ ವಾಸ್ತು ಪೂಜೆಮಾಡುವಾಗ ದಕ್ಷಿಣದಿಂದ ಉತ್ತಾರಾಭಿಮುಖವಾಗಿ ಒಂಭತ್ತು ಚೌಕುಗಳು, ಪೂರ್ವ ಪಶ್ಚಿಮವಾಗಿ ಒಂಬತ್ತು ಚೌಕುಗಳು, ಒಟ್ಟು ಎಂಬತ್ತೊಂದು ಚೌಕೋನ ಮನೆಗಳು ಆಗುವಂತೆ ಕೊರೆಯಬೇಕು.

ಹೀಗೆ ಒಂಬತ್ತು, ಒಂಬತ್ತು, ಪೂರ್ವಾಭಿಮುಖ ಹಾಗೂ ಉತ್ತರಾಭಿಮುಖ ರೇಖೆಗಳನ್ನು ಮೊದಲು ಬಂಗಾರದ ಸಲಾಕೆಯಿಂದ ಕೊರೆದು ಅದರ ಮೇಲೆ

ರಂಗವಲ್ಲಿಯಿಂದ ರೇಖೆಯನ್ನು ರಚಿಸಬೇಕು. ಸುತ್ತಲೂ ದಾರವನ್ನು ಕಟ್ಟಬೇಕು. ವಾಸ್ತು ಶಿಲ್ಪದ ಮರ್ಮವನ್ನು ಸರಿಯಾಗಿ ತಿಳಿದುಕೊಂಡು, ಈ ಮನೆಗಳಲ್ಲಿ ಹೊರಸುತ್ತಿನಲ್ಲಿ ಮೂವತ್ತೆರಡು ದೇವತೆಗಳನ್ನು, ಒಳಗಡೆ ಹದಿಮೂರು ದೇವತೆಗಳನ್ನು, ಒಟ್ಟು ನಲವತ್ತೈದು ದೇವತಾ ಸ್ಥಾನಗಳನ್ನು ಮಾಡಿ ಅದರ ಮೇಲೆ ಆ ದೇವತೆಗಳನ್ನು ಆಹ್ವಾನಿಸಿ, ಪೂಜೆ ಮಾಡಬೇಕು. ಆ ದೇವತೆಗಳ ಹೆಸರುಗಳು ಇಂತಿವೆ: ಅಗ್ನಿ, ಪರ್ಜನ್ಯ, ಜಯಂತ, ಇಂದ್ರ, ಸೂರ್ಯ, ಸತ್ಯ, ಭೃಶ, ಆಕಾಶ, ವಾಯು, ಪೂಷ, ವಿತಥ, ಗೃಹಕ್ಷತ್ರ, ಯಮ, ಗಂಧರ್ವ, ಭೃಂಗರಾಜ, ಮೃಗ, ಪಿತೃಗಣ, ದೌವಾರಿಕ, ಸುಗ್ರೀವ, ಪುಷ್ಪದಂತ, ವರುಣ, ಅಸುರ, ಶ್ರೇಷ್ಠ, ಪಾಪರೋಗ, ಅಹಿಮುಖ, ಭಲ್ಲಾಟ, ಸೋಮ, ಸರ್ಪ, ಅದಿತಿ, ದಿತಿ.

ಈ ಮೂವತ್ತೆರಡು ಜನ ದೇವತೆಗಳನ್ನು ವೇದಿಕೆಯ ಹೊರವಲಯದಲ್ಲಿ ಪೂಜಿಸಬೇಕು. ಒಳಬದಿಯಲ್ಲಿ ಆಪ, ಸಾವಿತ್ರ, ದಯ, ರುದ್ರ ಈ ನಾಲ್ಕು ದೇವತೆಗಳನ್ನು ಆಗ್ನೇಯ ಈಶಾನ್ಯ, ವಾಯುವ್ಯ, ನೈಋತ್ಯ ದಿಕ್ಕುಗಳಲ್ಲಿ ಮುಂದಾಗಿ ಆಹ್ವಾನಿಸಿ ಪೂಜಿಸಬೇಕು.

ಒಂಬತ್ತು ಸ್ಥಾನಗಳಲ್ಲಿ ಬ್ರಹ್ಮದೇವರನ್ನು, ಆ ಸ್ಥಾನದ ಸುತ್ತಮುತ್ತಲಿನ ಮನೆಗಳಲ್ಲಿ ಎಂಟು ಜನ ಸಾಧ್ಯರನ್ನು ಆಹ್ವಾನಿಸಬೇಕು. ಆರ್ಯಮಾ, ಸವಿತಾ, ವಿವಸ್ವಾನ್, ವಿಭುಧಹಿತ, ಮಿತ್ರ, ರಾಜಯಕ್ಷ್ಮ, ಪೃಥ್ವೀಹರ, ಅಪವತ್ಸ ಎಂಬ ಹೆಸರಿನ ಎಂಟು ಜನರನ್ನು ಬ್ರಹ್ಮದೇವರ ಸುತ್ತಮುತ್ತಲಿನ ಸ್ಥಾನಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದರಲ್ಲಿ ಆಹ್ವಾನಿಸಬೇಕು. ಅಪ, ಅಪವತ್ಸ, ಪರ್ಜನ್ಯ, ದಿತಿ, ಅಗ್ನಿ ಈ ಐದು ದೇವತೆಗಳು ಒಂದೊಂದು ಅಂಕಣದ ಅಧಿಪತಿಗಳಾಗಿದ್ದಾರೆ. ಹೀಗೆ ಎಲ್ಲ ಮೂಲೆಗಳಲ್ಲಿಯೂ ಅಂಕಣದ ಅಧಿಪತಿ ದೇವತೆಗಳ ವರ್ಗಗಳನ್ನು ಏರ್ಪಡಿಸಬೇಕು.

ಈ ಕೋನ ವರ್ಗಗಳ ನಡುವೆ ಬ್ರಹ್ಮ ಪದದ ಸುತ್ತೂ ನಾಲ್ಕು ಕಡೆಗಳಲ್ಲಿ ಎರಡು ಮನೆ ಅಗಲ, ಮೂರು ಮನೆ ಉದ್ದ ಒಂದು ಪ್ರದೇಶ ನಿರ್ಮಿತವಾಗುವದು. ಪೂರ್ವದಿಂದ ಕ್ರಮವಾಗಿ ಆರ್ಯಮ, ವಿವಸ್ವಾನ್, ಮಿತ್ರ, ಪೃಥ್ವೀಹರ ಎಂಬ ದೇವತೆಗಳು ಅಧಿಪತಿಗಳಾಗಿರುವರು. ವಾಸ್ತು ಮಂಡಪದಲ್ಲಿ ಕೆಳಗೆ ಹೇಳಿದಂತೆ ರೇಖೆಗಳನ್ನು ನೇರವಾಗಿ ಎಳೆಯಬೇಕು. ವಾಯುದೇವತೆ ಮನೆಯಿಂದ ರೋಗ ದೇವತೆ ಮನೆಯವರೆಗೆ ಒಂದು ಸರಳ ರೇಖೆ ಎಳೆಯಬೇಕು.

ಇದರಂತೆ ಪಿತೃವಿನ ಮನೆಯಿಂದ ಅಗ್ನಿಯ ಮನೆಯವರೆಗೆ, ಮುಖ್ಯ ದೇವತಾ ಮನೆಯಿಂದ ಗೃಹದೇವತೆ ಮನೆಯವರೆಗೆ, ಶೇಷಸ್ಥಾನದಿಂದ ವಿತಥ ಸ್ಥಾನದವರೆಗೆ, ಸುಗ್ರೀವಸ್ಥಾನದಿಂದ ಅದಿತಿ ಸ್ಥಾನದವರೆಗೆ, ಮೃಗಸ್ಥಾನದಿಂದ ಪರ್ಜನ್ಯ ಸ್ಥಾನದವರೆಗೆ ರೇಖೆಗಳನ್ನು ಎಳೆಯಬೇಕು. ಅವುಗಳಿಗೆ 'ವಂಶರೇಖೆ' ಎಂದು ಕರೆಯಬೇಕು.

ಈ ರೇಖೆಗಳು ಒಂದಕ್ಕೊಂದು ಕೂಡುವ ಸಂಧಿಪ್ರದೇಶದಲ್ಲಿ ಪದ, ಮಧ್ಯ, ಸಮ, ಮರ್ಮ ಎಂಬ ನಾಲ್ಕು ಚೌಕೋನಗಳು ರೂಪಗೊಳ್ಳುವವು. ಅವುಗಳನ್ನು ತ್ರಿಶೂಲ ಎಂದು ಕರೆಯುವರು. ಕಂಬಗಳನ್ನು ನೆಡುವಾಗ ತೊಲೆಗಳನ್ನು ಏರಿಸುವಾಗ ನೆಲದೊಳಗೆ ಮೊಳೆ, ಮೂಳೆ, ಎಂಜಲು ಮುಂತಾದವು ಉಳಿಯದಂತೆ ಶೋಧಿಸಬೇಕು.

ವಾಸ್ತು ಪುರುಷನು ಹಿಂದೆ ಹೇಳಿದ ಸಕಲದೇವತಾ ಸ್ವರೂಪನಾಗಿ ಇರುವನು. 'ಪಿತೃ' ಪದದಿಂದ ಅಗ್ನಿಪದದ ವರೆಗಿನ ಅಂತರವೇ ಅವನ ನಿಲುವು. ಅಗ್ನಿ ಅವನ ತಲೆ, ಆಪನು ಅವನ ಮುಖ. ಪೃಥ್ವಿ ಆರ್ಯಮ ಅವನ ಹೆಗಲು. ಅಪವತ್ಸನು ಅವನ ಎದೆಯಲ್ಲಿ, ದಿತಿಪದ್ಯನು ಅವನ ಕಣ್ಣುಗಳಲ್ಲಿ, ಅದಿತಿ, ಜಯಂತರು ಅವನ ರೆಪ್ಪೆಗಳಲ್ಲಿ ನೆಲೆಸಿದ್ದಾರೆ. ಸರ್ಪ ಮತ್ತು ಇಂದ್ರರು ಅವನ ಭುಜಗಳಲ್ಲಿಯೂ ಇರುವರೆಂದು ಧ್ಯಾನಿಸಬೇಕು.

ಇದರಂತೆ ಸೂರ್ಯ, ಸತ್ಯ, ಭೃಶ, ಆಕಾಶ, ವಾಯು, ಈ ಐದು ದೇವತೆಗಳು ವಾಸ್ತು ಪುರುಷನ ಬಲದೋಳುಗಳಲ್ಲಿ ಇರುವರು, ಸೋಮ, ಭಲ್ಲಾಟ, ಮುಖ್ಯ, ಅಹಿ, ರೋಗ ಈ ಐವರು ಎಡದೋಳಿನಲ್ಲಿ ಇರುವರು. ರುದ್ರ, ರಾಜಯಕ್ಷರು ವಾಸ್ತುಪುರುಷನ ಎಡಗೈಯನ್ನು, ಸಾವಿತ್ರಿ ಮತ್ರ ಸವಿತೃಗಳು ಬಲಗೈಯನ್ನು ಆಶ್ರಯಿಸಿರುವರು.

ಇದರಂತೆ ವಿವಸ್ವಾನ್ ಮಿತ್ರರು ಜಠರದಲ್ಲಿ ವಾಸಿಸುವರು. ಕೈಗಳ ಮಣಿಕಟ್ಟುಗಳಲ್ಲಿ ಊಷ, ಪಾಸಯಕ್ಷ, ಎಡಪಕ್ಕದಲ್ಲಿ ಅಸುರ, ಶೇಷ ಬಲಪಕ್ಕದಲ್ಲಿ ಪತಿಥ, ಗ್ರಹಕ್ಷತ, ತೊಡೆಗಳಲ್ಲಿ ಯಮ, ವರುಣ, ಮಂಡೆಗಳಲ್ಲಿ ಗಂಧರ್ವ, ಪುಷ್ಕರ, ಮೊಳಕಾಲುಗಳಲ್ಲಿ ಭೃಂಗ, ಸುಗ್ರೀವ, ಪೃಷ್ಠಭಾಗದಲ್ಲಿ ದೌವಾರಿಕ, ಮತ್ತು ಮೇಢ್ರಾವಯವದಲ್ಲಿ ಜಯ, ಶುಕ್ರ, ಪಾದದಲ್ಲಿ ಪಿತೃಗಳು, ಆಶ್ರಯ ಹೊಂದಿದ್ದಾರೆ. ನಡುವಿನ ಒಂಬತ್ತು ಸ್ಥಾನಗಳಲ್ಲಿ ಸ್ವಯಂ ಬ್ರಹ್ಮದೇವನೇ ನೆಲಸಿರುವನು. ಬ್ರಹ್ಮನನ್ನು ಹೃದಯಸ್ಥಾನದಲ್ಲಿ ಧ್ಯಾನಿಸಿ, ಪೂಜಿಸಬೇಕು.

ರಾಜ, ಮಹಾರಾಜರ, ಅರಮನೆಗಳನ್ನು ಕಟ್ಟುವಾಗ ವಾಸ್ತುಮಂಡಲವು ಅರವತ್ನಾಲ್ಕು ಚೌಕು ಉಳ್ಳದ್ದು ಆಗಿರಬೇಕು. ಆ ಚೌಕುಗಳ ಒಂದೊಂದು ಮನೆಯಲ್ಲಿ ಒಬ್ಬೊಬ್ಬ ದೇವತೆಗೆ ಅರ್ಧಭಾಗ ಮಾತ್ರ ಸೇರಿರುವದು, ಹೊರಗಡೆಯ ನಾಲ್ಕು ಮೂಲೆ ಮನೆಗಳಲ್ಲಿ ಎಂಟು ಜನ ದೇವತೆಗಳನ್ನು ಆಹ್ವಾನಿಸಬೇಕು.

ಬ್ರಹ್ಮಸ್ಥಾನದಲ್ಲಿಯು ಎರಡೂ ಬದಿಗಳಲ್ಲಿ ಐವತ್ತು ಮನೆಗಳು ಏರ್ಪಡುವವು. ದೇವಾಲಯ ಅಥವಾ ಅರಮನೆಯ ನಿರ್ಮಾಣಮಾಡುವಾಗ, ವಾಸ್ತುಪುರುಷನ ಪೂಜೆಯನ್ನು ಮಾಡಬೇಕು. ವಾಸ್ತುಪುರುಷನ ಅಂಗಭೂತವಾದ ಪ್ರದೇಶದಲ್ಲಿ ಎಲ್ಲಿಯಾದರೂ ಮೊಳೆ ಮೂಳೆಗಳು ಬಿದ್ದಿದ್ದರೆ, ಯಜಮಾನನ ದೇಹದ ಯಾವುದಾದರೂ ಒಂದು ಅಂಗದಲ್ಲಿ ತುರುಕೆ ಉಂಟಾಗುವದು. ಆ ಪ್ರದೇಶದಲ್ಲಿ ಒಳಗಡೆ ಮೂಳೆ, ಕಬ್ಬಿಣ ಸಲಾಕೆ, ಏನಾದರೂ ಇದ್ದರೆ ಅವೆಲ್ಲವೂ ಯಜಮಾನನಿಗೆ ಅಪಾಯಕರ. ಆದುದರಿಂದ ಯಜಮಾನನ ದೇಹದ ಯಾವ ಭಾಗದಲ್ಲಿ ತುರಿಸಿಕೆ ಉಂಟಾಗುವದೊ ವಾಸ್ತುಪುರುಷನ ಅದೇ ದೇಹದ ಭಾಗವನ್ನು ಶೋಧಿಸಿ, ತೆಗೆದು ಹಾಕಬೇಕು.

ಏನೇ ಆಗಲಿ ವಾಸ್ತುಪುರುಷನ ಅಂಗಗಳಲ್ಲಿ ನ್ಯೂನತೆ ಅಥವಾ ಆಧಿಕ್ಯಗಳು ಆಗದಂತೆ ನೋಡಬೇಕು. ನಗರ,ಗ್ರಾಮ, ದೇಶ, ಮನೆ, ಮಠ, ನಿರ್ಮಾಣ ಕಾರ್ಯದಲ್ಲಿ ಈ ತರಹದ ನ್ಯೂನಾತಿರೇಕಗಳು ಆಗದಂತೆ ನೋಡಿಕೊಳ್ಳಬೇಕು. ಇನ್ನು ಮುಂದೆ ಚತುಶ್ಶಾಲ, ದಿಶ್ಶಾಲ, ಏಕಶಾಲ ಎಂಬ ಹೆಸರುಳ್ಳ ಮನೆ ಪ್ರಭೇದ ಮತ್ತು ಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರಾ ಐವತ್ತನಾಲ್ಕನೆಯ ಅಧ್ಯಾಯ ಮುಗಿದುದು*

ರಂಗವಲ್ಲಿಯಿಂದ ರೇಖೆಯನ್ನು ರಚಿಸಬೇಕು. ಸುತ್ತಲೂ ದಾರವನ್ನು ಕಟ್ಟಬೇಕು. ವಾಸ್ತು ಶಿಲ್ಪದ ಮರ್ಮವನ್ನು ಸರಿಯಾಗಿ ತಿಳಿದುಕೊಂಡು, ಈ ಮನೆಗಳಲ್ಲಿ ಹೊರಸುತ್ತಿನಲ್ಲಿ ಮೂವತ್ತೆರಡು ದೇವತೆಗಳನ್ನು, ಒಳಗಡೆ ಹದಿಮೂರು ದೇವತೆಗಳನ್ನು, ಒಟ್ಟು ನಲವತ್ತೈದು ದೇವತಾ ಸ್ಥಾನಗಳನ್ನು ಮಾಡಿ ಅದರ ಮೇಲೆ ಆ ದೇವತೆಗಳನ್ನು ಆಹ್ವಾನಿಸಿ, ಪೂಜೆ ಮಾಡಬೇಕು. ಆ ದೇವತೆಗಳ ಹೆಸರುಗಳು ಇಂತಿವೆ: ಅಗ್ನಿ, ಪರ್ಜನ್ಯ, ಜಯಂತ, ಇಂದ್ರ, ಸೂರ್ಯ, ಸತ್ಯ, ಭೃಶ, ಆಕಾಶ, ವಾಯು, ವಾಸ, ವಿತಥ, ಗೃಹಕ್ಷತ್ರ, ಯಮ, ಗಂಧರ್ವ, ಭೃಂಗರಾಜ, ಮೃಗ, ಪತ್ರಗಣ, ದೌವಾರಿಕ, ಸುಗ್ರೀವ, ಪುಷ್ಪದಂತ, ವರುಣ, ಅಸುರ, ಶ್ರೇಷ್ಠ, ಪಾಪರೋಗ, ಅಹಿಮುಖ, ಚಲ್ಲಾಟ, ಸೋಮ, ಸರ್ಪ, ಅದಿತಿ, ದಿತಿ.

ಈ ಮೂವತ್ತೆರಡು ಜನ ದೇವತೆಗಳನ್ನು ವೇದಿಕೆಯ ಹೊರವಲಯದಲ್ಲಿ ಪೂಜಿಸಬೇಕು. ಒಳಬದಿಯಲ್ಲಿ ಆಪ, ಪಾವಿತ್ರ, ದಯ, ರುದ್ರ ಈ ನಾಲ್ಕು ದೇವತೆಗಳನ್ನು ಆಗ್ನೇಯ ಈಶಾನ್ಯ, ವಾಯುವ್ಯ, ನೈಋತ್ಯ ದಿಕ್ಕುಗಳಲ್ಲಿ ಮುಂದಾಗಿ ಆಹ್ವಾನಿಸಿ ಪೂಜಿಸಬೇಕು.

ಒಂಬತ್ತು ಸ್ಥಾನಗಳಲ್ಲಿ ಬ್ರಹ್ಮದೇವರನ್ನು, ಆ ಸ್ಥಾನದ ಸುತ್ತಮುತ್ತಲಿನ ಮನೆಗಳಲ್ಲಿ ಎಂಟು ಜನ ಸಾಧ್ಯರನ್ನು ಆಹ್ವಾನಿಸಬೇಕು. ಆರ್ಯಮಾ, ಸವಿತಾ, ವಿವಸ್ವಾನ್, ವಿಭುಧಹಿತ, ಮಿತ್ರ, ರಾಜಯಕ್ಷ, ಪೃಥ್ವೀಹರ, ಅಪವತ್ಸ ಎಂಬ ಹೆಸರಿನ ಎಂಟು ಜನರನ್ನು ಬ್ರಹ್ಮದೇವರ ಸುತ್ತಮುತ್ತಲಿನ ಸ್ಥಾನಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದರಲ್ಲಿ ಆಹ್ವಾನಿಸಬೇಕು. ಅಪ, ಅಪವತ್ಸ, ಪರ್ಜನ್ಯ, ದಿತಿ, ಅಗ್ನಿ ಈ ಐದು ದೇವತೆಗಳು ಒಂದೊಂದು ಅಂಕಣದ ಅಧಿಪತಿಗಳಾಗಿದ್ದಾರೆ. ಹೀಗೆ ಎಲ್ಲ ಮೂಲೆಗಳಲ್ಲಿಯೂ ಅಂಕಣದ ಅಧಿಪತಿ ದೇವತೆಗಳ ವರ್ಗಗಳನ್ನು ಏರ್ಪಡಿಸಬೇಕು.

ಈ ಕೋನ ವರ್ಗಗಳ ನಡುವೆ ಬ್ರಹ್ಮ ಪದದ ಸುತ್ತೂ ನಾಲ್ಕು ಕಡೆಗಳಲ್ಲಿ ಎರಡು ಮನೆ ಅಗಲ, ಮೂರು ಮನೆ ಉದ್ದ ಒಂದು ಪ್ರದೇಶ ನಿರ್ಮಿತವಾಗುವದು. ಪೂರ್ವದಿಂದ ಕ್ರಮವಾಗಿ ಅರ್ಯಮ, ವಿವಸ್ವಾನ್, ಮಿತ್ರ, ಪೃಥ್ವೀಹರ ಎಂಬ ದೇವತೆಗಳು ಅಧಿಪತಿಗಳಾಗಿರುವರು. ವಾಸ್ತು ಮಂಡಪದಲ್ಲಿ ಕೆಳಗೆ ಹೇಳಿದಂತೆ ರೇಖೆಗಳನ್ನು ನೇರವಾಗಿ ಎಳೆಯಬೇಕು. ವಾಯುದೇವತೆ ಮನೆಯಿಂದ ರೋಗ ದೇವತೆ ಮನೆಯವರೆಗೆ ಒಂದು ಸರಳ ರೇಖೆ ಎಳೆಯಬೇಕು.

ಇದರಂತೆ ಪಿತೃವಿನ ಮನೆಯಿಂದ ಅಗ್ನಿಯ ಮನೆಯವರೆಗೆ, ಮುಖ್ಯ ದೇವತಾ ಮನೆಯಿಂದ ಗೃಹದೇವತೆ ಮನೆಯವರೆಗೆ, ಶೇಷಸ್ಥಾನದಿಂದ ವಿತಥ ಸ್ಥಾನದವರೆಗೆ, ಸುಗ್ರೀವಸ್ಥಾನದಿಂದ ಅದಿತಿ ಸ್ಥಾನದವರೆಗೆ, ಮೃಗಸ್ಥಾನದಿಂದ ಪರ್ಜನ್ಯ ಸ್ಥಾನದವರೆಗೆ ರೇಖೆಗಳನ್ನು ಎಳೆಯಬೇಕು. ಅವುಗಳಿಗೆ 'ವಂಶರೇಖೆ' ಎಂದು ಕರೆಯಬೇಕು.

ಈ ರೇಖೆಗಳು ಒಂದಕ್ಕೊಂದು ಕೂಡುವ ಸಂಧಿಪ್ರದೇಶದಲ್ಲಿ ಪದ, ಮಧ್ಯ, ಸಮ, ಮರ್ಮ ಎಂಬ ನಾಲ್ಕು ಚೌಕೋನಗಳು ರೂಪಗೊಳ್ಳುವವು. ಅವುಗಳನ್ನು ತ್ರಿಶೂಲ ಎಂದು ಕರೆಯುವರು. ಕಂಬಗಳನ್ನು ನೆಡುವಾಗ ತೊಲೆಗಳನ್ನು ಏರಿಸುವಾಗ ನೆಲದೊಳಗೆ ಮೊಳೆ, ಮೂಳೆ, ಎಂಜಲು ಮುಂತಾದವು ಉಳಿಯದಂತೆ ಶೋಧಿಸಬೇಕು.

ವಾಸ್ತು ಪುರುಷನು ಹಿಂದೆ ಹೇಳಿದ ಸಕಲದೇವತಾ ಸ್ವರೂಪನಾಗಿ ಇರುವನು. 'ಪಿತೃ' ಪದದಿಂದ ಅಗ್ನಿಪದದ ವರೆಗಿನ ಅಂತರವೇ ಅವನ ನಿಲುವು. ಅಗ್ನಿ ಅವನ ತಲೆ, ಆಪನು ಅವನ ಮುಖ. ಪೃಥ್ವಿ ಆರ್ಯಮ ಅವನ ಹೆಗಲು. ಅಪವತ್ಸನು ಅವನ ಎದೆಯಲ್ಲಿ, ದಿತಿಪದ್ಮನು ಅವನ ಕಣ್ಣುಗಳಲ್ಲಿ, ಅದಿತಿ, ಜಯಂತರು ಅವನ ರೆಪ್ಪೆಗಳಲ್ಲಿ ನೆಲೆಸಿದ್ದಾರೆ. ಸರ್ಪ ಮತ್ತು ಇಂದ್ರರು ಅವನ ಭುಜಗಳಲ್ಲಿಯೂ ಇರುವರೆಂದು ಧ್ಯಾನಿಸಬೇಕು.

ಇದರಂತೆ ಸೂರ್ಯ, ಸತ್ಯ, ಭೃಶ, ಆಕಾಶ, ವಾಯು, ಈ ಐದು ದೇವತೆಗಳು ವಾಸ್ತು ಪುರುಷನ ಬಲದೋಳುಗಳಲ್ಲಿ ಇರುವರು, ಸೋಮ, ಭಲ್ಲಾಟ, ಮುಖ್ಯ, ಅಹಿ, ರೋಗ ಈ ಐವರು ಎಡದೋಳಿನಲ್ಲಿ ಇರುವರು. ರುದ್ರ, ರಾಜಯಕ್ಷರು ವಾಸ್ತುಪುರುಷನ ಎಡಗೈಯನ್ನು, ಸಾವಿತ್ರಿ ಮತ್ರ ಸವಿತೃಗಳು ಬಲಗೈಯನ್ನು ಆಶ್ರಯಿಸಿರುವರು.

ಇದರಂತೆ ವಿವಸ್ವಾನ್ ಮಿತ್ರರು ಜಠರದಲ್ಲಿ ವಾಸಿಸುವರು. ಕೈಗಳ ಮಣಿಕಟ್ಟುಗಳಲ್ಲಿ ಊಷ, ಪಾಸಯಕ್ಷ, ಎಡಪಕ್ಕದಲ್ಲಿ ಅಸುರ, ಶೇಷ ಬಲಪಕ್ಕದಲ್ಲಿ ಪತಿಥ, ಗ್ರಹಕ್ಷತ, ತೊಡೆಗಳಲ್ಲಿ ಯಮ, ವರುಣ, ಮಂಡೆಗಳಲ್ಲಿ ಗಂಧರ್ವ, ಪುಷ್ಕರ, ಮೊಳಕಾಲುಗಳಲ್ಲಿ ಭೃಂಗ, ಸುಗ್ರೀವ, ಪೃಷ್ಠಭಾಗದಲ್ಲಿ ದೌವಾರಿಕ, ಮತ್ತು ಮೇಢ್ರಾವಯವದಲ್ಲಿ ಜಯ, ಶುಕ್ರ, ಪಾದದಲ್ಲಿ ಪಿತೃಗಳು, ಆಶ್ರಯ ಹೊಂದಿದ್ದಾರೆ. ನಡುವಿನ ಒಂಬತ್ತು ಸ್ಥಾನಗಳಲ್ಲಿ ಸ್ವಯಂ ಬ್ರಹ್ಮದೇವನೇ ನೆಲಸಿರುವನು. ಬ್ರಹ್ಮನನ್ನು ಹೃದಯಸ್ಥಾನದಲ್ಲಿ ಧ್ಯಾನಿಸಿ, ಪೂಜಿಸಬೇಕು.

ರಾಜ, ಮಹಾರಾಜರ, ಅರಮನೆಗಳನ್ನು ಕಟ್ಟುವಾಗ ವಾಸ್ತುಮಂಡಲವು ಅರವತ್ನಾಲ್ಕು ಚೌಕು ಉಳ್ಳದ್ದು ಆಗಿರಬೇಕು. ಆ ಚೌಕುಗಳ ಒಂದೊಂದು ಮನೆಯಲ್ಲಿ ಒಬ್ಬೊಬ್ಬ ದೇವತೆಗೆ ಅರ್ಧಭಾಗ ಮಾತ್ರ ಸೇರಿರುವದು, ಹೊರಗಡೆಯ ನಾಲ್ಕು ಮೂಲೆ ಮನೆಗಳಲ್ಲಿ ಎಂಟು ಜನ ದೇವತೆಗಳನ್ನು ಆಹ್ವಾನಿಸಬೇಕು.

ಬ್ರಹ್ಮಸ್ಥಾನದಲ್ಲಿಯು ಎರಡೂ ಬದಿಗಳಲ್ಲಿ ಐವತ್ತು ಮನೆಗಳು ಏರ್ಪಡುವವು. ದೇವಾಲಯ ಅಥವಾ ಅರಮನೆಯ ನಿರ್ಮಾಣಮಾಡುವಾಗ, ವಾಸ್ತುಪುರುಷನ ಪೂಜೆಯನ್ನು ಮಾಡಬೇಕು. ವಾಸ್ತುಪುರುಷನ ಅಂಗಭೂತವಾದ ಪ್ರದೇಶದಲ್ಲಿ ಎಲ್ಲಿಯಾದರೂ ಮೊಳೆ ಮೂಳೆಗಳು ಬಿದ್ದಿದ್ದರೆ, ಯಜಮಾನನ ದೇಹದ ಯಾವುದಾದರೂ ಒಂದು ಅಂಗದಲ್ಲಿ ತುರುಕೆ ಉಂಟಾಗುವದು. ಆ ಪ್ರದೇಶದಲ್ಲಿ ಒಳಗಡೆ ಮೂಳೆ, ಕಬ್ಬಿಣ ಸಲಾಕೆ, ಏನಾದರೂ ಇದ್ದರೆ ಅವೆಲ್ಲವೂ ಯಜಮಾನನಿಗೆ ಅಪಾಯಕರ. ಆದುದರಿಂದ ಯಜಮಾನನ ದೇಹದ ಯಾವ ಭಾಗದಲ್ಲಿ ತುರಿಸಿಕೆ ಉಂಟಾಗುವದೊ ವಾಸ್ತುಪುರುಷನ ಅದೇ ದೇಹದ ಭಾಗವನ್ನು ಶೋಧಿಸಿ, ತೆಗೆದು ಹಾಕಬೇಕು.

ಏನೇ ಆಗಲಿ ವಾಸ್ತುಪುರುಷನ ಅಂಗಗಳಲ್ಲಿ ನ್ಯೂನತೆ ಅಥವಾ ಆಧಿಕ್ಯಗಳು ಆಗದಂತೆ ನೋಡಬೇಕು. ನಗರ,ಗ್ರಾಮ, ದೇಶ, ಮನೆ, ಮಠ, ನಿರ್ಮಾಣ ಕಾರ್ಯದಲ್ಲಿ ಈ ತರಹದ ನ್ಯೂನಾತಿರೇಕಗಳು ಆಗದಂತೆ ನೋಡಿಕೊಳ್ಳಬೇಕು. ಇನ್ನು ಮುಂದೆ ಚತುಶ್ಶಾಲ, ದಿಶ್ಶಾಲ, ಏಕಶಾಲ ಎಂಬ ಹೆಸರುಳ್ಳ ಮನೆ ಪ್ರಭೇದ ಮತ್ತು ಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ.

ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರಾ ಐವತ್ತನಾಲ್ಕನೆಯ ಅಧ್ಯಾಯ ಮುಗಿದುದು

## ಬಗೆಬಗೆಯ ಭವನಗಳ ನಿರ್ಮಾಣ ಕ್ರಮ | ಅಧ್ಯಾಯ - ೨೫೫

**ಸೂತ ಉವಾಚ :**

**ಚತುಃಶಾಲಂ ಪ್ರವಕ್ಷ್ಯಾಮಿ ಸ್ವರೂಪಂ ನಾಮತಸ್ತಥಾ**
**ಚತುಃಶಾಲಂ ಚತುರ್ದ್ವಾರೈರಲಿಂದ್ಯೈಃ ಸರ್ವತೋಮುಖಂ॥**

**ಸೂತ** :- ಚತುಃಶಾಲ ಕಟ್ಟಡದ ಸ್ವರೂಪವನ್ನೂ ಹೆಸರನ್ನೂ ಹೇಳುತ್ತೇನೆ ಕೇಳು. ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಬಾಗಿಲುಗಳು ನಾಲ್ಕು ಅಂಗಗಳು ಇರುವ ವಿಶಾಲ ಕಟ್ಟಡವು **ಚತುಃ ಶಾಲ** ಎನಿಸುವದು. ಅದಕ್ಕೆ 'ಸರ್ವತೋಭದ್ರ' ಎಂದೂ ಹೆಸರಿದೆ.

ದೇವಾಲಯ, ರಾಜಭವನ ಮುಂತಾದ ದೊಡ್ಡ ದೊಡ್ಡ ಕಟ್ಟಡಗಳಿಗೆ ನಾಲ್ಕು ಬಾಗಿಲುಗಳ ಚತುಃಶಾಲ ಗೃಹಗಳೇ ಪ್ರಶಸ್ತವಾಗಿವೆ. ಮೂರು ದಿಕ್ಕಿನಲ್ಲಿ ಬಾಗಿಲುಗಳಿದ್ದು, ಪಶ್ಚಿಮ ದಿಕ್ಕಿಗೆ ಬಾಗಿಲು ಇಲ್ಲದಿದ್ದರೆ ಆ ಕಟ್ಟಡಕ್ಕೆ **ನಂದಾವರ್ತ**ವೆಂದು ಹೆಸರು. ದಕ್ಷಿಣದಲ್ಲಿ ಬಾಗಿಲು ಇಲ್ಲದಿದ್ದರೆ ವರ್ಧಮಾನ, ಪೂರ್ವಕ್ಕೆ ಬಾಗಿಲು ಇಲ್ಲದಿದ್ದರೆ **ಸ್ವಸ್ತಿಕ,** ಉತ್ತರಕ್ಕೆ ಇಲ್ಲದಿದ್ದರೆ **''ರುಚಕ''** ಎಂದು ಹೆಸರು. ಉತ್ತರ ದಿಕ್ಕಿಗೆ ಕೈ ಸಾಲೆ ಇಲ್ಲದ ಮೂರು ದಿಕ್ಕುಗಳಲ್ಲಿಯೂ ಪ್ರಶಸ್ತವಾದ ಮೊಗಸಾಲೆವುಳ್ಳ ಕಟ್ಟಡಕ್ಕೆ **ಧಾನ್ಯಕ** ಎಂದೆನ್ನುತ್ತಾರೆ. ಇದು ಶುಭಕರ. ಇಂತಹ ಕಟ್ಟಡದಿಂದ ಸಂತಾನ ಲಾಭ ಹಾಗೂ ಕ್ಷೇಮಾಭಿವೃದ್ಧಿಗಳು ಉಂಟಾಗುವವು.

ಪೂರ್ವ ದಿಕ್ಕಿನಲ್ಲಿ ಮೊಗಸಾಲೆಯಿಲ್ಲದಿದ್ದರೆ ಅದು **ಸುಕ್ಷೇತ್ರ.** ಅದು ಆಯುರ್ವರ್ಧಕ. ಯಶಪ್ರದ. ಶೋಕ ಮೋಹ ಪರಿಹಾರಕ. ದಕ್ಷಿಣ ದಿಕ್ಕಿನಲ್ಲಿ ಮೊಗಶಾಲೆ ಇಲ್ಲದ ಮನೆ **ವಿಶಾಲ**ವೆನಿಸುವದು. ಇದರಿಂದ ವಂಶಕ್ಷಯ, ರೋಗಭೀತಿ. ಪಶ್ಚಿಮದಿಕ್ಕಿನಲ್ಲಿ ಪಡಸಾಲೆ ಇಲ್ಲದಿದ್ದರೆ **ಪಕ್ಷಘ್ನ** ಎನಿಸುವದು. ಇದರಿಂದ ಮಿತ್ರ, ಪುತ್ರ, ಬಂಧು ನಾಶ. ದಕ್ಷಿಣ ಮತ್ತು ಪಶ್ಚಿಮ ಕೈಸಾಲೆಯಿಂದ ಕೂಡಿದ ಮನೆ ಕ್ಷೇಮಕರ, ಸುಖಪ್ರದ. ಸಂತಾನಪ್ರದ. ಪಶ್ಚಿಮ, ಉತ್ತರಗಳಲ್ಲಿ ಕೈಸಾಲೆಯಿದ್ದಲ್ಲಿ ಅದಕ್ಕೆ ಯಮಸೂರ್ಯ ಅನ್ನುತ್ತಾರೆ. ಅಲ್ಲಿ ಇರುವವರಿಗೆ ರಾಜ, ಅಗ್ನಿಭಯ ಹಾಗೂ ವಂಶಾಭಿವೃದ್ಧಿ ಆಗುವದಿಲ್ಲ. ಉತ್ತರ ಹಾಗೂ ಪೂರ್ವದಲ್ಲಿ ಕೈಸಾಲೆಯಿದ್ದರೆ ಅದಕ್ಕೆ **ದಂಡ** ಅನ್ನುವರು. ಇಂತಹದರಲ್ಲಿ ಅಕಾಲಮೃತ್ಯು, ಪರಚಕ್ರ ಭಯವುಂಟು. ಪೂರ್ವ ದಕ್ಷಿಣದಲ್ಲಿ ಕೈಸಾಲೆಯಿದ್ದಲ್ಲಿ ಅದಕ್ಕೆ **ಧನವೆಂದು** ಹೆಸರು. ಇಂತಹ ಮನೆಯಲ್ಲಿ ಅಪಮಾನ, ಶಸ್ತ್ರಭಯವುಂಟು. ಇದರಂತೆ ಪೂರ್ವ ಪಶ್ಚಿಮಗಳಲ್ಲಿ ಕೈಸಾಲೆಯಿದ್ದ **'ಚುಲ್ಲಿ'** ಎಂಬ ಮನೆಯು, ಉತ್ತರ ದಕ್ಷಿಣ ದಿಕ್ಕಿನಲ್ಲಿ ಕೈಸಾಲೆಯಿರುವ ಕಾರ್ಯ ಎಂಬ ಮನೆಯು ಭಯಾಪಾಯಉಂಟುಮಾಡುವದು.

ಇನ್ನು ಮೇಲೆ ರಾಜಭವನದ ಲಕ್ಷಣ ಹೇಳುತ್ತೇನೆ. ಅರಮನೆಗಳು ಐದು ತೆರವಾಗಿರುವವು. ಒಂದನೂರಾ ಎಂಟುಮೊಳ ಉಳ್ಳದ್ದು ಉತ್ತಮ ಅರಮನೆ.

ಇನ್ನು ಮುಂದಿನ ನಾಲ್ಕುಬಗೆಯ ಅರಮನೆಗಳೆಲ್ಲ ಕ್ರಮವಾಗಿ ಎಂಟೆಂಟು ಮೊಳ ಕಡಿಮೆ ಆಗುವವು. ಈ ಐದು ಬಗೆಯ ಅರಮನೆಗಳಲ್ಲಿ ಮನೆಗಳ ಉದ್ದಳತೆಯು ಅಗಲಕ್ಕಿಂತ ಕಾಲುಪಾಲು ಹೆಚ್ಚಾಗಿರುವದು. ಯುವರಾಜರ ವಸತಿ ಗೃಹಗಳು ಅರಮನೆಯಂತೆ ಐದು ವಿಧವಾಗಿರುವವು. ಇದರಲ್ಲಿ ಉತ್ತಮ ಕಟ್ಟಡವು ಎಂಭತ್ತುಮೊಳ ಅಗಲವಾಗಿರುವದು. ಮುಂದಿನ ನಾಲ್ಕು ವಿಧವಾದ ಯುವರಾಜ ಭವನಗಳು ಆರಾರು ಮೊಳ ಕಡಿಮೆಯಾಗುತ್ತ ಹೋಗುವವು. ಈ ಐದೂ ಬಗೆಯ ಯುವರಾಜ ಭವನಗಳಲ್ಲಿ ಉದ್ದಳತೆಯು ಅಗಲಕ್ಕಿಂತ ಮೂರನೆಯ ಒಂದು ಪಾಲು ಹೆಚ್ಚಾಗಿರುವದು.

ಇದರಂತೆ ಸೇನಾಪತಿಯ ಮನೆಗಳು ಐದು ತರವಾಗಿವೆ. ಇವುಗಳಲ್ಲಿ ಉತ್ತಮವಾದುದರ ಅಗಲ ಅರವತ್ನಾಲ್ಕು ಮೊಳ. ಮಿಕ್ಕ ಮನೆಗಳು ಆರಾರು ಮೊಳ ಕಡಿಮೆ. ಇವುಗಳ ಉದ್ದಳತೆಯು ಅಗಲಕ್ಕಿಂತ ಆರರಲ್ಲಿ ಒಂದು ಪಾಲು ಅಧಿಕ ವಾಗಿರುವವು. ಮಂತ್ರಿಗಳ ಐದು ವಿಧವಾದ ಮನೆಗಳಲ್ಲಿ ಉತ್ತಮವಾದುದು ಅರವತ್ತು ಮೊಳ ಅಗಲ. ಮುಂದಿನವು ನಾಲ್ಕು ಮೊಳ ಕಡಿಮೆಯಾಗುತ್ತ ಹೋಗುವವು.

ಸಾಮಂತರ ಐದುತೆರನಾದ ಮನೆಗಳಲ್ಲಿ ನಲವತ್ತೆಂಟು ಮೊಳದ್ದು ಉತ್ತಮ. ನಾಲ್ಕು ಮೊಳ ಅಗಲ. ಮುಂದಿನವು ನಾಲ್ಕು ಮೊಳ ಕಡಿಮೆಯಾಗುತ್ತಹೋಗುವವು. ಸಾಮಂತರ ಐದುತೆರನಾದ ಮನೆಗಳಲ್ಲಿ ನಲವತ್ತೆಂಟು ಮೊಳದ್ದು ಉತ್ತಮ. ನಾಲ್ಕು ಮೊಳ ಕಡಿಮೆಯಾಗುತ್ತಹೋಗುವವು ಮುಂದಿನ ಮನೆಗಳು.

ಶಿಲ್ಪಿ, ಕಂಚುಕಿ, ವೇಶ್ಯೆ, ಮುಂತಾದವರ ಮನೆಗಳು ಪಂಚವಿಧವಾಗಿದ್ದು ಇಪ್ಪತ್ತೆಂಟು ಮೊಳ ಅಗಲವಿದ್ದದ್ದು ಉತ್ತಮ. ಮುಂದಿನವು ಎರಡೆರಡು ಮೊಳ ಕಡಿಮೆ. ಅಗಲದ ಎರಡುಪಟ್ಟು ಉದ್ದ. ದೂತ, ಸೇವಕ ಮುಂತಾದವರ ಮನೆಗಳು ಹನ್ನೆರಡು ಮೊಳ ಅಗಲ. ಮುಂದಿನವು ಅರ್ಧಮೊಳ ಕಡಿಮೆ. ಜೋತಿಷಿ, ಗುರು, ವೈದ್ಯ, ಸಭಾಸದ, ಪುರೋಹಿತ, ಇವರ ವಸತಿ ಸ್ಥಾನಗಳು ನಲವತ್ತುಮೊಳ ಅಗಲವಾಗಿರುವದು ಉತ್ತಮ ಗೃಹಗಳು, ಕ್ರಮವಾಗಿ ಉಳಿದ ಮನೆಗಳು ನಾಲ್ಕು ಮೊಳ ಕಡಿಮೆ ಆಗುವವು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ವರ್ಣದವರ ಮನೆಗಳು ಮೂವತ್ತೆರಡು ಮೊಳ ಅಗಲವಾಗಿರುವದು ಉತ್ತಮ. ಮುಂದೆ ನಾಲ್ಕು ಮೊಳ ಕಡಿಮೆ ಆಗುತ್ತ ಕೊನೆಗೆ ಹದಿನಾರು ಮೊಳದವರೆಗೆ ಇಳಿಯುವದು. ಹೊಲೆಯರಮನೆಯ ಅಳತೆಯು ಇದಕ್ಕಿಂತ ಕಡಿಮೆಯಾಗಿರುವದು. ಸೇನಾಪತಿಯ ಮನೆ ಹಾಗೂ ಅರಮನೆಯ ನಡುವೆ ರಾಜರ ವಸತಿಗೃಹ, ಹಾಗೂ ಬೊಕ್ಕಸದ ಮನೆಯನ್ನು ನಿರ್ಮಿಸಬೇಕು. ಸೇನಾಪತಿ ಹಾಗೂ ಬ್ರಾಹ್ಮಣಾದಿ ನಾಲ್ಕು ವರ್ಣದವರ ನಡುವೆ ರಾಜ ಪೂಜ್ಯರಾದ ಗುರುಗಳ, ಜ್ಞಾನಿಗಳ ವಸತಿಯನ್ನು ನಿರ್ಮಿಸಬೇಕು. ಮಂತ್ರಿ, ಸೇನಾಪತಿ ಮಕ್ಕಳ ಮನೆಯ ಅಳತೆಯಷ್ಟೇ ಇರಬಹುದು.

ರಾಜರ ಮನೆಯ ಅಳತೆಗೆ ಎಪ್ಪತ್ತನ್ನು ಕೂಡಿಸಿ, ಹದಿನಾಲ್ಕರಿಂದ ಭಾಗಿಸಬೇಕು. ಅದರಿಂದ ಬರುವ ಲಬ್ಧವನ್ನು ವ್ಯಾಸವಾಗಿ ಇಟ್ಟುಕೊಂಡು ಶಾಲೆಯನ್ನು ಕಟ್ಟಿಸಬೇಕು.

ಈ ಅಳತೆಗೆ ಮೂವತ್ತೈದನ್ನು ಕೂಡಿಸಿ ಬರುವಲಬ್ಧವು ಕೈಸಾಲೆಯ ಅಳತೆ ಎಂದು ತಿಳಿಯಬೇಕು. ಅದರಂತೆ ಬ್ರಾಹ್ಮಣರ ಮನೆಯ ಕೈಸಾಲೆಯ ಪರಮಾವಧಿ ಅಳತೆಯು ಮೂವತ್ತಾರು ಮೊಳ ಏಳು ಅಂಗುಲ ಉದ್ದವಾಗಿರಬೇಕು. ಅದಕ್ಕಿಂತ ಮಿಕ್ಕಿರಬಾರದು. ಕ್ಷತ್ರಿಯನ ಶಾಲೆಯು ಮಾತ್ರ ಬ್ರಾಹ್ಮಣನಿಗಿಂತ ಹತ್ತು ಬೆರಳು ಹೆಚ್ಚಾಗಿರಬೇಕು. ವೈಶ್ಯರ ಕೈಸಾಲೆಯು ಇಪ್ಪತ್ತೈದು ಮೊಳ ಹದಿಮೂರು ಅಂಗುಲ, ಹಾಗೂ ಶೂದ್ರರದು ಇಪ್ಪತ್ತೈದು ಮೊಳ ಹದಿನೈದು ಅಂಗುಲ ಇರಬೇಕು.

ಮನೆಯ ಆವರಣಕ್ಕೆ ಸೇರಿದಂತೆ ಮನೆಯ ಮುಂದೆ ಹಾದಿ ಇದ್ದರೆ. ಅದು **'ಸೊಶ್ಚೀಕ'** ಅನಿಸುವದು. ಮನೆಯ ಹಿಂದಿದ್ದರೆ **'ಶ್ರೇಯೂಚ್ಛಯ,'** ಮನೆಯ ಎಡಬಲದಲ್ಲಿ ಬೀದಿ ಇದ್ದರೆ ಅದಕ್ಕೆ **'ಸಾವಷ್ಟಂಭ'** ಎನ್ನುವರು. ಮನೆಯ ನಾಲ್ಕು ಕಡೆಗೆ ಬೀದಿಯಿದ್ದರೆ ಅದಕ್ಕೆ **'ಸುಸ್ಥಿತ'** ಎಂದು ಹೆಸರು. ಇಂತಹ ಬೀದಿಯ ಬದಿಯಲ್ಲಿರುವ ಮನೆಗಳು ಎಲ್ಲ ವರ್ಣದವರಿಗೂ ಶ್ರೇಯಸ್ಕರವಾಗಿವೆ.

ಮನೆಯ ವಿಸ್ತಾರವನ್ನು ಹದಿನಾರು ಪಾಲುಮಾಡಿ ಬರುವ ಲಬ್ಧಕ್ಕೆ ನಾಲ್ಕನ್ನು ಕೂಡಿಸಿದರೆ, ಎಷ್ಟಾಗುವದೋ ಅಷ್ಟೇ ಎತ್ತರವಿರಬೇಕು ಮನೆಯ ಮೊದಲನೆಯ ಅಂತಸ್ತು. ಎರಡನೆ ಅಂತಸ್ತಿನ ಎತ್ತರವು ಮನೆಯ ವಿಸ್ತಾರದ ಹದಿನೆಂಟನೆಯ ಒಂದು ಭಾಗವಿರಬೇಕು. ಮುಂದಿನ ಎಲ್ಲ ಅಂತಸ್ತುಗಳು ಇದೇ ಪ್ರಮಾಣದಲ್ಲಿ ಇರಬೇಕು.

ಮನೆಯ ಗೋಡೆಗಳನ್ನು ಸುಟ್ಟ ಇಟ್ಟಿಗೆಗಳಿಂದಾಗಲಿ, ಕಟ್ಟಿಗೆ ಅಥವಾ ಕಲ್ಲು, ಮಣ್ಣುಗಳಿದಾಗಲಿ ಕಟ್ಟಬೇಕು. ಗೋಡೆಯು ಕಟ್ಟಡದ ವಿಸ್ತಾರದ ಹದಿನಾರನೆಯ ಒಂದು ಭಾಗದಷ್ಟು ಇರಬೇಕು. ಸಾಮಾನ್ಯವಾಗಿ, ಮನೆಯ ವಿಸ್ತಾರ ನಡುಮನೆಯ ಅಳತೆಗೆ ಅನುಗುಣ ವಾಗಿರಬೇಕು. ಬಾಗಿಲಿನ ಅಳತೆ ಅರವತ್ತೆಂಟು ಅಂಗುಲ. ಅದರ ಎರಡುಪಟ್ಟು ಆಗಿರಬೇಕು ಮನೆಯ ಎತ್ತರ. ಸಾಮಾನ್ಯವಾಗಿ ಬಾಗಿಲು ಎಷ್ಟು ಮೊಳ ಎತ್ತರವಾಗಿರುವದೋ, ಅಷ್ಟು ಅಂಗುಲ ದಪ್ಪವಾಗಿರಬೇಕು. ಒಳಗಡೆ ಬಾಗಿಲಿನ ಮೇಲೆ ಹಾಕುವ ದೊಡ್ಡ ಪಟ್ಟಿಯು ಬಾಗಿಲದ ಅಳತೆಯ ನಾಲ್ಕರ ಒಂದು ಪಾಲು ಇರಬೇಕು. ಅದನ್ನು ಅತ್ತಿಯ ಮರದ ಕಟ್ಟಿಗೆಯಿಂದ ಮಾಡುವದು ಒಳ್ಳೆಯದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರಾ ಐವತ್ತೈದನೆಯ ಅಧ್ಯಾಯ ಮುಗಿದುದು*

—o—

## ಮನೆಯ ಕಂಭ ಮತ್ತು ಬಾಗಿಲಗಳ ಪ್ರಮಾಣ | ಅಧ್ಯಾಯ - ೨೫೬

**ಸೂತ ಉವಾಚ :**

**"ಅಥಾತಃ ಸಂಪ್ರವಕ್ಷ್ಯಾಮಿ ಸ್ತಂಭಮಾನವಿನಿರ್ಣಯಂ।**
**ಕೃತ್ವಾ ಸ್ವಭವನೋಚ್ಛ್ರಾಯಂ ಸದಾಶಸ್ತ ಗುಣಂ ಬುಧೈ:॥**

**ಸೂತ** :- ಇನ್ನು ಮುಂದೆ, ಕಟ್ಟಗಳಲ್ಲಿ ನಡುನಡುವೆ ಕೂಡಿಸುವ ಕಂಬಗಳ ಪ್ರಮಾಣವನ್ನು ಹೇಳುತ್ತೇನೆ. ಮನೆಯ ಎತ್ತರವನ್ನು ಏಳರಿಂದ ಗುಣಾಕಾರಮಾಡಿ ಬಂದದ್ದಕ್ಕೆ ಎಂಭತ್ತರಿಂದ ಭಾಗಿಸಬೇಕು. ಆ ಭಾಗದ ಅಳತೆಯಷ್ಟು ಕಂಬವು ದಪ್ಪವಾಗಿರಬೇಕು.

ಅದೇ ಮನೆಯ ಎತ್ತರಕ್ಕೆ ಒಂಭತ್ತರಿಂದ ಗುಣಾಕಾರ ಮಾಡಿ ಎಂಭತ್ತರಿಂದ ಭಾಗಾಕಾರಮಾಡಿ ಬರುವ ಪ್ರಮಾಣದಷ್ಟು ಕಂಬದ ತಲವು ಸ್ಥೂಲವಾಗಿರಬೇಕು. ಕಂಬಗಳಿಗೆ ನಾಲ್ಕು ಮೂಲೆಗಳಿದ್ದರೆ **'ರುಚಕ'**, ಎಂಟಿದ್ದರೆ **'ವಜ್ರ'**ವೆಂಬ ಹೆಸರು. ಹದಿನಾಲು ಏಣುಗಳು ಸ್ಥಂಭಕ್ಕೆ **'ದ್ವಿವಜ್ರ'** ಅನ್ನುವರು. ಮೂವತ್ತೆರಡು ಏಣುಗಳಿದ್ದರೆ **ಪುಲೀನಕ** ಎಂದು ಹೆಸರು. ನಟ್ಟನಡು ಮಾತ್ರ ಗುಂಡಾಗಿ ಮೇಲೆ ಕೆಳಗೆ ಏಣುಗಳಿದ್ದರೆ ಅದಕ್ಕೆ **'ವೃತ್ತಸ್ಥಂಬ'**ವೆಂದು ಹೆಸರು. ಹೀಗೆ ಕಂಬಗಳು ರುಚಕ, ವಜ್ರ, ದ್ವಿವಜ್ರ, ಪುಲೀನಕ, ವೃತ್ತ, ಎಂದು ಐದು ವಿಧವಾಗಿರುವವು. ಈ ಕಂಬಗಳನ್ನು ಕಮಲ ಅಥವಾ ಬಗೆಬಗೆಯ ಹೂಬಳ್ಳಿ, ಕಲಶ, ಕನ್ನಡಿ, ಎಲೆ ಮುಂತಾದ ತರತರದ ಚಿತ್ರಗಳಿಂದ ಅಲಂಕರಿಸಬೇಕು.

ಕಂಬಗಳ ಮೇಲೆ ಇರಿಸುವ ತೊಲೆಯ ಅಳತೆಯು ಕಂಬದಷ್ಟೆ ಇರಬಹುದು. ಅಡ್ಡಹಾಕುವ ಜಂತಿಗಳು ಕಿರಿದಾಗಿರಬೇಕು. ಈ ಕಿರು ತೊಲೆಗಳ ಅಳತೆಯು ಹಿರಿತೊಲೆಗಳಿಗಿಂತ ಕಾಲುಪಾಲು ಕಡಿಮೆ ಇರಬೇಕು. ಇದರಂತೆ ಉಪ್ಪರಿಗೆಗಳು ಕೆಳಗಿನ ಮನೆಗಳಿಗಿಂತ ಕಾಲುಪಾಲು ಕಿರಿದಾಗುತ್ತ ಹೋಗಬೇಕು. ಇನ್ನು ಮುಂದೆ ಪ್ರಶಸ್ತ ಲಕ್ಷಣವುಳ್ಳ ಬಾಗಿಲುಗಳನ್ನು ಹೇಳುತ್ತೇನೆ.

ಪೂರ್ವಕ್ಕೆ ಅಭಿಮುಖವಾಗಿರುವ ದ್ವಾರವನ್ನು **ಇಂದ್ರದ್ವಾರ** ಅನ್ನುವರು. ದಕ್ಷಿಣಾಭಿಮುಖವಾಗಿದ್ದುದು **ಯಾಮ್ಯ.** ಪಶ್ಚಿಮಾಭಿಮುಖ ವಾಗಿದ್ದರೆ **ವಾರುಣ,** ಉತ್ತರಾಭಿಮುಖವಾಗಿದ್ದಲ್ಲಿ **ಭಲ್ಲಾಟ**ವೆಂದು ಕರೆಯುತ್ತಾರೆ.

ಬಾಗಿಲಿಗೆ ನೇರವಾಗಿ ಯಾವ ಅಡ್ಡಿಯೂ ಇರಬಾರದು. ದ್ವಾರಕ್ಕೆ ಬೀದಿ ಅಡ್ಡವಾದರೆ **ವಂಶನಾಶ.** ಗಿಡವು ಅಡ್ಡವಾದರೆ **ದ್ವೇಷ.** ಕೆಸರಿದ್ದರೆ ದುಃಖ, ಭಾವಿಯಿದ್ದರೆ **ಅಪಸ್ಮಾರ** ರೋಗ. ಜಲಪ್ರವಾಹಯಿದ್ದರೆ **ದುಃಖ.** ಗೂಟವಿದ್ದರೆ **ಅಗ್ನಿಭಯ.** ದೇವತಾ ಮೂರ್ತಿಯಿದ್ದರೆ ವಿನಾಶ. ಕಂಬವಿದ್ದರೆ ಹೆಣ್ಣಿನ ಮೂಲಕ ದುಃಖ. ಮತ್ತೊಂದು ಮನೆಯೇ ಅಡ್ಡಯಿದ್ದರೆ ಯಜಮಾನನಿಗೆ ಕೇಡು. ತಿಪ್ಪೆ ಗೊಬ್ಬರ ಗುಂಡಿಗಳಿದ್ದರೆ ಮನೆಯ ಒಡತಿಗೆ ವ್ಯಭಿಚಾರದ ಅಪವಾದ. ಈ ಮುಂತಾದ

ದೋಷಗಳು ಸಂಭವಿಸುವವು. ಮನೆಯ ಎತ್ತರದ ಎರಡುಪಟ್ಟು ಅಂತರ ಬಿಟ್ಟುಏನೇ ಇದ್ದರೂ ಯಾವ ದೋಷವು ಇಲ್ಲ.

ಬಾಗಿಲಿನ ಅಳತೆಯು ವಾಸ್ತು ಶಾಸ್ತ್ರದಲ್ಲಿ ಹೇಳಿದ್ದಕ್ಕಿಂತ ಹೆಚ್ಚಿದ್ದರೆ ರಾಜಭಯ. ಕಡಿಮೆಯಿದ್ದರೆ ಕಳ್ಳರ ಭಯ. ಬಾಗಿಲಿನ ಮೇಲೆ ಬಾಗಿಲಿದ್ದರೆ ಮೃತ್ಯು. ಮನೆಯ ಒಳ ಬಾಗಿಲುಗಳು ತಲೆಬಾಗಿಲಿಗಿಂತ ದೊಡ್ಡದಾಗಿದ್ದರೆ ಸಂಕಟ ಅದರಿಂದ ಯಜಮಾನನಿಗೆ ನಾಶ.

ಮನೆಯ ಬಾಗಿಲದ ಮುಂಭಾಗದಲ್ಲಿ, ಕಲಶ, ಹೂವು, ಬಳ್ಳಿ ಮುಂತಾದವುಗಳನ್ನು ಬತ್ತಿ ಬೆಳಿಸಿ ಅಲಂಕಾರ ಮಾಡಬೇಕು. ಅದನ್ನು ರಂಗವಲ್ಲಿ, ಅಕ್ಷತೆ, ನೀರುಗಳಿಂದ ಪೋಷಿಸಿ, ಹಚ್ಚಿಸಿ ಪೂಜಿಸಬೇಕು. ಮನೆಯ ಪೂರ್ವಕ್ಕೆ ಆಲದಮರ ದಕ್ಷಿಣಕ್ಕೆ **ಅತ್ತಿಮರ, ಪಶ್ಚಿಮಕ್ಕೆ ಅರಳಿ,** ಗಿಡಗಳಿದ್ದರೆ ಶುಭ. ಮತ್ತಿ ಹೊನ್ನೆ ಮುಂತಾದ ಮರಗಳು ಸುತ್ತಲೂ ಇದ್ದರೆ ಅಶುಭ. ಹೆಂಡತಿ ಮಕ್ಕಳಿಗೆ ಅನಿಷ್ಟ.

ಕಟ್ಟಿಸುವುದಕ್ಕಿಂತ ಮೊದಲೇ ಬೆಳೆದಿದ್ದರೆ, ಏನಾದರೂ ಅವುಗಳನ್ನು ಕಡಿಯ ಬಾರದು. ಆ ಗಿಡಗಳ ಬಳಿಯಲ್ಲಿಯೇ ಸುರಹೊನ್ನೇ, ಬನ್ನಿ, ಅಶೋಕ, ದ್ರಾಕ್ಷಿ, ದಾಳಿಂಬೆ, ಸಂಪಿಗೆ, ತಿಲಕ ಮುಂತಾದ ಗಿಡಗಳನ್ನೂ ಬಗೆಬಗೆಯ ಬಳ್ಳಿಗಳನ್ನು ಹಚ್ಚಿ ಸುತ್ತಲೂ ಹಂದರ ಹಬ್ಬಿಸಿ ಪರಿಸರ ಸುಂದರವಾಗುವಂತೆ ಮಾಡಬೇಕು. ಇದರಂತೆ ಮಲ್ಲಿಗೆ, ತೆಂಗಿನಗಿಡ, ಬಾಳೆ, ನಿಂಬೆ, ಅಡಿಕೆ, ಜಾಜಿ, ತಾವರೆ, ಹಲಸು, ಸಾವಂತಿಗೆ, ಪಾದರಿ ಮುಂತಾದ ಗಿಡಬಳ್ಳಿಗಳನ್ನು ಮನೆಯ ಸುತ್ತಲೂ ಹಚ್ಚುವುದು ಶ್ರೇಯಸ್ಕರವಾಗಿದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರ ಐವತ್ತಾರನೆಯ ಅಧ್ಯಾಯ ಮುಗಿದುದು.*



## ಗೃಹನಿರ್ಣಯ

ಅಧ್ಯಾಯ - ೨೫೭

**ಸೂತ ಉವಾಚ :**

"ಉದಗಾದಿಪ್ಲವಂ ವಾಸ್ತು ಸಮಾನಶಿಖರಂ ತಥಾ।
ಪರೀಕ್ಷ್ಯ ಪೂರ್ವವತ್ಕುರ್ಯಾತ್ಸ್ತಂಭೋಚ್ಛ್ರಾಯಂ ವಿಚಕ್ಷಣಃ॥

**ಸೂತ :-** ಕಟ್ಟಡದ ಒಳಗೆ ಬಿದ್ದ ನೀರು ಉತ್ತರ ಅಥವಾ ಈಶಾನ್ಯ ದಿಕ್ಕಿಗೆ ಹರಿದು ಹೋಗುವಂತೆ ಅದರ ನೆಲಗಟ್ಟಣೆಯನ್ನು ನುಣುಪಾಗಿಯೂ ಹಾಳತವಾಗಿಯು ನೋಡಲು ಸಮವಾಗಿ ಕಾಣುವಂತೆ ಮಾಡಬೇಕು.

ಇಂತಹ ಸ್ಥಳವನ್ನು ಪರೀಕ್ಷಿಸಿ ಹಿಂದೆ ಹೇಳಿದಂತೆ ಕಂಬಗಳನ್ನು ನಿಲ್ಲಿಸಬೇಕು. ಜಾಣನು ತನ್ನ ಮನೆಯನ್ನು ಮಂತ್ರಿಯ ಮನೆ, ನಾಲ್ಕು ಬೀದಿಗಳ ಕೂಟ, ಜೂಜಾಟದ ಅಡ್ಡೆ ಮತ್ತು ದೇವಾಲಯಗಳ ಹತ್ತಿರ ಕಟ್ಟಿಸಬಾರದು. ಮನೆಗಳು ನಾಲ್ಕು ವಿಧ. ಬಚ್ಚಲ ನೀರು ಮುಂಭಾಗದಲ್ಲಿ ನಿಲ್ಲದೆ ಹರಿದು ಹೋಗುತ್ತಿದ್ದರೆ ಶ್ರೇಷ್ಠ. ಹಿಂಭಾಗದಲ್ಲಿ ಹರಿದು ಹೋದರೆ **ಸವ್ಯಾವರ್ತ** ಎನಿಸುವದು, ಅದೂ ಒಳ್ಳೆಯದೆ.

ಆದರೆ ಎಡಗಡೆಯಲ್ಲಿ ಮಾತ್ರ ಬಚ್ಚಲ ನೀರು ಹರಿಯುವಂತೆ ಮಾಡಬಾರದು. ಬಲಗಡೆಯಲ್ಲಿ ನೀರು ಹರಿಯಲು ಇಂಬು ಮಾಡಿಕೊಟ್ಟರೂ ಅಡ್ಡಿಯಿಲ್ಲ. ಮನೆಯನ್ನು ಕಟ್ಟಿಸುವ ಮುನ್ನ ಜ್ಯೋತಿಷ್ಕರನ್ನು ಕೇಳಿ ಮಹೂರ್ತ ನಿರ್ಧರಿಸಬೇಕು. ಒಳ್ಳೆಯ ಶುಭ ಮುಹೂರ್ತದಲ್ಲಿ ಮನೆ ಕಟ್ಟಿಸಲು ಆರಂಭಿಸಬೇಕು. ನಾಲ್ಕು ಬ್ರಾಹ್ಮಣರು ಕಂಬವನ್ನು ಪೂಜಿಸಬೇಕು. ನೆಲದ ಮೇಲೆ ರತ್ನಗಳನ್ನು ಹರವಿ ಎಲ್ಲ ಬೀಜಗಳನ್ನು ಅದರ ಮೇಲೆ ಹರಡಿ ಅಡಿಗಲ್ಲನ್ನು ಇರಿಸಬೇಕು.

ಯಜಮಾನನು ಬಿಳಿ ಬಟ್ಟೆ ಉಟ್ಟು ಕಂಬಕ್ಕೆ ಅಭಿಷೇಕಮಾಡಿ, ಅಕ್ಷತೆ ವಸ್ತ್ರಾಲಂಕಾರಗಳಿಂದ ಅಲಂಕರಿಸಿ, ಆ ಕಂಭವನ್ನು ವೇದಘೋಷ ಮಂಗಳ ವಾದ್ಯಗಳ ನಡುವೆ ಕಲ್ಲಿನ ಮೇಲೆ ನಿಲ್ಲಿಸಬೇಕು. ''ವಾಸ್ತೋಷ್ಪತೇ ಪ್ರತಿಜಾನೀಹಿ'' ಎಂಬ ಮಂತ್ರಗಳಿಂದ ತುಪ್ಪಗಳಿಂದ ಹೋಮಮಾಡಬೇಕು. ರುಚಿಕರ ಪಾಯಸ ಮುಂತಾದ ಪಕ್ವಾನ್ನ ಮಾಡಿಸಿ ಬ್ರಹ್ಮಭೋಜನ ಮಾಡಿಸಬೇಕು. ಮನೆಯನ್ನು ಅಳತೆ ಮಾಡಿ ದಾರ ಕಟ್ಟಿದಾಗ, ಕಂಬವನ್ನು ನಿಲ್ಲಿಸುವಾಗ, ಬಾಗಿಲು ಕೂಡಿಸುವಾಗ, ಮನೆಯನ್ನು ಕಟ್ಟಿದ ಮೇಲೆ, ಅದನ್ನು ಪ್ರವೇಶಮಾಡುವಾಗ ವಾಸ್ತುಶಾಂತಿಯನ್ನು ಐದು ಸಲ ಮಾಡಬೇಕು.

ಹೊಸಮನೆ ಕಟ್ಟುವದಕ್ಕಿಂತ ಮೊದಲು ಅದರ ನಕ್ಷೆಯನ್ನು ಚೆನ್ನಾಗಿ ರೇಖೆ ಎಳೆದು ಬರೆಯಬೇಕು. ನಕ್ಷೆಯಲ್ಲಿ ರೇಖೆಯನ್ನು ಎಳೆಯುವದಕ್ಕೆ ಬಲಗೈ ಹೆಬ್ಬೆರಳು ಅಂದರೆ ಅಂಗುಷ್ಠ ಮತ್ತು ಅದರ ಮಗ್ಗುಲಿನ ತರ್ಜನಿಬೆರಳು ಉಪಯೋಗಿಸಬೇಕು. ರೇಖೆಗಳನ್ನು ಎಳೆಯಲು ಹವಳ, ರತ್ನ, ಚಿನ್ನ ಹೂವು, ಹಣ್ಣು, ಅಕ್ಷತೆ, ನೀರುಗಳನ್ನು ಉಪಯೋಗಿಸಬೇಕು. ಆದರೆ ಬೂದಿ, ಉಗುರು, ಆಯುಧ, ಎಲುವು, ಚರ್ಮ, ಇದ್ದಲಿ ಸೌದೆ ಮುಂತಾದವುಗಳಿಂದ ನಕ್ಷೆ ಎಂದೂ ಬರೆಯಬಾರದು. ಅದರಿಂದ ಅನಿಷ್ಟ ಸಂಭವಿಸುವದು. ದಾರಕಟ್ಟುವದು, ಕಂಬವನ್ನು ನಿಲ್ಲಿಸುವದು, ಹಾಗೂ ಗ್ರಹಪ್ರವೇಶ ಕಾಲಗಳಲ್ಲಿ ಆಗುವ ಶಕುನಗಳನ್ನು ಶಿಲ್ಪಿಯು ಲಕ್ಷ್ಯವಿಟ್ಟು ನೋಡಬೇಕು. ಅವುಗಳಿಂದ ಶುಭಾಶುಭಗಳು ಆಗುವುದುಂಟು.

ಸೂರ್ಯನಿಗೆ ಎದುರಾಗಿ ಯಾವುದಾದರೂ ಹಕ್ಕಿ ಭೀಕರ ಧ್ವನಿಯಲ್ಲಿ ಕೂಗಿದರೆ ಅಪಶಕುನ. ಯಜಮಾನನ ಯಾವುದಾದರೂ ಅವಯವ ಆದುರಿದರೆ ಅಮಂಗಳ, ಮನುಷ್ಯನ ಮೂಳೆಯು ಆ ನೆಲದಲ್ಲಿ ಇದೆ ಎಂಬುದರ ಸೂಚಕ. ಮನೆ ಕಟ್ಟುವ ಸ್ಥಳದಲ್ಲಿ ಅಂಕಣಗಳಿಂದ ಗುರುತುಮಾಡಿದ ತರುವಾಯ ನಾಯಿ, ನರಿ, ಕತ್ತೆ ಮುಂತಾದವುಗಳು ಪ್ರವೇಶ ಮಾಡಿದರೆ ಆ ಸ್ಥಳಗಳಲ್ಲಿ ಆಯಾ ಪ್ರಾಣಿಗಳ ಮೂಳೆಗಳು ಹುಗಿದಿವೆಯೆಂದು ತಿಳಿಯಬೇಕು.

ಈಶಾನ್ಯ ದಿಕ್ಕಿನಲ್ಲಿ ಕಾಗೆಯು ಕೂಗಿದರೂ ಆ ಸ್ಥಳದಲ್ಲಿ ಒಂದೆಡೆ ಗುಪ್ತ ನಿಧಿ ಇದೆ ಎಂದು ತಿಳಿಯಬೇಕು. ಅಳತೆಗಾಗಿ ಕಟ್ಟಿದ ದಾರವು ಕಿತ್ತಿಹೋದರೆ ಅಪಶಕುನ. ಗೋಡೆ ಕೆಳಗಾದರೆ, ನೆಲದಲ್ಲಿ ಇದ್ದಲು ಸಕ್ಕರೆ ಮಡಕೆ ಚೂರು ದೊರೆತರೆ ಅಮಂಗಳ. ನೆಲದಲ್ಲಿ ಶಂಖ, ಸಿಂಪುಗಳು ದೊರೆತರೆ ಆ ಮನೆಯ ಹೆಂಗಸರು ವ್ಯಭಿಚಾರಿಣಿಯಾಗುವರು. ಬುನಾದಿ ಹಾಕಿ ಮೇಲೆ ಭದ್ರವಾಗಿರಿಸಿದ ಕಲ್ಲಿನ ಮೇಲೆ ಕಂಬವು ಜಾರಿದರೂ, ಕಲ್ಲು ತನ್ನ ಸ್ಥಾನದಿಂದ

ಕದಲಿದರೂ ಮೃತ್ಯುಭೀತಿ. ಕಂಬದ ಅಡಿಯಲ್ಲಿ ಗಿಡಮೂಲಿಕೆ, ಬೀಜಗಳನ್ನು ಇಡಬೇಕು. ಕಂಬದ ಮೇಲೆ ಕಾಗೆ-ಗುಬ್ಬಿಗಳು ಕೂಡದಂತೆ ಮರೆಗಾಗಿ ಒಂದು ಕೊಡೆಯನ್ನು ಕಟ್ಟಬೇಕು. ಅನಂತರ ಪ್ರದಕ್ಷಿಣವಾಗಿ ಉಳಿದ ಕಂಬಗಳನ್ನು ನಿಲ್ಲಿಸಬೇಕು. ಅನಂತರ ಬಲಬದಿಯಿಂದ ಉಳಿದ ಕಂಬಗಳನ್ನು ನಿಲ್ಲಿಸುತ್ತ ಹೋಗಬೇಕು.

ಕಂಬದ ಮೇಲೆ ಹಣ್ಣು ಕಾಯಿಗಳಿಂದ ನಳನಳಿಸುವ ಮರದ ಕೊಂಬೆಗಳನ್ನು ಕಟ್ಟಬೇಕು. ಕಂಬ, ಆಲಯ, ಬಾಗಿಲು, ವಾಸಗ್ರಹ ಇವೆಲ್ಲವೂ ತುಸು ಈಶಾನ್ಯದಿಕ್ಕಿಗೆ ಅಭಿಮುಖವಾಗಿರಬೇಕು. ನಿಷಿದ್ಧ ದಿಕ್ಕಿಗೆ ಮನೆ ಕಟ್ಟಬಾರದು. ಮನೆಯನ್ನು ಕಟ್ಟಿದ ಬಳಿಕ ಮುಂದೆ ಅದನ್ನು ಒಂದೇ ಭಾಗದಲ್ಲಿ ವಿಸ್ತರಿಸುತ್ತ ಹೋಗದೇ ಎಲ್ಲ ಕಡೆಗೂ ವಿಸ್ತರಿಸಬೇಕು. ಮನೆಯನ್ನು ದಕ್ಷಿಣದಿಕ್ಕಿಗೆ ಬೆಳೆಸಿದರೆ ಮೃತ್ಯುಭೀತಿ, ಪಶ್ಚಿಮದಲ್ಲಿ ದ್ರವ್ಯನಾಶ, ಉತ್ತರಕ್ಕೆ ಬೆಳೆಸಿದರೆ ಸಂತಸ.

ಆಗ್ನೇಯದಲ್ಲಿ ಅಗ್ನಿಭೀತಿ, ನೈಋತ್ಯಕ್ಕೆ ಮಕ್ಕಳಹಾನಿ, ವಾಯವ್ಯಕ್ಕೆ ವಾತರೋಗ. ಆದ್ದರಿಂದ ಸುತ್ತಲೂ ಬೆಳೆಸಿ ಬೇರೆ ಬೇರೆ ಉಪಗೃಹಗಳನ್ನು ಕಟ್ಟಿಸಿ, ವಿಸ್ತಾರವಾಗಿ ಸಮನಾಗಿ ಮನೆಯನ್ನು ಬೆಳೆಸಬೇಕು. ಮನೆಯ ಅಡಿಗೆಮನೆ ಆಗ್ನೇಯ ದಿಕ್ಕಿಗೆ ಇರಬೇಕು. ಮನೆಯ ಸಾಮಾನುಗಳನ್ನು ನೈಋತ್ಯ ದಿಕ್ಕಿಗೆ ಉಗ್ರಾಣದಲ್ಲಿ ಇಡಬೇಕು. ಬಂದು ಹೋಗುವ ಜನರಿಗಾಗಿ ಒಂದು ವಿಶಾಲ ಕೋಣೆಯನ್ನು ಹೊರಗೆ ಕಟ್ಟಿಸಿ ಅಲ್ಲಿಯೇ ಸ್ನಾನದ ಮನೆಯನ್ನು ಮಾಡಿಸಬೇಕು. ಧನ-ಧಾನ್ಯಗಳನ್ನು ಸಂಗ್ರಹಿಸಿಡುವ ಕೋಣೆ ವಾಯವ್ಯದಲ್ಲಿ ಇರಬೇಕು. ಯಜಮಾನನಿಗೆ ಸುಖವನ್ನುಂಟುಮಾಡುವಂತೆ ಮನೆಯ ರಚನೆಯ ವಿಧಾನವು ಇರಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಂಡುನೂರ ಐವತ್ತೇಳನೆಯ ಅಧ್ಯಾಯ ಮುಗಿದುದು*

—o—

## ಮನೆಗೆ ಕಟ್ಟಿಗೆ ತರುವ ವಿಧಾನ

**ಅಧ್ಯಾಯ - ೨೫೮**

**ಸೂತ ಉವಾಚ :**

**ಅಥಾತಃ ಸಂಪ್ರವಕ್ಷ್ಯಾಮಿ ದಾರ್ವಾಹರಣಮುತ್ತಮಂ।**
**ಧನಿಷ್ಠಾಪಂಚಕಂ ಮುಕ್ತ್ವಾ ವಿಷ್ಟ್ಯಾದಿಕಮತಃ ಪರಂ॥**

**ಸೂತ** :- ಇನ್ನು ಮೇಲೆ ಮನೆ ಕಟ್ಟಲಿಕ್ಕಾಗಿ ಕಟ್ಟಿಗೆಯನ್ನು ತರುವ ವಿಧಾನ ಹೇಳುತ್ತೇನೆ. ಧನಿಷ್ಠಾನಕ್ಷತ್ರದಿಂದ ಹಿಡಿದು ಐದು ನಕ್ಷತ್ರಗಳನ್ನು ಬಿಟ್ಟು ವಿಷ್ಟಿ ಮೊದಲಾದ ನಿಷಿದ್ಧ ಸಮಯ ಕಳೆದು, ಜೋತಿರ್ವಿಜ್ಞರು ಹೇಳಿದ ಶುಭ ದಿನಗಳಲ್ಲಿ ಬುದ್ಧಿವಂತನಾದ ಮನುಷ್ಯನು ಕಟ್ಟಿಗೆ ತರಲು ಕಾಡಿಗೆ ಹೋಗಬೇಕು.

ಅಲ್ಲಿ ಮೊದಲು ವೃಕ್ಷದೇವತೆಯನ್ನು ಪೂಜೆಗೈಯ್ಯಬೇಕು. ಮನೆಯ ಕಟ್ಟಡಕ್ಕಾಗಿ ಕಡಿದ ಮರವು ಪೂರ್ವಕ್ಕಾಗಲಿ ಉತ್ತರಕ್ಕಾಗಿ ಬಿದ್ದರೆ ಶುಭ. ದಕ್ಷಿಣಕ್ಕೆ ಬಿದ್ದರೆ ಅಶುಭ. ಆಲದಗಿಡ, ಅರಳಿಗಿಡ ಮುಂತಾದ ಹಾಲು ಮರಗಳ ಕಟ್ಟಿಗೆಯನ್ನು ಮನೆಗೆ

ಉಪಯೋಗಿಸಬಾರದು. ಇದರಂತೆ ನಿರಂತರವೂ ಹಕ್ಕಿಗಳಿಗೆ ನೆಲೆವೀಡಾದ, ಹೆಮ್ಮರವನ್ನೂ ಮತ್ತು ಬೆಂಕಿಯಲ್ಲಿ ಸುಟ್ಟ, ಗಾಳಿಗೆ ಉರುಳಿಬಿದ್ದ, ಆನೆಯು ಢಿಕ್ಕಿಹೊಡೆದು ಕೆಡವಿದ, ಸಿಡಿಲುಹೊಡೆದ, ಅರ್ಧ ಒಣಗಿದ, ಮರಗಳನ್ನು ಮನೆಕಟ್ಟಲಿಕ್ಕೆ ಉಪಯೋಗಿಸಬಾರದು.

ಮತ್ತು ಬಸದಿ, ದೇವಾಲಯ, ನದೀ ಸಂಗಮ, ತಟಾಕ, ರುದ್ರಭೂಮಿ, ಬಾವಿ, ಕೆರೆ, ಕಟ್ಟೆಗಳಲ್ಲಿ ಬೆಳೆದ ಗಿಡಗಳನ್ನು ಗೃಹಕಾರ್ಯಕ್ಕಾಗಿ ಉಪಯೋಗಿಸಕೂಡದು. ಹಾಗೆ ಉಪಯೋಗಿಸಿದರೆ ಸಂಪತ್ತು ನಷ್ಟವಾಗುವದು. ಮತ್ತು ಮುಳ್ಳುಮರ, ಬೇವು, ತಾರೆ, ಮಾವುಗಳನ್ನು ಮನೆಗೆ ಉಪಯೋಗಿಸಬಾರದು.

ಮನೆಗೆ ಉಪಯೋಗಿಸಬಹುದಾದ ಮರಗಳೆಂದರೆ ಅಶೋಕ, ಹೊನ್ನೆ, ಮತ್ತಿ, ಹಿಪ್ಪೆ, ಹಲಸು, ದೇವದಾರು, ಧನ್ಯ, ಪೀಕದಾರ ಇವುಗಳಲ್ಲಿ ಒಂದು ಅಥವಾ ಎರಡು ಮೂರು ಜಾತಿಯ ಕಟ್ಟಿಗೆ ಬೆರೆಸಿ ಮನೆ ಕಟ್ಟಿದರೆ ಶುಭಕರ. ಕಿಂಶುಕ, ತುಂಬರ, ಸಿವನೆ, ಧನ್ಯ, ಪುಲಿಗೆ, ಹಲಸು, ಮತ್ತಿ, ಪದ್ಮಕ. ಈ ಗಿಡಗಳ ಕಟ್ಟಿಗೆಗಳನ್ನು ಬೇರೆ ಕಟ್ಟಿಗೆಗಳ ಜೊತೆಗೆ ಬೆರೆಸದೆ ಅದು ಒಂದೇ ಮರದ ಕಟ್ಟಿಗೆಯನ್ನು ಉಪಯೋಗಿಸಬಹುದು.

ಮರವನ್ನು ಕೊಡಲಿಯಿಂದ ಕಡಿದಾಗ, ಅದರೊಳಗೆ ಹಳದಿಬಣ್ಣವಿದ್ದರೆ ಅದರಲ್ಲಿ ಹಲ್ಲಿ, ಉಡ, ಓತಿಕಾಟ ಮುಂತಾದವುಗಳು ವಾಸಿಸಿರುತ್ತವೆ ಎಂದು ತಿಳಿಯಬೇಕು.

ಮಂಜಿಷ್ಟ ಬಣ್ಣವಿದ್ದರೆ ಕಪ್ಪೆ, ಕಪ್ಪಗಿದ್ದರೆ ಹಾವು, ಕೆಂಪಗಿದ್ದರೆ ಹೆಂಟಗೊದ್ದ, ಮುತ್ತಿನ ಬಣ್ಣವಿದ್ದರೆ ಗಿಳಿಯು, ಕಪಿಲವರ್ಣವಿದ್ದರೆ ಇಲಿಗಳು, ವಜ್ರದ ಬಣ್ಣವಿದ್ದರೆ ನೀರು ಒಳಗೆ ನೆಲೆ ನಿಂತಿವೆ ಎಂದು ತಿಳಿಯಬೇಕು. ಇಂತಹ ಅಂತರ್‌ಗರ್ಭಿತವಾದ ಮರವನ್ನು ಕಟ್ಟಡಕ್ಕೆ ಉಪಯೋಗಿಸಬಾರದು. ಮೊದಲೇ ಯಾರಾದರೂ ಗಿಡವನ್ನು ಕಡಿದು ಬಿಟ್ಟಿದ್ದರೆ, ಶುಭ ಶಕುನಗಳನ್ನು ನೋಡಿಕೊಂಡು ಸ್ವೀಕರಿಸಬಹುದು.

ಮನೆಯ ನಿವೇಶನದ ಉದ್ದಳತೆಯನ್ನು ಅದರ ಅಗಲಳತೆಯಿಂದ ಗುಣಾಕಾರ ಮಾಡಿ ಎಂಟರಿಂದ ಭಾಗಾಕಾರಮಾಡಿ ಉಳಿಯುವ ಶೇಷವನ್ನು ಆಯತವೆಂದು ತಿಳಿಯಬೇಕು. ಆ ಆಯತವು ಎಂಟು ವಿಧವಾಗಿರುತ್ತದೆ. ಶೇಷದ ಪ್ರಮಾಣವನ್ನು ಅನುಸರಿಸಿ, ಧ್ವಜ, ಧೂಮ, ಸಿಂಹ, ಕತ್ತೆ, ನಾಯಿ, ಎತ್ತು, ಆನೆ, ಕಾಗೆ ಎಂಟು ಬಗೆಯ ಆಯಗಳು ಉಂಟು. ಇವು ಒಂದೊಂದು ದಿಕ್ಕನ್ನು ಸೂಚಿಸುತ್ತವೆ. ಈ ವಿಶೇಷವು ಮೊಳದ ಅಳತೆಯೆಂದು ತಿಳಿಯಬೇಕು.

ಆಯವು ಧ್ವಜ ಸಂಜ್ಞಕವಾಗಿದ್ದರೆ ಬಾಗಿಲನ್ನು ಯಾವ ದಿಕ್ಕಿಗೆ ಇಟ್ಟರೂ ನಡೆಯುವದು. ಪಶ್ಚಿಮಕ್ಕೆ ಇಟ್ಟರೆ ಅತ್ಯುತ್ತಮ. ಆಯವು ಸಿಂಹ ಸಂಜ್ಞಕವಾದರೆ ಬಾಗಿಲವನ್ನು ಉತ್ತರಕ್ಕೆ ಮುಖಮಾಡಿ, ವೃಷಭ ಸಂಜ್ಞಕವಾದರೆ ಪೂರ್ವಾಭಿಮುಖವಾಗಿ, ಆನೆ ಸಂಜ್ಞಕವಾದರೆ ದಕ್ಷಿಣ ದಿಕ್ಕಿಗೂ ಬಾಗಿಲವನ್ನು ಇರಿಸುವದು ಶುಭಕರ.

ಶೇಷವು ಒಂದು ಉಳಿದರೆ ಧ್ವಜ, ಎರಡು ಉಳಿದರೆ ಧೂಮ, ಮೂರು ಉಳಿದರೆ ಸಿಂಹ, ನಾಲ್ಕು ಉಳಿದರೆ ಕತ್ತೆ, ಐದು ಉಳಿದರೆ ಎತ್ತು, ಆರು ಉಳಿದರೆ ನಾಯಿ, ಏಳು ಉಳಿದರೆ ಆನೆ, ಎಂಟು ಉಳಿದರೆ ಕಾಗೆ ಎಂದು ತಿಳಿಯಬೇಕು. ಶೇಷವು ಧೂಮವಾದರೆ

ಆಗ್ನೇಯ, ಕತ್ತೆಯಾದರೆ ನೈಋತ್ಯ, ನಾಯಿಯಾದರೆ ವಾಯವ್ಯ ಕಾಗೆಯಾದರೆ ಈಶಾನ್ಯ ಮುಂತಾದ ಉಪದಿಕ್ಕುಗಳನ್ನು ಸೂಚಿಸುತ್ತವೆ. ಆದರೆ ಈ ಉಪದಿಕ್ಕುಗಳತ್ತ ಬಾಗಿಲವನ್ನು ಇಡಬಾರದು. ಮೇಲೆ ಹೇಳಿದ ಮುಖ್ಯ ದಿಕ್ಕುಗಳಿಗೆ ಆಯವನ್ನು ನೋಡಿಕೊಂಡು ಬಾಗಿಲವನ್ನು ಇರಿಸಬೇಕು.

ಹಿಂದೆ ಹೇಳಿದಂತೆ ಮನೆಯ ನಿವೇಶನದ ಉದ್ದವನ್ನು ಮತ್ತು ಅಗಲವನ್ನು ಗುಣಾಕಾರಮಾಡಿ, ಬಂದ ಮೊಳಗಳ ಮೊತ್ತವನ್ನು ಎಂಟರಿಂದ ಗುಣಿಸಬೇಕು. ಅದರಿಂದ ಬಂದ ಸಂಖ್ಯೆಗೆ ಇಪ್ಪತ್ತೇಳರಿಂದ ಭಾಗಿಸಬೇಕು ಆ ಭಾಗಲಬ್ಧವು ರುಕ್ಷ ಎನಿಸಿಕೊಳ್ಳುವದು. ಆ ರುಕ್ಷವನ್ನು ಎಂಟರಿಂದ ಭಾಗಿಸಿದರೆ ಉಳಿದ ಶೇಷಕ್ಕೆ ವ್ಯಯ ಎಂದು ಕರೆಯುತ್ತಾರೆ. ವ್ಯಯ ಹೆಚ್ಚಾದರೆ ಕೆಡಕು. ಆಯ ಹೆಚ್ಚಾದರೆ ಶಾಂತಿ. ಇದು ಶ್ರೀ ವಿಷ್ಣುವಿನ ಅಭಿಪ್ರಾಯ.

ಹೊಸಮನೆ ಪ್ರವೇಶ ಮಾಡುವಾಗ ಬ್ರಾಹ್ಮಣರನ್ನು ಮುಂದೆ ಇರಿಸಿಕೊಂಡು ಮೊಸರು, ಅಕ್ಷತೆ, ಮಾವಿನಎಲೆ, ಹೂವಿನಿಂದ ಅಲಂಕೃತಪೂರ್ಣ ಕುಂಭ ಮುಂದಿಟ್ಟುಕೊಂಡು ಮಂತ್ರಘೋಷ, ಮಂಗಳವಾದ್ಯಗಳೊಂದಿಗೆ ಗೃಹಪ್ರವೇಶ ಮಾಡಬೇಕು. ಈ ಸಮಯದಲ್ಲಿ ಬ್ರಾಹ್ಮಣರಿಗೆ ಬಟ್ಟೆ, ಬಂಗಾರ ದಾನಮಾಡಬೇಕು.

ಗೃಹ್ಯಸೂತ್ರದಲ್ಲಿ ಹೇಳಿದಂತೆ ಹವನ ಹೋಮ, ಬಲಿ ಕರ್ಮ ಮುಂತಾದವುಗಳನ್ನುಮಾಡಿ ವಾಸ್ತುಶಾಂತಿ ನೆರವೇರಿಸಬೇಕು. ಶುಭ್ರವಸ್ತ್ರಧರಿಸಿ, ಎಲ್ಲಕಡೆಗೂ ಸುಗಂಧ ರೂಪದ ಪರಿಮಳ ಇಡುಗುವಂತೆ ಮಾಡಿ, ಹೊಸ ಮನೆಯಲ್ಲಿ ಬಗೆ ಬಗೆಯ ಪಕ್ವಾನ್ನಮಾಡಿಸಿ, ಬ್ರಹ್ಮಭೋಜನವನ್ನು ಯಥಾಶಕ್ತಿ ನಡೆಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರು ಐವತ್ತೆಂಟನೆಯ ಅಧ್ಯಾಯ ಮುಗಿದುದು.*



ಮೂರ್ತಿ ಲಕ್ಷಣ

ಅಧ್ಯಾಯ - ೨೫೯

**ವಿಷಯ ಸೂಚಿ :**

"ಕ್ರಿಯಾಯೋಗಃ ಕಥಂ ಸಿದ್ಧ್ಯೇದ್ಗೃಹಸ್ಥಾದಿಷು ಸರ್ವದಾ।
ಜ್ಞಾನಯೋಗ ಸಹಸ್ರಾದ್ಧಿ ಕರ್ಮಯೋಗೋ ವಿಶಿಷ್ಯತೇ॥"

**ಋಷಿಗಳು** :- ಸಾವಿರ ಜ್ಞಾನಯೋಗಗಳಿಗಿಂತ ಕರ್ಮಯೋಗವು ಶ್ರೇಷ್ಠವಾದದ್ದು ಎಂದು ಹೇಳಲಾಗಿದೆ. ಅಂಥ ಕರ್ಮಯೋಗವು ಗೃಹಸ್ಥಾಶ್ರಮಿಗಳಿಗೆ ಸಿದ್ಧಿಸುವ ಬಗೆ ಏಂತು?

**ಸೂತ** :- ಕರ್ಮಯೋಗದಲ್ಲಿ ಮುಖ್ಯವಾಗಿ ದೇವತಾಮೂರ್ತಿಗಳ ಪೂಜೆ ಹಾಗೂ ಭಕ್ತಿಯಿಂದ ಭಜನೆ ಮುಂತಾದವುಗಳು ಪರಿಗಣಿತವಾಗಿವೆ. ದೇವಪ್ರತಿಮೆಗಳ ವಿಧಿಪೂರ್ವಕವಾದ ಪೂಜಾ, ಅರ್ಚನ, ಭಜನ,ಸೇವನಾದಿ ಕರ್ಮಯೋಗದಿಂದ

ಇಹದಲ್ಲಿ ಭಕ್ತಿ, ಪರದಲ್ಲಿ ಮುಕ್ತಿ, ಎರಡೂ ಪ್ರಾಪ್ತವಾಗುತ್ತವೆ. ಆದುದರಿಂದಲೇ ಕರ್ಮಯೋಗಕ್ಕೆ ಇಷ್ಟು ಪ್ರಾಶಸ್ತ್ಯವು ಬಂದಿರುತ್ತದೆ. ಇದಕ್ಕಿಂತ ಮಿಗಿಲಾದ ಶ್ರೇಯಸ್ಸು ಪ್ರೇಯಸ್ಸುಗಳಿಗೆ ಕಾರಣವಾದ ಕರ್ಮಸಾಧನೆ ಬೇರೆ ಇಲ್ಲ.

ದೇವತಾಮೂರ್ತಿಗಳನ್ನು ಪ್ರತಿಷ್ಠೆಮಾಡಬೇಕಾದರೆ ಅವುಗಳ ಸ್ವರೂಪ ಲಕ್ಷಣಗಳನ್ನು ಮೊದಲು ಹೇಳಬೇಕು. ಆ ಮೂರ್ತಿಗಳಿಗೆ ಉತ್ಸವ ಯಜ್ಞಗಳನ್ನು ಮಾಡಿದರೆ ಮನುಷ್ಯನು ಸಂಸಾರಬಂಧನದಿಂದ ಮುಕ್ತನಾಗುತ್ತಾನೆ. ಮೊದಲು ವಿಷ್ಣುವಿನ ಶುಭಕರವಾದ ಮೂರ್ತಿಯ ಲಕ್ಷಣ ಹೇಳುತ್ತೇನೆ.

ವಿಷ್ಣುವಿನ ಮೂರ್ತಿಯು ಮುಖ್ಯವಾಗಿ ಶಾಂತಸುಂದರವಾಗಿರಬೇಕು. ಪ್ರಸನ್ನ ಮುಖ, ಮಂಗಳದೃಷ್ಟಿ, ಎತ್ತರ ಮೂಗು, ಕೊಡೆಯಂತಿರುವ ಮುಡಿ, ಶಂಖದಂತಹ ಕೊರಳು, ಸಿಂಹದಂತಹ ಕಿವಿ, ನೀಳತೋಳು, ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ಒಟ್ಟಿನ ಮೇಲೆ ಪ್ರಶಾಂತ, ಗಂಭೀರ ಸೌಮ್ಯ, ಸುಂದರ ಆಕಾರ ಇರಬೇಕು.

ಮನೆಯಲ್ಲಿ ಪೂಜೆ ಮಾಡುವ ಚಿಕ್ಕ ವಿಷ್ಣು ಪ್ರತಿಮೆಗೆ ಎಂಟು ಅಥವಾ ನಾಲ್ಕು ತೋಳುಗಳನ್ನು ಮಾಡಬಹುದು. ಎಂಟು ತೋಳು ಇದ್ದಲ್ಲಿ ಬಲಗೈಗಳಲ್ಲಿ ಖಡ್ಗ, ಗದಾ, ಬಾಣ, ಪದ್ಮಗಳೂ, ಎಡಗೈಗಳಲ್ಲಿ ಶಂಖ, ಚಕ್ರ, ಬಿಲ್ಲು, ಗುರಾಣಿಗಳನ್ನೂ ಇರಿಸಬೇಕು. ನಾಲ್ಕು ತೋಳಿನ ವಿಷ್ಣು ವಿಗ್ರಹ ಮಾಡಿದರೆ, ಬಲಗಡೆ ಶಂಖ, ಚಕ್ರಗಳನ್ನು ರಚಿಸಬೇಕು.

ವಿಷ್ಣುವಿನ ಅವತಾರಮೂರ್ತಿ ಕೃಷ್ಣನ ಪ್ರತಿಮೆ ಕೆತ್ತುವದಾದರೆ, ಗದೆಯನ್ನು ಎಡಗೈಯಲ್ಲಿ ಕೊಡಬೇಕು. ಮೇಲುಗಡೆ ಶಂಖ ಚಕ್ರಗಳನ್ನು ಎಡ ಅಥವಾ ಬಲಗೈಗಳಲ್ಲಿ ಕಾಣಿಸಬಹುದು. ಮೂರ್ತಿಯ ಕೆಳಗೆ ಪಾದಗಳ ಮಧ್ಯದಲ್ಲಿ ಭೂದೇವಿಯನ್ನು ಬಲಗಡೆ ನಮಸ್ಕಾರ ಮುದ್ರೆಯ ಗರುಡನನ್ನು ನಿರ್ಮಿಸಬೇಕು. ಕೈಯಲ್ಲಿ ಕಮಲಹಿಡಿದ ಲಕ್ಷ್ಮೀದೇವಿಯನ್ನು ಸುಂದರ ಮುಖಮುದ್ರೆಯಿಂದ ಎಡಗಡೆ ರೂಪಿಸಬೇಕು. ಸಂಪತ್ತನ್ನು ಬಯಸುವವರು ಗರುಡನನ್ನು ಮುಂಭಾಗದಲ್ಲಿ ರೂಪಿಸಬೇಕು. ಶ್ರೀ ಹಾಗೂ ಸೃಷ್ಟಿದೇವಿಯನ್ನು ದೇವರ ಎರಡೂಬದಿಗಳಲ್ಲಿ ಕೈಯಲ್ಲಿ ಕಮಲವಿರಿಸಿ ನಿಲ್ಲಿಸಬೇಕು.

ದೇವಾಲಯದ ತಲೆಬಾಗಿಲಮೇಲೆ ದೇವದುಂದುಭಿಗಳು ಮೊಳಗುವ ದೃಶ್ಯವನ್ನೂ, ಎಲೆ ಬಳ್ಳಿಗಳಲ್ಲಿ ಹರಿಕೀರ್ತನ ಮಾಡುವ ಗಂಧರ್ವ ದಂಪತಿಗಳನ್ನೂ ಕಲ್ಪಲತೆಯ ಕೆಳಗೆ ನಿಂತು ಭಗವಂತನನ್ನು ಸ್ತುತಿಸುವ ದೇವತೆಗಳನ್ನೂ, ನರಸಿಂಹ ಮುಖಮುದ್ರೆಯನ್ನೂ ಶಿಲ್ಪದಲ್ಲಿ ಕುಸುರು ಕುಸುರಾಗಿ ಬಿಡಿಸಬೇಕು.

ದೇವ ದಾನವ, ಮತ್ತು ಕಿನ್ನರರು ಪೂಜಿಸುವ ವಿಷ್ಣುವಿನ ಮೂರ್ತಿಯು ಒಂಬತ್ತು ಚೋಟು ಉದ್ದವಿರಬೇಕು. ಮಾನವರ ಉಪಾಸ್ಯ ಭಗವನ್ ಮೂರ್ತಿಯು ಮುಂದೆ ಹೇಳಿದ ಪ್ರಮಾಣದಂತಿರಬೇಕು.

ಬೆಳಕಿಂಡಿಯಿಂದ ಒಳಗೆ ತೂರಿಬಂದ ಬಿಸಿಲಿನಲ್ಲಿ ಸ್ಪಷ್ಟವಾಗಿ ಕಾಣುವ ಧೂಳಿಯ ಕಣಗಳಿಗೆ ತ್ರಸರೇಣು ಎಂದು ಹೆಸರು. ಅಂತಹ ಎಂಟು ತ್ರಸರೇಣು ಕೂಡಿದರೆ ಒಂದು ವಾಲಾಗ್ರ, ಎಂಟು ವಾಲಾಗ್ರಗಳ ಒಂದು ಕಟ್ಟಿಗೆ ಲಿಖ್ಯೆ. ಎಂಟು ಲಿಖ್ಯೆಗಳ ಗುಂಪಿಗೆ ಒಂದು ಯೂಕಾ. ಎಂಟು ಯೂಕಾಗಳು ಸೇರಿದರೆ ಒಂದು ಯಮ, ಎಂಟು ಯಮಗಳು ಕೂಡಿದರೆ ಒಂದು ಬೆರಳು. ತನ್ನ ಕೈಬೆರಳಿನ ಅಳತೆಯಲ್ಲಿ ವಿಷ್ಣು ಪ್ರತಿಮೆಯ ಮುಖವು

ಹನ್ನೆರಡು ಬೆರಳು ಇರಬೇಕು. ಈ ಮುಖದ ಪ್ರಮಾಣಕ್ಕೆ ಅನುಗುಣವಾಗಿ ಉಳಿದ ಅವಯವಗಳನ್ನು ನಿರ್ಮಿಸಬೇಕು. ಹರಿಯ ಮೂರ್ತಿಯನ್ನು ಚಿನ್ನ, ಬೆಳ್ಳಿ, ತಾಮ್ರ, ರತ್ನ, ಕಟ್ಟಿಗೆ, ಕಬ್ಬಿಣ, ಸೀಸ, ಹಿತ್ತಾಳೆ ಮುಂತಾದ ಧಾತುಗಳಿಂದಲೂ ತಾಮ್ರವನ್ನು ಮಿಶ್ರಮಾಡಿ ಇತರ ಲೋಹಗಳಿಂದಲೂ ನಿರ್ಮಿಸುವರು. ಮನೆಯಲ್ಲಿ ಪೂಜೆಗಾಗಿ ರಚಿಸುವ ದೇವರ ಪ್ರತಿಮೆಯ ಹೆಬ್ಬೆರಳಿನ ಗಿಣ್ಣಿನಿಂದ ಒಂದು ಗೇಣು ಉದ್ದದವರೆಗೆ ಎತ್ತರ ವಿರಬಹುದು. ಅದಕ್ಕಿಂತ ಹೆಚ್ಚಾಗಿ ಪ್ರತಿಮೆ ಪೂಜಿಸಬಾರದು.

ದೇವಾಲಯಗಳಲ್ಲಿ ಮಾತ್ರ ಹದಿನಾರು ಗೇಣುಗಳವರೆಗೆ ದೇವರಮೂರ್ತಿ ಎತ್ತರವಾಗಿ ಇರಬಹುದು. ಇದಕ್ಕಿಂತ ಹೆಚ್ಚು ಎತ್ತರ ಇರಬಾರದು. ತನ್ನ ದ್ರವ್ಯದ ಅನುಕೂಲಕ್ಕೆ ತಕ್ಕಂತೆ ಪ್ರತಿಮೆಗಳನ್ನು ನಿರ್ಮಿಸಬೇಕು. ದೇವಾಲಯದ ದ್ವಾರದ ಎತ್ತರವನ್ನು ಎಂಟು ಭಾಗ ಮಾಡಬೇಕು.

ಅದರಲ್ಲಿ ಒಂದು ಭಾಗ ಬಿಟ್ಟು, ಉಳಿದ ಏಳು ಭಾಗಗಳನ್ನು ಎರಡು ಭಾಗದಷ್ಟು ಎತ್ತರವಾಗಿ ದೇವತಾಮೂರ್ತಿಯನ್ನು ರಚಿಸಬೇಕು. ಮೂರ್ತಿಯನ್ನು ಕೂಡಿಸುವ ಪೀಠವು ಮೂರ್ತಿಯ ಮೂರರಲ್ಲಿ ಒಂದು ಪಾಲು ಎತ್ತರವಾಗಿರಬೇಕು. ಪ್ರತಿಮೆಯ ಮುಖದ ಅಳತೆಯಂತೆ ಅದರ ಒಂಬತ್ತರಷ್ಟು ಎತ್ತರವಾಗಿ ಪ್ರತಿಮೆಯನ್ನು ರಚಿಸಬೇಕು.

ಕೊರಳು ನಾಲ್ಕು ಅಂಗುಲವಾಗಿರಬೇಕು. ಹೃದಯವು ಒಂದು ಭಾಗದಷ್ಟಿರಬೇಕು. ಅದರ ಕೆಳಗೆ ದೂರದಲ್ಲಿ ಒಂದು ಅಂಗುಲ ಆಳ ಅಗಲವಾದ ಹೊಕ್ಕಳ ನಿರ್ಮಿಸಬೇಕು. ಹೊಕ್ಕಳಿನ ಕೆಳಗೆ ಒಂದು ಭಾಗ ಪ್ರಮಾಣದ ಮೇಢ್ರಾವಯವ ಅನಂತರ ಎರಡು ಭಾಗ ಉದ್ದ ತೊಡೆ, ನಾಲ್ಕು ಅಂಗುಲ ಉದ್ದ ಮೊಳಕಾಲು ಮೊಂಡೆ, ಎರಡು ಭಾಗದಷ್ಟು ಮೊಣಕಾಲು, ನಾಲ್ಕುಅಂಗುಲಪಾದ, ಹದಿನಾಲ್ಕು ಅಂಗುಲ ತಲೆ ಇದ್ದ ದಿವ್ಯ ಪ್ರತಿಮೆ ನಿರ್ಮಿಸಬೇಕು. ಇದು ವಿಷ್ಣು ಪ್ರತಿಮೆಯ ಎತ್ತರ ಪ್ರಮಾಣ. ಅದರ ಸುತ್ತಳತೆ, ಅವಯವ ವಿಸ್ತಾರ ಹೇಳುವೆನು ಕೇಳಿರಿ.

ವಿಷ್ಣು ವಿಗ್ರಹದ ಹಣೆಯ ಎತ್ತರ ನಾಲ್ಕು ಅಂಗುಲ, ಕೆನ್ನೆ ತುಟಿ, ಎರಡೆರೆಡು ಅಂಗುಲ ಅಗಲ, ಮೂಗು ನಾಲ್ಕು ಅಂಗುಲ ಎತ್ತರ ಇರಬೇಕು. ಹಣೆಯು ಎಂಟು ಅಂಗುಲ ಅಗಲ, ಹುಬ್ಬುಗಳು ಅಷ್ಟೆ. ಹುಬ್ಬುಗಳ ಸಾಲು ಅರ್ಧ ಅಂಗುಲ ಅಗಲವಾಗಿದ್ದು ಬಿಲ್ಲಿನಂತೆ ಮಣಿದಿರಬೇಕು. ಹುಬ್ಬುಗಳ ಅಂಚು ಎತ್ತರವಾಗಿಯೂ ನುಣುಪಾಗಿಯೂ ಇರಬೇಕು. ಕಣ್ಣುಗಳು ಎರಡು ಅಂಗುಲ ಉದ್ದ, ಒಂದು ಅಂಗುಲ ಅಗಲ, ಮಧ್ಯದಲ್ಲಿ ಉಬ್ಬಿರಬೇಕು. ಅಂಚಿನಲ್ಲಿ ಕೆಂಪಗಿದ್ದರೆ ಒಳ್ಳೆಯ ಲಕ್ಷಣ, ಕಣ್ಣು ಗುಡ್ಡೆಯ ಅರ್ಧ ಭಾಗವು ಕಣ್ಣಿನ ವಿಸ್ತಾರದ ಐದನೆಯ ಒಂದು ಪಾಲಿನಷ್ಟಿರಬೇಕು. ಹುಬ್ಬುಗಳ ನಡುವಿನ ಹರವು ಎರಡು ಅಂಗುಲ ಇರಬೇಕು.

ಮೂಗಿನ ತಳ ಒಂದು ಅಂಗುಲ, ಮೂಗಿನ ತುದಿಯು ಸಮಪ್ರಮಾಣದಲ್ಲಿ ಎರಡೂ ಕಡೆಗೆ ಬಾಗಿರಬೇಕು. ಮೂಗಿನ ಹೊರಳೆ ಅರ್ಧ ಅಂಗುಲ. ಕೆನ್ನೆಗಳು ಕರ್ಣ ತಳದಿಂದ ಎರಡು ಅಂಗುಲ ಪ್ರಮಾಣವಿರಬೇಕು. ಗಲ್ಲದ ಮೇಲ್ಭಾಗವು ಒಂದು ಬೆರಳು ಅಗಲ, ಎರಡು ಬೆರಳು ಉದ್ದವಿರಬೇಕು. ಹುಬ್ಬಿನ ಸಾಲು ಅರ್ಧ ಬೆರಳು ಅಗಲವಾಗಿ

ಕಾಲುವೆಯಂತೆ ಒಂದೇಸಮನಾಗಿ ಇರಬೇಕು. ಮೇಲಿನ ತುಟಿ ಅರ್ಧ ಅಂಗುಲ ಅಗಲವಿರಬೇಕು. ಕಿವಿಗಳು ಹುಬ್ಬಿನ ಮಟ್ಟಕ್ಕೆ ಇದ್ದು ಮೇಲ್ಮುಖವಾಗಿ ನಾಲ್ಕು ಅಂಗುಲ ಅಳತೆ ಉಳ್ಳದ್ದಾಗಿರಬೇಕು. ಕಿವಿಗಳ ಬದಿಗಳು ಎರಡು ಅಂಗುಲ ಅಗಲವಾಗಿರಬೇಕು.

ಅವುಗಳ ಮೇಲೆ ತಲೆ ಹನ್ನೆರಡು ಅಂಗುಲ ಪ್ರಮಾಣದಲ್ಲಿ ಇರಬೇಕು. ಒಟ್ಟು ತಲೆಯ ಸುತ್ತಳತೆ ಮೂವತ್ತಾರು ಅಂಗುಲ. ಕೂದಲುಗಳನ್ನು ಸೇರಿಸಿ ನಲವತ್ತೆರಡು ಅಂಗುಲ. ಹಿನ್ನೆಲೆಯ ಅರ್ಧಭಾಗದಿಂದ ತಲೆಯ ಅರ್ಧಭಾಗದವರೆಗೆ ಹದಿನೆಂಟು ಅಂಗುಲವಿರಬೇಕು. ಕಂಠದ ನಡುವಿನ ಸುತ್ತಳತೆ ಇಪ್ಪತ್ತನಾಲ್ಕು ಅಂಗುಲ, ವ್ಯಾಸ ಎಂಟು ಅಂಗುಲ ಇರುವವು. ಕೊರಳಿನಿಂದ ಮೊಲೆಯವರೆಗೆ ಒಂದು ಚೋಟು ಪ್ರಮಾಣದ ಅಂತರವಿದ್ದು ಎರಡು ಮೊಲೆಗಳ ಅಂತರ ಒಂದು ಗೇಣು ಇರಬೇಕು. ಎರಡೂ ಸ್ತನಗಳ ಮಂಡಲವು ಎರಡು ಅಂಗುಲವಿದ್ದು ಆ ಮಂಡಲದ ನಡುವೆ ಒಂದು ಯವ ಪ್ರಮಾಣದ ತುದಿಯನ್ನು ರೇಖಿಸಬೇಕು. ಎದೆಯ ವಿಸ್ತಾರ ಎರಡು ಚೋಟು ಇರಬೇಕು.

ಪಾದಗಳು ಹದಿನಾಲ್ಕು ಅಂಗುಲ, ಹೆಬ್ಬೆರಳು ಮೂರು ಅಂಗುಲ, ಪಾದಗಳ ಅಗಲ ಐದು ಅಂಗುಲ ಇರಬೇಕು. ಹೆಬ್ಬೆಟ್ಟಿನ ತುದಿ ಎತ್ತರವಾಗಿರಬೇಕು.

ತೋರು ಬೆರಳು ದಪ್ಪದಲ್ಲಿ ಹೆಬ್ಬೆಟ್ಟಿನಷ್ಟೆ ಇರುವದು. ನಡು ಬೆರಳಿನ ಪಟ್ಟು ಹೆಬ್ಬೆರಳಿನ ಹದಿನಾರನೇ ಒಂದು ಪಾಲಿನಷ್ಟು ಕಿರಿದಾಗಿರುವದು ಕಿರಿಬೆರಳು ಅದರ ಹತ್ತಿರ ಬೆರಳಿಗಿಂತ ಎಂಟರಲ್ಲಿ ಒಂದು ಪಾಲಿನಷ್ಟು ಚಿಕ್ಕದು. ಹೆಬ್ಬೆರಳು ಬಿಟ್ಟು ಉಳಿದ ಬೆರಳುಗಳಿಗೆಲ್ಲ ಮೂರು ಪರ್ವ (ಗಿಣ್ಣು)ಗಳು ಇರುವವು.

ಹಿಮ್ಮಡಿಯ ಗಂಟಿನ ಅಳತೆ ಎರಡು ಅಂಗುಲ. ಹಿಂಗಾಲಿನ ಅಡಿಯ ಅಳತೆ ಎರಡು ಅಂಗುಲ. ಹೆಬ್ಬೆರಳಿನ ಎರಡು ಗಿಣ್ಣು. ಅದರ ಸುತ್ತಳತೆ ಎರಡು ಅಂಗುಲ. ತೋರು ಬೆರಳಿನ ಸುತ್ತಳತೆ ಮೂರಂಗುಲ. ಮೊಳಕಾಲಿನ ಸುತ್ತಳತೆ ತುದಿಯಲ್ಲಿ ಹದಿನಾಲ್ಕು, ಮಧ್ಯದಲ್ಲಿ ಹದಿನೆಂಟು ಅಂಗುಲಗಳು ಮಂಡಿಯ ನಡುವಿನ ಸುತ್ತಳತೆ ಇಪ್ಪತ್ತೊಂದು ಅಂಗುಲ, ಎತ್ತರ ಒಂದು ಅಂಗುಲ, ಮಂಡಿಯ ಚಿಪ್ಪಿನ ಸುತ್ತಳತೆ ಮೂರು ಅಂಗುಲ.

ತೊಡೆಯ ಸುತ್ತಳತೆ ಮಧ್ಯದಲ್ಲಿ ಇಪ್ಪತ್ತೆಂಟು ಮೇಲ್ಗಡೆ ಮೂವತ್ತೊಂದು ಅಂಗುಲ. ವೃಷಣಗಳು ಮೂರು ಅಂಗುಲ. ಮೇಢ್ರದ ಉದ್ದ ಎರಡು ಅಂಗುಲ, ಸುತ್ತಳತೆ ಆರು ಅಂಗುಲ. ಮಣಿಕಟ್ಟಿನ ಕೆಳಗೆ ಕೇಶ ರೇಖೆಗಳನ್ನು ಚಿತ್ರಿಸಬೇಕು. ಮಣಿಕಟ್ಟಿನ ಸುತ್ತಳತೆ ನಾಲ್ಕಂಗುಲ, ಸೊಂಟದ ಅಳತೆ ಹದಿನಾಲ್ಕು ಅಂಗುಲ. ಸ್ತ್ರೀ ಪ್ರತಿಮೆಗಳ ಸೊಂಟ ಇಪ್ಪತ್ತೆರಡು ಅಂಗುಲ, ಮೊಲೆಗಳು ಹದಿನೆಂಟು ಅಂಗುಲ, ಹೊಕ್ಕಳ ಬಳಿ ಸುತ್ತ ನಲವತ್ತೈದು ಅಂಗುಲ ಇರಬೇಕು.

ಪುರುಷ ಪ್ರತಿಮೆಯ ಸೊಂಟದ ಸುತ್ತಳತೆ ಐವತ್ತೈದು ಅಂಗುಲ. ಕುತ್ತಿಗೆ ವಿಸ್ತಾರ ಎಂಟು ಅಂಗುಲ. ತೋಳಿನ ಉದ್ದ ನಲವತ್ತೆರಡು ಅಂಗುಲ. ಹೆಗಲಿನ ಅಳತೆ ಹದಿನಾರು ಅಂಗುಲ. ತೋಳುಗಳ ಮಧ್ಯದ ಸುತ್ತಳತೆ ಹದಿನೆಂಟು ಅಂಗುಲ. ಮೊಳಕೈ ಹದಿನಾರು ಅಂಗುಲ. ಅಂಗೈ ಏಳು ಅಂಗುಲ, ನಡುಬೆರಳಿನ ಉದ್ದ ಐದು ಅಂಗುಲ, ಉಂಗುರದ ಬೆರಳಿನ ಅಳತೆ ನಡು ಬೆರಳಿಗಿಂತ ಏಳನೆಯ ಒಂದುಪಾಲಿನಷ್ಟು ಕಡಿಮೆ.

ಕಿರುಬೆರಳು ಅನಾಮಿಕದ ಐದನೆಯಒಂದು ಪಾಲಿನಷ್ಟು ಕಡಿಮೆಯಾಗಿದೆ. ತೋರುಬೆರಳು ನಡುಬೆರಳಿನ ಐದನೆಯ ಒಂದು ಪಾಲಿನಷ್ಟು ಉದ್ದದಲ್ಲಿ ಕಡಿಮೆಯಾಗಿದೆ. ಹೆಬ್ಬೆರಳು ತೋರಬೆರಳಿನ ಬುಡಕ್ಕಿಂತ ಕೆಳಮಟ್ಟದಲ್ಲಿ ಸಮನಾಗಿದ್ದು, ಸುತ್ತಳತೆ ನಾಲ್ಕು ಅಂಗುಲ. ಉಳಿದ ಬೆರಳುಗಳ ಪರ್ವಗಳು ಒಂದಕ್ಕಿಂತ ಮತ್ತೊಂದು ಅಳತೆಯಲ್ಲಿ ಕಿರಿದಾಗಿರುತ್ತವೆ. ಎಲ್ಲ ಬೆರಳುಗಳ ಗೆಣ್ಣಿನ ಅಳತೆಯು ಅದರ ಮಗ್ಗಲು ಬೆರಳಿಗಿಂತ ಒಂದು ಗೋದಿಕಾಳಿನ ಅಳತೆಯಷ್ಟು ಕಡಿಮೆ. ಹೆಬ್ಬೆರಳಿನ ಗೆಣ್ಣಿನ ಮಧ್ಯಭಾಗವು ತೋರುಬೆರಳಿನ ತಳಕ್ಕೆ ಹತ್ತಿರವಾಗಿರುತ್ತದೆ. ಬೆರಳುಗಳ ತುದಿಗೆಣ್ಣಿನ ಮುಂದಿನ ಅರ್ಧಭಾಗದಲ್ಲಿ ಉಗುರುಗಳಿರುವವು. ವಿಗ್ರಹದ ಉಗುರುಗಳು ಮೇಲ್ಭಾಗ ತಗ್ಗಾಗಿದ್ದು ತುದಿ ಕೆಂಪಗಾಗಿ ಮೇಲ್ಭಾಗವು ನುಣುಪಾಗಿರುವಂತೆ ರಚಿಸಬೇಕು.

ಕೂದಲುಗಳು ಹೆಗಲಿನ ಮೇಲೆ ಹತ್ತು ಅಂಗುಲ ಹರವಾಗಿರಬೇಕು. ಸ್ತ್ರೀ ಪ್ರತಿಮೆಗಳ ಅವಯವ ತೆಳುವಾಗಿರಬೇಕು. ಆದರೆ ಸ್ತನ, ತೊಡೆ, ನಿತಂಬಗಳು ಪರಿಪುಷ್ಟವಾಗಿರಬೇಕು.

ಅವುಗಳ ಮುಖವು ನೀಳವಾಗಿ ಮುಂಗುರುಳುಗಳಿಂದ ಮನೋಹರವಾಗಿ ಕಾಣುವಂತಿರಬೇಕು. ಮೂಗು, ಕೊರಳು, ಹಣೆಗಳು ಮೂರುವರೆ ಅಂಗುಲ ಉದ್ದವಾಗಿರಬೇಕು. ಹೀಗೆ ದೇವತೆಗಳ ದೇವತಾ ಸ್ತ್ರೀಯರ ಪ್ರತಿಮೆಗಳ ಲಕ್ಷಣಗಳನ್ನು ಪಠಣ, ಶ್ರವಣ ಮಾಡಿದವರ ಪಾಪ ಪರಿಹಾರವಾಗುವದು. ಇಲ್ಲಿ ಹೇಳಿದ ಈ ಎಲ್ಲ ಪ್ರಮಾಣ ಅಳತೆಗಳು ಒಂಬತ್ತು ಚೋಟು ಉದ್ದದ ದೇವತಾ ಪ್ರತಿಮೆಗಳಿಗೆ ಅನ್ವಯಿಸುತ್ತದೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಐವತ್ತೊಂಬತ್ತನೆಯ ಅಧ್ಯಾಯ ಮುಗಿದುದು.*

—o—

## ಪ್ರತಿಮಾಲಕ್ಷಣ

**ಅಧ್ಯಾಯ - ೨೬೦**

**ಸೂತ ಉವಾಚ :**

**"ಅತಃ ಪರಂ ಪ್ರವಕ್ಷ್ಯಾಮಿ ದೇವಾಕಾರಾನ್ವಿಶೇಷತಃ।**
**ದಶತಾಲಃ ಸ್ಮೃತೋ ರಾಮೋ ಬಲಿರ್ವೈರೋಚನಿಸ್ತಥಾ"॥**

**ಸೂತ :-** ಇನ್ನು ಮುಂದೆ ದೈವೀಪ್ರತಿಮೆಗಳ ಆಕಾರವನ್ನು ವಿಶೇಷರೂಪದಿಂದ ಹೇಳುತ್ತೇನೆ. ರಾಮ ಹಾಗೂ ಬಲಿಚಕ್ರವರ್ತಿಯ ಪ್ರತಿಮೆಗಳು ಹತ್ತು ಚೋಟು ಎತ್ತರವಾಗಿ ಇರುವವು. ಇದರಂತೆ ವರಾಹನರಸಿಂಹ ಪ್ರತಿಮೆಗಳೂ ಹತ್ತು ಚೋಟು ಎತ್ತರ, ವಾಮನಮೂರ್ತಿ ಏಳು ಚೋಟು ಉದ್ದ, ಮತ್ಸ್ಯ ಹಾಗೂ ಕೂರ್ಮ ವಿಗ್ರಹಗಳನ್ನು ಗರ್ಭಗುಡಿಯ ಅಳತೆ ನೋಡಿಕೊಂಡು ಬೇಕಾದಷ್ಟು ಎತ್ತರವಾಗಿ ರೂಪಿಸಬಹುದು.

ಇನ್ನು ಶಿವ ಹಾಗೂ ಉಮಾಮಹೇಶ್ವರ ಮುಂತಾದ ದೇವತಾಪ್ರತಿಮೆಗಳ ಆಕಾರ ಹೇಳುತ್ತೇನೆ. ಪರಮೇಶ್ವರ ಪ್ರತಿಮೆಯ ದೇಹಕಾಂತಿ ಪುಟಕ್ಕಿಟ್ಟ ಬಂಗಾರದಂತೆ, ಸೂರ್ಯನ ಮುಂಜಾವಿನ ಕಿರಣರಾಶಿಯಂತೆ ಹೊಳೆಯುತ್ತಿರಬೇಕು. ಮುಡಿಯಲ್ಲಿ ಕಿರೀಟ, ಜಡೆಯಲ್ಲಿ

ಚಂದ್ರ, ಆನೆಯ ಸೊಂಡೆಯಂತಹ ತೋಳು, ದುಂಡದಾದ ತೊಡೆ, ಮೊಳಕಾಲು, ಕೆದರಿದ ಕೂದಲ, ಮೂರೆಳೆಯ ಉಡುದಾರ, ಹಾವಿನ ಹಾರ, ಸರ್ಪದ ತೋಳಬಂದಿ, ಹುಲಿಯ ಚರ್ಮದ ಹೊದಿಕೆ, ಪುಷ್ಪ ಕಪೋಲ, ಕರ್ಣಕುಂಡಲದಿಂದ ಅಲಂಕೃತ ಕಿವಿ, ಹುಲಿಯ ಚರ್ಮದ ಹೊದಿಕೆ, ಮೊಳಕಾಲು ಮುಟ್ಟುವ ನೀಳ್ದೋಳು, ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಕತ್ತಿ, ಉಳಿದ ಕೈಗಳಲ್ಲಿ ಕಪಾಲ, ಸರ್ಪ, ಖಟ್ವಾಂಗ, ತ್ರಿಶೂಲ ಮುಂತಾದವು ಇರಬೇಕು. ಅಗಲ ಕಣ್ಣು, ಎತ್ತರ ಹೆಗಲು, ಆಭರಣವುಳ್ಳ ಬಾಹು, ಸೌಮ್ಯ ಆಕಾರ ಇವು ಶಿವನ ವಿಗ್ರಹದಲ್ಲಿ ಎದ್ದು ಕಾಣುವ ಲಕ್ಷಣಗಳಾಗಿವೆ.

ಶಂಕರನ ತಾಂಡವ ಮೂರ್ತಿಯ ಲಕ್ಷಣವು ಹೀಗಿದೆ. ವೈಶಾಖ ಎಂಬ ನೃತ್ಯ ಭಂಗಿಯ ನಿಲುವಿನಲ್ಲಿ ನಿಂತು, ನರ್ತನ ಅಭಿನಯಿಸುವ ಶಂಭುವಿನ ಒಂದು ಕೈ ವರನೀಡುವದು. ಮತ್ತೊಂದರಲ್ಲಿ ಜಪಸರ, ಹತ್ತು ತೋಳುಗಳು, ನಾಟ್ಯಭಂಗಿಯಲ್ಲಿ ಎತ್ತಿದ ಒಂದು ಕಾಲು, ಹೀಗೆ ನಟರಾಜನ ಮೂರ್ತಿಯನ್ನು ನಿರ್ಮಿಸಬೇಕು.

ತ್ರಿಪುರ ದಾಹಕನಾದ ಶಂಕರನ ಮೂರ್ತಿಗೆ ಹದಿನಾರು ತೋಳುಗಳನ್ನು ನಿರ್ಮಿಸಬೇಕು. ಶಂಖ, ಚಕ್ರ, ಗದಾ, ಬಿಲ್ಲು, ಪಿನಾಕ, ಗಂಟೆ, ವಿಷ್ಣುಮಯಬಾಣ, ಮುಂತಾದವುಗಳನ್ನು ಮೊದಲಿನ ಶಿವ ಪ್ರತಿಮೆಗೆ ಹೆಚ್ಚಾಗಿ ಸೇರಿಸಬೇಕು.

ನಾಲ್ಕು ಅಥವಾ ಎಂಟುತೋಳುಗಳಿಂದ ಕೂಡಿದ ಪರಮೇಶ್ವರನ ಮೂರ್ತಿಯನ್ನು ಜ್ಞಾನಯೋಗೀಶ್ವರಮೂರ್ತಿ ಎನ್ನುವರು. ಮೂಗು, ಹಲ್ಲಿನ ಮೊನೆ ಚೂಪಾಗಿ ಮೋರೆಯು ಭೀಕರವಾಗಿದ್ದರೆ ಅದು ಪರಮೇಶ್ವರನ ಭೈರವರೂಪ ಅನಿಸುವದು. ಇಂತಹ ಭಯಂಕರ ಶಂಕರ ಮೂರ್ತಿಯನ್ನು ಅದಕ್ಕಾಗಿಯೇ ನಿರ್ಮಿತವಾದ ಪ್ರತ್ಯೇಕ ದೇವಾಲಯದಲ್ಲಿ ಇರಿಸಬೇಕು. ಬೇರೆ ದೇವಾಲಯದಲ್ಲಿ ಇಡಬಾರದು.

ನರಸಿಂಹ, ವರಾಹ, ಮುಂತಾದ ಉಗ್ರ ಆಕಾರದ ದೇವತಾಮೂರ್ತಿಗಳನ್ನು ಬಹು ಎಚ್ಚರಿಕೆಯಿಂದ ಕಟಿಯಬೇಕು. ಈ ಉಗ್ರ ಪ್ರತಿಮೆಗಳ ನಿರ್ಮಾಣದಲ್ಲಿ ಹೆಚ್ಚು ಕಡಿಮೆಯಾದರೆ ಅನಿಷ್ಟ. ಅಂಗ ನಿರ್ಮಿತಿಯಲ್ಲಿ ದೋಷಗಳಾದರೆ ಯಜಮಾನನಿಗೆ ಸಾವು. ಅಧಿಕವಾದರೆ ಶಿಲ್ಪಿಗೆ ಮೃತ್ಯು. ತೆಳ್ಳಗಾದರೆ ದ್ರವ್ಯಹಾನಿ. ಹೊಟ್ಟೆ ಬಹಳ ಸೇದಿದಂತಾದರೆ ದೇಶಕ್ಕೆ ಬರಗಾಲ, ಮೂಗು ಸೊಟ್ಟಾಗಿದ್ದರೆ ದುಃಖ, ಯಾವದೇ ಅವಯವ ಕುಗ್ಗಿದರೆ ಭಯಾಪಾಯ. ಮೂಗು ಚಪ್ಪಟೆಯಾದರೆ ದುಃಖ, ಕಣ್ಣು ಸರಿಯಾಗಿ ಇಲ್ಲದಿದ್ದರೆ ಶಿಲ್ಪಿ ಯಜಮಾನರಿಬ್ಬರಿಗೂ ಕುರುಡುತನ, ಮುಖವು ಕಳೆಗೆಟ್ಟರೆ ಇಬ್ಬರಿಗೂ ದುಃಖ. ಕೈಕಾಲು ಬಡಕಲಾಗಿದ್ದರೆ ಗುಡಿಗೆ ಬರುವ ಜನರಿಗೆಲ್ಲ ಹುಚ್ಚು ಹಿಡಿಯುವದು.

ವರಾಹ ನರಸಿಂಹಾದಿಗಳ ಮುಖ ನಿಸ್ತೇಜವಾದರೆ ರಾಜನಿಗೆ ಹಿಂಸೆ, ಸೊಂಟ, ಕೈಕಾಲುಗಳು ಅವಲಕ್ಷಣವಾದರೆ ರಾಷ್ಟ್ರಕ್ಕೆ ಅಪಾಯ, ಮೊಂಡಿಮೊಳಕಾಲುಗಳು ವಿಷಮವಾದರೆ ಶತ್ರುಗಳಿಗೆ ಅವಕಾಶ. ಎದೆ ಅಪರೂಪವಾಗಿ ಇಲ್ಲದಿದ್ದರೆ ಯಜಮಾನನ ಮಿತ್ರ ಮಕ್ಕಳಿಗೆ ಕೇಡು. ಆದುದರಿಂದ ಶಿಲ್ಪಿಗಳು ಮೂರ್ತಿ ಲಕ್ಷಣಶಾಸ್ತ್ರವನ್ನು ತಿಳಿದು ಅದರ ಎಲ್ಲ ವಿಧಿ ವಿಧಾನವನ್ನು ಅರಿತು, ಸರಿಯಾಗಿ ಶಾಸ್ತ್ರೋಕ್ತವಾಗಿ ಸುಂದರವಾಗಿ ಪ್ರತಿಮೆಗಳನ್ನು ನಿರ್ಮಿಸಬೇಕು. ಪ್ರತಿಮೆಯು

ಸರ್ವಾವಯವ ಸುಂದರವಾಗಿ, ಶಾಸ್ತ್ರೋಕ್ತವಾಗಿ ಒಂದೂ ಕುಂದಿಲ್ಲದಂತಿದ್ದರೆ ಅದರಿಂದ ಎಲ್ಲರಿಗೂ ಆಯುಷ್ಯವೃದ್ಧಿ ಸಂಪತ್ತು ಸಮೃದ್ಧಿ.

ಮೇಲೆ ಹೇಳಿದ ಲಕ್ಷಣಗಳಿಂದ ಒಪ್ಪುವಂತೆ ಮಹಾದೇವರ ದಿವ್ಯಮೂರ್ತಿಯನ್ನು ನಿರ್ಮಿಸಿ ಸುತ್ತಲೂ ದೇವತೆಗಳು ಅವನನ್ನು ಕೊಂಡಾಡುತ್ತಿರುವಂತೆ ರಚಿಸಬೇಕು. ಇಂದ್ರ, ನಂದೀ, ಮಹಾಕಾಲ ಮುಂತಾದವರು ಸೇವೆ ಮಾಡುತ್ತಿರುವಂತೆ ಅಕ್ಕಪಕ್ಕದಲ್ಲಿ ಲೋಕಪಾಲಕರು ನಮಸ್ಕರಿಸುವಂತೆ ರೂಪಿಸಬೇಕು. ಭೂತ ಬೇತಾಳಗಳೊಡನೆ ಭೃಂಗಿಯ ನರ್ತನ, ಪ್ರಮಥಗಣಗಳ ಪ್ರಾರ್ಥನೆ, ಗಂಧರ್ವರ ಗಾಯನ, ವಿದ್ಯಾಧರರ ಸೇವನೆ, ಅಪ್ಸರಾಸ್ತ್ರೀಯರ ನರ್ತನ,ಗುಹ್ಯಕ ಮೊದಲಾದ ಗಣಾಧಿಪರ ಆರಾಧನ, ಮಹೇಂದ್ರ ಮಹರ್ಷಿ ಮಹಾತ್ಮರ ನಮನ, ಭಕ್ತ ಜನರ ಭಜನ, ದೇವ, ಮಾನವ ಸ್ತವನ ಮುಂತಾದ ಬಗೆಬಗೆಯ ಭಕ್ತಿ, ಭಜನ, ಪೂಜನ, ಅರ್ಚನಾದಿ ಮುದ್ರೆಗಳಲ್ಲಿ ಕಿಂಕರರ ಸೇವೆ ಸ್ವೀಕರಿಸುವ ಭಗವಾನ್ ಪರಶಿವನಮೂರ್ತಿಯನ್ನು ಕೆತ್ತಿ, ಕೊರೆದು, ಕಟೆದು, ಮಾಡಿ, ನಿಲ್ಲಿಸಿ ಪ್ರತಿಷ್ಠಾಪಿಸಬೇಕು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರಾ ಅರವತ್ತನೇಯ ಅಧ್ಯಾಯ ಮುಗಿದುದು*



## ಪ್ರತಿಮಾ ಲಕ್ಷಣ

**ಅಧ್ಯಾಯ - ೨೬೧**

**ಸೂತ ಉವಾಚ:**

**"ಅಧುನಾ ಸಂಪ್ರವಕ್ಷ್ಯಾಮಿ ಅರ್ಧನಾರೀಶ್ವರಂ ಪರಂ।**
**ಅರ್ಧೇನ ದೇವದೇವಸ್ಯ ನಾರೀರೂಪಂ ಸುಶೋಭನಂ॥**

**ಸೂತ :-** ಈಗ ಸರ್ವಶ್ರೇಷ್ಠವೆನಿಸಿದ ಶಿವನ ಅರ್ಧನಾರೀಶ್ವರ ಪ್ರತಿಮಾ ಲಕ್ಷಣ ಹೇಳುತ್ತೇನೆ. ಅರ್ಧನಾರೀಶ್ವರ ದೇಹದಲ್ಲಿ ಅರ್ಧಭಾಗವು ನಾರೀ ರೂಪದಿಂದ ಸುಂದರವಾಗಿ ಕಂಗೊಳಿಸುತ್ತದೆ. ಇನ್ನರ್ಧಭಾಗವು ಪರಮೇಶ್ವರನ ಪೌರುಷ ಲಕ್ಷಣಗಳಿಂದ ಶೋಭಿಸುತ್ತದೆ. ಪರಮೇಶ್ವರನ ಅರ್ಧ ಭಾಗದಲ್ಲಿ ಜಡೆ, ಆ ಜಡೆಯಲ್ಲಿ ಬಾಲಚಂದ್ರನ ಚಾರು ಕಲೆಗಳನ್ನು ಮೂಡಿಸಬೇಕು. ನಾರೀರೂಪದ ಪಾರ್ವತಿಯ ಅರ್ಧಭಾಗದಲ್ಲಿ ಬೈತಲೆ ತೆಗೆದು ತಿಲಕವನ್ನು ಹಚ್ಚಬೇಕು.

ಈ ಅರ್ಧನಾರೀಶ್ವರ ಪ್ರತಿಮೆಯ ಬಲಗಿವಿಯಲ್ಲಿ ವಾಸುಕಿ ಸರ್ಪವನ್ನು ಕುಂಡಲಾಕಾರವಾಗಿ ಚಿತ್ರಿಸಿ, ಎಡಗಿವಿಯಲ್ಲಿ ಕರ್ಣಕುಂಡಲ ತೂಗಿಬಿಡಬೇಕು. ಬಲಗೈಯಲ್ಲಿ ತ್ರಿಶೂಲ, ಕಪಾಲ, ಎಡಗೈಯಲ್ಲಿ ಕನ್ನಡಿ, ಕನ್ನೈದಿಲೆಗಳನ್ನು ಇರಿಸಬೇಕು. ಎಡದೋಳುಗಳಿಗೆ ವಂಕಿ, ನಾಗಮುರಿಗೆಗಳನ್ನು ತೊಡಿಸಬೇಕು.

ಬಲಭಾಗದಲ್ಲಿ ಪರಮೇಶ್ವರನ ದೇಹಾರ್ಧಕ್ಕೆ ಬಂಗಾರದ ಎಳೆಯ ಜನಿವಾರವನ್ನೂ ಹಾಕಬೇಕು. ಎಡಗಡೆಯ ಅರ್ಧದಲ್ಲಿ ಪುಷ್ಟವಾದ ಒಂದು ಸ್ತನವನ್ನು ಹೊಳೆಯುವ ಅರ್ಧ ಮುತ್ತಿನ ಹಾರವನ್ನು ಅರ್ಧ ನಿತಂಬವನ್ನು ರಚಿಸಬೇಕು.

ಬಲಗಡೆ ಹುಲಿಯ ಚರ್ಮ ಉಡಿಸಬೇಕು. ಎಡಗಡೆ ಸೀರೆಯ ಸೆರಗು ಜೋಲಾಡುವಂತೆ ತೋರಿಸಬೇಕು.

ಶಿವಭಾಗದಲ್ಲಿ ಹರಿಯುವ ಹಾವಿನಿಂದ ಹೊಳೆಯುವ ಮೂರೆಳೆ ಉಡುದಾರ ತೋರಿಸಬೇಕು. ಶಿವನು ಬಲಗಾಲನ್ನು ಪದ್ಮಪೀಠದ ಮೇಲೆ ಇಟ್ಟಂತೆ, ಶಿವೆಯು ಎಡಗಾಲನ್ನು ಸ್ವಲ್ಪ ಮೇಲಕ್ಕೆ ಎತ್ತಿದಂತೆ ರೇಖಿಸಬೇಕು. ಅವಳ ಕಾಲುಗಳಲ್ಲಿ ಗೆಜ್ಜೆ, ವೈಜಣ, ಬೆರಳುಂಗುರ, ಅಂಗಾಲಿಗೆ ಅಲತಿಗೆಯ ರಸ ಮುಂತಾದವುಗಳನ್ನು ಶೋಭಿಸುವಂತೆ ಕೊರೆಯಬೇಕು. ಇದು ಅರ್ಧನಾರೀಶ್ವರ ಪ್ರತಿಮೆ ಆಕಾರ.

ಇನ್ನು ಉಮಾಮಹೇಶ್ವರಿ ಪ್ರತಿಮಾಲಕ್ಷಣ ಹೇಳುತ್ತೇನೆ ಕೇಳು. ಶಂಕರನು ನಾಲ್ಕು ಅಥವಾ ಎರಡು ತೋಳುಗಳಿಂದ ಆಯುಧಗಳನ್ನು ಧರಿಸಿ ಒಂದು ಕೈಯನ್ನು ತನ್ನ ಎಡತೊಡೆಯ ಮೇಲೆ ಕುಳಿತ ಪಾರ್ವತಿಯ ಹೆಗಲಮೇಲೆ ಹಾಕಿರುವನು. ಅವನ ತಲೆಯ ಮೇಲೆ ಜಟಾಜೂಟ, ಅದರಲ್ಲಿ ಹೊಳೆಯುವ ಚಂದ್ರಕಳೆ, ಮುಖದಲ್ಲಿ ಮೂರು ಕಣ್ಣು, ಬಲಗೈಯಲ್ಲಿ ನೈದಿಲೆ ಹಾಗೂ ಶೂಲ. ಎಡಗೈ ಪಾರ್ವತಿಯ ಸ್ತನವನ್ನು ಸ್ಪರ್ಶಿಸುತ್ತಿರುವದು. ವ್ಯಾಘ್ರಾಜಿನ ಉಟ್ಟು, ರತ್ನಾಭರಣಗಳಿಂದ ಮೆರೆಯುವ, ಅರ್ಧ ಚಂದ್ರಾಕಾರದ ತಿಲಕ ಧರಿಸಿರುವ ಮಹಾದೇವರ ಶಾಂತ, ಗಂಭೀರ ಮುಗ್ಧ ಮನೋಹರ ಮೂರ್ತಿಯನ್ನು ನಿರ್ಮಿಸಬೇಕು.

ಪಾರ್ವತಿಯ ಕಿವಿಯಲ್ಲಿ ಬಾವಲಿ, ಹಣೆಯಲ್ಲಿ ತಿಲಕ, ಕಿವಿಯಲ್ಲಿ ರತ್ನಕುಂಡಲ, ಅವುಗಳ ಕೆಳಗೆ ಝುಮುಕಿ, ಕೊರಳಲ್ಲಿ ಹಾರ, ತೋಳುಗಳಲ್ಲಿ ನಾಗಮುರಿಗೆ, ಹಣೆಯ ಮೇಲೆ ಸುರುಳೆಯಾಗಿ ಉರುಳುವ ಮುಂಗುರುಳು. ಪರಮೇಶ್ವರನ ಮುಖವನ್ನು ನಿಟ್ಟಿಸುವ ದೃಷ್ಟಿ, ಶಿವನ ಹೆಗಲ ಮೇಲೆ ಲೀಲೆಯಿಂದ ಇರಿಸಿದ ಕೈ. ಎಡಗೈಯಲ್ಲಿ ಕನ್ನಡಿ ಅಥವಾ ಕನ್ನೈದಿಲೆ.

ಒಂದು ಪಕ್ಕದಲ್ಲಿ ಸಖಿಯರಾದ ಜಯಾ, ವಿಜಯಾ, ಇನ್ನೊಂದು ಪಕ್ಕದಲ್ಲಿ ಷಣ್ಮುಖ, ಗಣಪತಿ, ಇಂತಹ ಪಾರ್ವತಿಯು ಶಿವನ ಎಡತೊಡೆಯ ಮೇಲೆ ಕುಳಿತು ಒಂದು ಕೈಯಿಂದ ಪತಿಯ ಕೊರಳು ಬಳಸಿ, ಬಲಗೈಯನ್ನು ಹೊರಗಡೆಯಿಂದ ನೀಡಿ ಶಿವನ ಉದರ ಅಥವಾ ತೋಳುಗಳನ್ನು ಬೆರಳುಗಳಿಂದ ನೀವುತ್ತ ಇರುವಳು ಉಮಾ ಮಹೇಶ್ವರಿ ಮೂರ್ತಿಯಲ್ಲಿ ಇಂತಹ ಪಾರ್ವತಿಯೊಂದಿಗೆ ಪರಮೇಶ್ವರನು ನಲುಮೆಯಿಂದ ಕುಳಿತುಕೊಂಡಿರುವ ಸುಖಾಸನ ಮುದ್ರೆಯನ್ನು ಚಿತ್ರಿಸಬೇಕು.

ದೇವಸ್ಥಾನದ ಬಾಗಿಲು ಮುಂದಿನ ತೋರಣ, ಅದರ ಮೇಲಿನ ಭಾಗದಲ್ಲಿ ವಿದ್ಯಾಧರರು, ಗಣಾಧೀಶ್ವರರು, ತಂಬೂರಿ ಹಿಡಿದು ಹಾಡುತ್ತಿರುವ ಅಪ್ಸರೆಯರೆಲ್ಲರೂ ಶಿವನನ್ನು ಧ್ಯಾನ, ಗಾನಗಳಿಂದ ಆರಾಧಿಸುವ ದೃಶ್ಯವನ್ನು ಕೊರೆದು ತೋರಿಸಬೇಕು. ಇಂತಹ ಉಮಾ ಮಹೇಶ್ವರ ಪ್ರತಿಮೆಯನ್ನು ಮಾಡಿದವರಿಗೆ ಪೂಜಿಸಿದವರಿಗೆ ಒಳ್ಳೇ ಶ್ರೇಯಸ್ಸಾಗುವದು. ಬ್ರಾಹ್ಮಣರೆ, ಇನ್ನು ಮೇಲೆ ಸರ್ವ ಪಾಪಗಳನ್ನು ಸಂದರ್ಶನ ಮಾತ್ರದಿಂದಲೇ ಪರಿಹರಿಸುವ ಹರಿಹರೇಶ್ವರ ಮೂರ್ತಿಯ ಲಕ್ಷಣ ಹೇಳುತ್ತೇನೆ ಕೇಳಿರಿ.

ಇದರಲ್ಲಿ ಒಂದೇ ಪ್ರತಿಮೆಯಲ್ಲಿ ಎಡಬದಿಯಲ್ಲಿ ವಿಷ್ಣು, ಬಲಬದಿಯಲ್ಲಿ ಶಿವ ಮೂರ್ತಿಗಳನ್ನು ಮಾಡಿಸಬೇಕು. ಎಡಬದಿಯಲ್ಲಿ ನಾರಾಯಣನ ರತ್ನಾಭರಣಗಳಿಂದ

ಅಲಂಕೃತವಾದ ಎರಡೂ ಬಾಹುಗಳಲ್ಲಿ ಶಂಖ, ಚಕ್ರಗಳನ್ನು ಚಿತ್ರಿಸಬೇಕು. ಕೆಳಗೈಯಲ್ಲಿ ಚಕ್ರಕ್ಕೆ ಬದಲಾಗಿ ಗದೆಯನ್ನು ಇರಿಸಬಹುದು ಮೇಲ್ಗೈಯಲ್ಲಿ ಶಂಖವಿರಬೇಕು. ಸೊಂಟಕ್ಕೆ ಪೀತಾಂಬರ ಉಡಿಸಿ, ಎಡಪಾದಕ್ಕೆ ಅಲಂಕಾರ ತೊಡಿಸಿ ರತ್ನಾಭರಣ ಇರಿಸಬೇಕು.

ಶಿವನ ಭಾಗವಾದ ಬಲಭಾಗದಲ್ಲಿ ಮೇಲೆ ಜಟಾಧರ, ಆ ಜಟಾಜೂಟದಲ್ಲಿ ಅರ್ಧಚಂದ್ರ, ಕೈಕೊರಳುಗಳಲ್ಲಿ ಹಾವಿನ ಹಾರ, ಬಲಗೈಯಲ್ಲಿ ಅಭಯ ಮುದ್ರೆ, ಮತ್ತೊಂದು ಕೈಯಲ್ಲಿ ತ್ರಿಶೂಲ, ಹಾವಿನ ಜನಿವಾರ, ನಡುವಿನ ಇನ್ನರ್ಧಭಾಗಕ್ಕೆ ಗಜಚರ್ಮದ ಹೊದಿಕೆ. ಮತ್ತೊಂದು ಪಾದಕ್ಕೆ ನಾಗಾಭರಣದ ಅಲಂಕಾರ ಮಾಡಬೇಕು. ಹೀಗೆ ಶಿವನಾರಾಯಣನ ಸುಂದರ ಪ್ರತಿಮೆಯನ್ನು ಬಹು ಚಾತುರ್ಯದಿಂದ ರಚಿಸಬೇಕು.

ಇನ್ನು ವರಾಹ ಮೂರ್ತಿಯ ಲಕ್ಷಣ ಹೇಳುತ್ತೇನೆ ಕೇಳಿರಿ. ವರಾಹ ರೂಪಿಯಾದ ವಿಷ್ಣುವಿನ ಕೈಗಳಲ್ಲಿ ಗದಾ ಪದ್ಮಗಳು ಇರಬೇಕು. ಎಡಗಡೆಯ ಮೊಳಕೈ ಭೂದೇವಿಯನ್ನು ಮುಟ್ಟುತ್ತಿರಬೇಕು. ಕೋರೆ ಹಲ್ಲುಗಳ ತುದಿ, ಮೂಗು, ಮುಖ ಮೂರು ಉದ್ದವಾಗಿ ಮೊನಚಾಗಿ ಇರಬೇಕು. ಆಶ್ಚರ್ಯದಿಂದ ಮುಖವನ್ನು ಅರಳಿಸಿ, ಕೊರೆದಾಡೆಯ ತುದಿಯಿಂದ ಭೂಮಂಡಲವನ್ನು ಎತ್ತಿ ಹಿಡಿದಿರಬೇಕು. ವರಾಹ ಮೂರ್ತಿಯು ಬಲಗೈಯನ್ನು ಸೊಂಟದ ಮೇಲೂ ಇನ್ನೊಂದನ್ನು ಆದಿಶೇಷನ ಮೇಲೆ ಇಟ್ಟು ಗಾಂಭೀರ್ಯದಿಂದ ನಿಂತುಕೊಂಡಿರಬೇಕು. ಲೋಕಪಾಲಕರು ಸುತ್ತಲೂ ನಿಂತು ಸ್ತುತಿಸುತ್ತಿರುವಂತೆ ಆಕರ್ಷಕವಾಗಿ ವರಾಹ ವಿಗ್ರಹವನ್ನು ತಯಾರಿಸಬೇಕು.

ನರಸಿಂಹದೇವರ ಉಗ್ರಮೂರ್ತಿಯನ್ನು ಎಂಟು ತೋಳು, ಭಯಂಕರ ಸಿಂಹ ಮುಖ, ಬಿರಿದ ಕಣ್ಣು, ತೆರೆದ ಬಾಯಿ, ನಿಮಿರಿದ ಕೂದಲು, ನಿಗರಿದ ಕಿವಿ, ಹಿರಣ್ಯ ಕಶುಪುವನ್ನು ಸೀಳಿಹಾಕುವ ಘೋರಭಂಗಿ, ಗಂಟಿಕ್ಕಿದಹುಬ್ಬು, ಉಗ್ರ ಮುಖ, ಮುಂತಾದ ಲಕ್ಷಣಗಳಿಂದ ರಚಿಸಬೇಕು. ಆ ನರಸಿಂಹ ವಿಗ್ರಹದ ತೊಡೆಯ ಮೇಲೆ ಅಡ್ಡಬಿದ್ದು, ಉಗ್ರಮುಖ ಉರಿವ ಕಣ್ಣಿನಿಂದ ಖಡ್ಗ ಎತ್ತಿ ಹೊಡೆಯಲು ಹವಣಿಸುತ್ತಿರುವಂತಹ ಹಿರಣ್ಯ ಕಶಿಪುವನ್ನು ಕಲ್ಪಿಸಬೇಕು. ನರಸಿಂಹನು ಹೊಟ್ಟೆ ಹರಿದು ದೈತ್ಯನ ಕರಳು ಹೊರಬಿದ್ದ ಪರಿಯನ್ನು ಅದರಲ್ಲಿ ತೋರಿಸಬೇಕು. ಬ್ರಹ್ಮಾಂಡವೆಲ್ಲವನ್ನು ಅಳೆದು ಆಕ್ರಮಿಸುವದಕ್ಕಾಗಿ ಅದ್ಭುತ ಆಕಾರ ತಳೆದ ತ್ರಿವಿಕ್ರಮನ ಮೂರ್ತಿಯನ್ನು ನಿರ್ಮಿಸುವ ವಿಧಾನವನ್ನು ಹೇಳುತ್ತೇನೆ.

ವಿರಾಡ್ರೂಪಿಯಾದ ತ್ರಿವಿಕ್ರಮನು ತನ್ನ ಪಾದವನ್ನು ಮೇಲೆ ಎತ್ತಿ ಕೈಯಲ್ಲಿ ಹಿಡಿದು ಕೊಂಡಂತೆ ತೋರಿಸಬೇಕು. ಕೆಳಗಡೆ ಬಲಗೈಯಲ್ಲಿ ಕೊಡೆ, ಎಡಗೈಯಲ್ಲಿ ಕಮಂಡಲ ಹಿಡಿದ ವಾಮನದೇವನನ್ನು ಚಿತ್ರಿಸಬೇಕು. ಅವನ ಪಕ್ಕದಲ್ಲಿ ಭೂದಾನ ಸಂಕಲ್ಪಕ್ಕಾಗಿ ಗಿಂಡಿ ಹಿಡಿದುಕೊಂಡ ಬಲಿಚಕ್ರವರ್ತಿಯನ್ನು ಗರುಡನು ಬಂಧಿಸುವ ದೃಶ್ಯ ಕೊರೆಯಬೇಕು. ಮತ್ಸ್ಯರೂಪಿಯಾದ ವಿಷ್ಣುವಿನ ರೂಪವನ್ನು ಮೀನು ರೂಪಾಕಾರವಾಗಿ, ಕೂರ್ಮಾವತಾರಿ ಹರಿಯ ರೂಪವನ್ನು ಆಮೆಯ ಆಕಾರವಾಗಿ ರಚಿಸಬೇಕು. ಇದರಂತೆ ನಾರಾಯಣನ ಬಗೆಬಗೆಯ ಅವತಾರ ರೂಪಗಳ ಹಾಗೂ ಮೂಲ ರೂಪದ ವಿಗ್ರಹಗಳನ್ನು ಆಯಾ ಲಕ್ಷಣಗಳಿಗೆ ಅನುಸರಿಸಿ ನಿರ್ಮಿಸಬೇಕು.

ಬ್ರಹ್ಮದೇವರ ಮೂರ್ತಿಗೆ ನಾಲ್ಕು ಮುಖಗಳನ್ನು ನಾಲ್ಕೂ ದಿಕ್ಕುಗಳಿಗೆ ಮಾಡಿ, ಹಂಸದ ಮೇಲೆ ಅಥವಾ ಕಮಲದ ಆಸನದ ಮೇಲೆ ಕುಳಿತಂತೆ ಚಿತ್ರಿಸಬೇಕು. ಕಮಲ ಕೋಶದಲ್ಲಿರುವ ಕಿಂಜಲ್ಕದಂತೆ ರಂಜಿಸುವ ಕೆಂಪು ಬಣ್ಣ, ಅಭಯ ನೀಡುವ ಕಣ್ಣು, ಎಡಗೈಯಲ್ಲಿ ಕಮಂಡಲ, ಬಲಗೈಯಲ್ಲಿ **ಸ್ರುವ** ಎಂಬ ಸಾಧನ, ಮೂರನೆಯ ಕೈಯಲ್ಲಿ ದಂಡ, ನಾಲ್ಕನೆಯ ಕೈಯಲ್ಲಿ ಪುಸ್ತಕ, ಮೈಮೇಲೆ ಕೃಷ್ಣಾಜಿನ, ಹೆಗಲಮೇಲೆ ಯಜ್ಞೋಪವೀತ, ಸುತ್ತಲೂ ದೇವ, ಗಂಧರ್ವರ ಸ್ತೋತ್ರ, ಪಕ್ಕದಲ್ಲಿ ನಾಲ್ಕು ವೇದಗಳು, ಇನ್ನೊಂದರಲ್ಲಿ ತುಪ್ಪದ ಪಾತ್ರೆ, ಎಡಗಡೆ ಸಾವಿತ್ರಿ, ಬಲಕ್ಕೆ ಸರಸ್ವತಿ, ಪಾದ ತಲದಲ್ಲಿ ಬ್ರಹ್ಮರ್ಷಿಗಳು ಈ ಲಕ್ಷಣಗಳಿಂದ ಬ್ರಹ್ಮದೇವರ ಮೂರ್ತಿಯನ್ನು ಸಿದ್ಧಗೊಳಿಸಬೇಕು.

ದೇವ ಸೇನಾಪತಿಯಾದ ಷಣ್ಮುಖನ ಮೂರ್ತಿಯನ್ನು ನವಿಲಿನ ಮೇಲೆ ಕುಳಿತ ಕೋಮಲ ದೇಹದ ಬಾಲಕನ ಮುಖ ಮುದ್ರೆಯಲ್ಲಿ ಮೂಡಿಸಬೇಕು. ಬಣ್ಣವು ಮಾತ್ರ ಗುಲಾಬಿಯ ಪಕಳೆಯಂತೆ ಹೊಳೆಯುತ್ತಿರಬೇಕು. ಹಳ್ಳಿಯ ದೇವಸ್ಥಾನಗಳಲ್ಲಿ ಪ್ರತಿಷ್ಠಾಪಿಸಿದರೆ ಷಣ್ಮುಖನಿಗೆ ನಾಲ್ಕು ತೋಳು, ಪಟ್ಟಣದಲ್ಲಿಯಾದರೆ ಹನ್ನೆರಡು, ಅರಣ್ಯ ಅಥವಾ ಮನೆಯಲ್ಲಿ ಆದರೆ ಎರಡು ತೋಳುಗಳನ್ನು ಮಾಡಬೇಕು.

ಹನ್ನೆರಡು ತೋಳುಗಳನ್ನು ಮಾಡಿದಾಗ ಶಕ್ತಿ, ಪಾಶ, ಖಡ್ಗ, ಬಾಣ, ಶೂಲ ಮುಂತಾದ ಐದು ಆಯುಧಗಳನ್ನು ಹಿಡಿದು ಆರನೆಯ ಕೈಯಿಂದ ಅಭಯ ಮುದ್ರೆ ನೀಡುವಂತಿರಬೇಕು. ಹೀಗೆ ಬಲಬದಿ ಆರು ಕೈಗಳನ್ನು ಚಿತ್ರಿಸಿ, ಎಡಗಡೆಯ ಆರು ಕೈಗಳಲ್ಲಿ ಬಿಲ್ಲು, ಬಾವುಟ, ಮುಷ್ಟಿ, ಎತ್ತಿ ತೋರುವ ತೋರು ಬೆರಳು, ಗುರಾಣಿ, ಕೋಳಿ ಇವುಗಳು ಶೋಭಿಸುವಂತೆ ಮಾಡಬೇಕು.

ನಾಲ್ಕು ತೋಳುಗಳು ಇದ್ದಾಗ, ಎಡಗಡೆಯ ತೋಳುಗಳಲ್ಲಿ ಶಕ್ತಿ, ಪಾಶ, ಬಲಗಡೆಗೆ ಖಡ್ಗ, ಅಭಯ ಹಸ್ತ ತೋರಿಸಬೇಕು. ಎರಡೇ ತೋಳು ಮಾಡಿದಾಗ ಬಲಗೈಯಲ್ಲಿ ಶಕ್ತ್ಯಾಯುಧ, ಎಡಗೈಯಲ್ಲಿ ಕೋಳಿ ನಿರ್ಮಿಸಬೇಕು.

ಇನ್ನು ವಿನಾಯಕನ ಲಕ್ಷಣವನ್ನು ಹೇಳುತ್ತೇನೆ ಕೇಳು. ಆನೆಯ ಮುಖ, ಮೂರು ಕಣ್ಣು, ದೊಡ್ಡ ಹೊಟ್ಟೆ, ನಾಲ್ಕು ತೋಳು, ಹಾವಿನ ಜನಿವಾರ, ಮರದ ಕಿವಿ, ಅಗಲ ಮೋರೆ, ಒಂಟಿ ಕೋರೆ, ದಪ್ಪ ಹೊಟ್ಟೆ ಇವುಗಳಿಂದ ವಿನಾಯಕನ ಮೂರ್ತಿಯನ್ನು ರಚಿಸಬೇಕು.

ಗಣಪತಿಯು ಬಲಗೈಯಲ್ಲಿ ಅವನ ಒಂದು ದಂತವನ್ನು ಮತ್ತೊಂದು ಬಲಗೈಯಲ್ಲಿ ನೀಲಕಮಲವನ್ನು ಒಂದು ಎಡಗೈಯಲ್ಲಿ ಕಡಬನ್ನು ಮತ್ತೊಂದರಲ್ಲಿ ಕೊಡಲಿ ಹಿಡಿದಿರುವಂತೆಯೂ ಚಿತ್ರಿಸಬೇಕು. ಹೊಟ್ಟೆ, ತಲೆ, ಆಕಾರ, ಎಲ್ಲವೂ ದೊಡ್ಡದಾಗಿರುವದರಿಂದ ಮುಖವು ಶೀರಾಗಿ ಗುಜ್ಜಾಗಿ ಕೈಕಾಲು ಹೆಗಲು ಪುಷ್ಟವಾಗಿ ಕಾಣುವಂತೆ ರಚಿಸಬೇಕು. ಈ ವಿಘ್ನೇಶ್ವರನ ಪ್ರತಿಮೆಯ ಕೆಳಗೆ ಇಲಿಯನ್ನು ನಿರ್ಮಿಸಬೇಕು

ಇನ್ನು ಕಾತ್ಯಾಯಿನಿ ಪ್ರತಿಮೆಯ ಲಕ್ಷಣ ಹೇಳುತ್ತೇನೆ. ಕಾತ್ಯಾಯಿನಿಗೆ ಹತ್ತು ತೋಳುಗಳು. ಜಡೆಮುಡಿಯ ಕೇಶಕಲಾಪದಲ್ಲಿ ಮಿನುಗುವ ಅರ್ಧಚಂದ್ರ, ಮುಖದಲ್ಲಿ ಮೂರು ಕಣ್ಣು, ಅಗಸೆ ಹೂವಿನ ಮೈಬಣ್ಣ. ವದನದಲ್ಲಿ ಹುಣ್ಣಿವೆ ಚಂದ್ರನ

ಸೊಬಗು. ಸುಂದರ ದಂತಪಂಕ್ತಿ, ಪರಿಪುಷ್ಪಸ್ತನ, ಮೈತುಂಬ ಹರೆಯದ ಸಿರಿ, ಅನರ್ಘ್ಯ ರತ್ನಾಭರಣ. ಬಲಗೈಗಳಲ್ಲಿ ತ್ರಿಶೂಲ, ಖಡ್ಗ, ಚಕ್ರ, ಬಾಣ, ಶಕ್ತಿ ಎಡಗೈಗಳಲ್ಲಿ ಪಾಶ, ಅಂಕುಶ, ಬಿಲ್ಲು, ಬಾಣ, ಗುರಾಣಿ, ಗಂಟೆ, ಕೊಡಲಿ ಮುಂತಾದವುಗಳಿಂದ ಭವ್ಯ ಭೀಷಣವಾಗಿ ಪ್ರತಿಮೆ ನಿರ್ಮಿಸಬೇಕು.

ಸೊಂಟದ ಹಿಂಬದಿ ಸ್ತನದ್ವಂದ್ವ, ಹಾಗೂ ಕೇಶಪಾಶಗಳ ಭಾರದಿಂದ ಅವಳ ಶರೀರವು ಮೂರು ಕಡೆ ಬಾಗಿರುವಂತಿರಬೇಕು. ತ್ರಿಮೂರ್ತಿಗಳ ಆಕಾರ ಲಕ್ಷಣವುಳ್ಳ ಆ ದೇವಿಯ ಕೆಳಗಡೆ ಎರಡು ತಲೆಯ ಮಹಿಷವನ್ನು ರಚಿಸಬೇಕು. ಅದರ ತಲೆ ಕತ್ತರಿಸಿಹಾಕಲು ಮಹಿಷಾಸುರನು ಕೈಯಲ್ಲಿ ಕತ್ತಿ ಹಿಡಿದು ಅಲ್ಲಿಯೇ ಎದ್ದುನಿಂತಿದ್ದಾನೆ. ದೇವಿಯ ಕೈಯಲ್ಲಿಯ ತ್ರಿಶೂಲದಿಂದ ಅವನ ಎದೆ ಸೀಳಿದೆ. ಕರುಳು ಹರಿದುಹೋಗಿದೆ. ಮೈಯೆಲ್ಲ ರಕ್ತ, ನೆತ್ತರು ಸೋರುವ ಕಣ್ಣು, ನಾಗ ಪಾಶಗಳು ಬಿಗಿದಿವೆ, ಹುಬ್ಬುಗಂಟುಹಾಕಿದ ಭಯಂಕರ ಮುಖವು ವಿಕಾರವಾಗಿದೆ. ಪಾಶ ಸಹಿತವಾದ ಎಡಗೈಯಿಂದ ದೇವಿಯು ಅವನ ಜುಟ್ಟು ಹಿಡಿದಿದ್ದಾಳೆ. ದೇವಿಯು ಕುಳಿತು ಸಿಂಹವು ಬಾಯಿಯಿಂದ ರಕ್ತವನ್ನು ಕಾರುವಂತಿದೆ. ಬಲಗಾಲನ್ನು ದುರ್ಗಾದೇವಿಯೂ ಆ ಸಿಂಹದ ಮೇಲೆ ಸಮವಾಗಿ ಇಟ್ಟು ಕೊಂಡಿದ್ದಾಳೆ. ದೇವತೆಗಳು ಅವಳ ರೂಪವನ್ನು ಸ್ತುತಿಸುತ್ತಿದ್ದಾರೆ. ಹೀಗೆ ಕಾಳೀದೇವಿಯ ವಿಗ್ರಹವನ್ನು ನಿರ್ಮಿಸಬೇಕು.

ಇನ್ನು ದೇವೇಂದ್ರನ ಮೂರ್ತಿಯ ಲಕ್ಷಣವನ್ನು ಹೇಳುತ್ತೇನೆ. ಸಾವಿರ ಕಣ್ಣು, ಮದೋನ್ನತ್ತವಾದ ಐರಾವತವೇ ಅವನ ವಾಹನ.

ಆನೆಯ ಮೇಲೆ ಠೀವಿಯಿಂದ ಕುಳಿತ ದೇವರಾಜ. ದಪ್ಪ ತೊಡೆ, ವಿಶಾಲ ಎದೆ, ಅಗಲ ಮುಖ, ಸಿಂಹದ ಹೆಗಲು, ಉದ್ದತೋಳು, ತಲೆಯಮೇಲೆ ರತ್ನ ಕಿರೀಟ, ಕಿವಿಗಳಲ್ಲಿ ಕುಂಡಲ, ಅರಳುಗಣ್ಣು, ಒಂದು ಕೈಯಲ್ಲಿ ವಜ್ರಾಯುಧ, ಇನ್ನೊಂದರಲ್ಲಿ ಕನ್ನೈದಿಲೆ. ಮೈತುಂಬಾ ಆಭರಣ ಸುತ್ತಲೂ ದೇವ, ಗಂಧರ್ವರು. ಎದುರು ಅಪ್ಸರೆಯರು ಓಲೈಸುತ್ತಿರುವರು ಅಕ್ಕಪಕ್ಕದಲ್ಲಿ ಛತ್ರ ಚಾಮರ ಬೀಸುವ ಸುರಸುಂದರಿಯರು. ಗಂಧರ್ವಗಣದಿಂದ ಒಡಗೂಡಿದ ಇಂದ್ರನು ಸ್ವರ್ಗ ಸಿಂಹಾಸನದಲ್ಲಿ ಮಂಡಿಸಿದಂತೆ ಮೂರ್ತಿಯನ್ನು ಮಾಡಬೇಕು. ಅವನ ಎಡಕ್ಕೆ ಕೈಯಲ್ಲಿ ಕಮಲ ಹಿಡಿದ ಶಚೀದೇವಿಯನ್ನು ಚಿತ್ರಿಸಬೇಕು. ಇದು ದೇವೇಂದ್ರನ ಪ್ರತಿಮಾ ವಿಧಾನ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರಾ ಅರವತ್ತೊಂದನೆಯ ಅಧ್ಯಾಯ ಮುಗಿದುದು.*

—o—

## ಸೂರ್ಯಾದಿ ಪ್ರತಿಮಾಲಕ್ಷಣ

ಅಧ್ಯಾಯ - ೨೬೨

**ಸೂತ ಉವಾಚ :**

**"ಪ್ರಭಾಕರಸ್ಯ ಪ್ರತಿಮಾಮಿದಾನೀಂ ಶ್ರುಣುತ ದ್ವಿಜಾಃ।**
**ರಥಸ್ಥಂ ಕಾರಯೇದ್ದೇವಂ ಪದ್ಮಹಸ್ತಂ ಸುಲೋಚನಂ॥"**

**ಸೂತ** :- ಬ್ರಾಹ್ಮಣರೆ, ಸೂರ್ಯನ ಪ್ರತಿಮೆಯ ಲಕ್ಷಣ ಹೇಳುತ್ತೇನೆ ಕೇಳಿರಿ. ಸೂರ್ಯನನ್ನು ರಥದಲ್ಲಿ ಕುಳಿತಂತೆ ಕಲ್ಪಿಸಿ, ಅವನ ಕೈಯಲ್ಲಿ ಕಮಲವನ್ನು ಕೊಟ್ಟು ಒಳ್ಳೇ ಸುಂದರವಾದ ಕಣ್ಣುಗಳನ್ನು ಚಿತ್ರಿಸಬೇಕು.

ಆ ಸೂರ್ಯನ ರಥಕ್ಕೆ ಒಂದು ಗಾಲಿ, ಏಳು ಕುದುರೆಗಳು ಇರಬೇಕು. ತಲೆಯ ಮೇಲೆ ವಿಚಿತ್ರವಾದ ಬಣ್ಣದ ಕಿರೀಟ,ಭುಜಗಳಲ್ಲಿ ಬಗೆಬಗೆಯ ಆಭರಣ. ಕೈಗಳಲ್ಲಿ ಕಮಲಪುಷ್ಪ, ಮೈ ಮೇಲೆ ಕವಚ, ಹಾಗೂ ಜೋಡು ವಸ್ತ್ರ, ತೇಜಸ್ಸಿನಿಂದ ಥಳ ಥಳಿಸುವ ಪಾದ, ಕೆಂಬಣ್ಣದಿಂದ ಕಳಕಳಿಸುವ ದೇಹದ ಬಣ್ಣ ಮುಂತಾದವುಗಳಿಂದ ಸೂರ್ಯನ ಪ್ರತಿಮೆಯನ್ನು ಎದ್ದು ಬರುವಂತೆ ನಿರ್ಮಿಸಬೇಕು. ಅವನ ಅಕ್ಕ ಪಕ್ಕದಲ್ಲಿ, ಖಡ್ಗ ಹಿಡಿದು ನಿಂತ ದಂಡ ಪಿಂಗಲ ಎಂಬ ದ್ವಾರ ಪಾಲಕರನ್ನು, ಬದಿಯಲ್ಲಿ ಕೈಯಲ್ಲಿ ಲೆಕ್ಕಣಿಕೆ ಹಿಡಿದ ಧಾತೃ ವಿಧಾತೃ ಎಂಬ ದೇವತೆಗಳನ್ನು ನಿರ್ಮಿಸಬೇಕು. ಹಾವಿನ ಹಗ್ಗದಿಂದ ಬಿಗಿದ ಏಳು ಕುದುರೆಗಳ ಕಡಿವಾಣ ಹಿಡಿದು, ರವಿ ರಥದ ಮುಂಭಾಗದಲ್ಲಿ ಕುಳಿತಂತೆ ಸಾರಥಿ ಅರುಣನನ್ನು ಚಿತ್ರಿಸಬೇಕು. ಕಮಲದ ಎಲೆಯಂತೆ ಅವನ ಬಣ್ಣ ಕೆಂಪಗಾಗಿರಬೇಕು. ಇಂತಹ ರಥದ ನಡುವೆ ಕೈಯಲ್ಲಿ ಕಮಲ ಹಿಡಿದು ಕುಳಿತ ಸೂರ್ಯನ ಮೂರ್ತಿಯನ್ನು ನಿರ್ಮಿಸಬೇಕು.

ಈಗ ಅಗ್ನಿಯ ವಿಗ್ರಹ ಲಕ್ಷಣ ಹೇಳುತ್ತೇನೆ. ಬಂಗಾರದ ಬಣ್ಣ, ಅರ್ಧ ಚಂದ್ರಾಕಾರ ಆಸನ, ಉದಯ ರವಿಯಂತೆ ಹೊಂಬಣ್ಣದ ಮುಖ, ಇಳಿಬಿಟ್ಟ ಜನಿವಾರ, ಉದ್ದ ಗಡ್ಡ, ಎಡಗೈಯಲ್ಲಿ ಕಮಂಡಲು, ಬಲಗೈಯಲ್ಲಿ ಜಪಮಾಲೆಗಳಿಂದ ಶೋಭಿಸುವ ಅಗ್ನಿದೇವನು ಆಡಿನ ಮೇಲೆ ಕುಳಿತು, ಉರಿ ತೆರೆಗಳಿಂದ ಬೆಳಗುತ್ತಿರುವಂತೆ ಚಿತ್ರಿಸಬೇಕು. ಅಥವಾ ಅಗ್ನಿ ಕುಂಡದಲ್ಲಿಯೇ ತಲೆಯ ಮೇಲ್ಗಡೆ ಸಪ್ತಜ್ವಾಲೆಗಳನ್ನು ತೂರಿ ತೊಳಗುತ್ತ ನಿಂತುಕೊಂಡಂತಿರುವ ಪಾವಕನ ಪ್ರತಿಮೆ ನಿರ್ಮಿಸಬಹುದು.

ಯಮಧರ್ಮನ ಮೂರ್ತಿಯನ್ನು ಮಾತ್ರ ಕಾಡಿಗೆಯಷ್ಟು ಕಪ್ಪಗೆ ಮಾಡಿ ದಂಡ, ಪಾಶಧರಿಸಿ ಎತ್ತರವಾದ ಕೋಣದ ಮೇಲೆ ಕುಳಿತಂತೆ ಚಿತ್ರಿಸಬೇಕು. ಅಥವಾ ಉರಿಗಣ್ಣಿನಿಂದ ಸಿಂಹಾಸನದಲ್ಲಿ ಕುಳಿತುಕೊಂಡಂತಾದರೂ ಚಿತ್ರಿಸಬಹುದು. ಇಂತಹ ಚಿತ್ರದಲ್ಲಿ ಸಮೀಪದಲ್ಲಿ ಅವನ ಕೋಣವು ಹಾಗೂ ಚಿತ್ರಗುಪ್ತನು ನಿಂತಂತೆ ತೋರಿಸಬೇಕು. ಅವನ ಸುತ್ತಲೂ ಸೌಮ್ಯರಾದ ದೇವತೆಗಳು, ಉಗ್ರಸ್ವರೂಪದ ದೈತ್ಯರೂ ಭಯಂಕರ ರೂಪದ ಯಮಕಿಂಕರರು ಇರುವಂತೆ ತೋರಿಸಬೇಕು. ಇನ್ನು ರಾಕ್ಷಸರ ಒಡೆಯನೂ ಲೋಕಪಾಲಕನೂ ಆದ ನಿಋತಿಯ ಮೂರ್ತಿ ಲಕ್ಷಣ ಹೇಳುತ್ತೇನೆ, ಕೇಳಿರಿ. ಕಾಡಿಗೆ ಬೆಟ್ಟದಂತೆ ಕರಿಬಣ್ಣ, ಮನುಷ್ಯನನ್ನು ಹೂಡಿದ ವಾಹನ,

ಕೈಯಲ್ಲಿ ಖಡ್ಗ, ಸುತ್ತಲೂ ಕ್ರೂರರಾದ ಹಿಂಡು ಹಿಂಡು ರಾಕ್ಷಸರು, ಮೈತುಂಬ ಬಂಗಾರದ ಆಭರಣ ಇವು ನಿರತಿಯ ಲಕ್ಷಣಗಳಾಗಿವೆ.

ಈಗ ಶಾಂತಸ್ವರೂಪದ ಕಿರೀಟಧಾರಿಯಾದ ವರುಣನ ಪ್ರತಿಮೆಯ ಲಕ್ಷಣ ಹೇಳುತ್ತೇನೆ. ಕೈಯಲ್ಲಿ ಪಾಶ, ಕೊರಳಲ್ಲಿ ಹಾರ, ಮೈಮೇಲೆ ವಸ್ತ್ರಾಲಂಕಾರ, ಸ್ಫಟಿಕದಂತಹ ಬಣ್ಣವುಳ್ಳ ವರುಣನು ತನ್ನ ವಾಹನವಾದ ಮೊಸಳೆಯ ಮೇಲೆ, ಶಾಂತ ಮುದ್ರೆಯಿಂದ ಕುಳಿತಂತೆ ಚಿತ್ರಿಸಬೇಕು. ಈಗ ಚಿಗರೆಯನ್ನು ವಾಹನ ಮಾಡಿಕೊಂಡು ಚಿತ್ರವರ್ಣದ ವಸ್ತ್ರವುಟ್ಟು ಶಾಂತಮೂರ್ತಿಯಾದ ವಾಯುದೇವನ ಪ್ರತಿಮೆಯ ಲಕ್ಷಣ ಹೇಳುತ್ತೇನೆ. ವಾಯುವಿನ ಹುಬ್ಬುಗಳು ಧನುಷ್ಯದ ಆಕಾರದಲ್ಲಿ ಬಾಗಿರುತ್ತವೆ. ತರುಣ ರೂಪದಿಂದ ಹರಿಣವೇರಿ ಭಕ್ತರಿಗೆ ವರಕೊಡುವ ವಾಯುದೇವರಸುತ್ತಲೂ ಬಾವುಟ, ಧ್ವಜಗಳು ಹಾರಾಡುವಂತೆ ನಿರ್ಮಿಸಬೇಕು.

ಈಗ ವಿಮಾನಾರೂಢನಾದ ಗದಾಧಾರಿ, ಕುಬೇರನ ಮೂರ್ತಿಯ ಲಕ್ಷಣ ಹೇಳುತ್ತೇನೆ ಕೇಳಿರಿ. ತಲೆಯ ಮೇಲೆ ಕಿರೀಟ ಧರಿಸಿ ವರವನ್ನು ಅವನು ಕರುಣಿಸುತ್ತಿರುವಂತೆ ಚಿತ್ರಿಸಬೇಕು. ಈಶ್ವರ ಪ್ರತಿಮೆಯು ಎತ್ತಿನ ಮೇಲೆ ಹತ್ತಿ ಕುಳಿತು ಕೈಯಲ್ಲಿ ತ್ರಿಶೂಲ ಹಿಡಿದು, ತೇಜಃಪುಂಜವಾದ ಮೂರು ಕಣ್ಣುಗಳಿಂದ ವಿರಾಜಿಸುವಂತೆ, ಚಿತ್ರಿಸಬೇಕು. ಇನ್ನು ಮೇಲೆ, ಸಪ್ತಮಾತೃಗಳ ಪ್ರತಿಮಾ ಲಕ್ಷಣ ಹೇಳುತ್ತೇನೆ. ಬ್ರಹ್ಮನ ಭಾರ್ಯೆ ಆದ ವಾಗ್ದೇವಿಗೆ ಪತಿಯಂತೆ ನಾಲ್ಕು ಮುಖ, ನಾಲ್ಕುತೋಳು, ಒಂದು ಕೈಯಲ್ಲಿ ಜಪಸರ, ಇನ್ನೊಂದರಲ್ಲಿ ಕಮಂಡಲವನ್ನು ಹಿಡಿದು ಹಂಸದ ಮೇಲೆ ಕುಳಿತಂತೆ ನಿರ್ಮಿಸಬೇಕು

ಮಹೇಶ್ವರಿಯ ಮೂರ್ತಿಯು, ಮಹೇಶ್ವರನ ರೂಪದಂತೆ ಜಡೆಯಲ್ಲಿ ಚಂದ್ರ ಮುಡಿಯ ಮೇಲೆ ಕಿರೀಟ, ವೃಷಭಾರೂಢ ಭಂಗಿ. ಕೈಗಳಲ್ಲಿ ತಲೆಬುರುಡೆ, ತ್ರಿಶೂಲ, ಯೋಗದಂಡ, ನಾಲ್ಕನೇ ಕೈಯಿಂದ ಭಕ್ತರಿಗೆ ಅಭಯದಾನಮಾಡುವ ಮಹೇಶ್ವರಿಯನ್ನು ನಿರ್ಮಿಸಬೇಕು. ಷಣ್ಮುಖ ರೂಪದಿಂದ ಇರುವ, ಕೌಮಾರಿಯನ್ನು ನವಿಲು ವಾಹನಳನ್ನಾಗಿ ಚಿತ್ರಿಸಬೇಕು. ಕೆಂಪು ಸೀರೆ, ಕೊರಳಲ್ಲಿ ಹಾರ, ಕೈಯಲ್ಲಿ ಕಂಕಣ, ಹಾಗೂ ತೋಳುಗಳಲ್ಲಿ ಬಳೆ, ಇಟ್ಟುಕೊಂಡು, ಕುಮಾರಸ್ವಾಮಿಯಂತೆ ಕೈಗಳಲ್ಲಿ ಶೂಲ, ಶಕ್ತಿ, ಕೋಳಿಗಳನ್ನು ಹಿಡಿದುಕೊಂಡಂತೆ ಮೂರ್ತಿಯನ್ನು ನಿರ್ಮಿಸಬೇಕು.

ಇದರಂತೆ ಗರುಡವಾಹನಳಾದ ವೈಷ್ಣವಿಯ ನಾಲ್ಕು ತೋಳುಗಳ ಪೈಕಿ ಮೂರು ತೋಳುಗಳಲ್ಲಿ ಶಂಖ, ಚಕ್ರ, ಗದೆಗಳನ್ನು, ಇನ್ನೊಂದರಿಂದ ಅಭಯಮುದ್ರೆಯನ್ನು ತೋರಿಸುತ್ತ ಬಾಲಕನೊಂದಿಗೆ ಸಿಂಹಾಸನದಲ್ಲಿ ಕುಳಿತಂತೆ ಮೂರ್ತಿಯನ್ನು ತಯಾರಿಸ ಬೇಕು. ಮಗುವಿನೊಂದಿಗೆ ಸಿಂಹಾಸನದ ಮೇಲೆ ಕುಳಿತು ಕೊಂಡಂತೆಯೂ ಚಿತ್ರಿಸಬಹುದು.

ಮಹಿಷವಾಹಿನಿಯಾದ ವರಾಹಮೂರ್ತಿಯಂತಿರುವ ವಾರಾಹಿಯ ಮೂರ್ತಿ ಲಕ್ಷಣಗಳನ್ನು ಹೇಳುತ್ತೇನೆ. ಅವಳು ಗಂಟೆ, ಚಾಮರ, ಗದೆ, ಚಕ್ರಗಳನ್ನು ಹರಿಯಂತೆ ಧರಿಸಿ, ಅವನಂತೆಯೇ ದೈತ್ಯ ಘಾತಕಿಯೂ ಆಗಿದ್ದಾಳೆ.

ಐರಾವತವನ್ನು ಏರಿದ ಶಚೀದೇವಿಯ ಕೈಗಳಲ್ಲಿ ವಜ್ರ, ತ್ರಿಶೂಲ, ಗದೆಗಳನ್ನು ಧರಿಸಿ, ಸಹಸ್ರನೇತ್ರೆಯಾಗಿ ಶೋಭಿಸುವಳು. ಅಪರಂಜಿಯಂತಹ ಬಣ್ಣವುಳ್ಳ ಅವಳು ಹರಿತವಾದ ಖಡ್ಗವನ್ನು ಹಿರಿದು ದೈತ್ಯರನ್ನು ಸಂಹರಿಸುತ್ತಿರುವಂತೆ ಚಿತ್ರಿಸಬೇಕು.

ಇವೆಲ್ಲವುಗಳಿಗಿಂತ ಚಾಮುಂಡಿಯ ಮೂರ್ತಿಯು ಅತ್ಯಂತ ಉಗ್ರವಾಗಿರಬೇಕು. ಹೊರಗೆ, ಚಾಚಿದ ನಾಲಿಗೆ, ನಿಮಿರಿದ ಕೂದಲು, ತುಂಡು ಮೂಳೆಗಳ ಕೊರಳಹಾರ ಎಡಗೈಯಲ್ಲಿ ರಕ್ತಮಾಂಸ ತುಂಬಿದ ತಲೆಬುರುಡೆ, ಬಲಗೈಯಲ್ಲಿ ಶಕ್ತ್ಯಾಯುಧ, ತೆಳ್ಳಗಾದ ಹೊಟ್ಟೆ, ಕ್ರೂರವಾದ ಕೋರೆಹಲ್ಲು ಭಯಂಕರ ಮುಖ, ಕೊರಳಲ್ಲಿ ರುಂಡಮಾಲೆ ಇವು ಚಾಮುಂಡಿಯ ಪ್ರತಿಮೆಯಲ್ಲಿ ಎದ್ದು ಕಾಣುವಂತೆ ತಯಾರಿಸಬೇಕು. ಹದ್ದು ಅಥವಾ ಕಾಗೆಯ ಮೇಲೆ ಕುಳಿತಂತೆ ಕಲ್ಪಿಸಿ, ಆ ದೇವಿಗೆ ಮೂರು ಕಣ್ಣುಗಳನ್ನು ಮುಖದಲ್ಲಿ ತೋರಿಸಿ, ಭಯಂಕರವಾಗಿ ತೋರುವಂತೆ ಮಾಡಬೇಕು. ಇದು ಒಂದು ಬಗೆಯ ಚಾಮುಂಡಿಯ ವಿಗ್ರಹ.

ಇನ್ನೊಂದು ಬಗೆಯಾಗಿಯೂ ನಿರ್ಮಿಸಬಹುದು. ಕೊರಳಲ್ಲಿ ಗಂಟೆಗಳ ಸರ, ಮೈಮೇಲೆ ಆನೆಯ ಚರ್ಮದ ಉಡುಗೆ, ಕೈಯಲ್ಲಿ ಕಪಾಲ, ಮುಡಿಯಲ್ಲಿ ಕೆಂಪು ಹೂವು. ಮೂರ್ತಿ ಮಾತ್ರ ಪೂರ್ತಿ ದಿಗಂಬರ. ಕತ್ತೆಯ ಮೇಲೆ ಆರೋಹಣ. ಇದು ಚಾಮುಂಡಿ ಪ್ರತಿಮೆಯ ಇನ್ನೊಂದು ಲಕ್ಷಣ. ಚಾಮುಂಡಿಯ ಧ್ವಜವು ಒಂದು ವಿಶಿಷ್ಟ ಜಲಪಾತ್ರದ ಆಕಾರದ್ದಿರಬೇಕು. ಸಪ್ತ ಮಾತೃಕೆಯರ ಹತ್ತಿರ ವಿನಾಯಕನ ಮೂರ್ತಿ ಇರಿಸಬೇಕು. ಗಣಾಧಿಪತಿಯಾದ ಜಟಾಧರನಾಗಿ ಕೈಯಲ್ಲಿ ತಂಬೂರಿ, ತ್ರಿಶೂಲ ಹಿಡಿದುಕೊಂಡಿರುವ ವೀರೇಶ್ವರ ಎಂಬ ಗಣಾಧಿಪತಿಯನ್ನು ಶಿವನ ಎತ್ತಿನ ಬೆನ್ನಿನ ಮೇಲೆ ಕುಳಿತಂತೆ ಚಿತ್ರಿಸಬೇಕು. ಇನ್ನು ಮೇಲೆ ಲಕ್ಷ್ಮೀದೇವಿಯ ಲಕ್ಷಣ ಹೇಳುತ್ತೇನೆ. ಎಳೆ ವಯಸ್ಸಿನ ಹರೆಯ ಸಿರಿಯಿಂದ, ಆ ಸಿರಿ ದೇವಿಯ ಮೂರ್ತಿಯು ಕಂಗೊಳಿಸುವಂತೆ ಮಾಡಬೇಕು. ಅವಳ ಕೆನ್ನೆ, ತುಟಿ, ಎರಡೂ ಕೆಂಪಾಗಿ, ಇರುವಂತೆ ಚಿತ್ರಿಸಬೇಕು. ಸ್ತನಗಳು ಎರಡೂ ಪುಷ್ಟವಾಗಿ ಇರುವಂತೆ ಮೂಡಿಸಬೇಕು.

ನಡುನೆತ್ತಿಯಲ್ಲಿ ಬೈತಲೆ, ಮಧ್ಯದಲ್ಲಿ ಸಿಂಧೂರಬಿಂದು ಶೋಭಿಸುವಂತೆಮಾಡಿ ಪದ್ಮ, ಸ್ವಸ್ತಿಕ, ಶಂಖ, ಮುಂತಾದ ಲಾಂಛನಗಳಿಂದ ಶೋಭಿಸುವಂತೆ ಮಾಡ ಬೇಕು. ಎದೆಗೆ ಬಿಗಿಯಾದ ಕುಪ್ಪಸ. ಕೊರಳಲ್ಲಿ ಪದಕ, ಮುಖದ ಮುಂದೆ ಸುರುಳಿಯಾದ ಮುಂಗುರುಳು, ಆನೆಯ ಸೊಂಡೆಯಂತಹ ತೋಳು, ಕೈಯಲ್ಲಿ ಬಳೆ ಹಾಗೂ ಕಡಗ ಕಂಕಣ. ಒಂದು ಕೈಯಲ್ಲಿ ತಾವರೆ, ಮತ್ತೊಂದರಲ್ಲಿ ಬಿಲ್ವಫಲ ಮುಂತಾದ ಲಕ್ಷಣಗಳಿಂದ ಮಹಾಲಕ್ಷ್ಮೀದೇವಿಯ ಪ್ರತಿಮೆಯನ್ನು ನಿರ್ಮಿಸಬೇಕು. ಅದಕ್ಕೆ ಸುಂದರವಾದ ಪೀತಾಂಬರ ಉಡಿಸಿ, ದಾಗೀನು ತೊಡಿಸಿ, ಬಗೆಬಗೆಯ ವಸ್ತ್ರಾಭರಣ ಇಡಿಸಿ ಅಪರಂಜಿಯಂತಹ ಮೈಬಣ್ಣ ಬೆಳಗುವಂತೆ ಮಾಡಿ ಶ್ರೀ ವಿಗ್ರಹವನ್ನು ರಚಿಸಬೇಕು. ದೇವಸುಂದರಿಯರು ಅಕ್ಕಪಕ್ಕದಲ್ಲಿ ನಿಂತು ಚಾಮರ ಬೀಸುತ್ತಿರುವಾಗ ಪದ್ಮಾಸನದಲ್ಲಿ ಆ ಪದ್ಮಾವತಿಯು ಕುಳಿತಂತೆ ಚಿತ್ರಿಸಿ ಎಡಬಲಗಳಲ್ಲಿ ಎರಡು ಆನೆಗಳು ನಿಂತು ಬಂಗಾರದ ಕಲಶಗಳಿಂದ ಅವಳಿಗೆ ಅಭಿಷೇಕ ಮಾಡುತ್ತಿರುವಂತೆ ತೋರಿಸಬೇಕು. ಹಿಂಬದಿಯಲ್ಲಿ ಮತ್ತೆ ಎರಡು ಆನೆಗಳು ಹೊಂಗೊಡವನ್ನು ಸೊಂಡೆಯಿಂದ ಎತ್ತಿ ಹಿಡಿದಂತೆ, ಗಂಧರ್ವ, ಗುಹ್ಯ, ದೇವ, ಲೋಕಪಾಲಕರು ಸೋತ್ರ ಮಾಡುತ್ತಿರುವಂತೆ ಕಾಣಿಸಬೇಕು.

ಇನ್ನು ಕಾಮನಮೂರ್ತಿ ಲಕ್ಷಣ ಹೇಳುತ್ತೇನೆ, ಬಲಗೈಯಲ್ಲಿ ಹೂಬಾಣ, ಎಡಗೈಯಲ್ಲಿ ಹೂವಿನ ಬಿಲ್ಲು, ಪಕ್ಕದಲ್ಲಿ ಮೊಸಳೆಯ ಧ್ವಜ ಹಿಡಿದ ಕಿನ್ನರರು,

ಎಡಗಡೆಯಲ್ಲಿ ಹಾಸಿಗೆ ಸಾಮಗ್ರಿ, ಸಹಿತಳಾದ ರತಿದೇವಿ, ಬಲಬದಿಯಲ್ಲಿ ಭೋಜನ ಸಾಮಗ್ರಿ ಹಿಡಿದುಕೊಂಡ ಪ್ರೀತಿ ಎಂಬ ಪ್ರೇಯಸಿ, ಅಕ್ಕಪಕ್ಕದಲ್ಲಿ ಪಟ, ಪಟಹ, ಖರ ಮುಂತಾದ ಪರಿವಾರದವರು. ಹೀಗೆ ಕಾಮನಮೂರ್ತಿಯನ್ನುಮಾಡಿ ಹತ್ತಿರದಲ್ಲಿಯೇ ನೀರು ತುಂಬಿದ ಹೊಕ್ಕರಣಿ, ಹಸಿರುಮುರಿಯುವಉಪವನ, ಉದ್ಯಾನಗಳನ್ನು ಕಲ್ಪಿಸಬೇಕು. ಮನ್ಮಥನ ಆಕಾರವನ್ನು ಮಾತ್ರ ಸುಂದರಮಾಡಿ, ತುಸು ವಕ್ರವಾಗಿ ನಿಂತಂತೆ ತೋರಿಸಬೇಕು. ಮುಖದಲ್ಲಿ ಮಂದಹಾಸವು ಸೂಸುತ್ತಿರಬೇಕು.

ಬ್ರಾಹ್ಮಣರೆ, ನಾನು ಪ್ರತಿಮೆಗಳ ಲಕ್ಷಣವನ್ನು ಸಂಕ್ಷಿಪ್ತವಾಗಿ ಹೇಳಿದ್ದೇನೆ. ಇದನ್ನು ವಿಸ್ತಾರವಾಗಿ ಹೇಳಲು ಸಾಕ್ಷಾತ್ ಬೃಹಸ್ಪತಿಗೂ ಕೂಡ ಅಸಾಧ್ಯ.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡು ನೂರ ಅರವತ್ತೆರಡನೇಯ ಅಧ್ಯಾಯ ಮುಗಿದುದು.*

## ಪೀಠಿಕಾ ಲಕ್ಷಣ

ಅಧ್ಯಾಯ - ೨೬೩

**ಸೂತ ಉವಾಚ :**

**"ಪೀಠಿಕಾ ಲಕ್ಷಣಂ ವಕ್ಷ್ಯೇ ಯಥಾವದಾನುಪೂರ್ವಶಃ**
**ಪೀಠೋಚ್ಛ್ರಾಯಂ ಯಥಾವಚ್ಚ ಭಾಗಾನ್ ಷೋಡಶ ಕಾರಯೇತ್॥**

**ಸೂತ** :- ಈಗ ಪೀಠದ ಲಕ್ಷಣವನ್ನು ಮತ್ತು ಅದರ ಎತ್ತರವನ್ನು ಕ್ರಮವಾಗಿ ಹೇಳುತ್ತೇನೆ. ಪೀಠದ ಎತ್ತರವನ್ನು ಹದಿನಾರು ಭಾಗಗಳಾಗಿ ವಿಂಗಡಿಸಬೇಕು. ಅದರ ಒಂದು ಭಾಗವು ಭೂಮಿಯಲ್ಲಿ ಪ್ರವಿಷ್ಟವಾಗಿರುವದು. ನಾಲ್ಕು ಭಾಗಗಳಿಂದ ಜಗಲಿಯ ನಿರ್ಮಾಣವಾಗುವದು.

ಒಂದರಿಂದ ವೃತ್ತವೂ ಮತ್ತೊಂದರಿಂದ ವೃತ್ತದ ಪಟ್ಟವೂ ನಿರ್ಮಿತವಾಗುವವು. ಅದರ ಕಂಠಭಾಗವು ಮೂರು ಅಂಶಗಳಿಂದ, ಕಂಠಪಟ್ಟ ಒಂದು ಅಂಶದಿಂದ, ಮೇಲಿನ ಪಟ್ಟವು ಎರಡು ಅಂಶಗಳಿಂದ ರೂಪಿತವಾಗುವವು. ಉಳಿದ ಮೂರು ಅಂಶಗಳಿಂದ ಪಟ್ಟಿಕೆಯೂ ನಿರ್ಮಾಣಗೊಳ್ಳುವುದು.

ಪ್ರತಿಯೊಂದು ಪೀಠದಲ್ಲಿ ಜಗಲಿಯವರೆಗೆ ಇರುವ ಭಾಗವು ನೆಲದೊಳಗೆ ಹುಗಿದಿರುವದು. ಉಳಿದ ಶೇಷ ಪಟ್ಟಿಕೆಯ ಹೊರಗಿನ ಭಾಗವು ಹೊರಗಿರುವದು. ಪೀಠದಲ್ಲಿ ಅಭಿಷೇಕಮಾಡಿದ ನೀರು ಕೆಳಗೆ ಬಿದ್ದು ಹರಿದು ಹೋಗಲಿಕ್ಕಾಗಿ ಇಳಿಜಾರಾದ ಒಂದು ಹರಿಯನ್ನು ಮಾಡಬೇಕು. ಇದು ಸರ್ವ ಪೀಠಗಳ ಸಾಮಾನ್ಯ ಲಕ್ಷಣ.

ಇನ್ನು ದೇವತಾ ಭೇದದಿಂದ ಪೀಠಗಳೂ ಭಿನ್ನವಾಗುವವು. ಸ್ಥಂಡಿಲಾ, ವಾಪಿ, ಯಕ್ಷಿ, ವೇದಿ, ಮಂಡಲ, ಪೂರ್ಣಚಂದ್ರ, ವಜ್ರಾ, ಪದ್ಮಾ, ಅರ್ಧಶಶಿ, ತ್ರಿಕೋನ ಎಂದು ಪೀಠಗಳಲ್ಲಿ ಹತ್ತು ಬಗೆ ಇವೆ.

ಸುತ್ತುಗಟ್ಟುಗಳ ಇಲ್ಲದೆ ಬರಿ ಚೌಕಾಕಾರದ್ದಕ್ಕೆ ಸ್ಥಂಡಿಲಾ ಎನ್ನುವರು. ಎರಡು ಸುತ್ತುಗಟ್ಟಿದ್ದರೆ ವಾಪಿ ಎಂದು ಕರೆಯುತ್ತಾರೆ. ಮೂರು ಸುತ್ತು ಕಟ್ಟುಳ್ಳ ಚಚ್ಚೌಕ ಪೀಠಕ್ಕೆ ಯಕ್ಷಿ ಎಂದು ಹೆಸರು.

ನಾಲ್ಕು ಕಡೆಗೆ ಮುಖಗಳನ್ನು ಮಾಡಿ, ಅಗಲಕ್ಕಿಂತ ಉದ್ದ ಹೆಚ್ಚಾಗಿ ಇಟ್ಟು ರಚಿಸಿದ ಪೀಠವು ವೇದಿ ಅನಿಸುವದು. ಈ ವೇದಿ ಪೀಠವು ಲಿಂಗಪ್ರತಿಷ್ಠೆಗೆ ನಿಷಿದ್ಧವಾಗಿದೆ.

ಪೀಠವು ದುಂಡಗಾಗಿ ಮೇಲ್ಭಾಗದಲ್ಲಿ ಸುತ್ತುಗಟ್ಟು ರಚಿಸಿದರೆ ಅದಕ್ಕೆ ಮಂಡಲ ಎನ್ನುತ್ತಾರೆ. ಎರಡು ಸುತ್ತು ಗಟ್ಟುಗಳನ್ನು ಮೇಲೆ ರಚಿಸಿ ನಡುವೆ, ಕೆಂಬಣ್ಣದ ನೆಲಗಟ್ಟಣೆ ಮಾಡಿದರೆ ಪೂರ್ಣಚಂದ್ರ ಪೀಠ ಎಂದು ಕರೆಯುವರು. ಮೂರು ಸುತ್ತಗಟ್ಟು, ಆರು ಮುಖಗಳು ಇದ್ದರೆ ವಜ್ರಿಕಾ ಎನ್ನುವರು. ಹದಿನಾರು ಮುಖಗಳುಳ್ಳ ಪೀಠಕ್ಕೆ ಪದ್ಮಪೀಠವೆಂದೂ ಹೆಸರು. ಅದು ತಳದಲ್ಲಿ ತುಸು ಕಿರಿದಾಗಿರುವದು.

ಪೀಠವು ಬಿಲ್ಲಿನ ಆಕಾರದಲ್ಲಿದ್ದರೆ ಅರ್ಧಚಂದ್ರವೆಂದು ಕರೆಯುವರು. ಮೇಲ್ಗಡೆ ತ್ರಿಶೂಲಾಕಾರದ ಪೀಠಕ್ಕೆ ತ್ರಿಕೋನ ಪೀಠ ಎನ್ನುವರು. ಈ ಎಲ್ಲ ಪೀಠಗಳು ದೇವರನ್ನು ಪ್ರತಿಷ್ಠಾಪಿಸಿ, ಪೂಜೆ ಮಾಡಲಿಕ್ಕಾಗಿ ಶಾಸ್ತ್ರ ವಿಹಿತವಾಗಿವೆ. ಪ್ರತಿಮೆಯು ಕಲ್ಲಿನದಾಗಿದ್ದರೆ ಪೀಠವೂ ಕಲ್ಲಿನದಾಗಬೇಕು. ಅದು ಮಣ್ಣಿನದಾದರೆ ಇದೂ ಮಣ್ಣಿನದಾಗಬೇಕು. ಮರದ ಕಟ್ಟಿಗೆಯಿಂದ ಮೂರ್ತಿಯಾದಲ್ಲಿ ಮಾಡಿದ ಪೀಠವನ್ನೂ ಕಟ್ಟಿಗೆಯಿಂದಲೇ ಮಾಡಬೇಕು. ಲೋಹದಿಂದಾಗಿದ್ದರೆ ಲೋಹದಿಂದಲೇ ಮಾಡಬೇಕು. ಪೀಠ ಹಾಗೂ ಪ್ರತಿಮೆಗಳನ್ನು ಬೇರೆ ಬೇರೆ ವಸ್ತುಗಳಿಂದ ಮಾಡಬಾರದು. ಪ್ರತಿಮೆ ಅಥವಾ ಲಿಂಗದ ವಿಸ್ತಾರಕ್ಕೆ ಅನುರೂಪವಾಗಿಯೇ ಪೀಠ ರಚಿಸಿ, ದೇವರನ್ನು ಪ್ರತಿಷ್ಠಿಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ*
*ಎರಡುನೂರರವತ್ತಮೂರನೇಯ ಅಧ್ಯಾಯ ಮುಗಿದುದು.*



## ಶಿವಲಿಂಗದ ನಿರ್ಮಾಣ, ಪ್ರಮಾಣ

ಅಧ್ಯಾಯ - ೨೬೪

**ಸೂತ ಉವಾಚ :**

**ಅಥಾತಃ ಸಂಪ್ರವಕ್ಷ್ಯಾಮಿ ಲಿಂಗಲಕ್ಷಣಮುತ್ತಮಂ**
**ಸುಸ್ನಿಗ್ಧಂ ಚ ಸುವರ್ಣಂ ಚ ಲಿಂಗಂ ಕುರ್ಯಾದ್ವಿಚಕ್ಷಣಃ||**

**ಸೂತ** :- ಇನ್ನು ಮೇಲೆ, ಲಿಂಗದ ಲಕ್ಷಣವನನ್ನು ಹೇಳುತ್ತೇನೆ. ಶಿಲ್ಪ ಶಾಸ್ತ್ರ ಪರಿಣತನಾದ ಮನುಷ್ಯನು, ಲಿಂಗವನ್ನು ಒಳ್ಳೇ ಬಣ್ಣದಿಂದ ಕಣ್ಣು ಕೋರೈಸುವಂತೆ ನುಣುಪಾಗಿ ಹೊಳೆಯುವಂತೆ ಸುಂದರವಾಗಿ ಮಾಡಬೇಕು. ಲಿಂಗದ ಪ್ರಮಾಣವು ದೇವಾಲಯದ ಪ್ರಮಾಣಕ್ಕೆ ಅನುಗುಣವಾಗಿರಬೇಕು. ಅಥವಾ ಲಿಂಗದ ಪ್ರಮಾಣ ನೋಡಿಕೊಂಡೇ ಅದಕ್ಕೆ ತಕ್ಕಂತೆ ದೇವಾಲಯ ಕಟ್ಟಬೇಕು.

ಗರ್ಭಗುಡಿಯಲ್ಲಿ ಚಚ್ಚೌಕಾದ ಸಮತಟ್ಟಿನ ತೆಗ್ಗಿನಲ್ಲಿ ಲಿಂಗವನ್ನು ಪ್ರತಿಷ್ಠೆ ಮಾಡುವ ಸ್ಥಳವನ್ನು ಶೋಧಿಸುವುದಕ್ಕಾಗಿ ಅಳತೆ ದಾರವನ್ನು ಕಟ್ಟಬೇಕು. ಅದಕ್ಕೆ ಬ್ರಹ್ಮಸೂತ್ರ ಎನ್ನುತ್ತಾರೆ. ಗರ್ಭಗುಡಿಯ ಬಾಗಿಲನ್ನು ದಕ್ಷಿಣೋತ್ತರ ಇಪ್ಪತ್ತೊಂದು ಭಾಗಮಾಡಿ

ಮಧ್ಯಭಾಗ ಕಂಡು ಹಿಡಿದು ಅಲ್ಲಿಂದ ಈ ಬ್ರಹ್ಮಸೂತ್ರ ಹಾಕಬೇಕು. ಅದರ ಅಳತೆಯಲ್ಲಿ ಮೂರು ಭಾಗ ಮಾಡಿ ಉತ್ತರದ ಕಡೆಯ ಹಾಗೂ ದಕ್ಷಿಣ ಕಡೆಯ ಭಾಗ ಬಿಟ್ಟರೆ ನಡುವಿನದೇ ಬ್ರಹ್ಮಸ್ಥಾನ ಎನಿಸುವದು. ಈ ಬ್ರಹ್ಮಸ್ಥಾನದ ನಡುವೆ ಲಿಂಗವನ್ನು ಸ್ಥಾಪಿಸಬೇಕು. ಈ ಪ್ರಮಾಣದಿಂದ ಕಂಡು ಹಿಡಿದ ಅಳತೆಯು ಕನಿಷ್ಠ ಎನಿಸುವದು.

ಅಥವಾ ಬ್ರಾಹ್ಮಸೂತ್ರದ ಅರ್ಧದ ಅಳತೆಯನ್ನು ಐದು ಭಾಗಮಾಡಿ ದಕ್ಷಿಣದ ಉತ್ತರದ ಒಂದೊಂದು ಭಾಗಬಿಟ್ಟು ನಡುವಿನ ಮೂರು ಭಾಗಗಳನ್ನು ಬ್ರಹ್ಮಸ್ಥಾನ ಎಂದು ಪರಿಗಣಿಸಬಹುದು. ಇದು ಜ್ಯೇಷ್ಠ ಬ್ರಹ್ಮಸ್ಥಾನ ಎನಿಸುವದು.

ಅಥವಾ ಬ್ರಹ್ಮಸೂತ್ರದ ಅರ್ಧದ ಅಳತೆಯನ್ನು ಒಂಬತ್ತು ಪಾಲು ವಿಂಗಡಿಸಿ ದಕ್ಷಿಣಕ್ಕೆ ಉತ್ತರಕ್ಕೆ ಎರಡೆರಡು ಭಾಗಬಿಟ್ಟು ನಡುವಿನ ಐದು ಭಾಗಗಳನ್ನು ಬ್ರಹ್ಮಸ್ಥಾನವೆಂದು ತಿಳಿಯಬಹುದು. ಇದು ಮಧ್ಯಮ ಬ್ರಹ್ಮಸ್ಥಾನ ಎನಿಸುವದು.

ಶಿವ ದೇವಾಲಯವನ್ನು ಊರಿನ ಪಶ್ಚಿಮಕ್ಕೆ, ದಕ್ಷಿಣದಿಕ್ಕಿನ ಅಂಚಿಗೆ ಆ ದೇವಸ್ಥಾನದ ಸೆರಗುಹತ್ತುವಂತೆ ಕಟ್ಟಿಸಬೇಕು. ಅದರ ಬಾಗಿಲು ಪೂರ್ವಾಭಿಮುಖವಾಗಿರಬೇಕು. ಆದರೂ ಅದು ತುಸು ಈಶಾನ್ಯದಿಕ್ಕನ್ನು ನಿಟ್ಟಿಸುವಂತೆ ತೋರಬೇಕು. ಈ ಪೂರ್ವಾಭಿಮುಖ ದ್ವಾರಕ್ಕೆ ಮಾಹೇಂದ್ರದ್ವಾರ ಎಂದೆನ್ನುವರು. ಗುಡಿಯ ಹಿಂಬದಿಯಲ್ಲಿ ಇನ್ನೂ ಒಂದು ದ್ವಾರವನ್ನು ಮಾಡಬಹುದು. ಇದೇ ದೇವಸ್ಥಾನದ ಮುಖ್ಯದ್ವಾರ ಎನಿಸುವದು. ಅಲ್ಲಿಂದ ನೇರವಾಗಿ ಎದುರು ಗರ್ಭಗೃಹದ ಬಾಗಿಲು ಇರಬೇಕು.

ಗರ್ಭಗೃಹದ ಅಳತೆಗೆ ಅನುಗುಣವಾಗಿ ಒಂಬತ್ತು ವಿಧವಾದ ಲಿಂಗಗಳಲ್ಲಿ ಯಾವುದಾದರೂ ಒಂದನ್ನು ಪ್ರತಿಷ್ಠಾಪಿಸಬಹುದು. ಹಿಂದೆ ಹೇಳಿದಂತೆ ಬ್ರಹ್ಮಸೂತ್ರದ ಅಳತೆಯಿಂದ ಜ್ಯೇಷ್ಠ, ಮಧ್ಯಮ, ಕನಿಷ್ಠ ಎಂದು ಬ್ರಹ್ಮಸ್ಥಾನ ಮೂರು ವಿಧವಾಗಿ ಇರುತ್ತದೆ.

ಈ ಮೂರು ಬ್ರಹ್ಮಸ್ಥಾನಗಳು, ಮತ್ತೆ ಮೂರು ಮೂರು ತೆರನಾಗಿವೆ. ಹೀಗೆ ಜ್ಯೇಷ್ಠ ಮಧ್ಯಮ, ಕನಿಷ್ಠವೆಂದು ಮೂರು ಮೂರು ಬಗೆಯಾಗಿ ವಿಭಕ್ತವಾದ, ಬ್ರಹ್ಮಸ್ಥಾನಗಳಿಗೆ ಅನುಗುಣವಾಗಿ ಲಿಂಗಗಳಲ್ಲಿಯೂ ಒಂಭತ್ತು ವಿಭಾಗಗಳು ಉಂಟಾಗುತ್ತವೆ.

ಲಿಂಗವನ್ನು ಇಡುವ ನಾಭಿಸ್ಥಳವು ಸುತ್ತಲೂ ದುಂಡಗಾಗಿರುವದು. ಈಶ್ವರ ಲಿಂಗದಲ್ಲಿ ಮೂರು ಭಾಗಗಳು ಮೇಲೆ ಗುಂಡಗಿರುವ ಮಹೇಶ್ವರನದು, ಕೆಳಗೆ ನಾಲ್ಕು ಮೂಲೆ ಉಳ್ಳದ್ದು ಬ್ರಹ್ಮನ ಅಂಶ ಉಳ್ಳದ್ದು, ಎಂಟು ಪಟಗಳುಳ್ಳ ನಡುವಿನ ಭಾಗವು ವಿಷ್ಣುವಿನ ಅಂಶ ಉಳ್ಳದ್ದು. ಇಂತಹ ಲಿಂಗವು ಶ್ರೇಯಸ್ಕರವಾದುದು.

ಲಿಂಗದ ಪ್ರಮಾಣವು ಗರ್ಭದ ಪ್ರಮಾಣದ ಅನುಸಾರವಾಗಿರಬೇಕು. ಗರ್ಭಗೃಹದ ಅಳತೆಯನ್ನು ಮೂರು ಅಥವಾ ನಾಲ್ಕು ಭಾಗ ಮಾಡಿದರೆ ದೊರಕುವ ಲಬ್ಧವೇ ಗರ್ಭಾಗಾರದ ಅಡ್ಡಗಲ, ಲಿಂಗದ ಕೆಳಗಿನ ಭಾಗದ ನಾಲ್ಕು ಮೂಲೆಗಳಿಂದಲೂ ಮಧ್ಯಭಾಗವು ಎಂಟು ಏಣುಗಳಿಂದಲೂ ಕೂಡಿರುವದು. ಅದರ ಮೇಲಿನ ಅರ್ಧಭಾಗವನ್ನು ನಾಭೀ ಭಾಗವೆಂದು ಕರೆಯುತ್ತಾರೆ. ಬ್ರಹ್ಮನ ಅಂಶದಿಂದ

ಕೂಡಿದ ಕೆಳಗಿನ ನಾಲ್ಕು ಏಣುಗಳುಳ್ಳ ಭಾಗಬಿಟ್ಟು ಉಳಿದ ಅರ್ಧದಲ್ಲಿಯೂ ಅರ್ಧಭಾಗಬಿಟ್ಟು ಉಳಿದ್ದನ್ನು ಗುಂಡಗಾಗಿ ಮಾಡಬೇಕು.

ಶಿವಲಿಂಗದ ಶಿರೋಭಾಗವು ಗುಂಡಾಗಿರಬೇಕು ಹಾಗೂ ಮೂಲ ಭಾಗಕ್ಕಿಂತ ಕಿರಿದಾಗಿರಬೇಕು. ಅದರಂತೆ ಕೆಳಗಡೆಯ ಭಾಗವು ಅತೀ ದೊಡ್ಡದಾಗಿ ಇರಬಾರದು.

ತಲೆಯಮೇಲೆ ತುಸು ತಗ್ಗಾಗಿ ಮನೋಹರವಾಗಿ, ಸಲಕ್ಷಣವಾಗಿ, ಗಂಭೀರವಾಗಿ ಕಾಣುವ ಲಿಂಗವು ಭಜಕಪೂಜಕರಿಗೆ ಉತ್ಕರ್ಷಉಂಟುಮಾಡುವದು.

ಮೂಲ ಮಧ್ಯ ಕೊನೆಯಲ್ಲಿ ಸಮಪ್ರಮಾಣದಿಂದಿರುವ ಲಿಂಗವು ಎಲ್ಲ ಬಗೆಯ ಇಷ್ಟಾರ್ಥ ನೀಡುತ್ತದೆ. ಇದಕ್ಕೆ ವಿರುದ್ಧವಾದದ್ದು ಅಶುಭ. ಆದುದರಿಂದ ರತ್ನ, ಸ್ಪಟಿಕ, ಮಣ್ಣು, ಮರ, ಮತ್ತಾವುದಾದರೂ ದ್ರವ್ಯಗಳಿಂದ ಶುಭಲಕ್ಷಣವುಳ್ಳ ಲಿಂಗವನ್ನೇ ನಿರ್ಮಿಸಿ ಪ್ರತಿಷ್ಠಾಪಿಸಬೇಕು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರಾ ಅರವತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ದೇವತಾ ಪ್ರತಿಷ್ಠಾವಿಧಿ

ಅಧ್ಯಾಯ - ೨೬೫

**ಋಷಿ ಉವಾಚಃ**

**ದೇವತಾನಾಮಥೈತಾಸಾಂ ಪ್ರತಿಷ್ಠಾವಿಧಿಮುತ್ತಮಂ।**
**ವದ ಸೂತ ಯಥಾನ್ಯಾಯಂ ಸರ್ವೇಷಾಮಪ್ಯಶೇಷತಃ**

**ಋಷಿಗಳು :-** ಸೂತಾಚಾರ್ಯ, ಹಿಂದೆ ಹೇಳಿದ ದೇವತೆಗಳ ಪ್ರತಿಷ್ಠಾಕ್ರಮವನ್ನೂ ಕುಂಡ, ಮಂಟಪ, ವೇದಿಕೆ, ಅವುಗಳ ಪ್ರಮಾಣ ಲಕ್ಷಣಗಳನ್ನೂ ನಮಗೆ ಕ್ರಮಪ್ರಕಾರ ಹೇಳಿ.

**ಸೂತ :-** ಶುಭಕರವಾದ ದೇವತಾ ಮೂರ್ತಿಗಳ ಪ್ರತಿಷ್ಠಾ ಪದ್ಧತಿಯನ್ನು ಕುಂಡ, ಮಂಟಪ, ವೇದಿಕೆಗಳ, ಅಳತೆ, ಆಕಾರಗಳನ್ನೂ ಪ್ರಮಾಣ, ಪರಿಮಾಣಗಳನ್ನೂ ಶಾಸ್ತ್ರೋಕ್ತವಾಗಿ ತಿಳಿಸುತ್ತೇನೆ ಕೇಳಿರಿ.

ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ, ಮಾಘ ಈ ಮಾಸಗಳು ದೇವತಾ ಪ್ರತಿಷ್ಠೆಗೆ ಪ್ರಶಸ್ತವಾಗಿವೆ. ದಕ್ಷಿಣಾಯನವು ಕಳೆದ ಬಳಿಕ, ಮಂಗಳಕರವಾದ ಶುಕ್ಲ ಪಕ್ಷದ ದ್ವಿತೀಯಾ, ತೃತೀಯ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ, ಹುಣ್ಣಿವೆ, ಈ ತಿಥಿಗಳಲ್ಲಿ ವಿಧಿಪೂರ್ವಕವಾಗಿ ಮೂರ್ತಿ ಪೂಜೆಯನ್ನು ಮಾಡಬೇಕು. ಪೂರ್ವಾಷಾಢಾ, ಉತ್ತರಾಷಾಢಾ, ಮೂಲಾ, ಉತ್ತರಾ, ಫಲ್ಗುಣೀ, ಉತ್ತರಾ ಭಾದ್ರಾ, ಜೇಷ್ಠಾ, ಶ್ರವಣಾ, ರೋಹಿಣಿ, ಪೂರ್ವಭಾದ್ರಾ, ಹಸ್ತಾ, ಅಶ್ವಿನಿ, ಪುಷ್ಯ, ಮೃಗಶಿರಾ, ರೇವತಿ, ಸ್ವಾತಿ ನಕ್ಷತ್ರಗಳೂ ಬುಧು, ಬ್ರಹಸ್ಪತಿ, ಶುಕ್ರ ಗ್ರಹಗಳೂ ದೇವತಾ ಪ್ರತಿಷ್ಠೆಗೆ ಪ್ರಶಸ್ತವಾಗಿದೆ.

ಬುಧ, ಬ್ರಹಸ್ಪತಿ, ಶುಕ್ರ, ಈ ಮೂರು ಗ್ರಹಗಳ ಶುಭ ದೃಷ್ಟಿಯುಳ್ಳ ಲಗ್ನದಲ್ಲಿ, ಶುಭ ನಕ್ಷತ್ರದಲ್ಲಿ ಮೂರ್ತಿ ಪ್ರತಿಷ್ಠಾ ಮಹೋತ್ಸವ ನೆರವೇರಿಸಬೇಕು. ಗ್ರಹಬಲ ತಾರಾಬಲಗಳು ಇರುವದನ್ನು ನೋಡಿಕೊಂಡು, ಉತ್ಪಾತಾದಿಗಳು ಇರುವ ಸಮಯ

ಬಿಟ್ಟು ಶುಭಯೋಗ, ಶುಭಸ್ಥಾನಗಳಲ್ಲಿ ಕ್ರೂರಗ್ರಹಗಳ ಸಂಬಂಧವಿಲ್ಲದೆ, ಶುಭ ನಕ್ಷತ್ರ ಯೋಗಗಳಲ್ಲಿ ಶಕುನ ನೋಡಿ ಪ್ರತಿಷ್ಠಾವಿಧಿ ನೆರ ವೇರಿಸಬೇಕು.

ಶಾಸ್ತ್ರಗಳಲ್ಲಿ ಪಂಡಿತನಾದ ಮನುಷ್ಯನು ದೇವತಾ ಮೂರ್ತಿಯನ್ನು ಪ್ರಾಜಾಪತ್ಯ ಮುಹೂರ್ತದಲ್ಲಿ ಶಯನಮಾಡಿಸಿ, ಶ್ವೇತ ಮುಹೂರ್ತದಲ್ಲಿ ಎಬ್ಬಿಸಿ, ಬ್ರಾಹ್ಮೀ ಮುಹೂರ್ತದಲ್ಲಿ ಪ್ರತಿಷ್ಠೆಗೈಯುತ್ತಾನೆ. ದೇವಾಲಯದ ಉತ್ತರ ಅಥವಾ ಪೂರ್ವಕ್ಕೆ ಹತ್ತು ಹನ್ನೆರಡು ಇಲ್ಲವೆ ಹದಿನಾರು ಮೊಳಗಳಷ್ಟು ಉದ್ದಳತೆಯುಳ್ಳ ಮಂಟಪವನ್ನು ರಚಿಸಬೇಕು. ಮಂಟಪದ ನಡುವೆ, ನಾಲ್ಕು ಅಥವಾ ಐದು ಮೊಳದ ಒಂದು ವೇದಿಕೆಯನ್ನು ಅದರ ಸುತ್ತು ಆವರಣವನ್ನು ಕಲ್ಪಿಸಬೇಕು. ಮಂಟಪದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಬಾಗಿಲುಗಳು ಇರಬೇಕು. ಪೂರ್ವದಿಕ್ಕಿನ ಬಾಗಿಲವನ್ನು ಬಸರಿಗಿಡದ ಕಟ್ಟಿಗೆಯಿಂದಲೂ, ದಕ್ಷಿಣ ದಿಕ್ಕಿನ ಬಾಗಿಲನ್ನು ಅತ್ತಿಯ ಮರದ ಕಟ್ಟಿಗೆಯಿಂದಲೂ ಪಶ್ಚಿಮದ ಬಾಗಿಲನ್ನು ಅರಳಿಕಟ್ಟಿಗೆಯಿಂದಲೂ, ಉತ್ತರದ್ದು ಆಲದಮರದಿಂದಲೂ ಮಾಡಿಸಿ ಇಡಬೇಕು. ಬಾಗಿಲವಾಡಗಳನ್ನು ನೆಲದಲ್ಲಿ ಒಂದು ಮೊಳ ಹೂಳಬೇಕು. ನೆಲದಿಂದ ಮೇಲೆ ನಾಲ್ಕು ಮೊಳ ಎತ್ತರವಾಗಿರಬೇಕು. ನೆಲವನ್ನು ಗೋಮಯದಿಂದ ಸಾರಿಸಿ, ರಂಗವಲ್ಲಿ, ಹೂವು, ಚಿಗುರು ವಸ್ತ್ರಗಳಿಂದ ಅಲಂಕರಿಸಬೇಕು.

ಹೀಗೆ ಮಂಟಪ ರಚಿಸಿ ಅನಂತರ ನಾಲ್ಕೂ ಬಾಗಿಲ ಬಳಿಯಲ್ಲಿ ಸೋರದಿರುವ ಒಡಕು. ಬಿರುಕುಗಳಿಲ್ಲದ ಎಂಟು ಪೂರ್ಣ ಕುಂಭಗಳನ್ನು ಸ್ಥಾಪಿಸಬೇಕು. ಅವುಗಳಲ್ಲಿ ಬಂಗಾರದ ತುಣುಕುಗಳನ್ನು ಹಾಕಿ ಚಂದನದ ನೀರುಗಳಿಂದ ತುಂಬಬೇಕು. ವನಸ್ಪತಿ ಹಣ್ಣು ಹಂಪಲಗಳನ್ನು ಬಳಿಯಲ್ಲಿ ಇರಿಸಿ, ಬಿಳಿಯ ವಸ್ತ್ರದ ಜೋಡಿಗಳನ್ನು ಹೊದಿಸಿ, ಮಾವಿನ ದಳಗಳಿಂದಮುಚ್ಚಬೇಕು.

ಹೀಗೆ ಕಲಶ ಸ್ಥಾಪನೆ ಮಾಡಿ ಗಂಧ ಹೂವುಗಳಿಂದ ಪೂಜಿಸಿ, ಮಂಟಪದ ನಾಲ್ಕು ಕಡೆಗಳಲ್ಲಿ ಧ್ವಜವನ್ನು ಏರಿಸಬೇಕು. ಎಂಟೂ ದಿಕ್ಕುಗಳಲ್ಲಿ ಲೋಕಪಾಲಕರ ಧ್ವಜಗಳನ್ನು, ನಡುವೆ ಮೋಡದ ಆಕಾರದ ನಿಶಾನೆಯನ್ನು ನೆಡಬೇಕು. ಲೋಕ ಪಾಲಕರಿಗೆ ಅವರವರ ಮಂತ್ರಗಳಿಂದ ಗಂಧ ಪುಷ್ಪ ಬಲಿಗಳನ್ನು ಅರ್ಪಿಸಬೇಕು.

ಬ್ರಹ್ಮದೇವರಿಗೆ ಮೇಲೆ, ಆದಿಶೇಷ ವಾಸುಕಿಗೆ ಕೆಳಗೆ ಹೂವುಗಳನ್ನು ಅರ್ಪಿಸಬೇಕು. ವೈದಿಕ ಸಂಹಿತೆಗಳಲ್ಲಿ ಹೇಳಿದ ಆಯಾ ದೇವತೆಗಳ ಮಂತ್ರಗಳನ್ನೇ ಪೂಜಾಕಾಲದಲ್ಲಿ ಹೇಳಿ ಸಾಂಗವಾಗಿ ಪೂಜೆ ಮಾಡಬೇಕು.

ಪ್ರತಿಮೆಗಳಿಗೆ ಒಂದು, ಮೂರು, ಐದು, ಏಳು ರಾತ್ರಿಗಳವರೆಗೆ ಧಾನ್ಯಾಧಿವಾಸ, ಜಲಾಧಿವಾಸ ಏರ್ಪಡಿಸಬೇಕು. ಹೀಗೆ ತೋರಣ ಸಹಿತವಾದ ಅಧಿವಾಸನ ಶಾಲೆಯಲ್ಲಿ ಅಧಿವಾಸನ ವಿಧಿಯನ್ನು ಮುಗಿಸಬೇಕು. ಅಧಿವಾಸನ ಶಾಲೆಯ ಉತ್ತರದಲ್ಲಿಯೇ ಮುಖ್ಯಮಂಟಪದ ನಾಲ್ಕರಲ್ಲಿ ಮೂರರಲ್ಲಿ ಇಲ್ಲವೆ ಅರ್ಧದಲ್ಲಿ ಒಂದು ಪಾಲು ಸ್ನಾನಾಗಾರವನ್ನು ನಿರ್ಮಿಸಬೇಕು.

ಮೂರ್ತಿಯನ್ನು ತಯಾರಿಸಿ, ಸುಂದರವಾಗಿ ಮಾಡಿ ಸಕಾಲದಲ್ಲಿ ಪ್ರತಿಷ್ಠೆಗೆ ತಂದು ಒದಗಿಸಿದ ಶಿಲ್ಪಿಯನ್ನು ಹಾಗೂ ಅವನ ಪರಿಚಾರಕರನ್ನು ವಸ್ತ್ರಾಭರಣಗಳಿಂದ ಗೌರವಿಸಬೇಕು. ತೊಂದರೆಕೊಟ್ಟದ್ದಕ್ಕಾಗಿ ''ಕ್ಷಮೆಯಿರಲಿ'' ಎಂದು ಕೇಳಿ ಕೊಳ್ಳಬೇಕು.

ಅನಂತರ ದೇವರ ಮೂರ್ತಿಯನ್ನು ದರ್ಭಾಸನದ ಮೇಲೆ ಇರಿಸಿ, ಅದರ ನೇತ್ರೋನ್ಮೀಲನದ ಕಾರ್ಯವನ್ನೂ ನೆರವೇರಿಸಬೇಕು. ಮೂರ್ತಿಯ ಅಥವಾ ಲಿಂಗದ ನೇತ್ರೋನ್ಮೀಲನ ವಿಧಿಯನ್ನು ಸಂಕ್ಷಿಪ್ತವಾಗಿ ಹೇಳುತ್ತೇನೆ.

ಬಿಳಿಸಾಸುವೆ ತುಪ್ಪ ಪಾಯಸಗಳಿಂದ ಒಡಗೂಡಿದ ಬಲಿಗಳನ್ನು ಎಲ್ಲ ದಿಕ್ಕುಗಳಲ್ಲಿ ಹಾಕಬೇಕು. ಬ್ರಾಹ್ಮಣರನ್ನು ಪುಷ್ಪಾಲಂಕಾರಗಳಿಂದ ಪೂಜಿಸಿ ಯಥಾಶಕ್ತಿ ದಕ್ಷಿಣೆ ಕೊಡಬೇಕು. ಪ್ರತಿಷ್ಠೆ ಕಾರ್ಯಮಾಡಿಸುವ ಯಾಜ್ಞಿಕನಿಗೆ ಭೂದಾನ, ಸುವರ್ಣದಾನ ನೀಡಬೇಕು. ಮತ್ತು ಮುಂದೆ ಹೇಳುವ ಮಂತ್ರದಿಂದ ಪ್ರಾರ್ಥನೆಮಾಡಿ ನೇತ್ರೋನ್ಮೀಲನವನ್ನು ಭಕ್ತಿಯಿಂದ ಮಾಡಿಸಬೇಕು.

**"ನಮೋ ಭಗವತೇ ತುಭ್ಯಂ ಶಿವಾಯ ಪರಮಾತ್ಮನೇ।**
**ಹಿರಣ್ಯ ರೇತಸೇ ವಿಷ್ಣೋ ವಿಶ್ವರೂಪಾಯ ತೇ ನಮಃ॥**

ಸರ್ವಗುಣ ಪರಿಪೂರ್ಣನು, ಜಗತ್ತಿನಲ್ಲಿ ಕಲ್ಯಾಣವನ್ನುಂಟುಮಾಡುವವನು, ಸುವರ್ಣ ವೀರ್ಯನೂ, ವಿಶ್ವರೂಪಿಯೂ, ಆದ ವಿಷ್ಣುರೂಪಿ ಪರಮಾತ್ಮನೇ ನಿನಗೆ ನಮಸ್ಕಾರ. ಈ ಮಂತ್ರವನ್ನು ಹೇಳಿ, ಯಾವುದೇ ದೇವತಾ ವಿಗ್ರಹವಿದ್ದರೂ, ಈ ಮಂತ್ರದಿಂದಲೇ ಆ ದೇವಾಧಿದೇವನಾದ ವಿಷ್ಣುವನ್ನು ಆಹ್ವಾನಮಾಡಿ ಚಿನ್ನದ ಸಲಾಕೆಯಿಂದ ಕಣ್ಣಿನ ಸ್ಥಾನದಲ್ಲಿ, ಬರೆದು ಉನ್ಮೀಲನ ಕಾರ್ಯವನ್ನು ನೆರವೇರಿಸಬೇಕು.

ಆ ಕಾಲದಲ್ಲಿ ವೇದಘೋಷವನ್ನು ಬ್ರಾಹ್ಮಣರು ಮಾಡುತ್ತಲಿರಬೇಕು. ಮಂಗಲವಾದ್ಯಗಳು ಮೊಳಗುತ್ತಿರಬೇಕು. ಸುವಾಸಿನಿಯರು ಮಂಗಲಗೀತಗಳನ್ನು ಹಾಡಬೇಕು. ಇದರಿಂದ ಅಶುಭವೆಲ್ಲ ಪರಿಹಾರವಾಗಿ, ಯಜಮಾನನಿಗೆ ಪೂರ್ಣಶ್ರೇಯಸ್ಸು ಉಂಟಾಗುವದು.

ಇದರಂತೆ, ಶಿವಲಿಂಗಕ್ಕೂ ಕೂಡಾ ಮುಂದೆ ಹೇಳುವ ರೀತಿಯಿಂದ ಲಕ್ಷಣ ಚಿಹ್ನೆಗಳನ್ನು ಮಾಡಬೇಕು. ಒಂದಕ್ಕೊಂದು ರೇಖೆಗಳು ಎಂಟು ಗೋದಿಯ ಪ್ರಮಾಣದಷ್ಟು ದೂರ ಇರುವಂತೆ ಲಿಂಗದ ಮೇಲೆ ಮೂರು ಗೆರೆಗಳನ್ನು ಬಂಗಾರದಿಂದ ಸರಳಿನಿಂದ ಎಳೆಯಬೇಕು.

ಆ ರೇಖೆಗಳು ಅತೀ ಸೂಕ್ಷ್ಮವಾಗಬಾರದು, ಅತಿ ಸ್ಥೂಲವಾಗಬಾರದು. ಹಿಂದೆ ಹೇಳಿದಂತೆ ಲಿಂಗವು ಶ್ರೇಷ್ಠ ಲಿಂಗವಾಗಿದ್ದರೆ, ಲಿಂಗದ ನೆತ್ತಿಯಮೇಲೆ ಒಂದು ಗೋದಿ ಕಾಳಿನ ಪ್ರಮಾಣದಷ್ಟು ತೆಗ್ಗು ಮಾಡಬೇಕು. ಮಧ್ಯಮ ಮತ್ತು ಕನಿಷ್ಠ ಲಿಂಗಗಳಲ್ಲಿ ಆ ತಗ್ಗಿನ ಅಳವನ್ನು ಇನ್ನೂ ಕಡಿಮೆ ಮಾಡಬೇಕು.

ಇದರಂತೆ ದೇವತಾ ಮೂರ್ತಿಯ ಎತ್ತರವನ್ನು ಎಂಟು ಭಾಗಮಾಡಿ ಮೂರುಭಾಗ ಬಿಟ್ಟು ನಾಲ್ಕನೆಯ ಭಾಗದಿಂದ ಎರಡೂ ಪಾರ್ಶ್ವಗಳಲ್ಲಿ ಏಳು, ಏಳು ರೇಖೆಗಳನ್ನು ಊರ್ಧ್ವ ಮುಖವಾಗಿ ತೆಗೆಯಬೇಕು. ನಾಲ್ಕನೆಯ ಭಾಗದಿಂದ ಮೇಲಕ್ಕೆಳೆದ ರೇಖೆಯು ಐದನೆಯ ಭಾಗದ ಮೇಲ್ಗಡೆ ಬಗ್ಗಿ ಆ ರೇಖೆಯನ್ನು ಮುಟ್ಟುವಂತಿರಬೇಕು. ಹೀಗೆ ರೇಖೆಗಳು ಕೂಡುವ ಸಂಧಿ ಸ್ಥಳದಲ್ಲಿಯೂ ಅದರ ಹಿಂಭಾಗಗಳಲ್ಲಿಯೂ ಎರಡು ಭಾಗಗಳು ಏರ್ಪಡುವವು. ಹೀಗೆ ಸಂಕ್ಷಿಪ್ತವಾಗಿ ಲಕ್ಷಣವನ್ನು ನಾನು ನಿಮಗೆ ತಿಳಿಸಿದ್ದೇನೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರಾ ಅರವತ್ತೈದನೆಯ ಅಧ್ಯಾಯ ಮುಗಿದುದು*

ಅಧಿವಾಸದ ವಿಧಿ

ಅಧ್ಯಾಯ - ೨೬೬

**ಸೂತ ಉವಾಚ :**

**"ಅತಃ ಪರಂ ಪ್ರವಕ್ಷ್ಯಾಮಿ ಮೂರ್ತಿಪಾನಾಂ ತು ಲಕ್ಷಣಂ।**
**ಸ್ಥಾಪಕಸ್ಯ ಸಮಾಸೇನ ಲಕ್ಷಣಂ ಶೃಣುತ ದ್ವಿಜಾಃ॥"**

**ಸೂತ :-** ದ್ವಿಜರೆ, ಇನ್ನು ಮುಂದೆ ಮೂರ್ತಿಯ ಪ್ರತಿಷ್ಠಾ ಕಾರ್ಯಕ್ಕಾಗಿ ನಿಯೋಜಿತರಾದ ಋತ್ವಿಜರ ಹಾಗೂ ಆಚಾರ್ಯನ ಲಕ್ಷಣವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಆಚಾರ್ಯನು ವೇದಗಳನ್ನು ಮಂತ್ರ ಶಾಸ್ತ್ರವನ್ನು ಚನ್ನಾಗಿ ಅರಿತು ಪುರಾಣಗಳ ಮರ್ಮವನ್ನು ಸರಿಯಾಗಿ ತಿಳಿದವನಿರಬೇಕು. ಅವಯವ ಹೀನನಾಗಿ, ಇರಕೂಡದು. ಅತಿ ಆಶೆ, ದಂಭ, ಜಂಭ, ಮುಂತಾದ ದೋಷಗಳು ಅವನಲ್ಲಿ ಇರಬಾರದು.

ವೇದನಿಂದಕರು, ನಾಸ್ತಿಕರು, ಆದ ಪಾಖಂಡಿಗಳಿಂದ ದೂರವಿದ್ದು ಸದಾಚಾರ ಸಂಪನ್ನನಾಗಿ, ಶತ್ರು-ಮಿತ್ರರಲ್ಲಿ ರಾಗ-ದ್ವೇಷಗಳಿಂದ ರಹಿತನಾಗಿ ಇರಬೇಕು. ಚಿಗರೆಗಳು ಸಂಚರಿಸುವ, ಗೋವುಗಳು ಪೂಜಿಸಲ್ಪಡುವ ಕೃಷ್ಣ ಪರಮಾತ್ಮನಲ್ಲಿ ಭಕ್ತಿಯನ್ನುಮಾಡುವ ಒಳ್ಳೇ ದೇಶ, ಜನಾಂಗ, ಹಾಗೂ ಮನೆತನಗಳಲ್ಲಿ ಹುಟ್ಟಿ, ಹರಿಹರ, ಬ್ರಹ್ಮ ಇಂದ್ರಾದಿ ದೇವತೆಗಳಲ್ಲಿ ಭಕ್ತಿಯನ್ನು ಮಾಡುವವನಿರಬೇಕು.

ವಾಸ್ತು ಶಾಸ್ತ್ರದಲ್ಲಿಯೂ ಅವನಿಗೆ ಚೆನ್ನಾಗಿ ಪರಿಣತಿ ಇರುವದು ಅತ್ಯವಶ್ಯ. ಧರ್ಮಾಧರ್ಮವನ್ನು ವಿಮರ್ಶೆಮಾಡಿ, ನಿಜವಾದ ತತ್ವಾರ್ಥವನ್ನು ತಿಳಿದಿರಬೇಕು. ಪಾತಿತ್ಯ ಸಂಪಾದಕವಾದ ಯಾವ ದೋಷಗಳೂ ಅವನಲ್ಲಿ ಇರಕೂಡದು. ಇಂತಹ ಮನುಷ್ಯನು ಆಚಾರ್ಯನಾಗಲು ಅರ್ಹನಾಗಿದ್ದಾನೆ.

ದೇವತಾ ಪ್ರತಿಷ್ಠಾಕಾರ್ಯದಲ್ಲಿ ನಿಯೋಜಿತರಾದ ಬ್ರಾಹ್ಮಣರಿಗೆ ಮೂರ್ತಿಪರೆಂದು ಹೆಸರು.ಅವರು ಸತ್ಕುಲ ಪ್ರಸೂತರೂ, ಸರಳ ಸ್ವಭಾವದವರೂ, ವೇದ ಪಾರಂಗತರೂ ಆಗಿರಬೇಕು. ಜೇಷ್ಠಮೂರ್ತಿಗಳ ಪ್ರತಿಷ್ಠಾಕಾರ್ಯಕ್ಕೆ ಮೂವತ್ತೆರಡು ಮೂರ್ತಿಪ ಋತ್ವಿಜರನ್ನು, ಕನಿಷ್ಠ ಪ್ರಮಾಣದ ಮೂರ್ತಿಗಳ ಪ್ರತಿಷ್ಠೆಗೆ ಹದಿನಾರು, ಅಥವಾ ಎಂಟು ಋತ್ವಿಜರನ್ನು ನಿಯೋಜಿಸಬೇಕು.

ಅನಂತರ ಲಿಂಗಮೂರ್ತಿಯನ್ನು ಸ್ಥಾನಮಂಟಪಕ್ಕೆ ತೆಗೆದುಕೊಂಡು ಹೋಗಿ ವೇದಘೋಷ ಹಾಗೂ ಮಂಗಲವಾದ್ಯಗಳೊಂದಿಗೆ ಅಭಿಷೇಕಮಾಡಬೇಕು. ಪಂಚಗವ್ಯಬೆರೆಸಿದ ನೀರಿನಿಂದ ಮೊದಲು ಅಭಿಷೇಕಮಾಡಿ ಅನಂತರ ಮೃತ್ತಿಕೆ, ತುಳಸಿಗಿಡದ ಅಡಿಯಲ್ಲಿಯ ಮೃತ್ತಿಕೆ, ಹೋಮ ಭಸ್ಮಗಳಿಂದ ತಿಕ್ಕಿ ಮೂರ್ತಿ ಲಿಂಗವನ್ನು ಸ್ವಚ್ಛಗೊಳಿಸಿ, ಕೊನೆಗೆ ಶುದ್ಧೋದಕದಿಂದ ಸ್ನಾನ ಮಾಡಿಸಬೇಕು.

ಅಭಿಷೇಕಕಾಲದಲ್ಲಿ 'ಸಮುದ್ರ ಜೇಷ್ಠಾ', 'ಅಪೋರಿವಾ' 'ಯಾಸಾಂ ರಾಜಾ', 'ಅಪೋಹಿಷ್ಠಾ' ಎಂಬ ನಾಲ್ಕು ಮಂತ್ರಗಳನ್ನು ಪಠಿಸಬೇಕು.

ಹೀಗೆ ಅಭಿಷೇಕಮಾಡಿದ ಬಳಿಕ ಭಗವನ್ ಮೂರ್ತಿಗೆ ಗಂಧ ಲೇಪಿಸಿ, ಹೂವು ಏರಿಸಿ, ''ಅಧಿವಸ್ತ್ರಾ'' ಎಂಬ ವೇದ ಮಂತ್ರದಿಂದ ಒಂದು ಜೊತೆ ವಸ್ತ್ರವನ್ನು ಅದಕ್ಕೆ ಹೊದಿಸಬೇಕು. ''ಉತಿಷ್ಠ ಬ್ರಹ್ಮಣಸ್ಪತೆ'', ''ಆಮೂರಜಾ'' 'ರಥೇತಿಷ್ಠ' ಎಂಬ ಮಂತ್ರಗಳನ್ನು ಹೇಳಿ, ದೇವತಾ ಮೂರ್ತಿಯನ್ನು ಮೇಲೆತ್ತಬೇಕು. ಸಾಮಾನ್ಯವಾದ ರಥ ಅಥವಾ ಬ್ರಹ್ಮರಥದಲ್ಲಿ ಭಗವನ್ ಮೂರ್ತಿಯನ್ನು ಕೂಡಿಸಿ, ಶಿಲ್ಪಿಗಳಿಂದ ಕೂಡಿಕೊಂಡು ಮಂಗಲವಾದ್ಯಗಳನ್ನು ಮೊಳಗಿಸುತ್ತ, ಆ ರಥವನ್ನು ಎಳೆದು ತಂದು ಪ್ರತಿಷ್ಠಾ ಮಂಟಪದಲ್ಲಿ ಆ ಪ್ರತಿಮೆಗಳನ್ನು ಪ್ರವೇಶ ಮಾಡಿಸಬೇಕು.

ಅನಂತರ ಆಚಾರ್ಯನು ಒಂದು ಮೇಲ್ವಾಸನ್ನು ಹಾಸಿ, ವಿಗ್ರಹವನ್ನು ಅದರ ಮೇಲೆ ಇರಿಸಬೇಕು. ಅನಂತರ ಮಿದುವಾದ ಹಾಸಿನ ಮೇಲೆ ದರ್ಭೆ ಹಾಗೂ ಹೂವುಗಳನ್ನು ಹರಡಿ ಪೂರ್ವಾಭಿಮುಖವಾಗಿ ಮಲಗಿಸಬೇಕು. ಆಮೇಲೆ 'ಅಪೋದೇವಿ', 'ಅಪೋಸ್ಮಾನ್ ಮಾತರಂ' ಎಂಬ ಮಂತ್ರಗಳನ್ನು ಜಪಿಸುತ್ತ ವಸ್ತ್ರ ಹಾಗೂ ಬಂಗಾರದಿಂದ ಕೂಡಿದ ನಿದ್ರಾಕಲಶವನ್ನು ಮೂರ್ತಿಯ ಶಿರೋಭಾಗದಲ್ಲಿ ಮೆಲ್ಲನೆ ಇಡಬೇಕು. ಬಳಿಕ ಪೀತಾಂಬರವನ್ನು ಹೊದಿಸಿ ಮೂರ್ತಿಯ ತಲೆಗೆ ತೆಳುವಾದ ಬಟ್ಟೆಯ ಹೊದಿಕೆಯುಳ್ಳ ದಿಂಬನ್ನು ಇಡಬೇಕು. ಜೇನುತುಪ್ಪ ಹಾಗೂ ತುಪ್ಪದಿಂದ ಅಭ್ಯಂಗ ಸ್ನಾನಮಾಡಿಸಿ ''ಅಪ್ಯಾಯಸ್ವ್ಯಾಯಾತೇರುದ್ರಶಿವಾ' ಎಂಬ ಮಂತ್ರಗಳನ್ನು ಹೇಳಿ ಪೂಜಿಸಬೇಕು. ಅನಂತರ **ಬಾರ್ಹಸ್ಪತ್ಯ** ಎಂಬ ಮಂತ್ರದಿಂದ ದೇವರ ಮೂರ್ತಿಗೆ ಕಂಕಣಕಟ್ಟಿ ರೇಶ್ಮೆಯ ಬಟ್ಟೆ ಪೀತಾಂಬರಗಳನ್ನು ಹೊದಿಸಿ, ಛತ್ರ ಚಾಮರ ಕನ್ನಡಿಗಳನ್ನು ಪಕ್ಕದಲ್ಲಿ ಇರಿಸಬೇಕು. ಹೂವಿನಿಂದ ಅಲಂಕೃತವಾದ ಮೇಲ್ಗಟ್ಟನ್ನು ಕಟ್ಟಬೇಕು. ತನ್ನ ಶಕ್ತ್ಯಾನುಸಾರ ರತ್ನ, ಔಷಧಿ, ಚಿತ್ರ, ಪಾತ್ರೆ, ಹಾಸಿಗೆ ಗ್ರಹೋಪಕರಣ ಮುಂತಾದವುಗಳನ್ನು ಅಭಿತ್ವಾಶೂರ ಎಂಬ ಮಂತ್ರ ಹೇಳಿ, ಅಲ್ಲಿಯೇ ಬಳಿಯಲ್ಲಿ ಇರಿಸಬೇಕು.

ಹಾಲು, ಜೇನುತುಪ್ಪ, ಅನ್ನ, ಪಾಯಸ, ಬಗೆ ಬಗೆಯ ಭಕ್ಷ್ಯ, ಭೋಜ್ಯ ಹಾಗೂ ಷಡ್ರಸೋಪೇತವಾದ ವ್ಯಂಜನಾದಿಗಳನ್ನು ಭಗವಂತನಿಗೆ ನೈವೇದ್ಯಮಾಡಿ ಪೂಜೆಗೈಯಬೇಕು. ತ್ರ್ಯಂಬಕಂಯಜಾಮಹೆ, ಎಂಬ ಮಂತ್ರದಿಂದ ಎಲ್ಲ ದಿಕ್ಕುಗಳಲ್ಲಿ ನೆಲದಮೇಲೆ ಜಾಗರೂಕತೆಯಿಂದ ವಿಶೇಷವಾಗಿ ಬಲಿಯನ್ನು ಹಾಕಬೇಕು. ಅನಂತರ ಆಚಾರ್ಯನು ನಾಲ್ಕು ದ್ವಾರಗಳಲ್ಲಿ ನಾಲ್ಕು ದ್ವಾರ ಪಾಲಕರನ್ನು ಪ್ರತಿಷ್ಠಾಪಿಸಬೇಕು. ಪೂರ್ವ ದಿಕ್ಕಿನಲ್ಲಿ ಇರುವ ಮಹೇಂದ್ರದ್ವಾರದ ಬಳಿಯಲ್ಲಿ ಋಗ್ವೇದಿ ಬ್ರಾಹ್ಮಣರು ಶ್ರೀ ಸೂಕ್ತ, ಪವಮಾನಸೂಕ್ತ, ಸೋಮಸೂಕ್ತ ಸುಮಂಗಲಸೂಕ್ತ, ಇಂದ್ರಸೂಕ್ತ, ದಕ್ಷೋಘ್ನ ಸೂಕ್ತ ಮಂತ್ರಗಳನ್ನು ಜಪಿಸಬೇಕು. ದಕ್ಷಿಣದಲ್ಲಿರುವ ಯಜುರ್ವೇದಿ ಋತ್ವಿಜರು ರುದ್ರಸೂಕ್ತ, ಪುರುಷಸೂಕ್ತ, ಮಂಡಲಾಧ್ಯಾಯ ಮುಂತಾದವುಗಳನ್ನು ಪಠಿಸಬೇಕು.

ಪಶ್ಚಿಮದ್ವಾರದ ಬಳಿಯಲ್ಲಿ ಸಾಮವೇದಿ ಋತ್ವಿಜರು ವಾಮದೇವಸಾಮ, ಬ್ರಹತ್ಸಾಮ, ಜೇಷ್ಠಸಾಮ, ರಥಂತರ, ಸಾಮ, ಪುರುಷಸೂಕ್ತ ರುದ್ರ ಸೂಕ್ತ ಶಾಂತಿಕಾಧ್ಯಾಯ, ಭಾರುಂಡಸಾಮಗಳನ್ನು ಪಾರಾಯಣ ಮಾಡಬೇಕು. ಇದರಂತೆ ಉತ್ತರ ದ್ವಾರದ ಬಳಿ ಅಥರ್ವವೇದಿ ಬ್ರಾಹ್ಮಣರು ಅಥರ್ವಾಂಗಿರಸ, ನೀಲ, ರೌದ್ರ, ಅಪರಾಜಿತಾ, ದೇವೀಸೂಕ್ತ, ರುದ್ರಸೂಕ್ತ, ಶಾಂತಿಕಾಧ್ಯಾಯ, ಮಂತ್ರ ಪಠಿಸಬೇಕು. ಆಚಾರ್ಯನು ದೇವತಾಮೂರ್ತಿಯ ಶಿರಸ್ಥಾನದಲ್ಲಿ ವ್ಯಾಹೃತಿ ಮಂತ್ರ ಸಹಿತವಾದ ಶಾಂತಿ

ಮಂತ್ರ ಹಾಗೂ, ಪೌಷ್ಕಿ ಮಂತ್ರಗಳಿಂದ ಹೋಮ ಮಾಡಬೇಕು. ಅರಳಿ, ಮುತ್ತುಗ, ಉತ್ತರಣಿ, ಬನ್ನಿ ಈ ಐದು ಜಾತಿಯ ಸಮಿಧೆಗಳಿಂದ ಹೋಮಮಾಡಿ ಮೂರ್ತಿಯ ಪಾದಗಳನ್ನು ಸ್ಪರ್ಶ ಮಾಡಬೇಕು. ಅನಂತರ ಮತ್ತೆ ಸಹಸ್ರ ಹೋಮಮಾಡಿ ಮೂರ್ತಿಯ ಹೊಕ್ಕಳವನ್ನು ಎದೆ ತಲೆಗಳನ್ನೂ ಮುಟ್ಟಬೇಕು. ಸುತ್ತಗಟ್ಟುಗಳಿಂದ ಒಡಗೂಡಿದ ಒಂದು ಮೊಳದ ಪ್ರಮಾಣದ ಅಗ್ನಿಕುಂಡಗಳಲ್ಲಿ ಯೋನಿ ಮುಖಗಳಲ್ಲಿ ಆಹುತಿಗಳನ್ನು ಹಾಕಬೇಕು. ಹೋಮಕುಂಡದ ಯೋನಿಯು ಆನೆಯ ಕೆಳದುಟಿಯ ಆಕಾರದಲ್ಲಿ ಹನ್ನೆರಡು ಅಂಗುಲ ಉದ್ದವಿದ್ದು ಅಗಲವಾಗಿಯೂ ಇರಬೇಕು.

ಅಗ್ನಿಕುಂಡವು ವೇದಿಕೆಯ ಗೋಡೆಯನ್ನು ಬಿಟ್ಟು ಹದಿಮೂರು ಬೆರಳು ದೂರದಲ್ಲಿ ಇರಬೇಕು. ಅದರ ಮೇಲಿನ ಸುತ್ತುಗಟ್ಟು ಅಗ್ನಿಕುಂಡದ ಅಳತೆಗೆ ತಕ್ಕಂತೆ ನಾಲ್ಕು ಕಡೆ ನಾಲ್ಕು ಅಂಗುಲ ಎತ್ತರವಾಗಿ ಚೌಕಾಗಿ ಇರಬೇಕು. ಋತ್ವಿಜರು ಉತ್ತರಕ್ಕೆ ಮುಖಮಾಡಿ ಕುಳಿತು ಲೋಕಪಾಲಕರನ್ನು ಆ ದೇವತಾ ಮೂರ್ತಿಗಳನ್ನು ಉದ್ದೇಶಿಸಿ ಹೋಮಮಾಡಬೇಕು. ಭೂಮಿ, ಅಗ್ನಿ, ಯಜಮಾನ, ಸೂರ್ಯ, ಜಲ, ವಾಯು, ಚಂದ್ರ, ಆಕಾಶ, ಇವು ಎಂಟು ಮಹಾದೇವನ ಶರೀರಭೂತ ಮೂರ್ತಿಗಳಾಗಿವೆ. ಶಿವನ, ಶರೀರ ಭೂತವಾದ ಈ ಎಂಟೂ ಮೂರ್ತಿಗಳನ್ನು ಅವಾಹನ ಮಾಡಿ, ವೇದಗಳಲ್ಲಿ ಹೇಳಿರುವ ಆಯಾ ಮಂತ್ರಗಳಿಂದ ಆಹುತಿ ಕೊಡಬೇಕು.

ಹೋಮ ನಡೆಯುವ ಒಂಭತ್ತು ಅಗ್ನಿಕುಂಡಗಳಲ್ಲಿ ಶಾಂತಿಕುಂಭಗಳನ್ನು ಸ್ಥಾಪಿಸಬೇಕು. ಪ್ರತಿಯೊಂದು ಸಲ ಹೋಮಮಾಡುವಾಗ ಸೌಟಿನಲ್ಲಿ ಉಳಿಯುವ ಶೇಷವನ್ನು ಪೂರ್ಣ ಕಲಶಗಳಲ್ಲಿ ಹಾಕಿ ಅದನ್ನು ಮೂರ್ತಿಯ ಪಾದ, ಮಧ್ಯ, ಶಿರಸ್ಸುಗಳಿಗೆ ಪ್ರೋಕ್ಷಣೆ ಮಾಡಬೇಕು. ಮೂರು ಸಾವಿರ ಹೋಮ ಮುಗಿದ ಮೇಲೆ ಪೂರ್ಣಾಹುತಿ ನೀಡಬೇಕು. ಹೋಮ ಮುಗಿದ ಬಳಿಕ ದೇವರಮೂರ್ತಿಯನ್ನು ನಿಲ್ಲಿಸಿ ಆಹುತಿ ಶೇಷ ಹಾಕಿದ ಕುಂಭೋದಕದಿಂದ ಅಭಿಷೇಕ ಮಾಡಬೇಕು. ಮೂರ್ತಿಗೆ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳನ್ನು ಸಮರ್ಪಿಸಬೇಕು.

ಹೀಗೆ ಮತ್ತೆ ಮತ್ತೆ ಹೋಮಗಳನ್ನು ಮಾಡಬೇಕು. ಪುನಃ ಪುನಃ ಯಜಮಾನನು ಬ್ರಾಹ್ಮಣರಿಗೆ ದಕ್ಷಿಣೆ ಕೊಡಬೇಕು. ಒಳ್ಳೇ ವಸ್ತ್ರ, ಬಂಗಾರದ ಬಳೆ, ಉಂಗುರ, ಉಡುದಾರ, ಹಾಸಿಗೆ ಮುಂತಾದವುಗಳನ್ನು ಪ್ರತಿಯೊಂದು ಪ್ರಹರದಲ್ಲಿ ಋತ್ವಿಜರಿಗೆ ದಾನ ಕೊಡಬೇಕು. ಅನ್ನದಾನ ವಿಶೇಷ ಮಾಡಬೇಕು. ಮೂರೂ ಸಂಧ್ಯಾಕಾಲಗಳಲ್ಲಿ ಭೂತಬಲಿಯನ್ನು ಎಲ್ಲೆಡೆಗೂ ಹಾಕಬೇಕು, ಮೊದಲು ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ಊಟ ಹಾಕಿ ಬಳಿಕ ಎಲ್ಲ ಜಾತಿಯ ಜನಾಂಗದವರನ್ನೂ ಭೋಜನದಿಂದ ತೃಪ್ತಿಗೊಳಿಸಬೇಕು. ರಾತ್ರಿಯಲ್ಲಿ ನರ್ತನ, ವಾದನ, ಗಾಯನ ಮುಂತಾದವುಗಳಿಂದ ಸಂಭ್ರಮದಿಂದ ಉತ್ಸವ ನಡೆಸಬೇಕು. ಹೀಗೆ ಒಂದು, ಮೂರು, ಐದು, ಏಳು ರಾತ್ರಿಕಾಲ ಪ್ರತಿಮೆಗಳಿಗೆ ಅಧಿವಾಸವನ್ನು ಮಾಡಿಸಬೇಕು. ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ತತ್ಕಾಲದಲ್ಲಿಯೇ ಈ ಅಧಿವಾಸನದ ವಿಧಿಯನ್ನು ಮುಗಿಸಿಬಿಡಬಹುದು. ಈ ಅಧಿವಾಸನದ ಉತ್ಸವವು ಸರ್ವಯಜ್ಞ ಮಾಡಿದ ಫಲ ಕೊಡುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರುರವತ್ತಾರನೆಯ ಅಧ್ಯಾಯ ಮುಗಿದುದು*

—o—

**ಸೂತ ಉವಾಚ :**

**"ಕೃತ್ವಾಧಿವಾಸಂ ದೇವಾನಾಂ ಶುಭಂ ಕುರ್ಯಾತ್ಸಮಾಹಿತಃ ।**
**ಪ್ರಾಸಾದಸ್ಯಾನುರೂಪೇಣ ಮಾನಂ ಲಿಂಗಸ್ಯ ವಾ ಪುನಃ ॥**

**ಸೂತ** :- ದೇವತಾಮೂರ್ತಿಗಳ ಅಧಿವಾಸನ ಕಾರ್ಯ ಮುಗಿಸಿದ ಬಳಿಕ ಮುಂದಿನ ಶುಭಕಾರ್ಯವನ್ನು ಪ್ರಸನ್ನ ಮನಸಿನಿಂದ ಕೈಕೊಳ್ಳಬೇಕು. ದೇವಾಲಯಕ್ಕೆ ಅನುಗುಣವಾಗಿ ಮೂರ್ತಿಯಿರಬೇಕು. ಮೂರ್ತಿಗೆ ಅನುಗುಣವಾಗಿ ಲಕ್ಷಣಗಳಿರಬೇಕು. ಎಲ್ಲ ಲಕ್ಷಣಗಳಿಂದ ಲಕ್ಷಿತವಾದ ಭಗವನ್ ಮೂರ್ತಿಯನ್ನು ಅದಕ್ಕಾಗಿಯೇ ವಿರಚಿತವಾದ ಗರ್ಭಗುಡಿಯಲ್ಲಿ ಸ್ಥಾಪಿಸಬೇಕು.

ಮೊದಲು ಹೂಬೆರಸಿದ ನೀರಿನಿಂದ ಮಂತ್ರೋಚ್ಚಾರಣ ಪೂರ್ವಕವಾಗಿ ದೇವಾಲಯವನ್ನು ಪ್ರೋಕ್ಷಣ ಮಾಡಬೇಕು. ದ್ವಾರದ ಮಧ್ಯದಿಂದಲೂ ಗರ್ಭಾಗಾರದ ಎರಡೂ ಬದಿಗಳಿಂದಲೂ ಸೂತ್ರ ಪಾತಮಾಡಿ, ಮಧ್ಯ ಭಾಗವನ್ನು ಕಂಡು ಹಿಡಿದು ಅದಷ್ಟು ಈಶಾನ್ಯ ದಿಕ್ಕಿನ ಕಡೆಗೆ ಮೂರ್ತಿ ಪ್ರತಿಷ್ಠಾಸ್ಥಲವನ್ನು ಆಯ್ಕೆ ಮಾಡಬೇಕು. ಈಶಾನ್ಯ ದಿಕ್ಕಿನಲ್ಲಿ ಪ್ರತಿಷ್ಠಿಸಿದ ದೇವರ ಮೂರ್ತಿಯು ಆಯುಷ್ಯವನ್ನು ಆರೋಗ್ಯವನ್ನು ನೀಡುವದು.

ಮೂರ್ತಿಗಳನ್ನು ಮಾಡುವ ಕಲ್ಲುಗಳು ನಾಲ್ಕು ತೆರನಾಗಿವೆ. ಬ್ರಹ್ಮಶಿಲಾ, ಕ್ಷೇತ್ರ ಶಿಲಾ, ಶೂದ್ರಶಿಲಾ, ವೈಶ್ಯಶಿಲಾ ಎಂದು. ಕೂರ್ಮಶಿಲಾ ಎಂದು ಐದನೆಯ ಕಲ್ಲನ್ನು ಎಲ್ಲಕ್ಕಿಂತ ಕೆಳಗೆ ಅಡಿಯಲ್ಲಿ ತಳಕಲ್ಲಾಗಿ ಉಪಯೋಗಿಸಬೇಕು. ಇದರ ಮೇಲೆ ಬ್ರಹ್ಮಶಿಲೆಯನ್ನು ಇಡಬೇಕು.

ಈ ಬ್ರಹ್ಮಶಿಲೆಯ ಮೇಲೆ ಪ್ರಮಾಣ ಹಾಗೂ ಲಕ್ಷಣಪೂತ ಪೀಠವನ್ನು ಇರಿಸಬೇಕು. ಅದನ್ನು ಪಂಚಗವ್ಯ ಮತ್ತು ಔಷಧಿ ರಸ ಮಿಶ್ರಿತವಾದ ನೀರಿನಿಂದ ಮಂತ್ರ ಪಠಣದಿಂದ ತೊಳೆಯಬೇಕು. ಆ ದೇವತಾಮೂರ್ತಿ ಮಂತ್ರವನ್ನೇ ಅದರ ಪೀಠಸ್ಥಾಪನೆಯಲ್ಲಿ ಹೇಳಬೇಕು.

ಅನಂತರ ಆಚಾರ್ಯನು, 'ಉತ್ತಿಷ್ಠ ಬ್ರಹ್ಮಣ' ಎಂಬ ಮಂತ್ರದಿಂದ ಮೂರ್ತಿಯನ್ನು ಎತ್ತಿಕೊಂಡು ಗರ್ಭಗುಡಿಗೆ ತಂದು ಪೀಠದ ಬಳಿಯಲ್ಲಿ ನಿಲ್ಲಿಸಬೇಕು.

ಅರ್ಘ್ಯ, ಪಾದ್ಯ, ಮಧುಪರ್ಕ ಮುಂತಾದವುಗಳನ್ನು ಆ ದೇವಮೂರ್ತಿಗೆ ಸಮರ್ಪಿಸಬೇಕು. ಪೀಠದಲ್ಲಿ ಮೂರ್ತಿ ಸ್ಥಾಪನೆಗಾಗಿ ಮಾಡಿದ ತಗ್ಗಿನಲ್ಲಿ ರತ್ನ ಬೀಜ, ಬಂಗಾರ, ನಾಣ್ಯ ಮುಂತಾದ ಒಳ್ಳೆ ವಸ್ತುಗಳನ್ನು ಹಾಕಬೇಕು.

ವಜ್ರ, ಮುತ್ತು, ವೈಢೂರ್ಯ, ಶಂಖ, ಸ್ಫಟಿಕ, ಪುಷ್ಯರಾಗ, ಇಂದ್ರನೀಲ, ನೀಲ ಎಂಬ ರತ್ನಗಳನ್ನು ಪೂರ್ವ, ಅಗ್ನೇಯ, ದಕ್ಷಿಣ, ನೈಋತ್ಯ, ಪಶ್ಚಿಮ, ವಾಯುವ್ಯ, ಉತ್ತರ, ಈಶಾನ್ಯ ಎಂಬ ಎಂಟೂ ದಿಕ್ಕುಗಳಲ್ಲಿ ಕ್ರಮವಾಗಿ ಇರಿಸಬೇಕು.

ಅವುಗಳ ಜೊತೆಗೆ ತಿಲಕ, ಶಿಲಾವಜ್ರ, ಅಂಜನ, ಶಾಮು, ಕಾಕ್ಷಿ, ಕಾಶಿ, ಗೈರಿಕ ಎಂಬ ಧಾತು ಪದಾರ್ಥಗಳನ್ನು, ಗೋಧಿ, ಯವೆ, ಎಳ್ಳು, ಹೆಸರು, ನೀವಾರ, ಶಾವಿ, ಸಾಸಿವೆ, ಭತ್ತ ಎಂಬ ಎಂಟುಬಗೆಯ ಧಾನ್ಯಗಳನ್ನು ಶ್ರೀಗಂಧ, ಕೆಂಪುಗಂಧ, ಅಗಿಲು, ಅಂಜನ, ಲಾಮಂಚ, ವೈಷ್ಣವಿ, ಸಹದೇವಿ, ಲಕ್ಷ್ಮಣ ಎಂಬ ಎಂಟುಬಗೆಯ ವನಸ್ಪತಿಗಳನ್ನು ಕ್ರಮವಾಗಿ ಇಂದ್ರಾದಿ ಅಷ್ಟದಿಕ್ಪಾಲಕರ ಹೆಸರು ಉಚ್ಚರಿಸಿ ಇಡಬೇಕು. ಮತ್ತು ಎಲ್ಲಬಗೆಯ ಬೀಜ, ಖನಿಜ, ರತ್ನ, ಔಷಧಿ, ಬಂಗಾರ, ಪದ್ಮರಾಗ, ಪಾದರಸ, ಪದ್ಮ ಮುಂತಾದವುಗಳನ್ನು ಇರಿಸಬೇಕು.

ನಡುವಿನ ಬ್ರಹ್ಮಸ್ಥಾನದಲ್ಲಿ ಆಮೆ, ಭೂಮಿ, ವೃಷಭ ಇವುಗಳ ಪ್ರತಿಮೆಗಳನ್ನು ಪೂರ್ವಾದಿಯಾಗಿ ಇಡಬೇಕು. ಹಾಗೂ ಚಿನ್ನ, ಹವಳ, ತಾಮ್ರ, ಕಂಚು, ಹಿತ್ತಾಳೆ, ಬೆಳ್ಳಿ, ಬಿಳಿಹೂ, ಕಬ್ಬಿಣ ಇವುಗಳನ್ನು ಒಳಗೆ ಬ್ರಹ್ಮಸ್ಥಾನದಲ್ಲಿ ಕ್ರಮವಾಗಿ ಇರಿಸಬೇಕು. ಇವೆಲ್ಲ ಸಿಕ್ಕದಿದ್ದರೆ ಚಿನ್ನ ಹರಿತಾಲ ತಪ್ಪದೇ ಹಾಕಬೇಕು.

ಇಂದ್ರಾದಿ ಲೋಕಪಾಲಕರನ್ನು ಆಹ್ವಾನಿಸಿ, ಪ್ರತಿಷ್ಠೆಗೈದು, ಪೂಜಿಸುವ ನ್ಯಾಸ ಮಂತ್ರಗಳನ್ನು ಮುಂದೆ ಹೇಳುತ್ತೇನೆ.

ನ್ಯಾಸಮಂತ್ರಾನತೋ ವಕ್ಷ್ಯೇ ಲೋಕಪಾಲಾತ್ಮಕಾನಿಹ ।
ಇಂದ್ರಸ್ತು ಮಹಸಾ ದೀಪ್ತಃ ಸರ್ವದೇವಾಧಿಪೋ ಮಹಾನ್ ॥

ವಜ್ರಹಸ್ತೋ ಮಹಾಸತ್ವಸ್ತಸ್ಮೈ ನಿತ್ಯಂ ನಮೋ ನಮಃ ।
ಆಗ್ನೇಯಃ ಪುರುಷೋ ರಕ್ತಃ ಸರ್ವದೇವಮಯಃ ಶಿಖೀ ॥

ಧೂಮಕೇತುರನಾಧೃಷ್ಟ ಸ್ತಸ್ಮೈನಿತ್ಯಂ ನಮೋನಮಃ ।
ಯಮಶ್ಚೋತ್ಪಲವರ್ಣಾಭಃ ಕಿರೀಟೀ ದಂಡಧೃಕ್ಸದಾ ॥

ಧರ್ಮಸಾಕ್ಷೀ ವಿಶುದ್ಧಾತ್ಮಾ ತಸ್ಮೈನಿತ್ಯಂ ನಮೋನಮಃ ।
ನಿರ್ಋತಿಸ್ತು ಪುಮಾನ್ ಕೃಷ್ಣಃ ಸರ್ವರಕ್ಷೋಧಿಪೋ ಮಹಾನ್ ॥

ಖಡ್ಗಹಸ್ತೋ ಮಹಾಸತ್ವಸ್ತಸ್ಮೈ ನಿತ್ಯಂ ನಮೋ ನಮಃ ।
ವರುಣೋ ಧವಲೋ ವಿಷ್ಣುಃ ಪುರುಷೋ ನಿಮ್ನಗಾಧಿಪಃ ॥

ಪಾಶಹಸ್ತೋ ಮಹಾಬಾಹುಸ್ತಸ್ಮೈ ನಿತ್ಯಂ ನಮೋನಮಃ ।
ವಾಯುಶ್ಚ ಸರ್ವವರ್ಣೋ ವೈ ಸರ್ವಗಂಧವಹಃ ಶುಭಃ ॥

ಪುರುಷೋ ಧ್ವಜಹಸ್ತಶ್ಚ ತಸ್ಮೈನಿತ್ಯಂ ನಮೋ ನಮಃ ।
ಗೌರೋ ಯಶ್ಚ ಪುಮಾನ್ ಸೌಮ್ಯಃ ಸರ್ವೌಷಧಿಸಮನ್ವಿತಃ ॥

ನಕ್ಷತ್ರಾಧಿಪತಿಃ ಸೋಮಸ್ತಸ್ಮೈ ನಿತ್ಯಂ ನಮೋ ನಮಃ ।
ಈಶಾನ್ಯಪುರುಷಃ ಶುಕ್ಲಃ ಸರ್ವವಿದ್ಯಾಧಿಪೋ ಮಹಾನ್ ॥

ಶೂಲ ಹಸ್ತೋ ವಿರೂಪಾಕ್ಷಸ್ತಸ್ಮೈ ನಿತ್ಯಂ ನಮೋನಮಃ ।
ಪದ್ಮಯೋನಿಶ್ಚತುರ್ಮೂರ್ತಿರ್ವೇದಾವಾಸಃ ಪಿತಾಮಹಃ ॥

ಯಜ್ಞಾಧ್ಯಕ್ಷಶ್ಚತುರ್ವಕ್ತ್ರಸ್ತಸ್ಮೈ ನಿತ್ಯಂ ನಮೋನಮಃ ।
ಯೋಽಸಾವನಂತರೂಪೇಣ ಬ್ರಹ್ಮಾಂಡಂ ಸ ಚರಾಚರಂ ॥

ಪುಷ್ಪವದ್ಧಾರಯೇನ್ಮೂರ್ಧ್ನಿ ತಸ್ಮೈ ನಿತ್ಯಂ ನಮೋ ನಮಃ ।
ಓಂಕಾರ ಪೂರ್ವಕಾ ಹ್ಯೇತೇ ನ್ಯಾಸೇ ಬಲಿನಿವೇದನೇ ॥

ತೇಜಸ್ಸಿನಿಂದ ಬೆಳಗುವ ಎಲ್ಲ ದೇವತೆಗಳಿಗೆ ಒಡೆಯನಾದ ವಜ್ರವನ್ನು ಕೈಯಲ್ಲಿ ಹಿಡಿದ ಪರಾಕ್ರಮಶಾಲಿ ದೇವೇಂದ್ರನಿಗೆ ನಿತ್ಯವೂ ನಮಸ್ಕಾರ. ಸರ್ವದೇವ ಮಯನೂ, ಕೆಂಪುಬಣ್ಣದವನೂ, ಯಾರಿಂದಲೂ ಸೋಲಿಸಲು ಅಶಕ್ಯನೂ ಆದ ಧರ್ಮವೇ ಧ್ವಜವಾಗಿ ಉಳ್ಳ ಅಗ್ನಿದೇವನಿಗೆ ನಮೋನಮಃ.

ಕಪ್ಪುಕಮಲದ ಕಾಂತಿಯುಳ್ಳ ದಂಡಧಾರಿ ಯಮನಿಗೆ ನಮಸ್ಕಾರ. ಎಲ್ಲ ರಾಕ್ಷಸರಿಗೆ ಒಡೆಯನಾದ ಕೆಂಬಣ್ಣದ ಖಡ್ಗಹಿಡಿದ ನಿರ್ಋತಿಗೆ ಅನುದಿನವೂ ವಂದಿಸುವೆ. ಅಚ್ಚ ಬಿಳಿ ಬಣ್ಣದ, ನದಿಗಳ ಒಡೆಯನಾದ, ಪಾಶಧಾರಿ ವರುಣನಿಗೆ ದಿನ ದಿನವೂ ವಂದನೆ. ಎಲ್ಲ ಬಗೆಯ ವಾಸನೆಯನ್ನು ಹೊತ್ತುತರುವ ಬಣ್ಣ ಬಣ್ಣದ ಕಾಂತಿಯಿಂದ ಹೊಳೆಯುವ ವಾಯುದೇವನಿಗೆ ವಂದನೆ. ಧವಲಕಾಂತಿಯ ಔಷಧಿ ವನಸ್ಪತಿಗಳಿಗೆ ಒಡೆಯನಾದ ನಕ್ಷತ್ರನಾಥ ಚಂದ್ರನಿಗೆ ನಮಸ್ಕಾರ.

ಶುಭ್ರವರ್ಣದ, ಸರ್ವವಿದ್ಯೆಗಳಿಗೆ ಒಡೆಯನಾದ ಶೂಲಧಾರಿ ಮುಕ್ಕಣ್ಣನಿಗೆ ಪ್ರತಿದಿನವೂ ನಮಸ್ಕಾರ. ಪದ್ಮದಲ್ಲಿ ಹುಟ್ಟಿ ನಾಲ್ಕುಮುಖಗಳಿಂದ ವೇದಗಳನ್ನು ಉಚ್ಚರಿಸುವ, ಚತುರ್ವೇದಗಳಿಗೆ ಆಶ್ರಯಭೂತನಾದ ಬ್ರಹ್ಮದೇವನಿಗೆ ನಿರಂತರವೂ ನಮೋನಮಃ. ಅನಂತ ಎಂಬ ರೂಪದಿಂದ ಬ್ರಹ್ಮಾಂಡವನ್ನು ತಲೆಯಮೇಲೆ ಲೀಲೆಯಿಂದ ಹೊತ್ತುನಿಂತ ಆದಿಶೇಷನಿಗೆ ನಿತ್ಯವೂ ನಮೋನಮಃ

ಬ್ರಹ್ಮಸ್ಥಾನದಲ್ಲಿ ರತ್ನ ಮೊದಲಾದವುಗಳನ್ನು ಇರಿಸುವಾಗಲೂ ಉಳಿದೆಡೆ ಬಲಿಯನ್ನು ನಿವೇದನಮಾಡುವಾಗಲೂ ಹಾಗೂ ಬೇರೆ ಬೇರೆ ಕಾರ್ಯಗಳನ್ನು ಮಾಡುವಾಗಲೂ ಓಂಕಾರಪೂರ್ವಕವಾಗಿ ಈ ಮಂತ್ರಗಳನ್ನು ಹೇಳಬೇಕು. ಇದರಿಂದ ಪುತ್ರಲಾಭ, ಶ್ರೇಯಸ್ಸು ಉಂಟಾಗುವವು.

ರತ್ನಗಳನ್ನು ಇರಿಸಿದನಂತರ ಮೇಲೆ ಅವುಗಳಿಗೆ ತುಸು ಪಾಯಸ ಬಳೆದು ಆ ತಗ್ಗನ್ನು ಬಿಳಿಬಟ್ಟೆಯಿಂದ ಮುಚ್ಚಬೇಕು. ಅನಂತರ ದೇವರ ಮೂರ್ತಿಯನ್ನು ಎತ್ತಿ **'ಧ್ರುವಾದ್ಯೌ'** ಎಂಬ ಮಂತ್ರದಿಂದ ಪೀಠದ ಮೇಲೆ ಮೂರ್ತಿಯನ್ನು ಮೆಲ್ಲನೆ ಇರಿಸಬೇಕು.

ಆ ಬಳಿಕ ಬಿಗಿ ಮಾಡುವ ಬಂಧನ ಸಾಮಗ್ರಿಯಿಂದ ವಿಗ್ರಹವನ್ನು ಸ್ಥಿರವಾಗಿ ನೆಲೆಗೊಳ್ಳುವಂತೆ ಮಾಡಿ, ಮೂರ್ತಿಯ ತಲೆಯ ಮೇಲೆ ಕೈಯಿಟ್ಟು ಭಕ್ತಿಭಾವದಿಂದ ದೇವರ ಧ್ಯಾನ ಮಾಡಬೇಕು.

ದೇವವ್ರತ ಸಾಮ, ರುದ್ರಸೂಕ್ತ, ಪಠಿಸಬೇಕು. ತನ್ನ ಬಿಂಬರೂಪಿಯಾದ ಭಗವಂತನನ್ನು ಮಾನಸ ಪೂಜೆ ಮಾಡಿ, ಬಿಂಬಾವಾಹನಕ್ರಮದಿಂದ ತನ್ನ ಹೃದಯ ಗತವಾದ

ಅವುಗಳ ಜೊತೆಗೆ ತಿಲಕ, ಶಿಲಾವಜ್ರ, ಅಂಜನ, ಶಾಮ, ಕಾಕ್ಷಿ, ಕಾಶಿ, ಗೈರಿಕ ಎಂಬ ಧಾತು ಪದಾರ್ಥಗಳನ್ನು, ಗೋಧಿ, ಯವೆ, ಎಳ್ಳು, ಹೆಸರು, ನೀವಾರ, ಶಾವಿ, ಸಾಸಿವೆ, ಭತ್ತ ಎಂಬ ಎಂಟುಬಗೆಯ ಧಾನ್ಯಗಳನ್ನು ಶ್ರೀಗಂಧ, ಕೆಂಪುಗಂಧ, ಅಗಿಲು, ಅಂಜನ, ಲಾಮಂಚ, ವೈಷ್ಣವಿ, ಸಹದೇವಿ, ಲಕ್ಷ್ಮಣ ಎಂಬ ಎಂಟುಬಗೆಯ ವನಸ್ಪತಿಗಳನ್ನು ಕ್ರಮವಾಗಿ ಇಂದ್ರಾದಿ ಅಷ್ಟದಿಕ್ಪಾಲಕರ ಹೆಸರು ಉಚ್ಚರಿಸಿ ಇಡಬೇಕು. ಮತ್ತು ಎಲ್ಲಬಗೆಯ ಬೀಜ, ಖನಿಜ, ರತ್ನ, ಔಷಧಿ, ಬಂಗಾರ, ಪದ್ಮರಾಗ, ಪಾದರಸ, ಪದ್ಮ ಮುಂತಾದವುಗಳನ್ನು ಇರಿಸಬೇಕು.

ನಡುವಿನ ಬ್ರಹ್ಮಸ್ಥಾನದಲ್ಲಿ ಆಮೆ, ಭೂಮಿ, ವೃಷಭ ಇವುಗಳ ಪ್ರತಿಮೆಗಳನ್ನು ಪೂರ್ವಾದಿಯಾಗಿ ಇಡಬೇಕು. ಹಾಗೂ ಚಿನ್ನ, ಹವಳ, ತಾಮ್ರ, ಕಂಚು, ಹಿತ್ತಾಳೆ, ಬೆಳ್ಳಿ, ಬಿಳಿಹೂ, ಕಬ್ಬಿಣ ಇವುಗಳನ್ನು ಒಳಗೆ ಬ್ರಹ್ಮಸ್ಥಾನದಲ್ಲಿ ಕ್ರಮವಾಗಿ ಇರಿಸಬೇಕು. ಇವೆಲ್ಲ ಸಿಕ್ಕದಿದ್ದರೆ ಚಿನ್ನ ಹರಿತಾಲ ತಪ್ಪದೇ ಹಾಕಬೇಕು.

ಇಂದ್ರಾದಿ ಲೋಕಪಾಲಕರನ್ನು ಆಹ್ವಾನಿಸಿ, ಪ್ರತಿಷ್ಠೆಗೈದು, ಪೂಜಿಸುವ ನ್ಯಾಸ ಮಂತ್ರಗಳನ್ನು ಮುಂದೆ ಹೇಳುತ್ತೇನೆ.

ನ್ಯಾಸಮಂತ್ರಾನತೋ ವಕ್ಷ್ಯೇ ಲೋಕಪಾಲಾತ್ಮಕಾನಿಹ ।
ಇಂದ್ರಸ್ತು ಮಹಸಾ ದೀಪ್ತಃ ಸರ್ವದೇವಾಧಿಪೋ ಮಹಾನ್ ॥

ವಜ್ರಹಸ್ತೋ ಮಹಾಸತ್ವಸ್ತಸ್ಮೈ ನಿತ್ಯಂ ನಮೋ ನಮಃ ।
ಆಗ್ನೇಯಃ ಪುರುಷೋ ರಕ್ತಃ ಸರ್ವದೇವಮಯಃ ಶಿಖೀ ॥

ಧೂಮಕೇತುರನಾಧೃಷ್ಯ ಸ್ತಸ್ಮೈನಿತ್ಯಂ ನಮೋನಮಃ ।
ಯಮಶ್ಚೋತ್ಪಲವರ್ಣಾಭಃ ಕಿರೀಟೀ ದಂಡಧೃಕ್ಸದಾ ॥

ಧರ್ಮಸಾಕ್ಷೀ ವಿಶುದ್ಧಾತ್ಮಾ ತಸ್ಮೈನಿತ್ಯಂ ನಮೋನಮಃ ।
ನಿರ್ಋತಿಸ್ತು ಪುಮಾನ್ ಕೃಷ್ಣಃ ಸರ್ವರಕ್ಷೋಧಿಪೋ ಮಹಾನ್ ॥

ಖಡ್ಗಹಸ್ತೋ ಮಹಾಸತ್ವಸ್ತಸ್ಮೈ ನಿತ್ಯಂ ನಮೋ ನಮಃ ।
ವರುಣೋ ಧವಲೋ ವಿಷ್ಣುಃ ಪುರುಷೋ ನಿಮ್ನಗಾಧಿಪಃ ॥

ಪಾಶಹಸ್ತೋ ಮಹಾಬಾಹುಸ್ತಸ್ಮೈ ನಿತ್ಯಂ ನಮೋನಮಃ ।
ವಾಯುಶ್ಚ ಸರ್ವವರ್ಣೋ ವೈ ಸರ್ವಗಂಧವಹಃ ಶುಭಃ ॥

ಪುರುಷೋ ಧ್ವಜಹಸ್ತಶ್ಚ ತಸ್ಮೈನಿತ್ಯಂ ನಮೋ ನಮಃ ।
ಗೌರೋ ಯಶ್ಚ ಪುಮಾನ್ ಸೌಮ್ಯಃ ಸರ್ವೌಷಧಿಸಮನ್ವಿತಃ ॥

ನಕ್ಷತ್ರಾಧಿಪತಿಃ ಸೋಮಸ್ತಸ್ಮೈ ನಿತ್ಯಂ ನಮೋ ನಮಃ ।
ಈಶಾನ್ಯಪುರುಷಃ ಶುಕ್ಲಃ ಸರ್ವವಿದ್ಯಾಧಿಪೋ ಮಹಾನ್ ॥

ಶೂಲ ಹಸ್ತೋ ವಿರೂಪಾಕ್ಷಸ್ತಸ್ಮೈ ನಿತ್ಯಂ ನಮೋನಮಃ ।
ಪದ್ಮಯೋನಿಶ್ಚತುರ್ಮೂರ್ತಿರ್ವೇದಾವಾಸಃ ಪಿತಾಮಹಃ ॥

ಯಜ್ಞಾಧ್ಯಕ್ಷಶ್ಚತುರ್ವಕ್ತ್ರಸ್ತಸ್ಮೈ ನಿತ್ಯಂ ನಮೋನಮಃ ।
ಯೋಸಾವನಂತರೂಪೇಣ ಬ್ರಹ್ಮಾಂಡಂ ಸ ಚರಾಚರಂ ॥

ಪುಷ್ಪವದ್ಧಾರಯೇನ್ಮೂರ್ಧ್ನಿ ತಸ್ಮೈ ನಿತ್ಯಂ ನಮೋ ನಮಃ ।
ಓಂಕಾರ ಪೂರ್ವಕಾ ಹ್ಯೇತೇ ನ್ಯಾಸೇ ಬಲಿನಿವೇದನೇ ॥

ತೇಜಸ್ಸಿನಿಂದ ಬೆಳಗುವ ಎಲ್ಲ ದೇವತೆಗಳಿಗೆ ಒಡೆಯನಾದ ವಜ್ರವನ್ನು ಕೈಯಲ್ಲಿ ಹಿಡಿದ ಪರಾಕ್ರಮಶಾಲಿ ದೇವೇಂದ್ರನಿಗೆ ನಿತ್ಯವೂ ನಮಸ್ಕಾರ. ಸರ್ವದೇವ ಮಯನೂ, ಕೆಂಪುಬಣ್ಣದವನೂ, ಯಾರಿಂದಲೂ ಸೋಲಿಸಲು ಅಶಕ್ಯನೂ ಆದ ಧರ್ಮವೇ ಧ್ವಜವಾಗಿ ಉಳ್ಳ ಅಗ್ನಿದೇವನಿಗೆ ನಮೋನಮಃ.

ಕಪ್ಪುಕಮಲದ ಕಾಂತಿಯುಳ್ಳ ದಂಡಧಾರಿ ಯಮನಿಗೆ ನಮಸ್ಕಾರ. ಎಲ್ಲ ರಾಕ್ಷಸರಿಗೆ ಒಡೆಯನಾದ ಕೆಂಬಣ್ಣದ ಖಡ್ಗಹಿಡಿದ ನಿರ್ಋತಿಗೆ ಅನುದಿನವೂ ವಂದಿಸುವೆ. ಅಚ್ಚ ಬಿಳಿ ಬಣ್ಣದ, ನದಿಗಳ ಒಡೆಯನಾದ, ಪಾಶಧಾರಿ ವರುಣನಿಗೆ ದಿನ ದಿನವೂ ವಂದನೆ. ಎಲ್ಲ ಬಗೆಯ ವಾಸನೆಯನ್ನು ಹೊತ್ತುತರುವ ಬಣ್ಣ ಬಣ್ಣದ ಕಾಂತಿಯಿಂದ ಹೊಳೆಯುವ ವಾಯುದೇವನಿಗೆ ವಂದನೆ. ಧವಲಕಾಂತಿಯ ಔಷಧಿ ವನಸ್ಪತಿಗಳಿಗೆ ಒಡೆಯನಾದ ನಕ್ಷತ್ರನಾಥ ಚಂದ್ರನಿಗೆ ನಮಸ್ಕಾರ.

ಶುಭ್ರವರ್ಣದ, ಸರ್ವವಿದ್ಯೆಗಳಿಗೆ ಒಡೆಯನಾದ ಶೂಲಧಾರಿ ಮುಕ್ಕಣ್ಣನಿಗೆ ಪ್ರತಿದಿನವೂ ನಮಸ್ಕಾರ. ಪದ್ಮದಲ್ಲಿ ಹುಟ್ಟಿ ನಾಲ್ಕುಮುಖಗಳಿಂದ ವೇದಗಳನ್ನು ಉಚ್ಚರಿಸುವ, ಚತುರ್ವೇದಗಳಿಗೆ ಆಶ್ರಯಭೂತನಾದ ಬ್ರಹ್ಮದೇವನಿಗೆ ನಿರಂತರವೂ ನಮೋನಮಃ. ಅನಂತ ಎಂಬ ರೂಪದಿಂದ ಬ್ರಹ್ಮಾಂಡವನ್ನು ತಲೆಯಮೇಲೆ ಲೀಲೆಯಿಂದ ಹೊತ್ತುನಿಂತ ಆದಿಶೇಷನಿಗೆ ನಿತ್ಯವೂ ನಮೋನಮಃ

ಬ್ರಹ್ಮಸ್ಥಾನದಲ್ಲಿ ರತ್ನ ಮೊದಲಾದವುಗಳನ್ನು ಇರಿಸುವಾಗಲೂ ಉಳಿದೆಡೆ ಬಲಿಯನ್ನು ನಿವೇದನಮಾಡುವಾಗಲೂ ಹಾಗೂ ಬೇರೆ ಬೇರೆ ಕಾರ್ಯಗಳನ್ನು ಮಾಡುವಾಗಲೂ ಓಂಕಾರಪೂರ್ವಕವಾಗಿ ಈ ಮಂತ್ರಗಳನ್ನು ಹೇಳಬೇಕು. ಇದರಿಂದ ಪುತ್ರಲಾಭ, ಶ್ರೇಯಸ್ಸು ಉಂಟಾಗುವವು.

ರತ್ನಗಳನ್ನು ಇರಿಸಿದನಂತರ ಮೇಲೆ ಅವುಗಳಿಗೆ ತುಸು ಪಾಯಸ ಬಳೆದು ಆ ತಗ್ಗನ್ನು ಬಿಳಿಬಟ್ಟೆಯಿಂದ ಮುಚ್ಚಬೇಕು. ಅನಂತರ ದೇವರ ಮೂರ್ತಿಯನ್ನು ಎತ್ತಿ **'ಧ್ರುವಾದ್ಯೌ'** ಎಂಬ ಮಂತ್ರದಿಂದ ಪೀಠದ ಮೇಲೆ ಮೂರ್ತಿಯನ್ನು ಮೆಲ್ಲನೆ ಇರಿಸಬೇಕು.

ಆ ಬಳಿಕ ಬಿಗಿ ಮಾಡುವ ಬಂಧನ ಸಾಮಗ್ರಿಯಿಂದ ವಿಗ್ರಹವನ್ನು ಸ್ಥಿರವಾಗಿ ನೆಲೆಗೊಳ್ಳುವಂತೆ ಮಾಡಿ, ಮೂರ್ತಿಯ ತಲೆಯ ಮೇಲೆ ಕೈಯಿಟ್ಟು ಭಕ್ತಿಭಾವದಿಂದ ದೇವರ ಧ್ಯಾನ ಮಾಡಬೇಕು.

ದೇವವ್ರತ ಸಾಮ, ರುದ್ರಸೂಕ್ತ, ಪಠಿಸಬೇಕು. ತನ್ನ ಬಿಂಬರೂಪಿಯಾದ ಭಗವಂತನನ್ನು ಮಾನಸ ಪೂಜೆ ಮಾಡಿ, ಬಿಂಬಾವಾಹನಕ್ರಮದಿಂದ ತನ್ನ ಹೃದಯ ಗತವಾದ

ಭಗವದ್‌ರೂಪವನ್ನೇ ಪ್ರತಿಮೆಯಲ್ಲಿ ಪ್ರತಿಷ್ಠಿಸಬೇಕು. ಯಾವ ಮೂರ್ತಿಯ ಪ್ರತಿಷ್ಠೆ ಮಾಡುವದಿರುವದೋ ಆ ದೇವತೆಯ ಮಂತ್ರಹೇಳಿ ಭಕ್ತಿಯಿಂದ ಪ್ರಾರ್ಥನೆ ಮಾಡಬೇಕು.

ವಿಷ್ಣುವಿನ ಮೂರ್ತಿ ಪ್ರತಿಷ್ಠಾಪನೆ ಮಾಡುವದಿದ್ದರೆ

**ಆತಸೀ ಪುಷ್ಪ ಸಂಕಾಶಂ ಶಂಖಚಕ್ರ ಗದಾಧರಂ**
**"ಸಂಸ್ಥಾಪಯಾಮಿ ದೇವೇಶಂ ಭಕ್ತೋಭೂತ್ವಾ ಜನಾರ್ದನಂ"**

ಎಂಬ ಮಂತ್ರವನ್ನು ಹೇಳಬೇಕು.

ಅಗಸೆಹೂವಿನ ಮೈಬಣ್ಣವುಳ್ಳ, ಶಂಖ ಚಕ್ರ, ಗದೆಗಳನ್ನು ಧರಿಸಿದ ದೇವತೆಗಳಿಗೆಲ್ಲ ಒಡೆಯನಾದ ಶ್ರೀಹರಿಯನ್ನು ಅವನ ಭಕ್ತನಾಗಿ ನಾನು ಸ್ಥಾಪನೆ ಮಾಡುತ್ತೇನೆ. ಎಂಬ ಅಭಿಪ್ರಾಯವನ್ನು ಅನುಸಂಧಾನಕ್ಕೆ ತಂದು ಅಂತರ್ ಮುಖಿಯಾಗಿ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಇದರಂತೆ, ಮಹಾದೇವರ ಮೂರ್ತಿ ಪ್ರತಿಷ್ಠಾಪನೆ ಇದ್ದರೆ,

**"ಅಪರಂ ದಶಬಾಹುಂ ಚ ಚಂದ್ರಾರ್ಧ ಕೃತಶೇಖರಂ**
**ಗಣೇಶಂ ವ್ರತ ಸಂಸ್ಥಂ ಚ ಸ್ಥಾಪಯಾಮಿ ತ್ರಿಲೋಚನಂ**

ಎಂಬ ಮಂತ್ರವನ್ನು ಹೇಳಬೇಕು.

ಬ್ರಹ್ಮದೇವರ ಪ್ರತಿಷ್ಠೆಯ ಕಾಲದಲ್ಲಿ -

**"ಋಷಿಭಿಃ ಸಂಸ್ತುತಂ ದೇವಂ ಚತುರ್ವಕ್ತ್ರಂ ಜಟಾಧರಂ,**
**ಪಿತಾಮಹಂ ಮಹಾಬಾಹುಂ ಸ್ಥಾಪಯಾಮ್ಯಂಬಜೋದ್ಭವಂ"**

ಎಂಬ ಮಂತ್ರವನ್ನು ಹೇಳಬೇಕು.

ಸೂರ್ಯನ ಪ್ರತಿಷ್ಠೆಯ ಕಾಲದಲ್ಲಿ

**"ಸಹಸ್ರ ಕಿರಣಂ ಶಾಂತಮಸ್ಸರೋ ವರ ಸಂಯುತಂ ।**
**ಪದ್ಮಹಸ್ತಂ ಮಹಾಬಾಹುಂ ಸ್ಥಾಪಯಾಮಿ ದಿವಾಕರಂ ।"**

ಎಂಬ ಮಂತ್ರವನ್ನು ಹೇಳಬೇಕು.

ಹೀಗೆ ಹರಿ, ಹರ, ಬ್ರಹ್ಮ, ಸೂರ್ಯ, ಮುಂತಾದ ದೇವತೆಗಳ ಹಾಗೂ ಇತರ ದೇವತೆಗಳ ಸ್ಥಾಪನೆ ಕಾಲದಲ್ಲಿ ಆಯಾ ದೇವತೆಗಳ ಮಂತ್ರಗಳನ್ನು ಆಚಾರ್ಯನು ಜಪಿಸಿ, ವೇದೋಕ್ತವಾದ ವಿಧಿಯಲ್ಲಿ ಸ್ವಲ್ಪವೂ ಲೋಪವಾಗದಂತೆ ಯಥಾಸಾಂಗವಾಗಿ ಭಗವನ್ ಮೂರ್ತಿಗಳ ಪ್ರತಿಷ್ಠೆಯನ್ನು ನೆರವೇರಿಸಬೇಕು.

ಮಹಾದೇವರ ವಿಗ್ರಹವನ್ನು ಸ್ಥಾಪಿಸುವಾಗ ಸುತ್ತಲೂ ಮಹಾಕಾಳಿ, ವೃಷಭ, ಭೃಂಗಿ, ಋಟಿ, ಷಣ್ಮುಖ, ಪಾರ್ವತಿ, ವಿನಾಯಕ, ಬ್ರಹ್ಮ, ರುದ್ರ, ಇಂದ್ರ, ಜಯಂತ ವಿಷ್ಣು, ಲೋಕಪಾಲಕರು, ಅಪ್ಸರೆಯರು, ಗಂಧರ್ವರು, ಗುಹ್ಯಕರು ಮುಂತಾದ ಪರಿವಾರ ವರ್ಗದವರು. ಎಲ್ಲ ಪ್ರಮಥಗಣಗಳು ಇರುತ್ತವೆ. ಎಂದು ಅನುಸಂಧಾನ ಮಾಡಿಕೊಳ್ಳಬೇಕು. ಮತ್ತು

**''ಆಗಚ್ಛ ಭಗವನ್ ರುದ್ರಾನುಗ್ರಹಾಯ ಶಿವೋ ಭವ**
**ಶಾಶ್ವತೋ ಭವ, ಪೂಜಾಂ ಮೇತ್ವಂಗ್ರಹಾಣ ನಮೋ ನಮಃ''**

ಎಂದು ಮಹಾದೇವರನ್ನು ಆಹ್ವಾನಿಸಿ ಪ್ರಾರ್ಥನೆಯನ್ನು ಸಲ್ಲಿಸಬೇಕು. ಅರ್ಘ್ಯ, ಪಾದ್ಯ, ಮುಂತಾದವುಗಳನ್ನು ಭಕ್ತಿಯಿಂದ ಸಮರ್ಪಿಸಬೇಕು.

ಅನಂತರ ವೇದಘೋಷ ಮಂಗಲವಾದ್ಯಗಳು ಮೊಳಗುತ್ತಿರುವಾಗ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಗಂಧೋದಕ, ಸ್ವಾದೂದಕ, ಪುಷ್ಪೋದಕ, ಶುದ್ಧೋದಕಗಳಿಂದ ಶಿವನಿಗೆ ಅಭಿಷೇಕ ಮಾಡಬೇಕು.

ಅನಂತರ ''ಸಹಸ್ರ ಶೀರ್ಷಾ ಪುರುಷ, 'ಯಜ್ಞಾಗ್ರತೋ' 'ದೂರಮುಧಯತಿ', 'ತತೋವಿರಾಡಜಾಯತ', 'ಅಧಿತ್ವಾಶೂರ', 'ನತ್ವಾವಾಂ ಅಹನ್ಯಹ' ಮುಂತಾದ ಮಂತ್ರಗಳನ್ನು ಜಪಿಸಬೇಕು. ಈ ಮಂತ್ರಗಳನ್ನು ಪುನಃ ಪುನಃ ಉಚ್ಚರಿಸುತ್ತಾ ದೇವರ ಮೂರ್ತಿಯ ಪಾದದಲ್ಲಿಯೂ ಮಧ್ಯದಲ್ಲಿಯೂ ತಲೆಯಲ್ಲಿಯೂ ನಾಲ್ಕುಸಲ ನೀರನ್ನು ಪ್ರೋಕ್ಷಿಸಬೇಕು.

ಹೀಗೆ ದೇವತಾ ಪ್ರತಿಷ್ಠೆ ಆದ ಮೇಲೆ ಯಜಮಾನನು ಋತ್ವಿಜರನ್ನು ಆಚಾರ್ಯರನ್ನು ಭಕ್ತಿಯಿಂದ ವಸ್ತ್ರಾಲಂಕಾರವಿತ್ತು ಪೂಜೆಮಾಡಬೇಕು. ಅನಾಥರಿಗೆ, ದೀನದಲಿತರಿಗೆ ದರಿದ್ರರಿಗೆ, ಅನ್ನ ವಸ್ತ್ರಾದಿ ಕೊಟ್ಟು ತೃಪ್ತಿ ಮಾಡಬೇಕು.

ಅನಂತರ ದೇವರ ಮೂರ್ತಿಗೆ ಮೊದಲನೆಯ ದಿನ ಮೈತುಂಬ ಜೇನುತುಪ್ಪ ಸವರಬೇಕು. ಎರಡನೇಯ ದಿನ ಬಿಳಿ ಸಾಸುವೆ, ಮೂರನೇಯ ದಿನ ಶ್ರೀಗಂಧ ಮತ್ತು ಯವಧಾನ್ಯ, ನಾಲ್ಕನೆಯ ದಿನ ಮನಶ್ಶಿಲೆನವಣೆಗಳನ್ನು, ಐದನೆಯ ದಿನ ಕರಿಯ ಕಾಡಿಗೆ ಎಳ್ಳು, ಆರನೆಯ ದಿನ ತುಪ್ಪ, ಶ್ರೀಗಂಧ, ಪದ್ಮಕೇಸರ, ಏಳನೆ ದಿನ ಗೋರೋಚನ ಮತ್ತು ಅಗರು ಪುಷ್ಪಗಳ ರಸವನ್ನು ಮೈತುಂಬ ಸವರಬೇಕು.

ಪ್ರತಿಷ್ಠಾದಿನದಲ್ಲಿಯೇ ಅಧಿವಾಸನ ಮುಗಿಸದಿದ್ದರೆ ಇದೆಲ್ಲವನ್ನೂ ಅವಶ್ಯವಾಗಿ ಮಾಡಲೇಬೇಕು. ದೇವತಾ ವಿಗ್ರಹ ಪ್ರತಿಷ್ಠೆಮಾಡಿದ ಬಳಿಕ ಎಂದೂ ಅಲುಗಾಡಿಸಲಾರದು. ಅದರಿಂದ ಬಹಳ ಪಾಪವಿದೆ. ಎಲ್ಲಿಯಾದರೂ ಬಿರುಕುಗಳಿದ್ದರೆ ಮರಳು ತುಂಬಿ ಎಲ್ಲಿಯೂ ಛಿದ್ರ ಉಳಿಯದಂತೆ ಮಾಡಬೇಕು. ಮೂರ್ತಿಯ ಯಾವದಾದರೂ ಒಂದು ದಿಕ್ಕಿಗೆ ಅಲುಗಾಡಿದಂತಾದರೆ ಆ ದಿಕ್ಕಿಗೆ ದಿಕ್ಪಾಲಕರನ್ನು ಸ್ಮರಿಸಿ, ಧೇನಿಸಿ ಶಾಂತಿಮಾಡಿ, ವಿಪ್ರರಿಗೆ ದಕ್ಷಿಣೆ ಕೊಡಬೇಕು. ವಿಗ್ರಹವು ಪೂರ್ವ ದಿಕ್ಕಿನಲ್ಲಿ ತುಸು ಅಲುಗಾಡಿದರೆ ಆಗ ಆ ದಿಕ್ಕಿನ ಅಧಿಪತಿಯಾದ ಇಂದ್ರನನ್ನು ಉದ್ದೇಶಿಸಿ ಶಾಂತಿಮಾಡಿ ಆನೆಯನ್ನು ದಾನ ಕೊಡಬೇಕು. ಇಲ್ಲದಿದ್ದರೆ ಅದಕ್ಕೆ ಪ್ರತಿಯಾಗಿ ಬಂಗಾರ ಕೊಡಬೇಕು.

ಇದರಂತೆ ಬೇರೆ ಬೇರೆ ದಿಕ್ಕುಗಳ ಒಡೆಯರಾದ ದೇವರನ್ನುದ್ದೇಶಿಸಿ ಶಾಂತಿ ಮಾಡುವಾಗ ಯಮನಿಗೆ ಕೋಣ, ನಿಋತಿಗೆ ಚಿನ್ನದ ಆಡು, ವರುಣನಿಗೆ ಮುತ್ತುಗಳನ್ನು, ಅಗ್ನಿಗೆ ಆಡನ್ನೂ, ವಾಯುವಿಗೆ ಹಿತ್ತಾಳೆಯನ್ನು, ಚಂದ್ರನಿಗೆ ಹಸುವನ್ನು ಶಿವನಿಗೆ ಬೆಳ್ಳಿಯ ಎತ್ತನ್ನು ಸಂಕಲ್ಪ ಮಾಡಿ ಬ್ರಾಹ್ಮಣರಿಗೆ ದಾನ ಕೊಡಬೇಕು.

ಯಾವ ದಿಕ್ಕಿನಲ್ಲಿ ವಿಗ್ರಹವು ಕಂಪಿಸುವದೋ ಆ ದೇವತೆಯನ್ನು ಉದ್ದೇಶ್ಯ ಶಾಂತಿ ಮಾಡಿ, ಮುಂದೆ ಅದು ಅಲುಗಾಡದಂತೆ ಮರಳನ್ನು, ಮಣ್ಣನ್ನು, ಬಿಗಿಯಾದ ಪದಾರ್ಥವನ್ನು ತುಂಬಿ ಶೀಡಿ ಗಟ್ಟಿಯಾಗಿ ಮಾಡಬೇಕು. ಪ್ರತಿಷ್ಠೆಯಾದ ಪ್ರತಿಮೆಯು ಹೊಯ್ದಾಡಿದರೆ ಯಜಮಾನನಿಗೆ ವಿಪತ್ತು ವಂಶಕ್ಷಯಗಳು ಸಂಭವಿಸುವವು.

ದೇವತಾ ಪ್ರತಿಷ್ಠೆಯ ಕಾಲದಲ್ಲಿ ಅನ್ನದಾನವನ್ನು ವಿಶೇಷವಾಗಿ ನಡೆಸಬೇಕು. ಯೋಗ್ಯ ಜನರಿಗೆಲ್ಲ ವಸ್ತ್ರದಕ್ಷಿಣೆಗಳನ್ನು ಯಥೇಷ್ಟವಾಗಿ ದಾನಮಾಡಬೇಕು. ಸಮಾರಂಭ ಮುಗಿಯುವವರೆಗೆ ಪುಣ್ಯಾಹವಾಚನ, ವೇದಘೋಷ, ಶಾಸ್ತ್ರಪಾರಾಯಣ, ದೇವರ ಜಯಕಾರ, ಮಂಗಲವಾದ್ಯ ಮುಂತಾದವುಗಳು ನಡೆಯುತ್ತಲೇ ಇರಬೇಕು.

ಮೂರು, ಐದು, ಏಳು, ಹತ್ತು ದಿನಗಳವರೆಗೆ ಮಹೋತ್ಸವವನ್ನು ದೇವತಾ ಪ್ರತಿಷ್ಠೆಯ ಸಮಾರಂಭ ರೂಪವಾಗಿ ವಿಜೃಂಭಣೆಯಿಂದ ನೆರವೇರಿಸಬೇಕು. ಕೊನೆಯ ದಿನ ಅವಭೃಥಸ್ನಾನವನ್ನುಮಾಡಿ ಆ ದಿನ ರಾತ್ರಿ ನಡೆಯಬೇಕಾದ ಹೋಮ ಹವನದ ಕಾರ್ಯಗಳನ್ನು ಯಥಾಸಾಂಗವಾಗಿ ನೆರವೇರಿಸಬೇಕು. ಋತ್ವಿಜ, ಆಚಾರ್ಯರಿಗೆ ಉಪಸ್ಥಿತರಾದ ವಿದ್ವಾಂಸರಿಗೂ ಭಕ್ತಿಯಿಂದ ವಿಪುಲವಾಗಿ ದಕ್ಷಿಣೆಯನ್ನು ನೀಡಬೇಕು. ಈ ದೇವತಾ ಪ್ರತಿಷ್ಠೆಯನ್ನು ಅರಿತು ಅದರಂತೆ ಮಾಡಿದರೆ ಅವರ ಎಲ್ಲ ಪಾಪ ಪರಿಹಾರವಾಗಿ ವಿದ್ಯಾಧರರು, ದೇವತೆಗಳಿಂದಲೂ ಮನ್ನಣೆಯನ್ನು ಪಡೆಯುವರು.

ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರಾ ಅರವತ್ತೇಳನೆಯ ಅಧ್ಯಾಯ ಮುಗಿದುದು.

—o—

## ದೇವತಾ ಸ್ನಪನ

ಅಧ್ಯಾಯ - ೨೬೮

**ಸೂತ ಉವಾಚ :**

**"ಅಥಾತಃ ಸಂಪ್ರವಕ್ಷ್ಯಾಮಿ ದೇವ ಸ್ನಪನಮುತ್ತಮಮ್ ।**
**ಅರ್ಘ್ಯಸ್ಯಾಪಿ ಸಮಾಸೇನ ಶೃಣುಧ್ವಂ ವಿಧಿಮುತ್ತಮಂ ॥"**

**ಸೂತ** :- ಇನ್ನು ಮೇಲೆ ದಿವ್ಯವಾದ ದೇವರ ಅಭಿಷೇಕದ ವಿಧಾನವನ್ನು ಅರ್ಘ್ಯದಾನದ ವಿಧಿಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತೇನೆ ಕೇಳಿರಿ. ಮೊಸರು, ಅಕ್ಷತೆ, ದರ್ಭೆ, ಹಾಲು, ಕರಿಕೆ, ಜೇನು, ಅಕ್ಕಿಕಾಳು, ಬಿಳಿಸಾಸಿವೆ, ಮುಂತಾದ ಪದಾರ್ಥಗಳೆಲ್ಲವೂ, ಪೂಜಾಸಾಮಗ್ರಿ ಆಗಿರುತ್ತವೆ. ಇವುಗಳೊಡನೆ ಬಗೆಯ ಬಗೆಯ ಹಣ್ಣು ಕಾಯಿಗಳನ್ನು ಹೂಗಳನ್ನು ತಂದು ಇರಿಸಿಕೊಂಡಿರಬೇಕು.

ಆನೆ, ಕುದುರೆ, ಗೋವುಗಳು ಸಂಚರಿಸಿದ ಸ್ಥಳ, ಹಾವಿನ ಹುತ್ತ, ಹಂದಿಗಳು ಅಗಿದು ಮಾಡಿದ ಹಳ್ಳ, ಅಗ್ನಿ ಹೋತ್ರ ಇಟ್ಟ ಬ್ರಾಹ್ಮಣರ ಮನೆ, ಪುಣ್ಯ ತೀರ್ಥ ಮುಂತಾದ ಸ್ಥಳಗಳಿಂದ 'ಉದ್ಧೃತಾಸಿ ವರಾಹೇಣ' ಎಂಬ ಮಂತ್ರದಿಂದ ಮಣ್ಣನ್ನು ತಂದು ಕಲಶದಲ್ಲಿ ಹಾಕಬೇಕು. ಅನಂತರ ಪಂಚಗವ್ಯವನ್ನು ಮಾಡಬೇಕು. ಪಂಚಗವ್ಯವನ್ನು ಮಾಡುವ ಕ್ರಮ ಇಂತಿದೆ : ಶನ್ನೋದೇವಿರಭಿಷ್ಟಯೇ 'ಎಂಬ

ಮಂತ್ರಗಳಿಂದ ನೀರನ್ನು, ಗಾಯತ್ರಿ ಮಂತ್ರದಿಂದ ಗೋಮಯವನ್ನು, 'ಅಪ್ಯಾಯಸ್ವ' ಎಂಬ ಮಂತ್ರದಿಂದ ಹಾಲನ್ನು, ದಧಿಕ್ರಾವ್ಣೋ ಅಕಾರಿಷಂ' ಎಂಬ ಮಂತ್ರದಿಂದ ಮೊಸರು, 'ತೇಜೋಸೀ' ಎಂಬ ಮಂತ್ರದಿಂದ ತುಪ್ಪವನ್ನು ದರ್ಭೋದಕವನ್ನು ತೆಗೆದುಕೊಂಡು ಎಲ್ಲವನ್ನು ಮಿಶ್ರಮಾಡಿದರೆ ಪಂಚಗವ್ಯವಾಗುವದು. ಹಾಗೆ ಪಂಚಗವ್ಯವನ್ನು ತಯಾರು ಮಾಡಿ ದೇವರಿಗೆ ಮೊದಲು ಅಭಿಷೇಕ ಮಾಡಬೇಕು.

ಅನಂತರ ಮೇಲೆ ಹೇಳಿದ ಮಂತ್ರಗಳಿಂದಲೇ ಹಾಲು, ಮೊಸರು, ತುಪ್ಪ, ಜೇನುತುಪ್ಪಗಳಿಂದ ದೇವರಿಗೆ ಅಭಿಷೇಕಮಾಡಿ, ಸಂಸ್ವತ್ಯೆ ಭೇಷಜೇವ ಎಂಬ ಮಂತ್ರದಿಂದ ಹೂಬೆರಸಿದ ನೀರಿನಿಂದಲೂ ಹಿರಣ್ಯಾಕ್ಷ ಎಂಬ ರತ್ನಹಾರದ ನೀರಿನಿಂದಲೂ 'ದೇವಸ್ಯತ್ವಾ' ಎಂಬ ಮಂತ್ರದಿಂದ ಕುಶೋದಕದಿಂದಲೂ 'ಅಗ್ನಾ ಆಯಾಹಿ'ಎಂಬ ಮಂತ್ರದಿಂದ ಫಲೋದಕದಿಂದಲೂ, ಗಾಯತ್ರಿಮಂತ್ರದಿಂದ ಗಂಗೋದಕದಿಂದಲೂ ಕೊನೆಗೆ ಪುರುಷ ಸೂಕ್ತದಿಂದ ಶುದ್ಧತಿಳಿನೀರಿನಿಂದಲೂ ದೇವರಿಗೆ ಅಭಿಷೇಕ ಮಾಡಿಸಬೇಕು.

ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳೆ, ಕಂಚು, ಮಣ್ಣಿನಕೊಡಗಳಲ್ಲಿ ಸಹದೇವೀ ಬತಿ, ವ್ಯಾಘ್ರ ಬಲೆ, ಅತಿಬಲೆ, ಶಂಖಿಸೃಷ್ಟಿ, ಸಿಂಹಿ, ಸುವರ್ಚಲಾ ಎಂಬ ಮಹೌಷಧಿಗಳನ್ನು ಬೆರಸಿ ದೇವರ ಪ್ರತಿಮೆಗೆ ಸಾವಿರ ಕೊಡ ನೀರನ್ನು ಹೊಯ್ದು ಚೆನ್ನಾಗಿ ಅಭಿಷೇಕ ಮಾಡಬೇಕು. ಅಷ್ಟು ಆಗದಿದ್ದರೆ ಐದು ನೂರು, ನೂರ ಐವತ್ತು, ಅರವತ್ತೈದು, ಮೂವತ್ತೆರಡು, ಎಂಟು ಕೊನೆಗೆ ನಾಕು, ಕುಂಭಗಳನ್ನಾದರೂ ಸ್ಥಾಪಿಸಿ, ಸ್ನಾನ ಮಾಡಿಸಬೇಕು. ಅಕ್ಕಿ, ಗೋಧಿ, ಎಳ್ಳು, ಶ್ಯಾವಿ, ಬತ್ತ, ನವಣೆ, ಮುಂತಾದ ಧಾನ್ಯಗಳನ್ನು ಒಣಗಿಸಿ ಕುಟ್ಟಿ ಪುಡಿಮಾಡಿ, ದೇವರ ಅಭಿಷೇಕ ಕಾಲದಲ್ಲಿ ಉಪಯೋಗಿಸಬೇಕು.

ಗಂಗಾಜಲವು ದೇವರ ಅಭಿಷೇಕಕ್ಕೆ ಅತ್ಯಂತ ಶ್ರೇಷ್ಠವಾಗಿದೆ. ಅನಂತರ ದೇವರಿಗೆ ಜೋಡು ವಸ್ತ್ರವನ್ನು ಸಮರ್ಪಿಸಬೇಕು. ಅನಂತರ ಪಚ್ಚಕರ್ಪೂರ ಕೇಶರ ಬೆರಸಿದ ಗಂಧವನ್ನು ಲೇಪಿಸಬೇಕು. ಬಲದಿಂದ ಪ್ರಾರಂಭಿಸಿ ನಲವತ್ತು ದೀಪ ಹಚ್ಚಿಡಬೇಕು. ಅನಂತರ ಧೂಪದೀಪಗಳನ್ನು ಅವುಗಳಿಗಾಗಿ ಹೇಳಿದ ಮಂತ್ರೋಚ್ಚಾರಣ ಪೂರ್ವಕ ದೇವರಿಗೆ ಸಮರ್ಪಿಸಬೇಕು. ಕೊನೆಗೆ ದೇವರಿಗೆ ಆಭರಣಗಳನ್ನು ಸಮರ್ಪಿಸಿ, ''ಮಹಾಭೂಷಾಯ ತೇ ನಮಃ'' ಎಂದು ನಮಸ್ಕಾರ ಮಾಡಿ, ವೈಭವದಿಂದ ಮಹೋತ್ಸವವನ್ನು ನಡೆಸಬೇಕು.

ಅನಂತರ ಯಜಮಾನನು ದೇವರಿಗೆ ಉಪಯೋಗಿಸಿದ ಅದೇ ಕಲಶಗಳಿಂದ ತಾನೂ ಸ್ನಾನ ಮಾಡಬೇಕು. 'ದೇವಸ್ಯತ್ವಾ' ಎಂಬ ಮಂತ್ರವನ್ನು, ಸಾಮವೇದ ಅಥರ್ವಣ ವೇದಮಂತ್ರಗಳನ್ನು ಸ್ನಾನಾನಂತರ ಜಪಿಸಿ, ಶುಭ್ರ ವಸ್ತ್ರಧರಿಸಿ ನವಗ್ರಹ ಯಜ್ಞದಲ್ಲಿ ಹೇಳಿದ ಇಂದ್ರಾದಿದೇವತೆಗಳನ್ನು ಪೂಜಿಸಬೇಕು.

ವಸ್ತ್ರಾಲಂಕಾರ ಕೊಟ್ಟು ಆಚಾರ್ಯರನ್ನು ಪೂಜಿಸಬೇಕು. ಈ ಸಮಾರಂಭದಲ್ಲಿ ಉಪಯೋಗಿಸಿದ ಎಲ್ಲ ಪೂಜನಾದಿ ಸಾಮಗ್ರಿಗಳನ್ನು ಆಚಾರ್ಯರಿಗೆ ದಾನಕೊಡಬೇಕು. ಇದರಿಂದ ದೇವತಾ ಪ್ರೀತಿಯಾಗುವದು. ಆಚಾರಹೀನರೂ, ನೀತಿಗೆಟ್ಟವರೂ,

ಡಾಂಭಿಕರೂ ದೇವತಾ ಪ್ರತಿಷ್ಠಾಕಾರ್ಯ ನೆರವೇರಿಸಬಾರದು. ವೇದಪಾರಂಗತರಾದ ಬ್ರಾಹ್ಮಣರು ಮಾತ್ರ ಈ ಪುಣ್ಯಕಾರ್ಯ ನೆರವೇರಿಸಬೇಕು. ದುರಾಚಾರಿಯಾದವನನ್ನು ಪ್ರತಿಷ್ಠಾಕಾರ್ಯದಲ್ಲಿ ಆಚಾರ್ಯನನ್ನಾಗಿ ಮಾಡಿಕೊಂಡರೆ ಯಜಮಾನನ ವಂಶ ನಾಶವಾಗುವದು. ಹಾಗೂ ದೇವಾಲಯಗಳಲ್ಲಿ ದೆವ್ವಪಿಶಾಚಿಗಳು ವಾಸಿಸುವವು. ಆದುದರಿಂದ ಸದಾಚಾರಿ ಬ್ರಾಹ್ಮಣರಿಂದಲೇ ಪ್ರತಿಷ್ಠಾ ಕಾರ್ಯ ಮಾಡಿಸಬೇಕು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡುನೂರ ಅರವತ್ತೆಂಟನೇಯ ಅಧ್ಯಾಯ ಮುಗಿದುದು.*

—o—

## ವಾಸ್ತು ದೋಷ ಶಮನಂ

**ಅಧ್ಯಾಯ - ೨೬೯**

**ಋಷಯ ಊಚುಃ:**

**ಪ್ರಾಸಾದಾಃ ಕೀದೃಶಾಃ ಸೂತ ಕರ್ತವ್ಯಾ ಭೂತಿಮಿಚ್ಛತಾ ।**
**ಪ್ರಮಾಣಂ ಲಕ್ಷಣಂ ತದ್ವದ್ವದ ವಿಸ್ತರತೋಽಧುನಾ ॥**

**ಋಷಿಗಳು** :- ಸೂತ ಮುನಿಯೇ, ಐಶ್ವರ್ಯವನ್ನು ಬಯಸುವ ಹಾಗೂ ಉತ್ಕರ್ಷ ಬಯಸುವ ಮನುಷ್ಯನು ಎಂತಹ ದೇವಾಲಯ ಕಟ್ಟಿಸಬೇಕು ? ಅವುಗಳ ಪ್ರಮಾಣ ಲಕ್ಷಣಗಳನ್ನು ವಿವರಿಸು.

**ಸೂತ** :- ಯಾವದೇ ಕಟ್ಟಡವನ್ನು ಕಟ್ಟಿಸಿದ ಬಳಿಕ ಮತ್ತು ಕಟ್ಟಿಸುವ ಮೊದಲು ಮತ್ತು ಕಟ್ಟಡ ಜೀರ್ಣೋದ್ಧಾರ ಮಾಡುವಾಗ, ಉಪವನಗಳನ್ನು ನಿರ್ಮಿಸುವಾಗ, ದೇವಾಲಯವನ್ನು ಕಟ್ಟಿಸುವಾಗ ಮತ್ತು ಮನೆಯನ್ನು ಕಟ್ಟುವಾಗ ಬಾಗಿಲಗಳನ್ನು ಇರಿಸುವಾಗ, ಮೊದಲು ವಾಸ್ತುಶಾಂತಿಯನ್ನು ನಿವೇಶನವನ್ನು ಚೆನ್ನಾಗಿ ಪರೀಕ್ಷಿಸಿ, ಸಮಿಧೆ ಹಾಗೂ ಬಲಿಗಳಿಂದ ನೆರವೇರಿಸಬೇಕು. ನಿವೇಶನದ ನಡುವೆ ಹಿಟ್ಟಿನಿಂದ ಪೂರ್ವ ಪಶ್ಚಿಮ ಹತ್ತು ರೇಖೆಗಳನ್ನು ದಕ್ಷಿಣೋತ್ತರ ಹತ್ತು ರೇಖೆಗಳನ್ನು ಎಳೆದು ಒಟ್ಟು ಎಂಬತ್ತೊಂದು ಮನೆಗಳು ಬರುವಂತೆ ಒಂದು ಚೌಕವನ್ನು ಬರೆಯಬೇಕು.

ಮೂರು ಸುತ್ತುಗಟ್ಟುಗಳಿಂದ ಕೂಡಿದ ಮೊಳ ಅಳತೆಯ ಯಜ್ಞಕುಂಡದಲ್ಲಿ ಕರಿಎಳ್ಳು, ಯವಧಾನ್ಯ, ಅರಳಿಗಿಡದ ಮತ್ತು ಮುತ್ತುಗಗಳ ಸಮಿಧೆ, ದರ್ಭೆ, ಕರಿಕೆಗಳಿಂದ ಹೋಮ ಮಾಡಬೇಕು. ಆ ಸಮಿಧೆಗಳನ್ನು ತುಪ್ಪ, ಜೇನುತುಪ್ಪಗಳಲ್ಲಿ ಎದ್ದಿ ಹೋಮಿಸಬೇಕು.

ಹೋಮದ ಕೊನೆಗೆ ಮನೆಯ ನಿವೇಶನದಲ್ಲಿ ಬಲಿ ಹಾಕಬೇಕು. ಮುಂದೆ ಹೇಳಿದಂತೆ ವಿಶಿಷ್ಟ ಪದಾರ್ಥಗಳನ್ನು ಆಯಾ ದೇವರಿಗೆ ನೈವೇದ್ಯ ಮಾಡಬೇಕು. ಈಶಾನ್ಯ ದಿಕ್ಕಿನಲ್ಲಿ ಅಗ್ನಿದೇವನಿಗೆ ತುಪ್ಪ, ಅನ್ನ, ಪರ್ಜನ್ಯನಿಗೆ ಹೊನ್ನು, ತುಪ್ಪ ಕಲಿಸಿದ ಅನ್ನ, ಜಯಂತನಿಗೆ ಹೊಂಬಣ್ಣದ ಧ್ವಜ, ಹಿಟ್ಟಿನ ಆಮೆ, ಇಂದ್ರನಿಗೆ, ಪಂಚರತ್ನ ಹಿಟ್ಟಿನಿಂದ ಮಾಡಿದ ವಜ್ರಾಯುಧ, ಸೂರ್ಯನಿಗೆ, ಮೇಲು ಹೊದಿಕೆ, ಅರಳುಹಿಟ್ಟು, ಭೃಶನಿಗೆ ಮತ್ಸ್ಯ, ಆಕಾಶಾಭಿಮಾನಿ ದೇವತೆಗೆ ಚಕ್ಕುಲಿ, ವಾಯುವಿಗೆ ಹುರಿದ ಹಿಟ್ಟು, ಪೂಷ್ಣನಿಗೆ ಅರಳು, ವಿತಥನಿಗೆ ಹೂರಣ, ಗ್ರಹಕ್ಷತನಿಗೆ ಜೇನು ಬೆರೆತ ಅನ್ನ,

ಯಮನಿಗೆ ಮಾಂಸಮಿಶ್ರಿತ ಅನ್ನ, ಗಂಧರ್ವನಿಗೆ ವಾಸನೆ ಅಕ್ಕಿ, ಅನ್ನ, ಭೃಂಗನಿಗೆ ಭೃಂಗಿಕೆ ಎಂಬ ಭಕ್ಷ್ಯ.

ಮೃಗನಿಗೆ ಗೋದಿಯ ರೊಟ್ಟಿ, ಪಿತೃಗಳಿಗೆ ಕಿಚಡಿ, ದ್ವಾರಪಾಲಕರಿಗೆ ದಂಡಕಾಷ್ಠ, ಹಾಗೂ ಹಿಟ್ಟಿನ ಉಂಡೆ, ಸುಗ್ರೀವನಿಗೆ ಅನಾರಸ, ಪುಷ್ಪವಂತನಿಗೆ ಪಾಯಸ, ವರುಣನಿಗೆ ಬಂಗಾರದ ಕಮಲ, ಹಾಗೂ ದರ್ಭದ ತುದಿ, ಅಸುರನಿಗೆ ಸೆರೆ, ಶೇಷನಿಗೆ ತುಪ್ಪಾನ್ನ, ಯಕ್ಷರಿಗೆ ಯವಧಾನ್ಯದ ಅನ್ನ, ರೋಗನಿಗೆ ತುಪ್ಪದ ಲಾಡು, ನಾಗನಿಗೆ ಹೂಹಣ್ಣು, ಮುಖ್ಯನಿಗೆ ತುಪ್ಪ, ಭಲ್ಲಾಟನಿಗೆ ಹುಗ್ಗಿ, ಸೋಮನಿಗೆ ತುಪ್ಪ ಪಾಯಸ, ಭಗನಿಗೆ ಅಕ್ಕಿಹಿಟ್ಟು, ಅದಿತಿಗೆ ಹೋಳಿಗೆ, ದಿತಿಗೆ ಪುರಿ ಇವುಗಳನ್ನು ಬಲಿರೂಪವಾಗಿ ಸಮರ್ಪಿಸಿ ನಿವೇದನ ಮಾಡಬೇಕು. ಇದು ಆ ಚೌಕದ ಬಹಿರ್ವಲಯದಲ್ಲಿಯ ದೇವತೆಗಳಿಗೆ ಸಲ್ಲಿಸಬೇಕಾದ ಬಲಿಯ ವಿಧಾನ. ಇದರಂತೆ, ಒಳಗಿರುವ ದೇವತೆಗಳಿಗೂ ಕೂಡ ಅವರಿಗೆ ಇಷ್ಟವಾದ ಅನ್ನ, ಆಹಾರಗಳನ್ನು ನೈವೇದ್ಯವಾಗಿ ಸಮರ್ಪಿಸಬೇಕು. ಯಮನಿಗೆ ಹಾಲು, ಅಪವತ್ಸನಿಗೆ ಮೊಸರು. ಸವಿತಾರನಿಗೆ ಮೆಣಸು, ಲಾಡು ಹಾಗೂ ದರ್ಭೆಯ ತುದಿ ಮುರಿದು ಹಾಕಿದ ಅನ್ನವನ್ನು ಸಮರ್ಪಿಸಬೇಕು.

ಜಯನಿಗೆ ತುಪ್ಪ, ಚಂದನ, ಇಂದ್ರನಿಗೆ ತುಪ್ಪ ಬೆರೆಸಿದ ಹರಿದೆಳೆದ ಅನ್ನ, ಮಿತ್ರನಿಗೆ ತುಪ್ಪಾನ್ನ, ರುದ್ರನಿಗೆ ತುಪ್ಪ ಪಾಯಸ, ರಾಜಯಕ್ಷ್ಮನಿಗೆ ಹಸಿಬಿಸಿ ಮಾಷ, ಪೃಥ್ವೀಧರನಿಗೆ ಕುಂಬಳಕಾಯಿ, ಬ್ರಹ್ಮನಿಗೆ ಪಂಚಗವ್ಯ, ಅಕ್ಕಿಕಾಳು, ಎಳ್ಳು ಅನ್ನ ಬಗೆಬಗೆಯ ಭಕ್ಷ್ಯ ಭೋಜ್ಯಗಳನ್ನು ನಿವೇದಿಸಿ ವಿಧಿಪೂರ್ವಕ ಪೂಜೆ ಮಾಡಿ, ತೃಪ್ತಿಪಡಿಸಬೇಕು. ಯಥಾಶಕ್ತಿ ಬ್ರಾಹ್ಮಣರಿಗೆ ಬಂಗಾರವನ್ನು ದೇಣಿಗೆ ಕೊಡಬೇಕು. ಈ ಶಾಂತಿಕರ್ಮ ಮಾಡಿಸಿದ ಬ್ರಾಹ್ಮಣನಿಗೆ ಹಾಲು ಹಿಂಡುವ ಹಸುವನ್ನು ದಾನಕೊಡಬೇಕು.

ದೇವತೆಗಳಿಗೆ ಕೊಟ್ಟಂತೆ, ರಾಕ್ಷಸಿಯರಿಗೂ ಬಲಿ ಹಾಕಬೇಕು. ಅದರಿಂದ ಆ ರಾಕ್ಷಸಿಯರ ಉಪದ್ರವವು ಮುಂದೆ ಉಂಟಾಗುವದಿಲ್ಲ. ಆ ರಕ್ಕಸಿಯರಿಗೆ ಬಲಿ ಹಾಕುವ ವಿಧಾನ ಹೇಳುತ್ತೇನೆ ಕೇಳು. ಈಶಾನ್ಯ ಭಾಗದ ಚರಕಿ ಎಂಬ ರಕ್ಕಸಿಗೆ ಮಾಂಸ ಅನ್ನ, ತುಪ್ಪ, ರಕ್ತ ಬೆರೆತ ಪದ್ಮ ಕೇಸರಗಳನ್ನು, ಅಗ್ನೇಯ ದಿಕ್ಕಿನ ವಿದಾರೀ ಎಂಬ ರಾಕ್ಷಸಿಗೆ ಅಂಜನ ಅನ್ನ, ರಕ್ತ, ಮಾಂಸಗಳನ್ನು, ನೈಋತ್ಯದಿಕ್ಕಿನ ಪೂತವಿಗೆ ರಕ್ತ, ಎಲುಬಿನ ತುಂಡು ಬೆರೆತ ಮೊಸರನ್ನ ಮತ್ತು ಹಳದಿ ಕೆಂಪು ಬಣ್ಣದ ಅನ್ನವನ್ನು ವಾಯವ್ಯದಲ್ಲಿರುವ ಪಾಪರಾಕ್ಷಸಿಗೆ ಮೀನು, ಮದ್ಯ, ಪಾಯಸಗಳನ್ನು ಬಲಿ ನೀಡಬೇಕು.

ಹೀಗೆ ಬಲಿಕರ್ಮವನ್ನು ಪೂರೈಸಿ ಎಲ್ಲ ದೇವತೆಗಳನ್ನು ಅವರವರ ಮಂತ್ರಗಳನ್ನು ಓಂಕಾರ ಪೂರ್ವಕ ಉಚ್ಚರಿಸಿ ಪ್ರಾರ್ಥಿಸಿ, ನಮಸ್ಕರಿಸಬೇಕು. ಅನಂತರ ಯಜಮಾನನಿಗೆ ಎಲ್ಲ ವಿಧವಾದ ಮೂಲಿಕೆಗಳಿಂದ ಸ್ನಾನ ಮಾಡಿಸಬೇಕು. ಬ್ರಾಹ್ಮಣರನ್ನೂ, ಅತಿಥಿಗಳನ್ನೂ ಭಕ್ತಿಯಿಂದ ಸತ್ಕರಿಸಬೇಕು. ಹೀಗೆ ವಾಸ್ತುಶಾಂತಿ ಮಾಡಿದ ಬಳಿಕ ಕಟ್ಟಡದ ಕಾರ್ಯವನ್ನು ಪ್ರಾರಂಭಿಸಬೇಕು. ಕಟ್ಟಡದ ಕಾರ್ಯವು ಪೂರ್ತಿಗೊಂಡು ಮನೆ, ದೇವಸ್ಥಾನ, ಅರಮನೆ, ಉದ್ಯಾನಗಳ ನಿರ್ಮಾಣಕಾರ್ಯ ಮುಗಿದ ಬಳಿಕ ಇಂತಹ ವಾಸ್ತುಶಾಂತಿ ಮಾಡಬೇಕು.

ಹೊಸ ಊರು, ಓಣಿ, ಮನೆ, ಮಠ, ಮಂದಿರ, ಉಪವನ, ದೇವಸ್ಥಾನ ಮುಂತಾದ ಚಿಕ್ಕ ದೊಡ್ಡ ಕಟ್ಟಡಗಳ ಆದಿ ಅಂತ್ಯದಲ್ಲಿ ಪ್ರವೇಶ ಮಾಡುವಾಗಲೂ ಜೀರ್ಣೋದ್ಧಾರ ಮಾಡುವಾಗಲೂ, ನಿವೇಶನ ಬದಲಿಸಿದಾಗಲೂ ಇಂತಹ ವಾಸ್ತು ಶಾಂತಿ ಸಮಾರಂಭ ನೆರವೇರಿಸಬೇಕು. ಅಷ್ಟೇ ಅಲ್ಲದೆ ಪ್ರತಿವರ್ಷವೂ ವಾಸ್ತುಶಾಂತಿ ಸಮಾರಂಭ ನೆರವೇರಿಸಿದರೆ ಮಾನವನಿಗೆ ಅರ್ಥಾತ್ ಯಜಮಾನ ಅವನ ಪರಿವಾರದವರಿಗೆ ಯಾವದೇ ವಿಧವಾದ ರೋಗ, ವಿಯೋಗ, ಭಯ, ದುಃಖ, ಅಪಾಯಗಳು ಎಂದೂ ಒದಗುವದಿಲ್ಲ. ಈ ಶಾಂತಿ ಮಾಡುವಾಗ ರಕ್ಷೋಘ್ನಸೂಕ್ತ, ಪವಮಾನಸೂಕ್ತ, ಮುಂತಾದ ವೇದ ಮಂತ್ರಗಳ ಪಾರಾಯಣ ಸದಾಚಾರಿ ಬ್ರಾಹ್ಮಣರಿಂದ ಸ್ವಸ್ತಿ ವಾಚನ, ಅನ್ನ ಸಂತರ್ಪಣ ಮಾಡಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರಾ ಅರವತ್ತೊಂಬತ್ತನೆಯ ಅಧ್ಯಾಯ ಮುಗಿದುದು.*



## ಪ್ರಾಸಾದಾನುಕೀರ್ತನ

**ಅಧ್ಯಾಯ - ೨೭೦**

**ಸೂತ ಉವಾಚ :**

**"ಏವಂ ವಾಸ್ತುಬಲಂ ಕೃತ್ವಾ ಭಜೇತ್‌ಷೋಡಶಭಾಗಿಕಂ ।**
**ತಸ್ಯ ಮಧ್ಯೇ ಚತುರ್ಭಿಸ್ತು ಭಾಗೈರ್ಗರ್ಭಂ ತು ಕಾರಯೇತ್ ॥**

**ಸೂತ** :- ಹೀಗೆ, ಪೂರ್ವೋಕ್ತಕ್ರಮದಿಂದ ವಾಸ್ತುಶಾಂತಿ ಮಾಡಿದ ನಂತರ ಸಮಗ್ರ ನಿವೇಶನದ ಅಳತೆ ಮಾಡಿ, ಒಟ್ಟು ಅಳತೆಯ ಕಾಲುಭಾಗದಿಂದ ಗರ್ಭಗೃಹವನ್ನು ರಚಿಸಬೇಕು. ಉಳಿದ ಭಾಗದಲ್ಲಿ ಪ್ರದಕ್ಷಿಣ ಮತ್ತು ಜನರಿಗೆ ಹೋಗಿ ಬರಲು ಅನುಕೂಲವಾಗುವಂತೆ ನಾಲ್ಕು ದಿಕ್ಕುಗಳಲ್ಲಿ ಬಾಗಿಲುಗಳನ್ನು ಮಾಡಿಸಬೇಕು.

ಒಟ್ಟು ಅಳತೆಯ ನಾಲ್ಕರಲ್ಲಿ ಒಂದು ಭಾಗದಷ್ಟು ಗೋಡೆಗಳು ಎತ್ತರವಾಗಿರಬೇಕು. ಗೋಡೆಯ ಎರಡುಪಟ್ಟು ಎತ್ತರ ಗುಡಿಯ ಶಿಖರಗಳನ್ನು ಮಾಡಬೇಕು.

ಗುಡಿಯ ಸುತ್ತಲಿನ ಪ್ರಾಕಾರವು ಗೋಪುರದ ಕಾಲು ಭಾಗದಷ್ಟು ಎತ್ತರ ಇರಬೇಕು. ಗರ್ಭಗುಡಿಯ ಮುಂದಿರುವ ಮಂಟಪವು ಗರ್ಭಾಲಯದ ಎರಡು ಪಟ್ಟು ಅಗಲ ಮೂರು ಪಟ್ಟು ಉದ್ದ ಇರಬೇಕು. ಗರ್ಭಗ್ರಹದ ಪ್ರಮಾಣದ ಐದರಲ್ಲಿ ಒಂದು ಪಾಲು ಅಳತೆಯಿಂದ ಮಾಡಿದ ಪ್ರಗ್ರೀವ ಎಂಬ ಹೆಸರಿನ ಒಂದು ಗರ್ಭಾಂಕಣವನ್ನು ನಿರ್ಮಿಸಬೇಕು. ಅದರ ಮುಂದೆ, ದೇವಸ್ಥಾನದ ಮಧ್ಯಮಂಟಪ ಗರ್ಭಗುಡಿಗಳ ನಡುವೆ, ಗರ್ಭಗುಡಿಯ ಪ್ರಮಾಣದಷ್ಟೆ ಮುಖಮಂಟಪ ರಚಿಸಬೇಕು.

ಇದು ದೇವಾಲಯದ ಸಾಮಾನ್ಯ ಲಕ್ಷಣ. ಎಲ್ಲ ವಿಧವಾದ ದೇವತಾ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ ದೇವಮಂದಿರಗಳ ಗರ್ಭಾಗಾರ ಮಂಟಪ, ಮುಖ ಮಂಟಪ, ಗರ್ಭಾಂಗಣ, ಭಿತ್ತಿ, ಶಿಖರ ಗೋಪುರ ಮುಂತಾದವುಗಳ ಪ್ರಮಾಣವು ಇಲ್ಲಿ ಹೇಳಿದಂತೆ ಇರಬೇಕು. ಶಿವಲಿಂಗವನ್ನು ಪ್ರತಿಷ್ಠೆಮಾಡಿದ ದೇವಾಲಯಗಳ ಪ್ರಮಾಣವು ಲಿಂಗದ ಪ್ರಮಾಣಕ್ಕೆ ಅನುಗುಣವಾಗಿರಬೇಕು. ಅದರ ಕ್ರಮವನ್ನು ಹೇಳುತ್ತೇನೆ.

ಲಿಂಗದ ನಾಭಿಭಾಗವು ಎಷ್ಟು ಪ್ರಮಾಣದ್ದು ಇರುವದೋ ಪೀಠವು ಅಷ್ಟೇ ಇರಬೇಕು. ಪೀಠದ ಅರ್ಧಭಾಗದ ಅಳತೆಯನ್ನು ಕನಿಷ್ಠಮಾನವೆಂದು ಪರಿಗಣಿಸಿ ಅದಕ್ಕೆ ತಕ್ಕಂತೆ ಗೋಡೆ ಕಟ್ಟಬೇಕು. ದೇವಸ್ಥಾನದ ಹೊರಗೋಡೆಯ ಎತ್ತರದ ಎರಡುಪಟ್ಟು ಶಿಖರವನ್ನು ಎತ್ತರ ಮಾಡಬೇಕು.

ಹಿಂದೆ ಹೇಳಿದಂತೆ ಪ್ರಾಕಾರವು ಗೋಪುರದ ಕಾಲುಪಾಲಿನಷ್ಟು ಎತ್ತರವಾಗಿರಬೇಕು. ದೇವಸ್ಥಾನದ ಮುಂಭಾಗವು ದೊಡ್ಡ ಪ್ರಾಕಾರದ ಪ್ರಮಾಣದಲ್ಲಿಯೇ ಇರಬೇಕು. ಗರ್ಭಗ್ರಹದ ಮುಂದಿನ ಮಂಟಪವು ಅದರ ಅರ್ಧದಷ್ಟು ಇರಬೇಕು. ದೇವಾಲಯದ ಇಕ್ಕೆಲಗಳಲ್ಲಿ ಕಪೋಲಗಳು ಹೊರಕ್ಕೆ ಚಾಚಿರಬೇಕು. ಅವುಗಳ ಮೇಲೆ ಮಂಜರಿಯನ್ನು ಗೋಡೆಯಷ್ಟು ಎತ್ತರವಾಗಿ ರಚಿಸಬೇಕು. ಅದರ ಅರ್ಧ ಪ್ರಮಾಣದಲ್ಲಿ ಶುಕನಾಸವೆಂಬ ವಿಭಾಗವನ್ನು ರಚಿಸಬೇಕು. ಇದರಂತೆ ದೇವಸ್ಥಾನದ ವಿಶಿಷ್ಟ ಭಾಗಗಳಲ್ಲಿ ಜಗತೀ ಎಂಬ ಕಟ್ಟೆಯನ್ನು ಅಮಲಸಾಂಕ ಎಂಬ ಕಂಠಭಾಗವನ್ನು, ವಾಸ್ತುಶಾಸ್ತ್ರದಲ್ಲಿ ಹೇಳಿದಂತೆ ರಚಿಸಬೇಕು.

ಗರ್ಭಗುಡಿಯ ಪ್ರಮಾಣ ಅನುಸರಿಸಿ ದೇವಸ್ಥಾನವನ್ನು ನಿರ್ಮಿಸಬೇಕು. ಗರ್ಭಾಂಗಣವನ್ನು ಒಂಬತ್ತು ಭಾಗ ವಿಂಗಡಿಸಿ ನಡುವೆ ಲಿಂಗಪೀಠ ಸ್ಥಾಪಿಸಬೇಕು. ಗರ್ಭಗುಡಿಯ ಒಂಭತ್ತನೆಯ ಎಂಟು ಪಾಲು ಅಳತೆಯ ಮುಖಮಂಟಪವನ್ನು ಮುಂಭಾಗದಲ್ಲಿ ಅಥವಾ ಅಕ್ಕಪಕ್ಕದಲ್ಲಿ, ರಚಿಸಬೇಕು.

ದೇವಸ್ಥಾನದ ಶಿಖರದ ಅಳತೆಯಷ್ಟು ಪ್ರದೇಶವನ್ನು ಗರ್ಭಗ್ರಹದಿಂದ ತೆಗೆದುಕೊಂಡು ಅದನ್ನು ನಾಲ್ಕುಪಾಲು ಭಾಗಮಾಡಿ ಎರಡು ಭಾಗಗಳಲ್ಲಿ ಶುಕವಾಸ, ಮೂರನೆಯ ಭಾಗದಲ್ಲಿ ವೇದಿಕೆ, ನಾಲ್ಕನೆಯದರಲ್ಲಿ ಅಲಸಾರ ಎಂಬ ಕಂಠವನ್ನು ನಿರ್ಮಿಸಬೇಕು. ಈ ಕಂಠದೇಹದಲ್ಲಿ ಕಪೋಲಗಳು ಹೊರಗೆ ಚಾಚಿ ಕೊಂಡಿರುವವು. ಈ ಪ್ರಾಸಾದವು ಒಳಗೂ, ಹೊರಗೂ, ಗೋಡೆ, ಕಂಬ, ಹಾಗೂ ಛಾವಣಿಯ ಭಾಗಗಳಲ್ಲಿ ಮಂಗಳಕಾರವಾದ ಎಲೆ, ಬಳ್ಳಿ, ಆಕೃತಿಗಳನ್ನು ಬರೆದು ಅಲಂಕರಿಸಬೇಕು.

ಲಿಂಗದ ಪ್ರಮಾಣಾನುಸಾರವಾಗಿ, ರಚನಾಭೇದದಿಂದ ದೇವಾಲಯಗಳನ್ನು ಜೇಷ್ಠ, ಮಧ್ಯ, ಕನಿಷ್ಠ ಎಂದು ಮೂರು ವಿಧವಾಗಿ ನಿರ್ಮಿಸಬೇಕು. ಈ ದೇವಾಲಯಗಳು ಮೇಘ, ಮಂದಿರ, ಕೈಲಾಸ, ಕುಂಭ, ಸಿಂಹ, ಮೃಗ, ವಿಮಾನ, ಛಂದಕ, ಚತುರಸ್ರ, ಅಷ್ಟಾಸ್ರ, ಷೋಡಶಾಸ್ರ, ವರ್ತುಲ, ಸರ್ವಭದ್ರ, ಸಿಂಹಾಸ್ಯ, ನಂದನ, ನಂದಿವರ್ಧನ, ಹಂಸ, ವೃಕ್ಷ, ಸುಪರ್ಣ, ಪದ್ಮಕ ಸಮುದ್ಗತ ಎಂದು ಅನೇಕ ಬಗೆಯಾಗಿ ಇರುತ್ತವೆ. ಇವುಗಳ ಲಕ್ಷಣ ಹೇಳುತ್ತೇನೆ ಕೇಳು.

ಚಿತ್ರವಿಚಿತ್ರವಾದ ನೂರಾರು ಶಿಖರಗಳು ಹಲವಾರು ಅಂತಸ್ತು. ನಾಲ್ಕು ಬಾಗಿಲು, ವಿಶಾಲ ಪ್ರಾಕಾರ, ವಿಸ್ತೃತ ಒಳಭಾಗ ಇವುಗಳಿಂದ ಕೂಡಿ ದಿವ್ಯಭವ್ಯವಾಗಿ ಕಂಗೊಳಿಸುವ ದೇವಾಲಯಕ್ಕೆ ಮೇರು ಅನ್ನುತ್ತಾರೆ.

ಮೇಲಿನ ಎಲ್ಲ ಲಕ್ಷಣಗಳ ಪ್ರಮಾಣ, ಪರಿಮಾಣಗಳೂ ಅದರಂತಿದ್ದ ಉಪ್ಪರಿಗೆಗಳು ಹನ್ನೆರಡು ಇದ್ದರೆ ಮಂದಿರ ಎನ್ನುತ್ತಾರೆ. ಒಂಭತ್ತು ಅಂತಸ್ತು ಇದ್ದರೆ

ಕೈಲಾಸ, ಎಂಟು ಉಪ್ಪರಿಗೆ ಇದ್ದರೆ, ವಿಮಾನ ಛಂದಕ, ಏಳು ಇದ್ದರೆ ನಂದಿವರ್ಧನ. ಮೇಲೆ ಕೋಡುಗಳ ಆಕಾರದಲ್ಲಿ ಶೃಂಗ ಮಾಡಿದ್ದರೆ ನಂದನ, ಹದಿನಾರು ಮೂಲೆಗಳು, ಅನೇಕ ಶಿಖರಗಳು ಇದ್ದರೆ ಸರ್ವತೋಭದ್ರ, ಚಿತ್ರಶಾಲೆ ಉಪ್ಪರಿಗೆಗಳಿದ್ದರೆ ಛಂದಕ ಎಂದು ದೇವಾಲಯವನ್ನೂ ಕರೆಯುತ್ತಾರೆ.

ದೇವಾಲಯದ ಒಟ್ಟು ಆಕಾರವು ಎತ್ತಿನಂತೆ ಇದ್ದರೆ ವೃಷಭ, ಸಿಂಹದ ಆಕಾರವಿದ್ದರೆ ಸಿಂಹ, ಆನೆಯಂತಿದ್ದರೆ ಗಜ, ಮೂಲೆಗಳು ಇಲ್ಲದೆ ಗುಂಡಾಗಿದ್ದರೆ ವರ್ತುಲ, ಒಂಬತ್ತು ಅಂತಸ್ತು ಕೂಡಿ ಇದ್ದು ಕುಂಭದ ಆಕಾರವಿದ್ದರೆ, ಕುಂಭ, ಹದಿನಾರು ಮುಖದ ಕಟ್ಟಡಕ್ಕೆ ಸಮುದ್ಗತ ಎಂದು ಹೆಸರು ಇರುತ್ತವೆ. ಸಮುದ್ಗತ ದೇವಾಲಯಕ್ಕೆ ಎರಡೂ ಕಡೆ ಚಂದ್ರಶಾಲೆ ಎರಡು ಉಪ್ಪರಿಗೆಗಳು ಇರುವವು. ಮೂರು ಉಪ್ಪರಿಗೆ, ಹದಿನಾರು ಮುಖ ಬಗೆಬಗೆಯ ಶಿಖರಗಳಿಂದ ಕಂಗೊಳಿಸುವದು ಪದ್ಮಕ ದೇವಾಲಯ.

ಆರು ಉಪ್ಪರಿಗೆ ಒಂದು ಚಂದ್ರಶಾಲೆ ವಿಶಾಲ ಪಾರ್ಶ್ವಗಳು, ಇರುವ ದೇವಾಲಯಕ್ಕೆ ವ್ಯಂಗರಾಜ ಎನ್ನುವರು. ಅನೇಕ ಚಂದ್ರಶಾಲೆಗಳು ವಿಸ್ತಾರವಾಗಿ ಇದ್ದರೆ ಗ್ರಹರಾಜ ಅಥವಾ ಗರುಡ ಎಂದೂ ಕರೆಯಿಸಿಕೊಳ್ಳಲ್ಪಡುತ್ತದೆ. ಈ ದೇವಸ್ಥಾನಕ್ಕೆ ಏಳು ಉಪ್ಪರಿಗೆ ಮೂರು ಚಂದ್ರಶಾಲೆ ಒಳಹೊರಗೆ ಒಟ್ಟು ಎಂಭತ್ತಾರು ಮಂಟಪಗಳು ಇರುತ್ತವೆ.

ಹತ್ತು ಉಪ್ಪರಿಗೆ, ಎತ್ತರವಿರುವ ಇನ್ನೂ ಒಂದು ವಿಧವಾದ ದೇವಸ್ಥಾನಕ್ಕೆ ಗರುಡ ಎಂದೇ ಕರೆಯುವರು. ಹನ್ನೆರಡು ಉಪ್ಪರಿಗೆ ಹದಿನಾರು ಮುಖಗಳಿದ್ದರೆ ಪದ್ಮಕ, ಐದು ವರ್ತುಲ ಎರಡು ಉಪ್ಪರಿಗೆಗಳುಳ್ಳ ದೇವಾಲಯಕ್ಕೆ ವೃಷ ಎಂದು ಕರೆಯುತ್ತಾರೆ. ಈ ಎಲ್ಲ ದೇವಾಲಯಗಳ ಗರ್ಭಾಗಾರವು ಏಳು ಮೊಳ ಅಥವಾ ಐದು ಮೊಳ ಪ್ರಮಾಣಕ್ಕೆ ಅನುಗುಣವಾಗಿ ಇರುತ್ತವೆ.

ದೇವಸ್ಥಾನಗಳನ್ನು ಇಟ್ಟಿಗೆ ಕಟ್ಟಿಗೆ ಅಥವಾ ಕಲ್ಲಿನಿಂದ ಕಟ್ಟಬಹುದು. ಮೇರು ಎಂಬ ದೇವಸ್ಥಾನವು ಐವತ್ತು ಮೊಳ ಉದ್ದಳತೆ ಉಳ್ಳದ್ದಿರುವದು. ಮಂದರವು ನಲವತ್ತೈದು, ಕೈಲಾಸ ನಲವತ್ತು, ವಿಮಾನ ಮೂವತ್ತುನಾಲ್ಕು, ನಂದಿವರ್ಧನ ಮೂವತ್ತೆರಡು , ಸರ್ವತೋಭದ್ರ ಮೂವತ್ತು, ವರ್ತುಲ ಹಾಗೂ ಪದ್ಮಕ ಇಪ್ಪತ್ತು ಮೊಳ, ಗಜ, ಸಿಂಹ, ಕುಂಬ ವಲಭಿ ಛಂದಕಗಳ ಪ್ರಮಾಣ ಹದಿನಾರು ಮೊಳ, ಕೈಲಾಸ, ಮೃಗರಾಜ ಛಂದಕ ಹದಿನೆಂಟು ಮೊಳ.ಹಂಸ ದೇವಾಲಯ ಹತ್ತು ಮೊಳ, ಗರುಡ ಎಂಟು ಮೊಳ ಉದ್ದಗಲ ಪ್ರಮಾಣವುಳ್ಳವುಗಳು ಆಗಿರುತ್ತವೆ. ಈ ಪ್ರಮಾಣ ಅನುಸರಿಸಿ, ದೇವಸ್ಥಾನಗಳನ್ನು ಲಕ್ಷಣವಾಗಿ ಸುಂದರವಾಗುವಂತೆ ಕಟ್ಟಬೇಕು.

ಜಲಧಿ ಛಂದಕ ದೇವಾಲಯಗಳಲ್ಲಿ ಗೌರಿಯನ್ನು ಸ್ಥಾಪಿಸಬೇಕು. ಆ ಪಾರ್ವತಿದೇವಿಯ ಎರಡು ಕೈಗಳಲ್ಲಿ ಜಪಸರ ಕಮಂಡಲು ಕೊಟ್ಟು, ಜಡೆಯ ಮೇಲೆ ಕಿರೀಟವನ್ನು ಇರಿಸಿ, ಅಭಯ ಮುದ್ರೆಯಿಂದ ಅನುಗ್ರಹಮಾಡುತ್ತಿರುವಂತೆ ಚಿತ್ರಿಸಬೇಕು. ಮನೆಯಲ್ಲಿ ಪೂಜಿಸುವ ಪಾರ್ವತಿ ಪ್ರತಿಮೆಯ ಕೈಯಲ್ಲಿ ಕನ್ನೈದಿಲೆ, ಅಂಕುಶ, ಅಭಯಹಸ್ತಗಳನ್ನು ತೋರಿಸಬೇಕು. ಪಾರ್ವತಿಯ ಕಿರೀಟದಲ್ಲಿ ಕೆಂಪುರತ್ನದಲ್ಲಿ ಅರ್ಧಚಂದ್ರನು ಹೊಳೆಯುವಂತೆ ಚಿತ್ರಿಸಬೇಕು. ಪರಮೇಶ್ವರನ

ಜೊತೆಗೆ ಪಾರ್ವತಿಯ ಪ್ರತಿಮೆ ಪೂಜಿಸಬೇಕು. ಅಥವಾ ತಪೋವನದಲ್ಲಿ ಶಿವನಿಗಾಗಿ ತಪಸ್ಸುಮಾಡುವ ಕೇವಲ ಪಾರ್ವತಿ ಪ್ರತಿಮೆಯನ್ನು ಪ್ರತಿಷ್ಠಿಸಬಹುದು. ವಲಭಿ ಛಂದಕದಲ್ಲಿ ಪಾರ್ವತಿಯ ಜೊತೆಗೆ ಗಣಪತಿಯನ್ನೂ ಸ್ಥಾಪಿಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರಎಪ್ಪತ್ತನೇಯ ಅಧ್ಯಾಯ ಮುಗಿದುದು.*

—o—

## ಮಂಟಪಗಳ ಲಕ್ಷಣ | ಅಧ್ಯಾಯ - ೨೭೧

**ಸೂತ ಉವಾಚ :**

**"ಅಥಾತಃ ಸಂಪ್ರಕ್ಷ್ಯಾಮಿ ಮಂಟಪಾನಾಂ ತು ಲಕ್ಷಣಂ**
**ಮಂಟಪ ಪ್ರವರಾನ್ ವಕ್ಷ್ಯೇ ಪ್ರಾಸಾದಸ್ಯಾನುರೂಪತಃ ॥"**

**ಸೂತ** :- ಇನ್ನು ಮೇಲೆ ಮಂಟಪಗಳ ಲಕ್ಷಣ ಹೇಳುವೆನು. ದೇವಾಲಯಗಳಿಗೆ ಅನುಗುಣವಾಗಿ ಪ್ರಶಸ್ತವಾದ ಮಂಟಪಗಳ ಸ್ವರೂಪವನ್ನು ತಿಳಿಸುತ್ತೇನೆ. ಋಷಿ ಪುಂಗವರೆ, ಮಂಟಪಗಳನ್ನು ಜೇಷ್ಠ, ಮಧ್ಯ, ಕನಿಷ್ಠ ಎಂದು ಮೂರು ವಿಧವಾಗಿ ನಿರ್ಮಿಸಬಹುದು.

ರಚನೆಯ ರೀತಿಗೆ ಅನುಸಾರವಾಗಿ ಈ ಮಂಟಪಗಳಿಗೆ ಪುಷ್ಪಕ, ಪುಷ್ಪಭದ್ರ, ಸೂವ್ರತ, ಅಮೃತನಂದನ, ಕೌಶಲ್ಯ, ಬುದ್ಧಿಸಂಕೀರ್ಣ, ಗಜಭದ್ರ, ಜಯಾವಹ, ಶ್ರೀವತ್ಸ, ವಿಜಯ, ವಾಸ್ತುಕೀರ್ತಿ, ಶ್ರುತಿಂಜಯ, ಯಜ್ಞಭದ್ರ, ವಿಶಾಲ, ಸುಶ್ಲಿಷ್ಟ, ಶತ್ರುಮರ್ದನ, ಭಾಗವಂಚ, ನಂದನ, ಮಾನಸ, ಮಾನಭದ್ರ, ಸುಗ್ರೀವ, ಹರೀತ, ಕರ್ಣಿಕಾರ, ಶತರ್ದಿಕಸಿಂಹ, ಸಾವಭದ್ರ, ಸುಭದ್ರ ಎಂದು ಹೆಸರು ಇರುತ್ತವೆ ಒಟ್ಟು ಇಪ್ಪತ್ತೇಳು ವಿಧವಾದ ಮಂಟಪಗಳನ್ನು ವಾಸ್ತುಶಾಸ್ತ್ರದಲ್ಲಿ ಹೇಳಿದ್ದಾರೆ. ಅವುಗಳ ಲಕ್ಷಣ ಹೇಳುತ್ತೇನೆ. ಅರವತ್ತಾರು ಕಂಬ ಉಳ್ಳ ಮಂಟಪ ಪುಷ್ಪಕ. ಅರವತ್ತೆರಡು ಕಂಬವಿದ್ದರೆ ಪುಷ್ಪಭದ್ರ, ಅರವತ್ತಿದ್ದರೆ ಸುವ್ರತ, ಐವತ್ತೆಂಟಿದ್ದರೆ ಅಮೃತನಂದ, ಐವತ್ತಾರಿದ್ದರೆ ಕೌಶಲ್ಯ, ಐವತ್ತನಾಲ್ಕು ಇದ್ದರೆ ಬುದ್ಧಿಸಂಕೀರ್ಣ, ಐವತ್ತೆರಡಿದ್ದರೆ ಗಜಭದ್ರಕ, ಐವತ್ತಿದ್ದರೆ ಜಯಾವಹ, ನಲವತ್ತೆಂಟಿದ್ದರೆ ಶ್ರೀವತ್ಸ ಎಂದು ಕರೆಯುತ್ತಾರೆ. ಇದರಂತೆ ವಿಜಯ ಮಂಟಪದಲ್ಲಿ ನಲವತ್ತಾರು ಕಂಬಗಳು, ವಾಸ್ತುಕೀರ್ತಿಯಲ್ಲಿ ನಲವತ್ತು, ಶ್ರುತಿಂಜಯದಲ್ಲಿ ನಲವತ್ತೆರಡು, ಯಜ್ಞಭದ್ರದಲ್ಲಿ ನಲವತ್ತು, ವಿಶಾಲದಲ್ಲಿ ಮೂವತ್ತೆಂಟು, ಸುಶ್ಲಿಷ್ಟದಲ್ಲಿ ಮೂವತ್ತಾರು, ಶತ್ರುಮರ್ದನದಲ್ಲಿ ಮೂವತ್ತು ನಾಲ್ಕು, ಭಾಗವಂಚದಲ್ಲಿ ಮೂವತ್ತೆರಡು, ನಂದನದಲ್ಲಿ ಮೂವತ್ತು, ಮಾನಸದಲ್ಲಿ ಇಪ್ಪತ್ತೆಂಟು, ಕರ್ಣಿಕಾರದಲ್ಲಿ ಇಪ್ಪತ್ತು, ಶತರ್ದಿಕದಲ್ಲಿ ಹದಿನೆಂಟು, ಸಿಂಹದಲ್ಲೂ ಹದಿನಾರು, ಸಾಮಭದ್ರದಲ್ಲಿ ಹದಿನಾಲ್ಕು, ಸುಭದಲ್ಲಿ ಹದಿನೆಂಟು ಕಂಬಗಳಿರುತ್ತವೆ.

ಈ ಮಂಟಪಗಳನ್ನು ಎರಡು, ನಾಲ್ಕು, ಎಂಟು, ಅಥವಾ ಹದಿನಾರು ಕೋನ ಬರುವಂತೆ ರಚಿಸಬಹುದು. ಅಥವಾ ವೃತ್ತಾಕಾರ ಅಥವಾ ಅರ್ಧ ಚಂದ್ರಾಕಾರವಾಗಿ ರಚಿಸಬಹುದು.

ಮೇಲೆ ಹೇಳಿದಂತೆ ತ್ರಿಕೋನಾಕಾರದ ಮಂಟಪವನ್ನು ರಚಿಸಿದರೆ ರಾಜ್ಯಪ್ರಾಪ್ತಿಯಾಗುವದು. ಚತುಷ್ಕೋಣದಿಂದ ವಿಜಯ. ಷಟ್ಕೋನದಿಂದ ಆಯುಸ್ಸು. ಅಷ್ಟಕೋನದಿಂದ ಸಂತಾನ. ಷೋಡಶಕೋನ ಮಂಟಪದಿಂದ ಸಂಪತ್ತು ಪ್ರಾಪ್ತವಾಗುವವು. ಈ ಮೇಲೆ ಹೇಳಿದ ಮಂಟಪಗಳೇ ಮಂಗಲಕರವಾದ ಮಂಟಪಗಳು ಇದಕ್ಕೆ ಹೊರತಾಗಿ ಬೇರೆ ಮಂಟಪ ಕಟ್ಟಿಸಿದರೆ ಅಶುಭ.

ಮಂಟಪವನ್ನು ಕಟ್ಟ ಬೇಕಾದ ನಿವೇಶನವನ್ನು ಹೇಳುತ್ತೇನೆ. ದಕ್ಷಿಣೋತ್ತರ ಎಂಟು ಪೂರ್ವ-ಪಶ್ಚಿಮ ಎಂಟು ಒಟ್ಟು ಅರವತ್ನಾಲ್ಕು ಮನೆಗಳಾಗುವಂತೆ ಗುರುತಿಸಿ, ಅವುಗಳ ನಡುವೆ ಬಾಗಿಲವನ್ನು ಇರಿಸಬೇಕು.

ಬಾಗಿಲದ ಎತ್ತರವು ಅಗಲದ ಎರಡುಪಟ್ಟು ಇರಬೇಕು. ಗರ್ಭಗೃಹದ ಪ್ರಮಾಣವು ವಿಸ್ತಾರದಲ್ಲಿ ಅರ್ಧವಿರಬೇಕು. ಸುತ್ತಲಿನ ಗೋಡೆಗಳ ಅಳತೆಯೂ ಅಷ್ಟೇ ಇರಬೇಕು. ಬಾಗಿಲು ಗರ್ಭಗೃಹದ ಒಂದು ಪಾಲಿನಷ್ಟು ಅಗಲವಾಗಿಯೂ ಅಗಲಿನ ಎರಡು ಅಥವಾ ಮೂರರಷ್ಟು ಎತ್ತರವಾಗಿಯೂ ಇರಬೇಕು. ಬಾಗಿಲಿನ ಅಗಲವು ಹಿಂದೆ ಹೇಳಿದ್ದರ ಎರಡು ಪಟ್ಟು, ಹೆಚ್ಚು ಇದ್ದರೂ ಇರಬಹುದು. ಅದಕ್ಕೆ ತಕ್ಕಂತೆ ಎತ್ತರವನ್ನು ಹೆಚ್ಚಿಸಬೇಕು.

ಈ ಬಾಗಿಲವನ್ನು ಮೂರು, ಐದು, ಏಳು, ಒಂಭತ್ತು ಹಲಗೆಗಳಿಂದ ಅತ್ತಿ ಮರದ ಕಟ್ಟಿಗೆಯಿಂದ ಮಾಡಬೇಕು. ದೇವಾಲಯದ ಪ್ರಮಾಣಕ್ಕೆ ತಕ್ಕಂತೆ ದ್ವಾರಗಳಲ್ಲಿಯೂ ಜೇಷ್ಠ ಮಧ್ಯಮ ಕನಿಷ್ಠ ಎಂದು ಮೂರು ಪ್ರಕಾರಗಳು ಇರುತ್ತವೆ.

ನೂರನಲವತ್ತು ನೂರಮೂವತ್ತು ಅಥವಾ ನೂರಿಪ್ಪತ್ತು ಅಂಗುಲಗಳಷ್ಟು ಎತ್ತರವಿರುವ ಬಾಗಿಲುಗಳು ಉತ್ತಮ ದ್ವಾರಗಳೆಂದು ಎನಿಸುವವು. ಇವುಗಳಿಗೇ ಧನದ್ವಾರ ಎಂದು ಕರೆಯುತ್ತಾರೆ.

ನೂರ ಒಂಬತ್ತು, ನೂರ ಹತ್ತು ಅಥವಾ ನೂರಹದಿನಾರು ಬೆರಳು ಎತ್ತರದ ದ್ವಾರಗಳು ಮಧ್ಯಮ ದ್ವಾರಗಳೆಂದು ಕರೆಯಲ್ಪಡುವವು.

ನೂರು ಅಂಗುಲ, ತೊಂಬತ್ತು ಅಂಗುಲ ಅಥವಾ ಎಂಬತ್ತು ಅಂಗುಲ ಎತ್ತರವುಳ್ಳ ಬಾಗಿಲುಗಳು ಕನಿಷ್ಠ ದ್ವಾರಗಳು. ಹೀಗೆ ಹಿಂದೆ ಹೇಳಿದ ಪ್ರಮಾಣ ಪ್ರಾಕಾರದ ಬಾಗಿಲವನ್ನು ಸೇರಿಸಿ ಒಟ್ಟು ಹತ್ತುವಿಧವಾದ ಬಾಗಿಲುಗಳು ಶಾಸ್ತ್ರೋಕ್ತವಾಗಿರುತ್ತವೆ.

ಈ ದಶವಿಧ ದ್ವಾರಗಳು ಶ್ರೇಯಸ್ಕರವಾಗಿರುತ್ತವೆ. ಈ ಹತ್ತುವಿಧ ಬಾಗಿಲ ಬಿಟ್ಟು ಬೇರೆ ತೆರನಾದ ಬಾಗಿಲುಗಳನ್ನು ಮನೆ-ಮಂದಿರಗಳಲ್ಲಿ ಇರಿಸಬಾರದು. ಅವುಗಳಿಂದ ಮನಸ್ತಾಪಗಳು ಹೆಚ್ಚಾಗಿ ಅಧಿವ್ಯಾಧಿಗಳು ಉಂಟಾಗುವವು.

ಹಿಂದೆ ಹೇಳಿದ ಎಲ್ಲಬಗೆಯ ವಿವಿಧ ಕಟ್ಟಡಗಳಲ್ಲೂ ಬಾಗಿಲ ಎದುರು ಮೂಲೆ ಮರ, ಬೇರೆ ಬಾಗಿಲು, ಕಂಬ, ಬಾವಿ, ಧ್ವಜ, ಗೋಡೆ, ಹಳ್ಳಗಳು ಇರಬಾರದು.

ಬಾಗಿಲಿಗೆ ಎದುರು ಮರ ಮೂಳೆ ಮುಂತಾದವುಗಳು ಅಡ್ಡಿಯಾಗಿದ್ದರೆ ಅಶುಭ, ದಾರಿದ್ರ್ಯ, ದುರ್ಗತಿ ಮರಣ, ದೌರ್ಭಾಗ್ಯ, ರೋಗ, ಕಲಹ, ದ್ರವ್ಯನಾಶ, ಮುಂತಾದ

ಅನಿಷ್ಟಗಳು ಸಂಭವಿಸುತ್ತದೆ. ಬಾಗಿಲದ ಪೂರ್ವದಿಕ್ಕಿನಲ್ಲಿ ಹಣ್ಣಿನ ಮರಗಳು, ದಕ್ಷಿಣದಲ್ಲಿ ಅರಳಿ ಅತ್ತಿ ಮುಂತಾದ ಹಾಲು ಗಿಡಗಳು, ಪಶ್ಚಿಮದಲ್ಲಿ ಕಮಲಗಳಿಂದ ತುಂಬಿದ ಜಲಾಶಯಗಳು ಉತ್ತರದಲ್ಲಿ ನೇರಳೆ ಹಾಗೂ ತಾಳೆ ಗಿಡಗಳು ಇದ್ದರೆ ಶುಭ.

ಉದ್ಯಾನ, ಪುಷ್ಕರಣಿ, ಕಟ್ಟೆ ಮುಂತಾದವುಗಳು ಯಾವ ದಿಕ್ಕಿಗಿದ್ದರೂ ಶುಭ. ದೇವಸ್ಥಾನದ ತಪೋವನವನ್ನು ಉತ್ತರದಲ್ಲಿ ಸಪ್ತ ಮಾತೃಕೆಯರ ಗೃಹ, ಅಗ್ನೇಯಕ್ಕೆ ಅಡಿಗೆ ಮನೆ, ನೈಋತ್ಯಕ್ಕೆ ವಿನಾಯಕನನ್ನು ಪಶ್ಚಿಮಕ್ಕೆ ಶ್ರೀನಿವಾಸ ದೇವರನ್ನೂ, ಹಾಗೂ ದೇವರ ನಿರ್ಮಾಲ್ಯ ಹಾಕಲು ತಗ್ಗನ್ನು, ವಾಯುವ್ಯದಲ್ಲಿ ವಸತಿ ಗ್ರಹಗಳನ್ನು, ಪಶ್ಚಿಮದಲ್ಲಿ ಬಲಿಸ್ಥಾನದಲ್ಲಿ ಮುಂಭಾಗದಲ್ಲಿ ಎತ್ತಿನ ಸ್ಥಳವನ್ನು ಈಶಾನ್ಯದಲ್ಲಿ ಕಾಮನ ಮೂರ್ತಿಯನ್ನೂ, ಸರೋವರವನ್ನೂ ನಿರ್ಮಿಸಬೇಕು.

ಆ ಸರೋವರದಲ್ಲಿ ಸಮುದ್ರಶಾಯಿಯಾದ ವಿಷ್ಣುವಿನ ಮೂರ್ತಿಯನ್ನು ಪ್ರತಿಷ್ಠೆ ಮಾಡಬೇಕು. ಹೀಗೆ ದೇವಸ್ಥಾನಗಳನ್ನು ಬಗೆಬಗೆಯ ಮಂಟಪ ಯಜ್ಞಕುಂಡ, ಗಂಟೆ, ಮೇಲ್ಗಟ್ಟು, ತೋರಣ, ಚಿತ್ರ, ಧ್ವಜ, ಮುಂತಾದಗವುಗಳಿಂದ ಒಡಗೂಡಿ ಶೋಭಾಯಮಾನವಾಗಿ ಎಲ್ಲ ಕಡೆಯಿಂದಲೂ ಎದ್ದು ಕಾಣುವಂತೆ ನಯನ ಮನೋಹರವಾಗಿ ಕುಶಲ ಶಿಲ್ಪಗಳಿಂದ ನಿರ್ಮಾಣ ಮಾಡಿಸಿ, ಜ್ಞಾನಿ, ಸದಾಚಾರಿ ಬ್ರಾಹ್ಮಣರಿಂದ ದೇವತಾ ಪ್ರತಿಷ್ಠೆಯನ್ನು ಮಾಡಿಸಬೇಕು.

ದೇವಸ್ಥಾನದಲ್ಲಿ ಮೇಲಿಂದ ಮೇಲೆ ಉತ್ಸವ, ಸಂತರ್ಪಣ, ಭಾರೀ ಭೋಜನ ಧ್ಯಾನ, ಭಜನ, ಪಾರಾಯಣ, ವಿಶೇಷ ಸಭಾ, ಪೂಜಾ ಮಹೋತ್ಸವಾದಿಗಳು ಅನುದಿನವೂ ನಡೆಯುವಂತೆ ಏರ್ಪಾಡು ಮಾಡಬೇಕು.

ಇಂತಹ ದೇವಾಲಯವನ್ನು ನಿರ್ಮಿಸಿದ ಮನುಷ್ಯನನ್ನು ಲಕ್ಷ್ಮಿದೇವಿಯು ಯಾವಾಗಲೂ ಕೈಹಿಡಿದು ಕಾಪಾಡುತ್ತ ಸಕಲವಿಧ ಭೋಗ ಭಾಗ್ಯ ಕರುಣಿಸುವಳು. ಸ್ವರ್ಗದಲ್ಲಿ ಅಂತಹ ಮನುಷ್ಯನು ಸರ್ವೋತ್ತಮರಿಂದ ಸತ್ಕೃತನಾಗುವನು. ಮನೆಗಳಲ್ಲಿ ಇದೇ ರೀತಿಯಾಗಿ, ಹೋಮ, ಹವನ, ಮಂತ್ರ, ತಂತ್ರ, ವಿಧಿ ವಿಧಾನಗಳಿಂದ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿದ ಆವಾಹಿತ ದೇವತಾ ಮೂರ್ತಿಗಳನ್ನೇ ಪೂಜಿಸಬೇಕು.

''ಘಂಟಾವಿತಾನಕ ಸ ತೋರಣ ಚಿತ್ರ ಯುಕ್ತಂ
ನಿತ್ಯೋತ್ಸವ ಪ್ರಮುದಿತೇನ ಜನೇನಸಾರ್ಧಂ ।

ಯಃ ಕಾರಯೇತ್ಸುರಗೃಹಂ ವಿವಿಧ ಧ್ವಜಾಂಕಂ
ಶ್ರೀ ಸ್ತಂ ನ ಮುಂಚತಿ ಸದಾ ದಿವಿ ಪೂಜ್ಯತೇ ಚ ॥

ಏವಂ ಗೃಹಾರ್ಚನ ವಿಧಾವಪಿ ಶಕ್ತಿತಃ ಸ್ಯಾತ್ ।
ಸಂಸ್ಥಾಪನಂ ಸಕಲ ಮಂತ್ರ ವಿಧಾನಯುಕ್ತಂ ।

ಗೋ ವಸ್ತ್ರ ಕಾಂಚನ ಹಿರಣ್ಯ ಧರಾ ಪ್ರದಾನಂ ।
ದೇವಂ ಗುರು ದ್ವಿಜ ವರೇಷು ತಥಾನ್ನದಾನಮ್ ॥

ಪ್ರತಿಷ್ಠಾ ಮಹೋತ್ಸವದ ಸಂದರ್ಭದಲ್ಲಿ ಆಚಾರ್ಯರಿಗೂ ಋತ್ವಿಜರಿಗೂ ಬ್ರಾಹ್ಮಣೋತ್ತಮರಿಗೂ ಗೋದಾನ, ಭೂದಾನ, ಸುವರ್ಣದಾನ, ಗೃಹದಾನ, ಧನದಾನ, ದಕ್ಷಿಣಾದಾನಗಳನ್ನು ಯಥಾಶಕ್ತಿ ವಿಪುಲ ಪ್ರಮಾಣದಲ್ಲಿ ನೀಡಬೇಕು. ಉಳಿದೆಲ್ಲ ಜನರನ್ನು ಭೋಜನದಿಂದ ತೃಪ್ತಿಪಡಿಸಬೇಕು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿದುದು.*



## ಕಲಿಯುಗದಲ್ಲಿಯ ಭಾವಿ ರಾಜವಂಶಗಳ ವರ್ಣನೆ | ಅಧ್ಯಾಯ - ೨೭೨

**ಋಷಿ ಉವಾಚ**

**"ಪೂರೋರ್ವಂಶಸ್ತ್ವಯಾ ಸೂತ ! ಸಭವಿಷ್ಯೋ ನಿವೇದಿತಃ ।**
**ಸೂರ್ಯವಂಶೇ ನೃಪಾ ಯೇ ತು ಭವಿಷ್ಯಂತಿ ಹಿ ತಾನ್ ವದ ॥**
**ತಥೈವ ಯಾದವೇ ವಂಶೇ ರಾಜಾನಃ ಕೀರ್ತಿವರ್ಧನಾಃ"**

**ಋಷಿಗಳು** :- ಸೂತಮುನಿಯೇ, ನೀನು ಪುರು ಮಹಾರಾಜನ ವಂಶವನ್ನು ಭವಿಷ್ಯಕಾಲದಲ್ಲಿ ಜನಿಸಲಿರುವ ರಾಜವಂಶದ ಕಥನದೊಂದಿಗೆ ನಮಗೆ ಹಿಂದೆ ನಿವೇದಿಸಿದೆ. ಇನ್ನು ಮೇಲೆ ಸೂರ್ಯ ವಂಶದಲ್ಲಿ ಮುಂದೆ ಭವಿಷ್ಯಕಾಲದಲ್ಲಿ ಯಾವ ಯಾವ ರಾಜರು ಜನಿಸಲಿರುವರು ಎಂಬುದನ್ನು ತಿಳಿಸು.

ಇದರಂತೆ ಯದು ವಂಶದಲ್ಲಿಯೂ ಮುಂದೆ ಕಲಿಯುಗವು ಬಂದ ಬಳಿಕ ಎಷ್ಟು ಜನ ರಾಜರು ಸಂಭವಿಸಲಿರುವರು ? ಅವರಲ್ಲಿ ಯಾರಾರು ಕೀರ್ತಿವಂತರಾಗುವರು ? ಅದನ್ನು ಕೂಡ ನಮಗೆ ಹೇಳು. ಅವರ ವಂಶವು ಕೊನೆಗೊಂಡ ಬಳಿಕ ಅವರ ಯಾವ ಜ್ಞಾತಿಗಳು ಆ ರಾಜ್ಯಗಳನ್ನು ಪಡೆಯುವರು ಎಂಬುದನ್ನು ಸಂಕ್ಷೇಪವಾಗಿ ಅನುಕ್ರಮದಿಂದ ಬಿತ್ತರಿಸು.

**ಸೂತ** :- ಬೃಹದ್ಬಲನವರೆಗೆ ನೀವು ಸೂರ್ಯವಂಶದ ವಿಸ್ತಾರ ಕೇಳಿದ್ದೀರಿ. ಬೃಹದ್ಬಲನಿಗೆ ಉರುಕ್ಷಯ ಎಂಬ ಮಗನು ಹುಟ್ಟುತ್ತಾನೆ. ಅವನ ಮಗನೇ ವತ್ಸದ್ರೋಹ, ಅವನ ಮಗ ಪ್ರತಿವ್ಯೋಮ. ತತ್‌ಪುತ್ರ ದಿವಾಕರ. ಆ ದಿವಾಕರನು ಮಧ್ಯದೇಶದಲ್ಲಿ ಅಯೋಧ್ಯಾನಗರವನ್ನು ಆಳುವನು.

ಮುಂದೆ ಈ ದಿವಾಕರನಿಂದ ಅವರ ವಂಶದಲ್ಲಿ ಕ್ರಮವಾಗಿ, ಸಹದೇವ, ಧ್ರುವಾಶ್ವ, ಪ್ರತೀಪಾಶ್ವ, ಸುಪ್ರತೀಪ, ಮರುದೇವ, ಸುನಕ್ಷತ್ರ, ಕಿನ್ನರಾಶ್ವ, ಅಂತರಿಕ್ಷ, ಸುಷೇಣ, ಸುಮಿತ್ರ, ಬೃಹದ್ಭ್ರಾಜ, ಕೃತಂಜಯ, ರಣಂಜಯ, ಸಂಜಯ, ಶಾಕ್ಯ, ಶುದ್ಧೋದನ, ಸಿದ್ಧಾರ್ಥ. ಪುಷ್ಕಲ, ಪ್ರಸೇನಜೀತ್, ಕ್ಷುದ್ರಕ, ಕುಲ, ಸುರಥ, ಸುಮಿತ್ರ ಎಂದು ಮುಂತಾಗಿ ಒಬ್ಬರಾದ ಮೇಲೆ ಒಬ್ಬ ರಾಜರು ಜನಿಸಿ ಭೂಮಂಡಲವನ್ನು ಆಳುವರು.

ಇವರೆಲ್ಲರೂ ಇಕ್ಷ್ವಾಕುವಂಶದಲ್ಲಿ ಮುಂದಾಗಲಿರುವ ಮಹಾರಾಜರು. ಸುಮಿತ್ರ ರಾಜನ ತಲೆಗೆ ಈ ಇಕ್ಷ್ವಾಕು ವಂಶ ಕೊನೆಗೊಳ್ಳುವುದು.

**ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ ।**
**ಸುಮಿತ್ರಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥**

ಎಂಬ ಈ ಪದ್ಯದಲ್ಲಿ ಇಕ್ಷ್ವಾಕುವಂಶವು ಸುಮಿತ್ರ ರಾಜನವರೆಗೆ ಬೆಳೆದು ಬಂದು, ಮುಂದೆ ನಿಂತುಹೋಗುವದು ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಇದೆಲ್ಲವೂ ವೈವಸ್ವತ ಮನುವಿನಿಂದ ಆರಂಭಮಾಡಿ, ರಘು, ದಿಲೀಪ, ಶ್ರೀರಾಮಚಂದ್ರ ಮೊದಲಾದವರಿಂದ ಮುಂದುವರಿದು ಸುಮಿತ್ರರಾಜನ ತಲೆಗೆ ಕಲಿಯುಗದಲ್ಲಿ ಕೊನೆಗೊಳ್ಳುವ ಮನುವಂಶದ ಪರಂಪರೆ.

**ಇತ್ಯೇವಂ ಮಾನವೋ ವಂಶಃ ಪ್ರಾಗೇವ ಸಮುದಾಹೃತಃ ।**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ಮಾಗಧಾ ಯೇ ಬೃಹದ್ರಥಾಃ ॥**
**ಪೂರ್ವೇಣ ಯೇ ಜರಾಸಂಧಾತ್ಸಹದೇವಾನ್ವಯೇ ನೃಪಾಃ ।**
**ಅತೀತಾ ವರ್ತಮಾನಾಶ್ಚ ಭವಿಷ್ಯಾಂಶ್ಚ ನಿಬೋಧತ ॥**

ಇನ್ನು ಮೇಲೆ ಮಗಧ ದೇಶದ ರಾಜಕುಲವಾದ ಬೃಹದ್ರಥರವಂಶದ ಬೆಳವಣಿಗೆ ಹೇಳುತ್ತೇನೆ. ಈ ಮಗಧ ವಂಶದ ಅತ್ಯಂತ ಪ್ರಚಂಡ ಮಹಾರಾಜ ಜರಾಸಂಧನು ಪಾಂಡುನಂದನನಾದ ಭೀಮಸೇನನಿಂದ ಹತನಾದ ಬಳಿಕ ಸಹದೇವನು ತಂದೆಯ ಸಿಂಹಾಸನವನ್ನು ಏರಿದನು. ಆ ಸಹದೇವನೂ ಕೂಡ ಮಹಾಭಾರತದ ಯುದ್ಧದಲ್ಲಿ ಹತನಾದ ಬಳಿಕ ಸೋಮಾಧಿ ಎಂಬ ಅವನ ಪುತ್ರನು ರಾಜ್ಯಾರೂಢನಾದನು.

ಆ ಸೋಮಾಧಿಯು ಐವತ್ತೆಂಟುವರುಷ ರಾಜ್ಯವಾಳಿ ಶ್ರುತಶ್ರವನೆಂಬ ತನ್ನ ಮಗನಿಗೆ ರಾಜ್ಯಭಾರ ಒಪ್ಪಿಸಿದನು.

ಶ್ರುತಶ್ರವನು ಅರವತ್ತುನಾಲ್ಕು ವರ್ಷ ರಾಜ್ಯವಾಳಿದ ಬಳಿಕ ಅವನ ಮಗ ನಿರಮಿತ್ರನು ನಲವತ್ತು ವರ್ಷ, ಸುರಕ್ಷನು ಐವತ್ತಾರು ವರ್ಷ, ಬ್ರಹತ್‌ಕರ್ಮನು ಇಪ್ಪತ್ತುಮೂರು ವರ್ಷ, ಸೇನಜಿತನು ಐವತ್ತು ವರ್ಷ, ಶ್ರುತಂಜಯನು ನಲವತ್ತು ವರ್ಷ, ವಿಭೂರಾಜನು ಇಪ್ಪತ್ತೆಂಟು ವರ್ಷ, ಶುಚಿರಾಜನು ಅರವತ್ತನಾಲ್ಕು ವರ್ಷ, ಅನುವ್ರತನು ಅರವತ್ತುನಾಲ್ಕು ವರ್ಷ, ಸುನೇತ್ರನು ಇಪ್ಪತ್ತೈದು ವರ್ಷ, ನಿವ್ರರ್ತಿಯು ಐವತ್ತೆಂಟು ವರ್ಷ, ತ್ರಿನೇತ್ರನು ಇಪ್ಪತ್ತೆಂಟು ವರ್ಷ, ದ್ಯುಮತ್ಸೇನನು ನಲವತ್ತೆಂಟು ವರ್ಷ, ಮಹೀನೇತ್ರನು ಮೂವತ್ತುಮೂರು ವರ್ಷ, ಅಚಲರಾಜನು ಮೂವತ್ತೆರಡು, ಶಿಪ್ರಂಜಯನು ಐವತ್ತು ವರ್ಷ ರಾಜ್ಯವಾಳುವರು.

**ದ್ವಾತ್ರಿಂಶತ್ತು ನೃಪಾ ಹ್ಯೇತೇ ಭವಿತಾರೋ ಬೃಹದ್ರಥಾಃ ।**
**ಪೂರ್ವಂ ವರ್ಷಸಹಸ್ರಂತು ತೇಷಾಂ ರಾಜ್ಯಂ ಭವಿಷ್ಯತಿ ।**
**ಜಯತಾಂ ಕ್ಷತ್ರಿಯಾಣಾಂ ತು ಬಾಲಕಃ ಪುಲಕೋ ಭವೇತ್ ॥**

ಇವರೆಲ್ಲರೂ ಕ್ರಮವಾಗಿ ಒಬ್ಬರಿಗೊಬ್ಬರ ಮಕ್ಕಳು ಎಂದು ತಿಳಿಯಬೇಕು. ಒಟ್ಟು ಈ ಮಗಧ ವಂಶದ ರಾಜರ ಆಳಿಕೆಯು ಪೂರ್ತಿ ಒಂದು ಸಾವಿರ ವರುಷದವರೆಗೆ ಭಾರತ ದೇಶದಲ್ಲಿ ನಿರಾತಂಕವಾಗಿ ನಡೆಯುವದು. ಮುಂದೆ ಪುಲಕ ಎಂಬುವನ ಮಗನಾದ ಬಾಲಕನು ರಾಜನಾಗುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಪ್ಪತ್ತೆರಡನೆಯ ಅಧ್ಯಾಯ ಮುಗಿದುದು.*

ಆ ಕಾಲದಲ್ಲಿಯ ಅರಸರ ವಂಶ ವರ್ಣನೆ | ಅಧ್ಯಾಯ - ೨೭೩

**ಸೂತ ಉವಾಚ :**

**"ಬೃಹದ್ರಥೇಷ್ವತೀತೇಷು ವೀತಿಹೋತ್ರೇಷ್ವವಂತಿಷು ।**
**ಪುಲಕಃ ಸ್ವಾಮಿನಂ ಹತ್ವಾ ಸ್ವಪುತ್ರಮಭಿಷೇಕ್ಷ್ಯತಿ ॥"**

**ಸೂತ** :- ಹೀಗೆ ಮಗಧ ದೇಶದ ಬೃಹದ್ರಥಕುಲದ ರಾಜವಂಶವು ನಿಂತುಹೋದ ಬಳಿಕ, ವೀತಿಹೋತ್ರ, ಮನೆತನದ ರಾಜರೂ, ಅನಂತರ ಆವಂತಿರಾಜರೂ, ಕ್ರಮಶಃ ಆ ರಾಜ್ಯಕ್ಕೆ ಅಧಿಪತಿಗಳಾಗುತ್ತಾರೆ.

ಈ ವಂಶದ ಒಬ್ಬ ರಾಜನನ್ನು ಪುಲಕ ಎಂಬುವವನು ಕೊಂದು ತನ್ನ ಮಗನಿಗೆ ಪಟ್ಟಾಭಿಷೇಕ ಮಾಡುತ್ತಾನೆ. ಪುಲಕನ ಮಗ ಬಾಲಕ. ಈ ಬಾಲಕ ರಾಜನು ಬಲಾತ್ಕಾರ ಹಾಗೂ ಅನ್ಯಾಯಗಳಿಂದ ರಾಜನಾಗಿ ಇಪ್ಪತ್ತುಮೂರು ವರುಷ ರಾಜ್ಯವನ್ನು ಆಳುತ್ತಾನೆ.

ಅನಂತರ ಅವನ ಮಗನಾದ ಪಾಲಕ ಎಂಬುವವನು ಇಪ್ಪತ್ತೆಂಟು ವರ್ಷ ರಾಜ್ಯವಾಳುವನು. ಅವನ ಮಗನ ಮಕ್ಕಳು, ಮೊಮ್ಮಕ್ಕಳು ಮರಿಮಕ್ಕಳಾದ ರಾಜರು ನಿರ್ದಿಷ್ಟ ವರ್ಷಗಳವರೆಗೆ ರಾಜ್ಯವಾಳುವರು. ವಿಶಾಖಯೂಪ ಐವತ್ತಮೂರು ವರ್ಷ, ಅವನ ಮಗ ಸೂರ್ಯಕ ಇಪ್ಪತ್ತೊಂದು ವರ್ಷ ರಾಜ್ಯವಾಳುವನು.

ಈ ಸೂರ್ಯಕನ ಮಗನಾದ ನಂದಿವರ್ಧನನು ಮೂವತ್ತು ವರ್ಷ ಆಳುವನು. ಅನಂತರ ಐದು ರಾಜರು ಒಟ್ಟು ಐವತ್ತೆರಡು ವರುಷ ರಾಜ್ಯವಾಳುವರು. ಬಳಿಕ ಶಿಶುನಾಕನು ರಾಜನಾಗುವನು. ಅವನು ಕಾಶಿಯಲ್ಲಿ ಮಗನಿಗೆ ಪಟ್ಟಾಭಿಷೇಕ ಮಾಡಿ ತಾನು ಗಿರಿವ್ರಜದಲ್ಲಿ ರಾಜ್ಯವಾಳುವನು.

ಈ ಶಿಶುನಾಕನು ನಲವತ್ತು ವರುಷ ರಾಜ್ಯವಾಳಿ, ಕಾಕವರ್ಣನೆಂಬ ಮಗನಿಗೆ ಗಿರಿವ್ರಜದ ರಾಜ್ಯ ಒಪ್ಪಿಸುವನು. ಈ ಕಾಕವರ್ಣನು ಇಪ್ಪತ್ತಾರು ವರ್ಷ, ಅವನ ಮಗ ಕ್ಷೇಮಧರ್ಮ ಮೂವತ್ತಾರು ವರ್ಷ, ಕ್ಷೇಮಜಿತ ಇಪ್ಪತ್ತನಾಲ್ಕು ವರ್ಷ, ವಿಂಧ್ಯಸೇನ ಇಪ್ಪತ್ತೆಂಟು ವರ್ಷ, ಕಣ್ವಾಯನ ಒಂಭತ್ತು ವರ್ಷ, ಭೂಮಿಮಿತ್ರ ಹದಿನಾಲ್ಕು ವರ್ಷ, ಅಜಾತಶತ್ರು ಇಪ್ಪತ್ತೇಳು ವರ್ಷ, ವಂಶಿಕನು ಇಪ್ಪತ್ತನಾಲ್ಕು ವರ್ಷ, ಉದಾಸಿರಾಜನು ಮೂವತ್ತುಮೂರು ವರ್ಷ, ನಂದಿವರ್ಧನ ಮೂವತ್ತು ವರ್ಷ ರಾಜ್ಯವಾಳುವರು. ಈ ನಂದಿವರ್ಧನನ ಮಗನಾದ ಮಹಾನಂದಿಯು ನಲವತ್ತುಮೂರು ವರ್ಷ ರಾಜ್ಯವಾಳುವನು. ಹೀಗೆ ಈ ಶಿಶುನಾಕವಂಶದಲ್ಲಿ ಹದಿನೆಂಟು ಜನ ರಾಜರು ಮೂರುನೂರಾರವತ್ತು ವರುಷ ರಾಜ್ಯವಾಳುವರು. ಇವರೆಲ್ಲರೂ ಕ್ಷತ್ರ ಬಂಧುಗಳು.

ಈ ಶಿಶುನಾಕವಂಶದ ರಾಜರು ರಾಜ್ಯವಾಳುವಾಗಲೇ ಭರತಖಂಡದ ಬೇರೆ ಬೇರೆ ಭಾಗಗಳಲ್ಲಿ ಅನೇಕ ರಾಜರು ರಾಜ್ಯಶಾಸನ ಮಾಡುತ್ತಲಿರುವರು. ಇಕ್ಷ್ವಾಕು ವಂಶದಲ್ಲಿ ಇಪ್ಪತ್ತನಾಲ್ಕು ರಾಜರು, ಪಾಂಚಾಲ ವಂಶದಲ್ಲಿ ಇಪ್ಪತ್ತೇಳು, ಕಾಶಿರಾಜರ ವಂಶದಲ್ಲಿ ಕಲಿಂಗ ಕುಲದಲ್ಲಿ ಮೂವತ್ತೆರಡು, ಅಶ್ಮಕ ವಂಶದಲ್ಲಿ ಇಪ್ಪತ್ತೈದು, ಕುರುವಂಶದಲ್ಲಿ

ಇಪ್ಪತ್ತನಾಲ್ಕು, ಮೈಥಿಲ ರಾಜಮನೆತನದಲ್ಲಿ ಇಪ್ಪತ್ತೆಂಟು, ಶೂರಸೇನ ವಂಶದಲ್ಲಿ ಇಪ್ಪತ್ತುಮೂರು, ವೀತಿಹೋತ್ರ ಮನೆತನದಲ್ಲಿ ಇಪ್ಪತ್ತು, ರಾಜರು ಈ ಶಿಶುನಾಕ ಮನೆತನದಲ್ಲಿ ಹದಿನೆಂಟು ರಾಜರೊಡನೆ ಬೇರೆ ಬೇರೆ ದೇಶಗಳಲ್ಲಿ ರಾಜ್ಯವಾಳುತ್ತಾರೆ.

ಶಿಶುನಾಕ ಮನೆತನದಲ್ಲಿ ಮಹಾನಂದಿ ರಾಜನಿಗೆ ಶೂದ್ರ ಸ್ತ್ರೀಯಲ್ಲಿ ಕಲಿಯ ಅಂಶದಿಂದ ಒಡಗೂಡಿದ ಮಹಾಪದ್ಮ ಎಂಬ ಪುತ್ರನು ಸರ್ವಕ್ಷತ್ರಾಂತಕನಾಗಿ ಹುಟ್ಟುವನು. ಇಲ್ಲಿಗೆ ಕ್ಷತ್ರಿಯ ವಂಶವು ನಿಂತು ಹೋದಂತಾಗುವದು.

**ಮಹಾನಂದಿ ಸುತಶ್ಚಾಪಿ ಶೂದ್ರಾಯಾಂ ಕಲಿಕಾಂಶಜಃ ।**
**ಉತ್ಪತ್ಸ್ಯತೇ ಮಹಾಪದ್ಮಸ್ಸರ್ವಕ್ಷತ್ರಾಂತಕೋ ನೃಪಃ ॥**

**ತತಃಪ್ರಭೃತಿ ರಾಜಾನೋ ಭವಿಷ್ಯಾಃಶೂದ್ರಯೋನಯಃ ।**
**ಏಕರಾಟ್ ಸ ಮಹಾಪದ್ಮ ಏಕಚ್ಛತ್ರೋ ಭವಿಷ್ಯತಿ ॥**

ಈ ಮಹಾಪದ್ಮನ ನಂತರ ಎಲ್ಲ ರಾಜರೂ ಶೂದ್ರರಾಜರೇ, ಈ ಮಹಾಪದ್ಮನು ಏಕಛತ್ರಪತಿಯಾದ ಸಾರ್ವಭೌಮನಾಗಿ ಎಂಬತ್ತೆಂಟು ವರ್ಷ ಬದುಕಿರುವನು. ಇವನು ಎಲ್ಲ ಕ್ಷತ್ರಿಯರನ್ನು ನಿರ್ಮೂಲಮಾಡುವನು. ಅದರಿಂದ ಇವನಿಗೆ ಕ್ಷತ್ರಾಂತಕ ಎಂಬ ಹೆಸರು ಬರುವದು. ಮಹಾಪದ್ಮನ ನಂತರ ಸುಕಲ್ಪನೇ ಮುಂತಾದ ಎಂಟು ಮಂದಿ ಮಕ್ಕಳು ಹನ್ನೆರಡು ವರುಷಗಳವರೆಗೆ ಪರ್ಯಾಯದಿಂದ ಸರತಿಯಂತೆ ರಾಜರಾಗುವರು. ಹೀಗೆ ಮಹಾಪದ್ಮನ ಮನೆತನದವರು ಹನ್ನೆರಡು ವರುಷ ರಾಜ್ಯವಾಳಿದ ಬಳಿಕ ಇವರೆಲ್ಲರನ್ನೂ ಕೌಟಿಲ್ಯನು ನಾಶಗೈದು ಚಂದ್ರಗುಪ್ತನಿಗೆ ಪಟ್ಟಗಟ್ಟುವನು.

ಅನಂತರ, ಮೌರ್ಯರು ರಾಜರಾಗುವರು, ಆ ಮೌರ್ಯ ರಾಜರಲ್ಲಿ ಚಂದ್ರಗುಪ್ತನ ಪುತ್ರ ಶತಧನ್ವ ಆರು ವರ್ಷ, ಅವನ ಮಗ ಬೃಹದ್ರಥ ಮೊಮ್ಮಗ ಕೂಡಿ ಎಪ್ಪತ್ತು ವರ್ಷ, ಅವನ ಮಗ ದಶರಥನು ಎಂಟು ವರ್ಷ, ಅವನ ಮಗ ಒಂಭತ್ತು ವರ್ಷ, ಅವನ ಮಗ ಎಪ್ಪತ್ತು ವರ್ಷ, ಹೀಗೆ ಒಟ್ಟು ನೂರಮೂವತ್ತು ವರ್ಷ ಹತ್ತು ಜನ ಮೌರ್ಯ ವಂಶದ ರಾಜರು ರಾಜ್ಯವಾಳುವರು. ಅನಂತರ ರಾಜ್ಯಾಧಿಕಾರವು ಶುಂಗವಂಶದವರಿಗೆ ಹೋಗುವದು.

**''ಇತ್ಯೇತೇ ದಶ ಮೌರ್ಯಾಸ್ತು ಯೇ ಭೂಷ್ಯಂತಿ ವಸುಂಧರಾಂ**
**ಸಪ್ತತ್ರಿಂಶಚ್ಛತಂ ಪೂರ್ಣಂ ತೇಭ್ಯಃ ಶುಂಗಾನ್ ಗಮಿಷ್ಯತಿ ।''**

ಬೃಹದ್ರಥ ವಂಶದ ರಾಜರನ್ನು ಪುಷ್ಪಮಿತ್ರನೆಂಬ ಸೇನಾಪತಿಯು ಕಿತ್ತುಹಾಕಿ, ತಾನು ಮೂವತ್ತಾರು ವರ್ಷ ರಾಜ್ಯವಾಳುವನು. ಅವನ ಮಗ ವಸುಜೇಷ್ಠ ಏಳು ವರ್ಷ, ಮೊಮ್ಮಗ ವಸುಮಿತ್ರ ಹತ್ತು ವರ್ಷ ರಾಜ್ಯವಾಳುವರು. ಅನಂತರ ಅಂತಕ ಎರಡು ವರ್ಷ, ಮೂರು ವರ್ಷ ಪುಂಡಲಿಕ, ವಜ್ರಮಿತ್ರ, ಪುನರ್ಭವರು ಒಂದೊಂದು ವರ್ಷ, ಸಮಭಾಗ ಮೂವತ್ತೆರಡು ವರ್ಷ, ಅವನ ಮಗ ದೇವಭೂಮಿ ಹತ್ತುವರ್ಷ ರಾಜ್ಯವಾಳುವರು. ಹೀಗೆ ಹತ್ತು ಜನ ಕ್ಷುದ್ರರಾಜರು ಆಗುವರು. ಮುಂದೆ ಶುಂಗಕುಲದ ರಾಜರು ಒಟ್ಟು ಮುನ್ನೂರು ವರ್ಷ ಭೂಮಂಡಲ ಆಳುವರು.

ಅನಂತರ ವಸುದೇವ ಎಂಬ ಮಂತ್ರಿಯು ದೇವಭೂಮಿ ರಾಜನನ್ನು ಕೊಂದು ತಾನೇ ರಾಜನಾಗುವನು. ಅವನು ಒಂಭತ್ತು ವರುಷ ರಾಜ್ಯವಾಳಿ ಕಾಣ್ವಾಯನ ಎಂಬ ಕುಲದ ಶಾಸನವನ್ನು ಪ್ರಾರಂಭಿಸುವನು. ಕಣ್ವಗೋತ್ರದ ಬ್ರಾಹ್ಮಣ ರಾಜನಾದ ಈ ವಸುಮಿತ್ರನ ಮಗನಾದ ಭೂಮಿಮಿತ್ರ ಹದಿನಾಲ್ಕು ವರ್ಷ, ಅವನ ಮಗ ನಾರಾಯಣನು ಹದಿನೆಂಟು ವರ್ಷ, ಅವನ ಮಗ ಸುಶರ್ಮನು ಹತ್ತು ವರುಷ ರಾಜ್ಯವಾಳುವರು.

**ಏತೇ ಪ್ರಣತಸಾಮಂತಾ ಭವಿಷ್ಯಾ ಧಾರ್ಮಿಕಾಶ್ಚ ಯೇ ।**
**ಯೇಷಾಂ ಪರ್ಯಾಯ ಕಾಲೇ ತು ಭೂಮಿರಾಂಧ್ರಾನ್ ಗಮಿಷ್ಯತಿ ॥**

ಇವರೆಲ್ಲರೂ ಕಾಣ್ವಾಯನ ಮನೆತನದ ಶುಂಗಭೃತ್ಯರಾದ ಬ್ರಾಹ್ಮಣರು. ಇವರು ನಲವತ್ತೈದು ವರುಷ, ಭೂಮಿಯನ್ನು ಆಳುವರು. ಮುಂದಾಗಲಿರುವ ಈ ಕಾಣ್ವಾಯನ ಬ್ರಾಹ್ಮಣ ರಾಜರು ಧಾರ್ಮಿಕರೂ, ಸಮರ್ಥರೂ ಆಗಿ ಜನಪ್ರಿಯರೂ ಆಗುವರು. ಇವರ ನಂತರ ರಾಜ್ಯಾಧಿಕಾರವು ಆಂಧ್ರರಾಜರ ಕಡೆಗೆ ಹೋಗುವದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಪ್ಪತ್ತಮೂರನೆಯ ಅಧ್ಯಾಯ ಮುಗಿದುದು.*



## ಅರಸರ ವಂಶ ವರ್ಣನೆ

ಅಧ್ಯಾಯ - ೨೭೪

**ಸೂತ ಉವಾಚ:**

**"ಕಾಣ್ವಾಯನಾಸ್ತತೊ ಭೂಪಾಃ ಸುಶರ್ಮಾಣಂ ಪ್ರಗೃಹ್ಯತಮ್ ।**
**ಶುಂಗಾನಾಂ ಚೈವ ಯಚ್ಛೇಷಂ ಕ್ಷಪಿತ್ವಾ ತು ಬಲೀಯಸಃ ॥"**

**ಸೂತ :-** ಕಾಣ್ವಾಯನ ವಂಶವು ಸುಶರ್ಮನವರೆಗೆ ರಾಜ್ಯವಾಳಿದ ಬಳಿಕ ಶಿಶುಕ ಎಂಬ ಆಂಧ್ರನು ಸುಶರ್ಮನನ್ನು ಹಾಗೂ ಶುಂಗ ವಂಶದ ಚಿಕ್ಕ ಪುಟ್ಟರಾಜರನ್ನು ನಿಗ್ರಹಿಸಿ, ರಾಜ್ಯವನ್ನು ಕಸಿದುಕೊಳ್ಳುವನು. ಈ ಶಿಶುಕನು ಇಪ್ಪತ್ತುಮೂರು ವರುಷ ರಾಜ್ಯವಾಳುವನು. ಅನಂತರ ಕೃಷ್ಣಭ್ರಾತೃ ಎಂಬುವವನು ಹದಿನೆಂಟು ವರ್ಷ ರಾಜ್ಯವಾಳುವನು. ನಂತರ ಶ್ರೀ ಮಲ್ಲಕರ್ಣಿ ಎಂಬ ಅವನ ಮಗನು ಹತ್ತುವರುಷ, ಅನಂತರ ಪುರ್ಣೋತ್ಸಂಗನು ಹದಿನೆಂಟು ವರುಷ, ಶಾಂತಕರ್ಣಿಯು ಐವತ್ತು ಆರು ವರುಷ, ಲಂಬೋದರನು ಹದಿನೆಂಟು ವರುಷ, ಆಪೀತಕನು ಇಪ್ಪತ್ತು ವರ್ಷ, ರಾಜ್ಯವಾಳುವರು. ಅನಂತರ ಮೇಘಸ್ವಾತಿ ಹದಿನೆಂಟು ವರುಷ, ಆವನ ಮಗ ಸ್ವಾತಿಯು ಹದಿನೆಂಟು ವರುಷ, ಸ್ಕಂದಸ್ವಾತಿ ಏಳು ವರುಷ, ಮೃಗೇಂದ್ರಸ್ವಾತಿ ವರ್ಣನು ಮೂರು ವರುಷ, ಕುಂತಲನು ಎಂಟು ವರುಷ, ನಂದಿಸ್ವಾತಿವರ್ಣನು ಒಂದು ವರುಷ, ಪಿಕ್ರವರ್ಣನು ಇಪ್ಪತ್ತೈದು ವರುಷ ಶಾಸನಗೈಯುವರು.

ನಂತರ ಹಾಲನು ಐದು ವರುಷ, ಸೌಮ್ಯನು ಒಂದು ವರುಷ, ಸುಂದರ ಒಂದು ವರುಷ, ಶಾಂತಿಕರುಣನು ಒಂದೇ ವರುಷ, ಚಕೋರನು ಆರು ತಿಂಗಳು, ಶಿವಸ್ವಾತಿಯು

ಇಪ್ಪತ್ತೆಂಟು ವರುಷ, ಗೌತಮೀ ಪುತ್ರನು ಇಪ್ಪತ್ತೊಂದು ವರುಷ, ಪುರುಷೋತ್ತಮನು ಇಪ್ಪತ್ತೆಂಟು ವರುಷ, ಶಿವಶ್ರೀ ಏಳು ವರುಷ, ಶಿವಸ್ಕಂದ ಒಂದು ವರುಷ, ಯಜ್ಞಶ್ರೀ ಇಪ್ಪತ್ತೊಂಭತ್ತು ವರುಷ, ವಿಜಯನು ಆರು ವರುಷ, ಚಂಡಶ್ರೀ ಹತ್ತು ವರುಷ, ಪುಲೋಮ ಏಳು ವರುಷ, ಹೀಗೆ ಇಪ್ಪತ್ತೊಂಬತ್ತು ಆಂಧ್ರ ರಾಜರು ನಾಲ್ಕುನೂರಾ ಅರವತ್ತು ವರ್ಷ ರಾಜ್ಯವಾಳುವರು.

ಅನಂತರ ಈ ಆಂಧ್ರರಾಜರ ಆಳಿಕೆಯು ಮುಗಿದ ಬಳಿಕ ಮತ್ತೆ ಏಳು ತಲೆಮಾರು ಅವರ ಸಂಬಂಧಿಕರಾದ ಆಂಧ್ರರಾಜರು, ಹತ್ತು ಜನ ಆಂಧ್ಯಭೃತ್ಯರಾದ ಆಭೀರರಾಜರು. ಏಳು ತಲೆಮಾರು, ಗರ್ದಭಿಲ ವಂಶಜರು, ಹದಿನೆಂಟು ತಲೆ ಶಕವಂಶಜರು, ಎಂಟು ಯವನ ರಾಜರು, ಹದಿನಾಲ್ಕು ತುಷಾರ ರಾಜರು, ಹದಿಮೂರು ಮುರುಂತ ರಾಜರು, ಹತ್ತೊಂಬತ್ತು ಹೂಣ ರಾಜರು, ಎಂಟು ಯವನರು, ಭೂಮಿಯನ್ನು ಆಳುವರು.

ಮುಂದೆ ತುಷಾರರು ಏಳುಸಾವಿರ ವರ್ಷ, ಗುರಂಡ ಮತ್ತು ವೃಷಲರು ಸೇರಿ ಎರಡು ಸಾವಿರದ ಮುನ್ನೂರ ಎಂಭತ್ತು ವರ್ಷ, ಆಂಧ್ರರು ಮತ್ತೆ ಮುನ್ನೂರು ವರ್ಷ, ಪಾರ್ವತೀಯರು ಎಪ್ಪತ್ತೆರಡು ವರ್ಷ, ಹತ್ತು ಅಭೀರರು ಅರವತ್ತೇಳು ವರ್ಷ ಆಳಿ ನಷ್ಟರಾದ ಬಳಿಕ ಖಿಲಖಿಲರು ಆಳುವರು.

ಈ ಖಿಲಖಿಲ ರಾಜರು ಕಾಲಕ್ರಮದಿಂದ ಯವನಧರ್ಮವನ್ನು ಕಾಮವಾಸನೆ ಯಿಂದ ಕೆಲವರು ದ್ರವ್ಯಲೋಭದಿಂದ ಹಲವರು ಅಂಗೀಕರಿಸುವರು.

ಆರ್ಯದೇಶದ ಬಹುಜನರು, ಯವನ ಹಾಗೂ ಹೂಣ ಜಾತಿಯ ಜನರಿಂದ ವರ್ಣ ಸಾಂಕರ್ಯವನ್ನು ಹೊಂದುವರು. ರಾಜರೆಲ್ಲರೂ ಧರ್ಮಭ್ರಷ್ಟರಾಗಿ ಕಲಿಯ ಪ್ರಭಾವದಿಂದ ಸುಳ್ಳು, ಮೋಸ, ಸ್ವಾರ್ಥ, ಕಾಮ, ಲೋಭ, ನಾಸ್ತಿಕ್ಯ ಮುಂತಾದ ದುರ್ಗುಣಗಳಿಂದ, ನೀಚರಾಗಿ ತಮ್ಮ ದುಷ್ಕರ್ಮಗಳಿಂದ ತಾವೇ ನಾಶ ಹೊಂದುವರು.

ಭೂಮಂಡಲದ ತುಂಬ ಪಾಖಂಡಿಗಳು ಪ್ರಬಲರಾಗಿ ಯವನ ಹಾಗೂ ಮ್ಲೇಂಛರ ದುರಾಡಳಿತವು ನಿರಂಕುಶವಾಗಿ ನಡೆದು, ಪ್ರಜೆಗಳೆಲ್ಲರೂ ಅಧಾರ್ಮಿಕ ಶಾಸನದಿಂದ ಸಂತ್ರಸ್ತರಾಗಿ ಹಿಂಸೆಗೆ ಒಳಗಾದಾಗ ಶ್ರೀಹರಿಯು ಕಲ್ಕಿ ರೂಪದಿಂದ ಅವತರಿಸಿ ಎಲ್ಲರನ್ನೂ ಸಂಹರಿಸುವನು. ಆ ಕಾಲದಲ್ಲಿ ಜನರ ಪಾಪಗಳು ಬೆಳೆದು ಎಲ್ಲೆಡೆಗೂ ಭೀಕರ ಬರಗಾಲವು ಬಂದು ಪ್ರಜೆಗಳು ಉಪವಾಸದಿಂದ ಸಾಯುವರು. ಬೇನೆಯಿಂದ ಬಳಲುವರು, ಪರಸ್ಪರ ಹೋರಾಟದಿಂದ ಹತರಾಗುವರು.

ರಕ್ಷಣ ಮಾಡುವವರು ಇಲ್ಲದೆ ಪ್ರಜೆಗಳೆಲ್ಲ ಘೋರ ಸಂಕಟದಲ್ಲಿ ಬಿದ್ದು, ಗ್ರಾಮ ನಗರಗಳನ್ನು ತ್ಯಜಿಸಿ ಕಾಡು ಸೇರುವರು. ನದಿಯ ದಂಡೆಗುಂಟ ನೆಲೆಸುವರು. ಗಡ್ಡೆ, ಗೆಣಸು, ಎಲೆ, ಕಾಯಿಗಳನ್ನು ತಿಂದು, ಮರಗಳ ತೊಗಟೆಯನ್ನೇ ಉಟ್ಟುಕೊಂಡು ಕಷ್ಟಪಡುವರು. ಹೀಗೆ ದಿವ್ಯಮಾನದ ಒಂದು ಸಹಸ್ರ ವರ್ಷ ಕಲಿಯುಗವು ಸಂಧ್ಯಾಂಶ ಸಹಿತ ಮುಗಿದು, ಕೃತಯುಗವು ಪ್ರಾರಂಭವಾಗುವದು.

ಹೀಗೆ ನಿನಗೆ ನಾನು ಹಿಂದೆ ಆಗಿ ಹೋದ, ಈಗಿರುವ, ಮುಂದಾಗಲಿರುವ ರಾಜ ಮಹಾರಾಜರ ವಂಶದ ಬಳ್ಳಿಯು ಬೆಳೆದ ಹಾಗೂ ಬೆಳೆಯುವ ಬಗೆಯನ್ನು ಬಿತ್ತರಿಸಿದೆನು.

ಪರೀಕ್ಷಿತ ಮಹಾರಾಜನು ಹುಟ್ಟಿದಂದಿನಿಂದ ಮಹಾಪದ್ಮನಂದನ ಅಭಿಷೇಕದ ವರೆಗೆ ಒಂದು ಸಾವಿರದ ಐವತ್ತು ವರ್ಷಗಳಾಗುತ್ತವೆ. ಮಹಾಪದ್ಮನ ಅನಂತರ ಪೌಲೋಮರು, ಆಂಧ್ರರು ಕೂಡಿ ಎಂಟುನೂರ ಮೂವತ್ತಾರು ವರ್ಷ ಭಾರತವನ್ನು ಆಳುವರು. ಅರ್ಥಾತ್ ಪರೀಕ್ಷಿತರಾಜನ ಕಾಲದಿಂದ ಆಂಧ್ರರ ಆಳಿಕೆ ಕೊನೆಗೊಳ್ಳುವರೆಗೆ ಒಂದು ಸಾವಿರದ ಎಂಟುನೂರಾ ಎಂಭತ್ತಾರು ವರ್ಷಗಳು ಕಳೆದು ಹೋಗುವವು. ಮುಂದೆ ಬರುವ ಐವತ್ತೇಳು ಜನ ಆಂಧ್ರರಾಜರ ಆಳಿಕೆಯ ಕಾಲದಲ್ಲಿ ಸಪ್ತರ್ಷಿಗಳು ಅತ್ಯಂತ ಉದ್ದೀಪಿತವಾದ ಅಗ್ನಿಗೆ ಸಮಾನರಾಗಿ ದಿವ್ಯ ದೀಪ್ತಿಯಿಂದ ಬೆಳಗುತ್ತಾರೆ.

"ಸಪ್ತವಿಂಶತಿ ಪರ್ಯಂತೇ ಕೃತ್ಸ್ನೇ ನಕ್ಷತ್ರಮಂಡಲೇ ।
ಸಪ್ತರ್ಷಯಸ್ತು ತಿಷ್ಠಂತಿ ಪರ್ಯಾಯೇಣ ಶತಂ ಶತಂ ॥

ಸಪ್ತರ್ಷೀಣಾಂ ತು ಪರ್ಯಾಯೇ ಸ್ಮೃತಂ ವೈ ದಿವ್ಯಸಂಖ್ಯಯಾ ।
ಸಮಾದಿ ವರ್ಗಸ್ಮೃತಾ ಷಷ್ಠಿರ್ದಿವ್ಯಾಬ್ದಾನಿ ತು ಸಪ್ತಭಿಃ ॥

ಸಪ್ತರ್ಷಿಗಳು ಅಶ್ವಿನಿ, ಭರಣಿ ಮೊದಲಾದ ನಕ್ಷತ್ರಮಂಡಲದಲ್ಲಿರುವ ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದೊಂದರಲ್ಲಿ ಒಂದು ನೂರು ವರ್ಷ ಇರುವರು. ಒಟ್ಟು ಈ ಸಪ್ತಋಷಿಗಳ ಪರ್ಯಾಯ ಕಾಲವನ್ನು ದೇವಮಾನದಲ್ಲಿ ಎಣಿಸಿದರೆ ಅರವತ್ತೇಳು ವರ್ಷ ಆಗುವವು. ಸಪ್ತರ್ಷಿ ಮಂಡಲವು ರಾತ್ರಿ ಉದಯ ಹೊಂದಿದಾಗ, ಅದರ ಮೊದಲಿನ ಎರಡು ನಕ್ಷತ್ರಗಳ ನಡುವೆ ಹೊಳೆಯುವ ನಕ್ಷತ್ರದೊಡನೆ ಸಪ್ತರ್ಷಿಗಳು ನೂರು ವರ್ಷ ಕಾಲ ಗಗನ ಮಂಡಲವನ್ನು ಪರಿಭ್ರಮಿಸುವರು. ಇದೇ ಸಪ್ತರ್ಷಿಗಳ ನಕ್ಷತ್ರ ಪರ್ಯಾಯ.

ಪರೀಕ್ಷಿತ ರಾಜನ ಕಾಲದಲ್ಲಿ ಸಪ್ತರ್ಷಿಗಳು ಮಘಾನಕ್ಷತ್ರದಲ್ಲಿ ನೂರು ವರ್ಷ ಕಾಲ ಇದ್ದರು. ಅಲ್ಲಿಂದ ಮುಂದೆ ನೂರು ನೂರು ವರ್ಷಗಳಂತೆ ಇಪ್ಪತ್ತನಾಲ್ಕನೆಯ ಸಪ್ತರ್ಷಿಗಳ ಪರ್ಯಾಯ ಕಾಲ ನಡೆಯುವವರೆಗೆ ಬ್ರಾಹ್ಮಣ ಧರ್ಮವು ಅಲ್ಲಲ್ಲಿ ಜೀವ ಹಿಡಿದುಕೊಂಡಿರುವದು. ಅನಂತರ ಧರ್ಮ ಲೋಪವಾಗಿ ವಾತಾವರಣ ವೆಲ್ಲವೂ ಕಲುಷಿತ ವಾಗುವದು. ಪ್ರಜೆಗಳು ಮಿಥ್ಯಾವಾದಿಗಳಾಗುವರು. ಧರ್ಮಾರ್ಥ ಕಾಮಗಳಲ್ಲಿ ಯಾವ ಪುರುಷಾರ್ಥವನ್ನೂ ಆ ಜನರು ಸಾಧಿಸಲಾರರು. ವರ್ಣಾಶ್ರಮ ಧರ್ಮಕರ್ಮಗಳೆಲ್ಲ ಲೋಪವಾಗಿ ಯಜ್ಞ, ಯಾಗಾದಿಗಳು, ಉಪನಯನಾದಿ ಸಂಸ್ಕಾರಗಳು ನಿಂತುಹೋಗುವವು.

ಬ್ರಾಹ್ಮಣ ಸ್ತ್ರೀಯರು ಶೂದ್ರರೊಡನೆ ಸಂಗ ಬೆಳೆಸುವರು. ಶೂದ್ರ ಸುಂದರಿ ಯರನ್ನು ಬ್ರಾಹ್ಮಣರು ಕಾಮಿಸುವರು. ದ್ರವ್ಯದ ದುರಾಸೆಯಿಂದ ಬ್ರಾಹ್ಮಣರು ಶೂದ್ರರ ಕೈಂಕರ್ಯವನ್ನು ನಡೆಸುವರು. ಎಲ್ಲ ವರ್ಣದವರೂ ಬೇರೆ ವರ್ಣ, ಬೇರೆ ಜಾತಿ, ಬೇರೆ ಧರ್ಮಗಳೇ ಉತ್ತಮವೆಂದು ಭಾವಿಸಿ, ತಮ್ಮ ತಮ್ಮ ಜಾತಿಧರ್ಮ, ಕುಲಾಚಾರ ಬಿಟ್ಟು ಪರಧರ್ಮ ಅಂಗೀಕರಿಸುವರು, ಹೀಗಾಗಿ ಕಲಿಯುಗ ಕೊನೆಗೊಳ್ಳುವದರೊಳಗಾಗಿ ಅಲ್ಪಸ್ವಲ್ಪ ಅಲ್ಲಲ್ಲಿ ಉಳಿದುಕೊಂಡಿರುವ ಸನಾತನ ಧರ್ಮವು ಪೂರ್ಣ ನಾಶವಾಗುವದು.

'ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾಹನಿ ।
ಪ್ರತಿಪನ್ನಂ ಕಲಿಯುಗಂ ಪ್ರಮಾಣಂ ತಸ್ಯ ಮೇ ಶ್ರುಣು ॥'

ಶ್ರೀಕೃಷ್ಣ ಪರಮಾತ್ಮನು ಭೂಲೋಕವನ್ನು ಬಿಟ್ಟು ಪರಂಧಾಮಕ್ಕೆ ತೆರಳಿದ ದಿನವೇ ಕಲಿಯು ಭೂಮಂಡಲದಲ್ಲಿ ಕಾಲಿಟ್ಟನು. ಅಂದಿನಿಂದ ಇಂದಿನವರೆಗೆ ಮತ್ತು ಮುಂದೂ ಕೂಡ ಕಲಿಯ ಪ್ರಾಬಲ್ಯವು ಆಗುತ್ತಲೇ ಹೋಗುವದು.

ಈ ಕಲಿಯುಗದ ಪ್ರಮಾಣವು ಸಂಧ್ಯಾಂಶವನ್ನು ಕೂಡಿಸಿ ಮನುಷ್ಯಮಾನದಲ್ಲಿ ಒಟ್ಟು ನಾಲ್ಕು ಲಕ್ಷ, ಮೂವತ್ತೆರಡು ಸಾವಿರ ವರ್ಷ. ಸಂಧ್ಯಾಂಶ ಬಿಟ್ಟು ಕೇವಲ ಯುಗ ಪ್ರಮಾಣ ಮಾತ್ರ ಹಿಡಿದರೆ ಕಲಿಯುಗವು ದೇವತಾ ಮಾನದಿಂದ ಒಂದು ಸಾವಿರ ವರ್ಷ ಅವಧಿಯದು ಆಗುತ್ತದೆ.

ಕಲಿಯುಗವು ಪೂರ್ಣವಾಗಿ ಮುಗಿದ ಬಳಿಕ ಕೃತಯುಗವು ಪ್ರಾರಂಭವಾಗುವದು. ಸಹದೇವನು ಪುರೂರವ ಹಾಗೂ ಇಕ್ಷ್ವಾಕು ಮಹಾರಾಜರ ವಂಶಗಳಿಗೆ ಸೇರಿದವನೆಂದು ಹೇಳುತ್ತಾರೆ. ಪುರೂರವ ವಂಶದ ದೇವಾಪಿಯು ಇಕ್ಷ್ವಾಕು ವಂಶದ ಸಹದೇವನು ತಮ್ಮ ಅಸಾಧಾರಣ ಯೋಗಾಭ್ಯಾಸದ ಬಲದಿಂದ ಪ್ರಖ್ಯಾತರಾಗಿ ಕಲಾಪ ಗ್ರಾಮದಲ್ಲಿ ನೆಲೆಸಿರುವರು. ಇಪ್ಪತ್ತೊಂಬತ್ತನೇ ಚತುರ್ಯುಗದ ಪ್ರಾರಂಭದಲ್ಲಿ ಇವರಿಬ್ಬರೂ ಕ್ಷತ್ರಿಯ ವಂಶದ ಮೂಲಪುರುಷರಾಗುವರು.

ಮನುವಿನ ಮಗ ಸುವಚನನು ಇಕ್ಷ್ವಾಕು ಸಂತತಿಯವರಿಗೂ, ದೇವಾಪಿಯ ಮಗನಾದ ಸತ್ಯನು ಪುರೂರವ ವಂಶಕ್ಕೂ ಮೂಲಪುರುಷರಾಗಿ ಕ್ಷತ್ರಿಯ ಜಾತಿಯ ಪುನಃಸಂಸ್ಥಾಪಕರೆನಿಸುವರು.

**"ನವವಿಂಶೇ ಯುಗೇಽಸೌ ವೈ ವಂಶಸ್ಯಾದಿರ್ಭವಿಷ್ಯತಿ ।**
**ದೇವಾಪೇಸ್ತು ಸುತಃಸತ್ಯಃ ಐಲಾನಾಂ ಭವಿತಾ ನೃಪಃ ।**
**ಕ್ಷತ್ರಪ್ರವರ್ತಕಾವೇತೌ ಭವಿಷ್ಯೇ ತು ಚತುರ್ಯುಗೇ ॥**

ಕಲಿಯುಗವು ಕಳೆದು ಕೃತಯುಗದ ಆರಂಭದಲ್ಲಿ, ಆ ಕಾಲದ ಕ್ಷತ್ರಿಯ ರಾಜರೊಡನೆ ಸಪ್ತರ್ಷಿಗಳು ಧರ್ಮಚಕ್ರ ಪ್ರವರ್ತಕರಾಗಿ ಇರುವರು.

ಮುಂದೆ ತ್ರೇತಾ, ದ್ವಾಪರಯುಗ, ಕಲಿಯುಗಗಳಲ್ಲಿ ಆ ಸಪ್ತರ್ಷಿಗಳು ಬ್ರಹ್ಮ, ಕ್ಷಾತ್ರ ಕುಲಗಳ ಉತ್ಪತ್ತಿ ಹಾಗೂ ವಂಶಾಭಿವೃದ್ಧಿಗಳಿಗೆ ಕಾರಣಪುರುಷರಾಗಿ ಧರ್ಮಚಕ್ರವನ್ನು ಪರಿವರ್ತನಗೊಳಿಸುತ್ತಲೇ ಇರುವರು.

ಎಲ್ಲ ಮನ್ವಂತರಗಳಲ್ಲಿಯೂ ಯುಗಗಳಲ್ಲಿಯೂ ರಾಜರೊಡನೆ ತಾವೂ ಆ ಸಪ್ತರ್ಷಿಗಳು ಮೈದೋರಿ, ಅವತರಿಸಿ, ಬ್ರಹ್ಮಕ್ಷತ್ರ ವಂಶಗಳ ಧಾರ್ಮಿಕ ಉತ್ಕರ್ಷವನ್ನು ಸಾಧಿಸುವರು. ಈ ಋಷಿಗಳ ಜೊತೆಗೆ ಪುರೂರವ, ಇಕ್ಷ್ವಾಕು ವಂಶದ ರಾಜರೂ ತ್ರೇತಾಯುಗದಲ್ಲಿ ಹುಟ್ಟಿ ಕಲಿಯುಗದಲ್ಲಿ ಕ್ಷೀಣರಾಗುವರು.

ಹಾಗೆ ಮನ್ವಂತರ ಮುಗಿಯುವವರೆಗೆ ಆಯಾ ಯುಗಧರ್ಮಗಳನ್ನು ಅನುಸರಿಸುವರು. ಪುರೂರವ ಹಾಗೂ ಇಕ್ಷ್ವಾಕು ವಂಶಗಳೇ ಭೂಮಂಡಲದ ಎಲ್ಲ ಕ್ಷತ್ರಿಯ ರಾಜರ ವಂಶಗಳಿಗೆ ಮೂಲಭೂತವಾದ ಕುಲಗಳು. ಭೂಲೋಕದಲ್ಲಿಯ ಎಲ್ಲ ರಾಜಕುಲಗಳು ಒಂದಿಲ್ಲ ಒಂದು ರೀತಿಯಿಂದ ಈ ಪುರೂರವ ಇಕ್ಷ್ವಾಕು ವಂಶಗಳಿಗೆ ಸಂಬಂಧ ಪಟ್ಟವುಗಳೇ ಇರುತ್ತವೆ.

ಪುರೂರವ ವಂಶದಲ್ಲಿ ಹುಟ್ಟಿದ ರಾಜರು ಅಸಂಖ್ಯರು. ಇಕ್ಷ್ವಾಕು ವಂಶದ ರಾಜರು ಅವರಷ್ಟು ಪ್ರಮಾಣದಲ್ಲಿಲ್ಲ. ಆದರೂ ತ್ರೇತಾಯುಗದಲ್ಲಿ ಹುಟ್ಟುವರು. ಕಲಿಯುಗದಲ್ಲಿ ನಾಶಹೊಂದುವರು. ಪುರೂರವ ವಂಶದಲ್ಲಿ ಒಂದುನೂರು ರಾಜಮನೆತನಗಳು, ಭೋಜಕುಲದಲ್ಲಿ ಎರಡುನೂರು ರಾಜವಂಶಗಳು ಇರುತ್ತವೆ. ಈ ಎರಡೂ ಮನೆತನ ಬಿಟ್ಟು, ಉಳಿದ ಕ್ಷತ್ರಿಯ ರಾಜರ ನಾಕುನೂರು ಕುಲಗಳು ಇರುತ್ತವೆ. ಅವರಲ್ಲಿ ಪ್ರತಿವಿಂಧ್ಯರು ನೂರು, ನಾಗ, ಹಯರು ಕೂಡಿ ನೂರು, ಧಾರ್ತರಾಷ್ಟ್ರರು ನೂರು, ಜನಮೇಜಯ ಕುಲದವರು ಎಂಬತ್ತು, ಪುರೂಗಳು, ಬ್ರಹ್ಮದತ್ತರು ನೂರಾರು ಜನರು ಇರುವರು.

ಅನಂತರ ನೂರು ಜನ ಪಾಂಚಾಲ ರಾಜರು, ನೂರು ಕಾಶೀ ಕುಲದವರು, ನೂರು ಕುಶ ವಂಶದವರು, ಮುಂದಿನ ರಾಜ್ಯಗಳನ್ನು ಆಳುವರು. ಇದರಂತೆ, ನೀಪ, ಶಶಿಬಿಂದು, ಮುಂತಾದ ಎರಡು ಸಾವಿರ ಜನ ರಾಜರು ರಾಜ್ಯವಾಳುವರು. ಇವರೆಲ್ಲರೂ ಯಜ್ಞ ಯಾಗ ಮಾಡಿಸಿ ಲಕ್ಷಾವಧಿ ರೂಪಾಯಿ ದಕ್ಷಿಣೆ ಕೊಟ್ಟು, ಕೀರ್ತಿಶಾಲಿಗಳಾಗುವರು.

ಈ ವೈವಸ್ವತ ಮನ್ವಂತರದಲ್ಲಿ ಆಗಿಹೋದ ಮತ್ತು ಆಗಲಿರುವ ರಾಜ ಮಹಾರಾಜರೆಲ್ಲರ ವಿವರವಾದ ವೃತ್ತಾಂತವನ್ನು ಪ್ರಮಾಣ ಸಂಖ್ಯೆಯನ್ನು ಯಾರಿಗೂ ಸರಿಯಾಗಿ ಹೇಳಲಿಕ್ಕೆ ಶಕ್ಯವಿಲ್ಲ.

ವೈವಸ್ವತ ಮನ್ವಂತರದಲ್ಲಿ ಈಗಾಗಲೇ ಇಪ್ಪತ್ತೆಂಟು ಚತುರ್ಯುಗಗಳು ಕಳೆದುಹೋಗಿವೆ. ಈ ಪ್ರಕೃತ ವೈವಸ್ವತ ಮನ್ವಂತರದಲ್ಲಿ ನಲವತ್ತಮೂರು ಚತುರ್ಯುಗಗಳು ಆಗಲಿರುವವು. ಅನಂತರ ಈ ಮನ್ವಂತರವು ಕೊನೆಗೊಳ್ಳುವದು.

ಪ್ರಕೃತ ನಾವು ಇದ್ದ ಇಪ್ಪತ್ತೆಂಟನೆಯ ಚತುರ್ಯುಗದಲ್ಲಿ ಅನೇಕ ರಾಜರ್ಷಿಗಳು, ಬ್ರಹ್ಮರ್ಷಿಗಳು ಆಗಿಹೋದರು.

ಅವರೆಲ್ಲರ ಹುಟ್ಟು ಹಾಗೂ ಬೆಳವಣಿಗೆಗಳನ್ನು ಸಂಕ್ಷಿಪ್ತವಾಗಿ ದಿಗ್ದರ್ಶನ ಮಾಡಿದ್ದಾಯಿತು. ಈ ಎಲ್ಲ ರಾಜ ಮಹಾರಾಜರ ಹಾಗೂ ಋಷಿಮುನಿಗಳ ವೃತ್ತಾಂತವನ್ನು ಕೇಳಿದವರಿಗೆ ಹಾಗೂ ಹೇಳಿದವರಿಗೆ ಆಯುಷ್ಯ, ಕೀರ್ತಿ, ಸಂಪತ್ತು, ಸಂತಾನಲಾಭ. ಆಗಿ ಮುಂದೆ ಸ್ವರ್ಗ ಸೌಖ್ಯ ಪ್ರಾಪ್ತವಾಗುವದು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರ ಎಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು.*

—o—

**ಋಷಿಗಳು ಅಂದದ್ದು :**

**"ನ್ಯಾಯೇನಾರ್ಜನಮರ್ಥಾನಾಂ ವರ್ಧನಂ ಚಾಭಿರಕ್ಷಣಮ್ ।**
**ಸತ್ಪಾತ್ರ ಪ್ರತಿಪತ್ತಿಶ್ಚ ಸರ್ವಶಾಸ್ತ್ರೇಷು ಪಠ್ಯತೇ ॥"**

**ಋಷಿಗಳು :-** ದ್ರವ್ಯವನ್ನು ನ್ಯಾಯಮಾರ್ಗದಿಂದ ಸಂಪಾದಿಸಬೇಕು. ಮತ್ತು ಆ ಸಂಪತ್ತನ್ನು ಸರಿಯಾಗಿ ಗಳಿಸಿ, ಬೆಳೆಸಿ, ರಕ್ಷಿಸಿ, ಸತ್ಪಾತ್ರದಲ್ಲಿ ದಾನಮಾಡಬೇಕು. ಇದು ಎಲ್ಲ ಶಾಸ್ತ್ರಗಳ ಅಭಿಪ್ರಾಯ. ಯಾವ ದಾನದಿಂದ ಶ್ರೀಮಂತನಾದ ಮನುಷ್ಯನು ಕೃತಕೃತ್ಯನಾಗುವನು ? ಇದನ್ನು ನನಗೆ ಬಿತ್ತರಿಸಿ ಹೇಳು.

**ಸೂತ :-** ದಾನ ಧರ್ಮದ ವಿಷಯದಲ್ಲಿ ಸರ್ವ ಸಮರ್ಥನಾದ ಮಹಾವಿಷ್ಣುವು ಹೇಳಿದ್ದನ್ನು ನಿಮಗೆ ನಿರೂಪಿಸುತ್ತೇನೆ.

ಶ್ರೀಹರಿಯು ಸರ್ವ ಪಾಪಗಳನ್ನು ಪರಿಹರಿಸುವ ಮತ್ತು ಆಯುಷ್ಯವರ್ಧಕವೂ ಆದ ಪುಣ್ಯದಾನಗಳು ಈ ಭೂಲೋಕದಲ್ಲಿ ಹದಿನಾರು ಇರುತ್ತವೆ, ಎಂದು ಹೇಳಿದ್ದಾನೆ.

ಈ ದಾನಗಳಲ್ಲಿ ಬ್ರಹ್ಮ, ವಿಷ್ಣು, ಮಹಾದೇವ ಮುಂತಾದ ದೇವತೆಗಳಿಂದ ಪೂಜಿತವಾದ ದಾನವೆಂದರೆ ತುಲಾಪುರುಷ ದಾನ, ಹಿರಣ್ಯಗರ್ಭ ದಾನ, ಬ್ರಹ್ಮಾಂಡ ದಾನ, ಕಲ್ಪವೃಕ್ಷ ದಾನ, ಸಾವಿರಗೋದಾನ, ಬಂಗಾರದ ಕಾಮಧೇನುವಿನ ದಾನ, ಬಂಗಾರದಕುದುರೆಯ ದಾನ, ಬಂಗಾರದರಥದ ದಾನ, ಬಂಗಾರದಆನೆಯ ದಾನ, ಪಂಚಲಾಂಗಲ ದಾನ, ಭೂದಾನ, ವಿಷ್ಣುಚಕ್ರದ ದಾನ, ಕಲ್ಪಲತಾ ದಾನ, ಸಪ್ತಸಾಗರ ದಾನ, ರತ್ನಧೇನು ದಾನ, ಮಹಾಭೂತಘಟದಾನ.

ಹೀಗೆ ಒಟ್ಟು ಹದಿನಾರು ದಾನಗಳು ಮಹಾದಾನ ಎನಿಸಿಕೊಳ್ಳುತ್ತವೆ. ಈ ಎಲ್ಲ ದಾನಗಳನ್ನು ಪೂರ್ವದಲ್ಲಿ ಭಗವಾನ್ ವಾಸುದೇವನು ಅವನ ಮಗನಾದ ಪ್ರದ್ಯುಮ್ನನು ಹಾಗೂ ಅಂಬರೀಷ ಮಹಾರಾಜನು, ಕಾರ್ತವೀರ್ಯಾರ್ಜುನನು, ಪ್ರಲ್ಹಾದರಾಜ, ಭರತರಾಜ ಮುಂತಾದವರೆಲ್ಲರೂ ವಿಧಿಪೂರ್ವಕವಾಗಿ ಕೊಟ್ಟು ಧನ್ಯರಾಗಿದ್ದಾರೆ.

ಈ ದಾನಗಳು ಸಹಸ್ರಾರು ವಿಘ್ನಗಳನ್ನು ಪರಿಹರಿಸಿ, ಮಾನವನನ್ನು ದೇವರ ಅನುಗ್ರಹಕ್ಕೆ ಪಾತ್ರರನ್ನಾಗಿಮಾಡುತ್ತವೆ. ಈ ಹದಿನಾರು ದಾನಗಳಲ್ಲಿ ಯೋಗ್ಯತೆ ಇದ್ದವರು ಎಲ್ಲ ದಾನಗಳನ್ನು ನೀಡಿದರೆ ಬಹಳ ಪುಣ್ಯ. ಇವೆಲ್ಲ ದಾನಗಳನ್ನು ಮಾಡುವ ಯೋಗ್ಯತೆ ಇಲ್ಲದಿದ್ದವರು ಒಂದೊಂದನ್ನಾದರೂ ದಾನವನ್ನು ಮಾಡಬೇಕು.

ಈ ದಾನ ಕಾರ್ಯವು ನೆರವೇರಬೇಕಾದರೆ ಶ್ರೀಹರಿಯ ಅನುಗ್ರಹದಿಂದ ಮಾತ್ರ ಸಾಧ್ಯ. ಆದುದರಿಂದ, ಈ ಮಹಾದಾನಗಳನ್ನು ಕೊಡುವ ಮುನ್ನ ಶ್ರೀಹರಿಯನ್ನು ಮೊದಲು ಪೂಜಿಸಬೇಕು. ಅನಂತರ ಮಹಾದೇವ ಮತ್ತು ಗಣಪತಿ ಇವರಿಬ್ಬರನ್ನೂ ಪೂಜೆಮಾಡಿ ಬ್ರಾಹ್ಮಣರ ಅಪ್ಪಣೆ ಪಡೆದುಕೊಂಡು, ಈ ದಾನ ಯಜ್ಞವನ್ನು ನೆರವೇರಿಸಬೇಕು. ಇದನ್ನು

ಪೂರ್ವಕಾಲದಲ್ಲಿ ಮನು ಮಹಾರಾಜನ ಪ್ರಶ್ನೆಗೆ ಮತ್ಸ್ಯರೂಪಿ ಪರಮಾತ್ಮನು ಉತ್ತರ ರೂಪವಾಗಿ ಬಿತ್ತರಿಸಿದನು. ಅದನ್ನೇ ನಾನು ನಿಮಗೆ ತಿಳಿಸುತ್ತೇನೆ ಕೇಳಿರಿ :

**ಮನು** :- ಪರಮ ಪವಿತ್ರವಾದ ರಹಸ್ಯಮಯವಾದ ಮಹಾದಾನಗಳು ಯಾವವು? ಅವುಗಳನ್ನು ನನಗೆ ಹೇಳು.

**ಮತ್ಸ್ಯ** :- ಷೋಡಶ ಮಹಾದಾನವೆಂದು ಪ್ರಸಿದ್ಧವಾದ ದಾನಗಳನ್ನು ನಿನಗೆ ಕ್ರಮವಾಗಿ ಹೇಳುತ್ತೇನೆ ಕೇಳು. ಮೊದಲನೆಯದಾಗಿ ತುಲಾಪುರುಷ ದಾನದ ವಿಷಯ ತಿಳಿಸುತ್ತೇನೆ ಕೇಳು. ಈ ತುಲಾಪುರುಷ ದಾನವು ಒಂದು ಯಜ್ಞವಿದ್ದಂತೆ. ಇದನ್ನು ವಿಧಿಪೂರ್ವಕವಾಗಿ ಮಾಡುವದರಿಂದ ಮಹಾ ಫಲವುಂಟು.

''ದ್ರವ್ಯ ಬ್ರಾಹ್ಮಣ ಲಾಭೇ ವಾಶ್ರದ್ಧಾವಾಯತ್ರ ಜಾಯತೇ ।
ತೀರ್ಥೇ ವಾಽಯತನೇ ಗೋಷ್ಠೀ ಕೂಪಾಽರಾಮ ಸರಿತ್ಸು ಚ ।
ಮಹಾದಾನಾನಿ ದೇಯಾನಿ ಸಂಸಾರ ಭಯ ಭೀರುಣಾ ॥

ಈ ಹದಿನಾರು ದಾನಗಳನ್ನು ಕೂಡ ದಕ್ಷಿಣಾಯಣ, ಉತ್ತರಾಯಣ, ಉಷಃಕಾಲ, ವ್ಯತೀಪಾತ, ಯುಗಾದಿ, ಸಂಕ್ರಮಣ, ವೈಧೃತಿ, ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಹುಣ್ಣಿಮೆ, ದ್ವಾದಶಿ, ಅಷ್ಟಕಾದಿತಿಥಿ, ಯಜ್ಞಕಾಲ, ಉತ್ಸವ ಸಮಯ, ವಿವಾಹ ಪ್ರಸಂಗ, ಕೆಟ್ಟಕನಸು ಬಿದ್ದಾಗ, ಒಳ್ಳೇ ಬ್ರಾಹ್ಮಣರು ಸಿಕ್ಕಾಗ, ದ್ರವ್ಯಲಾಭವಾದಾಗ, ಮಾಡಬೇಕು. ಯಾವುದಾದರೂ ಪುಣ್ಯತೀರ್ಥ, ಅಥವಾ ದೇವಾಲಯದಲ್ಲಿ, ದನಕಟ್ಟುವ ಸ್ಥಳದಲ್ಲಿ, ಉಪವನದಲ್ಲಿ, ಯಾವುದಾದರೂ ನದಿಯ ದಂಡೆಯಲ್ಲಿ, ಮನೆಯಲ್ಲಿ ಅಥವಾ ಯಾವುದಾದರೂ ರಮ್ಯಸ್ಥಳದಲ್ಲಿ ಈ ದಾನಕಾರ್ಯ ನೆರವೇರಿಸುವದು ಪ್ರಶಸ್ತವಾಗಿದೆ.

ಮಾನವನ ಜೀವಿತವು ಅನಿತ್ಯ, ಅಶಾಶ್ವತ, ಚಂಚಲ. ಈ ದೇಹವು ಎಂದು ಯಾವ ಕ್ಷಣದಲ್ಲಿ ಬಿದ್ದುಹೋಗುವದೋ ನಿಯಮವಿಲ್ಲ.

ಆದುದರಿಂದ ಮೃತ್ಯು ಬಂದು ತನ್ನ ಕೂದಲಿಗೆ ಕೈಹಾಕಿ ಈಗ ಎಳೆಯುತ್ತಿದ್ದಾನೆ ಎಂದು ತಿಳಿದು ಧರ್ಮಕಾರ್ಯವನ್ನು ಆದಷ್ಟು ಬೇಗ ದ್ರವ್ಯಾನುಕೂಲ್ಯ, ಪುತ್ರಾನುಕೂಲ್ಯ, ಕಾಲಾನುಕೂಲ್ಯಗಳನ್ನು ನೋಡಿಕೊಂಡು ಇದ್ದಾಗ ಮಾಡಿಬಿಡಬೇಕು.

''ಅನಿತ್ಯಂ ಜೀವಿತಂ ಯಸ್ಮಾದ್ವಸುಚಾತೀವಚಂಚಲಂ ।
ಕೇಶೇಷ್ಟಿವ ಗೃಹೀತಃ ಸನ್ ಮೃತ್ಯುನಾ ಧರ್ಮಮಾಚರೇತ್ ॥''

ತುಲಾಪುರುಷದಾನಕ್ಕಾಗಿ, ಒಳ್ಳೇ ಬ್ರಾಹ್ಮಣರನ್ನು ಆಹ್ವಾನ ಮಾಡಬೇಕು. ಶುಭಮುಹೂರ್ತದಲ್ಲಿ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿ ಹದಿನಾರು ಅಥವಾ ಹನ್ನೆರಡು ಇಲ್ಲವೆ ಹತ್ತು ಮೊಳದ ಮಂಟಪ, ನಾಲ್ಕು ಬಾಗಿಲುಗಳನ್ನೂ ಮಾಡಿಸಬೇಕು.

ಐದು ಅಥವಾ ಏಳು ಮೊಳದ ವೇದಿಕೆಯನ್ನು ನಿರ್ಮಿಸಬೇಕು. ನಾಲ್ಕು ಮೊಳದ ಭದ್ರಾಸನವನ್ನೂ, ಮಧ್ಯದಲ್ಲಿ ಒಳ್ಳೇ ತೋರಣವನ್ನೂ ರಚಿಸಬೇಕು. ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಅಗ್ನಿಕುಂಡಗಳನ್ನು ನಿರ್ಮಿಸಿ ಅವುಗಳಿಗೆಲ್ಲ ಯೋನಿ ಮುಖಗಳನ್ನು ಮಾಡಿಸಬೇಕು.

ಪೂರ್ಣಕುಂಭ, ಆಸನ, ಎರಡು ತಾಮ್ರದ ಪಾತ್ರೆ, ಯಜ್ಞಪಾತ್ರೆ, ಎಳ್ಳು, ತುಪ್ಪ, ಧೂಪ, ಹೂವು, ಹಾರ, ಉಪಹಾರ ಉಳಿದೆಲ್ಲ ಪೂಜೆಯ ಉಪಕರಣ ಮುಂತಾದವುಗಳನ್ನು ಸಿದ್ಧಗೊಳಿಸಬೇಕು. ಈಶಾನ್ಯ ದಿಕ್ಕಿನಲ್ಲಿ ಒಂದು, ಉತ್ತರ ದಿಕ್ಕಿನಲ್ಲಿ ಒಂದು ಮೊಳದ ವೇದಿಕೆಗಳನ್ನು ಗ್ರಹದೇವತಾದಿ ಪೂಜೆಗಾಗಿ ನಿರ್ಮಿಸಬೇಕು. ಈ ವೇದಿಕೆಗಳ ಮೇಲೆ ಬ್ರಹ್ಮ, ಶಿವ, ವಿಷ್ಣು ಮುಂತಾದ ದೇವತೆಗಳ ಪೂಜೆಯನ್ನು ಮಾಡಬೇಕು.

ಸುತ್ತಲೂ ದಿಕ್ಪಾಲಕರ ವರ್ಣಾನುರೂಪವಾದ ನಿಶಾನೆಗಳನ್ನೂ, ನಡುವೆ ಕಿರುಗೆಜ್ಜೆ ಕಟ್ಟಿದ ಧ್ವಜವನ್ನು ನೆಡಬೇಕು. ನಾಲ್ಕು ದ್ವಾರಗಳಲ್ಲಿ ಸುಂದರವಾಗಿ ತೋರಣ ಕಟ್ಟಬೇಕು ಮತ್ತು ಪ್ರತಿಯೊಂದು ದ್ವಾರದ ಎರಡು ತುದಿಯಲ್ಲಿ ಎರಡೆರಡು ಪೂರ್ಣಕುಂಭ ಇರಿಸಬೇಕು. ಅವುಗಳಲ್ಲಿ ರತ್ನಹಾಕಿ, ಮೇಲೆ ಬಟ್ಟೆ ಹೊದಿಸಿ, ಗಂಧ ಹಚ್ಚಿ, ಮಾಲೆಹಾಕಿ, ಅಲಂಕರಿಸಬೇಕು. ಈ ವೇದಿಕೆಯ ಎದುರು, ಒಂದೊಂದು ಮೊಳದ ತಗ್ಗುಗಳನ್ನು ತೋಡಿ, ಅಲ್ಲಿ ಐದು ಮೊಳ ಎತ್ತರವಾದ ಮತ್ತಿ, ಇಂಗಳ, ಶ್ರೀಗಂಧ, ದೇವದಾರು, ಶಿವನೆ, ಬಿಲ್ವ, ಕಡಹ, ನಾಗಕೇಸರ ಮುಂತಾದ ಯಾವದಾದರೊಂದು ಜಾತಿಯ ಮರದ ಎರಡು ಕಂಬಗಳನ್ನು ಗಟ್ಟಿಯಾಗಿ ನೆಡಬೇಕು. ಅವೆರಡೂ ಕಂಬಗಳ ನಡುವಿನ ಅಂತರ ನಾಲ್ಕು ಮೊಳವಿರಬೇಕು.

ಆ ಎರಡೂ ಕಂಬಗಳ ಮೇಲೆ ಒಂದು ಅಡ್ಡವಾಗಿ ಮತ್ತೊಂದು ಗಟ್ಟಿಯಾದ ಅದೇ ಜಾತಿಯ ಕಟ್ಟಿಗೆಯ ಎಳೆಯನ್ನು ಹಾಕಿ ಅದೇ ಕಟ್ಟಿಗೆಯಿಂದ ಮಾಡಿದ ತಕ್ಕಡಿಯ ದಂಡಿಗೆಯನ್ನು ಕಟ್ಟಬೇಕು. ಆ ತಕ್ಕಡಿಯನ್ನು ಕಬ್ಬಿಣದ ಸರಪಳಿಯಿಂದ ಗಟ್ಟಿಯಾಗಿ ಆ ಮೇಲಿನ ಕಟ್ಟಿಗೆಗೆ ಬಿಗಿಯಬೇಕು. ಆ ತಕ್ಕಡಿಯನ್ನು ಹೂವು, ಗಂಧ, ಚಿನ್ನ, ರೇಷ್ಮೆ, ವಸ್ತ್ರ, ಹೂಮಾಲೆ, ಮುಂತಾದವುಗಳಿಂದ ಅಲಂಕರಿಸಬೇಕು. ಒಂದು ಬಂಗಾರದ ಪುರುಷ ವಿಗ್ರಹವು ಮೇಲೆ ನಟ್ಟನಡುವೆ ಆ ತಕ್ಕಡಿಯನ್ನು ಸರಿಯಾಗಿ ಹಿಡಿದುಕೊಂಡಂತೆ ಕಲ್ಪಿಸಬೇಕು. ದಂಡಿಗೆ ನಾಲ್ಕು ಮೊಳ ಉದ್ದ ಹತ್ತು ಅಂಗುಲ ದಪ್ಪವಾಗಿರಬೇಕು. ಎರಡೂ ತುದಿಗಳಲ್ಲಿ ಸರಪಳಿಯನ್ನು ತೂಗುಬಿಡಬೇಕು.

ಅನಂತರ ವೇದಶಾಸ್ತ್ರ ಬಲ್ಲ, ಸಾತ್ವಿಕ ವೇಷ ಧರಿಸಿದ ಋತ್ವಿಜರನ್ನು ಈ ಕಾರ್ಯಕ್ಕಾಗಿ ಬರಲು ಪ್ರಾರ್ಥಿಸಬೇಕು. ಅದರಂತೆ ವೇದ, ವೇದಾಂತ ಪಾರಂಗತರಾದ, ಸದಾಚಾರ ಸಂಪನ್ನರಾದ, ಪುರಾಣ ಧರ್ಮಶಾಸ್ತ್ರ ಬಲ್ಲ ಗುರುಗಳನ್ನು ಒಳ್ಳೇ ಬಟ್ಟೆ ಉಡಿಸಿ ಬಂಗಾರದ ಆಭರಣ ತೊಡಿಸಿ ಪೂಜಿಸಬೇಕು. ಬಗೆಬಗೆಯ ಬಣ್ಣದ ಬಟ್ಟೆಗಳಿಂದ ಮೇಲ್ಗಟ್ಟನ್ನು ಕಟ್ಟಿ ಹೂ ಹಣ್ಣು ಅರಿಷಿಣಕುಂಕುಮಗಳಿಂದ ಅಲಂಕರಿಸಬೇಕು. ಅನಂತರ ಆರ್ಯದೇಶದ ಸದಾಚಾರ ಸಂಪನ್ನರಾದ ವೇದ ವೇದಾಂತ ಪರಿನಿಷ್ಠಿತರಾದ ರೂಪವೇಷವಂಶಜ್ಞಾನಸಂಪನ್ನರಾದ ಋತ್ವಿಜರನ್ನು ವರಿಸಬೇಕು. ಅನಂತರ ವೇದಾಂತ ಪಂಡಿತನೂ ಪುರಾಣ ಶಾಸ್ತ್ರಗಳ ರಹಸ್ಯವನ್ನು ಬಲ್ಲವನೂ ಆದ ಸರ್ವವೈದಿಕ ಕಾರ್ಯದಕ್ಷನೂ ಆದ ಆಚಾರ್ಯನನ್ನು ಶುಭ್ರವಸ್ತ್ರ, ಚಿನ್ನದ ಉಡುದಾರ ರತ್ನಹಾರಗಳಿಂದ ಅಲಂಕರಿಸಿ ಅಲ್ಲಿಗೆ ಕರೆತರಬೇಕು. ಪೂರ್ವ ದಿಕ್ಕಿನಲ್ಲಿ ಋಗ್ವೇದವನ್ನು ಪಾರಾಯಣಮಾಡುವ ಇಬ್ಬರು ಪುರೋಹಿತರನ್ನು, ದಕ್ಷಿಣದಲ್ಲಿ ಇಬ್ಬರು ಯಜುರ್ವೇದ

ವಿದ್ವಾಂಸರನ್ನು, ಪಶ್ಚಿಮದಲ್ಲಿ ಇಬ್ಬರು ಸಾಮವೇದ ಹಾಗೂ ಉತ್ತರಕ್ಕೆ ಇಬ್ಬರು ಅಥರ್ವಣವೇದ ವಿದ್ವಾಂಸರನ್ನು ಕೂಡಲು ಪ್ರಾರ್ಥಿಸಬೇಕು.

ಅನಂತರ ವಿನಾಯಕ ಮುಂತಾದ ದೇವತೆಗಳನ್ನೂ ಸೂರ್ಯಾದಿ ಗ್ರಹಗಳನ್ನೂ, ಇಂದ್ರಾದಿ ಲೋಕಪಾಲಕರನ್ನೂ, ಅಷ್ಟಾವಸುಗಳನ್ನೂ, ದ್ವಾದಶಾದಿತ್ಯರನ್ನೂ, ಮರುದ್ಗಣಗಳನ್ನೂ, ತ್ರಿಮೂರ್ತಿಗಳಾದ ಹರಿಹರ ಬ್ರಹ್ಮರನ್ನೂ, ಸೂರ್ಯ ವನಸ್ಪತಿಗಳನ್ನೂ ಅವರವರ ಮಂತ್ರಗಳಿಂದ ಆಹ್ವಾನಿಸಿ ಪೂಜಿಸಿ ಪ್ರಾರ್ಥಿಸಿ ನಾಲ್ಕು ನಾಲ್ಕು ಹೋಮಮಾಡಬೇಕು.

ಅನಂತರ ಗ್ರಹಹೋಮ ಮಾಡಿ ಲೋಕಪಾಲ, ವಸು, ಆದಿತ್ಯ, ಮರುದ್ಗಣ, ಬ್ರಹ್ಮ, ವಿಷ್ಣು, ಸೂರ್ಯ, ವನಸ್ಪತಿ, ಮುಂತಾದವರನ್ನು ಉದ್ದೇಶಿಸಿ, ತತ್ತನ್ಮಂತ್ರಗಳ ಜಪವನ್ನು ಬ್ರಾಹ್ಮಣರಿಂದ ಪ್ರತ್ಯೇಕವಾಗಿ ಏರ್ಪಡಿಸಬೇಕು. ಈ ಎಲ್ಲ ದೇವತೆಗಳನ್ನು ಉದ್ದೇಶಿಸಿ ವೇದಸೂಕ್ತಮಂತ್ರಗಳನ್ನು ಕ್ರಮವಾಗಿ ಪಠಿಸಬೇಕು. ಹೋಮಕಾರ್ಯವು ಮುಗಿದ ಬಳಿಕ ಮಂಗಲ ವಾದ್ಯಗಳನ್ನು ಮೊಳಗಿಸುತ್ತ ಗುರುವು ಕೈಯಲ್ಲಿ ಬಲಿಪುಷ್ಪಗಳನ್ನು ಹಿಡಿದುಕೊಂಡು ಈ ಕೆಳಗಿನ ಮಂತ್ರಗಳಿಂದ ಯಜಮಾನನೊಂದಿಗೆ ಲೋಕಪಾಲಕರನ್ನು ಆಹ್ವಾನಿಸಬೇಕು.

''ಓಂಇಂದ್ರಾಯನಮಃ''

''ಏಹ್ಯೇಹಿ ಸರ್ವಾಮರ ಸಿದ್ಧಸಾಧ್ಯೈರಭಿಷ್ಟುತೋ ವಜ್ರಧರೋಽಮರೇಶಃ
ಸಂವೀಜ್ಯಮಾನೋಽ ಪ್ಸರಸಾಂ ಗಣೇನ ರಕ್ಷಾಧ್ವರಂ ನೊ ಭಗವನ್ನಮಸ್ತೇ।''

''ಓಂಅಗ್ನಯೇನಮಃ''

''ಏಹ್ಯೇಹಿ ಸರ್ವಾಽಮರ ಹವ್ಯವಾಹ ಮುನಿ ಪ್ರವೀರೈರಭಿತೋಽಭಿಜುಷ್ಟಃ।
ತೇಜಸ್ವಿನಾ ಲೋಕಗಣೇನ ಸಾರ್ಧಂ ಮಮಾಧ್ವರಂ ರಕ್ಷ ಕವೆ!
ನಮಸ್ತೇ॥''

''ಓಂಯಮಾಯನಮಃ''

''ಏಹ್ಯೇಹಿ ವೈವಸ್ವತ ಧರ್ಮರಾಜ । ಸರ್ವಾಮರೈರರ್ಚಿತ ದಿವ್ಯಮೂರ್ತೇ ।
ಶುಭಾಽಶುಭಾನಾಂ ದದತಾಮಧೀಶ । ಶಿವಾಯ ನಃ ಪಾಹಿ
ಮುಖಂ ನಮಸ್ತೇ ॥''

''ಓಂನಿರ್ಋತಯೇನಮಃ''

''ಏಹ್ಯೇಹಿ ರಕ್ಷೋಽಗಣನಾಯಕ ಸ್ತ್ವಂ ಸರ್ವೈಸ್ತು ವೇತಾಲ ಪಿಶಾಚ ಸಂಘೈಃ ।
ಮಮಾಧ್ವರಂ ಪಾಹಿ ಶುಭಾಧಿನಾಥ! ಲೋಕೇಶ್ವರಸ್ತ್ವಂ ಭಗವನ್ನಮಸ್ತೇ ॥''

''ಓಂವರುಣಾಯನಮಃ''

''ಏಹ್ಯೇಹಿ ಯಾದೋ ಗಣ ವಾರಿಧೀನಾಂ ಗಣೇನ ಪರ್ಜನ್ಯ ಮಹಾಪ್ಸರೋಭಿಃ।
ವಿದ್ಯಾಧರೇಂದ್ರಾಮರಗೀಯಮಾನ! ಪಾಹಿ ತ್ವಮಸ್ಮಾನ್ ಭಗವನ್ನಮಸ್ತೇ ॥''

''ಓಂವಾಯವೇನಮಃ''

"ಏಹ್ಯೇಹಿ ಯಜ್ಞೇ ಮಮ ರಕ್ಷಣಾಯ ಮೃಗಾಧಿರೂಢಃ ಸಹ ಸಿದ್ಧಸಂಘೈಃ।
ಪ್ರಾಣಾಧಿಪಃ ಕಾಲಕಲಾಸಹಾಯಃ ಗೃಹಾಣ ಪೂಜಾಂ ಭಗವನ್ನಮಸ್ತೇ ॥''

''ಓಂಸೋಮಾಯನಮಃ''

"ಏಹ್ಯೇಹಿ ಯಜ್ಞೇಶ್ವರ! ಯಜ್ಞರಕ್ಷಾಂ ವಿಧತ್ಸ್ವ ನಕ್ಷತ್ರಗಣೇನ ಸಾರ್ಧಮ್ ।
ಸರ್ವೌಷಧೀಭಿಃ ಪಿತೃಭಿಃ ಸಹೈವ ಗೃಹಾಣ ಪೂಜಾಂ ಭಗವನ್ನಮಸ್ತೇ ॥''

''ಓಂಅನಂತಾಯನಮಃ''

''ಏಹ್ಯೇಹಿ ಪಾತಾಲಧರಾಧರೇಂದ್ರ, ನಾಗಾಂಗನಾ ಕಿನ್ನರ ಗೀಯಮಾನ ।
ಯಕ್ಷೋರಗೇಂದ್ರಾಮರ ಲೋಕ ಸಾರ್ಧಮನಂತ ರಕ್ಷಾಧ್ವರಮಸ್ಮದೀಯಮ್॥''

''ಓಂಬ್ರಹ್ಮಣೇನಮಃ''

"ಏಹ್ಯೇಹಿ ವಿಶ್ವಾಧಿಪತೇ ಮುನೀಂದ್ರ ಲೋಕೇನ ಸಾರ್ಧಂ ಪಿತೃದೇವತಾಭಿಃ।
ಸರ್ವಸ್ಯ ಧಾತಾಸ್ಯಮಿತ ಪ್ರಭಾವ ವಿಶಾಧ್ವರಂ ನೋ ಭಗವನ್ನಮಸ್ತೇ॥''

''ಎಲ್ಲ ದೇವತೆಗಳಿಂದಲೂ ಸಿದ್ಧಸಾಧ್ಯರಿಂದಲೂ ಸ್ತುತಿಸಲ್ಪಟ್ಟ, ವಜ್ರಧರನಾದ ದೇವೇಂದ್ರನೇ ಬಾ, ಬಾ! ಅಪ್ಸರೆಯರ ಗುಂಪು ನಿನಗೆ ಚಾಮರ ಬೀಸುತ್ತಲಿದೆ. ಪೂಜ್ಯನೇ ನನ್ನ ಯಜ್ಞಕ್ಕೆ ಬಂದು ನಮ್ಮೆಲ್ಲರನ್ನು ರಕ್ಷಿಸು. ನಿನಗೆ ನಮಸ್ಕಾರ'' ಎಂದು ಇಂದ್ರನನ್ನು ಆಹ್ವಾನಿಸಿ ನಮಸ್ಕರಿಸಬೇಕು.

''ಎಲ್ಲ ದೇವತೆಗಳ ಹವಿರ್ಭಾಗವನ್ನು ವಯಿದು ಅವರವರಿಗೆ ಮುಟ್ಟಿಸುವ, ಋಷಿಗಳಿಂದ ವರ್ಣಿತನಾದ ಅಗ್ನಿದೇವನೆ, ಇಲ್ಲಿ ಬಾ. ತೇಜಸ್ವಿಗಳಾದ ಲೋಕಪಾಲಕರಿಂದ ಕೂಡಿ ಎನ್ನ ಯಜ್ಞ ರಕ್ಷಿಸು. ನಿನಗೆ ನಮಸ್ಕಾರ'' ಎಂದು ಅಗ್ನಿಯನ್ನು ಪ್ರಾರ್ಥಿಸಬೇಕು.

''ಎಲ್ಲ ದೇವತೆಗಳಿಂದಲೂ ಪೂಜಿತನಾದ ಧರ್ಮರಾಜನೇ, ನೀನು ಈ ನಮ್ಮ ಯಜ್ಞದಲ್ಲಿ ಉಪಸ್ಥಿತನಾಗು. ಜನರ ಸುಖ-ದುಃಖಗಳ ನಿಯಾಮಕನಾದ ನೀನು ಕಲ್ಯಾಣ ಮಾಡು. ನಿನಗೆ ನಮ್ಮ ವಂದನೆ'' ಎಂದು ಯಮದೇವರನ್ನು ಸ್ತೋತ್ರ ಮಾಡಬೇಕು.

''ಎಲ್ಲ ರಾಕ್ಷಸಗಣಗಳ ಅಧಿನಾಯಕನಾದ ವಿನಾಯಕನೇ, ಪಿಶಾಚವೇತಾಲ ಸಮೂಹಗಳಿಂದ ಒಡಗೂಡಿ ನನ್ನ ಯಜ್ಞವನ್ನು ಸಂರಕ್ಷಿಸು. ಎಲ್ಲ ಶುಭ ಕರ್ಮಗಳಿಗೆ ಒಡೆಯನಾದ ನಿನಗೆ ನಮ್ಮ ನಮಸ್ಕಾರ ಎಂದು ವಿನಾಯಕನನ್ನು ನಮಸ್ಕರಿಸಬೇಕು.''

''ಜಲಚರ ಪ್ರಾಣಿಗಳಿಗೆಲ್ಲ ಒಡೆಯನಾದ ವರುಣ ದೇವನೆ, ವಿದ್ಯಾಧರರಿಂದಲೂ ದೇವತೆಗಳಿಂದಲೂ ಹೊಗಳಿಸಿಕೊಳ್ಳಲ್ಪಡುವ ನೀನು ಇಲ್ಲಿಗೆ ಬಾ. ಎಲ್ಲ ಸಮುದ್ರ ಹಾಗೂ ಪರ್ಜನ್ಯ ಹಾಗೂ ಅಪ್ಸರೆಯರ ಗಣಗಳಿಂದ ಒಡಗೂಡಿ ರಕ್ಷಿಸು. ಪೂಜ್ಯನಾದ ನಿನಗೆ ನಮಸ್ಕಾರ'' ಎಂದು ವರುಣನನ್ನು ಪೂಜಿಸಬೇಕು.

"ಪ್ರಾಣಗಳ ಪ್ರಾಣಗಳಿಗೆಲ್ಲ ಒಡೆಯನಾದ ವಾಯುದೇವನೆ, ನೀನು ಸಿದ್ಧಪುರುಷರ ವೃಂದದಿಂದ ಒಡಗೂಡಿ, ನನ್ನ ಯಜ್ಞ ರಕ್ಷಣಕ್ಕಾಗಿ ಇಲ್ಲಿಗೆ ಬಾ. ಕಾಲಾಗ್ನಿಗೆ ಸಹಾಯಕನಾದ ನೀನು ನನ್ನ ಪೂಜೆ ಸ್ವೀಕರಿಸು. ನಿನಗೆ ವಂದನೆ" ಎಂದು ವಾಯುದೇವರನ್ನು ಪ್ರಾರ್ಥಿಸಬೇಕು.

"ತ್ರಿಶೂಲ, ಕಪಾಲ, ಖಡ್ಗ, ಮುಂತಾದ ಆಯುಧ ಧರಿಸಿದ, ಯಜ್ಞೇಶ್ವರನಾದ ಪರಮೇಶ್ವರನೆ, ನಮ್ಮ ಯಜ್ಞಕಾರ್ಯದ ಸಿದ್ಧಿಗೆ ನೀನು ಬಾ ಬಾ! ನಮ್ಮ ಪೂಜೆ ಸ್ವೀಕರಿಸಿ ಅನುಗ್ರಹಿಸು. ನಿನಗೆ ನಮಸ್ಕರಿಸುತ್ತೇನೆ" ಎಂದು ಮಹಾದೇವನನ್ನು ಪ್ರಾರ್ಥಿಸಬೇಕು.

"ಕಿನ್ನರ ನಾಗಾಂಗನೆಯರಿಂದ ಹೊಗಳಲ್ಪಡುವ, ಆದಿಶೇಷನೇ, ನೀನು ಎಲ್ಲ ಯಕ್ಷ, ಸರ್ಪ ಮತ್ತು ದೇವತೆಗಳಿಂದ ಒಡಗೂಡಿ ಇಲ್ಲಿಗೆ ಬಂದು ನಮ್ಮ ಯಜ್ಞ ರಕ್ಷಿಸು" ಎಂದು ಆದಿಶೇಷನನ್ನು ಪ್ರಾರ್ಥಿಸಬೇಕು.

"ವಿಶ್ವಕ್ಕೆ ಒಡೆಯನು, ಪ್ರಪಂಚದ ಕಾರಣಕರ್ತನು, ಅಮಿತಪ್ರಭಾವಿಯಾದ ಸನಕಾದಿಮುನಿಗಳ ಒಡೆಯನಾದ ಬ್ರಹ್ಮದೇವನೇ, ಪಿತೃದೇವತೆಗಳೊಂದಿಗೆ ನೀನು ಆಗಮಿಸಿ ಯಜ್ಞಕ್ಕೆ ಬಂದು, ನಮ್ಮೆಲ್ಲರನ್ನು ರಕ್ಷಿಸು, ನಿನಗೆ ನಮಸ್ಕಾರ" ಎಂದು ಬ್ರಹ್ಮದೇವರನ್ನು ಪ್ರಾರ್ಥಿಸಬೇಕು. ಅನಂತರ,

**"ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।**
**ಬ್ರಹ್ಮವಿಷ್ಣು ಶಿವೈಃಸಾರ್ಧಂ ರಕ್ಷಾಂ ಕುರ್ವಂತು ತಾನಿ ವೈ ।"**
**ದೇವದಾನವ ಗಂಧರ್ವಾ ಯಕ್ಷರಾಕ್ಷಸ ಪನ್ನಗಾಃ ।**
**ಋಷಯೋ ಮುನಯೋ ಗಾವೋ ದೇವ ಮಾತರ ಏವ ಚ ।**
**ಸರ್ವೇ ಮಮಾಧ್ವರೇ ರಕ್ಷಾಂ ಪ್ರಕುರ್ವಂತು ಮುದಾಽನ್ವಿತಾಃ ॥**

ಹೀಗೆ ಎಲ್ಲ ದೇವೋತ್ತಮರನ್ನು ಪ್ರಾರ್ಥಿಸಿ ಅನಂತರ ಮೂರು ಲೋಕದಲ್ಲಿರುವ "ಎಲ್ಲ ಚರಾಚರ ಪ್ರಾಣಿಗಳು, ದೇವ-ದಾನವ-ಗಂಧರ್ವರೂ, ಯಕ್ಷ, ರಾಕ್ಷಸ, ಸರ್ಪಗಳು ಮನು ಮುನಿಗಳೂ, ಗೋಮಾತೆ, ಭೂಮಾತೆ, ದೇವಮಾತೆಯರು, ಹರಿಹರ ಬ್ರಹ್ಮಾದಿ ದೇವತೆಗಳೊಂದಿಗೆ ಬಂದು ನಮ್ಮ ಯಜ್ಞ ರಕ್ಷಿಸಲಿ" ಎಂದು ಆಹ್ವಾನಿಸಿ ಪ್ರಾರ್ಥನೆ ಮಾಡಬೇಕು. ಅನಂತರ ಋತ್ವಿಜರಿಗೆ ಬಂಗಾರದ ಹಾರ, ಪದಕ, ಕುಂಡಲ, ಕಂಕಣ, ಉಂಗುರ, ಪವಿತ್ರ, ವಸ್ತ್ರ, ಹಾಸಿಗೆ ಮುಂತಾದವುಗಳನ್ನು ದಾನ ಮಾಡಬೇಕು.

ಗುರುಗಳಿಗೆ ಇದರ ಎರಡು ಪಟ್ಟು, ವಸ್ತ್ರಾಭರಣ ನೀಡಬೇಕು. ಜಪಮಾಡುವವರು ಶಾಂತಿಸೂಕ್ತವನ್ನು ಎಲ್ಲ ಕಡೆಗೂ ಮುಟ್ಟಿಸಬೇಕು. ಎಲ್ಲ ಋತ್ವಿಜರು, ಪುರೋಹಿತರು, ಗುರುಗಳೂ ಅಲ್ಲಿದ್ದು, ಅಧಿವಾಸನ ಮಾಡಿ, ಮೊದಲು ಮಧ್ಯದಲ್ಲಿ, ಕೊನೆಗೆ ಬ್ರಾಹ್ಮಣರಿಂದ ಆಶೀರ್ವಚನ, ಮಂತ್ರ ಹೇಳಿಸಬೇಕು.

ಯಜಮಾನನಿಗೆ ವೇದಕೋವಿದರಾದ ಬ್ರಾಹ್ಮಣಪುಂಗವರು ಮಂಗಲಶಬ್ದಗಳಿಂದ ಸ್ನಾನ ಮಾಡಿಸಬೇಕು. ಅನಂತರ ಯಜಮಾನನು ತಕ್ಕಡಿಯನ್ನು ಕಟ್ಟಿದಲ್ಲಿಗೆ ಬಂದು ಹೂವು ಹಿಡಿದುಕೊಂಡು ಅದಕ್ಕೆ ಮೂರು ಸಲ ಪ್ರದಕ್ಷಿಣೆ ಹಾಕಬೇಕು. ಶುಭ್ರವರ್ಣದ ಬಟ್ಟೆ ಉಟ್ಟು, ಬಿಳಿ ಹೂಗಳ ಮಾಲೆ ಹಾಕಿಕೊಂಡು ಆ ತಕ್ಕಡಿಯನ್ನು ಈ ಮಂತ್ರದಿಂದ ಅಭಿಮಂತ್ರಿಸಬೇಕು.

"ನಮಸ್ತೇ ಸರ್ವ ದೇವಾನಾಂ ಶಕ್ತಿಸ್ತ್ವಂ ಶಕ್ತಿಮಾಸ್ಥಿತಾ ।
ಸಾಕ್ಷೀಭೂತಾ ಜಗದ್ಧಾತ್ರೀ ನಿರ್ಮಿತಾ ವಿಶ್ವಯೋನಿನಾ ॥

ಮಾಂ ತೋಲಯಂತೀ ಸಂಸಾರಾತ್ ಉದ್ಧರಸ್ವ ನಮೋಸ್ತು ತೇ ।
ನಮೋ ನಮಸ್ತೇ ಗೋವಿಂದ ತುಲಾಪುರುಷ ಸಂಜ್ಞಿತ" ॥

ಎಲ್ಲ ದೇವತೆಗಳಶಕ್ತಿಯನ್ನು ಅವಲಂಬಿಸಿ ನಿಂತುಕೊಂಡ ತುಲಾದೇವಿಯೇ ನೀನು ಸಾಕ್ಷೀಭೂತಳಾಗಿ ಬ್ರಹ್ಮದೇವರಿಂದ ನಿರ್ಮಿಸಲ್ಪಟ್ಟಿರುವೆ. ನೀನು ಧರ್ಮಾಽಧರ್ಮ ಕಾರ್ಯಗಳಿಗೆಲ್ಲ ಪರಮಪ್ರಮಾಣ ಭೂತಳಾಗಿರುವೆ. ನನ್ನನ್ನು ತೂಗಿ ಸಂಸಾರದಿಂದ ಉದ್ಧಾರ ಮಾಡು. ಈ ತಕ್ಕಡಿಯಲ್ಲಿ ಅಧಿಷ್ಠಿತನಾದ ತುಲಾ ಪುರುಷ ಗೋವಿಂದನೇ ನಿನಗೆ ನಮೋನಮಃ ಈ ಸಂಸಾರದ ಹುದುಲಿನಿಂದ ನೀನು ನನ್ನನ್ನು ಪಾರುಮಾಡು" ಹೀಗೆ ಪರಮಾತ್ಮನನ್ನು ಪ್ರಾರ್ಥಿಸಿ, ಮತ್ತೊಮ್ಮೆ ಆ ತಕ್ಕಡಿಗೆ ಪ್ರದಕ್ಷಿಣೆ ಹಾಕಿ, ಆಭರಣಗಳಿಂದ ಭೂಷಿತನಾಗಿ ಪುಣ್ಯಕಾಲವು ಪ್ರಾಪ್ತವಾದ ಬಳಿಕ ಒಂದು ತಕ್ಕಡಿಯ ಮೇಲೆ ಏರಬೇಕು.

ಕೈಯಲ್ಲಿ ಬಂಗಾರದ ಯಮಧರ್ಮ, ಸೂರ್ಯ, ಪ್ರತಿಮೆಗಳನ್ನು ಮುಷ್ಟಿಯಲ್ಲಿಟ್ಟು ಕೊಂಡು, ಶ್ರೀಹರಿಯನ್ನು ನೆನೆಯುತ್ತ ಒಂದು ಪರಡಿಯಲ್ಲಿ ಕೂಡಬೇಕು.

ಅನಂತರ ಬ್ರಾಹ್ಮಣರು ಮತ್ತೊಂದು ಪರಡಿಯಲ್ಲಿ ಬಂಗಾರವನ್ನು ತುಂಬಬೇಕು. ಅವನ ತೂಕಕ್ಕೆ ಸರಿಯಾಗಿ ಬಂಗಾರವನ್ನು ಪರಡಿಯಲ್ಲಿ ತುಂಬಿ ತೂಗಬೇಕು.

ಹೆಚ್ಚಿನ ಶ್ರೇಯಸ್ಸು ಬಯಸುವವರು ಬಂಗಾರದ ಪರಡಿಯು ನೆಲದ ಮೇಲೆ ಬಂದು ಕೂಡುವಷ್ಟು ಹೆಚ್ಚಿನ ಬಂಗಾರವನ್ನು ಅದರಲ್ಲಿ ಹಾಕಬೇಕು. ಹೀಗೆ ಒಂದು ಕ್ಷಣ ಹೊತ್ತು ಆ ಪರಡಿಯಲ್ಲಿ ಕುಳಿತು ಅನಂತರ ಪರಮಾತ್ಮನಿಗೆ ನಮಸ್ಕರಿಸಿ,

ನಮಸ್ತೇ ಸರ್ವಭೂತಾನಾಂ ಸಾಕ್ಷೀಭೂತೇ ಸನಾತನಿ ।
ಪಿತಾಮಹೇನ ದೇವಿ ತ್ವಂ ನಿರ್ಮಿತಾ ಪರಮೇಷ್ಠಿನಾ ॥

ತ್ವಯಾ ಧೃತಂ ಜಗತ್ಸರ್ವಂ ತುಲೇ ಸ್ಥಾವರ ಜಂಗಮಂ ।
ಸರ್ವಭೂತಾತ್ಮಭೂತಸ್ಥೇ ನಮಸ್ತೇ ವಿಶ್ವಧಾರಿಣೆ ॥
ಎಂದು ಮಂತ್ರ ಹೇಳಿ ಆ ತಕ್ಕಡಿಗೂ ವಂದಿಸಿ ಕೆಳಗೆ ಇಳಿಯಬೇಕು.

ತಮ್ಮನ್ನು ತೂಗಿದ ಬಂಗಾರದಲ್ಲಿ ಅರ್ಧಭಾಗವನ್ನು ತನ್ನ ಗುರು, ಆಚಾರ್ಯರಿಗೆ ನೀಡಬೇಕು. ಉಳಿದ ಅರ್ಧವನ್ನು ಹದಿನಾರು ಜನ ಋತ್ವಿಜರಿಗೆ ನೀರುಬಿಟ್ಟು ಸಂಕಲ್ಪ ಪೂರ್ವಕ ದಾನಮಾಡಿ ಅವನ್ನು ಕೊಡಬೇಕು.

ಇದಲ್ಲದೆ ಗುರುಗಳಿಗೂ ಋತ್ವಿಜರಿಗೂ ರತ್ನಗಳನ್ನು ದಾನಕೊಡಬೇಕು. ಇವರಿಬ್ಬರ ಅಪ್ಪಣೆಪಡೆದು ಉಳಿದ ದೀನ ದರಿದ್ರರಿಗೂ, ಅನಾಥರಿಗೂ ಶಿಷ್ಟವಿಶಿಷ್ಟರಾದ ಪಂಡಿತ, ಪುರೋಹಿತರಿಗೂ ದಾನಕೊಡಬೇಕು. ದಾನಕೊಡುವ ಎಲ್ಲ ಬ್ರಾಹ್ಮಣರನ್ನು ಪೂಜಿಸಿ ನಂತರ ದಾನಕೊಡಬೇಕು. ಒಮ್ಮೆ ತೂಕ ಮಾಡಿದ ಬಂಗಾರವನ್ನು ಬಹಳ ಹೊತ್ತು ಮನೆಯಲ್ಲಿ ಇಟ್ಟುಕೊಳ್ಳಬಾರದು. ಅದು ಇದ್ದರೆ,

ಬೇನೆ, ದುಃಖ, ಚಿಂತೆಗಳು, ಭಯಾಪಾಯಗಳು ಪ್ರಾಪ್ತವಾಗುವವು. ಅದನ್ನು ಬೇಗನೇ ದಾನ ಮಾಡಿ ಬಿಡಬೇಕು.

ಈ ವಿಧಿಯಿಂದ ತುಲಾಪುರುಷ ದಾನ ಮಾಡಿದವನು, ಚಿನ್ನದ ಗೆಜ್ಜೆಕಟ್ಟಿದ ಸೂರ್ಯನಂತೆ ಹೊಳೆಯುವ ವಿಮಾನದಲ್ಲಿ ಕುಳಿತು ದೇವ ಲೋಕಕ್ಕೆ ಅಪ್ಸರೆಯರಿಂದ ಪೂಜ್ಯನಾಗಿ ಹೋಗುವನು. ಅಲ್ಲಿ ಒಂದು ಕಲ್ಪಕೋಟಿ ಕಾಲ ಇದ್ದು, ಪುಣ್ಯ ಸವೆದ ಬಳಿಕ, ಮತ್ತೆ ಭೂಮಿಗೆ ಬಂದು, ರಾಜರಾಜನಾಗಿ ಸಾಮಂತ ರಾಜರ ತಲೆಯ ಮೇಲಿನ ರತ್ನ ಕಿರೀಟ ಕಾಂತಿಯಿಂದ ರಂಜಿತ ಪಾದಪೀಠನಾಗಿ ಸುಖ ಸಂಸಾರಗಳಿಂದಲೂ ಸರ್ವಸೌಭಾಗ್ಯಗಳಿಂದಲೂ ಮೆರೆಯುವನು.

ಆಗಲೂ ಸಹಸ್ರಾರು ಯಜ್ಞಗಳನ್ನು ಶ್ರದ್ಧೆಯಿಂದಮಾಡಿ ಶಾಶ್ವತವಾದ ವಿಷ್ಣುಲೋಕ ಹೊಂದುವನು. ಈ ತುಲಾ ಪುರುಷದಾನವನ್ನು ನೋಡಿದವನೂ, ಸ್ಮರಣ, ವಚನಗೈದು ಕೇಳಿದವನೂ ಸ್ವರ್ಗಾಧಿಪತಿ ದೇವೇಂದ್ರನ ಸಮಾನರೂಪ ಪಡೆದು ಇಂದ್ರಾದಿ ದೇವತೆಗಳು ವಾಸಿಸಿದ ಸುರಲೋಕವನ್ನು ಹೊಂದುವನು.

''ಅನೇನ ವಿಧಿನಾಯಸ್ತು ತುಲಾ ಪುರುಷಮಾಚರೇತ್ ।
ಪ್ರತಿಲೋಕಾಧಿಪಸ್ಥಾನೇ ಪ್ರತಿಮನ್ವಂತರಂ ವಸೇತ್ ॥

ವಿಮಾನೇನಾರ್ಕವರ್ಣೇನ ಕಿಂಕಿಣೀ ಜಾಲ ಮಾಲಿನಾ ।
ಪೂಜ್ಯಮಾನೋಽಪ್ಸರೋಭಿಶ್ಚ ತತೋ ವಿಷ್ಣು ಪುರಂ ವ್ರಜೇತ್ ॥

ಕಲ್ಪಕೋಟಿ ಶತಂ ಯಾವತ್ತಸ್ಮಿಂಲ್ಲೋಕೇ ಮಹೀಯತೇ ।
ಕರ್ಮಕ್ಷಯಾದಿಹ ಪುನರ್ಭುವಿ ರಾಜಾ ಭವೇದಪಿ ॥

ಭೂಪಾಲಮೌಲಿ ಮಣಿಮಂಡಿತ ಪಾದಪೀಠಃ ।
ಶ್ರದ್ಧಾನ್ವಿತೋ ಭವತಿ ಯಜ್ಞ ಸಹಸ್ರಯಾಜೀ ।
ದೀಪ್ತ ಪ್ರತಾಪ ಜಿತ ಸರ್ವ ಮಹೀಪ ಲೋಕಃ ॥

ಯೋ ದೀಯಮಾನಮಪಿ ಪಶ್ಯತಿ ಭಕ್ತಿಯುಕ್ತಃ ।
ಕಾಲಾಂತರೇ ಸ್ಮರತಿ ವಾಚಯತೀಹ ಲೋಕೇ ॥

ಯೋ ವಾ ಶೃಣೋತಿ ಪಠತೀಂದ್ರಸಮಾನರೂಪಃ ।
ಪ್ರಾಪ್ನೋತಿ ಧಾಮ ಸ ಪುರಂದರದೇವಜುಷ್ಟಂ ॥

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿದುದು.*

—o—

## ಹಿರಣ್ಯಗರ್ಭದಾನದ ವಿಧಾನ ಮತ್ತು ಅದರ ಫಲ

**ಅಧ್ಯಾಯ - ೨೭೬**

**ಮತ್ಸ್ಯ ಉವಾಚ**

**"ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನಮನುತ್ತಮಮ್ ।**
**ನಾಮ್ನಾ ಹಿರಣ್ಯಗರ್ಭಾಖ್ಯಂ ಮಹಾ ಪಾತಕ ನಾಶನಮ್ ॥"**

**ಮತ್ಸ್ಯ** :- ಇನ್ನು ಮೇಲೆ ದಾನಗಳಲ್ಲಿ ಶ್ರೇಷ್ಠವಾದ ಹಿರಣ್ಯಗರ್ಭದಾನದ ವಿಷಯದಲ್ಲಿ ಹೇಳುತ್ತೇನೆ.

ತುಲಾ ಪುರುಷದಾನದಂತೆ ಇದಕ್ಕಾದರೂ ಸುಮುಹೂರ್ತದಲ್ಲಿ ಮಂಟಪ ಹಾಕಿಸಿ, ಋತ್ವಿಜರನ್ನು ಆಮಂತ್ರಿಸಿ, ಸಕಲ ಸಲಕರಣೆಗಳನ್ನು ಸಿದ್ಧಗೊಳಿಸಬೇಕು. ಉಪವಾಸ ಮಾಡಿ, ಲೋಕಪಾಲಕರ ಆಹ್ವಾನ, ಪುಣ್ಯಾಹವಾಚನ ಮುಂತಾದವುಗಳನ್ನು ನಡೆಸಬೇಕು.

ಅನಂತರ ಬ್ರಾಹ್ಮಣರಿಂದ, ಎಪ್ಪತ್ತೆರಡು ಅಂಗುಲ ಎತ್ತರವಾದ ಹಾಲು ತುಪ್ಪ ಮುಂತಾದವುಗಳಿಂದ ತುಂಬಿದ ಬಂಗಾರದ ಮೊಗ್ಗೆಯ ಆಕಾರದ ಕೊಡವನ್ನು ಹೊತ್ತು ತರಿಸಬೇಕು. ಅದಕ್ಕೆ ಮೇಲೆ ಆವರಣ ಹೊದಿಸಿ, ಮೂರು ಭಾಗ ಹಾಲು ತುಪ್ಪಗಳಿಂದ ತುಂಬಿ ಬಂಗಾರದ ಜನಿವಾರ ಹಾಕಿ ಅಲಂಕರಿಸಬೇಕು. ಅದರ ಪಕ್ಕದಲ್ಲಿ ರತ್ನ, ಹತ್ತು ಆಯುಧ ಸೂಜಿ, ಮತ್ತು ಕೊಡದ ಮೇಲೆ ಮುಚ್ಚುವ ಮುಚ್ಚಳ, ಬಂಗಾರದ ತಂತಿ, ಸೂರ್ಯನ ಮೂರ್ತಿ, ದಂಡ, ಕಮಂಡಲು, ಮುಂತಾದವುಗಳನ್ನು ಇರಿಸಬೇಕು. ಮತ್ತು ವೇದಿಕೆಯ ನಡುವೆ ಎಳ್ಳಿನ ದೊನ್ನೆಯ ಮೇಲೆ, ಪದ್ಮದ ಆಕಾರದ ಮುಚ್ಚಳ ಇಟ್ಟು ಅದರಲ್ಲಿ ಮುತ್ತು ರತ್ನಗಳನ್ನು ಹಾಕಿ ಇಡಬೇಕು.

ಅನಂತರ, ಬ್ರಾಹ್ಮಣರು ವೇದಘೋಷ ಮಾಡುತ್ತಿರುವಾಗ, ವೇದ ಪಂಡಿತರಾದ ಬ್ರಾಹ್ಮಣರು ಎಲ್ಲ ವಿಧ ಔಷಧ ವನಸ್ಪತಿಗಳನ್ನು ಹಾಕಿದ ನೀರಿನಿಂದ ಯಜಮಾನನಿಗೆ ಸ್ನಾನ ಮಾಡಿಸಬೇಕು.

ಅನಂತರ ಯಜಮಾನನು ಬಿಳಿಬಟ್ಟೆ ಉಟ್ಟು, ಹೂಮಾಲೆ ಧರಿಸಿ, ಆಭರಣಗಳಿಂದ ಅಲಂಕೃತನಾಗಿ ಬೊಗಸೆಯಲ್ಲಿ ಹೂ ಹಿಡಿದುಕೊಂಡು ಈ ಮಂತ್ರವನ್ನು ಪಠಿಸಬೇಕು.

**"ನಮೋ ಹಿರಣ್ಯ ಗರ್ಭಾಯ ಹಿರಣ್ಯ ಕವಚಾಯ ಚ ।**
**ಸಪ್ತಲೋಕ ಸುರಾಧ್ಯಕ್ಷ ಜಗದ್ಧಾತ್ರೇ ನಮೋ ನಮಃ ॥**

**ನಮಸ್ತೇ ಭುವನಾಧಾರ ನಮಸ್ತೇ ಭುವನಾಶ್ರಯ ।**
**ನಮೋ ಹಿರಣ್ಯ ಗರ್ಭಾಯ, ಗರ್ಭೇ ಯಸ್ಯ ಪಿತಾಮಹಃ ॥**

**ಭೂರ್ಲೋಕ ಪ್ರಮುಖಾ ಲೋಕಾಸ್ತವ ಗರ್ಭೇ ವ್ಯವಸ್ಥಿತಾಃ ।**
**ಬ್ರಹ್ಮಾದಯಃ ತಥಾ ದೇವಾಃ ನಮಸ್ತೇ ವಿಶ್ವಧಾರಿಣೇ ॥**

**ಯತಸ್ತ್ವಮೇವ ಭೂತಾತ್ಮನ್, ಭೂತೇ ಭೂತೇ ವ್ಯವಸ್ಥಿತಃ**
**ತಸ್ಮಾನ್ ಮಾಮುದ್ಧರಾಶೇಷ ದುಃಖ ಸಂಸಾರ ಸಾಗರಾತ್ ॥**

ಬಂಗಾರದ ಕವಚವುಳ್ಳ, ಏಳು ಲೋಕಗಳಲ್ಲಿರುವ ದೇವತೆಗಳಿಗೆಲ್ಲ ಅಧ್ಯಕ್ಷನಾದ ಜಗತ್ತನ್ನೆಲ್ಲ ಸೃಷ್ಟಿಮಾಡುವ ಹಿರಣ್ಯಗರ್ಭ ಎಂಬ ವಿಷ್ಣುವಿಗೆ ನಮೋನಮಃ.

ಭೂರ್ಲೋಕ ಮುಂತಾದ ಎಲ್ಲಲೋಕಗಳು, ಬ್ರಹ್ಮಾದಿ ದೇವತೆಗಳು ನಿನ್ನ ಗರ್ಭದಲ್ಲಿಯೇ ಇರುತ್ತಾರೆ. ವಿಶ್ವಾಧಾರನಾದ ನಿನಗೆ ನಮಸ್ಕಾರ. ಭೂಮಂಡಲಕ್ಕೆ ನೀನೇ ಆಧಾರ, ಆಶ್ರಯ. ನಿನ್ನ ಗರ್ಭದಲ್ಲಿಯೇ ಪಿತಾಮಹನೂ ಕೂಡಾ ನೆಲೆಸಿದ್ದನು. ಎಲ್ಲ ಪ್ರಾಣಿಗಳಲ್ಲಿಯೂ ನೀನೇ, ವ್ಯಾಪ್ತನಾಗಿ ಇರುವೆ. ನನ್ನನ್ನು ಈ ಸಂಸಾರದ ಸಾಗರದಿಂದ ಪಾರುಮಾಡು, ಉದ್ಧರಿಸು.''

ಹೀಗೆ ಮಂತ್ರವನ್ನು ಉಚ್ಚರಿಸಿ, ಅದರ ನಡುವೆ ಹೋಗಿ, ಎರಡೂ ಮುಷ್ಟಿಗಳಲ್ಲಿ ಯಮಧರ್ಮ ಹಾಗೂ ಬ್ರಹ್ಮದೇವರ ಪ್ರತಿಮೆಗಳನ್ನು ಹಿಡಿದುಕೊಂಡು ಉತ್ತರಕ್ಕೆ ಮುಖಮಾಡಿಕೊಂಡು ಕುಳಿತುಕೊಳ್ಳಬೇಕು.

ಎರಡೂ ಕಾಲುಗಳ ನಡುವೆ ತಲೆ ಸೇರಿಸಿ ತುಸುಹೊತ್ತು ಕೂಡಬೇಕು. ಆಗ ಬ್ರಾಹ್ಮಣರು ಗರ್ಭಾದಾನ. ಪುಂಸವನ, ಸೀಮಂತ ಮುಂತಾದ ಸಂಸ್ಕಾರಗಳನ್ನು ಆ ಹಿರಣ್ಯಗರ್ಭಕ್ಕೆ ಮಾಡಬೇಕು.

ಅನಂತರ ಗುರುಗಳು ಬಂದು, ಮಂತ್ರಸ್ತೋತ್ರ, ಮಂಗಳವಾದ್ಯಗಳ ನಾದನಿನಾದಗಳ ಮಧ್ಯದಲ್ಲಿ, ಗರ್ಭದಲ್ಲಿದ್ದಂತೆ ಪಿಂಡೀಕೃತನಾಗಿ ಕುಳಿತುಕೊಂಡ ಯಜಮಾನನನ್ನು ಎಬ್ಬಿಸಬೇಕು. ಪುರೋಹಿತರು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಬೇಕು. ಅನಂತರ, ಅಲ್ಲಿಯೇ ಇಟ್ಟ ಬಂಗಾರದ ತಂತಿ, ಸೂಜಿ, ಬುಟ್ಟಿ, ಯಜ್ಞೋಪವೀತ ದಂಡ ಕಮಂಡಲು ಮುತ್ತುರತ್ನ ಮುಂತಾದವುಗಳನ್ನೆಲ್ಲ ಗುರುಗಳಿಗೆ ಕೊಡಬೇಕು.

**''ನಮೋ ಹಿರಣ್ಯಗರ್ಭಾಯ ವಿಶ್ವಗರ್ಭಾಯ ವೈ ನಮಃ ।**
**ಚರಾಚರಸ್ಯ ಜಗತೋ ಗೃಹಭೂತಾಯ ವೈ ನಮಃ ॥**

**ಯಥಾಹಂ ಜನಿತಃ ಪೂರ್ವಂ ಮತ್ಸ್ಯಧರ್ಮಾ ಸುರೋತ್ತಮ ।**
**ತ್ವದ್ಗರ್ಭಸಂಭವಾದೇವಂ, ದಿವ್ಯದೇಹೋ ಭವಾಮ್ಯಹಂ ॥**

ಅನಂತರ, ''ನಮೋ ಹಿರಣ್ಯಗರ್ಭಾಯ ವಿಶ್ವಗರ್ಭಾಯ ವೈ ನಮಃ'' ಎಂದು ಆ ಹಿರಣ್ಯ ಗರ್ಭಕ್ಕೆ ನಮಸ್ಕಾರಮಾಡಿ, ನಾನು ಮೊದಲು ನನ್ನ ತಾಯಿಯ ಗರ್ಭದಿಂದ ಹುಟ್ಟಿದಂತೆ ಮತ್ತೊಮ್ಮೆ ಹಿರಣ್ಯಗರ್ಭದಿಂದ ಪುನರ್ಜನ್ಮಪಡೆದು ದಿವ್ಯ ದೇಹವುಳ್ಳವನಾಗುವೆನು ಎಂದು ಪ್ರಾರ್ಥಿಸಬೇಕು.

ಆ ಬಳಿಕ, ಬ್ರಾಹ್ಮಣರು ನಾಲ್ಕು ದಶಕಗಳಿಂದ ದೇವಸ್ವತ್ವಾ ಎಂಬ ಮಂತ್ರದಿಂದ ಯಜಮಾನನನ್ನು ಬಂಗಾರದ ಆಸನದಲ್ಲಿ ಕೂಡಿಸಿ, ಅಭಿಷೇಕ ಮಾಡಬೇಕು. ''ಇದೀಗ ಹುಟ್ಟಿದ ನಿನ್ನ ದೇಹಕ್ಕೆ ನಾವು ಅಭಿಷೇಕ ಮಾಡುತ್ತೇವೆ. ಈ ದಿವ್ಯ ಶರೀರದಿಂದ ಬಹುಕಾಲ ಬಾಳು, ಸುಖಿಯಾಗಿ ಬದುಕು'' ಎಂದು ಆಶೀರ್ವಾದವನ್ನು ಮಾಡಬೇಕು''.

ಅನಂತರ ಆ ಬಂಗಾರದ ಕೊಡವನ್ನು ಆ ಬ್ರಾಹ್ಮಣರಿಗೆ ದಾನ ಮಾಡಬೇಕು. ಆ ಎಲ್ಲ ಋತ್ವಿಜ, ಬ್ರಾಹ್ಮಣ, ಆಚಾರ್ಯರನ್ನು ಗೌರವದಿಂದ ಪೂಜೆ ಮಾಡಬೇಕು.

ಅನಂತರ ಅವರ ಅಪ್ಪಣೆಯಿಂದ ಉಳಿದ ಬ್ರಾಹ್ಮಣರನ್ನು ಪೂಜಿಸಬೇಕು. ಅಲ್ಲಿದ್ದ ಉಳಿದ ಎಲ್ಲ ಸಲಕರಣೆಗಳನ್ನು ಗುರುಗಳಿಗೆ ದಾನ ಕೊಡಬೇಕು. ಮತ್ತು ಪಾದರಕ್ಷೆ, ಛತ್ರ, ಚಾಮರ, ಆಸನ, ಪಾತ್ರೆ, ಗ್ರಾಮ, ಹೊಲ ಮುಂತಾದ ಶಕ್ಯವಿದ್ದ ಎಲ್ಲ ಪದಾರ್ಥಗಳನ್ನು ಯೋಗ್ಯರಿಗೆ ದಾನ ಮಾಡಬೇಕು.

**ಕಲಿಕಲುಷ ವಿಮುಕ್ತಃ ಪೂಜಿತಃ ಸಿದ್ಧಸಾಧ್ಯೈಃ ।**
**ಅಮರಚಮರಮಾಲಾ ವೀಜ್ಯಮಾನೋಽಪ್ಸರೋಭಿಃ ।**

**ಪಿತೃಶತಮಥ ಬಂಧೂನ್ ಪುತ್ರಪೌತ್ರಾನ್ ಪ್ರಪೌತ್ರಾನ್ ।**
**ಅಪಿ ನರಕನಿಮಗ್ನಾನ್ ತಾರಯೇದೇಕ ಏವ ॥**

**ಇತಿಪಠತಿಯಇತ್ಥಂ ಯಃ ಶೃಣೋತೀಹ ಸಮ್ಯಗ್**
**ಮಧುರಿಪುರಿವ ಲೋಕೇ ಪೂಜ್ಯತೇ ಸೋಪಿ ಲೋಕೇ ॥**

**ಮತಿಮಪಿ ಚ ಜನಾನಾಂ ಯೋ ದದಾತಿ ಪ್ರಿಯಾರ್ಥಂ ।**
**ವಿಬುಧ ಪತಿಜನಾನಾಂ ನಾಯಕಃ ಸ್ಯಾಚ್ಚಮಂಕ್ಷು ॥**

ಹೀಗೆ ಹಿರಣ್ಯ ಗರ್ಭದಾನಮಾಡಿದ ಮನುಷ್ಯ ಬ್ರಹ್ಮಲೋಕ ಹೊಂದಿ ಅಲ್ಲಿ ಒಂದು ಕೋಟಿ ಕಲ್ಪಕಾಲ ವಾಸಿಸುವನು. ನರಕದಲ್ಲಿ ಬಿದ್ದಿದ್ದರೂ ನೂರು ತಲೆಯ ಪಿತೃಗಳು ಇದರಿಂದ ಉದ್ಧಾರ ಹೊಂದುವರು. ಈ ಹಿರಣ್ಯ ಗರ್ಭದಾನವಿಧಿಯನ್ನು ಕೇಳಿದವರು, ಹೇಳಿದವರು, ಸರ್ವಸಿದ್ಧರಿಂದ ಪೂಜಿತರಾಗಿ ದಿವ್ಯಲೋಕಗಳಲ್ಲಿ ಶ್ರೀಹರಿಯಂತೆ ಅವನ ಅನುಗ್ರಹದಿಂದ ಜಗದ್ವಂದ್ಯರಾಗುವರು. ಈ ದಾನ ಮಾಡಲು ಜನರನ್ನು ಪ್ರೇರಿಸಿದವರು, ದೇವತೆಗಳ ಒಡೆಯರಾಗಿ ಮೆರೆಯುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಎಪ್ಪತ್ತಾರನೆಯ ಅಧ್ಯಾಯ ಮುಗಿದುದು.*

—o—

ಬ್ರಹ್ಮಾಂಡ ಮಹಾದಾನದ ವರ್ಣನೆ

ಅಧ್ಯಾಯ - ೨೭೭

**ಮತ್ಸ್ಯ ಪುರಾಣ**

**"ಅಥಾತಃ ಸಂಪ್ರವಕ್ಷ್ಯಾಮಿ ಬ್ರಹ್ಮಾಂಡ ವಿಧಿ ಮುತ್ತಮಮ್ ।**
**ಯಚ್ಛ್ರೇಷ್ಠಂ ಸರ್ವದಾನಾನಾಂ ಮಹಾ ಪಾತಕ ನಾಶನಮ್ ॥**

**ಮತ್ಸ್ಯ** :- ಇನ್ನು ಮೇಲೆ ಎಲ್ಲ ದಾನಗಳಲ್ಲಿಶ್ರೇಷ್ಠವೂ, ಸರ್ವಪಾಪ ನಾಶಕವೂ ಆದ, ಬ್ರಹ್ಮಾಂಡದಾನದ ವಿಧಿಯನ್ನು ಹೇಳುತ್ತೇನೆ. ತುಲಾ ಪುರುಷ ದಾನದಲ್ಲಿ ಹೇಳಿದಂತೆ ಒಂದು ಪುಣ್ಯ ದಿನದಲ್ಲಿ ಋತ್ವಿಜರನ್ನು ವರಿಸಿ, ಮಂಟಪ ರಚಿಸಿ, ಸಾಧನ ಸಲಕರಣೆ ಸಜ್ಜುಗೊಳಿಸಿ, ಲೋಕಪಾಲರ ಆಹ್ವಾನ ಮುಂತಾದವುಗಳನ್ನೆಲ್ಲ ಮಾಡಬೇಕು.

ಅನಂತರ, ಇಪ್ಪತ್ತು ಪಲದಿಂದ ಸಾವಿರ ಪಲದವರೆಗೆ ಯಥಾಶಕ್ತಿ ಬಂಗಾರದ ಬ್ರಹ್ಮಾಂಡವನ್ನು ಎರಡು ದಶಕಗಳನ್ನು ಒಂದಕ್ಕೊಂದು ಸೇರಿಸಿ ಮಾಡಬೇಕು. ಎಂಟು ದಿಗ್ಗಜಗಳನ್ನು ಎಂಟು ಲೋಕಪಾಲಕರನ್ನು ಆರು ವೇದಾಂಗಗಳನ್ನೂ ನಿರ್ಮಿಸಬೇಕು.

ನಡುವೆ ಬ್ರಹ್ಮದೇವರನ್ನು ಪ್ರತಿಷ್ಠಾಪಿಸಬೇಕು. ಮತ್ತು ರುದ್ರ, ವಿಷ್ಣು, ಲಕ್ಷ್ಮಿ, ಪಾರ್ವತಿ ಮತ್ತು ಉದಯಾಚಲ, ಅಷ್ಟವಸುಗಳು, ಮರುದ್ಗಣಗಳು ಉಳಿದ ಎಲ್ಲ ದೇವತೆಗಳನ್ನು ಆಯಾ ಸ್ಥಾನಗಳಲ್ಲಿ ಇರಿಸಬೇಕು.

ಆ ಬ್ರಹ್ಮಾಂಡದ ಶಿಖರ ಸ್ಥಾನದಲ್ಲಿ ಲಕ್ಷ್ಮೀನಾರಾಯಣ, ಶಿವಪಾರ್ವತಿಯರನ್ನೂ ಸೂರ್ಯನನ್ನೂ ಒಳಭಾಗದಲ್ಲಿ ಅಷ್ಟವಸುಗಳನ್ನೂ ಹನ್ನೆರಡು ಆದಿತ್ಯರನ್ನೂ ಇರಿಸಬೇಕು. ಇದರ ಹರವು ನೂರು ಅಂಗುಲ ಅಳತೆಯದಿರಬೇಕು.

ಅದರ ಮೇಲೆ ರೇಶಿಮೆ ಬಟ್ಟೆ ಹೊದಿಸಿ, ಎಳ್ಳಿನ ದೊನ್ನೆಯ ಮೇಲೆ ಇಡಬೇಕು. ಅದರ ಸುತ್ತಲೂ ಹದಿನೆಂಟು ಧಾನ್ಯಗಳನ್ನು ಸ್ಥಾಪಿಸಬೇಕು. ಅದರಂತೆ ಪೂರ್ವಕ್ಕೆ ಅನಂತಶಯನನ್ನು, ಆಗ್ನೇಯ ದಿಕ್ಕಿನಲ್ಲಿ ಪ್ರದ್ಯುಮ್ನ, ದಕ್ಷಿಣಕ್ಕೆ ಪ್ರಕೃತಿಯನ್ನು, ನೈಋತ್ಯದಲ್ಲಿ ಸಂಕರ್ಷಣನನ್ನು, ಪಶ್ಚಿಮದಲ್ಲಿ ನಾಕು ವೇದಗಳನ್ನೂ, ವಾಯವ್ಯದಲ್ಲಿ ಅನಿರುದ್ಧನನ್ನೂ, ಉತ್ತರದಲ್ಲಿ ಅಗ್ನಿಯನ್ನೂ, ಈಶಾನ್ಯದಲ್ಲಿ ಬಂಗಾರದ ವಾಸುದೇವನನ್ನೂ ಸ್ಥಾಪಿಸಬೇಕು.

ಸುತ್ತಲೂ ಬೆಲ್ಲದ ಪೀಠದ ಮೇಲೆ ವಸ್ತ್ರಗಳನ್ನು ಹೊದಿಸಿದ ಹತ್ತು ಬಂಗಾರದ ಪೂರ್ಣ ಕುಂಭಗಳನ್ನು ಇಡಬೇಕು. ಬಂಗಾರದ ಕೊಂಬು, ರೇಶಿಮೆಯ ಬಟ್ಟೆ ಹಿಂಡುವ ಪಾತ್ರೆಗಳಿಂದ ಸಹಿತವಾದ ಕರುಗಳಿಂದ ಒಡಗೂಡಿದ ಚೆನ್ನಾಗಿ ಅಲಂಕರಿಸಲ್ಪಟ್ಟ ಹತ್ತು ಹಸುಗಳನ್ನು ದಾನ ಕೊಡಬೇಕು. ಮತ್ತು ಪಾದುಕಾ, ಗಂಧ, ಪುಷ್ಪ, ಮೆಟ್ಟು, ಛತ್ರ, ಚಾಮರ, ಆಸನ, ಕನ್ನಡಿ, ಮುಂತಾದವುಗಳನ್ನೂ, ಕಬ್ಬು ಹಣ್ಣುಗಳನ್ನೂ ದಾನ ನೀಡಬೇಕು. ಯಥಾಶಕ್ತಿ ದ್ವಿಜರ ಭೋಜನವನ್ನು ಬಗೆ ಬಗೆಯ ಭಕ್ಷ್ಯ ಪಕ್ವಾನ್ನಗಳಿಂದ ಮಾಡಿಸಬೇಕು.

ಅನಂತರ ಹೋಮ ಹವನ ಅಧಿವಾಸನ ಮುಂತಾದವುಗಳನ್ನು ಮಾಡಿದ ಬಳಿಕ ವೇದವಿಜ್ಞರಾದ ಬ್ರಾಹ್ಮಣರು ಯಜಮಾನನಿಗೆ ಸ್ನಾನ ಮಾಡಿಸಬೇಕು. ಅವನು,

'ನಮೋಽಸ್ತು ವಿಶ್ವೇಶ್ವರ ವಿಶ್ವಧಾಮ ಜಗತ್ ಸವಿತ್ರೇ ಭಗವನ್ನಮಸ್ತೇ'
ಸಪ್ತರ್ಷಿಲೋಕಾಮರಭೂತಲೇಶ ಗರ್ಭೇಣ ಸಾರ್ಧಂ ವಿತರಾಭಿಕಾಂಕ್ಷಿತಂ
ಯೇ ದುಃಖಿತಾಸ್ತೇ ಸುಖಿನೋ ಭವಂತು ।
ಪ್ರಯಾಂತು ಪಾಪಾನಿ ಚರಾಚರಾಣಾಮ್ ॥

ತ್ವದ್ದಾನ ಶಸ್ತ್ರಾಽಹತ ಪಾತಕಾನಾಂ ।
ಬ್ರಹ್ಮಾಂಡದೋಷಾಃ ಪ್ರಲಯಂ ವ್ರಜಂತು ॥

ಎಂಬ ಮಂತ್ರಹೇಳಿ, ಮೂರು ಸಲ ಪ್ರದಕ್ಷಿಣೆ ಹಾಕಿ ಪ್ರಾರ್ಥಿಸಬೇಕು.

ದುಃಖಿತರೆಲ್ಲರೂ ಸುಖಿಗಳಾಗಲಿ, ಎಲ್ಲರ ಪಾಪಗಳು ನಾಶವಾಗಲಿ, ವಿಶ್ವಮೂರ್ತಿಗೆ, ವಂದನೆ ಎಂದು ಸ್ತುತಿಸಬೇಕು. ಅನಂತರ ಆ ಬ್ರಹ್ಮಾಂಡವನ್ನು ಹತ್ತು ಭಾಗಗಳನ್ನಾಗಿ ವಿಭಜಿಸಬೇಕು.

ಅದರಲ್ಲಿ ಎರಡು ಭಾಗಗಳನ್ನು ಗುರುಗಳಿಗೆ ಕೊಟ್ಟು ಉಳಿದ ಎಂಟು ಭಾಗಗಳನ್ನು ಕ್ರಮವಾಗಿ ಋತ್ವಿಜರಿಗೆ ಕೊಡಬೇಕು. ಸಂಕ್ಷಿಪ್ತ ದಾನವಿಧಿಯಲ್ಲಿ ಗುರು ಒಬ್ಬನೇ ಏಕಾಗ್ರ ವಿಧಾನದಿಂದ ಹೋಮಮಾಡಬೇಕು. ಅವನಿಗೆ ಸರ್ವದಾನ ನೀಡಿ ಗೌರವಿಸಬೇಕು. ಇದು ಬಡತನದ ಕಲ್ಪ. ಯೋಗ್ಯತೆಯಿದ್ದವರು ಮೇಲೆ ಹೇಳಿದಂತೆ ವಿಸ್ತಾರವಾಗಿ ಮಾಡಬೇಕು. ಇದರಿಂದ ಹಿಂದು ಮುಂದಿನ ಪಿತೃಮಾತೃಪೌತ್ರಮಿತ್ರಾದಿ ನೂರುತಲೆ ಬಾಂಧವರ ಉದ್ಧಾರವಾಗುವದಲ್ಲದೇ ಕೊನೆಗೆ ವಿಷ್ಣುಲೋಕ ಪ್ರಾಪ್ತಿಯಾಗುವದು. ಈ ಬ್ರಹ್ಮಾಂಡ ದಾನದ ವಿಧಿಯಿಂದ ಮುರಾರಿಯ ದಿವ್ಯ ಪದವನ್ನು ಪಡೆಯುವದಲ್ಲದೆ ತಾಯ್ತಂದೆಗಳನ್ನೂ ಸಂಬಂಧಿಕರ ನೂರಾರು ಪೀಳಿಗೆಯವರನ್ನೂ ಆನಂದ ಪಡಿಸುವರು.

"ಇತ್ಥಂ ಯ ಏತದಖಿಲಂ ಪುರುಷೋತ್ತಮೋಽಕ್ತಂ ।
ಬ್ರಹ್ಮಾಂಡದಾನಮಧಿಗಮ್ಯ ಮಹದ್ವಿಮಾನಂ ॥
ನಿರ್ಧೂತಕಲ್ಮಷ ವಿಶುದ್ಧತನುರ್ಮುರಾರೇ
ರಾನಂದಕೃತ್ಪದಮುಪೈತಿ ಸಹಾಪ್ಸರೋಭಿಃ ॥
ಸಂತಾರಯೇತ್ಪಿತೃ ಪಿತಾಮಹ ಪುತ್ರ ಪೌತ್ರ
ಬಂಧುಽಪ್ರಿಯಾ ತಿಥಿ ಕಲತ್ರ ಶತಾಷ್ಟಕಂ ಸಃ ॥
ಬ್ರಹ್ಮಾಂಡ ದಾನ ಶಕಲೀಕೃತ ಪಾತಕೌಘ-
ಮಾನಂದಯೇಚ್ಚ ಜನನೀಕುಲಮಪ್ಯಶೇಷಮ್ ॥

ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಎಪ್ಪತ್ತೇಳನೆಯ ಅಧ್ಯಾಯ ಮುಗಿದುದು.

## ಕಲ್ಪವೃಕ್ಷ ದಾನದ ವಿಧಿ

ಅಧ್ಯಾಯ - ೨೭೮

**ಮತ್ಸ್ಯ ಉವಾಚ**

**"ಕಲ್ಪಪಾದಪ ದಾನಾಖ್ಯಮತಃ ಪರಮಮುತ್ತಮಮ್ ।**
**ಮಹಾದಾನಂ ಪ್ರವಕ್ಷ್ಯಾಮಿ ಸರ್ವ ಪಾತಕ ನಾಶನಮ್ ॥**

**ಮತ್ಸ್ಯ** :- ಇನ್ನು ಮೇಲೆ ಸರ್ವ ಪಾತಕಗಳನ್ನು ಕಳೆಯುವ ಕಲ್ಪವೃಕ್ಷದ ದಾನ ವಿಧಿಯನ್ನು ಹೇಳುತ್ತೇನೆ. ಉಳಿದುದೆಲ್ಲವೂ ತುಲಾಪುರುಷದ ದಾನದಂತೆ ಪುಣ್ಯಾಹವಾಚನ, ದಿಕ್ಪಾಲಕರ ಆವಾಹನೆ, ಋತ್ವಿಜರ ವರಣ, ಕುಂಡಮಂಡಪರಚನೆ ಮೊದಲಾದವನ್ನು ಮಾಡಬೇಕು. ಆದರೆ ಮರವನ್ನು ಮಾತ್ರ ಬಂಗಾರದಿಂದ ಮಾಡಿಸಬೇಕು.

ಅದರಲ್ಲಿ ಬಗೆಬಗೆಯ ಹಣ್ಣು, ಕಾಯಿ, ರೆಂಬೆ, ಕೊಂಬೆ, ಮುಗಳು, ಎಲೆ, ತಳಿರು, ಎಲ್ಲವೂ ಗಿಡದ ಆಕಾರವನ್ನು ಸರಿಯಾಗಿ ಮಾಡಿಸಬೇಕು.

ಮೂರು ಪಲದಿಂದ ಸಾವಿರ ಪಲದವರೆಗೆ ಯೋಗ್ಯತಾನುಸಾರವಾಗಿ ಇರುವ ಮರವು ಬಂಗಾರದಲ್ಲಿ ಸಿದ್ಧವಾಗಬೇಕು. ಬೆಲ್ಲದ ಗಟ್ಟಿಯ ಮೇಲೆ ಆ ಬಂಗಾರದ ಕಲ್ಪವೃಕ್ಷವನ್ನು ನೆಟ್ಟು, ಅದಕ್ಕೆ ಐದು ಶಾಖೆಗಳನ್ನು ಮಾಡಿ ಅವುಗಳ ಮೇಲೆ ಬ್ರಹ್ಮ, ವಿಷ್ಣು, ಶಿವ, ಸೂರ್ಯ, ಕಾಮ, (ರತಿ ಸಹಿತವಾಗಿ) ಈ ಐದು ದೇವತೆಗಳನ್ನು ಸಕುಟುಂಬ ಕೂಡಿಸಬೇಕು.

ಈ ಕಲ್ಪವೃಕ್ಷವನ್ನು ಕ್ಲಿಪ್ತವಾದ ಬಂಗಾರದಲ್ಲಿ ಅರ್ಧಭಾಗದಿಂದ ರಚಿಸಬೇಕು. ಅದಕ್ಕೆ ಒಂದು ಜೊತೆ ಬಿಳಿಬಟ್ಟೆಯನ್ನು ಹೊದಿಸಬೇಕು. ಇದರಂತೆ ಮತ್ತೊಂದು ಬೆಲ್ಲದ ಕಟ್ಟೆಯ ಮೇಲೆ ಕಾಲು ಭಾಗದಿಂದ ಪೂರ್ವ ದಿಕ್ಕಿನಲ್ಲಿ ಸಂತಾನ ಎಂಬ ಮರವನ್ನು ನೆಡಬೇಕು. ದಕ್ಷಿಣ ಭಾಗದಲ್ಲಿ ಮಂದಾರ ವೃಕ್ಷವನ್ನು ಲಕ್ಷ್ಮೀದೇವಿಯೊಂದಿಗೆ ತುಪ್ಪದ ಮೇಲೆ ಮಾಡಿ ಇಡಬೇಕು. ಇನ್ನು ಕಾಲ ಭಾಗ ಬಂಗಾರದಿಂದ ಪಶ್ಚಿಮದಲ್ಲಿ ಪಾರಿಜಾತ ವೃಕ್ಷವನ್ನು ಸಾವಿತ್ರಿಯೊಂದಿಗೆ ಮಾಡಿ ಜೀರಿಗೆಯಲ್ಲಿ ನೆಡಬೇಕು.

ಹಾಗೂ ಉತ್ತರದಿಕ್ಕಿನಲ್ಲಿ ಕಾಮಧೇನುವಿನೊಂದಿಗೆ ಹರಿಚಂದನವೆಂಬ ಮರವನ್ನು ಮಾಡಿ ಎಳ್ಳಿನ ರಾಶಿಯ ಮೇಲೆ ಅದೇ ಕಾಲುಭಾಗದಲ್ಲಿಯೇ ಮಾಡಿಸಿ ಇಡಬೇಕು. ಮತ್ತು ರೇಶಿಮೆಯ ವಸ್ತ್ರ ಸುತ್ತಿ ಕಬ್ಬು, ಮಾಲೆ, ಹಣ್ಣುಗಳಿಂದ ಎಂಟು ಕಲಶಗಳನ್ನುಸ್ಥಾಪಿಸಿ ರೇಷ್ಮೆ ಬಟ್ಟೆ ಸುತ್ತಬೇಕು. ಪಾದುಕಾ, ಆಸನಪಾತ್ರೆ, ಜೋಡುದೀಪ, ಛತ್ರ, ಚಾಮರ, ಹಣ್ಣುಕಾಯಿ, ಹೂಸರಗಳನ್ನು ಮುಂದೆ ಇರಿಸಬೇಕು. ಮೇಲಿನ ಛಾವಣಿಗೆ ಕಾಯಿಗಳನ್ನು ಕಟ್ಟಿಬಿಟ್ಟು ಬಗೆಬಗೆಯ ಹೂವಿನ ಮಾಲೆಗಳನ್ನು ತೂಗಿಬಿಡಬೇಕು. ಸುತ್ತಲೂ ಹದಿನೆಂಟು ವಿಧ ದಾನಗಳನ್ನು ಇಡಬೇಕು.

ಅನಂತರ ಹೋಮ ಅಧಿವಾಸನ ಮುಂತಾದವುಗಳನ್ನೆಲ್ಲ ನೆರವೇರಿಸಿ ವೇದ ಪಂಡಿತರು ಯಜಮಾನನಿಗೆ ಸ್ನಾನಕ್ಕೆ ಹಾಕಬೇಕು. ಅವನು ಅದಕ್ಕೆ ಮೂರು ಸಲ ಪ್ರದಕ್ಷಿಣೆಹಾಕಿ ಈ ಮಂತ್ರವನ್ನು ಹೇಳಬೇಕು.

**ಯಸ್ಮಾತ್ವಮೇವ ವಿಶ್ವಾತ್ಮಾ ಬ್ರಹ್ಮಸ್ಥಾಣುರ್ದಿವಾಕರಃ ।**
**ಮೂರ್ತೋಽ ಮೂರ್ತಃ ಪರಂ ಬೀಜಮತಃ ಪಾಹಿ ಸನಾತನ ॥**

**ತ್ವಮೇವಾಮೃತಸರ್ವಸ್ವಮನಂತಃ ಪುರುಷೋಽವ್ಯಯಃ ।**
**ಸಂತಾನಾದ್ಯೈರುಪೇತಃ ಸನ್ ಪಾಹಿ ಸಂಸಾರಸಾಗರಾತ್ ॥**

**ನಮಸ್ತೇ ಕಲ್ಪವೃಕ್ಷಾಯ ಚಿಂತಿತಾರ್ಥಪ್ರದಾಯಿನೇ ।**
**ವಿಶ್ವಂಭರಾಯ ದೇವಾಯ ನಮಸ್ತೇ ವಿಶ್ವಮೂರ್ತಯೇ ॥**

ಎಂದು ಸ್ತೋತ್ರಮಾಡಿ ಆ ಕಲ್ಪವೃಕ್ಷವನ್ನು ಗುರುಗಳಿಗೆ ದಾನ ಕೊಡಬೇಕು.

ಸುತ್ತಲೂ ಇರುವ ಸಂತಾನ, ಮಂದಾರ, ಪಾರಿಜಾತ, ಹರಿಚಂದನ ಎಂಬ ನಾಲ್ಕು ಮರಗಳನ್ನು ನಾಲ್ಕು ಋತ್ವಿಜರಿಗೆ ಕೊಟ್ಟು, ಮೇಲೆ ದಕ್ಷಿಣೆಯನ್ನು ನೀಡಬೇಕು. ಬಡತನವಿದ್ದರೆ ಗುರುಗಳ ಕಡೆಯಿಂದಲೇ ಏಕಾಗ್ನಿ ವಿಧಾನದಿಂದ ಹೋಮಮಾಡಿಸಿ ಅವರನ್ನು ಪೂಜಿಸಬೇಕು. ಈ ಕಲ್ಪವೃಕ್ಷದ ದಾನದಿಂದ ಅಶ್ವಮೇಧದ ಫಲವು ಪ್ರಾಪ್ತವಾಗಿ ಇಂದ್ರಲೋಕದಲ್ಲಿ ಒಂದುಮನ್ವಂತರದಕಾಲದವರೆಗೆ ಅಪ್ಸರೆಯರೊಂದಿಗೆ ವಾಸಿಸುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರು ಎಪ್ಪತ್ತೆಂಟನೆಯ ಅಧ್ಯಾಯ ಮುಗಿದುದು.*



## ಗೋಸಹಸ್ರ ಪ್ರಧಾನದ ವಿಧಿವರ್ಣನೆ | ಅಧ್ಯಾಯ - ೨೭೯

**ಮತ್ಸ್ಯ ಉವಾಚ**

**ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನ ಮನುತ್ತಮಮ್ ।**
**ಗೋಸಹಸ್ರಪ್ರದಾನಾಖ್ಯಂ ಸರ್ವಪಾಪಹರಂ ಪರಮ್ ॥**

**ಮತ್ಸ್ಯ** :- ಇನ್ನು ಮೇಲೆ ಗೋಸಹಸ್ರ ದಾನದ ವಿಧಾನವನ್ನು ಹೇಳುತ್ತೇನೆ. ಸರ್ವಪಾಪಹರವಾದ ಈ ಗೋದಾನವು ಅತ್ಯುತ್ತಮವಾದ ಮಹಾದಾನ ಎನಿಸುತ್ತದೆ.

ಇದಕ್ಕೆ ಮೊದಲು ಮೂರು ರಾತ್ರಿ ಬರಿ ಹಾಲು ಕುಡಿದು ಇದ್ದು ಪಯೋವ್ರತ ಮಾಡಬೇಕು. ಅನಂತರ ಶುಭ ತಿಥಿಯಲ್ಲಿ ಯುಗಾದಿ ಮನ್ವಂತರಾದಿಗಳಲ್ಲಿ ತುಲಾ ಪುರುಷ ದಾನದಂತೆ ಲೋಕಪಾಲಕರ ಆಹ್ವಾನ, ಹೋಮ, ಋತ್ವಿಜರ ವರಣ, ಮಂಡಪ, ಹವನ ಮುಂತಾದವುಗಳನ್ನೆಲ್ಲ ಮಾಡಿ ಮುಗಿಸಬೇಕು.

ಬಂಗಾರದಿಂದ ಒಂದು ಎತ್ತನ್ನು ನಿರ್ಮಿಸಿ, ವೇದಿಕೆಯ ಮೇಲೆ ಇರಿಸಿ ಹೂಗಂಧಗಳಿಂದ ಪೂಜಿಸಬೇಕು. ಮನೆಯ ಹೊರಗೆ ಸಾವಿರ ಗೋವುಗಳನ್ನು ನಿಲ್ಲಿಸಿ, ಎಲ್ಲ ಹಸುಗಳಿಗೂ ವಸ್ತ್ರ, ಮಾಲೆ, ಅಲಂಕಾರ, ಬಂಗಾರದ ಕೋಡು, ಕೊರಳಲ್ಲಿ ಆಭರಣ ಮುಂತಾದವುಗಳನ್ನು ಹಾಕಿ ಸಿಂಗರಿಸಬೇಕು. ಅನಂತರ ಅವುಗಳಲ್ಲಿ ಹತ್ತು

ಗೋವು ಗಳನ್ನು ಮನೆಯ ಅಂಗಳದಲ್ಲಿ ಕರೆತಂದು ನಿಲ್ಲಿಸಿ, ಕೊರಳಲ್ಲಿ ಬಂಗಾರದ ಗಂಟೆ ಕಟ್ಟಿ ಚಿನ್ನದ ಕೊಂಬು ಇಡಿಸಿ, ಹಣೆಗೆ ಬಂಗಾರದ ತಿಲಕ ಇಟ್ಟು, ಮೈಮೇಲೆ ರೇಶಿಮೆ ಪಟ್ಟೆ ಹೊರಿಸಿ, ಹೂವು, ಗಂಧ, ಮಾಲೆಗಳನ್ನು ಏರಿಸಿ, ಅವುಗಳ ಪಕ್ಕದಲ್ಲಿಯೇ ಪಾದುಕಾ, ಛತ್ರ, ಪಾತ್ರೆ, ಆಸನ ಮುಂತಾದವುಗಳನ್ನು ಇಟ್ಟು ಆ ಹಸುಗಳನ್ನು ಪೂಜಿಸಬೇಕು. ಕೊಂಬಿಗೆ ಮುತ್ತಿನ ಮಾಲೆ ಚಾಮರಗಳನ್ನು ತೂಗು ಬಿಡಬೇಕು.

ಹತ್ತು, ಹತ್ತು, ಹಸುಗಳ ನಡುವೆ ಒಂದೊಂದು ಹೋರಿ ಇರಬೇಕು. ಆ ನಂದಿಕೇಶ್ವರನೆನಿಸಿದ ಅದಕ್ಕೂ ಮೈಮೇಲೆ ರೇಶಿಮೆ ಬಟ್ಟೆ ಹೊದಿಸಿ ಆಭರಣ ಇರಿಸಬೇಕು. ಇದಲ್ಲದೆ ಹತ್ತು ಹಸುಗಳ ನಡುವೆ ಸಾವಿರ ತೊಲೆಯ ಚಿನ್ನದ ಎತ್ತನ್ನು ಮಾಡಿ ಉಪ್ಪಿನ ರಾಶಿಯ ಮೇಲೆ ನಿಲ್ಲಿಸಬೇಕು. ಅದಕ್ಕೆ ರೇಷ್ಮೆ ಬಟ್ಟೆ ಉಡಿಸಿ ರತ್ನದ ಆಭರಣ ತೊಡಿಸಬೇಕು. ಬಾಯಲ್ಲಿ ಕಬ್ಬಿನ ಜಲ್ಲೆ ಕೊರಳಲ್ಲಿ ಹೂಮಾಲೆ ಹಾಕಿ ಪೂಜಿಸಬೇಕು. ಅನಂತರ ಯಜಮಾನನು ಮಂಗಳ ವಾದ್ಯ ಮೊಳಗಿಸಿ, ಔಷಧಿ ಮಿಶ್ರಿತ ನೀರಿನಿಂದ ಪುರೋಹಿತರ ಮುಖಾಂತರ ಸ್ನಾನಮಾಡಿ, ಕೈಯಲ್ಲಿ ಹೂ ಹಿಡಿದು, ಮೂರು ಸಲ ಪ್ರದಕ್ಷಿಣೆ ಹಾಕಿ ಈ ಮಂತ್ರವನ್ನು ಹೇಳಬೇಕು.

ನಮೋಸ್ತು ವಿಶ್ವ ಮೂರ್ತಿಭ್ಯೋ ವಿಶ್ವಮಾತೃಭ್ಯ ಏವ ಚ
ಲೋಕಾಧಿವಾಸಿನೀಭ್ಯಶ್ವ ರೋಹಿಣೀಭ್ಯೋ ನಮೋ ನಮಃ ।
ಗವಾಮಂಗೇಷು ತಿಷ್ಠಂತಿ ಭುವನಾನ್ಯೇಕವಿಂಶತಿ ॥
ಬ್ರಹ್ಮಾದಯಸ್ತಥಾ ದೇವಾ ರೋಹಿಣ್ಯಃ ಪಾಂತು ಮಾತರಃ ।
ಗಾವೋ ಮೇ ಅಗ್ರತಃ ಸಂತು ಗಾವಃ ಪೃಷ್ಠತ ಏವಚ ।
ಗಾವಃ ಶಿರಸಿ ಮೇ ನಿತ್ಯಂ ಗವಾಂ ಮಧ್ಯೇ ವಸಾಮ್ಯಹಮ್ ॥
ಯಸ್ಮಾತ್ ತ್ವಂ ಉಕ್ಷರೂಪೇಣ ಧರ್ಮ ಏವ ಸನಾತನಃ
ಅಷ್ಟಮೂರ್ತೇಃ ಅಧಿಷ್ಠಾನಮತಃ ಪಾಹಿ ಸನಾತನ'' ॥

ವಿಶ್ವಮೂರ್ತಿಗಳಾದ ಎಲ್ಲ ದೇವತೆಗಳ ಸನ್ನಿಧಾನವುಳ್ಳ ವಿಶ್ವಮಾತೆಯರು ಎನಿಸಿದ ಗೋವುಗಳಿಗೆ ನಮೋನಮಃ.

ಈ ಹಸುಗಳ ಅಂಗಾಂಗಗಳಲ್ಲಿ ಇಪ್ಪತ್ತೊಂದು ಲೋಕಗಳು ಇರುತ್ತವೆ. ಬ್ರಹ್ಮಾದಿ ದೇವತೆಗಳು ಗೋಮಾತೆಯಲ್ಲಿ ಸನ್ನಿಹಿತರಾಗಿದ್ದಾರೆ.

ನನ್ನ ಹಿಂದೆ ಮುಂದೆ ಗೋವುಗಳೇ ಇರಲಿ. ಗೋವುಗಳ ನಡುವೇ ನಾನಿರುತ್ತೇನೆ. ಗೋವುಗಳಿಗೆ ನಮಸ್ಕಾರ.

ಎಲೋ ಎತ್ತೆ, ಸನಾತನ ಧರ್ಮವು ನಿನ್ನ ಈ ಎತ್ತಿನ ರೂಪದಿಂದ ಇರುತ್ತದೆ. ನೀನು ಮಹಾದೇವರ ಅಧಿಷ್ಠಾನವಾಗಿರುವೆ. ಆದುದರಿಂದ ನನ್ನನ್ನು ರಕ್ಷಿಸು''. ಎಂದು ಹೇಳಿ ಹೋರಿಯನ್ನು ಗುರುಗಳಿಗೆ ಆ ಆಕಳುಗಳೊಂದಿಗೆ ದಾನ ಕೊಡಬೇಕು.

ಆ ಹತ್ತು ಆಕಳುಗಳಲ್ಲಿ ಒಂದೊಂದು ಆಕಳವನ್ನು ಋತ್ವಿಜರಿಗೆ ಕೊಡಬೇಕು. ಉಳಿದ ಯೋಗ್ಯರಾದ ಬ್ರಾಹ್ಮಣರಿಗೂ ಯೋಗ್ಯತೆಯಿದ್ದವರನ್ನು ನೋಡಿ ನೂರು, ಐವತ್ತು, ಇಪ್ಪತ್ತು, ಹತ್ತು, ಐದು ಆಕಳುಗಳನ್ನಾದರೂ ದಾನ ಕೊಡಬೇಕು.

ಒಂದೇ ಆಕಳವನ್ನು ಬಹಳ ಮಂದಿಯ ನಡುವೆ ಕೂಡಿ ದಾನ ಕೊಡಬಾರದು. ಸಾಕುವ ಯೋಗ್ಯತೆಯಿದ್ದ ಒಬ್ಬನಿಗೆ ಅನೇಕ ಗೋವುಗಳನ್ನು ದಾನಕೊಟ್ಟರೂ ಅಭ್ಯಂತರವಿಲ್ಲ.

**ನೈಕಾ ಬಹುಭ್ಯೋ ದಾತವ್ಯಾ ಯತೋ ದೋಷಕರೀ ಭವೇತ್ ।**
**ಬಹ್ವ್ಯಶ್ಚೈಕಸ್ಯ ದಾತವ್ಯಾಃ ಧೀ ಶ್ರೀ ಸೌಭಾಗ್ಯ ವೃದ್ಧಯೇ ॥**

**ಪಯೋವ್ರತಃ ಪುನಸ್ತಿಷ್ಠೇದೇಕಾಹಂ ಗೋ ಸಹಸ್ರದಃ ।**
**ಶ್ರಾವಯೇತ್ ಶ್ರುಣುಯಾದ್ವಾಪಿ ಮಹಾದಾನಾನುಕೀರ್ತನಮ್ ॥**

ಸಾವಿರ ಗೋವುಗಳನ್ನು ದಾನ ಮಾಡುವವನು ಒಂದು ದಿನ ಬರೀ ನೀರಿನ ಮೇಲೆ ವ್ರತಸ್ಥನಾಗಿ ಉಪವಾಸವಿರಬೇಕು. ಮಹಾದಾನಗಳ ವಿಧಿ ವಿಧಾನಗಳನ್ನು ಶ್ರವಣ ಮಾಡಬೇಕು. ತಾನೂ ಹೇಳಬೇಕು.

ಹೆಚ್ಚಿನ ಸಂಪದವನ್ನು ಬಯಸುವವರು ಗೋದಾನದ ದಿನದಲ್ಲಿ ಬ್ರಹ್ಮಚರ್ಯವನ್ನು ಪಾಲಿಸಬೇಕು. ಈ ವಿಧಾನದಿಂದ ಗೋಸಹಸ್ರ ದಾನಮಾಡಿದವನು ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಸಿದ್ಧರೂ ಚಾರಣರೂ ಅವನ ಸೇವೆ ಮಾಡುತ್ತಾರೆ.

ಕಿರುಗೆಜ್ಜೆಗಳು ತೂಗಾಡುವ ಸೂರ್ಯನಂತೆ ಹೊಳೆಯುವ ವಿಮಾನದಲ್ಲಿ ಕುಳಿತುಕೊಂಡು ಲೋಕಪಾಲಕರ ದಿವ್ಯ ಸ್ಥಾನಗಳಲ್ಲಿ ಸಂಚರಿಸುವನು. ದೇವಾಧಿದೇವತೆಗಳೂ ಕೂಡ ಅವನನ್ನು ಪೂಜಿಸುವರು.

ಪ್ರತಿಯೊಂದು ಮನ್ವಂತರದಲ್ಲಿಯೂ ಮಕ್ಕಳುಮೊಮ್ಮಕ್ಕಳೊಂದಿಗೆ ಮೇಲಿನ ಏಳು ಲೋಕಗಳಿಗಿಂತ ಉನ್ನತವಾದ ಸ್ಥಾನದಲ್ಲಿ ಇದ್ದು ಸುಖ ಸೌಭಾಗ್ಯಗಳನ್ನು ಪಡೆದು ಕೊನೆಗೆ ಶಂಕರನ ಲೋಕವನ್ನು ಹೊಂದುವನು.

ಈ ಗೋಸಹಸ್ರ ದಾನ ಮಾಡಿದ ಮಾನವನು ತನ್ನ ತಂದೆಯ ಕುಲದಲ್ಲಿಯ ನೂರು, ತಾಯಿಯ ಕುಲದಲ್ಲಿಯ ನೂರು ಪಿತೃಗಳನ್ನು ಉದ್ಧಾರಗೈಯ್ಯುವನು. ಪುತ್ರಪೌತ್ರರೊಂದಿಗೆ ನೂರಾರು ಕಲ್ಪಕಾಲ ದಿವ್ಯಲೋಕಗಳಲ್ಲಿ ವಾಸಿಸುವನು. ಪುಣ್ಯಕ್ಷೀಣವಾದ ಬಳಿಕ ಮರಳಿ ಭೂಮಿಯಲ್ಲಿ ಜನಿಸಿ ಅಖಂಡ ಭೂಮಂಡಲದ ಏಕಮಾತ್ರ ಸಮ್ರಾಟನಾಗಿ ಮೆರೆಯುವನು. ನಂತರ ನೂರು ಅಶ್ವಮೇಧಯಾಗಗಳನ್ನು ಮಾಡಿ ಶಿವಧ್ಯಾನ ಗೈಯ್ಯುವನು. ಅನಂತರ ವಿಷ್ಣುಲೋಕವನ್ನು ಪಡೆದು ಸಂಸಾರಬಂಧನದಿಂದ ಮುಕ್ತನಾಗುತ್ತಾನೆ.

**ಪಿತರಶ್ಚಾಭಿನಂದಂತಿ ಗೋಸಹಸ್ರ ಪ್ರದಂ ಸುತಂ ।**
**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಪುತ್ರೋ ದೌಹಿತ್ರ ಏವ ವಾ ॥**

**ಗೋ ಸಹಸ್ರ ಪ್ರದೋ ಭೂತ್ವಾ ನರಕಾದುದ್ಧರಿಷ್ಯತಿ ॥**
**ತಸ್ಯ ಕರ್ಮಕರೋ ವಾ ಸ್ಯಾದಪಿ ದ್ರಷ್ಟಾ ತಥೈವ ಚ ।**
**ಸಂಸಾರಸಾಗರಾದಸ್ಮಾದ್ಯೋಽಸ್ಮಾನ್ ಸಂತಾರಯಿಷ್ಯತಿ ॥**

ಗೋಸಹಸ್ರ ದಾನ ಮಾಡಿದ ಪುತ್ರನನ್ನು ಪಿತೃಗಳು ಹೃದಯ ತುಂಬಿ ಹರಸುವರು.

ಈ ವಿಷಯದಲ್ಲಿ ಪಿತೃಗಳ ಹೃದಯದ ಹಂಬಲ ಹಾರೈಕೆಗಳು ಇಂತಿರುತ್ತವೆ. ''ನಮ್ಮ ವಂಶದಲ್ಲಿ ಸಾವಿರ ಹಸುಗಳನ್ನು ದಾನ ಮಾಡುವ ಒಬ್ಬನಾದರೂ ಪುಣ್ಯಾತ್ಮನು ಜನಿಸಬಹುದೇ? ಕೊನೆಗೆ ಹೆಣ್ಣು ಮಕ್ಕಳ ಮನೆತನದಲ್ಲಿಯಾದರೂ ಗೋದಾನಿ ಹುಟ್ಟಿ ಸಾವಿರ ಹಸುಗಳನ್ನು ದಾನ ಕೊಡಬಹುದೇ! ನಮ್ಮ ಪೌತ್ರ ದೌಹಿತ್ರ ಎರಡು ವಂಶಗಳಲ್ಲಿ ಒಬ್ಬನಾದರೂ ಗೋಸಹಸ್ರದಾನಗೈದು ನಮ್ಮನ್ನು ನರಕದಿಂದ ಪಾರುಗೊಳಿಸಬಹುದೇ?

ಸ್ವಯಂ ತನಗೆ ಸಹಸ್ರ ಗೋದಾನ ಮಾಡುವ ಶಕ್ತಿ ಯೋಗ್ಯತೆ ಇಲ್ಲದಿದ್ದರೆ ಕೊನೆಗೆ ಇತರರು ಗೋದಾನ ಮಾಡುವಾಗ ಅವರಿಗೆ ಅನುಕೂಲತೆಯನ್ನಾದರೂ ನಮ್ಮ ವಂಶದಲ್ಲಿ ಯಾರಾದರೂ ಮಾಡಬಹುದೇ! ಈ ಗೋಸಹಸ್ರ ದಾನ ವಿಧಿಯನ್ನು ನಮ್ಮ ವಂಶದಲ್ಲಿ ಯಾರಾದರೂ ಒಬ್ಬರು ಭಕ್ತಿಯಿಂದ ಕಣ್ಣಿಂದ ನೋಡಿದರೂ ಸಾಕು. ಅಷ್ಟರಿಂದಲೇ ಅವನ ಹಿಂದಿನ ಪಿತೃಗಳಾದ ನಾವೆಲ್ಲರೂ ಸಂಸಾರವೆಂಬ ಘೋರ ಸಮುದ್ರದಿಂದ ಪಾರಾಗುತ್ತೇವೆ. ಪಿತೃಗಳ ಈ ಅಪೇಕ್ಷೆಯನ್ನು ತಿಳಿದು ಆಸ್ತಿಕನು ಸಾವಿರ ಹಸುಗಳ ದಾನವನ್ನು ವಿಧಿಪೂರ್ವಕವಾಗಿ ನೆರವೇರಿಸಬೇಕು.

**ಇತಿ ಪಠತಿ ಯ ಏತದ್ಗೋಸಹಸ್ರಪ್ರದಾನಂ ।**
**ಸುರಭವನಮುಪೇಯಾತ್ಸಂಸ್ಮರೇದ್ವಾಥ ಪಶ್ಯೇತ್ ॥**

**ಅನುಭವತಿ ಮುದಂ ವಾ ಮುಚ್ಯಮಾನೋ ನಿಕಾಮಂ ।**
**ಪ್ರಹತಕಲುಷದೇಹಃ ಸೋಽಪಿ ಯಾತೀಂದ್ರಲೋಕಮ್ ॥**

ಈ ಗೋಸಹಸ್ರ ದಾನದ ಮಹಾದಾನದ ವಿಧಿಯನ್ನು ಪಠಿಸುವವನು ಸ್ವರ್ಗದ ನಂದನವನದಲ್ಲಿ ಆನಂದದಿಂದ ವಿಹರಿಸುವನು. ಈ ದಾನವನ್ನು ಕಣ್ಣಿಂದ ಕಂಡವನೂ, ಸ್ಮರಣೆ ಮಾಡುವವರೂ ಕೂಡ ಪಾಪವಿಮುಕ್ತರಾಗಿ, ಭವಬಂಧನದಿಂದ ಪಾರಾಗಿ ಇಂದ್ರಲೋಕವನ್ನು ಹೊಂದಿ ಸುಖ-ಸೌಭಾಗ್ಯಗಳನ್ನು ಹೊಂದುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು.*

—o—

**ಮತ್ಸ್ಯ ಉವಾಚ**

**"ಅಥಾತಃ ಸಂಪ್ರವಕ್ಷ್ಯಾಮಿ ಕಾಮಧೇನು ವಿಧಿಂ ಪರಮ್ ।**
**ಸರ್ವಕಾಮಪ್ರದಂ ನೃಣಾಂ ಮಹಾ ಪಾತಕ ನಾಶನಮ್ ॥**

**ಮತ್ಸ್ಯ** :- ಗೋದಾನದ ನಂತರ ಜನರ ಸರ್ವಪಾಪಗಳನ್ನು ಪರಿಹರಿಸಿ ಸರ್ವಭೀಷ್ಟ ಕೊಡುವ ಕಾಮಧೇನುವಿನ ದಾನದ ವಿಧಿ ಹೇಳುತ್ತೇನೆ. ಕೇಳು. ಇದರಲ್ಲಿಯೂ ಲೋಕಪಾಲಕರ ಆವಾಹನ, ಅಧಿವಾಸನ, ಕುಂಡನಿರ್ಮಾಣ ಮತ್ತು ಮಂಡಪರಚನೆ ಹಾಗೂ ಹೋಮಾದಿ ವಿಧಾನಗಳು ಹಿಂದಿನಂತೆ.

ಶುದ್ಧವಾದ ಬಂಗಾರದಿಂದ ಆಕಳನ್ನು ಮತ್ತು ಕರುವನ್ನು ಮಾಡಿಸಬೇಕು. ಬಡತನವಿದ್ದರೆ ಒಂದೇ ಕುಂಡ ರಚಿಸಿ ಏಕಾಗ್ನಿ ವಿಧಾನದಿಂದ ಹೋಮವನ್ನು ಆಚಾರ್ಯನೊಬ್ಬನೇ ನಡೆಸಬೇಕು. ಸಾವಿರ ಪಲ ಎಂದರೆ ಸುಮಾರು ಎರಡು ಸಾವಿರ ತೊಲೆ ಬಂಗಾರದಿಂದ ಮಾಡಿದ ಆಕಳು ಉತ್ತಮ. ಐದು ನೂರು ಪಲದಿಂದ ಮಾಡಿದ್ದು ಮಧ್ಯಮ. ಎರಡು ನೂರು ಪಲದ್ದು ಕನಿಷ್ಠ. ಬಡವರಿದ್ದರೆ ಮೂರು ಪಲದ ಮೇಲೆ ಎಷ್ಟಾದರೂ ಬಂಗಾರದಿಂದ ಕಾಮಧೇನು ಮಾಡಿಸಬೇಕು. ವೇದಿಕೆಯ ಮೇಲೆ, ಕೃಷ್ಣಾಜಿನ ಹಾಸಿ, ಅದರ ಮೇಲೆ ಬೆಲ್ಲದ ಮುದ್ದೆಯಿಟ್ಟು ಅದರಲ್ಲಿ ರತ್ನಮುತ್ತುಗಳಿಂದ ಅಲಂಕೃತವಾದ ಬಂಗಾರದ ಆಕಳು ಇಡಬೇಕು. ಎಂಟು ಕಲಶಗಳನ್ನು ಸ್ಥಾಪಿಸಬೇಕು.

ಬಗೆ ಬಗೆಯ ಹಣ್ಣುಹಂಪಲು ಹದಿನೆಂಟು ಧಾನ್ಯ, ಎಂಟು ಕಬ್ಬಿನಗಳ, ಹಿಂಡುವ ಪಾತ್ರೆ, ಆಸನ, ರೇಶಿಮೆಯ ಬಟ್ಟೆ, ದೀಪದ ಸಮೆ, ಕೊಡೆ, ಕುಂಡಲ, ಗಂಟೆ, ಬಂಗಾರ ಕೋಲು, ಬೆಳ್ಳಿಯ ಕಾಲು, ಹಣ್ಣು ಹಂಪಲ, ಹೂವು, ಕಾಯಿ, ಮುಂತಾದವುಗಳನ್ನೆಲ್ಲ ಹತ್ತಿರದಲ್ಲಿಯೇ ಇಡಬೇಕು. ದೀಪ ಹಚ್ಚಿ ಛತ್ರಚಾಮರ ಸೇವೆ ಸಲ್ಲಿಸಬೇಕು. ಎಲ್ಲಬಗೆಯ ರಸ ದ್ರವ್ಯಗಳನ್ನೂ ಹೂ ಹಣ್ಣು ಜೀರಿಗೆ, ಕೋತಂಬರಿ, ಸಕ್ಕರೆ ಮುಂತಾದವುಗಳನ್ನೂ ಐದು ಬಣ್ಣದ ಬಟ್ಟೆಗಳಿಂದ ಮೇಲುಗಟ್ಟುಗಳನ್ನೂ ರಚಿಸಬೇಕು.

ಅನಂತರ ವೇದಘೋಷ, ಮಂಗಲ ವಾದ್ಯಗಳೊಡನೆ ಯಜಮಾನನು ಸ್ನಾನಮಾಡಿ ಪ್ರದಕ್ಷಿಣೆಹಾಕಿ ಬೊಗಸೆಯಲ್ಲಿ ಹೂವು ಹಿಡಿದುಕೊಂಡು, ಗುರುಗಳು ಹೇಳಿದ ಈ ಕೆಳಗಿನ ಮಂತ್ರಗಳಿಂದ ಕಾಮಧೇನುವನ್ನು ಆ ಸುವರ್ಣದ ಕಾಮಧೇನುವಿನಲ್ಲಿ ಆಹ್ವಾನಿಸಿ ಅದನ್ನು ಬ್ರಾಹ್ಮಣರಿಗೆ ದಾನ ಕೊಡಬೇಕು.

**"ತ್ವಂ ಸರ್ವದೇವವರ ಮಂದಿರಮಂಗ ಭೂತಾ**
**ವಿಶ್ವೇಶ್ವರಿ ತ್ರಿಪಥಗೋದಧಿಪರ್ವತಾನಾಮ್ ।**
**ತ್ವದ್ದಾನ ಶಸ್ತ್ರ ಶಕಲೀಕೃತ ಪಾತಕೌಘಃ ಪ್ರಾಪ್ತೋಽಸ್ಮಿ ನಿರ್ವೃತಿ**
**ಮತೀವ ಪರಾಂ ನಮಾಮಿ ॥**

**ಲೋಕೇ ಯಥೇಪ್ಸಿತ ಫಲಾರ್ಥ ವಿಧಾಯಿನೀಂ ತ್ವಾ ।**
**ಮಾಸಾದ್ಯ ಕೋಽಭಿಭವ ದುಃಖಮುಪೈತಿ ಮರ್ತ್ಯಃ ॥**

**ಸಂಸಾರ ದುಃಖ ಶಮನಾಯ ಯತಸ್ವ ಕಾಮಂ ।**
**ತ್ವಾಂ ಕಾಮಧೇನುಮಿತಿ ದೇವಗಣಾ ವದಂತಿ ॥**

ತಾಯಿಯೇ ನೀನು ಎಲ್ಲ ದೇವತೆಗಳ ತವರು ಮನೆ. ನೀನೇ ವಿಶ್ವೇಶ್ವರಿ. ನಿನ್ನ ದಾನವು ನನ್ನ ಪಾಪರಾಶಿಯನ್ನೆಲ್ಲ ಶಸ್ತ್ರದಂತೆ ಚೂರು ಚೂರು ಮಾಡಿನಾಶಮಾಡಿಬಿಡುತ್ತದೆ.

ತಾಯಿ, ನೀನು ಗಂಗೆಯಂತೆ ಪವಿತ್ರಳು. ಸಮುದ್ರದಂತೆ ಗಂಭೀರಳು. ಪರ್ವತದಂತೆ ಅಚಲಳು. ನಿನ್ನನ್ನು ದಾನಕೊಟ್ಟು ನನ್ನ ಮನಸ್ಸಿಗೆ ಸಮಾಧಾನವಾಗಿದೆ. ನಿನಗೆ ನಾನು ನಮಸ್ಕಾರ ಮಾಡುತ್ತೇನೆ. ಬೇಡಿದ ಫಲಗಳನ್ನು ಕೊಡುವ ನಿನ್ನ ಬಳಿಗೆ ಬಂದ ಬಳಿಕ ಯಾವ ಮನುಷ್ಯನಿಗೆ ದುಃಖವಾಗುವದು ?

ನನ್ನ ಸಂಸಾರದ ದುಃಖ ಕಳೆಯಲು ನೀನು ಯತ್ನಿಸು. ದೇವತೆಗಳೆಲ್ಲರೂ ನಿನಗೆ ಕಾಮಧೇನು ಅನ್ನುತ್ತಾರೆ.

**"ಆಮಂತ್ರ್ಯ ಶೀಲಕುಲರೂಪ ಗುಣಾನ್ವಿತಾಯ ವಿಪ್ರಾಯ ಯಃ**
**ಕನಕಧೇನುಮಿಮಾಂಪ್ರದದ್ಯಾತ್ ॥**

**ಪ್ರಾಪ್ನೋತಿ ಧಾಮ ಸ ಪುರಂದರ ದೇವ ಜುಷ್ಟಂ ಕನ್ಯಾಗಣೈಃ**
**ಪರಿವೃತಃ ಪದಮಿಂದುಮೌಲೇಃ ॥**

ಈ ಮಂತ್ರವನ್ನು ಹೇಳಿ, ಒಳ್ಳೇ ಶೀಲ, ಒಳ್ಳೇ ಕುಲ, ರೂಪ, ಗುಣ, ವಿದ್ಯೆಯುಳ್ಳ ಬ್ರಾಹ್ಮಣನನ್ನು ಕರೆದು ಈ ಕನಕದ ಕಾಮಧೇನುವನ್ನು ದಾನಕೊಡಬೇಕು. ಇದರಿಂದ ದಾನ ಕೊಟ್ಟವನು ಇಂದ್ರಾದಿ ಸೇವ್ಯವಾದ ದಿವ್ಯಚಂದ್ರ ಚೂಡನ ಸ್ಥಾನವನ್ನು ಹೊಂದಿ ಅಪ್ಸರೆಯರೊಂದಿಗೆ ಸುಖಿಸುತ್ತಾನೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಎಂಬತ್ತನೆಯ ಅಧ್ಯಾಯ ಮುಗಿದುದು.*

—o—

## ಬಂಗಾರದ ಕುದುರೆಯ ದಾನ ವಿಧಾನ

ಅಧ್ಯಾಯ - ೨೮೧

**ಮತ್ಸ್ಯ ಉವಾಚ :**

**"ಅಥಾತಃ ಸಂಪ್ರವಕ್ಷ್ಯಾಮಿ ಹಿರಣ್ಯಾಶ್ವವಿಧಿಂ ಪರಮ್ ।**
**ಯಸ್ಯ ಪ್ರದಾನಾದ್ಭುವನೇ ಚಾನಂತಂ ಫಲಮಶ್ನುತೇ ॥"**

**ಮತ್ಸ್ಯ** :- ಇನ್ನು ಮೇಲೆ, ಕನಕದ ಕುದುರೆಯನ್ನು ದಾನ ಕೊಡುವ ವಿಧಾನವನ್ನು ಹೇಳುತ್ತೇನೆ. ಈ ಸುವರ್ಣಾಶ್ವ ದಾನವು ಅನಂತ ಫಲಪ್ರದವಾಗಿದೆ. ಇದಕ್ಕಾದರೂ ಹಿಂದಿನಂತೆ, ಶುಭ ತಿಥಿಯಂದು ಸ್ವಸ್ತಿವಾಚನ, ದೇವತಾವಾಹನ, ಋತ್ವಿಜ ವರುಣ, ಮಂಟಪ ನಿರ್ಮಾಣ, ಲೋಕಪಾಲಕರ ಪೂಜೆ, ವೇದಿಕಾಲಂಕರಣ, ಆಚಾರ್ಯ ಪೂಜೆ, ಕುಂಡಾದಿ ರಚನೆ ಮುಂತಾದವುಗಳನ್ನು ಮಾಡಿ, ವೇದಿಕೆಯ ನಡುವೆ ಅದರ ಮೇಲೆ ಕೃಷ್ಣಾಜಿನ ಹಾಕಬೇಕು. ಎಳ್ಳಿನ ರಾಶಿಯ ಮೇಲೆ, ರೇಶಿಮೆಯ ಬಟ್ಟೆ ಹೊದಿಸಿ, ಬಂಗಾರದ ಅಶ್ವವನ್ನು ಮಾಡಿಸಿ ಇಡಬೇಕು.

ಮೂರು ಪಲದ ಮೇಲೆ, ಎಷ್ಟಾದರೂ ಬಂಗಾರದಿಂದ ಯೋಗ್ಯಾತಾನುಗುಣವಾಗಿ ಕನಕದ ಕುದುರೆ ಮಾಡಿಸಬೇಕು. ಪಾದರಕ್ಷೆ, ಛತ್ರ, ಚಾಮರ, ಆಸನ ಎಂಟು ಪೂರ್ಣ ಕುಂಭಮಾಡಿ, ಕಬ್ಬು, ಪಾತ್ರೆ, ಹಣ್ಣುಹಂಪಲು, ಹಾಸಿಗೆ, ದಿಂಬು, ಬಂಗಾರದ ಸೂಜಿ ಇಟ್ಟು ಮುಂತಾದ ಪದಾರ್ಥಗಳನ್ನು ಸಿದ್ಧಗೊಳಿಸಿ ಅಲ್ಲಿ ಇಡಬೇಕು. ಸೂರ್ಯನ ಚಿನ್ನದ ಮೂರ್ತಿಯನ್ನು ಮಾಡಿಸಿ ಹಾಸಿಗೆಯಲ್ಲಿ ಇರಿಸಬೇಕು.

**ತತಃ ಸರ್ವೌಷಧಿ ಸ್ನಾನ ಸ್ನಾಪಿತೋ ವೇದಪುಂಗವೈಃ ।**
**ಇಮಮುಚ್ಚಾರಯೇನ್ಮಂತ್ರಂ ಗೃಹೀತ ಕುಸುಮಾಂಜಲಿಃ ॥**

ಅನಂತರ ಯಜಮಾನನನ್ನು ಬ್ರಾಹ್ಮಣರು, ಔಷಧಿ ಮಿಶ್ರಿತ ನೀರಿನಿಂದ ಸ್ನಾನ ಮಾಡಿಸಿದ ಬಳಿಕ ಅವನು ಬೊಗಸೆ ತುಂಬ ಹೂವು ಹಿಡಿದುಕೊಂಡು, ಈ ಮಂತ್ರವನ್ನು ಹೇಳಬೇಕು.

**"ನಮಸ್ತೇ ಸರ್ವ ದೇವೇಶ, ವೇದಾऽಹರಣ ಲಂಪಟ ।**
**ವಾಜಿರೂಪೇಣ ಮಾಂ ಅಸ್ಮಾದ್ ಪಾಹಿ ಸಂಸಾರ ಸಾಗರಾತ್ ॥**
**ತ್ವಮೇವ ಸಪ್ತಧಾ ಭೂತ್ವಾ ಛಂದೋರೂಪೇಣ ಭಾಸ್ಕರೇ ।**
**ಯಸ್ಮಾತ್ ಭಾಸಯಸೇ ಲೋಕಾನತಃ ಪಾಹಿ ಸನಾತನ ॥"**

ಸರ್ವ ದೇವತೆಗಳ ಒಡೆಯನಾದ ಹಯಗ್ರೀವ ರೂಪಿ ಪರಮಾತ್ಮನಿಗೆ ನಮಸ್ಕಾರ. ಅಶ್ವರೂಪದಿಂದ ನೀನೇ ವೇದಗಳನ್ನೆಲ್ಲಾ ಸಂರಕ್ಷಣೆ ಮಾಡಿ, ಜಗತ್ತಿಗೆ ಉಪಕಾರ ಮಾಡಿದೆ. ನೀನೇ ಛಂದೋಮಯವಾದ ಏಳು ಕುದುರೆಗಳ ರೂಪದಿಂದ ರವಿಯ ರಥವನ್ನು ಹೊತ್ತು ಸೂರ್ಯಾಂತರ್ಯಾಮಿಯಾಗಿ ಜಗತ್ತನ್ನೆಲ್ಲ ದಿವ್ಯಪ್ರಭೆಯಿಂದ ಬೆಳಗುವಿ. ನೀನೇ ನನ್ನನ್ನು ರಕ್ಷಿಸು." ಹೀಗೆ ಹೇಳಿ, ಪ್ರಾರ್ಥನೆ ಮಾಡಿ, ಗುರುವಿಗೆ, ಆ ಕನಕಮಯವಾದ ಕುದುರೆಯನ್ನು ದಾನ ಕೊಡಬೇಕು.

ಅನಂತರ ಋತ್ವಿಜರನ್ನೆಲ್ಲ ಗೋದಾನ ನೀಡಿ ಭಕ್ತಿಯಿಂದ ಪೂಜಿಸಬೇಕು. ಎಲ್ಲ ಧಾನ್ಯ, ಉಪಕರಣ, ಶಯ್ಯಾ, ಆಸನ ಮುಂತಾದವುಗಳನ್ನು ಗುರುವಿನ ಅಪ್ಪಣೆಯಿಂದ ಬ್ರಾಹ್ಮಣರಿಗೆ ದಾನ ನೀಡಬೇಕು. ಅನಂತರ ಎಣ್ಣೆಯನ್ನು ಬಿಟ್ಟು, ತಾನು ಬ್ರಾಹ್ಮಣ ಭೋಜನಾನಂತರ ಊಟ ಮಾಡಬೇಕು.

"ಇತಿ ಪಠತಿ ಯ ಏತದ್ಧೇಮ ವಾಜಿ ಪ್ರದಾನಂ ।
ಸಕಲ ಕಲುಷ ಮುಕ್ತಃಸೋಽಶ್ವಮೇಧೇನ ಯುಕ್ತಃ ॥

ಕನಕಮಯ ವಿಮಾನೇನಾರ್ಕಲೋಕಂ ಪ್ರಯಾತಿ ।
ತ್ರಿದಶ ಪುರ ವಧೂಭಿಃ ಪೂಜ್ಯತೇ ಯೋಽಭಿಪಶ್ಯನ್ ॥

ಯೋ ವಾ ಶೃಣೋತಿ ಪುರುಷೋಽಲ್ಪಧನಃ ಸ್ಮರೇದ್ವಾ ।
ಹೇಮಾಶ್ವ ದಾನಮಭಿನಂದಯತೀಹಲೋಕಃ ॥

ಸೋಽ ಪಿ ಪ್ರಯಾತಿ ಹತ ಕಲ್ಮಷ ಶುದ್ಧ ದೇಹಃ ।
ಸ್ಥಾನಂ ಪುರಂದರ ಮಹೇಶ್ವರ ದೇವ ಜುಷ್ಟಮ್ ॥

ಈ ಸುವರ್ಣಾಶ್ವ ದಾನದಿಂದ ಮನುಷ್ಯನಿಗೆ ಅಶ್ವಮೇಧಯಾಗದಫಲ. ಇದರ ಶ್ರವಣದಿಂದ ಆ ಪುಣ್ಯ ಬರುವದು. ಮತ್ತು ಅವನು ಬಂಗಾರದ ವಿಮಾನದಲ್ಲಿ ಕುಳಿತು ಸುರಸುಂದರಿಯರಿಂದ ಪೂಜಿತನಾಗಿ ಸೂರ್ಯಲೋಕವನ್ನು ಪ್ರಯಾಣಿಸುವನು. ಬಡವರಿಗೆ ಇಂತಹ ಚಿನ್ನದ ಕುದುರೆ ದಾನಕೊಡುವ ಶಕ್ತಿಯಿಲ್ಲದಿದ್ದರೂ ಈ ಹೇಮಾಶ್ವದಾನ ಮಾಡಿದ ಮನುಜನನ್ನು ಅಭಿನಂದಿಸಿ, ಇದರ ವಿಧಾನವನ್ನು ಸ್ಮರಣ, ಪಠಣ ಅಥವಾ ಶ್ರವಣ ಮಾಡಿದ ಮನುಷ್ಯನಿಗೆ ಪಾಪ ಪರಿಹಾರವಾಗಿ ಇಂದ್ರನ ಸ್ವರ್ಗಲೋಕವೂ, ಶಿವನ ಕೈಲಾಸ ಲೋಕವೂ ತಾವಾಗಿ ದೊರಕುವವು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಂಬತ್ತೊಂದನೆಯ ಅಧ್ಯಾಯ ಮುಗಿದುದು.*

—o—

## ಕುದುರೆ ರಥದ ದಾನದ ವರ್ಣನೆ

## ಅಧ್ಯಾಯ - ೨೮೨

**ಮತ್ಸ್ಯ ಉವಾಚ**

**"ಅಥಾತಃ ಸಂಪ್ರಕ್ಷ್ಯಾಮಿ ಮಹಾದಾನಮನುತ್ತಮಮ್ ।**
**ಪುಣ್ಯಮಶ್ವರಥಂ ನಾಮ ಮಹಾಪಾತಕ ನಾಶನಮ್ ॥**

**ಮತ್ಸ್ಯ** :- ಈಗ, ಪಾಪನಾಶಕವಾದ ಅಶ್ವರಥ ದಾನದ ವಿಧಿಯನ್ನು ಹೇಳುತ್ತೇನೆ, ಇದರಲ್ಲಿಯೂ ತುಲಾಪುರುಷದಾನದಂತೆ ಬ್ರಾಹ್ಮಣರ ಅನುಗ್ರಹ ಪಡೆದು ಋತ್ವಿಜ ಮಂಡಪಾದಿಗಳನ್ನು ಮಾಡಿಕೊಂಡು ಒಳ್ಳೇ ಪುಣ್ಯದಿನದಲ್ಲಿ ಪೂರ್ವೋಕ್ತ ಪದ್ಧತಿಯಿಂದ ಎಲ್ಲ ಸಾಧನ ಸಲಕರಣೆ ಸಜ್ಜುಗೊಳಿಸಿ, ಪುಣ್ಯಾಹವಾಚನ ವಿಧಿ ನೆರವೇರಿಸಬೇಕು.

ಕೃಷ್ಣಾಜಿನದ ಮೇಲೆ ಎಳ್ಳುಗಳನ್ನು ರಾಶಿಯಿಟ್ಟು, ಅದರ ಮೇಲೆ ಬಂಗಾರದ ರಥವನ್ನು ಸ್ಥಾಪಿಸಬೇಕು. ಅದಕ್ಕೆ ಎಂಟು ಅಥವಾ ನಾಲ್ಕು ಕುದುರೆಗಳನ್ನೂ ನಾಲ್ಕೂ ಚಕ್ರಗಳನ್ನೂ ಇಂದ್ರ ನೀಲಮಣಿಯ ಧ್ವಜರೂಪವಾದ ಕುಂಭವನ್ನೂ ಮಾಡಿಸಬೇಕು. ಅಷ್ಟಲೋಕ ಪಾಲಕರನ್ನು ನಾಲ್ಕು ಪೂರ್ಣ ಕಲಶಗಳನ್ನು ಹದಿನೆಂಟು ಧಾನ್ಯಗಳನ್ನು ಅಲ್ಲಲ್ಲಿ ಇರಿಸಬೇಕು. ಮೇಲಿನ ಹಂದರದ ಮೇಲೆ, ರೇಶಿಮೆ ಬಟ್ಟೆಯನ್ನು, ಕಬ್ಬಿನ ಗಳ, ಮಾಲೆ, ಹಣ್ಣು, ಕಾಯಿಗಳನ್ನು ಅಲ್ಲಲ್ಲಿ ನಿಲ್ಲಿಸಿ, ತೂಗಿಬಿಟ್ಟು ಭಕ್ತಿಯಿಂದ ಅಧಿವಾಸನ ಮಾಡಿ, ಆ ವೇದಿಕೆಯಲ್ಲಿ ಆ ಕುದುರೆ ಹೂಡಿದ ಚಿನ್ನದ ರಥವನ್ನು ದಾನ ಕೊಡಬೇಕು.

ಮೂರು ಪಲಕ್ಕಿಂತ ಹೆಚ್ಚು ತೂಕದ ರಥವನ್ನು ಎಂಟು, ನಾಕು, ಎರಡು ಕುದುರೆಗಳನ್ನಾದರೂ ಚಿನ್ನದಿಂದ ಮಾಡಿಸಿ, ಹೂಡಿ, ಬ್ರಾಹ್ಮಣರು ಸ್ನಾನ ಮಾಡಿಸಿದ ಬಳಿಕ ದಾನ ಸಂಕಲ್ಪವನ್ನು ಮಾಡಬೇಕು. ಮೂರು ಸಲ ಪ್ರದಕ್ಷಿಣೆ ಹಾಕಿ, ಕೈಯಲ್ಲಿ ಹೂವು ಹಿಡಿದು, ಕೆಳಗಿನ ಮಂತ್ರವನ್ನು ಉಚ್ಚರಿಸಬೇಕು.

**"ನಮೋನಮಃ ಪಾಪವಿನಾಶನಾಯ ವಿಶ್ವಾತ್ಮನೇ**
**ವೇದತುರಂಗಮಾಯ ।**
**ಧಾಮ್ನಾಮಧೀಶಾಯ ದಿವಾಕರಾಯ ಪಾಪೌಘ ದಾವಾನಲ**
**ದೇಹಿ ಶಾಂತಿಮ್ ॥"**

**ವಸ್ವಷ್ಟಕಾದಿತ್ಯ ಮರುದ್ಗಣಾನಾಂ ತ್ವಮೇವ ಧಾತಾ ಪರಮಂ**
**ನಿದಾನಮ್ ।**
**ಯತಸ್ತತೋ ಮೇ ಹೃದಯಂ ಪ್ರಯಾತು ಧರ್ಮೈಕತಾ**
**ನ ತ್ವಮಘೌಘ ನಾಶಾತ್ ॥**

ಪಾಪಗಳನ್ನೆಲ್ಲ ನಾಶ ಮಾಡುವ, ಪ್ರಭೆಯಿಂದ ವಿಶ್ವವನ್ನೆಲ್ಲ ವ್ಯಾಪಿಸುವ, ವೇದ ಗಳೆಂಬ ಕುದುರೆ ಹೂಡಿದ ತೇರಿನಲ್ಲಿ ಕುಳಿತು ಪ್ರಯಾಣ ಮಾಡುವ, ತೇಜಸ್ಸುಗಳ

ಸೂರ್ಯನಿಗೆ ಅಧಿಪತಿಯಾದ ನಮೋನಮಃ ಪಾಪಗಳ ರಾಶಿಯನ್ನೆಲ್ಲ ಕಾಡ್ಗಿಚ್ಚಿನಂತೆ ಸುಟ್ಟು ರಾಶಿ ಮಾಡುವ ದಿವಾಕರನೇ, ನಮಗೆ ಶಾಂತಿಯನ್ನು ಕರುಣಿಸು.

ಎಂಟು ವಸುಗಳೂ ಹನ್ನೆರಡೂ ಆದಿತ್ಯರೂ ಮರುದ್ಗಣಗಳೇ ಮುಂತಾದ ದೇವತೆಗಳಿಗೆಲ್ಲ ನೀನೇ ಅಧೀಶ್ವರನಾಗಿರುವೆ. ನೀನೇ ನಮಗೆ ಶರಣು. ನಮ್ಮ ದುರಿತಗಳ ಮೊತ್ತವನ್ನೆಲ್ಲ ಕಳೆದು ಕರುಣಿಸು. ನಮ್ಮ ಹೃದಯವು ಎಲ್ಲಿಯೆ ಹರಿದಾಡಿದರೂ ಧರ್ಮನಿಷ್ಠೆ ಮಾತ್ರಕಡಿಮೆಯಾಗದಿರಲಿ. ನಮ್ಮಲ್ಲಿ ಧರ್ಮಶ್ರದ್ಧೆ ಬೆಳೆಯಲಿ'' ಎಂಬ ಪ್ರಾರ್ಥನಾ ಮಂತ್ರದೊಂದಿಗೆ ಆ ರಥವನ್ನು ಗುರುಗಳಿಗೆ ದಾನ ನೀಡಬೇಕು.

ಹೀಗೆ ಪ್ರಾರ್ಥನೆಮಾಡಿ ಈ ಮಿಸುನಿಗುದುರೆಯುಳ್ಳ ಚಿನ್ನದ ದಾನ ಮಹೋತ್ಸವವನ್ನು ಉತ್ಸಾಹದಿಂದಲೂ ಭಕ್ತಿಯಿಂದಲೂ ನೆರವೇರಿಸಬೇಕು. ಇಂಥ ಸುವರ್ಣ ಅಶ್ವ, ಸುವರ್ಣ ರಥಗಳನ್ನು ದಾನ ಮಾಡುವ ಮನುಷ್ಯನು ತನ್ನ ಸಕಲ ಪಾಪಗಳನ್ನು ಕಳೆದುಕೊಂಡು ಮಹೇಶ್ವರನ ದಿವ್ಯ ಸ್ಥಾನವನ್ನು ಪಡೆಯುವನು. ಮತ್ತು

''ದೇದೀಪ್ಯಮಾನ ವಪುಷಾ ವಿಜಿತ ಪ್ರಭಾವ-
ಮಾಕ್ರಮ್ಯ ಮಂಡಲಮಖಂಡಿತ ಚಂಡಭಾನೋಃ ।

ಸಿದ್ಧಾಂಗನಾ ನಯನ ಷಟ್ಪದ ದೀಯಮಾನ
ವಕ್ತ್ರಾಂಬುಜೋಽಂ ಬುಜಭವೇನ ಚಿರಂ ಸಹಾಸ್ತೇ ॥

ಪ್ರಭಾಕಾಂತಿಯಿಂದ ಹೊಳೆಯುವ ದಿವ್ಯದೇಹದಿಂದ ಸೂರ್ಯಮಂಡಲವನ್ನು ಭೇದಿಸಿ ಸ್ವರ್ಗಾದಿ ಪುಣ್ಯಲೋಕಗಳಲ್ಲಿ ಶಿವ ಬ್ರಹ್ಮಾದಿ ದೇವತೆಗಳೊಂದಿಗೆ ಬಹುಕಾಲ ವಾಸಿಸುವನು. ಸಿದ್ಧ ಸುಂದರಿಯರ ಚೆಲವುಗಂಗಳು ತುಂಬಿಗಳಂತೆ ಅವನ ಮುಖ ಕಮಲಕ್ಕೆ ಮುತ್ತುವವು.

ಈ ಸುವರ್ಣಾಶ್ವರಥದಾನದ ವಿಧಿಯನ್ನು ಪಠಿಸಿದವನೂ, ಕೇಳಿದವನೂ ಎಂದೂ ನರಕಕ್ಕೆ ಹೋಗುವದೇ ಇಲ್ಲ. ಆದರೆ ನರಕಾಂತನಾದ ನಾರಾಯಣನ ಸನ್ನಿಧಿಗೆ ಮತ್ತೆ ಮತ್ತೆ ಪ್ರಯಾಣ ಬೆಳೆಸುತ್ತಾನೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಂಬತ್ತೆರಡನೆಯ ಅಧ್ಯಾಯ ಮುಗಿದುದು.*

—o—

## ಬಂಗಾರದ ಆನೆಯ ದಾನದ ವರ್ಣನೆಯು | ಅಧ್ಯಾಯ - ೨೮೩

<u>**ಮತ್ಸ್ಯ ಉವಾಚ**</u>

**"ಅಥಾತಃ ಸಂಪ್ರವಕ್ಷ್ಯಾಮಿ ಹೇಮಹಸ್ತಿರಥಂ ಶುಭಮ್ ।**
**ಯಸ್ಯ ಪ್ರದಾನಾದ್ಭುವನಂ ವೈಷ್ಣವಂ ಯಾತಿ ಮಾನವಃ ॥**

**ಮತ್ಸ್ಯ** :- ಈಗ ಚಿನ್ನದ ಆನೆಯ ರಥದ ದಾನ ವಿಧಿಯನ್ನು ಹೇಳುತ್ತೇನೆ. ಇದರಿಂದ ದಾನಮಾಡಿದವನು ವಿಷ್ಣುಲೋಕ ಹೊಂದುತ್ತಾನೆ. ಲೋಕಪಾಲಕರ ಆವಾಹನೆ, ಋತ್ವಿಜ, ಕುಂಡಮಂಡಪ, ವೇದಿಕಾರಚನೆ, ಬ್ರಾಹ್ಮಣಾಶೀರ್ವಾದ, ಸಲಕರಣೆಗಳ ತಯಾರಿ ಮುಂತಾದುದನ್ನೆಲ್ಲ ತುಲಾಪುರುಷ ದಾನದಲ್ಲಿ ಹೇಳಿದಂತೆ ಎಲ್ಲ ಸಿದ್ಧತೆ ಮಾಡಿಕೊಂಡು ಒಂದು ದಿನ ಉಪವಾಸವಿದ್ದು, ಮರು ದಿನ ಬ್ರಾಹ್ಮಣರ ಜೊತೆಗೆ ಭೋಜನ ಮಾಡಬೇಕು.

ನಾಲ್ಕು ಚಕ್ರವುಳ್ಳ, ಪುಷ್ಪರಥದ ಆಕಾರದಲ್ಲಿ ಒಂದು ಬಂಗಾರದ ರಥವನ್ನು ರತ್ನಖಚಿತವಾಗಿ ಮಾಡಿಸಿ, ಕೃಷ್ಣಾಜಿನದ ಮೇಲೆ ಹರವಿದ ಎಳ್ಳಿನ ರಾಶಿಯಲ್ಲಿ ಇಡಬೇಕು. ಎಂಟು ಲೋಕಪಾಲಕರನ್ನು, ಬ್ರಹ್ಮ, ಸೂರ್ಯ, ಶಿವ ಮುಂತಾದ ದೇವತೆಗಳನ್ನು ವಿಹಿತ ಸ್ಥಾನಗಳಲ್ಲಿ ಪ್ರತಿಷ್ಠಾಪಿಸಬೇಕು. ರಥದ ಮಧ್ಯದಲ್ಲಿ ಶ್ರೀ ಲಕ್ಷ್ಮೀನಾರಾಯಣರನ್ನು ಪ್ರತಿಷ್ಠಾಪಿಸಬೇಕು. ಹದಿನೆಂಟು ಧಾನ್ಯ, ಆಸನ, ಚಂದನ, ಪಾತ್ರೆ, ದೀಪ, ಗಂಧ, ಚಾಮರ, ಛತ್ರ, ಕನ್ನಡಿ, ಪಾದುಕೆ, ಮುಂತಾದವುಗಳನ್ನು ಅಲ್ಲಲ್ಲಿ ಇರಿಸಿ, ಧ್ವಜದ ಮೇಲೆ ಗರುಡನನ್ನು, ನೊಗದ ಮೇಲೆ ಗಣಪತಿಯನ್ನು ಕೂಡಿಸಬೇಕು.

ನಾಲ್ಕು ಕಲಶಗಳಿರಬೇಕು. ಪಂಚರಂಗೀ ರೇಶಿಮೆಯ ಬಟ್ಟೆಗಳಿಂದ ಮೇಲ್ಗಟ್ಟನ್ನು ಕಟ್ಟಿ, ಹಣ್ಣಿನ ಗೊನೆ ಹೂಗೊಂಚಲುಗಳನ್ನು ತೂಗು ಬಿಡಬೇಕು. ಎಂಟು ಗೋವುಗಳನ್ನು ಅಲ್ಲಿಯೇ ನಿಲ್ಲಿಸಬೇಕು. ನಾಲ್ಕು ಬಂಗಾರದ ಆನೆಗಳನ್ನು ಮುತ್ತಿನ ಸರಹಾಕಿ, ಆ ಚಿನ್ನದ ರಥದ ಮುಂದೆ ನಿಲ್ಲಿಸಿ, ದಾನ ಕೊಡಬೇಕು. ಆನೆಗಳನ್ನು ಐದು ಪಲದ ಮೇಲೆ ಶಕ್ತಿಯಿದ್ದಷ್ಟು ತೂಕದಲ್ಲಿ ಎರಡನ್ನಾದರೂ ಮಾಡಿಸಬೇಕು. ಬ್ರಾಹ್ಮಣರು, ಮಂಗಲ ಶಬ್ದದಿಂದ ಮಂತ್ರಪೂತಜಲದಿಂದ ಸ್ನಾನ ಮಾಡಿಸಿ ಬಳಿಕ, ಬೊಗಸೆ ತುಂಬ ಹೂವು ಹಿಡಿದುಕೊಂಡು, ಈ ಮಂತ್ರವನ್ನು ಹೇಳಬೇಕು.

**ನಮೋ ನಮಃ ಶಂಕರ ಪದ್ಮಜಾರ್ಕ-**
**ಲೋಕೇಶ ವಿದ್ಯಾಧರ ವಾಸುದೇವೈಃ ॥**
**ತ್ವಂ ಸೇವ್ಯಸೇ ವೇದ ಪುರಾಣಯಜ್ಞೈಃ ।**
**ತೇಜೋಮಯ ಸ್ಯಂದನ ಪಾಹಿ ತಸ್ಮಾತ್ ॥**

ತೇಜಃಪುಂಜದಂತಿದ್ದ ಬಂಗಾರದ ರಥಕ್ಕೆ ನಮೋನಮಃ. ಹರಿಹರ ಬ್ರಹ್ಮ ಸೂರ್ಯ, ಲೋಕಪಾಲ, ವಿದ್ಯಾಧರ, ಯಜ್ಞ, ಪುರಾಣಗಳೆಲ್ಲದರಿಂದ ಸೇವಿತನಾದ ನೀನು ನನ್ನ ಪೂಜೆಯನ್ನು ಸ್ವೀಕರಿಸಿ ರಕ್ಷಿಸು.

ಯತ್ತತ್ಪದಂ ಪರಮಗುಹ್ಯತಮಂ ಮುರಾರೇ-
ರಾನಂದ ಹೇತು ಗುಣ ರೂಪ ವಿಮುಕ್ತಮಂತಃ ॥

ಯೋಗೈಕ ಮಾನಸದೃಶೋ ಮುನಯಃ ಸಮಾಧೌ ।
ಪಶ್ಯಂತಿ ತತ್ತ್ವಮಸಿ ನಾಥ ಪದೇಽಧಿರೂಢಃ ॥

ಅತ್ಯಂತ ಗುಹ್ಯತಮವೂ ಆನಂದದಾಯಕವೂ ಯೋಗಿಗಳ ದಿವ್ಯದೃಷ್ಟಿಗೆ ಮಾತ್ರ ಗೋಚರಿಸಲ್ಪಡುವಂತಹದೂ ಅಮಂಗಲಗುಣ ರೂಪಗಳಿಂದ ರಹಿತವಾದುದೂ ಆದ ಶ್ರೀಹರಿಯು ಕುಳಿತುಕೊಳ್ಳುವ ದಿವ್ಯಸ್ಥಾನ ನೀನೇ ಆಗಿರುವೆ.

"ಯಸ್ಮಾತ್ತ್ವಮೇವ ಭವ ಸಾಗರ ಸಂಪ್ಲುತಾನಾ-
ಮಾನಂದಭಾಂಡ ಮೃತಮಧ್ವರ ಪಾನಪಾತ್ರಮ್ ॥

ತಸ್ಮಾದಘೌಘಶಮನೇನ ಕುರುಪ್ರಸಾದಂ ।
ಚಾಮೀಕರೇಭರಥ ಮಾಧವ ಸಂಪ್ರದಾನಾತ್ ॥

ಈ ಚಿನ್ನದ ರಥದಲ್ಲಿ ಮಂಡಿಸಿದ ಲಕ್ಷ್ಮೀಪತಿಯಾದ ಶ್ರೀಹರಿಯೇ, ಸಂಸಾರ ಸಾಗರದಲ್ಲಿ ತೇಲಾಡುವ ಜನರನ್ನೆಲ್ಲ ರಕ್ಷಿಸಿ ಆನಂದನೀಡುವ ಸುಖನಿಧಿಯೇ ನೀನು. ನೀನೇ ಯಜ್ಞ, ಯಜ್ಞಪಾತ್ರ, ಯಜ್ಞಪತಿ, ಯಜ್ಞಗತಿ, ಯಜ್ಞರೂಪಿ, ಯಜ್ಞಮಯ. ನನ್ನ ಪಾಪಗಳನ್ನೆಲ್ಲ ನೀನೇ ಪರಿಹರಿಸು. ಈ ಚಿನ್ನದ ರಥದ ದಾನದಿಂದ ನನ್ನ ಪಾಪರಾಶಿ ಯೆಲ್ಲ ನಾಶವಾಗುವಂತೆ ಮಾಡು" ಹೀಗೆ ಪ್ರಾರ್ಥಿಸಿ ಬಂಗಾರದ ಆನೆ ರಥವನ್ನು ದಾನದಿಂದ ನೀಡಬೇಕು.

"ಇತ್ಥಂ ಪ್ರಣಮ್ಯ ಕನಕೇಭ ರಥಪ್ರಧಾನಂ ।
ಯಃಕಾರಯೇತ್ ಸಕಲ ಪಾಪವಿಮುಕ್ತದೇಹಃ ॥

ವಿದ್ಯಾಧರಾಮರ ಮುನೀಂದ್ರ ಗಣಾಭಿಜುಷ್ಟಃ ।
ಪ್ರಾಪ್ನೋತ್ಯಸೌ ಪದಮತೀಂದ್ರಿಯಮಿಂದುಮೌಲೇಃ ॥

ಇಂಥ ಬಂಗಾರದ ಆನೆ ರಥಗಳ ದಾನ ಮಾಡಿದವನು ಸಮಸ್ತ ಪಾಪಮುಕ್ತನಾಗಿ ವಿದ್ಯಾಧರರೂ, ದೇವತೆಗಳೂ, ಮುನಿಪುಂಗವರೂ, ಗಣಾಧೀಶರೂ ಮಾತ್ರ ಹೊಂದಲು ಶಕ್ಯವಾದ ಚಂದ್ರಚೂಡನಾದ ಶಿವನ ದಿವ್ಯಲೋಕವನ್ನು ಹೊಂದುತ್ತಾನೆ.

ಜನ್ಮಾಂತರದಲ್ಲಿ ಹಿಂದೆ ಮಾಡಿದ ಘೋರ ಪಾತಕಗಳ ದಳ್ಳುರಿಯಿಂದ ಬೆಂದು ಬೇಗುದಿಗೊಂಡ ಪಾಪಿಗಳೂ ಕೂಡ ಈ ಹೇಮರಥ ದಾನದಿಂದ ಪಾಪಮುಕ್ತ ನಾಗುವರು. ಮತ್ತು ತಮ್ಮ ತಾಯಿತಂದೆ ಮಕ್ಕಳು ಬಂಧು ಬಳಗದವರನ್ನೆಲ್ಲ ತನ್ನೊಡನೆ ವಿಷ್ಣುಲೋಕಕ್ಕೆ ಕರೆದೊಯ್ಯುವರು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಂಬತ್ತಮೂರನೆಯ ಅಧ್ಯಾಯ ಮುಗಿದುದು.*

—o—

## ಪಂಚ ಲಾಂಗಲಕ ಮಹಾದಾನದ ವರ್ಣನೆ

**ಅಧ್ಯಾಯ - ೨೮೪**

**ಮತ್ಸ್ಯ ಉವಾಚ**

**"ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನಮನುತ್ತಮಮ್ ।**
**ಪಂಚಲಾಂಗಲಕಂ ನಾಮ ಮಹಾಪಾತಕ ನಾಶನಮ್ ॥**

**ಮತ್ಸ್ಯ** :- ಈಗ, ಮಹಾಪಾತಕ ನಾಶಕ ಎನಿಸುವ, ಪಂಚಲಾಂಗಲಕ ಎಂಬ ಮಹಾದಾನದ ಬಗೆಗೆ ಹೇಳುತ್ತೇನೆ. ಯುಗಾದಿ ಮುಂತಾದ ಯಾವುದಾದರೂ ಒಂದು ಪುಣ್ಯ ದಿನದಲ್ಲಿ, ಐದು ನೇಗಿಲಗಳಿಂದ ಕೂಡಿದ ಭೂಮಿ ದಾನ ಕೊಡಬೇಕು.

ಒಂದು ಹೊಲ ಅಥವಾ ಗದ್ದೆ, ಅಥವಾ ಇಪ್ಪತ್ತೈದು ಗುಂಟೆ ಅಥವಾ ಇದರ ಅರ್ಧ ಭೂಮಿಯನ್ನಾಗಲೀ, ಪಟ್ಟಣವನ್ನಾಗಲೀ ಇಡೀ ಒಂದು ಗ್ರಾಮ ಯಾವದಾದರೊಂದನ್ನು ತನ್ನ ಯೋಗ್ಯತಾನುಸಾರವಾಗಿ ದಾನ ಕೊಡಬೇಕು.

ಗಟ್ಟಿಯಾದ ಕಟ್ಟಿಗೆಗಳಿಂದ ಐದು ನೇಗಿಲುಗಳನ್ನು ಮಾಡಿಸಿ ಆ ಗ್ರಾಮ ಭೂಮಿಗಳ ಜೊತೆಗೆ ಬಂಗಾರದ ಚಿಕ್ಕ ಐದು ನೇಗಿಲುಗಳನ್ನು ಐದು ಪಲ ಬಂಗಾರದಿಂದ ಸಾವಿರ ಪಲದವರೆಗೆ ಯೋಗ್ಯತಾನುಸಾರ ಮಾಡಿಸಿ ಉಳಿದೆಲ್ಲ ಬೇಸಾಯದ ಸಲಕರಣೆಗಳನ್ನೂ ಅದರೊಂದಿಗೆ ಇಟ್ಟು ದಾನ ಕೊಡಬೇಕು.

ಹತ್ತು ಎತ್ತುಗಳನ್ನು ಬಂಗಾರದ ಕೊಂಬು, ಬಂಗಾರದ ಕೋಡು, ಮುತ್ತಿನ ಬಾಲ, ಬೆಳ್ಳಿಯ ಪಾದ, ಅಗುರು, ತಿಲಕ, ಕೆಂಪು ರೇಶಿಮೆಯ ಬಟ್ಟೆ, ಹೂವು, ಹಾರ, ಚಂದನಗಳಿಂದ ಅಲಂಕರಿಸಿ, ಗೋಶಾಲೆಯಲ್ಲಿ ಕಟ್ಟಬೇಕು. ತುಲಾಪುರುಷ ದಾನ ವಿಧಿಯಲ್ಲಿ ಹೇಳಿದಂತೆ ಋತ್ವಿಜ, ಮಂಡಪ, ದೇವತೆಗಳ ಆಹ್ವಾನಾದಿಗಳನ್ನು ಮಾಡಿ, ಪಲಾಶ, ಸಮಿಧೆ, ತುಪ್ಪ, ಕರಿ, ಎಳ್ಳುಗಳಿಂದ ಹೋಮ ಮಾಡಬೇಕು. ಇಂದ್ರ, ಆದಿತ್ಯ, ರುದ್ರರಿಗೆ, ಪಾಯಸದ ಚರುವನ್ನು ಒಂದೇ ಕುಂಡದಲ್ಲಿ ಗುರುಗಳು ನಿರ್ವಪನ ಮಾಡಬೇಕು.

ಯಜಮಾನನು ಸ್ನಾನಮಾಡಿ ಬಿಳಿಬಟ್ಟೆಧರಿಸಿ, ದ್ವಿಜದಂಪತಿಗಳನ್ನು ಆಹ್ವಾನಿಸಿ ಬಂಗಾರದ ಸೂತ್ರ, ಚಿನ್ನದ ಸರ, ಬಳೆ, ರತ್ನಗಳನ್ನೂ ಸಪರಿಕರವಾದ ಹಾಸಿಗೆಯನ್ನೂ ದಾನ ಕೊಡಬೇಕು. ಬಂಗಾರದ ಉಂಗುರ, ರೇಷಿಮೆಯ ಜೋಡು ವಸ್ತ್ರ ಮತ್ತು ಮುತ್ತು ರತ್ನಾದಿಗಳನ್ನು ನೀಡಿ ಆಚಾರ್ಯರನ್ನೂ ಋತ್ವಿಜರನ್ನೂ ಪೂಜಿಸಬೇಕು. ಕರು ಹಾಗೂ ಹಿಂಡುವ ಪಾತ್ರೆ ಸಹಿತವಾಗಿ ಹಸುವನ್ನು ದಾನ ಕೊಡಬೇಕು. ಹದಿನೆಂಟು ಬಗೆಯ ಧಾನ್ಯಗಳನ್ನು ನೇಗಿಲ ಬಳಿ ಸುತ್ತಲೂ ಇಟ್ಟು ಬೊಗಸೆಯಲ್ಲಿ ಹೂಗಳನ್ನು ತುಂಬಿಕೊಂಡು ಪ್ರದಕ್ಷಿಣೆ ಮಾಡಿ ಈ ಮಂತ್ರ ಹೇಳಿ ದಾನವಿಧಿಯನ್ನು ಪೂರೈಸಬೇಕು.

**"ಯಸ್ಮಾದ್ದೇವಗಣಾಸ್ಸರ್ವೇ ಸ್ಥಾವರಾಣಿ ಚರಾಣಿ ಚ ।**
**ಧುರಂಧರಾಂಗೇ ತಿಷ್ಠಂತಿ ತಸ್ಮಾದ್ ಭಕ್ತಿಃ ಶಿವೇಽಸ್ತು ಮೇ ॥**

**ಯಸ್ಮಾಚ್ಚ ಭೂಮಿದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ।**
**ದಾನಾನ್ಯನ್ಯಾನಿ ಮೇ ಭಕ್ತಿಃಧರ್ಮ ಏವ ದೃಢಾ ಭವೇತ್ ॥**

ಸಕಲ ದೇವತೆಗಳೂ ಚರಾಚರಗಳೂ ನೇಗಿಲ ಹೊತ್ತ ಎತ್ತಿನ ಮೈಯಲ್ಲಿ ವಾಸಿಸುವವು. ಆದುದರಿಂದ ಅಂಥ ನೇಗಿಲ ವಾಹಕವಾದ ಎತ್ತನ್ನು ವಾಹನವನ್ನಾಗಿ ಮಾಡಿಕೊಂಡ ಶ್ರೀ ಶಿವನಲ್ಲಿ ನನಗೆ ಪರಮ ಭಕ್ತಿಯು ನಿರಂತರವಾಗಿಯೂ ಇರಲಿ. ಉಳಿದೆಲ್ಲ ದಾನಗಳು ಭೂಮಿ ದಾನದ ಹದಿನಾರರಲ್ಲಿ ಒಂದು ಪಾಲಿನಷ್ಟು ಪುಣ್ಯವನ್ನು ಕೂಡ ಕೊಡಲಾರವು. ಆದುದರಿಂದ ಧರ್ಮದಲ್ಲಿ ನನಗೆ ದೃಢವಾದ ಭಕ್ತಿಯು ಇರಲಿ'' ಎಂಬ ಈ ಮಂತ್ರ ಹೇಳಿ ಐದು ಕಟ್ಟಿಗೆಯ ನೇಗಿಲುಗಳನ್ನೂ ಐದು ಚಿನ್ನದ ನೇಗಿಲುಗಳನ್ನೂ ಯೋಗ್ಯ ಗುರುಗಳಿಗೆ ದಾನನೀಡಬೇಕು.

ಏಳು ಮೊಳದ ಅಳತೆಗೋಲಿನಿಂದ ಮೂವತ್ತು ಕೋಲು ಅಡ್ಡ ಮೂವತ್ತು ಕೋಲು ಅಗಲ ಅಳೆದರೆ ಆಗುವ ವಿಸ್ತಾರ ಪ್ರದೇಶಕ್ಕೆ ಒಂದು ನಿವರ್ತನ ಎನ್ನುವರು. ಇದರಲ್ಲಿ ಮೂರರಲ್ಲಿ ಒಂದು ಪಾಲು ಭೂಮಿಗೆ ಗೋಚರ್ಮ ಎಂದು ಬ್ರಹ್ಮದೇವರು ಹೇಳಿದ್ದಾರೆ. ಈ ಪ್ರಮಾಣದಿಂದ ನೂರು ನಿವರ್ತನಗಳಷ್ಟು ಭೂಮಿಯನ್ನು ಮೇಲೆ ಹೇಳಿದ ವಿಧಿಪೂರ್ವಕವಾಗಿ ದಾನಮಾಡುವವನ ಪಾಪಗಳೆಲ್ಲವೂ ಪ್ರಣಾಶ ಹೊಂದುವವು. ಇದರರ್ಧದಷ್ಟು ಭೂಮಿಯನ್ನಾಗಲೀ ಅಥವಾ ಕನಿಷ್ಟ ಗೋಚರ್ಮ ಪರಿಮಾಣದಷ್ಟಾಗಲೀ ಭೂಮಿಯನ್ನು ದಾನ ನೀಡಬೇಕು. ಅಷ್ಟೂ ದಾನ ಕೊಡುವ ಯೋಗ್ಯತೆ ಇಲ್ಲದಿದ್ದರೆ ಕೊನೆಗೆ ಒಂದು ಮನೆ ಕಟ್ಟಿಸಲಿಕ್ಕೆ ಬೇಕಾಗುವಷ್ಟಾದರೂ ಭೂಮಿಯನ್ನು ಪ್ರಧಾನ ಮಾಡಬೇಕು.

''ಯಾವಂತಿ ಲಾಂಗಲಕ ಮಾರ್ಗ ಮುಖಾನಿ ಭೂಮೇ ।
ರ್ಭಾಸಾಂಪತೇರ್ದುಹಿತರಂಗಜ ರೋಮಕಾಣಿ ॥
ತಾವಂತಿ ಶಂಕರ ಪುರೇ ಸ ಸಮಾ ಹಿ ತಿಷ್ಠೇದ್ ।
ಭೂಮಿ ಪ್ರದಾನಮಿಹ ಯಃ ಕುರುತೇ ಮನುಷ್ಯಃ ॥

ಮೇಲೆ ಹೇಳಿದ ವಿಧಿಯಿಂದ ಮೇಲೆ ಹೇಳಿದ ಪ್ರಮಾಣಕ್ಕೆ ಅನುಸರಿಸಿ ಹೊಲವನ್ನು ನೇಗಿಲು ಸಹಿತವಾಗಿ ಹಸುವಿನೊಂದಿಗೆ ದಾನ ನೀಡುವ ಮನುಷ್ಯನು ಆ ಭೂಮಿಯ ಮೇಲೆ ನೇಗಿಲುಗಳ ಸಾಲುಗಳು ಎಷ್ಟಿರುವವೋ ಮತ್ತು ಆ ಹಸುವಿನ ಮೈಯಲ್ಲಿ ಕೂದಲುಗಳು ಎಷ್ಟಿರುವವೋ ಅಷ್ಟು ಸಂಖ್ಯೆಯ ವರ್ಷಗಳ ತನಕ ಶಂಕರನ ಕೈಲಾಸ ಲೋಕದಲ್ಲಿ ವಾಸಿಸುತ್ತಾನೆ.

''ಗಂಧರ್ವ ಕಿನ್ನರ ಸುರಾಸುರ ಸಿದ್ಧಸಂಘೈ-
ರಾಧೂತ ಚಾಮರ ಮುಪೇತ್ಯ ಮಹದ್ವಿಮಾನಮ್ ॥
ಸಂಪೂಜ್ಯತೇ ಪಿತೃ ಪಿತಾಮಹ ಬಂಧು ಯುಕ್ತಃ ।
ಶಂಭೋಃ ಪರಂ, ವ್ರಜತಿ ಚಾಮರ ನಾಯಕಸ್ಸನ್ ॥

ದೇವದಾನವರೂ ಗಂಧರ್ವ ಕಿನ್ನರರೂ ನಿಂತು ಚಾಮರ ಬೀಸುತ್ತಿರುವ ದಿವ್ಯ ವಿಮಾನದಲ್ಲಿ ಇಂಥ ಭೂದಾನ ಲಾಂಗಲ ದಾನ ಮಾಡಿದ ಮನುಷ್ಯನು ತನ್ನ ತಂದೆ ತಾತ ಬಂಧು ಬಳಗದೊಂದಿಗೆ ಕುಳಿತುಗೊಂಡು ದೇವತಾಗಣದ ಒಡೆಯನಾಗಿ ಶಿವನ ಸ್ಥಾನವನ್ನು ಐದುತ್ತಾನೆ.

**"ಇಂದ್ರತ್ವಮಪ್ಯಧಿಗತಂ ಕ್ಷಯಮಭ್ಯುಪೈತಿ ।**
**ಗೋ ಭೂಮಿ ಲಾಂಗಲ ಧುರಂಧರ ಸಂಪ್ರದಾನಾತ್ ॥**

**ತಸ್ಮಾದಘೌಘ ಪಟಲ ಕ್ಷಯ ಕಾರಿ ಭೂಮೇ**
**ರ್ದಾನಂ ವಿಧೇಯಮಭಿಭೂತಿ ಭವಾಭವಾಯ ॥**

ಯಜ್ಞಯಾಗಾದಿಗಳಿಂದ ಸಂಪಾದಿಸುವ ಇಂದ್ರಪದವಿಯೂ ಕೂಡ ಶಾಶ್ವತವಲ್ಲ. ಒಂದಿಲ್ಲ ಒಂದು ದಿನ ಪುಣ್ಯ ಸವೆದ ಬಳಿಕ ಅದರಿಂದ ಪತನವು ನಿಶ್ಚಿತವೇ ಸರಿ. ಆದರೆ ಗೋದಾನ, ಭೂದಾನ, ವೃಷಭದಾನ, ನೇಗಿಲ ದಾನಗಳಿಂದ ಬರುವ ಪುಣ್ಯಕ್ಕೂ ಅದರಿಂದುಂಟಾಗುವ ಫಲಕ್ಕೂ ಎಂದಿಗೂ ಚ್ಯುತಿಯೇ ಇಲ್ಲ. ಆದುದರಿಂದ ಮಾನವರ ಪಾಪಗಳ ಹಿಂಡು ತಂಡಗಳನ್ನೆಲ್ಲ ಧ್ವಂಸ ಮಾಡುವ ಭೂದಾನವನ್ನು ಅವಶ್ಯವಾಗಿ ಮಾಡಬೇಕು. ಅದರಿಂದ ಸರ್ವವಿಧ ಐಶ್ವರ್ಯ ಪ್ರಾಪ್ತಿಯಾಗುವದಲ್ಲದೆ ಕೊನೆಗೆ ಮೋಕ್ಷವೂ ಕೂಡ ದೊರಕುವುದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು.*



## ಹೇಮ ಧರಾಖ್ಯ ಮಹಾದಾನ ವರ್ಣನಂ | ಅಧ್ಯಾಯ - ೨೮೫

<u>ಮತ್ಸ್ಯ ಉವಾಚ</u>

**"ಅಥಾತಃ ಸಂಪ್ರವಕ್ಷ್ಯಾಮಿ ಧರಾದಾನಮನುತ್ತಮಮ್ ।**
**ಪಾಪ ಕ್ಷಯ ಕರಂ ನೃಣಾಮಮಂಗಲ್ಯವಿನಾಶನಮ್ ॥**

**ಮತ್ಸ್ಯ :-** ಇನ್ನು ಮೇಲೆ ಮಾನವರ ಅಶುಭ ಅಮಂಗಲಗಳನ್ನು, ದುರಿತ ದುರದೃಷ್ಟಗಳನ್ನು ಕಳೆಯತಕ್ಕ ಭೂದಾನದ ವಿಧಿಯನ್ನು ಹೇಳುತ್ತೇನೆ. ಕೇಳು.

ಬಂಗಾರದಲ್ಲಿ ಜಂಬೂದ್ವೀಪದಂತಿರುವ ಭೂಲೋಕದ ಒಂದು ಆಕಾರ ಮಾಡಿಸಬೇಕು. ಅದರ ಸುತ್ತಲೂ ಸೀಮಾ ಪರ್ವತ, ನಡುವೆ ಮೇರು ಪರ್ವತ, ಕಿಂಪುರುಷಾದಿ ಖಂಡಗಳು ಭಾರತಾದಿ ಒಂಭತ್ತು ನವವರ್ಷಗಳೂ, ಜಂಬೂದ್ವೀಪ, ಎಂಟು ಲೋಕ ಪಾಲಕರು, ಅಷ್ಟವಸುಗಳು, ಏಕಾದಶರುದ್ರರೂ, ದ್ವಾದಶ ಆದಿತ್ಯರೂ ಆಯಾ ಸ್ಥಳಗಳಲ್ಲಿ ಇರುವಂತೆ ಚಿತ್ರಿಸಬೇಕು. ಅಲ್ಲಲ್ಲಿ ಉತ್ತಮ ರತ್ನಗಳು ಹೊಳೆಯುತ್ತಿರಬೇಕು. ಹೊಳೆ ಹಳ್ಳ, ನದಿ, ಕೊಳ್ಳ, ಸಮುದ್ರ ಮುಂತಾದವುಗಳೆಲ್ಲ ಕಾಣಿಸುವಂತೆ ಭೂಪಟ ವನ್ನು ಬರೆಯಬೇಕು. ಈ ಭೂಚಿತ್ರವನ್ನು ಒಂದು ಸಾವಿರ ಪಲ ಅಥವಾ ಅರ್ಧದಷ್ಟು ಬಂಗಾರದಿಂದ ಸಿದ್ಧಗೊಳಿಸಬೇಕು.

ಬಡವರಿದ್ದರೆ ೩೦ ರಿಂದ ೧೦೦ ಪಲದವರೆಗೆ ಕೊನೆಗೆ ಐದು ಪಲ ಬಂಗಾರ ದಿಂದಾದರೂ ಭೂಮಿಯನ್ನುರಚಿಸಬೇಕು. ಇದಕ್ಕಿಂತ ಕಡಿಮೆಯಾಗಬಾರದು.

ಶಾಸ್ತ್ರಜ್ಞನಾದ ಯಜಮಾನನು ಋತ್ವಿಜರ ವರಣ ಕುಂಡಮಂಡಪಾದಿ ನಿರ್ಮಾಣ, ಬ್ರಾಹ್ಮಣರ ಆಶೀರ್ವಾದ, ಇತರ ಸಾಧನ ಸಲಕರಣೆಗಳನ್ನು ತುಲಾಪುರುಷದಾನದಂತೆ

ಸಕಲ ದೇವತೆಗಳೂ ಚರಾಚರಗಳೂ ನೇಗಿಲ ಹೊತ್ತ ಎತ್ತಿನ ಮೈಯಲ್ಲಿ ವಾಸಿಸುವವು. ಆದುದರಿಂದ ಅಂಥ ನೇಗಿಲ ವಾಹಕವಾದ ಎತ್ತನ್ನು ವಾಹನವನ್ನಾಗಿ ಮಾಡಿಕೊಂಡ ಶ್ರೀ ಶಿವನಲ್ಲಿ ನನಗೆ ಪರಮ ಭಕ್ತಿಯು ನಿರಂತರವಾಗಿಯೂ ಇರಲಿ. ಉಳಿದೆಲ್ಲ ದಾನಗಳು ಭೂಮಿ ದಾನದ ಹದಿನಾರರಲ್ಲಿ ಒಂದು ಪಾಲಿನಷ್ಟು ಪುಣ್ಯವನ್ನು ಕೂಡ ಕೊಡಲಾರವು. ಆದುದರಿಂದ ಧರ್ಮದಲ್ಲಿ ನನಗೆ ದೃಢವಾದ ಭಕ್ತಿಯು ಇರಲಿ'' ಎಂಬ ಈ ಮಂತ್ರ ಹೇಳಿ ಐದು ಕಟ್ಟಿಗೆಯ ನೇಗಿಲುಗಳನ್ನೂ ಐದು ಚಿನ್ನದ ನೇಗಿಲುಗಳನ್ನೂ ಯೋಗ್ಯ ಗುರುಗಳಿಗೆ ದಾನನೀಡಬೇಕು.

ಏಳು ಮೊಳದ ಅಳತೆಗೋಲಿನಿಂದ ಮೂವತ್ತು ಕೋಲು ಅಡ್ಡ ಮೂವತ್ತು ಕೋಲು ಅಗಲ ಅಳೆದರೆ ಆಗುವ ವಿಸ್ತಾರ ಪ್ರದೇಶಕ್ಕೆ ಒಂದು ನಿವರ್ತನ ಎನ್ನುವರು. ಇದರಲ್ಲಿ ಮೂರರಲ್ಲಿ ಒಂದು ಪಾಲು ಭೂಮಿಗೆ ಗೋಚರ್ಮ ಎಂದು ಬ್ರಹ್ಮದೇವರು ಹೇಳಿದ್ದಾರೆ. ಈ ಪ್ರಮಾಣದಿಂದ ನೂರು ನಿವರ್ತನಗಳಷ್ಟು ಭೂಮಿಯನ್ನು ಮೇಲೆ ಹೇಳಿದ ವಿಧಿಪೂರ್ವಕವಾಗಿ ದಾನಮಾಡುವವನ ಪಾಪಗಳೆಲ್ಲವೂ ಪ್ರಣಾಶ ಹೊಂದುವವು. ಇದರರ್ಧದಷ್ಟು ಭೂಮಿಯನ್ನಾಗಲೀ ಅಥವಾ ಕನಿಷ್ಟ ಗೋಚರ್ಮ ಪರಿಮಾಣದಷ್ಟಾಗಲೀ ಭೂಮಿಯನ್ನು ದಾನ ನೀಡಬೇಕು. ಅಷ್ಟೂ ದಾನ ಕೊಡುವ ಯೋಗ್ಯತೆ ಇಲ್ಲದಿದ್ದರೆ ಕೊನೆಗೆ ಒಂದು ಮನೆ ಕಟ್ಟಿಸಲಿಕ್ಕೆ ಬೇಕಾಗುವಷ್ಟಾದರೂ ಭೂಮಿಯನ್ನು ಪ್ರಧಾನ ಮಾಡಬೇಕು.

**''ಯಾವಂತಿ ಲಾಂಗಲಕ ಮಾರ್ಗ ಮುಖಾನಿ ಭೂಮೇ ।**
**ರ್ಭಾಸಾಂಪತೇರ್ದುಹಿತರಂಗಜ ರೋಮಕಾಣಿ ॥**

**ತಾವಂತಿ ಶಂಕರ ಪುರೇ ಸ ಸಮಾ ಹಿ ತಿಷ್ಠೇದ್ ।**
**ಭೂಮಿ ಪ್ರದಾನಮಿಹ ಯಃ ಕುರುತೇ ಮನುಷ್ಯಃ ॥**

ಮೇಲೆ ಹೇಳಿದ ವಿಧಿಯಿಂದ ಮೇಲೆ ಹೇಳಿದ ಪ್ರಮಾಣಕ್ಕೆ ಅನುಸರಿಸಿ ಹೊಲವನ್ನು ನೇಗಿಲು ಸಹಿತವಾಗಿ ಹಸುವಿನೊಂದಿಗೆ ದಾನ ನೀಡುವ ಮನುಷ್ಯನು ಆ ಭೂಮಿಯ ಮೇಲೆ ನೇಗಿಲುಗಳ ಸಾಲುಗಳು ಎಷ್ಟಿರುವವೋ ಮತ್ತು ಆ ಹಸುವಿನ ಮೈಯಲ್ಲಿ ಕೂದಲುಗಳು ಎಷ್ಟಿರುವವೋ ಅಷ್ಟು ಸಂಖ್ಯೆಯ ವರ್ಷಗಳ ತನಕ ಶಂಕರನ ಕೈಲಾಸ ಲೋಕದಲ್ಲಿ ವಾಸಿಸುತ್ತಾನೆ.

**''ಗಂಧರ್ವ ಕಿನ್ನರ ಸುರಾಸುರ ಸಿದ್ಧಸಂಘೈ-**
**ರಾಧೂತ ಚಾಮರ ಮುಪೇತ್ಯ ಮಹದ್ವಿಮಾನಮ್ ॥**

**ಸಂಪೂಜ್ಯತೇ ಪಿತೃ ಪಿತಾಮಹ ಬಂಧು ಯುಕ್ತಃ ।**
**ಶಂಭೋಃ ಪರಂ. ವ್ರಜತಿ ಚಾಮರ ನಾಯಕಸ್ಸನ್ ॥**

ದೇವದಾನವರೂ ಗಂಧರ್ವ ಕಿನ್ನರರೂ ನಿಂತು ಚಾಮರ ಬೀಸುತ್ತಿರುವ ದಿವ್ಯ ವಿಮಾನದಲ್ಲಿ ಇಂಥ ಭೂದಾನ ಲಾಂಗಲ ದಾನ ಮಾಡಿದ ಮನುಷ್ಯನು ತನ್ನ ತಂದೆ ತಾತ ಬಂಧು ಬಳಗದೊಂದಿಗೆ ಕುಳಿತುಗೊಂಡು ದೇವತಾಗಣದ ಒಡೆಯನಾಗಿ ಶಿವನ ಸ್ಥಾನವನ್ನು ಐದುತ್ತಾನೆ.

**"ಇಂದ್ರತ್ವಮಪ್ಯಧಿಗತಂ ಕ್ಷಯಮಭ್ಯುಪೈತಿ ।**
**ಗೋ ಭೂಮಿ ಲಾಂಗಲ ಧುರಂಧರ ಸಂಪ್ರದಾನಾತ್ ॥**

**ತಸ್ಮಾದಘೌಘ ಪಟಲ ಕ್ಷಯ ಕಾರಿ ಭೂಮೇ**
**ರ್ದಾನಂ ವಿಧೇಯಮಭಿಭೂತಿ ಭವಾಭವಾಯ ॥**

ಯಜ್ಞಯಾಗಾದಿಗಳಿಂದ ಸಂಪಾದಿಸುವ ಇಂದ್ರಪದವಿಯೂ ಕೂಡ ಶಾಶ್ವತವಲ್ಲ. ಒಂದಿಲ್ಲ ಒಂದು ದಿನ ಪುಣ್ಯ ಸವೆದ ಬಳಿಕ ಅದರಿಂದ ಪತನವು ನಿಶ್ಚಿತವೇ ಸರಿ. ಆದರೆ ಗೋದಾನ, ಭೂದಾನ, ವೃಷಭದಾನ, ನೇಗಿಲ ದಾನಗಳಿಂದ ಬರುವ ಪುಣ್ಯಕ್ಕೂ ಅದರಿಂದುಂಟಾಗುವ ಫಲಕ್ಕೂ ಎಂದಿಗೂ ಚ್ಯುತಿಯೇ ಇಲ್ಲ. ಆದುದರಿಂದ ಮಾನವರ ಪಾಪಗಳ ಹಿಂಡು ತಂಡಗಳನ್ನೆಲ್ಲ ಧ್ವಂಸ ಮಾಡುವ ಭೂದಾನವನ್ನು ಅವಶ್ಯವಾಗಿ ಮಾಡಬೇಕು. ಅದರಿಂದ ಸರ್ವವಿಧ ಐಶ್ವರ್ಯ ಪ್ರಾಪ್ತಿಯಾಗುವದಲ್ಲದೆ ಕೊನೆಗೆ ಮೋಕ್ಷವೂ ಕೂಡ ದೊರಕುವುದು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು.*



## ಹೇಮ ಧರಾಖ್ಯ ಮಹಾದಾನ ವರ್ಣನಂ — ಅಧ್ಯಾಯ - ೨೮೫

**ಮತ್ಸ್ಯ ಉವಾಚ**

**"ಅಥಾತಃ ಸಂಪ್ರವಕ್ಷ್ಯಾಮಿ ಧರಾದಾನಮನುತ್ತಮಮ್ ।**
**ಪಾಪ ಕ್ಷಯ ಕರಂ ನೃಣಾಮಮಂಗಲ್ಯವಿನಾಶನಮ್ ॥**

**ಮತ್ಸ್ಯ :-** ಇನ್ನು ಮೇಲೆ ಮಾನವರ ಅಶುಭ ಅಮಂಗಲಗಳನ್ನು, ದುರಿತ ದುರದೃಷ್ಟಗಳನ್ನು ಕಳೆಯತಕ್ಕ ಭೂದಾನದ ವಿಧಿಯನ್ನು ಹೇಳುತ್ತೇನೆ. ಕೇಳು.

ಬಂಗಾರದಲ್ಲಿ ಜಂಬೂದ್ವೀಪದಂತಿರುವ ಭೂಲೋಕದ ಒಂದು ಆಕಾರ ಮಾಡಿಸ ಬೇಕು. ಅದರ ಸುತ್ತಲೂ ಸೀಮಾ ಪರ್ವತ, ನಡುವೆ ಮೇರು ಪರ್ವತ, ಕಿಂಪುರುಷಾದಿ ಖಂಡಗಳು ಭಾರತಾದಿ ಒಂಭತ್ತು ನವವರ್ಷಗಳೂ, ಜಂಬೂದ್ವೀಪ, ಎಂಟು ಲೋಕ ಪಾಲಕರು, ಅಷ್ಟವಸುಗಳು, ಏಕಾದಶರುದ್ರರೂ, ದ್ವಾದಶ ಆದಿತ್ಯರೂ ಆಯಾ ಸ್ಥಳಗಳಲ್ಲಿ ಇರುವಂತೆ ಚಿತ್ರಿಸಬೇಕು. ಅಲ್ಲಲ್ಲಿ ಉತ್ತಮ ರತ್ನಗಳು ಹೊಳೆಯುತ್ತಿರಬೇಕು. ಹೊಳೆ ಹಳ್ಳ, ನದಿ, ಕೊಳ್ಳ, ಸಮುದ್ರ ಮುಂತಾದವುಗಳೆಲ್ಲ ಕಾಣಿಸುವಂತೆ ಭೂಪಟ ವನ್ನು ಬರೆಯಬೇಕು. ಈ ಭೂಚಿತ್ರವನ್ನು ಒಂದು ಸಾವಿರ ಪಲ ಅಥವಾ ಅರ್ಧದಷ್ಟು ಬಂಗಾರದಿಂದ ಸಿದ್ಧಗೊಳಿಸಬೇಕು.

ಬಡವರಿದ್ದರೆ ೩೦ ರಿಂದ ೧೦೦ ಪಲದವರೆಗೆ ಕೊನೆಗೆ ಐದು ಪಲ ಬಂಗಾರ ದಿಂದಾದರೂ ಭೂಮಿಯನ್ನು ರಚಿಸಬೇಕು. ಇದಕ್ಕಿಂತ ಕಡಿಮೆಯಾಗಬಾರದು.

ಶಾಸ್ತ್ರಜ್ಞನಾದ ಯಜಮಾನನು ಋತ್ವಿಜರ ವರಣ ಕುಂಡಮಂಡಪಾದಿ ನಿರ್ಮಾಣ, ಬ್ರಾಹ್ಮಣರ ಆಶೀರ್ವಾದ, ಇತರ ಸಾಧನ ಸಲಕರಣೆಗಳನ್ನು ತುಲಾಪುರುಷದಾನದಂತೆ

ಮಾಡಿ ಎಲ್ಲವಿಧಿ ವಿಧಾನಗಳನ್ನು ಮುಗಿಸಿ ವೇದಿಕೆಯ ಮೇಲೆ ಕೃಷ್ಣಾಜಿನ ಹಾಸಿ, ಅದರ ಮೇಲೆ ಎಳ್ಳಿನ ರಾಶಿ ಒಟ್ಟಿ, ಅದರ ಮೇಲೆ ಈ ಚಿನ್ನದ ಭೂಮಿಯನ್ನು ಇರಿಸಬೇಕು. ಅದರ ಸುತ್ತಲೂ ಹದಿನೆಂಟು ಧಾನ್ಯ ಹಾಗೂ ವಸ್ತ್ರ, ಖಾರ, ಹುಳಿ, ಸಿಹಿ ಮುಂತಾದ ಷಡ್ರಸಗಳನ್ನು ತುಂಬಿ ಎಂಟು ಪೂರ್ಣ ಕಲಶಗಳನ್ನು ಇರಿಸಬೇಕು.

ಮೇಲಿನ ಛಾವಣಿಗೆ ರೇಶಿಮೆಯ ಬಟ್ಟೆಯ ತುಂಡನ್ನು ಹೊದಿಸಿ, ಬಗೆಬಗೆಯ ಹಣ್ಣು ಕಾಯಿ ಗಂಧ ಹೂವು, ಹಾರಗಳಿಂದ ಅಲಂಕರಿಸಬೇಕು. ಆ ಬಳಿಕ ಅಧಿವಾಸನ ವಿಧಿಯನ್ನು ಮುಗಿಸಿ, ಯಜಮಾನನು ಬಿಳಿ ಬಟ್ಟೆ ಬಿಳಿ ಮಾಲೆ ಹಾಗೂ ಆಭರಣ ಗಳಿಂದ ಅಲಂಕೃತನಾಗಿ ಮೂರು ಸಲ ಪ್ರದಕ್ಷಿಣೆ ಹಾಕಿ ಬೊಗಸೆ ತುಂಬಾ ಹೂ ಹಿಡಿದುಕೊಂಡು ಸುಮುಹೂರ್ತ ಪ್ರಾಪ್ತವಾದ ಬಳಿಕ ಈ ಕೆಳಗೆ ಹೇಳಿದ ಮಂತ್ರಗಳನ್ನು ಹೇಳಬೇಕು.

ನಮಸ್ತೇ ಸರ್ವದೇವಾನಾಂ ತ್ವಮೇವ ಭವನಂ ಯತಃ
ಧಾತ್ರೀಚ ಸರ್ವ ಭೂತಾನಾಂ ಅತಃ ಪಾಹಿ ವಸುಂಧರೆ
ವಿಶ್ವಂ ವ್ಯಾಪ್ಯ ಸ್ಥಿತಾ ಯಸ್ಮಾತ್ತತೋ ವಿಶ್ವಂಭರಾ ಸ್ಮೃತಾ ॥
ವಸು ಧಾರಯಸೇ ಯಸ್ಮಾತ್ ವಸು ಚಾತೀವ ನಿರ್ಮಲಂ ।
ವಸುಂಧರಾ ಯತೋ ಜಾತಾ ತಸ್ಮಾತ್ ಪಾಹಿ ಭಯಾದಲಮ್ ॥

ಚತುರ್ಮುಖೋऽಪಿ ನೋ ಗಚ್ಛೇದ್ಯಸ್ಮಾದಂತಂ ತವಾಚಲೇ ।
ಅನಂತಾಯ್ಯೆ ನಮಸ್ತಸ್ಮಾತ್ ತ್ರಾಹಿ ಸಂಸಾರ ಕರ್ದಮಾತ್ ॥

ತ್ವಮೇವ ಲಕ್ಷ್ಮೀ ಗೋವಿಂದೇ ಶಿವೇ ಗೌರೀತಿ ಚ ಸ್ಥಿತಾ ।
ಗಾಯತ್ರೀ ಬ್ರಹ್ಮಣಃ ಪಾರ್ಶ್ವೇ ಜ್ಯೋತ್ಸ್ನಾಚಂದ್ರೇ ರವೌ ಪ್ರಭಾ ।
ಬುದ್ಧಿರ್ಬೃಹಸ್ಪತೌ ಖ್ಯಾತಾ ಮೇಧಾ ಮುನಿಷು ಸಂಸ್ಥಿತಾ ॥

ಧೃತಿಃ ಸ್ಥಿತಿಃ ಕ್ಷಮಾ, ಕ್ಷೋಣೀ, ಪೃಥ್ವೀ, ವಸುಮತೀ, ರಸಾ
ಏತಾಭಿಃ ಮೂರ್ತಿಭಿಃ ಪಾಹಿ ದೇವಿ ಸಂಸಾರ ಸಾಗರಾತ್ ॥

ಎಲ್ಲದೇವತೆಗಳಿಗೂ ನೀನೇ ನೆಲೆ, ನಿಲ್ದಾಣ. ಎಲ್ಲ ಪ್ರಾಣಿಗಳ ತಾಯಿ, ಆದುದರಿಂದ ನಿನಗೆ ಧಾತ್ರಿ, ಭೂತಧಾತ್ರಿ ಎಂದು ಹೆಸರು.

ನಿರ್ಮಲವಾದ ಬಂಗಾರ, ರತ್ನ ಮುಂತಾದ (ವಸ್ತು) ದ್ರವ್ಯವನ್ನು ನೀನು ಧರಿಸುವದರಿಂದ ವಸುಂಧರಾ ಎಂದು ನಿನ್ನನ್ನು ಕರೆಯುವರು.

ಜಗತ್ತನ್ನೆಲ್ಲ ನೀನು ವ್ಯಾಪಿಸಿದ್ದರಿಂದ ವಿಶ್ವಂಭರಾ ಎಂದೂ ನಿನಗೆ ನಾಮಧೇಯ.

ನಿನ್ನ ಕೊನೆ ಎಲ್ಲಿ ಎಂಬುದನ್ನು ಬ್ರಹ್ಮಾದಿ ದೇವತೆಗಳು ತಿಳಿಯಲಾರರು. ಅದಕ್ಕಾಗಿ ನೀನು ಅನಂತಾ ಎಂಬ ಹೆಸರು ಉಳ್ಳವಳಾಗಿರುವೆ.

ಶ್ರೀಹರಿಯ ಬಳಿಯಲ್ಲಿ ನೀನೇ ಲಕ್ಷ್ಮೀರೂಪದಿಂದ ಇರುವೆ. ಶಿವನಲ್ಲಿ ಗೌರಿ ನಾಮ ದಿಂದಲೂ, ಬ್ರಹ್ಮದೇವರ ಪಕ್ಕದಲ್ಲಿ ಗಾಯತ್ರಿ ಹೆಸರಿನಿಂದಲೂ ನೀನೇ ಬೆಳಗುತ್ತಿರುವೆ.

ಚಂದ್ರನಲ್ಲಿ ನೀನು ಬೆಳದಿಂಗಳು, ಸೂರ್ಯನಲ್ಲಿ ನೀನೇ ಪ್ರಭೆ, ಬೃಹಸ್ಪತಿಯಲ್ಲಿ ನೀನೇ ಬುದ್ಧಿ. ಮುನಿಗಳಲ್ಲಿ ನೀನೇ ಮೇಧಾ.

ಧೃತಿ, ಸ್ಥಿತಿ, ಕ್ಷಮಾ, ಕ್ಷೋಣೀ, ಪೃಥ್ವೀ, ವಸುಮತೀ, ರಸಾ, ಮುಂತಾದ ಬಗೆ ಬಗೆಯ ನಾಮರೂಪಗಳಿಂದ ಪ್ರಸಿದ್ಧಳಾದ ನೀನು, ಭೂದೇವಿಯೆ ನನ್ನನ್ನು ಈ ಸಂಸಾರ ಸಾಗರದಿಂದ ಉದ್ಧರಿಸು.

ಹೀಗೆ ಹೇಳಿ, ಆ ಚಿನ್ನದ ಭೂಮಿಯನ್ನು ಬ್ರಾಹ್ಮಣರಿಗೆ ಕೊಡಬೇಕು. ಅದರಲ್ಲಿ ಅರ್ಧ ಅಥವಾ ಕಾಲುಭಾಗ ಋತ್ವಿಜರಿಗೆ ಕೊಟ್ಟು ನಮಿಸಬೇಕು. ಹೀಗೆ ಹೇಮ ಭೂಮಿಯ ದಾನ ಮಾಡಿದವರಿಗೆ ವಿಮಾನದಿಂದ ವಿಷ್ಣುಪುರಕ್ಕೆ ಯಾನ ಮತ್ತು ಅಲ್ಲಿಯೇ ಮೂರು ಕಲ್ಪ ವಾಸ. ಇದರ ಶ್ರವಣದಿಂದ ದಿವ್ಯಸ್ಥಾನ ಪ್ರಾಪ್ತಿ, ಪಾಪಮುಕ್ತಿ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ಎಂಬತ್ತೈದನೆಯ ಅಧ್ಯಾಯ ಮುಗಿದುದು*

—o—

## ವಿಶ್ವಚಕ್ರಾಖ್ಯ ಮಹಾದಾನ ವಿಧಿವರ್ಣನೆ — ಅಧ್ಯಾಯ - ೨೮೬

**ಮತ್ಸ್ಯ ಉವಾಚ**

**"ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನಮನುತ್ತಮಮ್ ।**
**ವಿಶ್ವಚಕ್ರಮಿತಿಖ್ಯಾತಂ ಮಹಾಪಾತಕ ನಾಶನಮ್ ॥**

**ಮತ್ಸ್ಯ** :- ಇನ್ನು ಮುಂದೆ ಈ ಮಹಾಪಾಪ ಪರಿಹರಿಸುವ ವಿಶ್ವಚಕ್ರವೆಂಬ ಹೆಸರಿನ ಮಹಾದಾನದ ವಿಧಿಯನ್ನು ಹೇಳುತ್ತೇನೆ.

ಸಾವಿರ ಅಥವಾ ಐದೂನೂರು ಕನಿಷ್ಠ ಎರಡೂವರೆ ನೂರು ಪಲ ಬಂಗಾರದಿಂದ ವಿಶ್ವಚಕ್ರವನ್ನು ಶುಭ ಮುಹೂರ್ತದಲ್ಲಿ ಮಾಡಿಸಬೇಕು. ಬಡವನಾಗಿದ್ದರೆ ಇಪ್ಪತ್ತು ಪಲಕ್ಕಿಂತ ಏನಾದರೂ ಕಡಿಮೆ ಮಾಡಬಾರದು. ಈ ಚಕ್ರಕ್ಕೆ ಹದಿನಾರು ಹಲ್ಲುಗಳು, ಎಂಟು ಹಳಗಳು ಇರಬೇಕು. ಇದರ ನಾಭಿ ಪದ್ಮದಲ್ಲಿ ಯೋಗಾರೂಢನಾದ ಶಂಖ, ಚಕ್ರ, ಗದಾ, ಪದ್ಮಧಾರಿ, ಶ್ರೀಹರಿ ಮೂರ್ತಿಯನ್ನು ಅಷ್ಟಮಹಿಷಿಯರೊಂದಿಗೆ ಮೊದಲನೆಯ ಆವರಣದಲ್ಲಿ ಸ್ಥಾಪಿಸಬೇಕು.

ಎರಡನೆಯ ಆವರಣದಲ್ಲಿ ಜಲಶಾಯಿಯಾದ ವಿಷ್ಣುವನ್ನೂ ಅತ್ರಿ, ಭೃಗು, ವಶಿಷ್ಠ, ಕಶ್ಯಪ, ಮುಂತಾದ ಋಷಿಗಳನ್ನೂ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಈ ದಶಾವತಾರಗಳನ್ನೆಲ್ಲ ಇರಿಸಬೇಕು.

ತೃತೀಯಾವರಣದಲ್ಲಿ ಗೌರೀದೇವಿಯನ್ನು ಸಪ್ತಮಾತೆಯರಿಂದ ಒಡಗೂಡಿ, ಅಷ್ಟವಸುಗಳೊಂದಿಗೆ ಬಿಡಿಸಬೇಕು.

ನಾಲ್ಕನೆಯ ಆವರಣದಲ್ಲಿ ಹನ್ನೆರಡು ಆದಿತ್ಯರು ನಾಲ್ಕು ವೇದಗಳು, ಐದನೆಯ ದರಲ್ಲಿ ಪಂಚಮಹಾಭೂತ ಏಕದಶರುದ್ರರು, ಆರನೆಯ ಸುತ್ತಿನಲ್ಲಿ ಎಂಟು ಜನ ಲೋಕಪಾಲಕರು, ಎಂಟು ದಿಗ್ಗಜಗಳು, ಏಳನೆಯದರಲ್ಲಿ ಹರಿಯ ಹದಿನಾರು ದಿವ್ಯ

ಆಯುಧಗಳನ್ನೂ ಎಲ್ಲವಸ್ತ್ರಗಳು ಹಾಗೂ ಮಂಗಲ ದ್ರವ್ಯಗಳನ್ನೂ ಇರಿಸಬೇಕು. ಎಂಟನೇದ್ದರಲ್ಲಿ ನಡುನಡುವೆ ದೇವತೆಗಳನ್ನು ವಿನ್ಯಾಸ ಮಾಡಬೇಕು.

ಹಿಂದೆ ತುಲಾಪುರುಷ ದಾನ ಪ್ರಕರಣದಲ್ಲಿ ಹೇಳಿದಂತೆ ಋತ್ವಿಜರನ್ನು ವರಿಸಬೇಕು. ಹಿರಿಯರ ಆಶೀರ್ವಾದ ಹೋಮಹವನಾದಿಗಳನ್ನು ಮೊದಲು ಮಾಡಬೇಕು. ಅಲ್ಲಿ ನಿರೂಪಿಸಿದಂತೆ, ಮಂಟಪಾದಿಗಳನ್ನು ಸಿದ್ಧಗೊಳಿಸಿ, ಕೃಷ್ಣಾಜಿನದ ಮೇಲೆ ಕರಿ ಎಳ್ಳು ರಾಶಿ ಹಾಕಿ ಅದರ ಮೇಲೆ ವಿಶ್ವಚಕ್ರ ಇರಿಸಬೇಕು. ಸುತ್ತಲೂ ಹದಿನೆಂಟು ಧಾನ್ಯ, ಷಡ್ರಸಗಳು, ಎಂಟು ಪೂರ್ಣಕುಂಭ, ಬಗೆಬಗೆಯ ವಸ್ತ್ರಮಾಲೆಗಳನ್ನೂ ಇರಿಸಬೇಕು. ಮೇಲಿನ ಛಾವಣಿಗೆ ಸುತ್ತಲೂ ಹೂವಿನ ಮಾಲೆ ಹೆಣೆದು, ಅಂಚಿನಗುಂಟ ಕಬ್ಬಿನಜಲ್ಲೆ ನಿಲ್ಲಿಸಿ, ರತ್ನಗಳನ್ನು ತೂಗುಬಿಟ್ಟು, ಹಣ್ಣುಗಳನ್ನು ಜೋತಾಡುವಂತೆ ಕಟ್ಟಿ, ದಾನದ ಸಕಲ ಸಿದ್ಧತೆ ಮಾಡಿಕೊಳ್ಳಬೇಕು. ಬ್ರಾಹ್ಮಣರು ವೇದಘೋಷ ಮಾಡುತ್ತಿರುಬೇಕು. ಓಲಗದವರು ಮಂಗಲ ವಾದ್ಯಗಳನ್ನು ಮೊಳಗಿಸುತ್ತಿರಬೇಕು. ಯಜಮಾನ ಅನಂತರ, ಮಂಗಲ ಶಬ್ದದಿಂದ ಸ್ನಾನ ಮಾಡಿ, ಬಿಳಿ ಬಟ್ಟೆ ಉಟ್ಟು, ಹೋಮ ಅಧಿವಾಸನ ಮುಗಿದ ಬಳಿಕ, ಹೂವುಗಳನ್ನು ಹಿಡಿದುಕೊಂಡು ಮೂರುಬಾರಿ ಪ್ರದಕ್ಷಿಣೆ ಹಾಕಿ ಈ ಕೆಳಗಿನ ಮಂತ್ರಗಳನ್ನು ಹೇಳಿ ಪ್ರಾರ್ಥಿಸಬೇಕು.

"ನಮೋ ವಿಶ್ವಮಯಾಯೇತಿ ವಿಶ್ವಚಕ್ರಾತ್ಮನೇ ನಮಃ
ಪರಮಾನಂದರೂಪೀ ತ್ವಂ ಪಾಹಿನಃಪಾಪಕರ್ದಮಾತ್ ।

ತೇಜೋಮಯಮಿದಂ ಯಸ್ಮಾತ್ ಸದಾ ಪಶ್ಯಂತಿ ಯೋಗಿನಃ
ಹೃದಿ ತತ್ವಂ ಗುಣಾತೀತಂ ವಿಶ್ವಚಕ್ರಂ ನಮಾಮ್ಯಹಮ್ ॥

ವಾಸುದೇವ ಸ್ಥಿತಂ ಚಕ್ರಂ ಚಕ್ರಮಧ್ಯೇತುಮಾಧವಃ
ಅನ್ಯೋನ್ಯಾಧಾರ ರೂಪೇಣ ಪ್ರಣಮಾಮಿ ಸ್ಥಿತಾವಿಹ ॥

ವಿಶ್ವಚಕ್ರಮಿದಂ ಯಸ್ಮಾತ್ ಸರ್ವ ಪಾಪ ಹರಂ ಪರಮ್ ।
ಆಯುಧಂ ಚಾಪಿ ವಾಸಶ್ಚ ಭವಾದುದ್ಧರ ಮಾಮತಃ ॥"

ಇತ್ಯಾಮಂತ್ರ್ಯ ಚ ಯೋ ದದ್ಯಾದ್ವಿಶ್ವಚಕ್ರಂ ವಿಮತ್ಸರಃ ।
ವಿಮುಕ್ತಃ ಸರ್ವ ಪಾಪೇಭ್ಯಃ ವಿಷ್ಣುಲೋಕೇ ಮಹೀಯತೇ ॥

ಪ್ರಣಮೇದ್ವಾಥ ಯಃ ಕೃತ್ವಾ ವಿಶ್ವಚಕ್ರಂ ದಿನೇ ದಿನೇ ।
ತಸ್ಯಾಯುರ್ವರ್ಧತೇ ನಿತ್ಯಂ ಲಕ್ಷ್ಮೀಶ್ಚ ವಿಪುಲಾ ಭವೇತ್ ॥

ವಿಶ್ವವ್ಯಾಪಿಯೂ ಪರಮಾನಂದ ರೂಪಿಯೂ ಆದ ಜಗಚ್ಚಕ್ರಾತ್ಮಕನಾದ ಶ್ರೀಹರಿಗೆ ನಮ್ಮ ನಮಸ್ಕಾರ. ತೇಜೋಮಯವಾದ ಈ ಜಗತ್ ಚಕ್ರವು ವಾಸುದೇವನಲ್ಲಿಯೇ ಇರುತ್ತದೆ. ವಾಸುದೇವನು ಆ ಚಕ್ರದ ಮಧ್ಯದಲ್ಲಿ ಇರುತ್ತಾನೆ. ಅವನೇ ಇದಕ್ಕೆ

ಆಧಾರ. ಇದೂ ಕೂಡ ಅವನ ಇಚ್ಛೆಯಂತೆ ಅವನಿಗೆ ಆಧಾರ. ಸರ್ವ ಪಾಪ ಪರಿಹಾರ ಮಾಡುವ ಆ ವಿಶ್ವಚಕ್ರವನ್ನು ನಾನು ನಮಿಸುತ್ತೇನೆ.

**"ಇತಿ ಸಕಲ ಜಗತ್ಸುರಾಧಿವಾಸಂ ।**
**ವಿತರತಿ ಯಸ್ತಪನೀಯ ಷೋಡಶಾರಮ್ ॥**

**ಹರಿಭವನಮುಪಾಗತಃ ಸ ಸಿದ್ಧೈ-**
**ಶ್ಚಿರಮಭಿಗಮ್ಯ ನಮಸ್ಕೃತೇ ಶಿರೋಭಿಃ ॥**

**ಅಸುದರ್ಶನತಾಂ ಪ್ರಯಾತಿ ಶತ್ರೋಃ ।**
**ಮದನ ಸುದರ್ಶನತಾಂ ಚ ಕಾಮಿನೀಭ್ಯಃ ॥**

**ಸ ಸುದರ್ಶನ ಕೇಶವಾನುರೂಪಃ ।**
**ಕನಕ ಸುದರ್ಶನ ದಾನ ದಗ್ಧ ಪಾಪಃ ॥**

ಈ ಮಂತ್ರ ಹೇಳಿ, ಚಿನ್ನದ ವಿಶ್ವಚಕ್ರವನ್ನು ದಾನ ಮಾಡಿದವರು ಪಾಪಮುಕ್ತರಾಗಿ ಶ್ರೀಹರಿಯ ಸ್ವರೂಪಾಖ್ಯ ಮೋಕ್ಷ ಹೊಂದಿ ವೈಕುಂಠ ಲೋಕದಲ್ಲಿ ಶಾಶ್ವತವಾಗಿ ವಾಸ ಮಾಡುವರು. ಈ ವಿಶ್ವಚಕ್ರವನ್ನು ಪ್ರತಿ ದಿನ ಹನ್ನೆರಡು ಸಲ ನಮಿಸಬೇಕು. ಇಂಥ ಬಂಗಾರದ ಚಕ್ರದಾನದಿಂದ ನರನು ವೈರಿಗಳಿಗೆ ಅದೃಶ್ಯನೂ, ಕಾಮಿನಿಯರಿಗೆ ಸುಂದರನಾಗಿ ದೃಶ್ಯನೂ ಆಗಿ ಸುದರ್ಶನಧಾರಿ ಹರಿಯ ದರ್ಶನ ಪಡೆಯುವನು. ಇದರಿಂದ ಆಯುಷ್ಯ ಅಭಿವೃದ್ಧಿ, ಲಕ್ಷ್ಮೀ ಸಮೃದ್ಧಿ, ಸಂಸಾರ ಮುಕ್ತಿ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರ ಎಂಬತ್ತಾರನೆಯ ಅಧ್ಯಾಯ ಮುಗಿದುದು*



## ಮಹಾಕಲ್ಪಲತಾಖ್ಯ ಮಹಾದಾನ ವರ್ಣನೆ | ಅಧ್ಯಾಯ - ೨೮೭

<u>ಮತ್ಸ್ಯ ಉವಾಚ :</u>

**ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನ ಮನುತ್ತಮಮ್ ।**
**ಮಹಾಕಲ್ಪಲತಾ ದಾನಂ ಮಹಾ ಪಾತಕ ನಾಶನಮ್ ॥**

**ಮತ್ಸ್ಯ :-** ಇದರ ನಂತರ ದೊಡ್ಡ ದೊಡ್ಡ ಪಾಪ ತೊಳೆಯುವ ಮಹಾಕಲ್ಪ ಲತಾದಾನದ ವಿಧಾನವನ್ನು ಹೇಳುತ್ತೇನೆ. ಶುಭದಿನದಂದು, ಪೂರ್ವೋಕ್ತ ಪ್ರಕಾರ ಮಂಟಪ, ಋತ್ವಿಜವರಣ, ಪುಣ್ಯಾಹವಾಚನ ಮಾಡಿ ಮುಗಿಸಿ ಬಂಗಾರದ ಹತ್ತು ಕಲ್ಪವೃಕ್ಷಗಳನ್ನು ಮಾಡಿಸಬೇಕು. ಅವುಗಳ ಶಾಖೋಪಶಾಖೆಗಳ ಮೇಲೆ ಬಗೆಬಗೆಯ, ಬಟ್ಟೆ, ಹಣ್ಣು, ಕಾಯಿಗಳಿಂದ ಅಲಂಕೃತವಾದ ವಿದ್ಯಾಧರ ಹಾಗೂ ಗರುಡಪಕ್ಷಿಗಳ ಜೋಡಿಗಳನ್ನು ನಿರ್ಮಿಸಬೇಕು.

ಹಣ್ಣುಗಳನ್ನು ಕುಕ್ಕುವ ಹಕ್ಕಿಗಳನ್ನು, ಹೂವುಗಳನ್ನು ಹರಿಯುವ ಸಿದ್ಧರು ಗಿಡದ ಟೊಂಗೆಗಳ ಮೇಲೆ ಕುಳಿತಂತೆ ಗೊಂಬೆಗಳನ್ನು ಮಾಡಿ, ಅಲ್ಲಲ್ಲಿ ಗಿಡಗಳ ತುಂಬ ಇಡಬೇಕು. ಅನಂತರ ಪತ್ನೀ ಸಹಿತರಾದ ಎಂಟು ಲೋಕಪಾಲಕರ ಮೂರ್ತಿ ಮಾಡಿ

ಸ್ಥಾಪಿಸಬೇಕು. ಬ್ರಹ್ಮದೇವರ ಮೂರ್ತಿಯನ್ನು ಉಪ್ಪಿನ ಗುಂಪಿಯ ಮೇಲೆ ಕೂಡಿಸಬೇಕು. ಎರಡು ಬಳ್ಳಿಗಳ ನಡುವೆ ಬ್ರಾಹ್ಮೀ ಮತ್ತು ಅನಂತಶಕ್ತಿಯ ಮಂಗಳ ಮೂರ್ತಿಗಳನ್ನು ಸ್ಥಾಪಿಸಬೇಕು. ಅವರ ಕೈಯಲ್ಲಿ ಶಂಖ ಪದ್ಮಗಳನ್ನು ಧಾರಿಸಬೇಕು. ಬ್ರಹ್ಮದೇವರ ಕೈಯಲ್ಲಿ ಕಮಲ, ಅನಂತಶಕ್ತಿಯ ಕೈಯಲ್ಲಿ ಶಂಖ ಕೊಡಬೇಕು.

ಪೂರ್ವ ದಿಕ್ಕಿನಲ್ಲಿ ಬೆಲ್ಲದ ಮೇಲೆ, ಕೈಯಲ್ಲಿ ವಜ್ರ ಹಿಡಿದ ಇಂದ್ರನ ರಾಣಿ ಶಚೀದೇವಿಯ ಮೂರ್ತಿಯನ್ನು ಆನೆಯ ಮೇಲೆ ಕೂಡಿಸಬೇಕು. ಆಗ್ನೇಯ ದಿಕ್ಕಿನಲ್ಲಿ ಸೌಟನ್ನು ಕೈಯಲ್ಲಿ ಹಿಡಿದುಕೊಂಡ ಅಗ್ನಿಯ ಪತ್ನಿ ಸ್ವಾಹಾದೇವಿಯ ಮೂರ್ತಿಯನ್ನು ಸ್ಥಾಪಿಸಬೇಕು. ದಕ್ಷಿಣ ದಿಕ್ಕಿನಲ್ಲಿ ಅಕ್ಕಿಯ ಮೇಲೆ, ಗದಾಪಾಣಿಯಾದ ಯಮದೇವರ ಮಡದಿಯಾದ ಶ್ಯಾಮಲಾದೇವಿಯನ್ನು ಅಕ್ಕಿಯ ಮೇಲೆ ಕುಳಿತಂತೆ ಮಾಡಿ ಸ್ಥಾಪಿಸಬೇಕು. ನೈಋತ್ಯದಲ್ಲಿ ತುಪ್ಪದ ಮೇಲೆ, ಖಡ್ಗ ಹಿಡಿದ ನಿಋತಿಯ ಮೂರ್ತಿಯನ್ನು ಇರಿಸಬೇಕು.

ಪಶ್ಚಿಮ ದಿಕ್ಕಿನಲ್ಲಿ ನಾಗಪಾಶ ಕೈಯಲ್ಲಿ ಹಿಡಿದ ಮೀನ ವಾಹನವಾದ ವರುಣನ ಮಡದಿಯ ಮೂರ್ತಿಯನ್ನು, ವಾಯವ್ಯ ದಿಕ್ಕಿನಲ್ಲಿ ಚಿಗರೆಯ ಮೇಲೆ ಏರಿದ, ಕೈಯಲ್ಲಿ ಧ್ವಜ ಹಿಡಿದ ವಾಯುದೇವರ ಮಡದಿಯ ಮೂರ್ತಿಯನ್ನು, ಸಕ್ಕರೆಯ ಮೇಲೂ, ಉತ್ತರ ದಿಕ್ಕಿನಲ್ಲಿ ಎಳ್ಳುಗಳ ಮೇಲೆ ಶಂಖ ಹಿಡದ ಕುಬೇರ ಪತ್ನೀ ಮೂರ್ತಿಯನ್ನು ದ್ರವ್ಯದ ಮೇಲೂ, ಈಶಾನ್ಯ ದಿಕ್ಕಿನಲ್ಲಿ ತ್ರಿಶೂಲ ಧರಿಸಿ, ಎತ್ತಿನ ಮೇಲೆ ಹತ್ತಿದ ಶಿವೆಯ ಮೂರ್ತಿಯನ್ನು ಬೆಣ್ಣೆಯ ಮೇಲೂ ಸ್ಥಾಪಿಸಬೇಕು.

ಈ ಎಲ್ಲ ದೇವೀ ಮೂರ್ತಿಗಳಿಗೂ ತಲೆ ಮೇಲೆ ಕಿರೀಟವನ್ನು ಕೊಟ್ಟು, ವರಪ್ರದಮುದ್ರೆಮಾಡಬೇಕು. ಮಗ್ಗುಲಲ್ಲಿ ಸಣ್ಣ ಮಗುಗಳನ್ನು ಕೂಡಿಸಬೇಕು. ಇಷ್ಟೆಲ್ಲ ಮೂರ್ತಿಗಳನ್ನು ಗಿಡಗಳನ್ನು ಐದರಿಂದ ಸಾವಿರದ ಪಲದವರೆಗೆ ಯೋಗ್ಯತಾನುಸಾರ ಮಾಡಬೇಕು.

ಈ ಎಲ್ಲ ಚಿನ್ನದ ಕಲ್ಪವೃಕ್ಷ ಹಾಗೂ ಮೂರ್ತಿಗಳ ಮೇಲೆ ಪಂಚರಂಗಿ ಛಾವಣಿ ಹಾಕಿಸಬೇಕು. ಮೇಲೆ ಪಂಚವರ್ಣದ ಬಟ್ಟೆಗಳಿಂದ ಮೇಲ್ಗಟ್ಟುಗಳನ್ನು ಕಟ್ಟಬೇಕು. ಹೂವಿನ ಗುಚ್ಚ ಮುತ್ತುರತ್ನಗಳನ್ನು ಹಂದರದ ಸುತ್ತು ತೂಗಿಸಬೇಕು. ಹತ್ತು ಪೂರ್ಣ ಕಲಶ, ಜೋಡುವಸ್ತ್ರ, ಗೋವುಗಳನ್ನು ಸಿದ್ಧಪಡಿಸಿ ಇಟ್ಟಿರಬೇಕು.

ಇಷ್ಟೆಲ್ಲ ಸಿದ್ಧತೆ ಮಾಡಿಕೊಂಡು, ಯಜಮಾನನು, ಮಂಗಲ ಶಬ್ದದಿಂದ ಸ್ನಾನಮಾಡಿ, ಬಿಳಿಬಟ್ಟೆಉಟ್ಟುಕೊಂಡು, ಕೈತುಂಬ ಹೂ ಹಿಡಿದುಕೊಂಡು ಮೂರು ಪ್ರದಕ್ಷಿಣೆ ಹಾಕಿ ಈ ಮಂತ್ರವನ್ನು ಹೇಳಬೇಕು.

''ನಮೋ ನಮಃ ಪಾಪ ವಿನಾಶಿನೀಭ್ಯೋ ಬ್ರಹ್ಮಾಂಡ ಲೋಕೇಶ್ವರ ಪಾಲನೀಭ್ಯಃ
ಆಶಾಸಿತಾಧಿಕ್ಯ ಫಲ ಪ್ರದಾಭ್ಯೋ ದಿಗ್ಭ್ಯಸ್ಥಥಾ ಕಲ್ಪಲತಾ ವಧೂಭ್ಯಃ॥

ಇತಿ ಸಕಲ ದಿಗಂಗನಾ ಪ್ರದಾನಂ ಭವ ಭಯ ಸೂಧನಕಂಯಃ ಕರೋತಿ।
ಅಭಿಮತ ಫಲದೇ ಸ ನಾಗಲೋಕೇ ವಸತಿ ಪಿತಾಮಹ ವತ್ಸರಾಣಿ ತ್ರಿಂಶತ್ ॥

ಪಾಪಗಳನ್ನೆಲ್ಲ ನಾಶಮಾಡುವ ಬ್ರಹ್ಮಾಂಡವನ್ನು ಲೋಕದಲ್ಲಿಯ ಜನ, ದೇವತೆಗಳನ್ನು ಪಾಲಿಸುವ, ಅಪೇಕ್ಷಿಸಿದ್ದಕ್ಕಿಂತ ಹೆಚ್ಚಿನ ಫಲ ನೀಡುವ ದಿಗಭಿಮಾನಿ ದೇವತೆಗಳಿಗೂ ಕಲ್ಪವೃಕ್ಷಗಳಿಗೂ ನಮಸ್ಕಾರ ಎಂದು ಹೇಳಿ, ಕಲ್ಪಲತಾ ದಾನವನ್ನು ಅದರಂತೆ ದಿಗ್ದಾನವನ್ನು ಭಕ್ತಿಯಿಂದ ಮಾಡಬೇಕು. ಅಂತಹ ಮನುಷ್ಯನು ತನ್ನ ಮೂರು ಪಿತೃಗಳನ್ನು ಉದ್ಧರಿಸಿ ನಾಗಲೋಕದಲ್ಲಿ ವಾಸ ಮಾಡುವನು.

*ಇತಿ ಮತ್ಸ್ಯ ಮಹಾಪುರಾಣದಲ್ಲಿ ಎರಡನೂರ ಎಂಬತ್ತೇಳನೇಯ ಅಧ್ಯಾಯ ಮುಗಿದುದು.*

—○—

## ಸಪ್ತಸಾಗರ ಮಹಾದಾನ ವರ್ಣನೆ

ಅಧ್ಯಾಯ - ೨೮೮

**ಮತ್ಸ್ಯ ಉವಾಚ**

**''ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನ ಮನುತ್ತಮಮ್ ।**
**ಸಪ್ತಸಾಗರಕಂ ನಾಮ ಸರ್ವ ಪಾಪ ಪ್ರಣಾಶನಮ್ ॥**

**ಮತ್ಸ್ಯ** :- ಪಾಪಗಳನ್ನೆಲ್ಲ ವಿನಾಶಗೈಯುವ ಸಪ್ತಸಾಗರ ದಾನ ಹೇಳುತ್ತೇನೆ. ಯಜಮಾನನು ಶುಭದಿನದಲ್ಲಿ ಬ್ರಾಹ್ಮಣರ ಆಶೀರ್ವಾದ ಪಡೆದು ಋತ್ವಿಜರನ್ನು ಆರಿಸಿ ಮಂಡಪವನ್ನು ರಚಿಸಬೇಕು. ಹೋಮಹವನ ದಿಕ್ಪಾಲಕರ ಆವಾಹನಾದಿಗಳನ್ನೆಲ್ಲ ಈ ತುಲಾ ಪುರುಷದಾನದಲ್ಲಿ ಹೇಳಿದಂತೆಯೇ.

ಬಂಗಾರದ ಒಂದು ಮೊಳ ಉದ್ದವಾದ ಏಳು ಕುಂಡಗಳನ್ನು ಏಳು ಪಲ ಅಥವಾ ಅದಕ್ಕೂ ಹೆಚ್ಚಿನ ಚಿನ್ನದಿಂದ ಮಾಡಿಸಬೇಕು.

ಆ ಕುಂಡಗಳನ್ನು ಕೃಷ್ಣಾಜಿನದ ಮೇಲೆ ಎಳ್ಳು ಹಾಸಿ ಇಡಬೇಕು. ಮೊದಲನೆಯ ಕುಂಡವನ್ನು ಉಪ್ಪು, ಎರಡನೆಯದು ಹಾಲಿನಿಂದ, ಮೂರನೆಯದು ತುಪ್ಪದಿಂದ, ನಾಲ್ಕನೆಯದು ಬೆಲ್ಲದಿಂದ, ಐದನೆಯದು ಮೊಸರಿನಿಂದ, ಆರನೆಯದು ಸಕ್ಕರೆ, ಏಳದನೆಯದನ್ನು ತೀರ್ಥಜಲದಿಂದ ತುಂಬಿಡಬೇಕು.

ಉಪ್ಪಿನ ಕುಂಡದಲ್ಲಿ ಬ್ರಹ್ಮದೇವರ ಬಂಗಾರದಮೂರ್ತಿ ಸ್ಥಾಪಿಸಬೇಕು. ಹಾಲಿನ ಕುಂಡದಲ್ಲಿ ಕೇಶವನನ್ನು, ತುಪ್ಪದಲ್ಲಿ ಮಹಾದೇವರ ಮೂರ್ತಿಯನ್ನು, ಬೆಲ್ಲದಲ್ಲಿ ಸೂರ್ಯನ ಪ್ರತಿಮೆಯನ್ನು, ಮೊಸರಿನಲ್ಲಿ ಚಂದ್ರನನ್ನು, ಸಕ್ಕರೆಯಲ್ಲಿ ಲಕ್ಷ್ಮಿಯ ಪ್ರತಿಮೆಯನ್ನೂ ತೀರ್ಥೋದಕದಲ್ಲಿ ಪಾರ್ವತಿ ಪ್ರತಿಮೆಯನ್ನೂ ಸ್ಥಾಪಿಸಬೇಕು ಹಾಗೂ ಏಳು ಕುಂಡಗಳಲ್ಲಿ ಎಲ್ಲವ ವಿಧ ಧಾನ್ಯ, ರತ್ನ ಹಾಕಬೇಕು.

ಅನಂತರ ಹೋಮ ಹವನ, ಅಧಿವಾಸನ ಮಾಡಿ, ವಿಶೇಷವಾಗಿ ವರುಣ ದೇವತಾಕವಾದ ಹೋಮ ನೆರವೇರಿಸಬೇಕು. ಬಳಿಕ ವೇದಪಂಡಿತರು ಯಜಮಾನನಿಗೆ ವಿಧಿಪೂರ್ವಕ ಸ್ನಾನ ಮಾಡಿಸಬೇಕು. ವೇದಜ್ಞ ಬ್ರಾಹ್ಮಣರಿಂದ ಮಂಗಲ ಸ್ನಾನ ಮಾಡಿದ ಯಜಮಾನನು ಮೂರು ಪ್ರದಕ್ಷಿಣೆ ಹಾಕಿ ಈ ಮಂತ್ರ ಹೇಳಬೇಕು.

**ನಮಾಮಃ ಸರ್ವಸಿಂಧೂನಾಮಾಧಾರೇಭ್ಯಃ ಸನಾತನಾಃ ।**
**ಜಂತೂನಾಂ ಪ್ರಾಣದೇಭ್ಯಶ್ಚ ಸಮುದ್ರೇಭ್ಯೋ ನಮೋ ನಮಃ ॥**

**ಕ್ಷೀರೋದಕಾಜ್ಯ ದಧಿ ಮಾಧುರ ಲಾವಣೇಷು ।**
**ಸಾರಾಮೃತೇನ ಭುವನತ್ರಯ ಜೀವ ಸಂಘಾನ್ ॥**

**ಆನಂದಯಂತಿ ವಸುಭಿಶ್ಚ ಯತೋ ಭವಂತಃ ।**
**ತಸ್ಮಾನ್ಮಮಾಪ್ಯಘ ವಿಘಾತಮಲಂ ದಿಶಂತು ॥**

**ಯಸ್ಮಾತ್ಸಮಸ್ತ ಭುವನೇಷು ಭವಂತ ಏವ ।**
**ತೀರ್ಥಾನುದಾನ ಸುರ ದಿವ್ಯಮಣಿ ಪ್ರತಾನಮ್ ॥**

**ಪಾಪಕ್ಷಯಾಮೃತ ವಿಲೇಪನ ಭೂಷಣಾಯ ।**
**ಲೋಕಸ್ಯ ಬಿಭ್ರತಿ ತದಸ್ತು ಮಮಾಪಿಲಕ್ಷ್ಮೀಃ ॥**

ಎಲ್ಲ ಪ್ರಾಣಿಗಳಿಗೂ ಜೀವನಾಧಾರವಾದ ನೀರನ್ನು ಕೊಡುವ, ಮತ್ತು ಎಲ್ಲ ನದಿಗಳಿಗೂ ಆಧಾರಭೂತವಾದ ಸಮುದ್ರಗಳಿಗೆ ನಮೋ ನಮಃ.

ಹಾಲು, ನೀರು, ತುಪ್ಪ, ಮೊಸರು, ಬೆಲ್ಲ, ಉಪ್ಪು, ಸಕ್ಕರೆ, ಅಮೃತಗಳಿಂದ ಮೂರು ಲೋಕದಲ್ಲಿರುವ ಜೀವರಾಶಿಗಳನ್ನೆಲ್ಲ ಆನಂದಗೊಳಿಸುವ ಮತ್ತು ಮುತ್ತು ರತ್ನಾದಿ ಸಂಪ್ರದಾನದಿಂದ ದೇಶವನ್ನು ಸಂಪನ್ನವಾಗಿ ಮಾಡುವ,ಎಲೋ, ಸಪ್ತ ಸಮುದ್ರಗಳೆ, ನನ್ನ ಪಾಪರಾಶಿಯನ್ನೆಲ್ಲ ನಾಶಮಾಡಿ, ಸಂಪದವನ್ನು ನೀಡಿರಿ.

ಎಲ್ಲ ಲೋಕಗಳಲ್ಲಿರುವ ತೀರ್ಥ, ದೇವತೆ, ರತ್ನರಾಶಿಗಳಿಗೆಲ್ಲನೀವೇ ಆಶ್ರಯವಾಗಿರುವಿರಿ. ಜನರ ಪಾಪರಾಶಿಯನ್ನು ಕಳೆದು ಸದ್ಗತಿಯನ್ನು ನೀಡುವುದಕ್ಕಾಗಿಯೇ ನಿಮ್ಮ ಸಂಪತ್ತಿದೆ. ಅದನ್ನು ನಮಗೂ ಕರುಣಿಸಿರಿ.

ಹೀಗೆ ಸ್ತೋತ್ರ ಮಾಡಿ, ಬಂಗಾರದ ಕುಂಡಗಳಲ್ಲಿ ಸಪ್ತಸಮುದ್ರಗಳನ್ನು ದಾನ ಮಾಡಿದ ಮನುಷ್ಯನು ಸರ್ವ ಪಾಪಗಳಿಂದ ಮುಕ್ತನಾಗಿ ವಿಷ್ಣುಪದವನ್ನು ಹೊಂದುತ್ತಾನೆ.

**ಸಕಲ ಪಾಪ ವಿಧೂತಿ ವಿರಾಜಿತಃ ।**
**ಪಿತೃಪಿತಾಮಹ ಪುತ್ರ ಕಳತ್ರಕಂ ॥**

**ನರಕಲೋಕ ಸಮಾಕುಲಮಪ್ಯಹೋ ।**
**ಝುಟಿತಿ ಸೋಽಪಿ ನಯೇಚ್ಛಿವ ಮಂದಿರಮ್ ॥**

ಸಮುದ್ರ ದಾನ ನೀಡಿದ ಮಾನವನು ಎಲ್ಲ ಪಾಪಗಳಿಂದ ಮುಕ್ತನಾಗಿ ನಿಷ್ಕಲ್ಮಷನಾಗುವನು. ತನ್ನ ತಂದೆ ತಾಯಿ ಅಜ್ಜ ಮಗ ಮಡದಿ ಮೊಮ್ಮಕ್ಕಳು ಯಾರೇ ಇರಲಿ ನರಕದಲ್ಲಿ ಬಿದ್ದಿದ್ದರೆ ಅವರೆಲ್ಲರನ್ನೂ ಅಲ್ಲಿಂದ ಉದ್ಧರಿಸಿ ಶಿವಲೋಕಕ್ಕೆ ತನ್ನೊಡನೆ ಕರೆದೊಯ್ಯುವನು.

*ಇತೀ ಮತ್ಸ್ಯಮಹಾಪುರಾಣದಲ್ಲಿ ಎರಡುನೂರ ಎಂಬತ್ತೆಂಟನೆಯ ಅಧ್ಯಾಯ ಮುಗಿದುದು.*

—o—

## ರತ್ನಧೇನು ಮಹಾದಾನ ವರ್ಣನೆ



**ಮತ್ಸ್ಯ ಉವಾಚ**

**"ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನಮನುತ್ತಮಮ್ ।**
**ರತ್ನಧೇನ್ವಿತಿ ವಿಖ್ಯಾತಂ ಗೋಲೋಕಫಲದಂ ನೃಣಾಮ್ ॥**

**ಮತ್ಸ್ಯ :-** ಇದರ ನಂತರ ಗೋಲೋಕ ಪ್ರಾಪ್ತಿರೂಪ ಫಲವನ್ನು ಕೊಡುವ ಪ್ರಸಿದ್ಧವಾದ ರತ್ನಧೇನು ದಾನದ ವಿಧಿಯನ್ನು ಹೇಳುತ್ತೇನೆ.

ಇದರಲ್ಲಿಯೂ ಋತ್ವಿಜವರಣ, ಬ್ರಾಹ್ಮಣರ ಆಶೀರ್ವಾದ, ಕುಂಡಮಂಡಪ ರಚನೆ, ಲೋಕಪಾಲಕರ ಆವಾಹನೆ, ಹೋಮಹವನಾದಿಗಳೆಲ್ಲವು ತುಲಾಪುರುಷ ದಾನದಂತೆ. ಶುಭ ಮುಹೂರ್ತದಲ್ಲಿ ಎಲ್ಲ ಸಿದ್ಧತೆ ಹಾಗೂ ಪುಣ್ಯಾಹವಾಚನೆ ಮಾಡಿಕೊಂಡು ರತ್ನದ ಹಸುವನ್ನು ವಿಧಿಪೂರ್ವಕವಾಗಿ ಮಾಡಿ ಇಡಬೇಕು.

ನೆಲದ ಮೇಲೆ ಕೃಷ್ಣಾಜಿನ ಹಾಸಿ, ಅದರ ಮೇಲೆ ಉಪ್ಪಿನ ದೊನ್ನೆ ಇಟ್ಟು, ಅದರ ಮೇಲೆ ರತ್ನಧೇನುವನ್ನು ಇರಿಸಬೇಕು. ಎಂಭತ್ತೊಂದು ಪದ್ಮರಾಗ ಮಣಿಗಳಿಂದ ಅದರ ಮುಖವನ್ನು, ನೂರು ಪುಷ್ಪರಾಗ ಮಣಿಗಳಿಂದ ಕೊರಳನ್ನು, ಬಂಗಾರದ ತಿಲಕ ಉಳ್ಳ ಹಣೆಯನ್ನು ನೂರು ಮುತ್ತುಗಳಿಂದಲೂ, ಕಣ್ಣು ಹಾಗೂ ಹುಬ್ಬುಗಳನ್ನು ಮೂರು ಹವಳಗಳಿಂದಲೂ ರಚಿಸಬೇಕು. ಎರಡು ಶಿಂಪುಗಳಿಂದ ಎರಡು ಕಿವಿಗಳನ್ನು ಮಾಡಬೇಕು. ಬಂಗಾರದ ಕೋಡುಗಳನ್ನು ಎರಡು ನಿರ್ಮಿಸಿ, ನೂರು ವಜ್ರಗಳಿಂದ ಅದರ ತಲೆಯನ್ನು ನಿರ್ಮಿಸಬೇಕು.

ಕೊರಳಲ್ಲಿ ನೂರು ಗೋಮೇಧಿಕರತ್ನಗಳಿಂದ ಸರಮಾಡಿ ಹಾಕಬೇಕು. ನೂರು ಇಂದ್ರನೀಲಮಣಿ ಕೂಡಿಸಿ ಬೆನ್ನನ್ನು, ಮೂರು ವೈಢೂರ್ಯ ರತ್ನಗಳಿಂದ ಎರಡೂ ಬದಿಗಳನ್ನು,ಮೂರು ಸ್ಫಟಿಕ ರತ್ನಗಳಿಂದ ಹೊಟ್ಟೆಯನ್ನು, ಮೂರು ಸೌಗಂಧಿಕ ಮಣಿಗಳಿಂದ ಸೊಂಟವನ್ನು, ಬಂಗಾರದಿಂದ ಖುರಗಳನ್ನು, ಮುತ್ತಿನ ಗುಚ್ಛಗಳಿಂದ ಬಾಲವನ್ನು, ಚಂದ್ರಕಾಂತ, ಸೂರ್ಯಕಾಂತಮಣಿಗಳಿಂದ ಮೂಗನ್ನೂ, ಬೆಳ್ಳಿಯ ಹೊಕ್ಕಳವನ್ನೂ, ಮೂರು ಗರುಡಮಣಿಯಿಂದ ಕೆಚ್ಚಲವನ್ನೂ, ಹೊಂದಿಸಿ ರತ್ನಧೇನುವನ್ನು ನಿರ್ಮಿಸಬೇಕು.

ಉಳಿದ ಅಂಗಗಳ ಸಂದುಗಳನ್ನು ಬೇರೆ ಬೇರೆ ರತ್ನಗಳಿಂದ ಜೋಡಿಸಬೇಕು. ಸಕ್ಕರೆಯ ನಾಲಿಗೆ, ಬೆಲ್ಲದ ಗೋಮಯ, ತುಪ್ಪದ ಗೋಮೂತ್ರ, ನಿಜವಾದ ಹಾಲು, ಮೊಸರುಗಳಿಂದಲೇ ಹಾಲು ಮೊಸರುಗಳನ್ನು ಇಟ್ಟು, ಆ ರತ್ನದ ಹಸುವಿನ ಬಾಲದ ತುದಿಗೆ ಚಾಮರ ಕಟ್ಟಬೇಕು. ಸಮೀಪದಲ್ಲಿ ತಾಮ್ರದ ಹಿಂಡುವ ಪಾತ್ರೆ ಇಟ್ಟು ಬಂಗಾರದ ಕುಂಡಲ, ಆಭರಣಗಳಿಂದ ಅಲಂಕರಿಸಬೇಕು.

ಈ ರತ್ನಧೇನುವಿನ ಕಾಲುಭಾಗ ಮುತ್ತುರತ್ನಗಳಿಂದ ಕರುವನ್ನು ನಿರ್ಮಿಸಬೇಕು. ಪಾದಗಳನ್ನೆಲ್ಲ ಕಬ್ಬಿನ ಗಣಿಕೆಯಿಂದ ಮಾಡಬೇಕು. ಅದರ ಹತ್ತಿರ ಎಲ್ಲ ವಿಧವಾದ

ಧಾನ್ಯ, ಹಣ್ಣು-ಹಂಪಲ ಇರಿಸಿ, ಐದು ಬಣ್ಣದ ಹಂದರವನ್ನು ಹಾಕಿ ಋತ್ವಿಜರಿಂದ ಮೊದಲಿನಂತೆ ಹೋಮ ಹವನ, ಅಥವಾ ಅಧಿವಾಸನಗಳನ್ನು ನಡೆಸಿ ಅವರಿಗೆಲ್ಲ ವಿಪುಲವಾಗಿ ದಾನ ದಕ್ಷಿಣೆ ಕೊಟ್ಟು ಈ ಮಂತ್ರವನ್ನು ಹೇಳಬೇಕು.

**"ತ್ವಾಂ ಸರ್ವದೇವ ಗಣಧಾಮ ಯತಃ ಪಠಂತಿ ।**
**ರುದ್ರೇಂದ್ರ ಸೂರ್ಯಕಮಲಾಸನ ವಾಸುದೇವಾಃ ॥**

**ತಸ್ಮಾತ್ ಸಮಸ್ತ ಭುವನ ತ್ರಯ ದೇವ ಯುಕ್ತಾ ।**
**ಮಾಂ ಪಾಹಿ ದೇವಿ ಭವಸಾಗರ ಪೀಡ್ಯಮಾನಂ ॥**

**ಆಮಂತ್ರ್ಯ ಜ್ಯೇಷ್ಠಮಭಿತಃ ಪರಿವೃತ್ಯ ಭಕ್ತ್ಯಾ ।**
**ದದ್ಯಾದ್ವಿಧಾಯ ಗುರವೇ ಜಲಪೂರ್ವಿಕಾಂ ತಾಮ್ ॥**

**ಯಃ ಪುಣ್ಯಮಾಪ್ಯ ದಿನಮತ್ರ ಕೃತೋಪವಾಸಃ ।**
**ಪಾಪೈರ್ವಿಮುಕ್ತತನುರೇತಿ ಪದಂಮುರಾರೇಃ ॥**

ಎಲೌ ಗೋಮಾತೆ, ಶಿವ, ಇಂದ್ರ, ಸೂರ್ಯ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೆಲ್ಲರೂ ನಿನ್ನನ್ನು ದೇವತೆಗಳಿಗೆಲ್ಲ ಆವಾಸಸ್ಥಾನವೆಂದು ಹೇಳುತ್ತಾರೆ. ಆದುದರಿಂದ ಈ ಚರಾಚರಾತ್ಮಕವಾದ ಮೂರು ಲೋಕಗಳೂ ನಿನ್ನಲ್ಲಿ ಅಡಗಿವೆ. ಸಂಸಾರ ದುಃಖದಿಂದ ಗೋಳಾಡುವ ನನ್ನನ್ನು ನೀನು ರಕ್ಷಿಸು.'' ಹೀಗೆ ಪ್ರಾರ್ಥಿಸಿ ರತ್ನದ ಆಕಳವನ್ನು ಎಲ್ಲ ಕಡೆಗೂ ತಿರುಗಿಸಿ ತೋರಿಸಿ ಭಕ್ತಿಯಿಂದ, ಗುರುಗಳಿಗೆ ಸಂಕಲ್ಪ ಮಾಡಿ, ನೀರು ಬಿಟ್ಟು, ದಾನ ಕೊಡಬೇಕು. ಆ ದಿನ ಯಜಮಾನನು ಉಪವಾಸವಿದ್ದು, ಈ ದಾನ ಮಾಡಿದರೆ ದಿವ್ಯ ವಿಮಾನಾರೂಢನಾಗಿ, ವಿಷ್ಣುಲೋಕವನ್ನು ಹೊಂದುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡು ನೂರ ಎಂಬತ್ತೊಂಬತ್ತನೇಯ ಅಧ್ಯಾಯ ಮುಗಿದುದು.*

—o—

## ಮಹಾಭೂತ ಘಟ ಮಹಾದಾನದ ವರ್ಣನೆ | ಅಧ್ಯಾಯ - ೨೯೦

**ಮತ್ಸ್ಯ ಉವಾಚ**

**''ಅಥಾತಃ ಸಂಪ್ರವಕ್ಷ್ಯಾಮಿ ಮಹಾದಾನಮನುತ್ತಮಮ್ ।**
**ಮಹಾಭೂತ ಘಟಂ ನಾಮ ಮಹಾ ಪಾತಕ ನಾಶನಮ್ ॥**

**ಮತ್ಸ್ಯ** :- ಇನ್ನು ಮೇಲೆ ಮಹಾಪಾಪಗಳನ್ನೆಲ್ಲ ನಿವಾರಣಮಾಡುವ ಮಹಾಭೂತ ಘಟವೆಂಬ ದೊಡ್ಡ ದಾನದವಿಧಿಯನ್ನು ಹೇಳುತ್ತೇನೆ. ಬ್ರಾಹ್ಮಣರ ಆಶೀರ್ವಾದ ಪಡೆದು ಋತ್ವಿಜರನ್ನು ಆಯ್ಕೆಮಾಡಿ ಕುಂಡಮಂಡಪ ನಿರ್ಮಾಣ, ಲೋಕಪಾಲಕ ಆವಾಹನ ಹೋಮ ಹವನಾದಿಗಳನ್ನು ಶುಭದಿನದಂದು ಹಿಂದಿನಂತೆ ಮಾಡಬೇಕು.

ಒಳ್ಳೊಳ್ಳೆ ರತ್ನಗಳನ್ನು ಕೆತ್ತಿದ ಬಂಗಾರದ ಕೊಡವನ್ನು ಮಾಡಿಸಬೇಕು. ಮೂರು ಬೆರಳು ಎತ್ತರವಾದ ಒಂದು ಗೇಣು ಅಗಲವಾದ ಆ ಸುವರ್ಣ ಕುಂಭವನ್ನು ಹಾಲು

ತುಪ್ಪಗಳಿಂದ ತುಂಬಿ ಅದರಲ್ಲಿ ಕಲ್ಪವೃಕ್ಷವನ್ನು ನೆಡಬೇಕು. ಪದ್ಮಾಸನದಲ್ಲಿ ಕುಳಿತ ಬ್ರಹ್ಮ ವಿಷ್ಣು ಮಹೇಶ್ವರ ಮೂರ್ತಿಗಳನ್ನೂ ತಮ್ಮ ವಾಹನಗಳನ್ನು ಆರೂಢರಾದ ಇಂದ್ರಾದಿ ದಿಕ್ಪಾಲಕರನ್ನೂ, ವರಾಹ ದೇವರು ಎತ್ತಿ ಹಿಡಿದ ಭೂದೇವಿಯನ್ನೂ ನಿರ್ಮಿಸಬೇಕು.

ಮೊಸಳೆಯ ಮೇಲೆ ಕುಳಿತ ವರುಣ, ಆಡಿನ ಮೇಲೆ ಕುಳಿತ ಅಗ್ನಿ, ಚಿಗರೆಯ ಮೇಲೆ ಕುಳಿತ ವಾಯು, ಪುಷ್ಕರ ವಿಮಾನದಲ್ಲಿ ಕುಳಿತ ಕುಬೇರ, ಇಲಿಯ ಮೇಲೆ ಕುಳಿತ ಗಣಪತಿ, ಇವೆಲ್ಲ ಚಿನ್ನದ ಮೂರ್ತಿಗಳನ್ನು ಕೊಡದ ಒಳಗೆ ಇರಿಸಬೇಕು. ಮತ್ತು ಐದು ವೇದಗಳನ್ನು ಅವುಗಳ ಸಂಕೇತ ಚಿಹ್ನ ರೂಪವಾಗಿ ಆ ಕೊಡದಲ್ಲಿ ಇಡಬೇಕು.

ಋಗ್ವೇದದ ಸಂಕೇತವಾಗಿ ಅಕ್ಷಸೂತ್ರ, ಯಜುರ್ವೇದ ಸಂಕೇತ ಕಮಲ, ಸಾಮವೇದ ಸಂಕೇತ ತಂಬೂರಿ, ಕೊಳಲು, ಅಥರ್ವಣ ವೇದ ಸಂಕೇತವಾಗಿ ದರ್ಭೆ ಹಾಗೂ ಸೌಟು, ಐದನೆಯ ವೇದವಾದ ಭಾರತ ಪುರಾಣದ ಸಂಕೇತ ರೂಪವಾಗಿ ಕಮಂಡಲು ಅಕ್ಷಸೂತ್ರ ಮುಂತಾದವುಗಳನ್ನು ಕೊಡದಲ್ಲಿ ಇಡಬೇಕು.

ಬಂಗಾರದ ಕುಂಭದ ಸುತ್ತಲೂ ಎಲ್ಲ ವಿಧದ ಧಾನ್ಯ ಆಸನ, ಕನ್ನಡಿ, ಆವುಗೆ, ಕೊಡೆ, ದೀಪ, ಆಭರಣ, ಹಾಸಿಗೆ, ಪೂರ್ಣಕಲಶ ಈ ಎಲ್ಲ ಪದಾರ್ಥಗಳನ್ನು ಇರಿಸಬೇಕು. ಮೇಲೆ ಪಂಚರಂಗಿಯ ಚಪ್ಪರವನ್ನು ಹಾಕಬೇಕು. ಮೇಲ್ಗಟ್ಟುಗಳನ್ನು ಕಟ್ಟಬೇಕು.

ಸ್ನಾನಮಾಡಿ, ಅಧಿವಾಸನ ವಿಧಿಯನ್ನು ಮಗಿಸಿ ಈ ಮಂತ್ರವನ್ನು ಪಠಿಸಬೇಕು.

**''ನಮೋ ವಃ ಸರ್ವ ದೇವಾನಾಮಾಧಾರೇಭ್ಯಶ್ಚರಾಚರೆ ।**
**ಮಹಾಭೂತಾದಿ ದೇವೇಭ್ಯಃ ಶಾಂತಿರಸ್ತು ಶಿವಮ್ ಮಮ ।**

**ಯಸ್ಮಾತ್ ನ ಕಿಂಚಿದಪ್ಯಸ್ತಿ ಮಹಾಭೂತೈರ್ವಿನಾಕೃತಂ ।**
**ಬ್ರಹ್ಮಾಂಡೇ ಸರ್ವಭೂತೇಷು ತಸ್ಮಾತ್ ಶ್ರೀಃ ಅಕ್ಷಯಾಸ್ತು ಮೇ॥''**

ಸರ್ವ ದೇವತೆಗಳಿಗೂ ಆಧಾರಭೂತವಾದ ಚರಾಚರ ಪ್ರಪಂಚಕ್ಕೂ ಆಶ್ರಯವಾದ ಮಹಾಭೂತಗಳ ಅಭಿಮಾನಿ ದೇವತೆಗಳಿಗೆ ನಮ್ಮ ನಮಸ್ಕಾರವಿರಲಿ.

ನಮಗೆ ಶಾಂತಿ ದೊರಕಲಿ. ಕಲ್ಯಾಣವಾಗಲಿ. ಈ ಬ್ರಹ್ಮಾಂಡದಲ್ಲಿ ಈ ಪಂಚಮಹಾ ಭೂತಗಳನ್ನು ಬಿಟ್ಟರೆ ಯಾವ ಪ್ರಾಣಿಯೂ ಹುಟ್ಟುವುದಿಲ್ಲ. ಬದುಕುವದಿಲ್ಲ. ಬಾಳುವದಿಲ್ಲ. ಆದುದರಿಂದ ಈ ಭೂತಾಭಿಮಾನಿ ದೇವತೆಗಳಿಗೆ ನಾನು ನಮಸ್ಕರಿಸುತ್ತೇನೆ. ಅವರ ಅನುಗ್ರಹದಿಂದ ನನ್ನ ಐಶ್ವರ್ಯಕ್ಕೆ ಚ್ಯುತಿ ಬರದಿರಲಿ.'' ಹೀಗೆ ಪ್ರಾರ್ಥಿಸಿ ಮಹಾಭೂತ ಘಟವನ್ನು ದಾನ ಮಾಡಿದ ಮನುಷ್ಯನು ಸರ್ವ ಪಾಪಗಳಿಂದ ಮುಕ್ತನಾಗಿ ಸೂರ್ಯ ಸದೃಶವಾದ ವಿಮಾನದಲ್ಲಿಕುಳಿತು ಪಿತೃಗಳು ಹಾಗೂ ಬಾಂಧವರಿಂದ ಕೂಡಿಕೊಂಡು ವಿಷ್ಣುಲೋಕಕ್ಕೆ ಪ್ರಯಾಣ ಮಾಡುವನು.

**ಷೋಡಶೈತಾನಿ ಯಃ ಕುರ್ಯಾನ್ಮಹಾದಾನಾನಿ ಮಾನವಃ ।**
**ನ ತಸ್ಯ ಪುನರಾವೃತ್ತಿರಿಹ ಲೋಕೇಽಭಿಜಾಯತೇ ॥**

ಇಲ್ಲಿ ಮೇಲೆ ಹೇಳಿದ ಈ ಹದಿನಾರು ದಾನಗಳನ್ನು ವಿಧಿಪೂರ್ವಕವಾಗಿ ನೀಡಿದ ಮನುಷ್ಯನು ಭೂಲೋಕದಲ್ಲಿ ಮರಳಿ ಹುಟ್ಟುವುದಿಲ್ಲ. ಈ ಷೋಡಶ ದಾನ ವಿಧಾನವನ್ನು ಶ್ರೀಹರಿಯ ಮುಂದೆ ಕುಳಿತು ಹೇಳಿದರೆ, ಕೇಳಿದರೆ, ಆ ಮನುಷ್ಯನು ಶ್ರೀಹರಿಯ ಕರುಣೆಯಿಂದ ವೈಕುಂಠ ಲೋಕದಲ್ಲಿ ಆನಂದಪಡುವನು.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ತೊಂಬತ್ತನೆಯ ಅಧ್ಯಾಯ ಮುಗಿದುದು.*



## ಕಲ್ಪಗಳ ವರ್ಣನೆಯು ಮತ್ತು ಅವುಗಳ ಹೆಸರುಗಳು | ಅಧ್ಯಾಯ - ೨೯೧

**ಮನುರುವಾಚ :**

**"ಕಲ್ಪಮಾನಂ ತ್ವಯಾ ಪ್ರೋಕ್ತಂ ಮನ್ವಂತರ ಯುಗೇಷು ಚ ।**
**ಇದಾನೀಂ ಕಲ್ಪನಾಮಾನಿ ಸಮಾಸಾತ್ಕಥಯಾಚ್ಯುತ ॥"**

**ಮನು** :- ಅಚ್ಯುತನೇ ನೀನು, ಮನ್ವಂತರಗಳಲ್ಲಿ ಕಲ್ಪಗಳ ಪ್ರಮಾಣವನ್ನು ನನಗೆ ತಿಳಿಸಿದೆ. ಈಗ ಆ ಕಲ್ಪಗಳ ಹೆಸರುಗಳನ್ನು ಸಂಕ್ಷೇಪದಿಂದ ತಿಳಿಸು.

**ಮತ್ಸ್ಯ** :- ಕಲ್ಪಗಳ ಹೆಸರುಗಳನ್ನು ಉಚ್ಚರಿಸುವದೂ ಕೂಡಾ ಪಾಪನಾಶಕವಾಗಿದೆ. ಅದರಿಂದ ವೇದ ಪಾರಾಯಣ ಮಾಡಿದ ಪುಣ್ಯ ಬರುತ್ತದೆ.

ಮೊದಲನೆಯದು ಶ್ವೇತಕಲ್ಪ, ಎರಡನೆಯದು ನೀಲಲೋಹಿತ, ಮೂರನೆಯದು ವಾಮದೇವಕಲ್ಪ, ನಾಲ್ಕನೆಯದು ರಾಥಂತರಕಲ್ಪ, ಐದನೆಯದು ರೌರವ ಕಲ್ಪ, ಆರನೆಯದು ದೇವಕಲ್ಪ, ಏಳನೆಯದು ಬೃಹತ್‌ಕಲ್ಪ, ಎಂಟನೆಯದು ಕಂದರ್ಪಕಲ್ಪ, ಒಂಭತ್ತನೆಯದು ಸದ್ಯಃಕಲ್ಪ, ಹತ್ತನೆಯದು ಈಶಾವಕಲ್ಪ.

ಹನ್ನೊಂದನೆಯದು ತಮಃಕಲ್ಪ, ಹನ್ನೆರಡನೆಯದು ಸಾರಸ್ವತಕಲ್ಪ, ಹದಿಮೂರನೆಯದು ದಾನಕಲ್ಪ, ಹದಿನಾಲ್ಕನೆಯದು ಗಾರುಡಕಲ್ಪ, ಹದಿನೈದನೆ ಯದು ಕೌರ್ಮಕಲ್ಪ, ಹದಿನಾರು ನಾರಸಿಂಹಕಲ್ಪ, ಹದಿನೇಳು ಸಮಾನಕಲ್ಪ, ಹದಿನೆಂಟು ಆಗ್ನೇಯಕಲ್ಪ, ಹತ್ತೊಂಬತ್ತು ಸೋಮಕಲ್ಪ, ಇಪ್ಪತ್ತು ಮಾನಸಕಲ್ಪ.

ಇಪ್ಪತ್ತೊಂದು ತತ್ಪುರುಷಕಲ್ಪ, ಇಪ್ಪತ್ತೆರಡು ವೈಕುಂಠಕಲ್ಪ, ಇಪ್ಪತ್ಮೂರು ಲಕ್ಷ್ಮೀಕಲ್ಪ, ಇಪ್ಪತ್ತುನಾಲ್ಕು ಸಾವಿತ್ರೀಕಲ್ಪ, ಇಪ್ಪತ್ತೈದು ಘೋರಕಲ್ಪ, ಇಪ್ಪತ್ತಾರು ವರಾಹಕಲ್ಪ, ಇಪ್ಪತ್ತೇಳು ವೈರಾಜಕಲ್ಪ, ಇಪ್ಪತ್ತೆಂಟು ಗೌರೀಕಲ್ಪ, ಇಪ್ಪತ್ತೊಂಭತ್ತು ಮಹೇಶ್ವರಕಲ್ಪ. ಈ ಮಾಹೇಶ್ವರ ಕಲ್ಪದಲ್ಲಿ ಮಹಾದೇವರು ತ್ರಿಪುರಾಸುರನನ್ನು ಸಂಹರಿಸಿದರು. ಮೂವತ್ತನೇಯದೇ ಪಿತೃಕಲ್ಪ. ಈ ಪಿತೃಕಲ್ಪವೇ ಬ್ರಹ್ಮದೇವರಿಗೆ ಅಮಾವಾಸ್ಯೆ ಆನಿಸುವದು. ಅವರ ಹುಣ್ಣಿಮೆ ಹದಿನೈದನೆಯ ಕೂರ್ಮಕಲ್ಪದಂದು ಆಗುವದು.

ಈ ಮೂವತ್ತು ಕಲ್ಪಗಳು ಬ್ರಹ್ಮದೇವರ ಒಂದೊಂದು ದಿನಗಳು ಎನಿಸುತ್ತವೆ. ಇಂತಹ ಮೂವತ್ತು ಕಲ್ಪಗಳು ಮುಗಿದರೆ, ಬ್ರಹ್ಮದೇವರ ಒಂದು ತಿಂಗಳು ಆಗುವದು. ಯಾರ ಮಹಿಮೆಯು ಯಾವ ಕಲ್ಪದಲ್ಲಿ ವಿಶೇಷ ಆಗುವದೋ ಅವರ ಹೆಸರು

ಆ ಕಲ್ಪಕ್ಕೆ ಬಂದಿರುತ್ತದೆ. ಈ ಕಲ್ಪಗಳಲ್ಲಿ ಕೆಲವು ಸಂಕೀರ್ಣ, ತಾಮಸ, ರಾಜಸ, ಸಾತ್ವಿಕ ಎಂದು ನಾಲ್ಕು ವಿಧವಾಗಿವೆ. ಸಂಕೀರ್ಣ ಕಲ್ಪಗಳಲ್ಲಿ ಸರಸ್ವತಿ ಹಾಗೂ ಪಿತೃಗಳ ಮಹಿಮೆಯು ಕಂಡು ಬರುವದು.

ತಾಮಸ ಕಲ್ಪಗಳಲ್ಲಿ ಅಗ್ನಿ, ಶಿವ, ಮುಂತಾದವರ ಮಹಿಮೆ ವ್ಯಕ್ತವಾಗುವದು. ರಾಜಸ ಕಲ್ಪಗಳಲ್ಲಿ ಸೂರ್ಯ ಬ್ರಹ್ಮದೇವರ ಮಹಿಮೆ ಹೆಚ್ಚಾಗಿ ಪ್ರಕಟವಾಗುತ್ತದೆ. ಸಾತ್ವಿಕ ಕಲ್ಪಗಳಲ್ಲಿ ಮಹಾವಿಷ್ಣುವಿನ ಮಹಾ ಮಹಿಮೆಗಳು ಹೆಚ್ಚಾಗಿ ಕಂಡುಬರುತ್ತವೆ.

ಇದರಂತೆ ಪುರಾಣಗಳೂ ಕೂಡಾ ಸಾತ್ವಿಕ, ರಾಜಸ, ತಾಮಸ, ಸಂಕೀರ್ಣ, ಎಂದು ನಾಲ್ಕು ಬಗೆಯಾಗಿವೆ. ಯಾವ ಯಾವ ಕಲ್ಪದಲ್ಲಿ ಯಾವ ಯಾವ ದೇವತೆಗಳ ಮಹಿಮೆ ವ್ಯಕ್ತವಾಗುತ್ತದೆಯೋ ಅದನ್ನೆಲ್ಲ ಆ ಕಲ್ಪದಲ್ಲಿ ಯಥಾರ್ಥವಾಗಿ ಬ್ರಹ್ಮದೇವರು ನಿರೂಪಣೆ ಮಾಡುವರು. ಅದು ಆಯಾ ಪುರಾಣಗಳಲ್ಲಿ ವಿಸ್ತೃತವಾಗಿರುತ್ತದೆ.

ಸಂಕೀರ್ಣ ಕಲ್ಪಗಳಲ್ಲಿ ನಡೆದ ಸರಸ್ವತಿ ಮತ್ತು ಪಿತೃಗಳ ಮಹಿಮೆಯನ್ನು ಬ್ರಹ್ಮದೇವರು ಹೇಳಿದ್ದರಿಂದ ಸರಸ್ವತಿ ಮತ್ತು ಪಿತೃಮಹಿಮಾ ಪ್ರತಿಪಾದಕ ಪುರಾಣಗಳು ಸಂಕೀರ್ಣ ಪುರಾಣವೆಂದು ಕರೆಯಲ್ಪಡುತ್ತವೆ.

ತಾಮಸ ಕಲ್ಪಗಳಲ್ಲಿ ಹೆಚ್ಚಾಗಿ ಅಭಿವ್ಯಕ್ತವಾದ ಅಗ್ನಿ, ಶಿವನ ಮಹಿಮೆಯನ್ನು ಹೇಳುವ, ಬ್ರಹ್ಮದೇವರು ನಿರೂಪಿಸಿದ ಪುರಾಣಗಳು ತಾಮಸ ಪುರಾಣಗಳು. ರಾಜಸ ಕಲ್ಪಗಳಲ್ಲಿ ವ್ಯಕ್ತವಾದ ಸೂರ್ಯ ಮತ್ತು ಬ್ರಹ್ಮದೇವರ ಮಹಿಮೆಯನ್ನು ಬ್ರಹ್ಮದೇವರು ನಿರೂಪಿಸಿದ ಸೌರ ಹಾಗೂ ಬ್ರಹ್ಮಪುರಾಣಗಳು ರಾಜಸ ಪುರಾಣಗಳು ಎನಿಸುತ್ತವೆ.

ಸಾತ್ವಿಕ ಪುರಾಣಗಳಲ್ಲಿ ವ್ಯಕ್ತವಾದ ವಿಷ್ಣುವಿನ ಮಹಾಮಹಿಮೆಯನ್ನು ಬಿತ್ತರಿಸಿದ ಪ್ರಕರಣಗಳು ಸಾತ್ವಿಕ ಪುರಾಣವೆನಿಸುತ್ತವೆ. ಈ ಬ್ರಹ್ಮ ಮತ್ತು ಪದ್ಮ ವಿಷ್ಣು ವರಾಹ ಮುಂತಾದ ಈ ಪುರಾಣಗಳು ಸಾತ್ವಿಕ ಪುರಾಣವೆನಿಸಿದ್ದು ಇವುಗಳನ್ನು ಓದಿ, ಉಪಾಸನೆ ಮಾಡಿ, ಯೋಗಸಿದ್ಧಿ ಪಡೆದು ಸಜ್ಜನರು ಸದ್ಗತಿಯನ್ನು ಹೊಂದುತ್ತಾರೆ. ಈ ಸಾತ್ವಿಕ ಪುರಾಣಗಳನ್ನು ಪುಣ್ಯ ಪರ್ವಕಾಲದಲ್ಲಿ ಪಠಣ ಮಾಡಿದವರಿಗೆ ಬ್ರಹ್ಮದೇವರು ಧರ್ಮ ಕಾರ್ಯಗಳಲ್ಲಿ ಸದ್ಬುದ್ಧಿಯನ್ನು ಇತ್ತು ವಿಪುಲ ಐಶ್ವರ್ಯವನ್ನೂ ಪ್ರದಾನ ಮಾಡುತ್ತಾನೆ.

ಮನುಮಹಾರಾಜನೇ, ನಿನಗೆ ನಾನು ಈ ಎಲ್ಲ ಪುರಾಣ ಸಂಹಿತೆಯನ್ನು ನಿರೂಪಣೆಮಾಡಿದೆ. ಈ (ಮತ್ಸ್ಯ)ಪುರಾಣ ಸಂಹಿತೆಯು ಸರ್ವಪಾಪ ಪರಿಹಾರಕವೂ ಆರೋಗ್ಯ, ಐಶ್ವರ್ಯ, ಸೌಭಾಗ್ಯ ಮುಂತಾದ ಫಲಪ್ರದವೂ ಆಗಿರುತ್ತದೆ.

ಹಿಂದೆ ಹೇಳಿದ ಮೂವತ್ತು ಕಲ್ಪಗಳು ಬ್ರಹ್ಮದೇವರ ಒಂದು ತಿಂಗಳಾಗುತ್ತವೆ. ಇಂತಹ ಹನ್ನೆರಡು ತಿಂಗಳುಗಳು ಆದರೆ ಬ್ರಹ್ಮದೇವರ ಒಂದು ವರ್ಷವಾಗುತ್ತದೆ.

ಬ್ರಹ್ಮದೇವರ ಇಂತಹ ನೂರು ವರ್ಷಗಳಾದರೆ ಶಿವನ ಒಂದು ದಿನವಾಗುತ್ತದೆ. ಇಂತಹ ಶಿವನ ನೂರು ವರುಷಗಳಾದರೆ, ವಿಷ್ಣುವಿನ ಒಂದು ನಿಮಿಷವಾಗುತ್ತದೆ.

ವಿಷ್ಣು ಮಲಗಿದಾಗ ಎಲ್ಲ ಪ್ರಪಂಚವು ಅವನಲ್ಲಿಯೇ ಲೀನವಾಗುತ್ತದೆ. ಅವನು ಯೋಗನಿದ್ರೆಯಿಂದ ಎಚ್ಚತ್ತಾಗ ಈ ಪ್ರಪಂಚವೆಲ್ಲವೂ ಕಾರ್ಯೋನ್ಮುಖವಾಗುತ್ತದೆ.

ಹೀಗೆ ಮತ್ಸ್ಯರೂಪಿಯಾದ, ಎಲ್ಲದೇವಾಧಿದೇವತೆಗಳ ಒಡೆಯನಾದ ಜನಾರ್ದನನು ಎಲ್ಲ ಪ್ರಾಣಿಗಳು ನೋಡುತ್ತಿರುವಾಗ ಅಲ್ಲಿಯೇ ಅದೃಶ್ಯನಾದನು.

ಆ ನಂತರ ವೈವಸ್ವತ ಮನುವು ಆ ಪರಮಾತ್ಮನ ಅಪ್ಪಣೆಯಂತೆ ವಿವಿಧ ಪ್ರಜೆಗಳನ್ನು ಸೃಷ್ಟಿಮಾಡಿ, ತನ್ನ ಮನ್ವಂತರದ ಅವಧಿಯ ಕಾಲವನ್ನು ಸರಿಯಾಗಿ ಪಾಲಿಸಿದನು. ಈಗ ನಡೆಯುತ್ತಲಿರುವದು ಸೂರ್ಯಕುಲದ ಅಭಿವೃದ್ಧಿಗೆ ಕಾರಣೀಭೂತ ಮೂಲಪುರುಷನಾದ ಆ ವೈವಸ್ವತ ಮನುವಿನ ಮನ್ವಂತರವು. ಈ ಮತ್ಸ್ಯಪುರಾಣವು ಎಲ್ಲ ಪುರಾಣಗಳಿಗಿಂತ ಸರ್ವಶ್ರೇಷ್ಠ. ಈ ಪವಿತ್ರವಾದ ಮತ್ಸ್ಯಪುರಾಣವನ್ನು ಸ್ವಯಂ ಮತ್ಸ್ಯರೂಪಿ ಪರಮಾತ್ಮ ನಿರೂಪಿಸಿದಂತೆ ನಾನು ನಿಮಗೆ ಹೇಳಿದ್ದೇನೆ.

*ಇತಿ ಮತ್ಸ್ಯಮಹಾಪುರಾಣದಲ್ಲಿ ಎರಡನೂರ ತೊಂಬತ್ತೊಂದನೆಯ ಅಧ್ಯಾಯ ಮುಗಿದುದು.*

—○—

## ಮತ್ಸ್ಯ ಪುರಾಣದ ಸಂಕ್ಷಿಪ್ತ ವಿಷಯಸೂಚೀ | ಅಧ್ಯಾಯ - ೨೯೨

**ಸೂತ ಉವಾಚ**

"ಏತದ್ವಃ ಕಥಿತಂ ಸರ್ವಂ ಯದುಕ್ತಂ ವಿಶ್ವರೂಪಿಣಾ ।
ಮಾತ್ಸ್ಯಂ ಪುರಾಣಮಖಿಲಂ ಧರ್ಮಕಾಮಾರ್ಥಸಾಧನಂ ॥೧॥

ಯತ್ರಾದೌ ಮನುಸಂವಾದೋ ಬ್ರಹ್ಮಾಂಡಕಥನಂ ತಥಾ
ಸೌಖ್ಯಂ ಶಾರೀರಕಂ ಪ್ರೋಕ್ತಂ ಚತುರ್ಮುಖಮುಖೋದ್ಭವಂ ॥೨॥

ದೇವಾಸುರಾಣಾಮುತ್ಪತ್ತಿರ್ಮಾರುತೋತ್ಪತ್ತಿರೇವ ಚ ।
ಮದನದ್ವಾದಶೀ ತದ್ವಲ್ಲೋಕಪಾಲಾಭಿಪೂಜನಂ ॥೩॥

ಮನ್ವಂತರಾಣಾಮುದ್ದೇಶೋ ವೈನ್ಯರಾಜಾಭಿವರ್ಣನಂ
ಸೂರ್ಯವೈವಸ್ವತೋತ್ಪತ್ತಿರ್ಬುಧಸಂಗಮನಂ ತಥಾ ॥೪॥

ಪಿತೃವಂಶಾನುಕಥನಂ ಶ್ರಾದ್ಧಕಾಲಸ್ತಥೈವ ಚ ।
ಪಿತೃತೀರ್ಥಪ್ರವಾಸಶ್ಚ ಸೋಮೋತ್ಪತ್ತಿಸ್ತಥೈವ ಚ ॥೫॥

ಕೀರ್ತನಂ ಸೋಮವಂಶಸ್ಯ ಯಯಾತಿ ಚರಿತಂ ತಥಾ ।
ಕಾರ್ತವೀರ್ಯಸ್ಯ ಮಾಹಾತ್ಮ್ಯಂ ವೃಷ್ಣಿವಂಶಾನುಕೀರ್ತನಂ ॥೬॥

ಭೃಗುಶಾಪಸ್ತಥಾ ವಿಷ್ಣೋರ್ದೈತ್ಯ ಶಾಪಸ್ತಥೈವ ಚ ।
ಕೀರ್ತನಂ ಪುರುಷೇಶಸ್ಯ ವಂಶೋ ಹೌತಾಶನಸ್ತಥಾ ॥ ॥೭॥

ಪುರಾಣಕೀರ್ತನಂ ತದ್ವತ್ಕ್ರಿಯಾಯೋಗಸ್ತಥೈವ ಚ ।
ವ್ರತಂ ನಕ್ಷತ್ರಸಂಖ್ಯಾಕಂ ಮಾರ್ತಂಡಶಯನಂ ತಥಾ ॥೮॥

**ಸೂತ** :- ಸರ್ವಶರೀರಿಯಾದ ಭಗವಂತನು ಮನುಚಕ್ರವರ್ತಿಗೆ ಹೇಳಿದ ಮತ್ಸ್ಯಮಹಾಪುರಾಣವೆಲ್ಲವನ್ನೂ ನಿಮಗೆ ವಿಸ್ತರಿಸಿ ಹೇಳಿರುವೆನು. ಇದು ಧರ್ಮ ಅರ್ಥ, ಕಾಮ ಎಂಬ ಪುರುಷಾರ್ಥಗಳನ್ನು ಸಾಧಿಸಲು ಸಾಧನವಾಗಿರುವದು.

ಈ ಪುರಾಣದಲ್ಲಿ ಆರಂಭಕ್ಕೆ ಮನುಚಕ್ರವರ್ತಿಗಳಿಗೂ ಮತ್ಸ್ಯರೂಪಿಯಾದ ಭಗವಂತನಿಗೂ ಸಂವಾದವಾಯಿತು. ಆ ಮೇಲೆ ಬ್ರಹ್ಮಾಂಡ ಉತ್ಪತ್ತಿ, ಸಂಖ್ಯಾಶಾಸ್ತ್ರದಲ್ಲಿ ನಿರೂಪಿತವಾದ ಇಪ್ಪತ್ತನಾಲ್ಕು ತತ್ವಗಳಿಂದ ಕೂಡಿದ ಜಗತ್ತಿನ ಸೃಷ್ಟಿ ವಿಧಾನವನ್ನು ಹೇಳಲಾಗಿದೆ. ಆ ಬಳಿಕ ಬ್ರಹ್ಮನಿಗೆ ಆ ನಾಲ್ಕು ತಲೆಗಳು ಹುಟ್ಟಿದ ಸಂಗತಿಯನ್ನು ವಿವರಿಸಿದೆ. ದೇವತೆಗಳ ಮತ್ತು ಅಸುರರ ಉತ್ಪತ್ತಿ ಕ್ರಮ, ಮರುದ್ಗಣಗಳು ಉದ್ಭವಿಸಿದ ರೀತಿ, ಮದನ ದ್ವಾದಶೀವ್ರತ, ಲೋಕಪಾಲಕರ ಪೂಜೆ, ಮನ್ವಂತರಗಳ ಸವಿಸ್ತಾರ ವರ್ಣನೆ, ಪೃಥು ಚಕ್ರವರ್ತಿಯ ರಾಜ್ಯಾಭಿಷೇಕ ವೃತ್ತಾಂತ, ಸೂರ್ಯ ಹಾಗೂ ಯಮರ ಉತ್ಪತ್ತಿ, ಬುಧ ಇಲೆಯರ ಸಮಾಗಮ ಮುಂತಾದವುಗಳನ್ನು ನಿರೂಪಿಸಲಾಗಿದೆ.

ಪಿತೃವಂಶ ವರ್ಣನೆ, ಶ್ರಾದ್ಧಕಾಲ, ಪಿತೃಗಳಿಗೆ ಪ್ರಿಯವೆನಿಸಿದ ಪುಣ್ಯತೀರ್ಥಾದಿಗಳು, ಅವುಗಳ ಯಾತ್ರೆಯಿಂದಾಗುವ ಫಲ. ಚಂದ್ರನ ಉತ್ಪತ್ತಿ, ಚಂದ್ರವಂಶದ ವರ್ಣನೆ, ಯಯಾತಿಮಹಾರಾಜನ ವೃತ್ತಾಂತ, ಕಾರ್ತವೀರ್ಯಾರ್ಜುನನ ಮಾಹಾತ್ಮ್ಯ, ಯಾದವ ವರ್ಣನೆ, ಇವುಗಳ ವಿಷಯವನ್ನು ವರ್ಣಿಸಲಾಗಿದೆ. ವಿಷ್ಣುವಿಗೆ ಭೃಗುಋಷಿಯ ಶಾಪ, ದೈತ್ಯರಿಗೆ ಶುಕ್ರಾಚಾರ್ಯರ ಶಾಪ, ಪುರುವಂಶ ವರ್ಣನೆ, ಅಗ್ನಿವಂಶ ವರ್ಣನೆ, ಪುರಾಣ ವಿಷಯಾನುಕ್ರಮಣಿಕೆ ಕರ್ಮಯೋಗದ ಶ್ರೇಷ್ಠತೆ, ಪುರುಷವ್ರತ, ಆದಿತ್ಯ ಶಯನ ವ್ರತ ಇವುಗಳನ್ನು ವರ್ಣಿಸಲಾಗಿದೆ. ಅಲ್ಲದೆ,

ಕೃಷ್ಣಾಷ್ಟಮೀವ್ರತಂ ತದ್ವದ್ರೋಹಿಣೀ ಚಂದ್ರ ಸಂಜ್ಞಿತಂ ।
ತಡಾಗವಿಧಿ ಮಾಹಾತ್ಮ್ಯಂ ಪಾದಪೋತ್ಸರ್ಗ ಏವ ಚ ॥೯॥

ಸೌಭಾಗ್ಯಶಯನಂ ತದ್ವದಗಸ್ತ್ಯವ್ರತಮೇವ ಚ ।
ತಥಾನಂತ ತೃತೀಯಾ ತು ರಸಕಲ್ಯಾಣಿನೀ ತಥಾ ॥೧೦॥

ಆರ್ದ್ರಾನಂದಕರೀ ತದ್ವದ್ವ್ರತಂ ಸಾರಸ್ವತಂ ಪುನಃ ।
ಉಪರಾಗಾಭಿಷೇಕಶ್ಚ ಸಪ್ತಮೀಸ್ನಪನಂ ಪುನಃ ॥೧೧॥

ಭೀಮಾಖ್ಯಾ ದ್ವಾದಶೀ ತದ್ವದನಂಗಶಯನಂ ತಥಾ ।
ಅಶೂನ್ಯಶಯನಂ ತದ್ವತ್ತಥೈವಾಂಗಾರಕ ವ್ರತಂ ॥೧೨॥

ಕೃಷ್ಣಾಷ್ಟಮೀವ್ರತ, ರೋಹಿಣೀಚಂದ್ರವ್ರತ, ತಟಾಕ ಪ್ರತಿಷ್ಠಾವಿಧಿ, ಸೌಭಾಗ್ಯ ಶಯನವ್ರತ, ಅಗಸ್ತ್ಯವ್ರತ, ಅನಂತ ತೃತೀಯಾವ್ರತ, ರಸಕಲ್ಯಾಣಿನೀವ್ರತ, ಆರ್ದ್ರಾನಂದ ತೃತೀಯಾವ್ರತ, ಸಾರಸ್ವತ ವ್ರತ, ಗ್ರಹಣ ಸ್ನಾನವಿಧಿ, ಸಪ್ತಮೀ ಸ್ವಪನವ್ರತ, ಭೀಮ ದ್ವಾದಶೀವ್ರತ, ಅನಂಗಶಯನವ್ರತ, ಅಂಗಾರಕವ್ರತ,

ಕಲ್ಯಾಣಸಪ್ತಮಿ, ವಿಶೋಕ ಸಪ್ತಮಿ, ಫಲಸಪ್ತಮಿ, ಶರ್ಕರಾಫಲಸಪ್ತಮಿ, ಕಮಲಸಪ್ತಮಿ, ಮಂದಾರಸಪ್ತಮಿ ಮತ್ತು ಶುಭಸಪ್ತಮಿ, ಮುಂತಾದ ವ್ರತಗಳ ವಿಧಾನ ಮತ್ತು ವಿಶೋಕ ದ್ವಾದಶಿ ವ್ರತ, ಎಂಬ ವ್ರತಗಳ ವಿಧಾನವನ್ನು ಮುಂದೆ ವಿಸ್ತರಿಸಿ ಹೇಳಿದೆ -

ಸಪ್ತಮೀಸಪ್ತಕಂ ತದ್ವಿದ್ವಿಶೋಕ ದ್ವಾದಶೀ ತಥಾ ।
ಮೇರು ಪ್ರದಾನಂ ದಶಧಾ ಗ್ರಹಶಾಂತಿಸ್ತಥೈವ ಚ ॥೧೩॥

ಗ್ರಹಸ್ವರೂಪಕಥನಂ ತಥಾ ಶಿವಚತುರ್ದಶೀ ।
ತಥಾ ಸರ್ವಫಲತ್ಯಾಗಃ ಸೂರ್ಯವಾರವ್ರತಂ ತಥಾ ॥೧೪॥

ಸಂಕ್ರಾಂತಿಸ್ನಪನಂ ತದ್ವಿದ್ವಿಭೂತಿದ್ವಾದಶೀವ್ರತಂ ।
ಷಷ್ಟಿವ್ರತಾನಾಂ ಮಾಹಾತ್ಮ್ಯಂ ತಥಾ ಸ್ನಾನವಿಧಿಕ್ರಮಃ ॥೧೫॥

ಪ್ರಯಾಗಸ್ಯ ತು ಮಾಹಾತ್ಮ್ಯಂ ಭುವನಸ್ಯಾನುಕೀರ್ತನಂ ।
ಐಲಾಶ್ರಮವ್ರತಂ ತದ್ವಿದ್ದೀಪಲೋಕಾನು ಕೀರ್ತನಂ ॥೧೬॥

ಸೂರ್ಯ ಚಂದ್ರ ಗತಿಸ್ತದ್ವದಾದಿತ್ಯ ರಥ ವರ್ಣನಂ ।
ತಥಾಂತರಿಕ್ಷಚಾರಶ್ಚ ಧ್ರುವ ಮಾಹಾತ್ಮ್ಯಮೇವ ಚ ॥೧೭॥

ಭವನನಾನಿ ಸುರೇಂದ್ರಾಣಾಂ ತ್ರಿಪುರಾಘೋಷಣಂ ತಥಾ ।
ಪಿತೃಪಿಂಡಾದಿ ಮಾಹಾತ್ಮ್ಯಂ ಮನ್ವಂತರವಿನಿರ್ಣಯಃ ॥೧೮॥

ವಜ್ರಾಂಗಸ್ಯ ತು ಸಂಭೂತಿಸ್ತಾರಕೋತ್ಪತ್ತಿರೇವ ಚ ।
ತಾರಕಾಸುರ ಮಾಹಾತ್ಮ್ಯಂ ಬ್ರಹ್ಮದೇವಾನುಮಂತ್ರಣಂ ॥೧೯॥

ಪಾರ್ವತೀ ಸಂಭವಸ್ತದ್ವತ್ತಥಾ ಶಿವತಪೋವನಂ ।
ಅನಂಗದೇಹದಾಹಸ್ತು ರತಿಶೋಕಸ್ತಥೈವ ಚ ॥೨೦॥

ಗೌರೀ ತಪೋವನಂ ತದ್ವದ್ವಿಶ್ವನಾಥ ಪ್ರಸಾದನಂ ।
ಪಾರ್ವತೀ ಋಷಿ ಸಂವಾದಸ್ತಥೈವೋದ್ವಾಹ ಮಂಗಲಂ ॥೨೧॥

ಕುಮಾರ ಸಂಭವಸ್ತದ್ವತ್ಕುಮಾರ ವಿಜಯ ಸ್ತಥಾ ।
ತಾರಕಸ್ಯ ವಧೋ ಘೋರೋ ನರಸಿಂಹೋಪವರ್ಣನಂ ॥೨೨॥

ಪದ್ಮೋದ್ಭವ ವಿಸರ್ಗಸ್ತು ತಥೈವಾಂಧಕ ಘಾತನಂ !
ವಾರಾಣಸ್ಯಾಸ್ತು ಮಾಹಾತ್ಮ್ಯಂ ನರ್ಮದಾಯಾಸ್ತಥೈವ ಚ ॥೨೩॥

ಪ್ರವರಾನುಕ್ರಮಸ್ತದ್ವತ್ ಪಿತೃ ಗಾಥಾನು ಕೀರ್ತನಂ ।
ತಥೋಭಯ ಮುಖೀ ದಾನಂ ದಾನಂ ಕೃಷ್ಣಾಜಿನಸ್ಯ ಚ ॥೨೪॥

ಧಾನ್ಯ ಪರ್ವತ, ಲವಣ ಪರ್ವತ, ಗುಡಪರ್ವತ, ಸುವರ್ಣ ಪರ್ವತ, ತಿಲ ಪರ್ವತ, ಕಾರ್ಪಾಸಪರ್ವತ, ಘೃತಪರ್ವತ, ರತ್ನಪರ್ವತ, ರೌಪ್ಯಪರ್ವತ, ಮತ್ತು ಶರ್ಕರಾಪರ್ವತಗಳೆಂಬ ಹತ್ತು ಬಗೆಯ ಪರ್ವತಗಳ ದಾನಕ್ರಮ. ಗ್ರಹಶಾಂತಿ ಗೃಹಸ್ವರೂಪ, ಶಿವಚತುರ್ದಶೀವ್ರತ, ಫಲತ್ಯಾಗವ್ರತ, ಆದಿತ್ಯವಾರವ್ರತ, ಸಂಕ್ರಾಂತ್ಯುದ್ಯಾಪನಿ ವ್ರತ ವಿಧಾನ, ವಿಭೂತಿ ದ್ವಾದಶೀ ವ್ರತ, ದೇವವ್ರತ, ಮೊದಲಾದ ಅರವತ್ತು ಬಗೆಯ ವ್ರತಗಳ ಮಾಹಾತ್ಮ್ಯ ಹಾಗೂ ಸ್ನಾನವಿಧಿ, ಪ್ರಯಾಗ ಕ್ಷೇತ್ರ ಮಾಹಾತ್ಮ್ಯ. ಭೂಗೋಳ ವರ್ಣನ, ಪುರೂರವನು ಆಶ್ರಮದಲ್ಲಿ ಮಾಡಿದ ವ್ರತಶೇಷವರ್ಣನ, ದ್ವೀಪ ಹಾಗೂ ಲೋಕಗಳ ವರ್ಣನೆ, ಸೂರ್ಯ ಚಂದ್ರ ಸಂಚಾರ ವರ್ಣನ, ಸೂರ್ಯ ರಥವರ್ಣನ, ಸೂರ್ಯಸಂಚಾರದ ಕಥನ, ಧ್ರುವಮಾಹಾತ್ಮ್ಯ. ದೇವಲೋಕಗಳ ವರ್ಣನ, ತ್ರಿಪುರಾಸುರೋಪಾಖ್ಯಾನ, ಪಿತೃಗಳಿಗಾಗಿ ಕೊಡುವ ಪಿಂಡದ ದಾನ ಮಹಿಮೆ, ಮನ್ವಂತರ ಕಾಲನಿರ್ಣಯ ಮುಂತಾದವುಗಳನ್ನು ವರ್ಣಿಸಲಾಗಿದೆ. ಬಳಿಕ ವಜ್ರಾಂಗನ ಉತ್ಪತ್ತಿ, ತಾರಕಾಸುರನ ಜನನ, ತಾರಕಾಸುರನ ಮಹಿಮೆ, ಹಾಗೂ ಅವನ ವಧೆ, ಬ್ರಹ್ಮನ ಆಲೋಚನೆ, ಪಾರ್ವತಿ ಜನನ, ಶಿವ ತಪೋವನ ವರ್ಣನ, ಸಪ್ತರ್ಷಿಗಳು ಶಿವನ ಬಳಿಗೆ ಅವನನ್ನು ವಿವಾಹಕ್ಕೆ ಒಪ್ಪಿಸಿದುದು, ಪಾರ್ವತೀ ಋಷಿಗಳ ಸಂವಾದ, ಪಾರ್ವತೀ ಪರಮೇಶ್ವರರ ವಿವಾಹವರ್ಣನ, ಷಣ್ಮುಖನ ಜಯವರ್ಣನ, ತಾರಕಾಸುರ ವಧೆ, ನೃಸಿಂಹಾವತಾರವರ್ಣನ. ಪದ್ಮೋದ್ಭವ ಪ್ರಾದುರ್ಭಾವ, ಅಂಧಕಾಸುರವಧೆ, ವಾರಾಣಾಸೀ ಮಾಹಾತ್ಮ್ಯೆ, ನರ್ಮದಾ ಮಾಹಾತ್ಮ್ಯೆ, ಇವುಗಳನ್ನು ವಿವರಿಸಿದೆ.

ಗೋತ್ರ ಪ್ರವರಾದಿ ನಿರ್ಣಯ, ಪಿತೃಗಾಥಾವರ್ಣನ, ಕರು ಹಾಕುತ್ತಿರುವ ಹಸುವನ್ನು ದಾನಮಾಡುವ ವಿಧಾನ, ಕೃಷ್ಣಾಜಿನ ದಾನನಿಧಿ, ಸಾವಿತ್ರ್ಯುಪಾಖ್ಯಾನ, ರಾಜಧರ್ಮವರ್ಣನ, ಪ್ರಯಾಣಕಾಲದ ಶುಭಾಶುಭ ಶಕುನಗಳ ವರ್ಣನೆ, ಶುಭ ಸ್ವಪ್ನ ಫಲವರ್ಣನ, ವಾಮನ ಮೂರ್ತಿಯ ಮಹಿಮೆ, ವರಾಹಾವತಾರವರ್ಣನೆ, ಕ್ಷೀರ ಸಮುದ್ರ ಮಥನ, ಶಿವನು ಕಾಲಕೂಟವನ್ನು ಪಾನಮಾಡಿದ ವೃತ್ತಾಂತ ಇವುಗಳನ್ನು ವರ್ಣಿಸಲಾಗಿದೆ. ದೇವಾಸುರಯುದ್ಧ ವರ್ಣನ, ವಾಸ್ತುಶಾಸ್ತ್ರವಿಚಾರ, ಪ್ರತಿಮಾಲಕ್ಷಣ, ದೇವತಾರಾಧನ ಕ್ರಮ, ದೇವಾಲಯ ಲಕ್ಷಣ, ಮಂಟಪ ಲಕ್ಷಣ, ಭವಿಷ್ಯದ್ರಾಜವಂಶವರ್ಣನ, ತುಲಾಪುರುಷಾದಿ ಷೋಡಶ ಮಹಾದಾನಾನುವರ್ಣನ ಶ್ವೇತನೀಲಲೋಹಿತ ಮುಂತಾದ ಮೂವತ್ತು ಕಲ್ಪಗಳ ಸವಿಸ್ತರ ವರ್ಣನೆ, ಗ್ರಂಥಾನುಕ್ರಮಣಿಕೆಗಳ ವಿವರಣೆಯೊಂದಿಗೆ ಪುರಾಣವು ಪೂರ್ತಿಗೊಂಡಿದೆ.

ಈ ಪುರಾಣ ಶ್ರವಣವು ಪವಿತ್ರ ಹಾಗೂ ಆಯುರ್ವರ್ಧಕವೂ ಆಗಿದೆ. ಇದು ಕೀರ್ತಿ, ಸಂಪತ್ತುಗಳನ್ನು ಹೆಚ್ಚಿಸುವುದು. ಮಹಾಪಾಪಗಳನ್ನೆಲ್ಲ ಪರಿಹರಿಸಿ ಮಾನವ ಜೀವನವನ್ನು ಪುನೀತಗೊಳಿಸುವಂತಹದು.

ಮನುಷ್ಯರಿಗೆ ಸಕಲ ಪುಣ್ಯಕ್ಷೇತ್ರಗಳ ಸ್ನಾನದಿಂದ ಯಾವ ಪುಣ್ಯ ಬರುವದೋ, ಶಾಸ್ತ್ರೋಕ್ತವಾದ ಸಮಸ್ತ ಧರ್ಮಾಚರಣೆಯಿಂದ ಯಾವ ಮಹಾಫಲವು ಬರುವದೋ

ಅದೆಲ್ಲವೂ ಈ ಮತ್ಸ್ಯಪುರಾಣದ ಶ್ರವಣ, ಅಥವಾ ಪಾರಾಯಣದಿಂದ ಬರುತ್ತದೆ. ಎಲ್ಲದೋಷಗಳನ್ನು ತೊಲಗಿಸುವ ಈ ಶ್ರೇಷ್ಠವಾದ ಪುರಾಣವನ್ನು ಮತ್ಸ್ಯರೂಪಿ ವಿಷ್ಣುವು ವೈವಸ್ವತ ಮನುಚಕ್ರವರ್ತಿಗೆ ನಿರೂಪಿಸಿದನು.

ಈ ಮಹಾಪುರಾಣದ ಶ್ಲೋಕಗಳಲ್ಲಿ ಒಂದು ಪಾದವನ್ನು ಓದಿದರೂ ಸಾಕು ಆತನು ಪಾಪಗಳನ್ನೆಲ್ಲ ಕಳೆದುಕೊಂಡು, ನಾರಾಯಣನ ಸಾನ್ನಿಧ್ಯ ಸೇರುವನು. ಮನ್ಮಥನಂತೆ ದಿವ್ಯ ಶರೀರಿಯಾಗಿ ಸುಖದಿಂದ ಬಾಳುವನು. ಸಕಲ ರಹಸ್ಯಾರ್ಥಗಳಿಂದ ತುಂಬಿದ ಈ ಪುಣ್ಯಕರವಾದ ಪುರಾಣವನ್ನು ಶ್ರದ್ಧೆಯಿಂದ ಯಾವನು ಕೇಳುವನೋ ಅವನು ಪರಮೇಶ್ವರನ ಅನುಗ್ರಹದಿಂದ, ಅಶ್ವಮೇಧಯಾಗಮಾಡಿದ ಪುಣ್ಯಪಡೆದು, ಮಹಾಫಲವನ್ನು ಪಡೆಯುತ್ತಾನೆ.

ಬ್ರಾಹ್ಮಣೋತ್ತಮರೇ, ಧರ್ಮವನ್ನರಿತ ಮನುಜನು, ಶಿವ, ವಿಷ್ಣು, ಬ್ರಹ್ಮ, ಸೂರ್ಯ, ಇವರನ್ನು ಪೂಜಿಸಿ ಈ ಮತ್ಸ್ಯಪುರಾಣದಲ್ಲಿಯ ಒಂದು ಶ್ಲೋಕವನ್ನೋ ಅರ್ಧ ಶ್ಲೋಕವನ್ನೋ ಕೊನೆಗೆ ಒಂದು ಪಾದವನ್ನೋ ಶ್ರದ್ಧೆಯಿಂದ ಕೇಳಿದಲ್ಲಿ, ಅವನಿಗೆ ಬರುವ ಸುಕೃತ ಹೇಳುವೆನು ಕೇಳಿರಿ. ಬ್ರಾಹ್ಮಣನು ವಿದ್ಯಾವಂತನಾಗುವನು, ಕ್ಷತ್ರಿಯನು ರಾಜ್ಯ ಸಂಪಾದಿಸುವನು. ವೈಶ್ಯನು ಧನಿಕನಾಗುವನು. ಶೂದ್ರನು ಸುಖವನ್ನು ಹೊಂದುವನು. ಈ ಪುರಾಣದಲ್ಲಿ

ತಥಾ ಸಾವಿತ್ರ್ಯುಪಾಖ್ಯಾನಂ ರಾಜಧರ್ಮಾಸ್ತಥೈವ ಚ ।
ಯಾತ್ರಾ ನಿಮಿತ್ತ ಕಥನಂ ಸ್ವಪ್ನ ಮಾಂಗಲ್ಯ ಕೀರ್ತನಂ ॥೫೫॥

ವಾಮನಸ್ಯ ತು ಮಾಹಾತ್ಮ್ಯಂ ತಥೈವಾಥ ವರಾಹಜಂ ।
ಕ್ಷೀರೋಧ ಮಥನಂ ತದ್ವತ್ಕಾಲಕೂಟಾಭಿಶಾಸನಮ್ ॥೫೬॥

ದೇವಾಸುರ ವಿಮರ್ದಶ್ಚ ವಾಸ್ತುವಿದ್ಯಾಸ್ತಥೈವ ಚ ।
ಪ್ರತಿಮಾ ಲಕ್ಷಣಂ ತದ್ವದ್ದೇವತಾರಾಧನಂ ತತಃ ॥೫೭॥

ಪ್ರಾಸಾದ ಲಕ್ಷಣಂ ತದ್ವನ್ಮಂಡಪಾನಾಂ ತುಲಕ್ಷಣಂ ।
ಭವಿಷ್ಯದ್ರಾಜನಿರ್ದೇಶೋ ಮಹಾದಾನಾನುಕೀರ್ತನಂ ।
ಕಲ್ಪಾನು ಕೀರ್ತನಂ ತದ್ವದ್ಗ್ರಂಥಾನುಕ್ರಮಣೀ ತಥಾ ॥೫೮॥

ಏತತ್‌ಪವಿತ್ರಮಾಯುಷ್ಯಮೇತತ್ಕೀರ್ತಿ ವಿವರ್ಧನಂ ।
ಏತತ್ಪವಿತ್ರಂ ಕಲ್ಯಾಣಂ ಮಹಾ ಪಾಪ ಹರಂ ಶುಭಂ ॥೫೯॥

ಅಸ್ಮಾತ್ಪುರಾಣಾತ್ಸುಕೃತಂ ನರಾಣಾಂ ತೀರ್ಥಾವಲೀನಾಮವಗಾಹನಾನಾಂ ।
ಸಮಸ್ತ ಧರ್ಮಾಚರಣೋದ್ಭವಾನಾಂಸದೈವ ಲಾಭಶ್ಚ ಮಹಾಫಲಾನಾಂ ॥೬೦॥

ಏತತ್ಪುರಾಣಂ ಪರಮಂ ಸರ್ವದೋಷ ವಿಘಾತಕಂ ।
ಮತ್ಸ್ಯರೂಪೇಣ ಹರಿಣಾ ಕಥಿತಂ ಮನವೇಽರ್ಣವೇ ॥೩೦॥

ಅಸ್ಮಾತ್ಪುರಾಣಾದಪಿ ಪಾದಮೇಕಂ ।
ಪಠೇತ್ತು ಯಃ ಸೋಽಪಿ ವಿಮುಕ್ತ ಪಾಪಃ ॥
ನಾರಾಯಣಸ್ಯಾಸ್ಪದ ಮೇತಿ ನೂನ ।
ಮನಂಗವದ್ದಿವ್ಯವಪುಃ ಸುಖೀ ಸ್ಯಾತ್ ॥೩೨॥

ಪುರಾಣಮೇತತ್ಸಕಲಂ ರಹಸ್ಯಂ ।
ಶ್ರದ್ಧಾನ್ವಿತಃ ಪುಣ್ಯಮಿದಂ ಶೃಣೋತಿ ॥
ಸ ಚಾಶ್ವಮೇಧಾವಭೃಥ ಪ್ರಭಾವ್ಯಂ ।
ಫಲಂ ಸಮಾಪ್ನೋತಿ ಹರಿ ಪ್ರಸಾದಾತ್ ॥೩೩॥

ಶಿವಂ ವಿಷ್ಣುಂ ಸಮಭ್ಯರ್ಚ್ಯ ಬ್ರಹ್ಮಾಣಂ ಸದಿವಾಕರಂ ।
ಶ್ಲೋಕಂ ಶ್ಲೋಕಾರ್ಧಪಾದಂ ವಾ ಶ್ರದ್ಧಯಾ ಯಃ ಶೃಣೋತಿ ವಾ।
ಶ್ರಾವಯೇದ್ವಾಪಿ ಧರ್ಮಜ್ಞಸ್ತತ್ಫಲಂ ಶ್ರುಣುತದ್ವಿಜಾಃ ॥೩೪॥

ಬ್ರಾಹ್ಮಣೋ ಲಭತೇ ವಿದ್ಯಾಂ ಕ್ಷತ್ರಿಯೋ ಲಭತೇ ಮಹೀಂ ।
ವೈಶ್ಯೋ ಧನಮವಾಪ್ನೋತಿ ಸುಖಂ ಶೂದ್ರಸ್ತುವಿಂದತಿ ॥೩೫॥

ಆಯುಷ್ಮಾನ್ ಪುತ್ರವಾಂಶ್ಚೈವ ಲಕ್ಷ್ಮೀವಾನ್ ಪಾಪವರ್ಜಿತಃ ।
ಶ್ರುತ್ವಾ ಪುರಾಣಮಖಿಲಂ ಶತ್ರುಭಿಶ್ಚಾಪರಾಜಿತಃ ॥೩೬॥

ಈಪುರಾಣವನ್ನು ಸಮಗ್ರವಾಗಿ ಶ್ರದ್ಧೆಯಿಂದ ಕೇಳಿದವನು ಆಯುಷ್ಯವಂತನೂ, ಪುತ್ರವಂತನೂ ಆಗುವನು. ಅವನಿಗೆ ಸಂಪತ್ತು ಹೆಚ್ಚುವದು. ಪಾಪಗಳು ದೂರವಾಗುವವು. ಅವನ ಶತ್ರುಗಳು ಅಡಗಿ ಹೋಗುವರು.

ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಮತ್ಸ್ಯ ಮನು
ಸಂವಾದೇ ಚತುರ್ದಶ ಸಾಹಸ್ರ್ಯಾಂ ಸಂಹಿತಾಯಾಮೇ
ತತ್ಪುರಾಣಾನುಕ್ರಮಣಿಕಾದಿ ಕಥನಂ ನವನವತ್ಯಧಿಕ
ದ್ವಿಶತತಮೋಽಧ್ಯಾಯಃ ॥

*ಇತಿ ಮತ್ಸ್ಯಮಹಾಪುರಾಣದಲ್ಲಿ ಪುರಾಣಾನುಕ್ರಮಣಿಕೆ ಎಂಬ*
*ಎರಡುನೂರ ತೊಂಬತ್ತೆರಡನೆಯ ಅಧ್ಯಾಯ ಮುಗಿದುದು.*

——○——

## ಮತ್ಸ್ಯಪುರಾಣದಲ್ಲಿಯ ನೀತಿವಾಕ್ಯ ಮತ್ತು ಸುಭಾಷಿತಗಳು

### ಯಯಾತಿರುವಾಚ

ಅಕ್ರೋಧನಃ ಕ್ರೋಧನೇಭ್ಯೋ ವಿಶಿಷ್ಟ-
ಸ್ತಥಾಽತಿರುಪಸ್ತಿತಿಕ್ಷುರ್ವಿಶಿಷ್ಟಃ
ಅಮಾನುಷೇಭ್ಯೋ ಮಾನುಷಶ್ಚ ಪ್ರಧಾನೋ
ವಿದ್ವಾಂಸ್ತಥೈವಾಽವಿದುಷಃ ಪ್ರಧಾನಃ ॥

ಕೋಪಿಷ್ಠರಿಗಿಂತ ಎಂದೂ ಕೋಪಗೊಳ್ಳದ ಶಾಂತ ಮನುಷ್ಯನು ಶ್ರೇಷ್ಠ. ಸಹನ ಶಕ್ತಿ ಕಳೆದುಕೊಳ್ಳುವವನಿಗಿಂತ ತಾಳ್ಮೆ ಉಳ್ಳವನು ಶ್ರೇಷ್ಠ. ಪಶುಪಕ್ಷಿಗಳಿಗಿಂತ ಮಾನವ, ದಡ್ಡರಿಗಿಂತ ಪಂಡಿತ ಶ್ರೇಷ್ಠ.

ಆಕ್ರೋಶ್ಯಮಾನೋ ನಾಽಕ್ರೋಶೇನ್ ಮನ್ಯುಮೇವ ತಿತಿಕ್ಷತಿ ।
ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿಂದತಿ ॥

ರೇಗಿದವರ ಮೇಲೆ, ರೇಗದೆ ಅವನ ಕೋಪವನ್ನು ತಾಳಿಕೊಳ್ಳಬೇಕು. ಅಂದರೆ ಆ ಕೋಪವು ಕೋಪಿಷ್ಠನನ್ನೇ ಸುಟ್ಟುಬಿಡುತ್ತದೆ. ಕೋಪಿಷ್ಠನ ಪುಣ್ಯವು ಅದನ್ನು ಸೈರಿಸಿದವರಿಗೆ ಬರುತ್ತದೆ.

ನಾರುಂತುದಃ ಸ್ಯಾನ್ನ ನೃಶಂಸವಾದೀ ।
ನ ಹೀನತಃ ಕಿಮಪ್ಯಭ್ಯಾದದೀತ ।
ಯಯಾಽಸ್ಯ ವಾಚಾ ಪರ ಉದ್ವಿಜೇತ ।
ನ ತಾಂ ವದೇದ್ರುಶತೀಂ ಪಾಪಲೌಲ್ಯಾಂ ॥

ಇನ್ನೊಬ್ಬರ ಮರ್ಮಕ್ಕೆ ಪೆಟ್ಟು ಹತ್ತುವ ಮಾತನ್ನು ಆಡಬಾರದು. ಬಿರುಸು ನುಡಿಯನ್ನು ಉಸಿರಬಾರದು. ನೀಚರಿಂದ ಏನನ್ನೂ ತೆಗೆದುಕೊಳ್ಳಬಾರದು. ಇನ್ನೊಬ್ಬರ ಮನಸ್ಸಿಗೆ ನೋವನ್ನುಂಟುಮಾಡುವ ದುಷ್ಟ ವಚನವನ್ನು ನುಡಿಯಬಾರದು.

ಅರುಂತುದಂ ಪುರುಷಂ ತೀಕ್ಷ್ಣವಾಚಂ
ವಾಕ್ಕಂಟಕೈರ್ವಿತುದಂತಂ ಮನುಷ್ಯಾನ್ ।
ವಿಂದ್ಯಾದಲಕ್ಷ್ಮೀಃ ಕತಮಂ ಜನಾನಾಂ
ಮುಖೇ ನಿಬದ್ಧಂ ನಿರ್ಋತಿಂ ವಹಂತಂ ॥

ಬಿರುಸು ಮಾತನಾಡಿ ಹರಿತ ನುಡಿಗಳೆಂಬ ಮುಳ್ಳಿನಿಂದ ಹೆರವರನ್ನು ಚುಚ್ಚುವ ಮನುಷ್ಯನ ಬಳಿಗೆ ದಾರಿದ್ರ್ಯವು ಹುಡುಕಿಕೊಂಡು ಬರುತ್ತದೆ. ಅಂಥವರ ಮುಖದಲ್ಲಿ ದೈತ್ಯರು ನೆಲೆಸಿರುತ್ತಾರೆ.

ಸದ್ಭಿಃ ಪುರಸ್ತಾದಭಿಪೂಜಿತಃ ಸ್ಯಾ
ತ್ಸದ್ಭಿಸ್ತಥಾ ಪೃಷ್ಠತೋ ರಕ್ಷಿತಃ ಸ್ಯಾತ್ ।
ಸದಾಽಸತಾಮತಿವಾದಾಂಸ್ತಿತಿಕ್ಷೇ
ತ್ಸತಾಂ ವೃತ್ತಂ ಪಾಲಯನ್ಸಾಧುವೃತ್ತಃ

ಸಜ್ಜನರ ನಡೆ-ನುಡಿಗಳನ್ನು ಪಾಲಿಸಬೇಕು. ದುರ್ಜನರು ಏನಾದರೂ ಸಿಡಿದು ನುಡಿದರೆ ಅದನ್ನು ತಾಳಿಕೊಳ್ಳಬೇಕು. ಇಂಥವರನ್ನು ಸಜ್ಜನರು ಯಾವಾಗಲೂ ಹಿಂದೆ ಮುಂದೆ ನಿಂತು ಆದರಿಸುವರು ಮತ್ತು ಬೆಂಬಲ ನೀಡುವರು.

**ವಾಕ್ಸಾಯಕಾ ವದನಾನ್ನಿಷ್ಪತಂತಿ**
**ಯೈರಾಹತಃ ಶೋಚತಿ ರಾತ್ರ್ಯಹಾನಿ ।**
**ಪರಸ್ಯ ನೋ ಮರ್ಮಸು ಯೇ ಪತಂತಿ ।**
**ತಾನ್‌ಪಂಡಿತೋ ನಾವಸೃಜೇತ್ಪರೇಷು ॥**

ಬಿರುನುಡಿಗಳು ಬಾಣಗಳಂತಿರುತ್ತವೆ. ಅದರ ಪೆಟ್ಟು ತಿಂದ ಮನುಷ್ಯನು ಹಗಲಿರುಳು ದುಃಖಪಡುತ್ತಾನೆ. ಅವು ಹೆರರ ಮರ್ಮಸ್ಥಳಗಳಲ್ಲಿ ನಾಟಿರುತ್ತವೆ. ಇಂತಹ ವಾಗ್ಬಾಣಗಳನ್ನು ವಿವೇಕಿಯು ಇನ್ನೊಬ್ಬರ ಮೇಲೆ ಎಸೆಯಬಾರದು.

**ನಾಸ್ತೀದೃಶಂ ಸಂವನನಂ ತ್ರಿಷು ಲೋಕೇಷು ಕಿಂಚನ ।**
**ಯಥಾ ಮೈತ್ರೀ ಚ ಲೋಕೇಷು ದಾನಂ ಚ ಮಧುರಾ ಚ ವಾಕ್ ॥**

ಗೆಳೆತನ, ದಾನ ಮತ್ತು ಮಧುರಮಾತು ಈ ಮೂರರಂಥಹ ದೇಹಕ್ಕೆ ಭೂಷಣವು ಬೇರೆ ಇರುವುದಿಲ್ಲ. ಇವೇ ನಿಜವಾದ ರಕ್ಷಾಕವಚ.

**ತಸ್ಮಾತ್ ಕಾಂತಂ ಸದಾ ವಾಚ್ಯಂ ನ ವಾಚ್ಯಂ ಪರುಷಂ ಕ್ವಚಿತ್ ।**
**ಪೂಜ್ಯಾನ್ ಸಂಪೂಜಯೇದ್ದದ್ಯಾನ್ನಾಭಿಶಾಪಂ ಕದಾಚನ ॥**

ಆದುದರಿಂದ ಯಾವಾಗಲೂ ಮೃದುನುಡಿಗಳನ್ನೇ ನುಡಿಯಬೇಕು. ಬಿರುನುಡಿಗಳನ್ನು ಆಡಬಾರದು. ಯೋಗ್ಯರನ್ನು ಪೂಜಿಸಬೇಕು. ಯಾರಿಗೂ ಶಾಪವನ್ನು ಕೊಡಬಾರದು.

**ಪ್ರತಿಕೂಲಂ ಕರ್ಮಣಾಂ ಪಾಪಮಾಹು**
**ಸ್ತದ್ವರ್ತಿನಾಂ ಪ್ರವಣಂ ಪಾಪಲೋಕಂ ।**

**ಸಂತೋಽಸತೋ ನಾನುವರ್ತಂತ ತೇ ವೈ**
**ಯದಾತ್ಮನ್ಯೇಷಾಂ ಪ್ರತಿಕೂಲವಾದೀ ॥**

ವಿಹಿತಕರ್ಮಗಳಿಗೆ ವಿರುದ್ಧವಾಗಿ ನಡೆಯುವದೇ ಪಾಪ. ಅದರಲ್ಲಿ ತೊಡಗಿದವರಿಗೆ ನರಕವೇ ಗತಿ. ಸಜ್ಜನರು ದುರ್ಜನರನ್ನು ಅನುಸರಿಸುವುದಿಲ್ಲ. ಯಾಕೆಂದರೆ ಕೆಟ್ಟ ಜನರು ಇವರಿಗೆ ವಿರುದ್ಧ ಮಾತನಾಡುವ ಸ್ವಭಾವದವರು.

**ನಾನಾಭಾವಾ ಬಹವೋ ಜೀವಲೋಕೇ**
**ದೈವಾಧೀನಂ ನಚೇಷ್ಟಾಧಿಕಾರಾಃ**
**ತತ್ತತ್ ಪ್ರಾಪ್ಯ ನ ವಿಹನ್ಯೇತ ಧೀರೋ**
**ದಿಷ್ಟಂ ಬಲೀಯ ಇತಿ ಮತ್ವಾಽತ್ಮಬುಧ್ಯಾ ॥**

ಈ ಜೀವರಾಶಿಗಳಲ್ಲಿ ನೂರಾರುವಿಧಪ್ರಾಣಿಗಳಿವೆ. ಎಲ್ಲವೂ ದೈವದ ಕೈಯಲ್ಲಿ ಇರುತ್ತವೆ. ಸ್ವತಂತ್ರವಾಗಿ ಇರುವ ಅಧಿಕಾರ ಅವುಗಳಿಗೆ ಇಲ್ಲ. ಆಗಾಗ ಎದುರಾಗುವ ಕಷ್ಟ ಸುಖಗಳಿಗೆ ಧೀರನಾದವನು ಮನಸ್ಸಿನಿಂದ ನಿರ್ವಿಕಾರಭಾವದಿಂದಿರಬೇಕು. 'ವಿಧಿಯುಬಲಿಷ್ಠ'ವೆಂದು ತಿಳಿದು ಧೈರ್ಯದಿಂದ ಇರಬೇಕು.

ಸುಖಂ ಹಿ ಜಂತುರ್ಯದಿ ವಾಽಪಿ ದುಃಖಂ
ದೈವಾಧೀನಂ ವಿಂದತಿ ನಾತ್ಮಶಕ್ತ್ಯಾ ।
ತಸ್ಮಾದ್ದಿಷ್ಟಂ ಬಲವನ್ಮನ್ಯಮಾನೋ
ನ ಸಂಜ್ವರೇನ್ನಾಪಿ ಹೃಷ್ಯೇತ್ಕದಾಚಿತ್ ॥

ದೈವವಶಾತ್ ಪ್ರಾಣಿಗಳಿಗೆ ಸುಖ ದುಃಖಗಳು ಬರುತ್ತವೆ. ದುಃಖ ಬಂದಾಗ ಕುಗ್ಗುವದು ಸುಖ ಬಂದಾಗ ಉಬ್ಬುವದೂ ಎಂದಿಗೂ ಒಳ್ಳೆಯದಲ್ಲ.

ದುಃಖೇ ನ ತಪ್ಯೇತ ಸುಖೇ ನ ಹೃಷ್ಯೇ-
-ತ್ಸಮೇನ ವರ್ತೇತ ಸದೈವ ಧೀರಃ ।
ದಿಷ್ಟಂ ಬಲೀಯ ಇತಿ ಮನ್ಯಮಾನೋ
ನ ಸಂಜ್ವರೇನ್ನಾಪಿ ಹೃಷ್ಯೇತ್ಕದಾಚಿತ್ ॥

ದುಃಖದಿಂದ ಸಂಕಟಪಡದೆ, ಸುಖದಿಂದ ಹಿಗ್ಗದೆ ಇರುವವನು, ನಿಜವಾದ ಜ್ಞಾನಿಯು. ದೈವದ ಪ್ರಭಾವದಿಂದ ಹೀಗಾಗುವದು ಎಂದು ತಿಳಿದು ಸುಖ-ದುಃಖಗಳನ್ನು ಮನಸ್ಸಿಗೆ ತಂದುಕೊಳ್ಳದೇ ಸುಖ ಬಂದಾಗ ಹಿಗ್ಗದೇ ದುಃಖ ಬಂದಾಗ ಕುಗ್ಗದೆ ಇರಬೇಕು.

ಭಯೇ ನ ಮುಹ್ಯಾಮ್ಯಷ್ಟಕಾಽಹಂ ಕದಾಚಿ
ತ್ಸಂತಾಪೋ ಮೇ ಮಾನಸೋ ನಾಸ್ತಿ ಕಶ್ಚಿತ್ ।
ಧಾತಾ ಯಥಾ ಮಾಂ ವಿದಧಾತಿ ಲೋಕೇ
ಧ್ರುವಂ ತಥಾಹಂ ಭವಿತೇತಿ ಮತ್ವಾ ॥

ಓ ಅಷ್ಟಕನೇ, ಹೆದರಿಕೆಯಲ್ಲಿ ನಾನು ಮೋಹ ಪರವಶನಾಗದೆ, ಮನಸ್ಸಿಗೆ ಯಾವ ಸಂತಾಪವನ್ನು ಹಚ್ಚಿಕೊಳ್ಳುವುದಿಲ್ಲ. 'ಬ್ರಹ್ಮನು ಲೋಕದಲ್ಲಿ ನನ್ನನ್ನು ಹೇಗೆ ಇಡುವನೋ ಹಾಗೆ ಇರುವೆನು' ಎಂದು ತಿಳಿದಿದ್ದೇನೆ.

ಸಂಸ್ವೇದಜಾ ಹ್ಯಂಡಜಾ ಹ್ಯುದ್ಭಿದಶ್ಚ
ಸರೀಸೃಪಾಃ ಕೃಮಯೋಽಪ್ಯಪ್ಸು ಮತ್ಸ್ಯಾಃ ।
ತಥಾಽಶ್ಮಾನಸ್ತೃಣಕಾಷ್ಠಂ ಚ ಸರ್ವಂ
ದಿಷ್ಟಕ್ಷಯೇ ಸ್ವಾಂ ಪ್ರಕೃತಿಂ ಭಜಂತೇ ॥

ಈ ಜಗತ್ತಿನಲ್ಲಿ ನಾಲ್ಕು ಬಗೆಯ ಜೀವರಾಶಿಗಳು. ಅಂದರೆ ಬೆವರಿನಿಂದ, ಮೊಟ್ಟೆಯಿಂದ, ನೆಲದಿಂದ, ಜಲದಿಂದ ಹುಟ್ಟುವ ಹಾಗೂ ಹರಿದಾಡುವ ಹೀಗೆ ನಾಲ್ಕು ಬಗೆಯ ಜಂತುಗಳೂ, ಹುಳಗಳೂ, ಮೀನಗಳೂ ಮತ್ತು ಕಲ್ಲು, ಹುಲ್ಲು ಕಟ್ಟಿಗೆ

ಮೊದಲಾದ ಎಲ್ಲ ಬಗೆಯ ಜೀವಜಂತುಗಳೂ ತಮ್ಮ ಜೀವನ ಅವಧಿಯು ಮುಗಿಯುತ್ತಲೇ ತಮ್ಮ ಮೂಲ ಸ್ವರೂಪ ಸೇರುತ್ತವೆ.

**ತಪಶ್ಚ ದಾನಂ ಚ ಶಮೋ ದಮಶ್ಚ**
**ಹ್ರೀರಾರ್ಜವಂ ಸರ್ವಭೂತಾನುಕಂಪಾ ।**
**ಸ್ವರ್ಗಸ್ಯ ಲೋಕಸ್ಯ ವದಂತಿ ಸಂತೋ**
**ದ್ವಾರಾಣಿ ಸಪ್ತೈವ ಮಹಾಂತಿ ಪುಂಸಾಂ ॥**

ತಪಸ್ಸು, ದಾನ, ದೇವರಲ್ಲಿ ಭಕ್ತಿ ಇಂದ್ರಿಯ ನಿಗ್ರಹ, ಪಾಪಕಾರ್ಯದಲ್ಲಿ ಲಜ್ಜೆ, ನಿಷ್ಕಪಟತೆ ಎಲ್ಲ ಪ್ರಾಣಿಗಳಲ್ಲಿ ದಯೆ, ಇವೇ ಸ್ವರ್ಗಲೋಕದ ಉತ್ತಮ ಏಳು ದ್ವಾರಗಳು ಎಂದು ಸಜ್ಜನರು ಹೇಳುತ್ತಾರೆ.

**ಸರ್ವಾಣಿ ಚೈತಾನಿ ಯಥೋದಿತಾನಿ**
**ತಪಃ ಪ್ರಧಾನಾನ್ಯಭಿಮರ್ಷಕೇಣ ।**
**ನಶ್ಯಂತಿ ಮಾನೇನ ತಮೋಽಭಿಭೂತಾಃ**
**ಪುಂಸಃ ಸದೈವೇತಿ ವದಂತಿ ಸಂತಃ ॥**

ಗರ್ವದಿಂದ ಮನುಷ್ಯನಿಗೆ ತಪಸ್ಸೇ ಮೊದಲಾದ ಏಳು ಸದ್ಗುಣಗಳೂ ಹಾಳಾಗುವವು. ಗರ್ವದದುರಭಿಮಾನಕ್ಕೆ ಕಾರಣವಾದ ತಮೋಗುಣ ಮನುಷ್ಯನನ್ನು ನಾಶಮಾಡುವದೆಂದು ಜ್ಞಾನಿಗಳು ಹೇಳುತ್ತಾರೆ.

**ಅಧೀಯಾನಃ ಪಂಡಿತಂ ಮನ್ಯಮಾನೋ**
**ಯೋ ವಿದ್ಯಯಾ ಹಂತಿ ಯಶಃ ಪರಸ್ಯ ।**
**ತಸ್ಯಾಂತವಂತಃ ಪುರುಷಸ್ಯ ಲೋಕಾ**
**ನ ಚಾಸ್ಯ ತದ್ಬ್ರಹ್ಮಫಲಂ ದದಾತಿ ॥**

ಶಾಸ್ತ್ರಪಠಣದಿಂದ ಪಂಡಿತನೆಂದು ತಿಳಿದು, ವಿದ್ಯಾಮದದಿಂದ ಇತರರ ಕೀರ್ತಿಯನ್ನು ಕೆಡಿಸುವವನು ಮರಣಾನಂತರದಲ್ಲಿ ಶುಭಲೋಕಪಡೆಯಲಾರನು, ಅಧ್ಯಯನಮಾಡಿದ ವೇದವೂ ಅವನಿಗೆ ಫಲವನ್ನು ಕೊಡುವುದಿಲ್ಲ.

**ಚತ್ವಾರಿ ಕರ್ಮಾಣಿ ಭಯಂಕರಾಣಿ**
**ಭಯಂ ಪ್ರಯಚ್ಛಂತ್ಯಯಥಾ ಕೃತಾನಿ**
**ಪಾನಾಗ್ನಿ ಹೋತ್ರ ಮುತ ಮಾನಮೌನಂ**
**ಮಾನೇನಾಧಿಮುತ ಮಾನಯಜ್ಞಃ ॥**

ಈ ನಾಲ್ಕು ಕರ್ಮಗಳು ಭಯಂಕರವಾದವುಗಳು. ಪಾನ, ಅಗ್ನಿಹೋತ್ರ, ಮಾನ, ಮಂತ್ರ, ಭಜನೆ ಇಲ್ಲದೆ ಬರಿ ಮೌನ. ಇವುಗಳನ್ನು ಋಜುಮಾರ್ಗದಲ್ಲಿ ಆಚರಿಸಬೇಕು. ಪಾನ ಎಂದರೆ ತೀರ್ಥಪಾದೋದಕಾದಿ ಪಾನ, ವೈಶ್ವ ದೇವಾದಿಗಳನ್ನು ಮಾಡುತ್ತ ವಿದ್ಯೆಯ ಬಗ್ಗೆ, ಹಾಗೂ ಗುರುಗಳ ಬಗ್ಗೆ ಭಕ್ತಿ, ಗೌರವ ತೋರಿಸಬೇಕು. ವಿವೇಕಸಹಿತ ಮಾನವು ಒಂದು ಬಗೆಯ ಯಜ್ಞವಿದ್ದಂತೆ.

**ನ ಮಾನ್ಯಮಾನೋ ಮುದಮಾದದೀತ**
**ನ ಸಂತಾಪಂ ಪ್ರಾಪ್ನುಯಾಚ್ಚಾವಮಾನಾತ್ ।**
**ಸಂತಃ ಸತಃ ಪೂಜಯಂತೀಹ ಲೋಕೇ**
**ನಾಽ ಸಾಧವಃ ಸಾಧು ಬುದ್ಧಿಂ ಲಭಂತೇ ॥**

ಗೌರವದಿಂದ ಹಿಗ್ಗಬಾರದು. ಅಪಮಾನದಿಂದ ದುಃಖಿಸಬಾರದು. ಜಗತ್ತಿನಲ್ಲಿ ಸಜ್ಜನರಿಗೆ ಗೌರವವನ್ನು ಸಜ್ಜನರೇ ಸಲ್ಲಿಸುತ್ತಾರೆ. ದುರ್ಜನರಿಗೆ ಇಂಥ ಸದ್ಬುದ್ಧಿ ಹುಟ್ಟದು.

**ಇತಿ ದದ್ಯಾದಿತಿ ಯಜೇದಿತ್ಯಧೀಯೀತ ಮೇ ಶ್ರುತಂ ।**
**ಇತ್ಯೇತಾನ್ಯಭಯಾನ್ಯಾಹು ಸ್ತಾನ್ಯವರ್ಜ್ಯಾನಿ ನಿತ್ಯತಃ ॥**

''ಹೀಗೆ ದಾನ ಮಾಡಬೇಕು. ಹೀಗೆ ಯಾಗ ಮಾಡಬೇಕು, ವೇದಾಧ್ಯಯನ ಈ ಕ್ರಮದಲ್ಲಿ ಮಾಡಬೇಕು'' ಎಂದು ಶಾಸ್ತ್ರದಲ್ಲಿ ಹೇಳಿದ್ದನ್ನು ಕೇಳಿದ್ದೇನೆ. ಈ ಮಾರ್ಗಗಳು ಭಯರಹಿತವಾದವು. ಪ್ರತಿದಿನ ಆಚರಿಸಬೇಕು. ಅವುಗಳನ್ನು ಬಿಡಬಾರದು.

**ಯೇನಾಽಶ್ರಯಂ ವೇದಯಂತೇ ಪುರಾಣಂ**
**ಮನೀಷಿಣೋ ಮಾನಸೇ ಮಾನಯುಕ್ತಂ ।**
**ತನ್ನಿಶ್ರೇಯಸ್ತೇನ ಸಂಯೋಗಮೇತ್ಯ**
**ಪರಾಂ ಶಾಂತಿಂ ಪ್ರಾಪ್ನುಯುಃ ಪ್ರೇತ್ಯ ಚೇಹ ॥**

ಇಂತಹ ವಿಹಿತ ಮಾರ್ಗಾಚರಣೆಯಿಂದ ಜ್ಞಾನಿಗಳು ಹೃದಯಾಂತಸ್ಥನಾದ ಪುರಾಣ ಪುರುಷನನ್ನು ಅರಿಯುವರು. ಇದೇ ಶ್ರೇಯಸ್ಕರ. ಭಕ್ತಿಯಿಂದ ಭಗವಂತನಲ್ಲಿ ತಲ್ಲೀನರಾಗಿ ಸಜ್ಜನರು ಇಹ ಪರಗಳಲ್ಲಿ ಶಾಶ್ವತ ಮುಕ್ತಿ ಪಡೆಯುವರು.

## ನಾಕು ಆಶ್ರಮಿಗಳ ಕರ್ತವ್ಯ ಕರ್ಮ ಏನು?

**ಚರನ್ಗೃಹಸ್ಥಃ ಕಥಮೇತಿ ದೇವಾನ್**
**ಕಥಂ ಭಿಕ್ಷುಃ ಕಥಾಮಾಚಾರ್ಯ ಕರ್ಮಾ ।**
**ವಾನಪ್ರಸ್ಥಃ ಸತ್ಪಥೇ ಸನ್ನಿವಿಷ್ಟೋ**
**ಬಹೂನ್ಯಸ್ಮಿನ್ ಸಂಪ್ರತಿ ವೇದಯಂತಿ ॥**

ಗೃಹಸ್ಥನು ಯಾವ ಧರ್ಮವನ್ನು ಆಚರಿಸಿದರೆ ದೇವತೆಗಳಿಗೆ ಪ್ರೀತ್ಯಾಸ್ಪದ ನೆನಿಸುವನು. ಬ್ರಹ್ಮಚಾರಿ, ಸನ್ಯಾಸಿಯ ಧರ್ಮಗಳಾವುವು? ವಾನಪ್ರಸ್ಥನ ಆಚಾರ ಹೇಗಿರಬೇಕು, ಈ ಜಗತ್ತಿನಲ್ಲಿ ಇವರು ಹೇಗೆ ನಡೆದರೆ ಜ್ಞಾನಿಗಳಾಗುವರು?

## ಈ ಪ್ರಶ್ನೆಗೆ ಉತ್ತರ

**ಆಹೂತಾಧ್ಯಯನೀ ಗುರುಕರ್ಮಸು ಚೋದ್ಯತಃ**
**ಪೂರ್ವೋತ್ಥಾಯೀ ಚರಮಂ ಚಾಥ ಶಾಯೀ ।**
**ಮೃದುರ್ದಾಂತೋ ಧೃತಿಮಾನಪ್ರಮತ್ತಃ**
**ಸ್ವಾಧ್ಯಾಯ ಶೀಲಃ ಸಿಧ್ಯತಿ ಬ್ರಹ್ಮಚಾರೀ ॥**

ಗುರು ಹೇಳಿದ್ದನ್ನು ಅಭ್ಯಾಸ ಮಾಡಬೇಕು. ಗುರುವಿನಲ್ಲಿ ಭಯ ಭಕ್ತಿಯಿಟ್ಟು, ಸೇವೆಗೈಯ್ಯಬೇಕು. ಅವನು ಮಲಗಿದ ನಂತರ ಮಲಗಬೇಕು. ಅವರು ಏಳುವದಕ್ಕಿಂತ ಮೊದಲು ಏಳಬೇಕು. ಅವರ ಸೇವೆಗೈಯ್ಯಬೇಕು. ಜಿತೇಂದ್ರಿಯವಾಗಿ, ಯಾವುದೇ ಪ್ರಮಾದ ಮಾಡದೆ ವೇದಾಧ್ಯಯನದಲ್ಲಿ ಮನಸ್ಸಿಟ್ಟರೆ ಬ್ರಹ್ಮಚಾರಿಯು ಫಲ ಪಡೆಯುವನು.

**ಧರ್ಮಾಗತಂ ಪ್ರಾಪ್ಯ ಧನಂ ಯಜೇತ**
**ದದ್ಯಾತ್ಸದೈವಾತಿಥೀನ್ ಭೋಜಯೇಚ್ಚ**
**ಅನಾದದಾನಶ್ಚ ಪರೈರದತ್ತಂ**
**ಸೈಷಾ ಗೃಹಸ್ಥೋಪನಿಷತ್ಪುರಾಣೀ ॥**

ಧರ್ಮದಿಂದ ದ್ರವ್ಯ ಸಂಪಾದಿಸಿ ಅದನ್ನು ಸತ್ಪಾತ್ರದಲ್ಲಿ ದಾನ ಮಾಡಬೇಕು. ಯಜ್ಞಯಾಗ ಅತಿಥಿ ಸತ್ಕಾರಾದಿಗಳನ್ನು ಮಾಡಬೇಕು. ಇತರರು ಕೊಡದ ಹೊರತು ಯಾವದೇ ಪದಾರ್ಥವನ್ನು ತಾನೇ ತೆಗೆದುಕೊಳ್ಳಬಾರದು. ಇದೇ ಪರಂಪರಾಗತ ಗೃಹಸ್ಥಧರ್ಮ.

**ಸ್ವವೀರ್ಯ ಜೀವೀ ವೃಜನಾನ್ನಿವೃತ್ತೋ**
**ದಾತಾ ಪರೇಭ್ಯೋ ನ ಪರೋಪತಾಪೀ ।**
**ತಾದೃಙ್ಮುನಿಃ ಸಿದ್ಧಿಮುಪೈತಿ ಮುಖ್ಯಾಂ**
**ವಸನ್ನರಣ್ಯೇ ನಿಯತಾಹಾರ ಚೇಷ್ಟಃ ॥**

ತನ್ನ ಯತ್ನ ಹಾಗೂ ಬಲದ ಮೇಲೆ ಜೀವಿಸುತ್ತ ಪಾಪರಹಿತನಾಗಿ, ದಾನಿಯಾಗಿ, ಮತ್ತೊಬ್ಬರನ್ನು ನೋಯಿಸದೇ, ಆಹಾರ, ಆಚಾರ, ವಿಚಾರಗಳಲ್ಲಿ ಸಂಯಮದಿಂದ ಅರಣ್ಯದಲ್ಲಿ ವಾಸಿಸುವನೇ ವಾನಪ್ರಸ್ಥನು. ಅವನೇ **ಮುನಿ** ಎನಿಸಿ ಮುಖ್ಯವಾದ ಮೋಕ್ಷರೂಪ ಸಿದ್ಧಿಯನ್ನು ಪಡೆಯುತ್ತಾನೆ.

**ಅಶಿಲ್ಪಜೀವೀ ವಿಗೃಹಶ್ಚ ನಿತ್ಯಂ**
**ಜಿತೇಂದ್ರಿಯಃ ಸರ್ವತೋ ವಿಪ್ರಯುಕ್ತಃ**
**ಅನೋಕಶಾಯೀ ಲಘು ಲಿಪ್ತಮಾನ**
**ಶ್ಚರನ್ದೇಶಾನೇಕಾಂಬರಃ ಸ ಭಿಕ್ಷುಃ ॥**

ಸನ್ಯಾಸಿಯು ಯಾವುದೇ ಶಿಲ್ಪಕಲಾದಿ ಕೌಶಲ್ಯವನ್ನೂ ತನ್ನ ಉಪಜೀವನಕ್ಕೆ ಸಾಧನವಾಗಿ ಉಪಯೋಗಿಸಬಾರದು. ಅವನಿಗೆ ಸ್ವಂತಮನೆ ಮಾಡಬಾರದು. ಜಿತೇಂದ್ರಿಯತ್ವದಿಂದ, ಯಾವ ಮೋಹಕ್ಕೂ ಒಳಗಾಗದೇ ತರುತಲಶಾಯಿಆಗಿ ಒಂದೇ ವಸ್ತ್ರ ಉಟ್ಟು ದೇಶಾಟನೆ ಮಾಡುತ್ತಿರಬೇಕು. ಅವನಿಗೇ **ಭಿಕ್ಷು** ಎನ್ನುವರು.

**ರಾತ್ರ್ಯಾ ಯಯಾ ಚಾಭಿರತಾಶ್ಚ ಲೋಕಾ**
**ಭವಂತಿ ಕಾಮಾಭಿಜಿತಾಃ ಸುಖೇನ ಚ ।**
**ತಾಮೇವ ರಾತ್ರಿಂ ಪ್ರಯತೇತ ವಿದ್ವಾ**
**ನರಣ್ಯ ಸಂಸ್ಥೋ ಭವಿತುಂ ಯತಾತ್ಮಾ ॥**

ಜನರು ಕಾಮುಕರಾಗಿ ಸುಖದಲ್ಲಿ ಯಾವ ರಾತ್ರಿ ಕಳೆಯುವರೋ ಅದೇ ರಾತ್ರಿ ಯಲ್ಲಿ ಜ್ಞಾನಿಯು ಇಂದ್ರಿಯ, ಮನಸ್ಸು ಗೆಲ್ಲಲು ಯತ್ನಿಸುತ್ತ ಅರಣ್ಯದಲ್ಲಿರಬೇಕು.

ದಶೈವ ಪೂರ್ವಾನ್ ದಶ ಚಾಪರಾಂಸ್ತು
ಜ್ಞಾತೀಂಸ್ತಥಾತ್ಮಾನಮಥೈಕವಿಂಶಂ ।
ಅರಣ್ಯವಾಸೀ ಸುಕೃತಂ ದಧಾತಿ
ಮುಕ್ತ್ವಾತ್ವರಣ್ಯೇ ಸ್ವಶರೀರಧಾತೂನ್ ।।ಜ

ತಪಸ್ಸು ಮಾಡುತ್ತ ಅರಣ್ಯ ವಾಸದಲ್ಲಿದ್ದು, ಅಲ್ಲಿಯೇ ಪಂಚಭೌತಿಕ ದೇಹಬಿಡುವ ಯೋಗಿಯು ತನ್ನ ಹಿಂದಿನ ಹತ್ತು ತಲೆಮಾರಿನ ಪಿತೃಗಳನ್ನು ಅಲ್ಲದೆ ಮುಂದಿನ ಹತ್ತು ತಲೆಯ ಜ್ಞಾತಿಗಳನ್ನು ಕೂಡ ಉದ್ಧಾರಮಾಡಿ ತನ್ನ ಸುಕೃತಕ್ಕೆ ಭಾಗಿಯಾಗುವನು.

ಅರಣ್ಯೇ ವಸತೋ ಯಸ್ಯ ಗ್ರಾಮೋ ಭವತಿ ಪೃಷ್ಠತಃ
ಗ್ರಾಮೇ ವಾ ವಸತೋಽರಣ್ಯಂ ಸ ಮುನಿಃ ಸ್ಯಾಜ್ಜನಾಧಿಪ ॥

ಅರಣ್ಯದಲ್ಲಿ ವಾಸಿಸುತ್ತ ಗ್ರಾಮದಿಂದ ದೂರ ಇರುವವನೇ ಮುನಿಯು. ಹಾಗೆಯೇ ಗ್ರಾಮದಲ್ಲಿ ನೆಲೆಸಿ ಆರಣ್ಯಕತ್ಯಾಗತಪಾದಿ ಮಾಡುವವನಿಗೂ ಸಹ ಮುನಿ ಎಂದೇ ಹೆಸರು.

ನ ಗ್ರಾಮ್ಯ ಮುಪಯುಂಜೀತ ಯ ಆರಣ್ಯೋ ಮುನಿರ್ಭವೇತ್
ತದಾಸ್ಯ ವಸತೋಽರಣ್ಯೇ ಗ್ರಾಮೋ ಭವತಿ ಪೃಷ್ಠತಃ ॥

ಅರಣ್ಯದಲ್ಲಿರುವ ಮುನಿಯು ಗ್ರಾಮದಲ್ಲಿಯ ಯಾವ ಪದಾರ್ಥವನ್ನೂ ಉಪಯೋಗಿಸಬಾರದು. ಅಂದರೆ ವನದಲ್ಲಿರುವವನಿಗೆ ಗ್ರಾಮವು ಹಿಂದುಗಡೆ ಬಂದಿತೆಂದು ಅರ್ಥ.

ಅನಗ್ನಿರನಿಕೇತಶ್ಚಾಪ್ಯಗೋತ್ರ ಚರಣೋ ಮುನಿಃ ।
ಕೌಪೀನಾಚ್ಛಾದನಂ ಯಾವತ್ತಾವದಿಚ್ಛೇಚ್ಚ ಜೀವನಂ ॥
ಯಾವತ್ಪ್ರಾಣಾಭಿಸಂಧಾನಂ ತಾವದಿಚ್ಛೇಚ್ಚ ಭೋಜನಂ ।
ತದಾಸ್ಯ ವಸತೋ ಗ್ರಾಮೋಽರಣ್ಯಂ ಭವತಿ ಪೃಷ್ಠತಃ ॥

ಮನೆ, ಮಡದಿ, ಮಕ್ಕಳಿಲ್ಲದವನು, ಅಗ್ನಿಯಿಲ್ಲದವನು ಮುನಿಯು. ತನ್ನ ಬಾಂಧವರು ಮಾಡುವ ವ್ಯಾಪಾರಾದಿಗಳನ್ನು ಮಾಡಬಾರದು. ಮಾನ ಮುಚ್ಚಿಕೊಳ್ಳಲು ತುಂಡುಬಟ್ಟೆ, ಪ್ರಾಣಧಾರಣೆಗೆ ತುತ್ತು ಆಹಾರ. ಹೀಗಿದ್ದರೆ ಗ್ರಾಮವಾಸಿಯಾದ ಅವನು ಅರಣ್ಯವನ್ನು ಹಿಂದೆ ಹಾಕಿದಂತೆ.

ಯಸ್ತು ಕಾಮಾನ್ಪರಿತ್ಯಜ್ಯ ತ್ಯಕ್ತಕರ್ಮಾ ಜಿತೇಂದ್ರಿಯಃ
ಆತಿಷ್ಠೇತ ಮುನಿರ್ಮೌನಂ ಸ ಲೋಕೇ ಸಿದ್ಧಿಮಾಪ್ನುಯಾತ್ ॥

ವಿಷಯ ಸುಖಬಿಟ್ಟು, ಕಾಮ್ಯಕರ್ಮಬಿಟ್ಟು ಜಿತೇಂದ್ರಿಯನಾಗಿ ಮೌನವ್ರತ ದಿಂದಿರುವ ಮುನಿಯು ಸಿದ್ಧಿ ಪಡೆಯುವನು.

ಧೌತ ದಂತಂ ಕೃತನಖಂ ಸದಾ ಸ್ನಾತಮಲಂಕೃತಂ ।
ಅಸಿತಂ ಸಿತ ಕರ್ಮಸ್ಥಂ ಕಸ್ತಂ ನಾರ್ಚಿತುಮರ್ಹತಿ ॥

ಶುಭ್ರ ಹಲ್ಲು, ಕತ್ತರಿಸಿದ ಉಗುರು, ತ್ರಿಕಾಲಸ್ನಾನ, ಊರ್ಧ್ವಪುಂಡ್ರಾದಿಗಳ ಅಲಂಕಾರ, ನಿರ್ಮಲ ಪರಿಶುದ್ಧ ದೇಹ, ಸಾತ್ವಿಕ ಕರ್ಮಾನುಷ್ಠಾನ ಇವುಗಳಿದ್ದ ಮುನಿಯನ್ನು ಯಾರು ಗೌರವಿಸಲಿಕ್ಕಿಲ್ಲ?

**ತಪಸಾ ಕರ್ಶಿತಃ ಕ್ಷಾಮಃ ಕ್ಷೀಣ ಮಾಂಸಾಽಸ್ಥಿ ಶೋಣಿತಃ ।**
**ಯದಾ ಭವತಿ ನಿರ್ದ್ವಂದ್ವೋ ಮುನಿರ್ಮೌನಂ ಸಮಾಸ್ಥಿತಃ ॥**

ತಪಸ್ಸಿನಿಂದ ಬಳಲಿ, ಮಾಂಸ, ಮೂಳೆ ಬತ್ತಿಹೋಗಿರಲು ಶೀತೋಷ್ಣ, ಆಹಾರ, ಪಾನೀಯಗಳಿಂದ ವಿಕಾರ ಹೊಂದದೆ ಇದ್ದರೆ ಅವನು ಮೌನವನ್ನು ಧರಿಸಿದರೆ **ಮುನಿ** ಎನಿಸುವನು.

**ಅಥ ಲೋಕಮಿಮಂ ಜಿತ್ವಾ ಲೋಕಂ ಚಾಪಿ ಜಯೇತ್ಪರಂ ।**
**ಆಸ್ಯೇನ ತು ಯದಾಹಾರಂ ಗೋವನ್ಮೃಗಯತೇ ಮುನಿಃ ॥**
**ಅಥಾಸ್ಯಲೋಕಃ ಸರ್ವೋಽಯಃಸೋಽಮೃತತ್ವಾಯ ಕಲ್ಪತೇ ॥**

ಅವನು ಈ ಜಗತ್ತನ್ನು ಗೆದ್ದು, ಬಳಿಕ ಪರಲೋಕವನ್ನು ಸುಲಭವಾಗಿ ಗೆಲ್ಲುವನು. ಶರೀರ ಸುಖಕ್ಕಾಗಿ ಅವನು ಬಯಸುವದಿಲ್ಲ. ಹಸುವಿನಂತೆ ಸಂಚರಿಸುತ್ತ, ಸಿಕ್ಕಷ್ಟೇ ಆಹಾರವನ್ನು ತಿಂದು ಜೀವನ ಮಾಡುವನು. ಹೀಗಿದ್ದಲ್ಲಿ ಈ ಲೋಕವೆಲ್ಲವೂ ಅವನದೇ. ಮೋಕ್ಷವು ಅವನಿಗೆ ಕಟ್ಟಿಟ್ಟ ಬುತ್ತಿ.

**ಅನಿಕೇತೋ ಗೃಹಸ್ಥೇಷು ಕಾಮವೃತ್ತೇಷು ಸಂಯತಃ**
**ಗ್ರಾಮ ಏವ ಚರನ್ ಭಿಕ್ಷುಸ್ತಯೋಃ ಪೂರ್ವತರಂ ಗತಃ ॥**

ಸ್ವಂತಮನೆ ಮಾಡಿಕೊಳ್ಳದೆ, ಗೃಹಸ್ಥರ ನಡುವೆಯೂ ಜಿತೇಂದ್ರಿಯನಾಗಿ ಗ್ರಾಮದಲ್ಲಿ ಸಂಚರಿಸುವ ಮುನಿಯು ಕೊನೆಗೆ ಗೃಹಸ್ಥ ವಾನಪ್ರಸ್ಥರಗಿಂತ ಮೊದಲು ದೇವತೆಗಳೊಡನೆ ಸೇರುವನು.

**ಅಪ್ರಾಪ್ಯಂ ದೀರ್ಘಮಾಯುಶ್ಚ ಯಃ ಪ್ರಾಪ್ತೋ ವಿಕೃತಂ ಚರೇತ್ ।**
**ತಪ್ಯೇತ ಯದಿ ತತ್ಕೃತ್ವಾ ಚರೇತ್ಸೋಽಗ್ರಂ ತಪಸ್ತತಃ ॥**

ಆಯುಷ್ಯದೀರ್ಘ ಸುಲಭವಲ್ಲ. ಅದು ದೊರಕಿದಾಗ ವ್ಯರ್ಥವಾಗಿ ಅಂಥ ಆಯುಷ್ಯವನ್ನು ಸುಖ-ಭೋಗಗಳಲ್ಲಿ ಕಳೆದುಬಿಟ್ಟರೆ, ನಂತರ ಪಶ್ಚಾತ್ತಾಪ ಪಡಬೇಕಾಗುವದು. ಪ್ರಾಯಶ್ಚಿತ್ತಕ್ಕಾಗಿ ಬಳಿಕ ತಪವನ್ನೂ ಮಾಡಬೇಕಾಗುತ್ತದೆ.

**ಯದ್ವೈ ನೃಶಂಸಂ ತದಪಥ್ಯಮಾಹುಃ**
**ಯಃ ಸೇವತೇಽಧರ್ಮಮನರ್ಥ ಬುದ್ಧಿಃ ।**
**ಅಸಾವನೀಶಃ ಸ ತಥೈವ ರಾಜಂ-**
**ಸ್ತದಾರ್ಜವಂ ಸ ಸಮಾಧಿಸ್ತದಾರ್ಯಂ ॥**

ಯಾವದು ಕೆಟ್ಟ ಕೆಲಸವೋ ಅದು ಅಹಿತ. ಧರ್ಮವಿರುದ್ಧವಾದದ್ದು. ಅಂತಹ ಕಾರ್ಯ ಮಾಡುವವನು ಜಿತೇಂದ್ರಿಯನಲ್ಲ. ಕಾಯಾ ಮನಸಾ ಪರಿಶುದ್ಧನಾಗಿರುವದೂ ಒಂದು ತಪಸ್ಸೇ ಸರಿ. ಅದು ಆದರಣೀಯವೂ ಅಹುದು.

ನ ಮಿಥ್ಯಾಹಂ ಪ್ರೋಕ್ತಂ ವೈ ಸ್ಮರಾಮಿ
ಮಯಾ ಕೃತಂ ಶಿಶುಭಾವೇಽಪಿ ರಾಜನ್ ।
ಕುರ್ಯಾಂ ನ ಚೈವಾಕೃತಪೂರ್ವಮನ್ಯೈ
ರ್ವಿವಿತ್ಸಮಾನೋ ವಸುಮನ್ನ ಸಾಧು ॥

ಬಾಲ್ಯದಲ್ಲಿ ನಾನು ಹಾಸ್ಯಕ್ಕಾಗಿ ಕೂಡ ಅಸತ್ಯ ಹೇಳಿದ್ದು ನನಗೆ ನೆನಪಿಲ್ಲ. ಆದುದರಿಂದ ಇದುವರೆಗೆ ಹಿಂದಿನ ಪೂರ್ವಪುರುಷರು ಮಾಡದಿರುವ ಕಾರ್ಯವು ಶ್ರೇಯಸ್ಕರವಲ್ಲ ಎಂದು ತಿಳಿದು ನಾನು ಅದನ್ನು ಮಾಡುವದಿಲ್ಲ.

ಅನಸೂಯಾ ತಥಾ ಲೋಕೋ ಶೌಚಮಂತರ್ಬಹಿರ್ದ್ವಿಪಾಃ ।
ಅನಾಯಾಸೇಷು ಕಾರ್ಯೇಷು ಮಾಂಗಲ್ಯಾಚಾರಸೇವನಂ ॥
ನ ಚ ದ್ರವ್ಯೇಷು ಕಾರ್ಪಣ್ಯಮರ್ಥೇಷೂಪಾರ್ಜಿತೇಷು ಚ
ತಥಾಽಸ್ಪೃಹಾ ಪರದ್ರವ್ಯೇ ಪರಸ್ತ್ರೀಷು ಚ ಸರ್ವದಾ ॥
ಅಷ್ಟಾವಾತ್ಮಗುಣಾಃ ಪ್ರೋಕ್ತಾಃ ಪುರಾಣಸ್ಯ ತು ಕೋವಿದೈಃ ।
ಅಯಮೇವ ಕ್ರಿಯಾಯೋಗೋ ಜ್ಞಾನ ಯೋಗಸ್ಯ ಸಾಧಕಃ ॥

ಒಳಗಿನ ಮತ್ತು ಹೊರಗಿನ ಪರಿಶುದ್ಧಿ, ಒಳ್ಳೆ ಕಾರ್ಯಗಳನ್ನು ಶ್ರಮವಿಲ್ಲದೆ ಮಾಡುವದು, ಮಂಗಲಮಯ ಆಚಾರ-ವಿಚಾರ ಅಸೂಯಾರಾಹಿತ್ಯಗಳು. ಸನ್ಮಾರ್ಗದ ಅನುಸರಣೆ, ದೀನದಲಿತರಿಗೆ ದಾನ ಮಾಡುವದು, ಪರಸ್ತ್ರೀ, ಪರದ್ರವ್ಯಗಳಲ್ಲಿ ಮೋಹ ಮಾಡದೆ ಇರುವದು, ಮುಂತಾದವುಗಳು ಎಂಟು ಕರ್ಮಯೋಗದ ಸಾಧನಗಳು. ಜ್ಞಾನಯೋಗಕ್ಕೆ ಸಹಾಯಕಾರಿಗಳು.

ಕರ್ಮಯೋಗಂ ವಿನಾ ಜ್ಞಾನಂ ಕಸ್ಯಚಿನ್ನೇಹ ದೃಶ್ಯತೇ ।
ಶ್ರುತಿಸ್ಮೃತ್ಯುದಿತಂ ಧರ್ಮ ಮುಪತಿಷ್ಠೇತ್ಪ್ರಯತ್ನತಃ ॥

ಕರ್ಮಯೋಗದ ವಿನಃ ಯಾರಿಗೂ ಜ್ಞಾನಯೋಗವಿಲ್ಲ. ಶ್ರುತಿ, ಸ್ಮೃತಿಗಳಲ್ಲಿ ಹೇಳಿರುವ ಧರ್ಮವನ್ನೇ ಪ್ರಯತ್ನದಿಂದ ಆಚರಿಸಬೇಕು.

ದೇವತಾನಾಂ ಪಿತೃಣಾಂ ಚ ಮನುಷ್ಯಾಣಾಂ ಚ ಸರ್ವದಾ ।
ಕುರ್ಯಾದಹರಹರ್ಯಜ್ಞೈರ್ಭೂತರ್ಷಿಗಣತರ್ಪಣಂ ॥

ಪಂಚಮಹಾಯಜ್ಞಗಳ ಮೂಲಕ ದೇವ, ಪಿತೃ, ಮನುಷ್ಯ, ಭೂತ, ಮತ್ತು ಋಷಿಗಳಿಗೆ ತೃಪ್ತಿ ಮಾಡಬೇಕು.

ಸ್ವಾಧ್ಯಾಯೈರರ್ಚಯೇಚ್ಚರ್ಷೀನ್ಹೋಮೈರ್ದೇವಾನ್ಯಥಾವಿಧಿ ।
ಪಿತೄನ್ಶ್ರಾದ್ಧೈರನ್ನದಾನೈರ್ಭೂತಾನಿ ಬಲಿಕರ್ಮಭಿಃ ॥

ವೇದಾಧ್ಯಯನದಿಂದ ಋಷಿಗಳನ್ನು, ಅಗ್ನಿಹೋತ್ರಾದಿಗಳಿಂದ ದೇವತೆಗಳನ್ನು, ಶ್ರಾದ್ಧಗಳಿಂದ ಪಿತೃಗಳನ್ನು, ಅನ್ನದಾನಗಳಿಂದ ಮನುಷ್ಯರನ್ನೂ ಬಲಿಕರ್ಮದಿಂದ ಪ್ರಾಣಿಗಳನ್ನೂ ಸಂತೋಷಪಡಿಸಬೇಕು.

**ಪಂಚೈತೇ ವಿಹಿತಾ ಯಜ್ಞಾಃ ಪಂಚಸೂನಾಪನುತ್ತಯೇ ।**
**ಕಂಡಿನೀ ಪೇಕ್ಷಣೀ ಚುಲ್ಲೀ ಜಲಕುಂಭೀ ಪ್ರಮಾರ್ಜನೀ ॥**
**ಪಂಚ ಸೂನಾ ಗೃಹಸ್ಥಸ್ಯ ತೇನ ಸ್ವರ್ಗಂ ನ ಗಚ್ಛತಿ ।**
**ತತ್ಪಾಪನಾಶನಾಯೇತಿ ಪಂಚ ಯಜ್ಞಾಃ ಪ್ರಕೀರ್ತಿತಾಃ ॥**

ಐದು ಬಗೆಯ ಪಾಪ ಪರಿಹಾರಕ್ಕೆ ಪಂಚಮಹಾಯಜ್ಞಗಳಿವೆ. ಒರಳು, ಬೀಸುವ ಕಲ್ಲು, ಒಲೆ, ನೀರುತುಂಬುವಪಾತ್ರೆ, ಕಸಬರಿಗೆ ಇವುಗಳ ಉಪಯೋಗದಿಂದ ಮನುಷ್ಯನಿಗೆ ಆಗಾಗ ಪ್ರಾಣಿಹತ್ಯಾದೋಷ ಬರುವದುಂಟು. ಅದಕ್ಕಾಗಿ ಪಂಚಮಹಾ ಯಜ್ಞ ತಾರಕವಾಗಿದೆ. ಅವುಗಳನ್ನು ಮಾಡದೆ ಇದ್ದರೆ ನರನು ನರಕಕ್ಕೆ ಹೋಗುತ್ತಾನೆ.

**ದ್ವಾವಿಂಶತಿಸ್ತಥಾಷ್ಟೌ ಚ ಯೇ ಸಂಸ್ಕಾರಾಃ ಪ್ರಕೀರ್ತಿತಾಃ ।**
**ತದ್ಯುಕ್ತೋಽಪಿ ನ ಮೋಕ್ಷಾಯ ಯಸ್ತ್ವಾತ್ಮ ಗುಣ ವರ್ಜಿತಃ ॥**

ಶಾಸ್ತ್ರೋಕ್ತ ಮೂವತ್ತೆಂಟು ಬಗೆಯ ಸಂಸ್ಕಾರ ಹೊಂದಿದ್ದರೂ, ಮೇಲೆ ಹೇಳಿದ ಆತ್ಮಗುಣಗಳು ಇಲ್ಲದಿದ್ದರೆ ಮೋಕ್ಷವಿಲ್ಲ.

**ತಸ್ಮಾದಾತ್ಮಗುಣೋಪೇತಃ ಶ್ರುತಿಕರ್ಮ ಸಮಾಚರೇತ್ ।**
**ಗೋ ಬ್ರಾಹ್ಮಣಾನಾಂ ವಿತ್ತೇನ ಸರ್ವದಾ ಭದ್ರಮಾಚರೇತ್ ॥**

ಆದುದರಿಂದ ಆತ್ಮಗುಣ ಪಡೆದು ವೇದೋಕ್ತ ಕರ್ಮ ಮಾಡಬೇಕು. ತನ್ನ ಸಂಪಾದನೆಯಿಂದ ಗೋಬ್ರಾಹ್ಮಣರ ಹಿತ ಸಾಧಿಸಬೇಕು.

**ವ್ರತೋಪವಾಸೈರ್ವಿಧಿವಚ್ಛ್ರದ್ಧಯಾ ಚ ವಿಮತ್ಸರಃ**
**ಯೋಽಸಾವಾತೀಂದ್ರಿಯಶ್ಶಾಂತಃ ಸೂಕ್ಷ್ಮೋಽವ್ಯಕ್ತಃ ಸನಾತನಃ ।**
**ವಾಸುದೇವೋ ಜಗನ್ಮೂರ್ತಿಸ್ತಸ್ಯ ಸಂಭೂತಯೋಹ್ಯಮೀ ॥**
**ಬ್ರಹ್ಮಾ ವಿಷ್ಣುಶ್ಚ ಭಗವಾನ್ ಮಾರ್ತಂಡೋ ವೃಷವಾಹನಃ ।**
**ಅಷ್ಟೌ ಚ ವಸವಸ್ತದ್ವದೇಕಾದಶ ಗಣಾಧಿಪಾಃ ।**
**ಲೋಕಪಾಲಾಧಿಪಾಶ್ಚೈವ ಪಿತರೋ ಮಾತರಸ್ತಥಾ ॥**

ಬ್ರಹ್ಮ, ವಿಷ್ಣು, ಪರಮೇಶ್ವರ, ಸೂರ್ಯ, ಅಷ್ಟವಸುಗಳು, ಏಕಾದಶರುದ್ರರು, ಲೋಕಪಾಲಕರು, ಸಪ್ತಮಾತೃಕೆಯರು, ಪಿತೃದೇವತೆಗಳು ಇವರೆಲ್ಲರೂ ಗೋಚರವಾಗದ ಜಗನ್ನಿಯಾಮಕ ವಾಸುದೇವನ ವಿಭೂತಿ ವಿಶೇಷಗಳು. ಅವನನ್ನು ವ್ರತ ಉಪವಾಸ, ಶ್ರದ್ಧೆಯಿಂದ ಧ್ಯಾನ, ಉಪಾಸನೆಗಳಿಂದ ಸೇವಿಸಿ ಒಲಿಸಿಗೊಳ್ಳಬೇಕು.

**ಇಮಾ ವಿಭೂತಯಃ ಪ್ರೋಕ್ತಾಶ್ಚರಾಚರಸಮನ್ವಿತಾಃ ।**
**ಬ್ರಹ್ಮಾದ್ಯಾಶ್ಚತುರೋ ಮೂಲಮವ್ಯಕ್ತಾಧಿಪತಿಃಸ್ಮೃತಃ ॥**

ಚರಾಚರಸಹಿತ ಬ್ರಹ್ಮ, ಸೂರ್ಯ, ವಿಷ್ಣು, ಶಿವ, ಈ ನಾಲ್ವರು ವಾಸುದೇವನ ವಿಶಿಷ್ಟ ಸನ್ನಿಧಾನೋಷಿತ ವಿಭೂತಿಗಳು. ಸಕಲ ಜಗತ್ತಿಗೂ ಅವನೇ ಮೂಲ. ಅವನು ಪ್ರಕೃತಿಯ ಅಧಿಪತಿ.

ಬ್ರಹ್ಮಣಾ ಚಾಥ ಸೂರ್ಯೇಣ ವಿಷ್ಣುನಾಥ ಶಿವೇನ ವಾ ।
ಅಭೇದಾತ್ಪೂಜಿತೇನ ಸ್ಯಾತ್ಪೂಜಿತಂ ಸಚರಾಚರಂ ॥

ಬ್ರಹ್ಮ, ಸೂರ್ಯ, ವಿಷ್ಣು, ಶಿವ ಈ ನಾಲ್ವರಲ್ಲಿ ಇರುವ ಭಗವದ್ರೂಪಗಳಿಗೆ ಭೇದ-ಬುದ್ಧಿ ಎಣಿಸದೆ ಅವರಲ್ಲಿ ಯಾರಾದರೂ ಒಬ್ಬರನ್ನು ಪೂಜಿಸಿದರೆ. ಸಕಲ ಜಗತ್ತನ್ನೂ ಪೂಜಿಸಿದಂತೆ.

ಬ್ರಹ್ಮಾದೀನಾಂ ಪರಂ ಧಾಮ ತ್ರಯಾಣಾಮಪಿ ಸಂಸ್ಥಿತಿಃ ।
ವೇದಮೂರ್ತಿವರಃ ಪೂಷಾ ಪೂಜನೀಯಃ ಪ್ರಯತ್ನತಃ ॥

ಸೂರ್ಯನು ಬ್ರಹ್ಮ, ವಿಷ್ಣು, ಶಿವರೆಂಬ ತ್ರಿಮೂರ್ತಿಗಳಿಗೆ ಆಶ್ರಯನು. ವೇದಮೂರ್ತಿಯು. ಅವನನ್ನು ಪೂಜಿಸಬೇಕು.

ತಸ್ಮಾದಗ್ನಿಂ ದ್ವಿಜಮುಖಾನ್ ಕೃತ್ವಾ ಸಂಪೂಜಯೇದಿಮಾನ್ ।
ದಾನೈರ್ವ್ರತೋಪವಾಸೈಶ್ಚ ಜಪ ಹೋಮಾದಿನಾ ನರಃ ॥

ಆದುದರಿಂದ, ಅಗ್ನಿಯನ್ನು, ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ದಾನ, ವ್ರತ, ಉಪವಾಸ ಮೊದಲಾದವುಗಳನ್ನು ಮಾಡಬೇಕು. ಮತ್ತು ಮೇಲೆ ತಿಳಿಸಿದಂತೆ ಪೂಜಿಸಬೇಕು.

ಇತಿ ಕ್ರಿಯಾಯೋಗ ಪರಾಯಣಸ್ಯ
ವೇದಾಂತ ಶಾಸ್ತ್ರಸ್ಮೃತಿವತ್ಸಲಸ್ಯ
ವಿಕರ್ಮಭೀತಸ್ಯ ಸದಾ ನ ಕಿಂಚಿ
ತ್ಪ್ರಾಪ್ತವ್ಯಮಸ್ತೀಹ ಪರೇ ಚ ಲೋಕೇ ॥

ಈ ರೀತಿಯಾದ ಕರ್ಮಯೋಗದಿಂದ ವೇದಾಂತ ಧರ್ಮಶಾಸ್ತ್ರಗಳನ್ನು ತಿಳಿದು, ಭಕ್ತಿಯಿರಿಸಿ, ದುಷ್ಟ ಮತ್ತು ಅಧರ್ಮ ಕಾರ್ಯಗಳಿಗೆ ಹೆದರಿ ನಡೆಯುವ ಮನುಷ್ಯನು ಈ ಲೋಕದಲ್ಲಿ ಪರಲೋಕದಲ್ಲಿ ಸುಖ, ಶಾಂತಿಯನ್ನು ಪಡೆಯುತ್ತಾನೆ.

॥ ಮತ್ಸ್ಯ ಉವಾಚ ॥

ಪುರಾಣಂ ಸರ್ವ ಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ ।
ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ ॥

ಎಲ್ಲ ಶಾಸ್ತ್ರಗಳಿಗಿಂತಲೂ ಮೊದಲು ಪುರಾಣವು ಬ್ರಹ್ಮನ ಸ್ಮೃತಿ ಪಥಕ್ಕೆ ಬಂದಿತು. ತರುವಾಯ ಅವನ ಮುಖದಿಂದ ವೇದಗಳು ಹೊರಟವು.

ಯದ್ಯದಿಷ್ಟತಮಂ ಲೋಕೇ ಯಚ್ಚಾಸ್ಯ ದಯಿತಂ ಗೃಹೇ ।
ತತ್ತದ್ಗುಣವತೇ ದೇಯಂ ತದೇವಾಕ್ಷಯ್ಯಮಿಚ್ಛತಾ ॥

ತನಗೆ ಇಷ್ಟವಾದದ್ದನ್ನೂ ಮನೆಯಲ್ಲಿ ತನಗೆ ಪ್ರಿಯವಾದದ್ದನ್ನೂ ಗುಣವಂತನಾದ ಮನುಷ್ಯನಿಗೆ ದಾನ ಕೊಡಬೇಕು. ಅದರಿಂದ ಮುಂದೆ ಅದು ದಾನಿಗೆ ಅನಂತಪಟ್ಟಾಗಿ ಅಕ್ಷಯವಾಗಿ ಲಭಿಸುವುದು.

ರೂಪ ಸೌಭಾಗ್ಯ ಸಂಪನ್ನಃ ಪುನರ್ಜನ್ಮನಿ ಜನ್ಮನಿ ।
ವಿಷ್ಣೌ ವಾಽಥ ಶಿವೇ ಭಕ್ತಃ ಸಪ್ತದ್ವೀಪಾಧಿಪೋ ಭವೇತ್ ॥

ವಿಷ್ಣು ಅಥವಾ ಶಿವನಲ್ಲಿ ಭಕ್ತಿ ಮಾಡಿದವನು ಜನ್ಮಜನ್ಮಾಂತರದಲ್ಲಿ ರೂಪ ಸೌಭಾಗ್ಯ ಸಂಪನ್ನನಾಗಿ ಸಪ್ತದ್ವೀಪಗಳಿಗೂ ಅಧಿಪತಿಯಾಗುವನು.

॥ ಮಾರ್ಕಂಡೇಯ ಉವಾಚ ॥

ಏವಂ ತೀರ್ಥೇ ನ ಗೃಹ್ಣೀಯಾತ್ಪುಣ್ಯೇಷ್ವಾಯತನೇಷು ಚ ।
ನಿಮಿತ್ತೇಷು ಚ ಸರ್ವೇಷು ಹ್ಯಪ್ರಮತ್ತೋ ಭವೇದ್ವಿಜಃ ॥

ತೀರ್ಥಕ್ಷೇತ್ರಗಳಲ್ಲಿಯೂ ಪುಣ್ಯಸ್ಥಾನಗಳಲ್ಲಿಯೂ ದಾನವನ್ನು ಸ್ವೀಕರಿಸ ಬಾರದು. ಎಲ್ಲ ವಿಧವಾದ ನೈಮಿತ್ತಿಕ ಕಾರ್ಯಗಳಲ್ಲಿಯೂ ಪಾಪ ಕಾರ್ಯಗಳು ತನ್ನಿಂದ ಆಗದಂತೆ ಜಾಗರೂಕನಾಗಿರಬೇಕು.

ಯಾ ಗತಿರ್ಯೋಗಯುಕ್ತಸ್ಯ ಸತ್ಯಸ್ಥಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಾಮುನ ಸಂಗಮೇ ॥

ಸತ್ಯನಿಷ್ಠನಾದ ಯೋಗಿಗಾಗುವ ಸದ್ಗತಿಯೇ ಗಂಗಾಯಮುನಾಸಂಗಮದಲ್ಲಿ ಪ್ರಾಣತ್ಯಾಗ ಮತ್ತು ಸ್ನಾನ ಮಾಡುವವನಿಗೆ ದೊರಕುವದು.

ಯತ್ರ ಗಂಗಾ ಮಹಾಭಾಗಾ ಸ ದೇಶಸ್ತತ್ತಪೋವನಂ ।
ಸಿದ್ಧಿ ಕ್ಷೇತ್ರಂ ಚ ವಿಜ್ಞೇಯಂ ಗಂಗಾತೀರ ಸಮನ್ವಿತಂ ॥

ಗಂಗೆಯು ಹರಿದ ದೇಶವೇ ತಪೋವನ. ಗಂಗೆಯ ತಟಾಕದಲ್ಲಿರುವ ಭೂಮಿಯೆಲ್ಲವೂ ಸಿದ್ಧಿಕ್ಷೇತ್ರ.

॥ ವಾಸುದೇವ ಉವಾಚ ॥

ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ನಿಯತಃ ಶುಚಿಃ ।
ಅಹಂಕಾರ ನಿವೃತ್ತಶ್ಚ ಸ ತೀರ್ಥ ಫಲಮಶ್ನುತೇ ॥

ದಾನ ತೆಗೆದುಕೊಳ್ಳದೇ ಇದ್ದುದರಲ್ಲಿಯೇ ತೃಪ್ತನಾಗಿ ಜಿತೇಂದ್ರಿಯನಾಗಿ ಶುಚಿಯಾಗಿ ಅಹಂಕಾರವಿಲ್ಲದೇ ಇರುವವನು ತೀರ್ಥಸ್ನಾನದ ಫಲವನ್ನು ಪಡೆಯುತ್ತಾನೆ.

ಅಕೋಪನಶ್ಚ ಸತ್ಯಶ್ಚ ಸತ್ಯವಾದೀ ದೃಢವ್ರತಃ ।
ಕೃಪಾಯುತಶ್ಚ ಭೂತೇಷು ಸ ತೀರ್ಥ ಫಲಮಶ್ನುತೇ ॥

ಕೋಪಬಿಟ್ಟು, ಸತ್ಯ ನುಡಿದು ತನ್ನಂತೆ ಪರರ ಬಗೆಯುವ, ಮತ್ತು ಶಾಸ್ತ್ರೋಕ್ತ ವ್ರತಾಚಾರಗಳನ್ನು ಮಾಡುವವನು ತೀರ್ಥಸ್ನಾನದ ಫಲವನ್ನು ಹೊಂದುತ್ತಾನೆ.

ಋಷಿಭಿಃ ಕ್ರತವಃ ಪ್ರೋಕ್ತಾ ದೇವೈಶ್ಚಾಪಿ ಯಥಾ ಕ್ರಮಂ ।
ನ ಹಿ ಶಕ್ಯಾ ದರಿದ್ರೇಣ ಯಜ್ಞಾಃ ಪ್ರಾಪ್ತುಂ ಮಹೀಪತೇ ॥

ಋಷಿಗಳೂ ದೇವತೆಗಳೂ ಹೇಳಿದ ದೊಡ್ಡ ದೊಡ್ಡ ಯಜ್ಞಗಳನ್ನು ಬಡವರಿಗೆ ಮಾಡಲಿಕ್ಕೆ ಆಗುವುದಿಲ್ಲ.

**ಬಹು ಪ್ರಕರಣಾ ಯಜ್ಞಾ ನಾನಾ ಸಂಭಾರವಿಸ್ತರಾಃ ।**
**ಪ್ರಾಪ್ಯಂತೇ ಪಾರ್ಥಿವೈರೇತೈಃ ಸಮೃದ್ಧೈರ್ವಾ ನರೈಃ ಕ್ವಚಿತ್ ॥**

ಬಹುವಿಧ ಸಾಮಗ್ರೀ ಸನ್ನಾಹದಿಂದ ರಾಜರೂ ಸಿರಿವಂತರೂ ಮಾತ್ರ ದೊಡ್ಡ ದೊಡ್ಡ ಯಜ್ಞಗಳನ್ನು ಮಾಡಬಲ್ಲರು.

**ಯೋ ದರಿದ್ರೈರಪಿ ವಿಧಿಃ ಶಕ್ಯಃ ಪ್ರಾಪ್ತುಂ ನರೇಶ್ವರ ।**
**ತುಲ್ಯೋ ಯಜ್ಞಫಲೈಃ ಪುಣ್ಯೈ ಸ್ತನ್ನಿಬೋಧ ಯುಧಿಷ್ಠಿರ ॥**

ಬಡವರಿಗೂ ಮಾಡಲು ಬರುವಂಥ ಯಜ್ಞಕ್ಕೆ ಸಮನಾದ ಫಲವನ್ನು ನೀಡುವ ವಿಧಿಯನ್ನು ಹೇಳುತ್ತೇನೆ ಕೇಳು.

**ಋಷೀಣಾಂ ಪರಮಂ ಗುಹ್ಯಮಿದಂ ಭರತಸತ್ತಮ ।**
**ತೀರ್ಥಾನುಗಮನಂ ಪುಣ್ಯಂ ಯಜ್ಞೇಭ್ಯೋಽಪಿ ವಿಶಿಷ್ಯತೇ ॥**

ತೀರ್ಥಯಾತ್ರೆಗೈಯುವದು ಯಜ್ಞ ಕಾರ್ಯಕ್ಕಿಂತ ಹೆಚ್ಚು ಪುಣ್ಯಕರವಾಗಿದೆ. ಇದರ ರಹಸ್ಯವನ್ನು ಋಷಿಗಳು ತಿಳಿದಿದ್ದಾರೆ.

**ದಶ ತೀರ್ಥ ಸಹಸ್ರಾಣಿ ತಿಸ್ರಃ ಕೋಟಿಸ್ತಥಾಽಽಪಗಾಃ ।**
**ಮಾಘ ಮಾಸೇ ಗಮಿಷ್ಯಂತಿ ಗಂಗಾಯಾಂ ಭರತವರ್ಷಭ ॥**

ಮಾಘಮಾಸದಲ್ಲಿ ಹತ್ತುಸಾವಿರ ತೀರ್ಥಗಳೂ ಮೂರು ಕೋಟಿ ನದಿಗಳೂ ಗಂಗಾನದಿಗೆ ಬಂದು ಕೂಡುತ್ತವೆ. ಅಲ್ಲಿ ಎಲ್ಲ ಪುಣ್ಯ ನದೀತೀರ್ಥಗಳು ಸನ್ನಿಹಿತವಾಗಿರುತ್ತವೆ.

**॥ ಸೂತ ಉವಾಚ ॥**

**ಪರಂಪರಾಗತಂ ಧರ್ಮಂ ಸ್ಮಾರ್ತಂ ತ್ವಾಚಾರ ಲಕ್ಷಣಂ ।**
**ವರ್ಣಾಶ್ರಮಾಚಾರಯುತಂ ಮನುಃ ಸ್ವಾಯಂಭುವೋಽಬ್ರವೀತ್ ॥**

ಸ್ಮೃತಿಗ್ರಂಥಗಳಲ್ಲಿ ಹೇಳಿದ ಮತ್ತು ಪರಂಪರಾಪ್ರಾಪ್ತವಾದ ವರ್ಣಾಶ್ರಮ ಪದ್ಧತಿಗೆ ಅನುಸಾರಿಯಾದ ಸದಾಚಾರವೇ **ಧರ್ಮ** ಎಂದು ಸ್ವಾಯಂಭುವಮನು ಹೇಳಿದ್ದಾನೆ.

**ಆರಂಭಯಜ್ಞಾಃ ಕ್ಷತ್ರಸ್ಯ ಹವಿರ್ಯಜ್ಞಾ ವಿಶಃ ಸ್ಮೃತಾಃ ।**
**ಪರಿಚಾರಯಜ್ಞಾ ಶೂದ್ರಾಶ್ಚ ಜಪಯಜ್ಞಾಶ್ಚ ಬ್ರಾಹ್ಮಣಾಃ ॥**

ಸತ್ಕಾರ್ಯಗಳನ್ನು ಮಾಡುವುದು ಕ್ಷತ್ರಿಯರ ಯಜ್ಞ, ಹೋಮ. ಹವನ ಮಾಡಿಸುವುದು ವೈಶ್ಯರಿಗೆ ಯಜ್ಞ. ಸೇವೆಗೈಯುವದೇ ಶೂದ್ರರ ಯಜ್ಞ. ಜಪಮಾಡುವದೇ ಬ್ರಾಹ್ಮಣರಿಗೆ ಯಜ್ಞ.

**ಚಕ್ರಂ ರಥೋ ಮಣಿರ್ಭಾರ್ಯಾ ನಿಧಿರಶ್ವೋ ಗತಿಸ್ತಥಾ ।**
**ಪ್ರೋಕ್ತಾನಿ ಸಪ್ತ ರತ್ನಾನಿ ಪೂರ್ವಂ ಸ್ವಾಯಂಭುವೇಽಂತರೇ ॥**

ಗಾಲಿ, ರಥ, ರತ್ನ, ಹೆಂಡತಿ, ನಿಧಿ, ಆನೆ, ಕುದುರೆ ಇವು ಏಳು ರತ್ನಗಳು ಎಂದು ಸ್ವಾಯಂಭುವ ಮನ್ವಂತರದಲ್ಲಿ ಕರೆಯಲ್ಪಡುತ್ತಿದ್ದವು.

**ಸಾಮಾನ್ಯೇಷು ಚ ಧರ್ಮೇಷು ತಥಾ ವೈಶೇಷಿಕೇಷು ಚ ।**
**ಬ್ರಹ್ಮಕ್ಷತ್ರ ವಿಶೋ ಯುಕ್ತಾಃ ಶ್ರೌತಸ್ಮಾರ್ತೇನ ಕರ್ಮಣಾ ॥**

ಸಾಮಾನ್ಯ ಧರ್ಮ ಮತ್ತು ವಿಶೇಷ ಧರ್ಮಗಳಲ್ಲಿ ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯರು ಶ್ರುತಿ ಸ್ಮೃತಿಗಳಲ್ಲಿ ಹೇಳಿದಂತೆ ಪ್ರವರ್ತಿಸಬೇಕು.

**ವರ್ಣಾಶ್ರಮೇಷು ಯುಕ್ತಸ್ಯ ಸುಖೋದರ್ಕಸ್ಯ ಸ್ವರ್ಗತೌ ।**
**ಶ್ರೌತ ಸ್ಮಾರ್ತೋ ಹಿ ಯೋ ಧರ್ಮೋ ಜ್ಞಾನಧರ್ಮಃ ಸ ಉಚ್ಯತೇ ॥**

ಸ್ವರ್ಗಾದಿ ದಿವ್ಯಲೋಕಗಳಲ್ಲಿ ಸುಖ ಸದ್ಗತಿಯನ್ನು ನೀಡುವ ವರ್ಣಾಶ್ರಮ ಧರ್ಮಗಳಲ್ಲಿ ಜ್ಞಾನಧರ್ಮವು ಶ್ರೇಷ್ಠವಾಗಿದೆ.

**ವಿದ್ಯಾನಾಂ ಸಾಧನಾತ್ಸಾಧು ಬ್ರಹ್ಮಚಾರೀ ಗುರೋರ್ಹಿತಃ ।**
**ಕಾರಣಾತ್ಸಾಧನಾಚ್ಚೈವ ಗ್ರಹಸ್ಥಃ ಸಾಧುರುಚ್ಯತೇ ॥**

ಬ್ರಹ್ಮಚಾರಿಯು ವಿದ್ಯೆ ಸಂಪಾದಿಸಿ ಸದಾಚಾರಿಯಾಗಿ, ವಿದ್ಯೋಪದೇಶಕ ಗುರುಗಳ ಸೇವೆಮಾಡಿ ಸಾಧು ಎನಿಸುತ್ತಾನೆ. ಗ್ರಹಸ್ಥನು ಮಿಕ್ಕ ಆಶ್ರಮ ಧರ್ಮಗಳು ನಡೆಯಲು ಸಹಕಾರಿ ಆಗಿರುವದರಿಂದ, ವಂಶವೃದ್ಧಿಗೆ ಕಾರಣನಾಗಿರುವದರಿಂದ **ಸಾಧು** ಎನ್ನಿಸುವನು.

**ತಪಸಾ ಚ ತಥಾಽರಣ್ಯೇ ಸಾಧುರ್ವೈಖಾನಸಃ ಸ್ಮೃತಃ ।**
**ಯತಮಾನೋ ಯತಿಃ ಸಾಧುಃ ಸ್ಮೃತೋ ಯೋಗಸ್ಯ ಸಾಧನಾತ್ ॥**

ವಾನಪ್ರಸ್ಥಾಶ್ರಮಿಯು ಅರಣ್ಯದಲ್ಲಿದ್ದು ತಪಸ್ಸುಮಾಡಿದರೆ **ಸಾಧು** ಎನಿಸುವನು. ಯೋಗ ಸಾಧನೆಯಿಂದ ಪರಮಾತ್ಮನ ದಿವ್ಯ ದರ್ಶನಕ್ಕಾಗಿ ಯತ್ನಿಸುವ ಸನ್ಯಾಸಿಯು **ಸಾಧು** ಎನಿಸುವನು.

**ಧರ್ಮೋ ಧರ್ಮಗತಿಃ ಪ್ರೋಕ್ತಃ ಶಬ್ದೋ ಹ್ಯೇಷ ಕ್ರಿಯಾತ್ಮಕಃ ।**
**ಕುಶಲಾಕುಶಲಂ ಕರ್ಮ ಧರ್ಮಾಧರ್ಮಾಽ ಬ್ರವೀತ್ಪ್ರಭುಃ ॥**

ಕ್ರಿಯಾವಾಚಕವಾದ ಧರ್ಮಶಬ್ದವು ಧರ್ಮದ ಆಚರಣೆಯ ಅರ್ಥಕೊಡುತ್ತದೆ. ಶ್ರೇಯಸ್ಸಿಗೆ ಕಾರಣವಾದದ್ದು **ಧರ್ಮ**. ಆಗದಿದ್ದದ್ದು **ಅಧರ್ಮ** ಎಂದು ದೇವರು ಹೇಳಿದ್ದಾನೆ.

**ಅಥ ದೇವಾಶ್ಚ ಪಿತರ ಋಷಯಶ್ಚೈವ ಮಾನುಷಾಃ ।**
**ಅಯಂ ಧರ್ಮೋ ಹ್ಯಯಂ ನೇತಿ ಬ್ರುವತೇ ಮೌನಮೂರ್ತಿನಾ ॥**

ದೇವತೆಗಳು, ಪಿತೃಗಳು, ಋಷಿಗಳು ಮುಂತಾದ ದೊಡ್ಡ ಮನುಷ್ಯರು ಇದು ಧರ್ಮ ಎಂದು ಹೇಳಿದ್ದೇ ಧರ್ಮ, ಅಲ್ಲ ಎಂದದ್ದೇ **ಅಧರ್ಮ**.

**ಧರ್ಮೇತಿ ಧಾರಣೇ ಧಾತುರ್ಮಹತ್ವೇ ಚೈವಮುಚ್ಯತೇ ।**
**ಆಧಾರಣೇ ಮಹತ್ವೇ ವಾ ಧರ್ಮಃ ಸ ತು ನಿರುಚ್ಯತೇ ॥**

ಧೃ ಧಾತುವು ಧಾರಣ ಮತ್ತು ಮಹತ್ವ ಎಂಬ ಅರ್ಥ ಕೊಡುತ್ತದೆ. ಆದರಿಂದ ನಿಷ್ಪನ್ನವಾದ 'ಧರ್ಮ' ಶಬ್ದವು ಜನರನ್ನು ಎತ್ತಿ ಹಿಡಿಯುವ ಮಹತ್ವಪೂರ್ಣವಾದ ಕೃತಿಯೇ ಧರ್ಮ ಎಂಬ ಅರ್ಥ ಕೊಡುತ್ತದೆ.

**ತತ್ರೇಷ್ಟಪ್ರಾಪಕೋ ಧರ್ಮ ಆಚಾರ್ಯೈರುಪದಿಶ್ಯತೇ ।**
**ಅಧರ್ಮಶ್ಚಾಽನಿಷ್ಟಫಲ ಆಚಾರ್ಯೈರ್ನೋಪದಿಶ್ಯತೇ ॥**

ಅದರಲ್ಲಿ ಗುರುಗಳು ನಮಗೆ ಇಷ್ಟಫಲನೀಡುವ ಧರ್ಮವನ್ನೇ ಉಪದೇಶಿಸುತ್ತಾರೆ. ಅನಿಷ್ಟ ಫಲ ಕೊಡುವ ಅಧರ್ಮವನ್ನು ಉಪದೇಶಿಸುವದಿಲ್ಲ.

**ವೃದ್ಧಾಶ್ಚಾಽಲೋಲುಪಾಶ್ಚೈವ ಆತ್ಮವಂತೋ ಹ್ಯದಾಂಭಿಕಾಃ ।**
**ಸಮ್ಯಗ್ವಿನೀತಾ ಮೃದವಸ್ತಾನಾಚಾರ್ಯಾನ್ ಪ್ರಚಕ್ಷತೇ ॥**

ಆಚಾರ್ಯರು, ಜ್ಞಾನವೃದ್ಧರು, ವಿಷಯಲೋಲುಪತೆ ಇಲ್ಲದವರು, ಆತ್ಮಜ್ಞಾನ ಉಳ್ಳವರೂ, ದಂಭವರ್ಜಿತರೂ, ವಿನಯಶಾಲಿಗಳೂ, ಶಾಂತರೂ ಆಗಿರಬೇಕು. ಇದೇ ಅವರ ಲಕ್ಷಣ.

**ಧರ್ಮಜ್ಞೈರ್ವಿಹಿತೋ ಧರ್ಮಃ ಶ್ರೌತಸ್ಮಾರ್ತೋ ದ್ವಿಜಾತಿಭಿಃ ।**
**ದಾರಾಗ್ನಿ ಹೋತ್ರ ಸಂಬಂಧಮಿಜ್ಯಾ ಶ್ರೌತಸ್ಯ ಲಕ್ಷಣಂ ॥**

ಧರ್ಮವನ್ನು ಅರಿತವರು ಶ್ರೌತಧರ್ಮ, ಸ್ಮಾರ್ತಧರ್ಮವೆಂದು ಧರ್ಮದಲ್ಲಿ ವಿಭಾಗ ಮಾಡಿದ್ದಾರೆ. ಗೃಹಸ್ಥನಾಗಿ ಪತ್ನಿ, ಅಗ್ನಿ, ಪುರೋಹಿತರಿಂದ ಕೂಡಿಕೊಂಡು ಯಜ್ಞಮಾಡುವದು, ಶ್ರೌತಧರ್ಮ.

**ಸ್ಮಾರ್ತೋ ವರ್ಣಾಶ್ರಮಾಚಾರೋ ಯಮೈಶ್ಚ ನಿಯಮೈರ್ಯುತಃ ।**
**ಪೂರ್ವೇಭ್ಯೋ ವೇದಯಿತ್ವೇಹ ಶ್ರೌತಂ ಸಪ್ತರ್ಷಯೋಽಬ್ರುವನ್ ॥**

ಯಮನಿಯಮಗಳಿಂದ ಕೂಡಿ, ವರ್ಣಾಶ್ರಮ ಪದ್ಧತಿಯಂತೆ ಆಚರಿಸುವದು, ಹಿರಿಯರಿಂದ ಕೇಳಿ, ಸಂಪ್ರದಾಯದಂತೆ ನಡೆಯುವದು ಸ್ಮಾರ್ತಧರ್ಮ ಎನಿಸುತ್ತದೆ. ಇದನ್ನು ಸಪ್ತರ್ಷಿಗಳು ತಮ್ಮ ಪೂರ್ವಜರಿಂದ ಕೇಳಿಕೊಂಡು ಇದನ್ನು ಉಪದೇಶಿಸಿದ್ದಾರೆ.

**ಶಿಷ್ಟೈರಾಚರ್ಯತೇ ಯಸ್ಮಾತ್ಪುನಶ್ಚೈವ ಮನುಕ್ಷಯೇ ।**
**ಪೂರ್ವೈಃ ಪೂರ್ವೈರ್ಮತತ್ವಾಚ್ಚ ಶಿಷ್ಟಾಚಾರಃ ಸ ಶಾಶ್ವತಃ ॥**

ಹೊಸ ಮನ್ವಂತರ ಪ್ರಾರಂಭದಿಂದ ಹಿಂದಿನ ಶಿಷ್ಟ ಜನರ ಆಚಾರವನ್ನು ಅನುಸರಿಸಿ ನಡೆಯುವ ಶಿಷ್ಟರಿಗೆ ಸಮ್ಮತವಾದ ಆಚಾರವು ಶಿಷ್ಟಾಚಾರ ಅನಿಸುತ್ತದೆ.

**ದಾನಂ ಸತ್ಯಂ ತಪೋ ಲೋಕೋ ವಿದ್ಯೇಜ್ಯಾ ಪೂಜನಂ ದಮಃ ।**
**ಅಷ್ಟೌ ತಾನಿ ಚರಿತ್ರಾಣಿ ಶಿಷ್ಟಾಚಾರಸ್ಯ ಲಕ್ಷಣಂ ॥**

ದಾನ, ಸತ್ಯ, ತಪಸ್ಸು, ಲೋಕಸಂಗ್ರಹ, ವಿದ್ಯೆ, ಯಜ್ಞ, ಉಪಾಸನಇಂದ್ರಿಯ ನಿಯಮನ ಇವು ಎಂಟು ಶಿಷ್ಟಾಚಾರದ ಮುಖ್ಯ ಲಕ್ಷಣಗಳು.

**ಶಿಷ್ಟಾ ಯಸ್ಮಾಚ್ಚರಂತ್ಯೇನಂ ಮನುಃ ಸಪ್ತರ್ಷಯಶ್ಚ ಹ ।**
**ಮನ್ವಂತರೇಷು ಸರ್ವೇಷು ಶಿಷ್ಟಾಚಾರಸ್ತತಃ ಸ್ಮೃತಃ ॥**

ಶಿಷ್ಟರಾದ ಮನುಮಹರ್ಷಿ, ಸಪ್ತರ್ಷಿಗಳು ಪ್ರತಿಮನ್ವಂತರದಲ್ಲಿಯೂ ಆಚರಿಸುವದರಿಂದ ಇದಕ್ಕೆ ಶಿಷ್ಟಾಚಾರವೆಂದು ಹೆಸರು ಬಂದಿದೆ.

**ವಿಜ್ಞೇಯಃ ಶ್ರವಣಾಚ್ಛ್ರೌತಃ ಸ್ಮರಣಾತ್ಸ್ಮಾರ್ತ ಉಚ್ಯತೇ ।**
**ಇಜ್ಯಾ ವೇದಾತ್ಮಕಃ ಶ್ರೌತಃ ಸ್ಮಾರ್ತೋ ವರ್ಣಾಶ್ರಮಾತ್ಮಕಃ ॥**

ಕಿವಿಯಿಂದ ಕಿವಿಗೆ ಕೇಳಿ, ತಿಳಿದ ಧರ್ಮವು ಶ್ರೌತ. ಹಿಂದಿನ ಮನ್ವಂತರದ ಧರ್ಮವನ್ನು ಮನು ಮಹಾರಾಜನು ಸ್ಮರಿಸಿ, ಜನರಿಗೆ ಉಪದೇಶ ಮಾಡಿದ್ದರಿಂದ ಈ ಧರ್ಮಕ್ಕೆ **ಸ್ಮಾರ್ತ** ಧರ್ಮವೆನ್ನುವರು. ಯಜ್ಞಯಾಗಾದಿಗಳು **ಶ್ರೌತ** ಧರ್ಮ ವರ್ಣಾಶ್ರಮ ಆಚಾರವು ಸ್ಮಾರ್ತ ಧರ್ಮ.

**ಪ್ರತ್ಯಂಗಾನಿ ಪ್ರವಕ್ಷ್ಯಾಮಿ ಧರ್ಮಸ್ಯೇಹ ತು ಲಕ್ಷಣಂ ।**
**ದೃಷ್ಟಾನುಭೂತಮರ್ಥಂ ಚ ಯಃ ಪೃಷ್ಟೋ ನ ನಿಗೂಹತೇ ।**
**ಯಥಾಭೂತ ಪ್ರವಾದಸ್ತು ತದೇತತ್ಸತ್ಯ ಲಕ್ಷಣಂ ॥**

ಧರ್ಮದ ಅಂಗಗಳಾದ ಸತ್ಯ ಮೊದಲಾದವುಗಳ ಸ್ವರೂಪ ಹೇಳುತ್ತೇನೆ. ಹೆರವರು ಕೇಳಿದಾಗ ನಡೆದ ಸಂಗತಿಯನ್ನು ಸರಿಯಾಗಿ ತಿಳಿದು ನೋಡಿ ಮರೆಮಾಚದೆ ಯಥಾರ್ಥವಾಗಿ ಹೇಳಬೇಕು. ಇದು ಸತ್ಯದ ಲಕ್ಷಣ.

**ಬ್ರಹ್ಮಚರ್ಯಂ ತಪೋ ಮೌನಂ ನಿರಾಹಾರತ್ವಮೇವ ಚ ।**
**ಇತ್ಯೇತತ್ತಪಸೋ ರೂಪಂ ಸುಘೋರಂ ತು ದುರಾಸದಂ ॥**

ಬ್ರಹ್ಮಚರ್ಯ, ತಪಸ್ಸು, ಮೌನ, ಉಪವಾಸ ಇವು ಉಗ್ರ ದುರ್ಮಿಳ ತಪಸ್ಸಿನ ಪ್ರಕಾರಗಳು.

**ಪಶೂನಾಂ ದ್ರವ್ಯ ಹವಿಷಾಮೃಕ್ಸಾಮಯಜುಷಾಂ ತಥಾ ।**
**ಋತ್ವಿಜಾಂ ದಕ್ಷಿಣಾಯಾಶ್ಚ ಸಂಯೋಗೋ ಯಜ್ಞ ಉಚ್ಯತೇ ॥**

ಪಶು, ದ್ರವ್ಯ, ಹವಿಸ್ಸು, ಋಗ್ವೇದ, ಸಾಮವೇದ, ಅಥರ್ವಣ ಎಂಬ ಮೂರು ವೇದಗಳು, ಋತ್ವಿಜ, ದಕ್ಷಿಣೆ, ಎಲ್ಲ ಕೂಡಿ ನಡೆಯುವ ಕಾರ್ಯವೇ **ಯಜ್ಞ.**

**ಆತ್ಮವತ್ಸರ್ವ ಭೂತೇಷು ಯೋ ಹಿತಾಯ ಶುಭಾಯ ಚ ।**
**ವರ್ತತೇ ಸತತಂ ಹೃಷ್ಟಃ ಕ್ರಿಯಾ ಶ್ರೇಷ್ಠಾ ದಯಾ ಸ್ಮೃತಾ ॥**

ತನ್ನಂತೆ ಪರರು ಎಂದು ಬಗೆದು ಎರಡನೆಯವರ ಹಿತಕ್ಕಾಗಿ ಸ್ವಸಂತೋಷದಿಂದ ವರ್ತಿಸುವ ಶ್ರೇಷ್ಠವಾದ ಕ್ರಿಯೆಯೇ ದಯಾ ಎನಿಸುತ್ತದೆ.

**ಆಕ್ರುಷ್ಟೋಽಭಿಹತೋ ಯಸ್ತು ನಾಽಕ್ರೋಶೇತ್ಪ್ರಹರೇದಪಿ ।**
**ಅದುಷ್ಟೋ ವಾಙ್ಮನಃ ಕಾರ್ಯೈಸ್ತಿತಿಕ್ಷುಃ ಸಾ ಕ್ಷಮಾ ಸ್ಮೃತಾ ॥**

ಪರರು ಬೈಯಲಿ, ಹೊಡೆಯಲಿ, ಅದಕ್ಕೆ ಪ್ರತಿಯಾಗಿ ಹೊಡೆಯಬಾರದು. ಮತ್ತೆ ರೇಗಬಾರದು. ಅದೆಲ್ಲವನ್ನು ತಾಳಿಕೊಂಡು ಮಾತು, ಮನಸ್ಸು, ಕೃತಿಗಳಲ್ಲಿ ದುರ್ಭಾವ ಇಲ್ಲದಿರುವಿಕೆ **ಕ್ಷಮೆ** ಎನಿಸುವದು.

**ಸ್ವಾಮಿನಾಽ ರಕ್ಷ್ಯಮಾಣಾನಾಮುತ್ಸೃಷ್ಟಾನಾಂ ಚ ಸಂಭ್ರಮೇ ।**
**ಪರಸ್ವಾನಾಮನಾದಾನಮಲೋಭ ಇತಿ ಸಂಜ್ಞಿತಃ ॥**

ವಸ್ತುವಿನ ಒಡೆಯನು ಗಡಿಬಿಡಿಯಲ್ಲಿ ಮರೆತುಬಿಟ್ಟ ಪದಾರ್ಥಗಳನ್ನು ತೆಗೆದುಕೊಳ್ಳದೆ, ಅವನಿಗೆ ಒಪ್ಪಿಸುವದು **ಅಲೋಭ** ಅನಿಸುತ್ತದೆ.

**ಮೈಥುನಸ್ಯಾಽಸಮಾಚಾರೋ ಜಲ್ಪನಾಚ್ಚಿಂತನಾತ್ತಥಾ ।**
**ನಿವೃತ್ತಿ ರ್ಬ್ರಹ್ಮಚರ್ಯಂ ಚ ತದೇತಚ್ಛಮಲಕ್ಷಣಂ ॥**

ಕಾಮುಕಕ್ರಿಯೆಯನ್ನು ಬಾಯಿಯಿಂದ ನುಡಿಯಬಾರದು, ಕೈಯಿಂದ ಮಾಡಬಾರದು. ವಿರಕ್ತನಾಗಿ ಬ್ರಹ್ಮಚರ್ಯದಿಂದ ಇರುವದೇ **ಶಮ** ಎನ್ನುವರು.

**ಆತ್ಮಾರ್ಥೇ ವಾ ಪರಾರ್ಥೇ ವಾ ಇಂದ್ರಿಯಾಣೀಹ ಯಸ್ಯ ವೈ ।**
**ವಿಷಯೇ ನ ಪ್ರವರ್ತಂತೇ ದಮಸ್ಯೈತತ್ತು ಲಕ್ಷಣಂ ॥**

ತನಗಾಗಿ, ಅಥವಾ ಪರರಿಗಾಗಿ ವಿಷಯಗಳಲ್ಲಿ ಮನಸ್ಸು ಸರ್ವಥಾ ತೊಡಗದಿದ್ದರೆ ಅದಕ್ಕೆ **ದಮ** ಎನ್ನುವರು.

**ಪಂಚಾತ್ಮಕೇ ಯೋ ವಿಷಯೇ ಕಾರಣೇ ಚಾಷ್ಟಲಕ್ಷಣೇ ।**
**ನ ಕ್ರುಧ್ಯತೇ ಪ್ರತಿಹತಃ ಸ ಜಿತಾತ್ಮಾ ಭವಿಷ್ಯತಿ ॥**

ತನ್ನ ಪಂಚೇದ್ರಿಯಗಳಿಂದ ಅನುಭವಿಸುವ ಯಾವುದೇ ವಿಷಯ ಸುಖಾನುಭವಕ್ಕೂ, ಎಂಟು ವಿಧವಾದ ಸುಖಸಾಧನೆಗಳಿಗೂ ಯಾರಿಂದಾದರೂ ಅಡ್ಡಿ ಒದಗಿದರೂ ಕೋಪಗೊಳ್ಳದವನೇ ಜಿತೇಂದ್ರಿಯನು.

**ಯದ್ಯದಿಷ್ಟತಮಂ ದ್ರವ್ಯಂ ನ್ಯಾಯೇನೈವಾಗತಂ ಚ ಯತ್ ।**
**ತತ್ತದ್ಗುಣವತೇ ದೇಯಮಿತ್ಯೇತದ್ದಾನಲಕ್ಷಣಂ ॥**

ಸರಿಯಾದ ಮಾರ್ಗದಿಂದ ಸಂಪಾದಿಸಿದ, ತನಗೆ ಇಷ್ಟವಾದ ಹಣವನ್ನಾಗಲಿ, ತನಗೆ ಇಷ್ಟವಾದ ವಸ್ತುವನ್ನಾಗಲಿ ಅದಕ್ಕೆ ಯೋಗ್ಯರಾದವರಿಗೆ ಕೊಡುವದು **ದಾನ**ವೆನಿಸುವದು.

**ಶ್ರುತಿಸ್ಮೃತಿಭ್ಯಾಂ ವಿಹಿತೋ ಧರ್ಮೋ ವರ್ಣಾಶ್ರಮಾತ್ಮಕಃ ।**
**ಶಿಷ್ಟಾಚಾರಪ್ರವೃದ್ಧಶ್ಚ ಧರ್ಮೋಽಯಂ ಸಾಧುಸಮ್ಮತಃ ॥**

ವರ್ಣಾಶ್ರಮ ಧರ್ಮವು ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುತ್ತದೆ. ಶಿಷ್ಟಾಚಾರದಿಂದ ಅದು ಬೆಳೆದು ಎಲ್ಲ ಸಾಧು ಸಜ್ಜನರಿಗೆ ಸಮ್ಮತವಾಗುತ್ತದೆ.

**ಅಪ್ರಕ್ಷುಬ್ಧೋ ಹ್ಯನಿಷ್ಟೇಷು ಇಷ್ಟಂ ವೈ ನಾಭಿನಂದತಿ ।**
**ಪ್ರೀತಿ ತಾಪ ವಿಷಾದಾನಾಂ ವಿನಿವೃತ್ತಿರ್ವಿರಕ್ತತಾ ॥**

ಕಷ್ಟ ಬಂದಾಗ ಕಿಂಕರ್ಯ ಮಾಡಿಕೊಳ್ಳದೆ, ಇಷ್ಟಸಿದ್ಧಿಯಾದಾಗ ಅತಿ ಹಿಗ್ಗದೆ, ಪ್ರೀತಿ, ತಾಪ ಮುಂತಾದ ವಿಕಾರಗಳಿಗೆ ಮನಸ್ಸು ಕೊಡದಿರುವದೇ ವೈರಾಗ್ಯ ಲಕ್ಷಣ.

**ಸಂನ್ಯಾಸಃ ಕರ್ಮಣಾಂ ನ್ಯಾಸಃ ಕೃತಾನಾಮಕೃತೈಃ ಸಹ ।**
**ಕುಶಲಾಕುಶಲಾಭ್ಯಾಂ ತು ಪ್ರಹಾಣಂ ನ್ಯಾಸ ಉಚ್ಯತೇ ॥**

ತಾನು ಮಾಡಿದ ಅಥವಾ ಮಾಡಲಿರುವ ಕರ್ಮಗಳ ಫಲಾಪೇಕ್ಷೆಯನ್ನು ಬಿಟ್ಟು ನಿಷ್ಕಾಮಬುದ್ಧಿಯಿಂದ ಕರ್ತವ್ಯ ಧರ್ಮಾಚರಣೆ **ಸನ್ಯಾಸ** ಅನಿಸುವದು. ಕರ್ಮದ ಪರಿಣಾಮವಾದ ಸುಖ-ದುಃಖಗಳನ್ನು ಕಡೆಗಣಿಸುವದೇ **ನ್ಯಾಸ** ಅರ್ಥಾತ್ ಸನ್ಯಾಸ ಎನಿಸುವದು.

**ಗತ್ಯರ್ಥಾದೃಷತೇರ್ಧಾತೋರ್ನಾಮ ನಿಷ್ಪತ್ತಿ ಕಾರಣಂ ।**
**ಯಸ್ಮಾದೇಷ ಸ್ವಯಂಭೂತಸ್ತಸ್ಮಾಚ್ಚ ಋಷಿತಾ ಮತಾ ॥**

ಗತ್ಯರ್ಥಕವಾದ 'ಋಷತೆ' ಎಂಬ ಧಾತುವಿನಿಂದ ನಿಷ್ಪನ್ನವಾದ ಋಷಿ ಶಬ್ದಕ್ಕೆ ಜ್ಞಾನಿ ಎಂದು ಅರ್ಥವಾಗುತ್ತದೆ. ಈ ಅರ್ಥದಲ್ಲಿ ಸ್ವಯಂಭೂ ಎನಿಸಿದ ಬ್ರಹ್ಮದೇವರು ನಿಜವಾಗಿ ಋಷಿ ಶಬ್ದದ ಮುಖ್ಯ ಅರ್ಥ ಆಗಿದ್ದಾರೆ.

**ಈಶ್ವರಾಃ ಸ್ವಯಮುದ್ಭೂತಾ ಬ್ರಹ್ಮಣೋ ಮಾನಸಾಃ ಸುತಾಃ ।**
**ನಿವರ್ತಮಾನೈಸ್ತೈರ್ಬುದ್ಧ್ಯಾ ಮಹಾನ್ ಪರಿಗತಃ ಪರಃ ॥**

ಬ್ರಹ್ಮದೇವರ ಕೆಲವು ಮಾನಸಪುತ್ರರು ಸಮರ್ಥರಿದ್ದರೂ ಅಯೋನಿಜರಾಗಿ ಹುಟ್ಟಿದರು. ಅವರಿಗೆ ಈಶ್ವರ ಎಂದು ಹೆಸರು. ಸಂಸಾರದಿಂದ ನಿವೃತ್ತರಾದ ಅವರು ಪರಮಾತ್ಮನನ್ನು ಸರಿಯಾಗಿ ತಿಳಿದಿದ್ದಾರೆ.

**ಋಷಿಸ್ತಸ್ಮಾತ್ಪರತ್ವೇನ ಭೂತಾದಿಃಋಷಯಸ್ತತಃ ।**
**ಋಷಿಪುತ್ರಾ ಋಷೀಕಾಸ್ತು ಮೈಥುನಾದ್ಗರ್ಭ ಸಂಭವಾಃ ॥**

ಋಷಿ ಶಬ್ದಕ್ಕೆ ಮಹತ್ವ ಎಂಬ ಅರ್ಥವೂ ಇದ್ದುದರಿಂದ, ಈ ಈಶ್ವರರು ಮಹರ್ಷಿ ಎಂದು ಕರೆಯಿಸಿಕೊಳ್ಳಲ್ಪಟ್ಟರು. ಇವರಿಗೆ ಅನೇಕ ಜನ ಜರಸ ಮತ್ತು ಮಾನಸ ಪುತ್ರರು ಜನಿಸಿ ಋಷಿಗಳೆಂದು ಹೆಸರಾದರು.

**ಪರತ್ವೇನ ಋಷಂತೇ ವೈ ಭೂತಾದೀನೃಷಿಕಾಸ್ತತಃ ।**
**ಋಷಿಕಾಣಾಂ ಸುತಾ ಯೇತು ವಿಜ್ಞೇಯಾ ಋಷಿಪುತ್ರಕಾಃ ॥**

ಎಲ್ಲ ಪ್ರಾಣಿ ಪ್ರಪಂಚಕ್ಕಿಂತಲೂ ಪರಮಾತ್ಮನು ಭಿನ್ನ ಮತ್ತು ಶ್ರೇಷ್ಠ ಎಂದು ತಿಳಿಯುವವರು ಋಷಿಕರು. ಋಷಿಯ ಮಕ್ಕಳಿಗೆ ಋಷೀಕ ಎಂದು ಹೆಸರು ಬಂದಿದ್ದು, ಇವರು ದಾಂಪತ್ಯ ಧರ್ಮದಿಂದ ಗರ್ಭದಲ್ಲಿ ಹುಟ್ಟಿ ಬಂದವರು. ಈ ಋಷೀಕ ಮಕ್ಕಳಿಗೆ ಋಷಿಪುತ್ರರೆಂದು ಹೆಸರು.

**ಸಾಮಪೂರ್ವಾ ಸ್ಮೃತಾ ನೀತಿಶ್ಚತುರಂಗಾ ಪತಾಕಿನೀ ।**
**ಜಿಗೀಷತಾಂ ಸುರಶ್ರೇಷ್ಠ ಸ್ಥಿತಿರೇಷಾ ಸನಾತನೀ ॥**

ಗೆಲ್ಲಬೇಕೆಂದು ಬಯಸುವವರ ಸೈನ್ಯವು ಚತುರಂಗವಾಗಿರುವಂತೆ ನೀತಿಯು ಸಾಮ, ದಾನ, ಭೇದ, ದಂಡ ಎಂದು ಚತುರಂಗವಾಗಿ ನಾಲ್ಕು ವಿಧವಾಗಿರಬೇಕು. ಇದು ಮೊದಲಿನಿಂದ ಬಂದ ಕ್ರಮ.

**ಸಾಮ ಭೇದಸ್ತಥಾ ದಾನಂ ದಂಡಶ್ಚಾಂಗ ಚತುಷ್ಟಯಂ ।**
**ನೀತೌ ಕ್ರಮಾದ್ದೇಶ ಕಾಲ ರಿಪು ಯೋಗ್ಯ ಕ್ರಮಾದಿದಂ ॥**

ನೀತಿಯು ದೇಶ, ಕಾಲ, ವೈರಿ ಇತ್ಯಾದಿಗಳನ್ನನುಸರಿಸಿ, ಸಾಮ, ದಾನ, ಭೇದ, ದಂಡ ಎಂದು ಚತುರಂಗಾತ್ಮಕವಾಗಿರುತ್ತದೆ.

**ಸಾಮ ದೈತ್ಯೇಷು ನೈವಾಸ್ತಿ ಯತಸ್ತೇ ಲಬ್ಧಸಂಶ್ರಯಾಃ ।**
**ಜಾತಿ ಧರ್ಮೇಣ ವಾಽಭೇದ್ಯಾ ದಾನಂ ಪ್ರಾಪ್ತಶ್ರಿಯೇ ಚ ಕಿಂ ॥**

ಬಲವಾದ ಆಶ್ರಯವುಳ್ಳ ದೈತ್ಯರಲ್ಲಿ ಸಾಮೋಪಾಯವು ಉಪಯೋಗವಿಲ್ಲ. ಮತ್ತು ಜಾತಿಧರ್ಮದಿಂದ ಏಕೀಕೃತರಾದ ಅವರಲ್ಲಿ ಭೇದೋಪಾಯ ನಡೆಯಲಾರದು. ಸ್ವಯಂ ಸಿರಿವಂತರಾದ ಅವರನ್ನು ದಾನದಿಂದ ವಶಪಡಿಸಿಕೊಳ್ಳಲು ಸಾಧ್ಯವಿಲ್ಲ.

**ಏಕೋಽಭ್ಯುಪಾಯೊ ದಂಡೋಽತ್ರ ಭವತಾಂ ಯದಿ ರೋಚತೇ ।**
**ದುರ್ಜನೇಷು ಕೃತಂ ಸಾಮ ಮಹದ್ಯಾತಿ ಚ ವಾಚ್ಯತಾಂ ॥**

ದುಷ್ಟರಲ್ಲಿ ಸಾಮೋಪಾಯ ವ್ಯರ್ಥ ಆದುದರಿಂದ ಮನಸ್ಸಿದ್ದರೆ ದುರ್ಜನರ ಮೇಲೆ ದಂಡೋಪಾಯವನ್ನೇ ಪ್ರಯೋಗಿಸಬೇಕು. ದುರ್ಜನರಲ್ಲಿ ಸಾಮಪ್ರಯೋಗ ಹೇಯವಾಗಿದೆ.

**ಮನ್ಯಂತೇ ದುರ್ಜನಾ ನಿತ್ಯಂ ಸಾಮ ಚಾಪಿ ಭಯೋದಯಂ ।**
**ತಸ್ಮಾದ್ದುರ್ಜನಮಾಕ್ರಾಂತುಂ ಶ್ರೇಯಾನ್ ಪೌರುಷ ಸಂಶ್ರಯಃ ॥**

ದುರ್ಜನರು ಸೌಮ್ಯನಡತೆಯನ್ನು ಹೆದರಿಕೆ ಎಂದು ಭಾವಿಸುತ್ತಾರೆ. ಆದುದರಿಂದ ದುರ್ಜನರನ್ನು ಆಕ್ರಮಿಸಿಕೊಳ್ಳಲು ಪೌರುಷ ದಂಡವನ್ನೇ ಅವಲಂಬಿಸಬೇಕು.

**ಆಕ್ರಾಂತೇ ತು ಕ್ರಿಯಾ ಯುಕ್ತಾ ಸತಾಮೇತನ್ಮಹಾವ್ರತಂ ।**
**ದುರ್ಜನೋ ಸುಜನತ್ವಾಯ ಕಲ್ಪತೇ ನ ಕದಾಚನ ॥**

ದುರ್ಜನರನ್ನು ಆಕ್ರಮಿಸಿದ ಬಳಿಕಾದರೂ ಅವನ ನಿಗ್ರಹಕಾರ್ಯವನ್ನು ಮುಂದುವರಿಸಬೇಕು. ದುರ್ಜನರು ಎಂದೂ ಸಜ್ಜನರಾಗುವದಿಲ್ಲ.

**ದುರ್ಜನೈರ್ಲಬ್ಧರಂಧ್ರಸ್ಯ ಪುರುಷಸ್ಯ ಕುತಃ ಕ್ರಿಯಾಃ ।**
**ಶಕ್ತೇನೋಪೇಕ್ಷಿತೋ ನೀಚೋ ಮನ್ಯತೇ ಬಲಮಾತ್ಮನಃ ॥**

ದುರ್ಜನರಿಗೆ ಏನಾದರೂ ಲೋಪದೋಷವು ಕಂಡರೆ ಅವರು ಮುಂದೆ ಯಾವ ಕಾರ್ಯವನ್ನು ಮಾಡಗೊಡುವದಿಲ್ಲ. ಆದುದರಿಂದ ಸಮರ್ಥರಾದವರು

ದುರ್ಜನರನ್ನು ನಿಗ್ರಹಿಸದೇ ಉದಾಸೀನ ಮಾಡಿಬಿಟ್ಟರೆ ಅದು ತಮ್ಮದೇ ಪೌರುಷ ಎಂದು ಅವರು ಭಾವಿಸುತ್ತಾರೆ.

**ಸಂಸಾರಸ್ಯಾತಿ ದೋಷಸ್ಯ ದುರ್ವಿಜ್ಞೇಯಾ ಗತಿರ್ಯತಃ ।**

ಈ ಸಂಸಾರದಲ್ಲಿ ದೋಷ ಬಹಳ. ಅದರ ಬಗೆ ಯಾರಿಗೂ ತಿಳಿಯದು.

**ಸೃಷ್ಟ್ಯಾಂ ಚಾವಶ್ಯ ಭಾವಿನ್ಯಾಂ ಕೇನಾಪ್ಯತಿಶಯಾತ್ಮನಾ ।**
**ಕರ್ತ್ರಾ ಪ್ರಣೀತಾ ಮರ್ಯಾದಾ ಸ್ಥಿತಾ ಸಂಸಾರಿಣಾಮಿಯಂ ॥**

ಈ ಸೃಷ್ಟಿಯಲ್ಲಿ ಸಂಸಾರಿ ಜೀವರನ್ನೆಲ್ಲತಿರುಗಿಸುವ ಇದರ ಮೂಲ ಕರ್ತಾರನು ಒಂದು ವಿಶಿಷ್ಟವಾದ ನಿಯಮವನ್ನು ಮಾಡಿರುತ್ತಾನೆ.

**ಯೋ ಜಾಯತೇ ಹಿ ಯದ್ಬೀಜೋ ಜನಿತುಃ ಸಹ್ಯಸಾರ್ಥಕಃ ।**
**ಜನಿತಾ ಚಾಪಿ ಜಾತಸ್ಯ ನ ಕಶ್ಚಿದಿತಿ ಯತ್ಸ್ಫುಟಂ ॥**

ಯಾವ ಬೀಜದಿಂದ ಯಾವ ವಸ್ತುವು ನಿರ್ಮಿತವಾಗಿರುವದೋ ಅದಕ್ಕೂ ಅದನ್ನು ನಿರ್ಮಿಸಿದವನಿಗೂ, ಎರಡರ ಸ್ಥಿತಿಗತಿಗಳಿಗೂ ಏನೂ ಸಂಬಂಧವಿರುವದಿಲ್ಲ.

**ಸ್ವಕರ್ಮಣೈವ ಜಾಯಂತೇ ವಿವಿಧಾ ಭೂತಜಾತಯಃ ।**
**ಅಂಡಜೋ ಹ್ಯಂಡಜಾಜ್ಜಾತಃ ಪುನರ್ಜಾಯೇತ ಮಾನವಃ ॥**

ವಿವಿಧ ಪ್ರಾಣಿಗಳು ತಮ್ಮ ತಮ್ಮ ಕರ್ಮದಿಂದಲೇ ಅದೃಷ್ಟಾನುಸಾರ ಹುಟ್ಟುತ್ತವೆ. ಪಕ್ಷಿಯಿಂದ ಹುಟ್ಟಿದ ಪಕ್ಷಿಯು ಮತ್ತೆ ಮುಂದೆ ಮಾನವನೂ ಆಗಬಹುದು.

**ಮಾನುಷೋಽಪಿ ಸರೀಸೃಪ್ಯಾಂ ಮನುಷ್ಯತ್ವೇನ ಜಾಯತೇ ।**
**ತತ್ರಾಪಿ ಜಾತೌ ಶ್ರೇಷ್ಠಾಯಾಂ ಧರ್ಮಸ್ಯೋತ್ಕರ್ಷಣೇನ ತು ॥**

ಮಾನವರು ಹಾವು ಆಗಬಹುದು, ಹೆಣ್ಣು ಹಾವಿನಲ್ಲಿ ಮನುಷ್ಯರಿಂದ ಮನುಷ್ಯರು ಹುಟ್ಟಬಹುದು. ಹೀಗೆ ಪ್ರಾಣಿಗಳ ಉತ್ಪತ್ತಿಯು ಕರ್ಮಾನುಸಾರವಾಗಿದೆ. ಒಳ್ಳೇ ಧರ್ಮ ಮಾಡಿದವರು ಶ್ರೇಷ್ಠ ಜಾತಿಯಲ್ಲಿ ಹುಟ್ಟುತ್ತಾರೆ.

**ಆಪುತ್ರಜನ್ಮನಃ ಶೇಷಾಃ ಪ್ರಾಣಿನಃ ಸಮವಸ್ಥಿತಾಃ ।**

ಮನುಷ್ಯನ ಹೊರತು ಉಳಿದ ಪ್ರಾಣಿಗಳಿಗೆ ಮಕ್ಕಳು ಮರಿಗಳನ್ನು ಹಡೆದು ಅವು ದೊಡ್ಡವರಾದ ಬಳಿಕ ಅವುಗಳ ಪಾಲನ ಪೋಷಣೆ ಮುಂತಾದ ಹೊಣೆಗಾರಿಕೆ ಇರುವದಿಲ್ಲ. ಪುತ್ರ ಸಂಬಂಧ ಕರ್ಮವಿಲ್ಲ.

**ಮನುಜಾಸ್ತತ್ರ ಜಾಯಂತೇ ಯತೋ ನ ಗೃಹಧರ್ಮಿಣಃ ।**
**ಕ್ರಮೇಣಾಶ್ರಮಸಂಪ್ರಾಪ್ತಿ ಬ್ರಹ್ಮಚಾರಿ ವ್ರತಾದನು ॥**

ಮನುಷ್ಯರಿಗೆ ಜನ್ಮದಿಂದ ಗೃಹಸ್ಥಾಶ್ರಮ ಸಂಬಂಧವಿಲ್ಲ. ಬ್ರಹ್ಮಚರ್ಯ ವ್ರತ ಮುಗಿದ ಬಳಿಕ ಆ ಆಶ್ರಮಕ್ಕೆ ಪ್ರವೇಶವಿದೆ.

**ತಸ್ಯ ಕರ್ತುರ್ನಿಯೋಗೇನ ಸಂಸಾರೋ ಯೇನ ವರ್ಧಿತಃ ।**
**ಸಂಸಾರಸ್ಯ ಕುತೋ ವೃದ್ಧಿಸ್ಸರ್ವೇ ಸ್ಯುರ್ಯದತಿಗ್ರಹಾಃ ॥**

ಪ್ರತಿಯೊಬ್ಬನೂ ಸಂಸಾರಸ್ಥನಾಗಿ ಸಂಸಾರ ಬೆಳೆಸಬೇಕೆಂಬುದು ಭಗವಂತನ ಕಟ್ಟಳೆ. ಇದನ್ನು ಉಲ್ಲಂಘಿಸಿದರೆ ಸಂಸಾರದ ಅಭಿವೃದ್ಧಿ ಹೇಗೆ ಸಾಧ್ಯ.

**ಅತಃ ಕರ್ತ್ರಾ ತು ಶಾಸ್ತ್ರೇಷು ಸುತಲಾಭಃ ಪ್ರಶಂಸಿತಃ ।**
**ಪ್ರಾಣಿನಾಂ ಮೋಹನಾರ್ಥಾಯ ನರಕತ್ರಾಣ ಸಂಶ್ರಯಾತ್ ॥**

ಪುತ್ರನು ನರಕದಿಂದ ತಾಯಿ-ತಂದೆಗಳನ್ನು ಉದ್ಧರಿಸುವನು. ಆದುದರಿಂದ ಜನರಿಗೆ ಮೋಹಗೊಳಿಸಲು ಪುತ್ರಲಾಭವನ್ನು ಕೊಂಡಾಡಿದ್ದಾರೆ.

**ಸ್ತ್ರಿಯಾ ವಿರಹಿತಾ ಸೃಷ್ಟಿರ್ಜಂತೂನಾಂ ನೋಪಪದ್ಯತೇ ।**
**ಸ್ತ್ರೀ ಜಾತಿಸ್ತು ಪ್ರಕೃತ್ಯೈವ ಕೃಪಣಾ ದೈನ್ಯಭಾಷಿಣೀ ।**
**ಶಾಸ್ತ್ರಾಽಲೋಚನ ಸಾಮರ್ಥ್ಯಮುಜ್ಝಿತಂ ತಾಸು ವೇಧಸಾ ॥**

ಸ್ತ್ರೀಯಿಲ್ಲದೆ ಸೃಷ್ಟಿಯಿಲ್ಲ. ಅವಳು ಅಸಹಾಯಳು, ಅವಳು ದೈನ್ಯಭಾವನಾಮಯಿ. ಆದರೆ ಅವಳಿಗೆ ಶಾಸ್ತ್ರ, ವಿಚಾರ ಜ್ಞಾನ ಸಾಮರ್ಥ್ಯವನ್ನು ಓದದಿದ್ದರೂ ದೇವರು ಅನುಗ್ರಹಿಸಿದ್ದಾರೆ.

**ಶಾಸ್ತ್ರೇಷೂಕ್ತಮಸಂದಿಗ್ಧಂ ಬಹುವಾರಂ ಮಹಾಫಲಂ ।**
**ದಶಪುತ್ರ ಸಮಾ ಕನ್ಯಾ ಯಾ ನ ಸ್ಯಾಚ್ಛೀಲವರ್ಜಿತಾ ॥**

ಒಳ್ಳೆ ನಡತೆಯುಳ್ಳ ಕನ್ಯೆಯು ಹತ್ತುಜನಪುತ್ರರಿಗೆ ಸಮಾನಳು. ಮತ್ತು ಸತ್ಫಲವನ್ನು ಕೊಡತಕ್ಕವಳೆಂದು ಶಾಸ್ತ್ರಗಳು ಸಾರಿವೆ.

**ವಾಕ್ಯಮೇತತ್ಫಲಭ್ರಷ್ಟಂ ಪುಂಸಾಂ ಗ್ಲಾನಿಕರಂ ಪರಂ ।**
**ಕನ್ಯಾ ಹಿ ಕೃಪಣಾ ಶೋಚ್ಯಾ ಪಿತುರ್ದುಃಖವಿವರ್ಧಿನೀ ॥**

**ಯಾಪಿ ಸ್ಯಾತ್ಪೂರ್ಣಸರ್ವಾರ್ಥಾ ಪತಿಪುತ್ರಧನಾದಿಭಿಃ ।**
**ಕಿಂ ಪುನರ್ದುರ್ಭಗಾ ಹೀನಾ ಪತಿಪುತ್ರಧನಾದಿಭಿಃ ॥**

ಆದರೆ ಈ ವಾಕ್ಯ ಮಾತ್ರದಿಂದ ಮನುಷ್ಯನಿಗೆ ಫಲವಿಲ್ಲ. ಪತಿಪುತ್ರಧನಾದಿಗಳಿಂದ ಪರಿಪೂರ್ಣಳೆನಿಸಿದ ಕನ್ಯೆಯೂ ಅಸಹಾಯಳು. ತಂದೆಗೆ ಅವಳಿಂದ ದುಃಖಹೆಚ್ಚು. ಹೀಗಿರುವಾಗ ದುರದೃಷ್ಟಳು ಪತಿ, ಪುತ್ರ, ಧನಾದಿ ರಹಿತಳಾದವಳ ಬಗ್ಗೆ ಹೇಳುವದೇನು?

**ಸ್ತ್ರೀಣಾಂ ಹಿ ಪರಮಂ ಜನ್ಮ ಕುಲಾನಾಮುಭಯಾತ್ಮನಾಂ ।**
**ಇಹಾಮುತ್ರ ಸುಖಾಯೋಕ್ತಂ ಸತ್ಪತಿಪ್ರಾಪ್ತಿಸಂಜ್ಞಿತಂ ॥**

ಒಳ್ಳೆಯ ಪತಿಯನ್ನು ಪಡೆಯುವ ಅದೃಷ್ಟವಿದ್ದ ಕನ್ಯೆಯು ಹುಟ್ಟಿದ ಹಾಗೂ ಹೊಕ್ಕ ಮನೆಯ ವಂಶಕ್ಕೆ ಸುಖವನ್ನುಂಟುಮಾಡುತ್ತಾಳೆ.

**ದುರ್ಲಭಃ ಸತ್ಪತಿಃ ಸ್ತ್ರೀಣಾಂ ವಿಗುಣೋಽಪಿ ಪತಿಃ ಕಿಲ ।**
**ನ ಪ್ರಾಪ್ಯತೇ ವಿನಾ ಪುಣ್ಯೈಃ ಪತಿರ್ನಾರ್ಯಾ ಕದಾಚನ ॥**

ಸ್ತ್ರೀಯರಿಗೆ ಒಳ್ಳೆಯ ಪತಿಯು ಲಭಿಸುವದು ಬಹು ವಿರಳ. ಏಕೆಂದರೆ ಪುಣ್ಯವಿಲ್ಲದೆ ಹೆಂಗಸಿಗೆ ಗುಣಸಂಪನ್ನನಾದ ಒಳ್ಳೆ ಪತಿಯು ದೊರಕಲಾರನು.

**ಯತೋ ನಿಃಸಾಧನೋ ಧರ್ಮಃ ಪರಿಮಾಣೋಜ್ಝಿತಾ ರತಿಃ ।**
**ಧನಂ ಜೀವಿತಪರ್ಯಾಪ್ತಂ ಪತ್ಯೌ ನಾರ್ಯಾಃ ಪ್ರತಿಷ್ಠಿತಂ ॥**

ಏಕೆಂದರೆ ಮೋಕ್ಷ ಸಾಧನವಾದ ಧರ್ಮ, ಅಪರಿಮಿತವಾದ ಪ್ರೇಮ, ಅಪಾರಸುಖ, ಸಂಸಾರಕ್ಕೆ ಸಾಕಾಗುವಷ್ಟು ಧನ ಇವೆಲ್ಲವೂ ಲಭಿಸುವದು ಆಕೆಗೆ ಪತಿಯಿಂದ ಮಾತ್ರ.

**ನಿರ್ಧನೋ ದುರ್ಭಗೋ ಮೂಖಃ ಸರ್ವ ಲಕ್ಷಣ ವರ್ಜಿತಃ ।**
**ದೈವತಂ ಪರಮಂ ನಾರ್ಯಾಃ ಪತಿರುಕ್ತಃ ಸದೈವ ಹಿ ॥**

ಪತಿಯಾದವನು ಧನರಹಿತನೂ, ಅದೃಷ್ಟಹೀನನೂ, ಮೂರ್ಖನೂ ಆಗಿರಲಿ, ಪತ್ನಿಯು ಅವನನ್ನೇ ದೇವರೆಂದು ಭಾವಿಸಬೇಕು. ಹೆಂಗಸಿಗೆ ಹೇಗೆ ಇದ್ದರೂ ಪತಿಯೇ ಪರದೇವತೆ ಎಂದು ಶಾಸ್ತ್ರದಲ್ಲಿ ಹೇಳಿದೆ.

**ಸಂಸಾರೇ ಜಾಯಮಾನಸ್ಯ ಮ್ರಿಯಮಾಣಸ್ಯ ದೇಹಿನಃ ।**
**ನಶ್ಯತೇ ದೇಹ ಏವಾತ್ರ ನಾತ್ಮನೋ ನಾಶ ಉಚ್ಯತೇ ॥**

ಮಾನವನು ಎಡೆಬಿಡದೆ, ಈ ಸಂಸಾರದಲ್ಲಿ ಹುಟ್ಟಿಸಾಯುವನು. ಅವನ ದೇಹ ಮಾತ್ರ ಹಾಳಾಗುತ್ತದೆ. ಶಾಸ್ತ್ರಗಳಲ್ಲಿ ಆತ್ಮನಾಶವನ್ನು ಹೇಳಿಲ್ಲ.

**ಬ್ರಹ್ಮಾದಿಸ್ಥಾವರಾಂತೋಽಯಂ ಸಂಸಾರೋ ಯಃ ಪ್ರಕೀರ್ತಿತಃ ।**
**ಸ ಜನ್ಮಮೃತ್ಯುದುಃಖಾರ್ತೋ ಹ್ಯವಶಃ ಪರಿವರ್ತತೇ ॥**

ಬ್ರಹ್ಮನಿಂದ ಸ್ಥಾವರದವರೆಗಿನ ಈ ಜಗತ್ತು ಹುಟ್ಟು-ಸಾವುಗಳ ದುಃಖಕ್ಕೀಡಾಗಿ ಪರವಶತೆಯಿಂದ ತೊಳಲುತ್ತದೆ. ಇದಕ್ಕೇ **ಸಂಸಾರ** ಎನ್ನುವರು.

**ಲಕ್ಷಣಂ ದೈವಿಕೋ ಹ್ಯಂಕಃ ಶರೀರಾವಯವಾಶ್ರಯಃ ।**
**ಸರ್ವಾಯುರ್ಧನ ಸೌಭಾಗ್ಯ ಪರಿಮಾಣ ಪ್ರಕಾಶಕಂ ॥**

ಲಕ್ಷಣ ಎಂಬುದು, ಅವಯವದಲ್ಲಿ ಕಂಡುಬರುವ ದೈವದತ್ತ ಕುರುಹು. ಅದು ಆಯುಸ್ಸು, ಧನ, ಸೌಭಾಗ್ಯಗಳನ್ನು ಸೂಚಿಸುತ್ತದೆ.

**ತಪೋಭಿಃ ಪ್ರಾಪ್ಯತೇಽಭೀಷ್ಟಂ ನಾಽಸಾಧ್ಯಂ ಹಿ ತಪಸ್ಯತಃ ।**
**ಭವಿಷ್ಯತಿ ನ ಸಂದೇಹೋ ನಿಯಮೈಃ ಶೋಷಯೇತ್ತನುಂ ॥**

ತಪಸ್ಸಿನಿಂದ ಇಷ್ಟಾರ್ಥಸಿದ್ಧಿ. ತಪಸ್ಸು ಮಾಡುವವನಿಗೆ ಅಸಾಧ್ಯವಾದುದು ಇಲ್ಲ. ಇಂತಹ ಸಾಧನವಿದ್ದರೂ ಜನರು ವ್ಯರ್ಥವಾಗಿ ದುರ್ದೈವಕ್ಕೆ ಗುರಿಯಾಗುತ್ತಾರೆ. ವ್ರತನಿಯಮಗಳಿಂದ ಮುಖ್ಯವಾಗಿ ತಪಸ್ಸಿನಿಂದ ದೇಹವನ್ನು ಶೋಷಿಸಬೇಕು.

**ಭಾವೀನ್ಯಪಿ ವಿಚಾರ್ಯಾಣಿ ಪದಾರ್ಥಾನಿ ಸದೈವ ತು ।**
**ಭಾವಿನೋಽರ್ಥಾ ಭವಂತ್ಯೇವ ಹಠೇನಾಽನಿಚ್ಛತೋಽಪಿ ವಾ ॥**

ಯಾವಾಗಲೂ ಮುಂದೆ ಒದಗಲಿರುವ ಸಂಗತಿಗಳನ್ನು ಚನ್ನಾಗಿ ವಿಚಾರಿಸಬೇಕು. ನಾವು ಇಷ್ಟಪಡದಿದ್ದರೂ ಅವು ಬಂದೇ ಬರುವವು. ಅವುಗಳ ಹಠವೇ ಅದು.

**ದ್ವಿವಿಧಂ ತು ಸುಖಂ ತಾವತ್ಪುತ್ರಿ ಲೋಕೇಷು ಭಾವ್ಯತೇ ।**
**ಶರೀರಸ್ಯಾಸ್ಯ ಸಂಭೋಗೈಶ್ಚೇತಸಶ್ಚಾಪಿ ನಿರ್ವೃತಿಃ ॥**

ಲೋಕದಲ್ಲಿ ಸುಖವು ಎರಡು ವಿಧ. ಶಾರೀರಿಕ ಮತ್ತು ಮಾನಸಿಕ ಎಂದು. ವಿಷಯಗಳ ಅನುಭವದಿಂದ ಆಗುವ ಸುಖ ಶಾರೀರಿಕ ಸುಖ. ವೈರಾಗ್ಯದಿಂದ ಉಂಟಾಗುವ ಸುಖ ಮಾನಸಿಕಸುಖ ಎಂದು ಪ್ರಾಜ್ಞರು ಹೇಳುತ್ತಾರೆ.

**ಲೋಕಯಾತ್ರಾಽನುಗಂತವ್ಯಾ ವಿಶೇಷೇಣ ವಿಚಕ್ಷಣೈಃ ।**
**ಸೇವಂತೇ ತೇ ಯತೋ ಧರ್ಮಂ ತತ್ಪ್ರಾಮಾಣ್ಯಾತ್ಪರೇ ಸ್ಥಿತಾಃ ॥**

ಮುಖ್ಯವಾಗಿ ಜ್ಞಾನಿಗಳು ಲೋಕದ ಆಚಾರ-ವಿಚಾರ ಬಿಡದೆ, ಅನುಸರಿಸಬೇಕು. ಅವರಂತೆ ಇನ್ನುಳಿದವರೂ ಜ್ಞಾನಿಗಳನ್ನು ನಂಬಿ, ತಾವೂ ಹಾಗೆಯೇ ಧರ್ಮವನ್ನು ಆಚರಿಸುವರು.

**ಕುಲಂ ಜನ್ಮ ವಯೋ ರೂಪ ವಿಭೂತ್ಯರ್ದ್ಧಿಯುತೋಽ ಹಿ ಯಃ ।**
**ವರಸ್ತಸ್ಯಾಪಿ ಚಾಹೂಯ ಸುತಾ ದೇಯಾ ಹ್ಯಯಾಚತಃ ॥**

ಕುಲ, ಜನ್ಮ, ವಯಸ್ಸು, ರೂಪ, ಸಂಪತ್ತು ಇವುಗಳಿಂದ ಕೂಡಿದ ವರನನ್ನು ಅವನು ತಾನಾಗಿ ಅಪೇಕ್ಷಿಸದಿದ್ದರೂ ಪ್ರಯತ್ನದಿಂದ ಕರೆದು ಕನ್ಯೆಯನ್ನು ಕೊಡಬೇಕು.

**ಪ್ರಾಯಃ ಸುತಫಲೋ ಲೋಕಃ ಪುತ್ರಿ ಪುಣ್ಯೈಶ್ಚ ಲಭ್ಯತೇ ।**
**ಅಪುತ್ರಾಶ್ಚ ಪ್ರಜಾಃ ಪ್ರಾಯೋ ದೃಶ್ಯಂತೇ ದೈವಹೇತುತಃ ॥**

ಲೋಕದಲ್ಲಿ ಪುತ್ರಲಾಭವೇ ಬದುಕಿನ ಫಲ. ಅದಕ್ಕೆ ಪುಣ್ಯ ಬೇಕು. ಜನರಿಗೆ ಸಂತಾನವಾಗದಿರುವದು ಅವರ ಅದೃಷ್ಟವೇ ಕಾರಣ.

**ಏವಂ ನಿರುದಕೇ ದೇಶೇ ಯಃ ಕೂಪಂ ಕಾರಯೇದ್ಬುಧಃ ।**
**ಬಿಂದೌ ಬಿಂದೌ ಚ ತೋಯಸ್ಯ ವಸೇತ್ಸಂವತ್ಸರಂ ದಿವಿ ॥**

ನೀರಿಗೆ ತೊಂದರೆಯಾದಲ್ಲಿ ಭಾವಿ ತೋಡಿಸುವ ಪ್ರಾಜ್ಞನು ಒಂದೊಂದು ತೊಟ್ಟು ನೀರಿಗೂ ಒಂದು ವರ್ಷದಂತೆ ಸ್ವರ್ಗದಲ್ಲಿ ಅನಂತಕಾಲ ವಾಸಿಸುವನು.

**ಸ್ವಕೃತೇನ ಜನಃ ಸರ್ವೋ ಜಾಡ್ಯೇನ ಪರಿಭೂಯತೇ ।**
**ಅವಶ್ಯಮರ್ಥೀ ಪ್ರಾಪ್ನೋತಿ ಖಂಡನಾಂ ಜನಮಂಡಲೇ ॥**

ಜನರೆಲ್ಲರೂ ತಾವಾಗಿ ಮಾಡಿಕೊಂಡ ಬುದ್ಧಿದೋಷದಿಂದ ತಿರಸ್ಕಾರಕ್ಕೆ ಗುರಿಯಾಗುತ್ತಾರೆ. ಯಾಚಕನಿಗೆ ಜನಸಮುದಾಯದಲ್ಲಿ ನಿಂದೆ ಬರುತ್ತದೆ.

ಅಹಂಕಾರಗೃಹೀತಾಶ್ಚ ಪ್ರಕ್ಷೀಣಸ್ನೇಹ ಬಂಧನಾಃ ।
ವಿಪ್ರಾಃ ಶೂದ್ರಸಮಾಚಾರಾಃ ಸಂತಿ ಸರ್ವೇ ಕಲೌ ಯುಗೇ ॥

ಕಲಿಯುಗದಲ್ಲಿ ಬ್ರಾಹ್ಮಣರೆಲ್ಲರೂ ಮದಾಂಧರಾಗುವರು. ಸ್ನೇಹಪಾಶಗಳು ಹರಿಯುವವು. ಅವರ ಆಹಾರ ಆಚಾರಗಳು ಶೂದ್ರರಂತೆ ಆಗುವವು.

ಆಶ್ರಮಾಣಾಂ ವಿಪರ್ಯಾಸಃ ಕಲೌ ಸಂಪರಿವರ್ತತೇ ।
ವರ್ಣಾನಾಂ ಚೈವ ಸಂದೇಹೋ ಯುಗಾಂತೇ ರವಿನಂದನ ॥

ಕಲಿಯುಗದ ಕೊನೆಗೆ ವರ್ಣ ಆಶ್ರಮಗಳೆಲ್ಲ ತಿರುವುಮುರುವಾಗುತ್ತವೆ. ಬ್ರಾಹ್ಮಣಾದಿ ವರ್ಣಗಳು ಆಗ ಇರುವದೇ ಸಂದಿಗ್ಧವಾಗುತ್ತದೆ.

## ಬ್ರಹ್ಮಚರ್ಯದ ಮಹತ್ವ

ಆರ್ಷಂ ವೈ ಸೇವತಃ ಕರ್ಮ ವನ್ಯಮೂಲ ಫಲಾಶಿನಃ
"ಬ್ರಹ್ಮಯೋನೌ ಪ್ರಸೂತಸ್ಯ ಬ್ರಾಹ್ಮಣಸ್ಯಾತ್ಮದರ್ಶಿನಃ ।
ಬ್ರಹ್ಮಚರ್ಯಂ ಸುಚರಿತಂ ಬ್ರಹ್ಮಾಣಮಪಿ ಚಾಲಯೇತ್ ॥"

ಬ್ರಾಹ್ಮಣ ತಾಯಿ ತಂದೆಯಿಂದ ಹುಟ್ಟಿ, ಬ್ರಹ್ಮಜ್ಞಾನವನ್ನೂ ಪಡೆದ ನಿಜವಾದ ಬ್ರಾಹ್ಮಣನು ಬ್ರಹ್ಮಚರ್ಯ ವ್ರತವನ್ನು ಚನ್ನಾಗಿ ಪಾಲಿಸಿಕೊಂಡು ಬಂದರೆ ಅವನು ಬ್ರಹ್ಮದೇವರನ್ನೂ ಕೂಡಾ ನಡುಗಿಸಬಲ್ಲನು.

## ಬ್ರಾಹ್ಮಣತ್ವದ ಮೂಲ

"ಬ್ರಹ್ಮಚರ್ಯಾದ್ ಬ್ರಾಹ್ಮಣಸ್ಯ ಬ್ರಾಹ್ಮಣತ್ವಂ ವಿಧೀಯತೇ ।
ಏವಮಾಹುಃ ಪರೇ ಲೋಕೇ ಬ್ರಹ್ಮಚರ್ಯವಿದೋ ಜನಾಃ ॥"

ಬ್ರಾಹ್ಮಣನಿಗೆ ಬ್ರಾಹ್ಮಣತ್ವವು ಬರುವದು ಬ್ರಹ್ಮಚರ್ಯದಿಂದಲೇ. ಅಖಂಡ ಬ್ರಹ್ಮಚರ್ಯದಿಂದ ಇದ್ದು, ವೇದಾಧ್ಯಯನಮಾಡಿ ಬ್ರಹ್ಮಜ್ಞಾನ ಸಂಪಾದಿಸಿದವನೇ **'ಬ್ರಾಹ್ಮಣ'** ಎಂದು ಬ್ರಹ್ಮಚರ್ಯದ ಮಹತ್ವವನ್ನು ಅರಿತ ಪಂಡಿತರು ಹೇಳುತ್ತಾರೆ.

## ಸರ್ವವೂ ಬ್ರಹ್ಮಚರ್ಯದಿಂದಲೇ

"ಬ್ರಹ್ಮಚರ್ಯೇ ಸ್ಥಿತಂ ಧೈರ್ಯಂ ಬ್ರಹ್ಮಚರ್ಯೇ ಸ್ಥಿತಂ ತಪಃ ।
ಯೇ ಸ್ಥಿತಾ ಬ್ರಹ್ಮಚರ್ಯೇಷು ಬ್ರಾಹ್ಮಣಾ ದಿವಿ ಸಂಸ್ಥಿತಾಃ ॥"

ಮನುಷ್ಯರಿಗೆ ಧೈರ್ಯ, ಶೌರ್ಯಗಳು, ತೇಜಸ್ಸು ಬರುವದು ಬ್ರಹ್ಮಚರ್ಯದಿಂದಲೇ, ತಪಸ್ಸಿಗೆ ಬ್ರಹ್ಮಚರ್ಯವೇ ಮೂಲಾಧಾರ. ಇಲ್ಲಿ ಸರಿಯಾಗಿ ಬ್ರಹ್ಮಚರ್ಯವ್ರತ ಪಾಲಿಸಿದವರು, ಭೂಲೋಕದಲ್ಲಿದ್ದರೂ ಸ್ವರ್ಗಲೋಕದಲ್ಲಿ ಇದ್ದಂತೆ. ಸ್ವರ್ಗದ ಸಿದ್ಧಿ, ಸತ್ವ ಕಾಂತಿಗಳು ಇಲ್ಲಿಯೇ ಅವರಲ್ಲಿ ಸೂಸುತ್ತವೆ. ಮುಂದೆ ಅವರಿಗೆ ಸ್ವರ್ಗ ಪ್ರಾಪ್ತಿಯಂತೂ ಕಟ್ಟಿಟ್ಟ ಬುತ್ತಿ.

''ನಾಸ್ತಿ ಯೋಗಂ ವಿನಾ ಸಿದ್ಧಿರ್ನವಾ ಸಿದ್ಧಿಂ ವಿನಾ ಯಶಃ ।
ನಾಸ್ತಿ ಲೋಕೇ ಯಶೋಮೂಲಂ ಬ್ರಹ್ಮಚರ್ಯಾತ್ ಪರಂತಪ ॥''

ಯೋಗವಿಲ್ಲದೆ ಸಿದ್ಧಿಯಿಲ್ಲ. ಸಿದ್ಧಿಯಿಲ್ಲದೆ ಯಶಸ್ಸು ಇಲ್ಲ. ಆ ಯಶಸ್ಸಿಗೆ ಬ್ರಹ್ಮಚರ್ಯದ ಹೊರತು ಬೇರೆಯ ಕಾರಣವಿಲ್ಲ. ಆದುದರಿಂದ ಶ್ರೇಷ್ಠವಾದ ಬ್ರಹ್ಮಚರ್ಯ ವ್ರತವನ್ನು ಪಾಲಿಸಿ, ಅದರಿಂದ ಯಶಸ್ಸನ್ನೂ ಯೋಗಸಿದ್ಧಿಯನ್ನೂ ಪಡೆಯಬೇಕು.

''ಯೋ ನಿಗೃಹ್ಯೇಂದ್ರಿಯಗ್ರಾಮಂ ಭೂತಗ್ರಾಮಂ ಚ ಪಂಚಕಮ್ ।
ಬ್ರಹ್ಮಚರ್ಯಂ ಸಮಾಧತ್ತೇ ಕಿಮತಃ ಪರಮಂ ತಪಃ ॥''

ಎಲ್ಲ ಇಂದ್ರಿಯಗಳನ್ನು ನಿಗ್ರಹಿಸಿ, ಪಂಚಮಹಾಭೂತಗಳನ್ನು ಗೆದ್ದು, ಅಖಂಡ ಬ್ರಹ್ಮಚರ್ಯವ್ರತವನ್ನು ಪಾಲಿಸುವದೇ ದೊಡ್ಡ ತಪಸ್ಸು. ಇದಕ್ಕಿಂತ ಹೆಚ್ಚಿನ ತಪಸ್ಸು ಯಾವದಿದೆ ?

''ಅಯೋಗೇ ಕೇಶಧರಣಮಸಂಕಲ್ಪ ವ್ರತ ಕ್ರಿಯಾ ।
ಅಬ್ರಹ್ಮಚರ್ಯೇ ಚರ್ಯಾ ಚ ತ್ರಯಂ ಸ್ಯಾದ್ ದಂಭಸಂಜ್ಞಕಮ್ ॥''

ಯೋಗಸಿದ್ಧಿಯಿಲ್ಲದೆ, ಸುಮ್ಮನೇ ಜಟಾಧಾರಣ, ಸಂಕಲ್ಪವಿಲ್ಲದೆ ಧರ್ಮಕಾರ್ಯ ಮಾಡುವದು, ಹಾಗೂ ಬ್ರಹ್ಮಚರ್ಯವಿಲ್ಲದೆ ಪುಣ್ಯಕಾರ್ಯ ಕೈಕೊಳ್ಳುವದು ಈ ಮೂರು ದಂಭ ಎಂದು ಕರೆಯಲ್ಪಡುವವು.

''ಮನಸಾ ನಿರ್ಮಿತಾ ಯೋನಿರಾಧಾತವ್ಯಾ ತಪಸ್ವಿಭಿಃ ।
ನ ದಾರಯೋಗೋ ಬೀಜಂ ವಾ ವ್ರತಮುಕ್ತಂ ತಪಸ್ವಿನಾಮ್ ॥''

ನಿಜವಾದ ತಪಸ್ವಿಗಳು, ತಮ್ಮ ಮನೋಬಲದಿಂದ ಅಥವಾ ಸಂಕಲ್ಪ ಶಕ್ತಿಯಿಂದಲೇ, ಪ್ರಜಾಸೃಷ್ಟಿಯನ್ನು ಮಾಡಬೇಕು. ಮದುವೆಯಾಗಿ, ಮಡದಿಯನ್ನು ಕಟ್ಟಿಕೊಂಡು ಸಂತಾನ ಅಭಿವೃದ್ಧಿ ಮಾಡುವದು ದೊಡ್ಡ ತಪಸ್ವಿಗಳ ಕರ್ತವ್ಯವಲ್ಲ, ವ್ರತವೂ ಅಲ್ಲ.

## ಸಮವಿಲ್ಲದ ಮೂರು

''ಮತ್ಸಮಃ ಪುರುಷೋ ನಾಸ್ತಿ ತ್ವತ್ಸಮಾ ನಾಸ್ತಿ ಯೋಷಿತಾಮ್ ।
ಅವಿಮುಕ್ತಂ ಸಮಂ ಕ್ಷೇತ್ರ ನ ಭೂತಂ ನ ಭವಿಷ್ಯತಿ ॥''

ಪುರುಷರಲ್ಲಿ ನನಗೆ ಅರ್ಥಾತ್ ಶಿವನಿಗೆ ಸರಿಯಾದವರಿಲ್ಲ. ಸ್ತ್ರೀಯರಲ್ಲಿ ನಿನಗೆ ಅಂದರೆ ಪಾರ್ವತಿಗೆ ಯಾರೂ ಸಮರಿಲ್ಲ. ಈ ಅವಿಮುಕ್ತ ಕ್ಷೇತ್ರವಾದ ಕಾಶಿಗೆ ಸಮವಾದ ಪುಣ್ಯಕ್ಷೇತ್ರವು ಹಿಂದೆ ಇರಲಿಲ್ಲ. ಮುಂದೆ ಆಗುವದಿಲ್ಲ. ಈಗಂತೂ ಇಲ್ಲವೇ ಇಲ್ಲ.

## ನರ್ಮದೆಯ ವೈಶಿಷ್ಟ್ಯ

ಪುಣ್ಯಾ ಕನಖಲೇ ಗಂಗಾ ಕುರುಕ್ಷೇತ್ರೇ ಸರಸ್ವತೀ ।
ಗ್ರಾಮೇ ವಾ ಯದಿ ವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ।
ತ್ರಿಭಿಃ ಸಾರಸ್ವತಂ ತೋಯಂ ಸಪ್ತಾಹೇನ ತು ಯಾಮುನಮ್ ।
ಸದ್ಯಃ ಪುನಾತಿ ಗಾಂಗೇಯಂ ದರ್ಶನಾದೇವ ನಾರ್ಮದಮ್ ॥

ಕನಖಲಕ್ಷೇತ್ರದಲ್ಲಿ ಗಂಗಾನದಿಯು ಅತ್ಯಂತ ಪವಿತ್ರ. ಕುರುಕ್ಷೇತ್ರದಲ್ಲಿ ಸರಸ್ವತಿ ಪರಮ ಪಾವನಿ. ಆದರೆ ನರ್ಮದಾ ಮಾತ್ರ ಕಾಡಿನಲ್ಲೇ ಹರಿಯಲಿ, ನಾಡಿನಲ್ಲೇ ಪ್ರವಹಿಸಲಿ, ಎಲ್ಲಿಯೇ ಇದ್ದರೂ ಅತ್ಯಂತ ಪವಿತ್ರವಾಗಿದೆ.

ಸರಸ್ವತಿಯ ನೀರಿನಲ್ಲಿ ಮೂರುದಿನ ಸ್ನಾನ ಮಾಡಿದರೆ ಉದ್ಧಾರವಾಗುವದು. ಯಮುನಾ ನದಿಯಲ್ಲಿ ಏಳು ದಿನದ ಸ್ನಾನದಿಂದ ಶುದ್ಧಿ, ಗಂಗಾ ನದಿಯಲ್ಲಿ ಸ್ನಾನ ಮಾಡಿದ ಕೂಡಲೇ ಉದ್ಧಾರವಾಗುವದು. ಆದರೆ ನರ್ಮದಾ ನದಿಯು ಮಾತ್ರ ಕೇವಲ ದರ್ಶನ ದಿಂದಲೇ ಭಕ್ತರನ್ನು ಉದ್ಧರಿಸುವದು. ಇನ್ನು ಸ್ನಾನಪಾನಮಾಡಿದರೆ ಕೇಳುವದೇನು?

## ಧರ್ಮಕಾರ್ಯದಲ್ಲಿ ತ್ವರೆ

''ನ ಚ ಮೇ ಸೌಹೃದಂ ಬ್ರಹ್ಮನ್ ಕೃತಾಂತೇನ ಬಲೀಯಸಾ ।
**ಧರ್ಮಕಾರ್ಯೇ ತ್ವರಾ ಕಾರ್ಯಾ ಚಲಂ ಯಸ್ಮಾದ್ಧಿ ಜೀವಿತಮ್ ॥''**

ಪುಣ್ಯಕಾರ್ಯ ಮಾಡುವಾಗ ಇಂದು, ನಾಳೆ ಎಂದು ಆಲಸ್ಯ ಮಾಡಬಾರದು. ನಮಗೇನು ಯಮರಾಜನೊಡನೆ ಸ್ನೇಹ-ನೆಂಟಸ್ತಿಕೆ ಇರುವದಿಲ್ಲ. ಈ ಜೀವನವು ಅತ್ಯಂತ ಚಂಚಲವಾಗಿರುತ್ತದೆ. ಆದುದರಿಂದ ಪುಣ್ಯಕಾರ್ಯಗಳನ್ನು ಆದಷ್ಟು ತ್ವರಿತಗತಿಯಿಂದಲೇ ಮಾಡಬೇಕು.

## ನಾಳಿನದನ್ನು ಇಂದೇ ಮಾಡಬೇಕು

''ಧರ್ಮಪಥ್ಯೌದನೋ ಜಂತುರ್ಮೃತೋಽಪಿ ಸುಖಮಶ್ನುತೇ ।
ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ನೇಚಾಪರಾಹ್ಣಿಕಮ್ ॥''

## ಸಾವು ಕಾಯುವದಿಲ್ಲ

''ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ಚಾಸ್ಯ ನ ವಾ ಕೃತಮ್ ।
ಕ್ಷೇತ್ರಾಽಪಣ ಗೃಹಾಽಸಕ್ತಮನ್ಯತ್ರ ಗತ ಮಾನಸಮ್ ॥''

ಧರ್ಮದ ಬುತ್ತಿಯನ್ನು ಕಟ್ಟಿಕೊಂಡ ಮನುಷ್ಯನು ಸತ್ತರೂ ಕೂಡ ಚಿಂತಿಸುವ ಕಾರಣವಿಲ್ಲ. ಅವನು ಎಲ್ಲಿ ಹೋದರೂ ಯಾವ ಲೋಕದಲ್ಲಿದ್ದರೂ ಸುಖವನ್ನೇ ಹೊಂದುತ್ತಾನೆ. ಆದುದರಿಂದ 'ನಾಳೆ' ಮಾಡಬೇಕಾದ ಧರ್ಮಕಾರ್ಯವನ್ನು ಇಂದೇ ಮಾಡಬೇಕು. ಸಂಜೆಗೆ ಮಾಡಬೇಕಾದದ್ದನ್ನು ಮುಂಜಾವಿನಲ್ಲೆ ಮಾಡಬೇಕು. ಮೃತ್ಯುವು ಯಾರ ದಾರಿಯನ್ನು ಕಾಯುವದಿಲ್ಲ. ಮಾನವನ ಹೊಲ, ಮನೆ ವ್ಯವಹಾರ ಮುಂತಾದ ಕಾರ್ಯಗಳು ಪೂರೈಸುವವರೆಗೆ ತಡೆಯುವದಿಲ್ಲ. ಏನೇ ಇರಲಿ ಎಲ್ಲಿಯೇ ಅವನ ಮನಸ್ಸು ಹೋಗಿರಲಿ. ಹೇಗೆಯೇ ಇರಲಿ ಸಮಯ ಬಂದಕೂಡಲೇ ಸಾವು ಎರಗಿಬಿಡುವದು.

"ವೃಕಶ್ಚೋರಣಮಾಸಾದ್ಯ ಮೃತ್ಯುರಾದಾಯ ಗಚ್ಛತಿ ।
ನೈಕಾಂತೇನ ಪ್ರಿಯಃ ಕಶ್ಚಿತ್ ದ್ವೇಷ್ಯಶ್ಚಾಸ್ಯ ನ ವಿದ್ಯತೆ ॥

ಆಯುಷ್ಯೆ ಕರ್ಮಣಿ ಕ್ಷೀಣೇ ಪ್ರಸಹ್ಯ ಹರತೇ ಜನಮ್ ।
ಪ್ರಾಣವಾಯೋಶ್ಚಲತ್ವಂ ಚ ತ್ವಯಾ ವಿದಿತಮೇವ ಚ ॥"

ಅವನ ಕರ್ಮವು ಒದಗಿ ಬಂದಾಗ ಆಯುಷ್ಯವು ಕ್ಷೀಣವಾದ ಕೂಡಲೇ ಸಾವು ಪ್ರಾಣಿಗಳ ಮೇಲೆ ಎರಗಿ ಜೀವವನ್ನು ಸೆಳೆದು ಒಯ್ಯುತ್ತದೆ. ತೋಳವು ಕುರಿಯನ್ನು ಅದರ ಮೇಲೆ ಎರಗಿ ಅದನ್ನು ಎಳೆದೊಯ್ಯುವಾಗ ಎಂದಾದರೂ ಅದರ ಸುಖ-ದುಃಖಗಳನ್ನು ವಿಚಾರಿಸುವದೆ? ಮೃತ್ಯುವಿಗೆ ಯಾರೂ ಮಿತ್ರರಿಲ್ಲ. ಯಾರೂ ಶತ್ರುಗಳೂ ಅಲ್ಲ. ಪ್ರಾಣವಾಯು ಚಂಚಲವೆಂಬುದು ನಿಮಗೆಲ್ಲ ತಿಳಿದೇ ಇದೆ.

### ಇಷ್ಟು ಬದುಕಿದ್ದದ್ದೇ ಆಶ್ಚರ್ಯ

"ಯದತ್ರ ಜೀವ್ಯತೇ ಬ್ರಹ್ಮನ್ ಕ್ಷಣಮಾತ್ರಂ ತದದ್ಭುತಮ್ ।
ಶರೀರಂ ಶಾಶ್ವತಂ ಮನ್ಯೇ ವಿದ್ಯಾಭ್ಯಾಸೇ ಧನಾರ್ಜನೇ ॥"

ಜೀವನವು ಇಷ್ಟು ಅಶಾಶ್ವತವೂ ಕ್ಷಣಭಂಗುರವೂ ಆಗಿರುವಾಗ, ಪ್ರಾಣಿಯು ಒಂದು ಕ್ಷಣ ಮಾತ್ರವಾದರೂ ಬದುಕಿದ್ದದ್ದೇ ಅತ್ಯಾಶ್ಚರ್ಯ ಎನ್ನಬಹುದು. ಆದರೆ ವಿದ್ಯೆಯನ್ನು ಸಂಪಾದಿಸುವಾಗ, ದ್ರವ್ಯ ಗಳಿಸುವಾಗ ಈ ದೇಹವು ಶಾಶ್ವತವೆಂದು ತಿಳಿದೇ ಸಂಪಾದನೆಗೆ ಹೊರಡಬೇಕು.

### ಈಯಲಾದ ಹಸುವಿನ ದಾನ

"ಪ್ರಸೂಯಮಾನಾಂ ಗಾಂ ದತ್ವಾ ಮಹತ್ಪುಣ್ಯಫಲಂ ಲಭೇತ್ ।
ಯಾವದ್ವತ್ಸೋ ಯೋನಿಗತೋ ಯಾವದ್ಗರ್ಭಂ ನ ಮುಂಚತಿ ॥"

ಕರುವು ಇನ್ನೂ ತಾಯಿಯ ಗರ್ಭ ಬಿಟ್ಟು ಹೊರಗೆ ಬಾರದೇ ತುಸುಮಾತ್ರ ಕೆಚ್ಚಲದಿಂದ ಹೊರಗೆ ಕಾಣಿಸಿಕೊಳ್ಳುತ್ತಿರುವಾಗ ತುಂಬ ಈಯಲಾದ ಆಕಳವನ್ನು ದಾನಕೊಟ್ಟರೆ ವಿಶೇಷವಾದ ಪುಣ್ಯವು ಬರುತ್ತದೆ.

### ಗೋದಾನ-ಭೂದಾನ

"ತಾವದ್ವೈ ಪೃಥವೀ ಜ್ಞೇಯಾ ಸಶೈಲ ವನ ಕಾನನಾ ।
ಪ್ರಸೂಯಮಾನಾಂ ಯೋ ದದ್ಯಾದ್ಧೇನುಂ ದ್ರವಿಣ ಸಂಯುತಾಮ್ ॥"

ಕರುಹಾಕುತ್ತಿರುವ ಈಯಲಾದ ಹಸುವನ್ನು ದಕ್ಷಿಣೆಯೊಂದಿಗೆ ದಾನಕೊಟ್ಟರೆ ಬೆಟ್ಟ, ಬಯಲು, ಸಹಿತವಾದ ಸಮಗ್ರ ಭೂಮಂಡಲವನ್ನೇ ದಾನಕೊಟ್ಟಂತೆ.

"ಸ ಸಮುದ್ರ ಗುಹಾ ತೇನ ಸ ಶೈಲ ವನ ಕಾನನಾ ।
ಚತುರಂತಾ ಭವೇದ್ದತ್ತಾ ಪೃಥಿವೀ ನಾತ್ರ ಸಂಶಯಃ ॥"

ಇಂತಹ ಧೇನುವನ್ನು ದಾನಮಾಡಿದ ಮನುಷ್ಯನು ನಾಲ್ಕು ಸಮುದ್ರ, ಗುಡ್ಡ ಗುಹೆ ಸಹಿತವಾದ ಭೂಮಿಯನ್ನು ಪ್ರದಾನ ಮಾಡಿದಂತಹ ಪುಣ್ಯ ಪಡೆಯುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

**''ಯಾವಂತಿ ಧೇನುರೋಮಾಣಿ ವತ್ಸಸ್ಯ ಚ ನರಾಧಿಪ ।**
**ತಾವತ್ಸಂಖ್ಯಂ ಯುಗಗಣಂ ದೇವಲೋಕೇ ಮಹೀಯತೆ ॥''**

ಆ ಹಸುವಿನ ಹಾಗೂ ಕರುವಿನ ಮೈಮೇಲಿನ ಕೂದಲುಗಳಷ್ಟು ವರ್ಷ ದೇವಲೋಕದಲ್ಲಿ ಪೂಜಿತನಾಗುತ್ತಾನೆ.

## ಬಿಳಿ ಹೆಣ್ಣು ಕರಿ ಎತ್ತು

**''ಏಷ್ಟವ್ಯಾಽ ಬಹವಃ ಪುತ್ರಾ ಯದ್ಯೇಕೋಽ ಪಿ ಗಯಾಂ ವ್ರಜೇತ್ ।**
**ಗೌರೀಂ ಚಾ ಪ್ಯುದ್ವಹೇತ್ಕನ್ಯಾಂ ನೀಲಂ ವಾ ವೃಷಮುತ್ಸೃಜೇತ್ ॥''**

ಬಹಳ ಜನ ಮಕ್ಕಳಾಗಬೇಕೆಂದು ದೇವತಾರಾಧನೆ ಮಾಡಬೇಕು. ಯಾಕೆಂದರೆ ಅವರಲ್ಲಿ ಒಬ್ಬನಾದರೂ ಗಯಾ ಕ್ಷೇತ್ರಕ್ಕೆ ಹೋಗಿ ವಿಷ್ಣು ಪಾದದ ಮೇಲೆ ಪಿಂಡಹಾಕಿ ಪಿತೃಗಳನ್ನು ಉದ್ಧರಿಸುವನು. ಮದುವೆ ಮಾಡಿಕೊಳ್ಳುವುದಾದರೆ ಗೌರವರ್ಣದ ಗೌರಿಯಂತೆ ಪತಿವ್ರತೆಯಾದ ಕನ್ಯೆಯನ್ನೇ ಮದುವೆಯಾಗಬೇಕು. ದೇವರಿಗೆ ಎತ್ತನ್ನು ಬಿಡುವದಾದರೆ ಕರಿ ಎತ್ತನ್ನೇ ಬಿಡಬೇಕು.

## ಮೂರರ ಸೇವೆ ಮೂರು ಲೋಕ

**''ಇಮಂ ಲೋಕಂ ಮಾತೃಭಕ್ತ್ಯಾ ಪಿತೃಭಕ್ತ್ಯಾತು ಮಧ್ಯಮಮ್ ।**
**ಗುರುಶುಶ್ರೂಷಯಾ ಚೈವ ಬ್ರಹ್ಮಲೋಕಂ ಸಮಶ್ನುತೇ ॥''**

ತಾಯಿಯ ಸೇವೆ ಮಾಡಿದರೆ ಭೂಲೋಕದ ಆಧಿಪತ್ಯ ದೊರೆಯುವದು. ತಂದೆಯ ಸೇವೆಯಿಂದ ಸ್ವರ್ಗಲೋಕ ಪ್ರಾಪ್ತಿ. ಗುರುಗಳ ಸೇವೆಮಾಡಿದರೆ ಬ್ರಹ್ಮಲೋಕ ಪ್ರಾಪ್ತಿಯಾಗುವದು.

**''ಸರ್ವೇ ತಸ್ಯಾಽದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ ।**
**ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥''**

ಯಾರು ತಾಯಿ, ತಂದೆ ಹಾಗೂ ಗುರು ಈ ತ್ರಿಮೂರ್ತಿಗಳ ಸೇವೆಯನ್ನು ಮಾಡುವನೋ ಅವನು ಎಲ್ಲ ಧರ್ಮಗಳನ್ನು ಗೌರವದಿಂದ ಆಚರಿಸಿದಂತೆ. ಈ ಮೂವರ ಸೇವೆಯನ್ನು ಆಚರಿಸದೆ ಇದ್ದ ಮನುಷ್ಯನು ಎಂತಹ ಪುಣ್ಯ ಕಾರ್ಯ ಮಾಡಿದರೂ ಅವೆಲ್ಲವೂ ವ್ಯರ್ಥವೇ ಸರಿ.

## ಈ ಮೂರು ಮಾಡಿದವರಿಗೆ ಬೇರೆ ಧರ್ಮವೇಕೆ

**''ಯಾವತ್ತ್ರಯಸ್ತೇಜೀವೇಯುಸ್ತಾವನ್ನಾನ್ಯಂ ಸಮಾಚರೇತ್ ।**
**ತೇಷಾಂ ಚ ನಿತ್ಯಂ ಶುಶ್ರೂಷಾಂ ಕುರ್ಯಾತ್ಪ್ರಿಯ ಹಿತೇ ರತಃ ।**

**ತೇಷಾಮನುಪರೋಧೇನ ಪಾರತಂತ್ರ್ಯಂ ಯದಾಽ ಚರೇತ್ ।**
**ತತ್ತನ್ನಿವೇದಯತ್ತೇಭ್ಯೋ ಮನೋ ವಚನ ಕರ್ಮಭಿಃ ॥''**

ಅವರು ಮೂವರು ಅಂದರೆ ತಾಯಿ, ತಂದೆ, ಗುರುಗಳು ಬದುಕಿರುವವರೆಗೆ ಬೇರೆ ಯಾವ ಕಾರ್ಯವನ್ನು ಅವರ ಇಚ್ಛೆಗೆ ವಿರುದ್ಧವಾಗಿ ಮಾಡಬಾರದು. ಯಾವಾಗಲೂ ಅವರ ಸೇವೆಯನ್ನೇ ಮಾಡುತ್ತಿರಬೇಕು. ಅವರಿಗೆ ಪ್ರಿಯವಾದದ್ದನ್ನೇ ಆಚರಿಸಬೇಕು. ಹಿತವಾದದ್ದನ್ನೇ ಗೈಯಬೇಕು. ಅವರಿಗೆ ಬಾಧಕವಾಗದಂತೆ ಅವರ ಅಪ್ಪಣೆಯಿಂದ ಬೇರೆ ಉದ್ಯೋಗ ಅಥವಾ ವ್ಯವಹಾರ ಮಾಡಿದರೆ ಅದರಿಂದ ಬಂದ ಲಾಭಾಂಶವೆಲ್ಲ ಅವರ ಹಿತಕ್ಕಾಗಿ ಹಾಗೂ ಅವರಿಗೆ ವಿಧೇಯವಾದ ತನ್ನ ಕುಟುಂಬಕ್ಕೂ ಉಪಯೋಗಿಸಬೇಕು. ಮನಸ್ಸು, ಮಾತು, ಕೃತಿ ಮೂರರಿಂದಲೂ ಅವರಿಗೆ ಸಂತೋಷವಾಗುವಂತೆ ಸೇವೆ ಮಾಡಬೇಕು.

## ಪತಿಯೇ ದೇವರು

**''ಪತಿರ್ಹಿ ದೈವತಂ ಸ್ತ್ರೀಣಾಂ ಪತಿರೇವ ಪರಾಯಣಮ್ ।**
**ಅನುಗಮ್ಯಃ ಸ್ತ್ರಿಯಾ ಸಾಧ್ವ್ಯಾ ಪತಿಃ ಪ್ರಾಣಧನೇಶ್ವರಃ ॥''**

ನಾರಿಯರಿಗೆ ಪತಿಯೇ ಪರದೇವತೆ. ಅವನೇ ಮುಖ್ಯ ಆಧಾರ. ಸ್ತ್ರೀಯರ ಎಲ್ಲ ಸೊತ್ತು, ಸಂಪತ್ತು, ಪಂಚಪ್ರಾಣಗಳಿಗೂ ಪತಿಯೇ ಒಡೆಯನಾಗಿರುತ್ತಾನೆ. ಆದುದರಿಂದ ಪತಿವ್ರತಾಸ್ತ್ರೀಯರು ಗಂಡನನ್ನೇ ಎಲ್ಲ ವಿಧದಿಂದಲೂ ಅನುಸರಿಸಬೇಕು.

## ಪತಿಯಿಂದಲೇ ಅಮಿತ ಸುಖ

**''ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ।**
**ಅಮಿತಸ್ಯ ಚ ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥''**

ತಂದೆಯು ಪರಿಮಿತವಾದ ಸುಖ-ಸೌಭಾಗ್ಯಗಳನ್ನು ಸ್ತ್ರೀಯರಿಗೆ ಕೊಡುತ್ತಾನೆ. ಅಣ್ಣ- ತಮ್ಮಂದಿರೂ ಅಷ್ಟೇ! ಮಕ್ಕಳು ಕೊಡುವ ಸುಖವೂ ಅಷ್ಟಕ್ಕಷ್ಟೆ! ಆದರೆ ಪತಿಯು ನೀಡುವ ಸುಖ-ಸೌಭಾಗ್ಯಗಳಿಗೆ ಮೇರೆಯಿಲ್ಲ ಪತಿಯೊಬ್ಬನೇ ಪತ್ನಿಗೆ ಅಪರಿಮಿತವಾದ ಸಂತಸವನ್ನೂ ಸೌಭಾಗ್ಯವನ್ನೂ ಕರುಣಿಸಬಲ್ಲ. ಇಂತಹ ಪತಿಯನ್ನು ಯಾವ ಹೆಂಗಸು ತಾನೆ ಪೂಜಿಸಲಿಕ್ಕಿಲ್ಲ !

**''ಕುತಃ ಕ್ಲಮಃ ಕುತೋ ದುಃಖಂ ಸದ್ಭಿಃ ಸಹ ಸಮಾಗಮೇ ।**
**ಹಂತ ತಸ್ಮಾನ್ನ ಮೇ ಗ್ಲಾನಿಸ್ತ್ವತ್ಸಮೀಪೇ ಸುರೋತ್ತಮ ॥''**

ಸಜ್ಜನರ ಜೊತೆಗೆ ಸಹವಾಸವಾದ ಬಳಿಕ ಶ್ರಮವೆಲ್ಲಿ? ದುಃಖವೆಲ್ಲಿ? ಆದುದರಿಂದ ದೇವೋತ್ತಮನೆ, ದೊಡ್ಡವರ (ನಿನ್ನ) ಬಳಿಯಲ್ಲಿ ಇದ್ದಾಗ ನನಗೆ ಎಂದೂ ಆಯಾಸ, ಬೇಸರ ಬರುವದಿಲ್ಲ.

## ಉಪಕಾರ ಅಪಕಾರಗಳಿಗಾಗಿ ಪ್ರಾಣತ್ಯಾಗ

"ಸಂತಃ ಪ್ರಾಣಾನಪಿ ತ್ಯಕ್ತ್ವಾ ಪರಾರ್ಥಂ ಕುರ್ವತೇ ಯಥಾ ।
ತಥಾಽ ಸಂತೋಽಪಿ ಸಂತ್ಯಜ್ಯ ಪರ ಪೀಡಾಽನು ತತ್ಪರಾಃ ॥

ಸಜ್ಜನರು ತಮ್ಮ ಪ್ರಾಣಗಳನ್ನು ಕೊಟ್ಟಾದರೂ ಹೆರವರಿಗೆ ಉಪಕಾರ ಮಾಡುತ್ತಾರೆ. ಅದರಂತೆ ದುರ್ಜನರು ಕೂಡ ತಮ್ಮ ಪ್ರಾಣವನ್ನು ಗಂಡಾಂತರದಲ್ಲಿ ನೂಕಿ ಪರರಿಗೆ ಹಿಂಸೆ ಕೊಡುತ್ತಾರೆ.

"ತ್ಯಜತ್ಯಸೂನಯಂ ಲೋಕಸ್ತೃಣವದ್ಯಸ್ಯ ಕಾರಣಾತ್ ।
ಪರೋಪಘಾತಕೋ ದುಷ್ಟಃ ಪರಲೋಕಾಂಸ್ತಥಾ ತ್ಯಜೇತ್ ॥"

ಸಜ್ಜನರಾದವರು ಪರೋಪಕಾರಕ್ಕಾಗಿ ಹುಲ್ಲಿನಂತೆ ಈ ಲೋಕವನ್ನು ಬಿಟ್ಟು ಪ್ರಾಣಾರ್ಪಣೆಮಾಡುವರು. ಅದರಂತೆ ದುರ್ಜನರು ಪರರಿಗೆ ಘಾತ ಮಾಡುವದಕ್ಕಾಗಿ ಸ್ವರ್ಗಾದಿ ದಿವ್ಯ ಲೋಕಗಳನ್ನೆಲ್ಲ ಹುಲ್ಲಿನಂತೆ ತ್ಯಾಗಮಾಡಿ ಹಿಂಸಾಕೃತ್ಯಗಳನ್ನು ಮಾಡುತ್ತಾರೆ.

## ರಾಜರನ್ನು ನಿರ್ಮಿಸಿದ ಉದ್ದೇಶ

"ನಿಕಾಯೇಷು ನಿಕಾಯೇಷು ತಥಾ ಬ್ರಹ್ಮಾ ಜಗದ್ಗುರುಃ ।
ಅಸತಾಮುಪಘಾತಾಯ ರಾಜಾನಂ ಕೃತವಾನ್ ಸ್ವಯಮ್ ॥"

ಇಂತಹ ದುರ್ಜನರು ಮನೆಮನೆಗಳಲ್ಲಿ ವಾಸಿಸುತ್ತಾರೆ. ಇದನ್ನು ತಿಳಿದ ಬ್ರಹ್ಮದೇವರು ಇಂತಹ ದುಷ್ಟಜೀವಿಗಳ ವಿನಾಶಕ್ಕಾಗಿಯೇ ರಾಜ ಎಂಬ ವ್ಯಕ್ತಿಯನ್ನು ನಿರ್ಮಿಸಿದ್ದಾನೆ.

## ರಾಜರ ಕರ್ತವ್ಯ

"ನರಾನ್ ಪರೀಕ್ಷಯೇದ್ರಾಜಾ ಸಾಧೂನ್ ಸಮ್ಮಾನಯೇತ್ಸದಾ ।
ನಿಗ್ರಹಂ ಚಾಸತಾಂ ಕುರ್ಯಾತ್ಸಲೋಕೇ ಲೋಕಜಿತ್ತಮಃ ।
ನಿಗ್ರಹೇಣಾಸತಾಂ ರಾಜಾ ಸತಾಂ ಚ ಪರಿಪಾಲನಾತ್ ।
ಏತಾವದೇವ ಕರ್ತವ್ಯಂ ರಾಜ್ಞಾ ಸ್ವರ್ಗಮಭೀಪ್ಸುನಾ ॥"

ರಾಜನಾದವನು ಜನರ ಪರೀಕ್ಷೆ ಮಾಡಿ ಸಜ್ಜನರನ್ನು ಗೌರವಿಸಬೇಕು. ದುರ್ಜನರನ್ನು ನಿಗ್ರಹಿಸಬೇಕು. ಅಂದರೆ ಅಂತಹ ರಾಜನು ಲೋಕದಲ್ಲಿ 'ಲೋಕವಿಜಯಿ' ಎನಿಸುವನು. ಸ್ವರ್ಗಲೋಕವನ್ನು ಬಯಸುವ ರಾಜರು ದುರ್ಜನರನ್ನು ಶಿಕ್ಷಿಸಬೇಕು. ಸಜ್ಜನರನ್ನು ರಕ್ಷಿಸಬೇಕು. ಇದೇ ರಾಜರ ಮುಖ್ಯ ಕರ್ತವ್ಯವಾಗಿರುತ್ತದೆ.

"ರಾಜಕೃತ್ಯಂ ಹಿ ಲೋಕೇಷು ನಾಸ್ತ್ಯನ್ಯಜ್ಜಗತೀತಲೇ ।
ಅಸತಾಂ ನಿಗ್ರಹಾದೇವಂ ಸತಾಂ ಚ ಪರಿಪಾಲನಾತ್ ॥"

ದುಷ್ಟರ ನಿಗ್ರಹ ಒಳ್ಳೆಯವರ ಸಂರಕ್ಷಣೆ ಇದರ ಹೊರತು ರಾಜರಿಗೆ ಪ್ರಧಾನವಾದ ಕರ್ತವ್ಯವೆಂಬುದೇ ಈ ಜಗತ್ತಿನಲ್ಲಿ ಬೇರೆ ಇಲ್ಲ.

## ಇವರಿಗೆ ಯಮನೇ ಶಾಸಕ

"ರಾಜಭಿಶ್ಚಾಪ್ಯಶಸ್ತಾನಾಮಸತಾಂ ಶಾಸಿತಾ ಭವಾನ್ ।
ತೇನ ತ್ವಮಧಿಕೋ ದೇವೋ ದೇವೇಭ್ಯಃ ಪ್ರತಿಭಾಸಿ ಮೇ ॥"

ರಾಜರು ಕೂಡ ಶಾಸನಮಾಡದೇ ಉಳಿದುಕೊಂಡ ನೀಚ ಜನರನ್ನು ಶಾಸನ ಮಾಡುವವನು ಸಾಕ್ಷಾತ್ ಯಮಧರ್ಮನಾದ ನೀನೇ ಸರಿ. ಆದುದರಿಂದ ನೀನು ಎಲ್ಲದೇವತೆಗಳಲ್ಲಿಯೂ ಶ್ರೇಷ್ಠನಾಗಿರುವೆ ಎಂದು ನನಗೆ ತೋರುವದು.

"ಏತಾವದೇವ ಕರ್ತವ್ಯಂ ಪುರುಷೇಣ ವಿಜಾನತಾ ।
ಮಾತುಃ ಪಿತುಶ್ಚ ಶುಶ್ರೂಷಾ ಗುರೋಶ್ಚ ವರವರ್ಣಿನಿ ॥"

ಜ್ಞಾನಿಯಾದ ಮನುಷ್ಯನ ಕರ್ತವ್ಯಗಳು ಮೂರು ಮಾತ್ರ. ತಾಯಿಯ ಸೇವೆ, ತಂದೆಯ ಶುಶ್ರೂಷೆ, ಗುರುಗಳ ಆರಾಧನೆ.

## ಸ್ವರ್ಗದ ನಾಲ್ಕನೆಯ ದಾರಿ

"ತಪಸಾ ಬ್ರಹ್ಮಚರ್ಯೇಣ ಅಗ್ನಿಶುಶ್ರೂಷಯಾ ಶುಭೆ ।
ಪುರುಷಾಃ ಸ್ವರ್ಗಮಾಯಾಂತಿ ಗುರುಶುಶ್ರೂಷಯಾ ತಥಾ ॥"

ಮನುಷ್ಯರು ಸ್ವರ್ಗಕ್ಕೆ ಹೋಗಲು ಉಪಾಯಗಳು ನಾಕು. ತಪಸ್ಸು, ಬ್ರಹ್ಮಚರ್ಯ ಹಾಗೂ ಯಜ್ಞಯಾಗಾದಿಗಳು. ಮತ್ತು ಗುರು ಶುಶ್ರೂಷೆ. ಇವುಗಳಿಂದ ಸ್ವರ್ಗವನ್ನು ಸುಲಭವಾಗಿ ಪಡೆಯಬಹುದು.

## ಐವರನ್ನು ಅವಮಾನಿಸಬಾರದು

"ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ ।
ನಾರ್ತೇನಾಪ್ಯವಮಂತವ್ಯಾ ಬ್ರಾಹ್ಮಣಾ ನ ವಿಶೇಷತಃ ॥"

ನರನಿಗೆ ಎಷ್ಟೇ ಕಷ್ಟ ಬಂದಿದ್ದರೂ ತಂದೆ, ತಾಯಿ, ಅಣ್ಣ, ಗುರುಗಳು ಈ ನಾಲ್ವರನ್ನು ಮಾತ್ರ ಎಂದೂ ಅವಮಾನಿಸಬಾರದು. ಅದರಲ್ಲಿಯೂ ಬ್ರಾಹ್ಮಣರ ಅವಮಾನ ಸರ್ವಥಾ ಮಾಡಬಾರದು.

"ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।
ಮಾತಾ ಪೃಥಿವ್ಯಾ ಮೂರ್ತಿಸ್ತು ಭ್ರಾತಾ ವೈ ಮೂರ್ತಿರಾತ್ಮನಃ ॥"

ಗುರುಗಳು ಎಂದರೆ-ಸಾಕ್ಷಾತ್ ಬ್ರಹ್ಮದೇವರ ಮೂರ್ತಿ ಇದ್ದಂತೆ. ತಂದೆಯು ಪ್ರಜಾಪತಿಯ ಪ್ರತಿರೂಪ. ತಾಯಿಯು ಮೂರ್ತಿಮಂತ ಭೂದೇವಿ ಇದ್ದಂತೆ. ಸಹೋದರರನು ತನ್ನದೇ ಆದ ಪ್ರತಿಬಿಂಬ ಎಂದು ತಿಳಿದು ಎಲ್ಲರನ್ನೂ ಯೋಗ್ಯವಾಗಿ ಗೌರವಿಸಬೇಕು.

## ಇವರ ಉಪಕಾರ ತೀರಿಸಲು ಬಾರದು

"ಜನ್ಮನಾ ಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಮ್ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥"

ತಾಯಿ, ತಂದೆಗಳು ಮನುಷ್ಯನು ಗರ್ಭದಲ್ಲಿ ಮೂಡಿದಾಗಿನಿಂದ ಹುಟ್ಟಿ, ಬೆಳೆದು, ದೊಡ್ಡವನಾಗುವವರೆಗೆ ಅವನ ಲಾಲನೆ-ಪಾಲನೆಗಾಗಿ ಎಲ್ಲವಿಧವಾದ ದುಃಖವನ್ನೂ ಅನುಭವಿಸುತ್ತಾರೆ. ಆ ಉಪಕಾರವನ್ನು ನೂರು ವರ್ಷ ಅವರ ಸೇವೆ ಮಾಡಿದರೂ ತೀರಿಸುವದು ಶಕ್ಯವಾಗುವದಿಲ್ಲ.

"ಪಿತಾ ವೈ ಗಾರ್ಹಪತ್ಯೋऽಗ್ನಿ ರ್ಮಾತಾ ದಕ್ಷಿಣತಃ ಸ್ಮೃತಾಃ ।
ಗುರುರಾಹವನೀಯಶ್ಚ ಸಾಗ್ನಿತ್ರಯೀ ಗರೀಯಸೀ ॥"

ತಂದೆಯು ಗಾರ್ಹಪತ್ಯ ಅಗ್ನಿ, ತಾಯಿಯು ದಕ್ಷಿಣಾಗ್ನಿ, ಗುರುವು ಆಹವನೀಯ ಅಗ್ನಿ. ಈ ಮೂವರ ಪೂಜೆ ಮಾಡಿದವನು ಎಲ್ಲ ವಿಧವಾದ ಅಗ್ನಿಹೋತ್ರಾದಿ ಕಾರ್ಯಗಳನ್ನು ವಿಧಿಪೂರ್ವಕವಾಗಿ ಮಾಡಿದ್ದಕ್ಕಿಂತ ಮಿಗಿಲಾದ ಪುಣ್ಯ ಪಡೆಯುತ್ತಾನೆ.

## ಸುಲಭ ತಪಸ್ಸಿದ್ಧಿ

"ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ತು ಸರ್ವದಾ ।
ತೇಷ್ವೇವ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥"

ತಾಯಿ, ತಂದೆ ಹಾಗೂ ಗುರು - ಈ ಮೂವರಿಗೆ ಪ್ರಿಯವಾದದ್ದನ್ನೇ ಯಾವಾಗಲೂ ಮಾಡಬೇಕು. ಈ ಮೂವರು ಸಂತುಷ್ಟರಾದರೆ ಎಲ್ಲ ತಪಸ್ಸು ಫಲಿಸಿದಂತೆ.

"ತ್ರಿಷು ಪ್ರಮಾದ್ಯತೇ ನೈಷು ತ್ರೀನ್ ಲೋಕಾನ್ ಜಯತೇ ಗೃಹೀ ।
ದೀಪ್ಯಮಾನಃ ಸ್ವವಪುಷಾ ದೇವವದ್ದಿವಿ ಮೋದತೇ ॥"

ಈ ಮೂವರ ವಿಷಯದಲ್ಲಿ ಎಂದೂ ತಪ್ಪು ಮಾಡದೆ, ಈ ತ್ರಿಮೂರ್ತಿಗಳ ಸೇವೆಮಾಡುವ ಗೃಹಸ್ಥಾಶ್ರಮಿಯು ಮೂರುಲೋಕಗಳನ್ನು ಗೆಲ್ಲುತ್ತಾನೆ. ಸ್ವರ್ಗಲೋಕದಲ್ಲಿ ಮುಂದೆ ದಿವ್ಯ ದೇವತೆಗಳಂತೆ ದೇದೀಪ್ಯಮಾನನಾಗಿ ಆನಂದ ಪಡೆಯುತ್ತಾನೆ.

## ಹೆಚ್ಚಿನ ಲಾಭ

ಧರ್ಮಾರ್ಜನಂ ತಥಾ ಕಾರ್ಯಂ ಪುರುಷೇಣ ವಿಜಾನತಾ ।
ತಲ್ಲಾಭಃ ಸರ್ವಲಾಭೇಭ್ಯೋ ಯದಾ ದೇವ ವಿಶಿಷ್ಯತೇ ॥

ಬುದ್ಧಿವಂತನಾದ ಮನುಷ್ಯನು ಧರ್ಮವನ್ನು ಸಂಪಾದಿಸಬೇಕು. ಎಲ್ಲ ಲಾಭಕ್ಕಿಂತ ಧರ್ಮಲಾಭವು ಮಿಗಿಲಾದದ್ದಾಗಿದೆ.

## ಬಾಳಿನ ಮೂರು ಫಲಗಳು

**ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗೋ ಜನ್ಮನಃ ಫಲಮ್ ।**
**ಧರ್ಮ ಹೀನಸ್ಯ ಕಾಮಾರ್ಥೌ ವಂಧ್ಯಾಸುತಸಮೌ ಪ್ರಭೋ ॥**

ಧರ್ಮ, ಅರ್ಥ, ಕಾಮ ಇವು ಮೂರು ಬದುಕಿನ ಫಲಗಳಾಗಿವೆ. ಇವುಗಳಲ್ಲಿ ಮೊದಲಿನದಾದ ಧರ್ಮವನ್ನು ಸಾಧಿಸದಿದ್ದರೆ ಮುಂದಿನವೆರಡು ಬಂಜೆಯ ಮಕ್ಕಳಂತೆ ದುರ್ಲಭವಾಗುವವು.

## ಪತಿವ್ರತೆಯರನ್ನು ಪೂಜಿಸಬೇಕು

**ತಸ್ಮಾತ್ಸಾಧ್ವ್ಯಃ ಸ್ತ್ರಿಯಃ ಪೂಜ್ಯಾಃ ಸತತಂ ದೇವವನ್ನರೈಃ ।**
**ತಾಸಾಂ ರಾಜನ್ ಪ್ರಸಾದೇನ ಧಾರ್ಯತೇ ವೈ ಜಗತ್ರಯಮ್ ॥**

ಮನುಷ್ಯರು ಪತಿವ್ರತೆಯರಾದ ಸ್ತ್ರೀಯರನ್ನು ದೇವರಂತೆ ಪೂಜಿಸಬೇಕು. ಅವರ ಪ್ರಸನ್ನತೆಯ ಮೇಲೆಯೇ ಮೂರು ಲೋಕಗಳ ಸುಸ್ಥಿರತೆಯು ಅವಲಂಬಿಸಿದೆ.

## ಹೆಣ್ಣಿನ ಮಾತು ಹುಸಿಯಲ್ಲ

**ತಾಸಾಂ ತು ವಾಕ್ಯಂ ಭವತೀಹ ಮಿಥ್ಯಾ ನ ಜಾತು**
**ಲೋಕೇಷು ಚರಾಚರೇಷು ।**
**ತಸ್ಮಾತ್ಸದಾ ತಾಃ ಪರಿಪೂಜನೀಯಾಃ ಕಾಮಾನ್**
**ಸಮಗ್ರಾನಭಿ ಕಾಮಯಾನೈಃ ॥**

ಪತಿವ್ರತಾಸ್ತ್ರೀಯರ ನುಡಿ ಈ ಜಗತ್ತಿನಲ್ಲಿ ಎಂದೂ ಹುಸಿಯಾಗುವುದಿಲ್ಲ. ಆದುದರಿಂದ ತಮ್ಮ ಮನೋಭೀಷ್ಟಗಳೆಲ್ಲ ಈಡೇರಬೇಕು ಎಂದೆನ್ನುವ ಮಾನವರು ಪತಿವ್ರತೆಯರಾದ ಮಹಿಳೆಯರನ್ನು ಪೂಜಿಸಬೇಕು.

## ರಾಜಧರ್ಮ

**ಅಭಿಷೇಕಾರ್ದ್ರಶಿರಸಾ ರಾಜ್ಞಾ ರಾಜ್ಯಾವಲೋಕಿನಾ ।**
**ಸಹಾಯವರಣಂ ಕಾರ್ಯಂ ತತ್ರ ರಾಜ್ಯಂ ಪ್ರತಿಷ್ಠಿತಮ್ ॥**

ರಾಜನು ತನ್ನ ಪಟ್ಟಾಭಿಷೇಕದ ಹಸಿ ಆರುವದರೊಳಗಾಗಿಯೇ ರಾಜ್ಯದ ಸಮಗ್ರ ಹಿತವನ್ನು ಲಕ್ಷಿಸಿ, ಸಹಾಯಕಾರಿ ಜನರ ಒಂದು ಮಂಡಲವನ್ನು ಆರಿಸಬೇಕು. ಇಂತಹ ಒಳ್ಳೊಳ್ಳೆ ಸಹಾಯಕರ ಆಯ್ಕೆಯ ಮೇಲೆಯೇ, ರಾಜ್ಯದ ಭದ್ರತೆಯು ಅವಲಂಬಿಸಿರುತ್ತದೆ.

**ಯದಪ್ಯಲ್ಪತರಂ ಕರ್ಮ ತದಪ್ಯೇಕೇನ ದುಶ್ಚರಮ್ ।**
**ಪುರುಷೇಣಾಸಹಾಯೇನ ಕಿಮು ರಾಜ್ಯಂ ಮಹೋದಯಮ್ ॥**

ಎಂತಹ ಚಿಕ್ಕಪುಟ್ಟ ಕೆಲಸವಾದರೂ ಒಂಟಿಯಾದ ಮನುಷ್ಯನಿಗೆ ಸರಿಯಾಗಿ ಮಾಡಲಾಗುವುದಿಲ್ಲ. ಅಂದ ಬಳಿಕ ಎಲ್ಲರಿಗೂ ಉನ್ನತಿಗೆ ಕಾರಣವಾದ

ಸಮಗ್ರ ರಾಷ್ಟ್ರದ ಶಾಸನ ಕಾರ್ಯವು ಏಕಾಕಿಯಾದ ಮಾನವನಿಂದ ಹೇಗೆ ಮಾಡಲು ಸಾಧ್ಯವಾದೀತು!

## ಸಹಾಯಕ ವರ್ಗ

**ತಸ್ಮಾತ್ಸಹಾಯಾನ್ ವರಯೇತ್ ಕುಲೀನಾನ್ನೃಪತಿಃ ಸ್ವಯಮ್ ।**
**ರೂಪ ಸತ್ವ ಗುಣೋಪೇತಾನ್ ಸಜ್ಜನಾನ್ ಕ್ಷಮಯಾನ್ವಿತಾನ್ ॥**
**ಕ್ಲೇಶಕ್ಷಮಾನ್ ಮಹೋತ್ಸಾಹಾನ್ ಧರ್ಮಜ್ಞಾಂಶ್ಚ ಪ್ರಿಯಂವದಾನ್ ॥**
**ಶೂರಾನ್ ಕುಲೀನ ಜಾತೀಯಾನ್ ಬಲಯುಕ್ತಾನ್ ಶ್ರಿಯಾನ್ವಿತಾನ್ ॥**

ಆದುದರಿಂದ ಒಳ್ಳೇ ಕುಲದಲ್ಲಿ ಜನಿಸಿದ ಶೂರರೂ, ಧೀರರೂ, ಬಲಿಷ್ಠರೂ, ತೇಜಸ್ವಿಗಳೂ, ಸದ್ಗುಣಿಗಳೂ, ಸುಂದರರೂ, ಕ್ಷಮಾದಿಗುಣವುಳ್ಳವರೂ, ದುಃಖ ಸಹಿಷ್ಣುಗಳೂ, ಉತ್ಸಾಹಶಾಲಿಗಳೂ, ಧರ್ಮವನ್ನು ಅರಿತವರೂ, ಸವಿಮಾತನಾಡುವವರೂ ಆದ ಯೋಗ್ಯ ಜನರನ್ನೇ ಸಹಾಯಕರೆಂದು ರಾಜರು ಆರಿಸಬೇಕು.

**ಹಿತೋಪದೇಶಕಾನ್ ರಾಜ್ಞಃ ಸ್ವಾಮಿಭಕ್ತಾನ್ ಯಶೋಽರ್ಥಿನಃ ।**
**ಏವಂ ವಿಧಾನ್ ಸಹಾಯಾಂಶ್ಚ ಶುಭಕರ್ಮಸು ಯೋಜಯೇತ್ ॥**

ಹಿತವನ್ನು ಉಪದೇಶಿಸುವ ಒಳ್ಳೇ ಹೆಸರನ್ನು ಬಯಸುವ ಸ್ವಾಮಿಭಕ್ತರಾದ ತನ್ನ ಸಹಾಯಕ ಜನರನ್ನು ಒಳ್ಳೇ ಕಾರ್ಯಗಳಿಗೆ ಯೋಜಿಸಬೇಕು.

## ಶಾಸ್ತ್ರ ಪಂಡಿತರನ್ನೇಆಶ್ರಯಿಸಬೇಕು

**ಬ್ರಾಹ್ಮಣಾನ್ ಪರ್ಯುಪಾಸೀತ ತ್ರಯೀ ಶಾಸ್ತ್ರ ಸು ನಿಶ್ಚಿತಾನ್ ।**
**ನಾಸಚ್ಛಾಸ್ತ್ರವತೋ ಮೂಢಾಂಸ್ತೇಹಿ ಲೋಕಸ್ಯ ಕಂಟಕಾಃ ॥**

ವೇದಶಾಸ್ತ್ರಗಳಲ್ಲಿ ಗಾಢವಾದ ಜ್ಞಾನವುಳ್ಳ, ಪಂಡಿತರನ್ನೇ ರಾಜರು ಸೇವಿಸಬೇಕು. ದುಷ್ಟ ಶಾಸ್ತ್ರಗಳನ್ನು ಓದಿದ ಮೂರ್ಖರನ್ನು ಎಂದೂ ಸೇವಿಸಬಾರದು. ಅಂತಹ ಜನರು ಲೋಕ ಕಂಟಕರು.

## ವೃದ್ಧ ಸೇವೆ

**ವೃದ್ಧಾನ್ ಹಿ ನಿತ್ಯಂ ಸೇವೇತ ವಿಪ್ರಾನ್ ವೇದವಿದಃ ಶುಚೀನ್ ।**
**ತೇಭ್ಯಃ ಶಿಕ್ಷೇತ ವಿನಯಂ ವಿನೀತಾತ್ಮಾ ಚ ನಿತ್ಯಶಃ ॥**

ವೇದಶಾಸ್ತ್ರಗಳನ್ನು ಓದಿದ ಶುಚಿರ್ಭೂತರಾದ ಬ್ರಾಹ್ಮಣರನ್ನು ಹಿರಿಯರನ್ನು ನಿತ್ಯವೂ ಸೇವೆಮಾಡಬೇಕು. ವಿನಯದಿಂದ ಅವರನ್ನು ಸೇವಿಸಿ, ಅವರಿಂದ ವಿದ್ಯೆ ಪಡೆದುಕೊಳ್ಳಬೇಕು.

ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ।
ಯಜೇತ ರಾಜಾ ಬಹುಭಿಃ ಕ್ರತುಭಿಶ್ಚ ಸದಕ್ಷಿಣೈಃ ॥
ಧರ್ಮಾರ್ಥಂ ಚೈವ ವಿಪ್ರೇಭ್ಯೋ ದದ್ಯಾದ್ಭೋಗಾನ್ ಧನಾನಿ ಚ॥

ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡ ರಾಜನು ಮಾತ್ರ ಪ್ರಜಾಜನರನ್ನು ತನ್ನ ವಶದಲ್ಲಿಟ್ಟುಕೊಳ್ಳಲು ಸಮರ್ಥನಾಗುವನು. ರಾಜನಾದವನು ಯೋಗ್ಯ ಬ್ರಾಹ್ಮಣರಿಗೆ ವಿಶೇಷವಾಗಿ ದಾನ, ದಕ್ಷಿಣೆ ಕೊಟ್ಟು, ಬಹುವಿಧವಾದ ಯಜ್ಞಯಾಗಗಳನ್ನು ಆಚರಿಸಬೇಕು.

## ರಣದಿಂದಲೂ ರಕ್ಷಣಾಕಾರ್ಯದಿಂದಲೂ ಹಿಂಜರಿಯಬಾರದು

ನ ನಿವರ್ತೇತ ಸಂಗ್ರಾಮಾತ್ ಕ್ಷಾತ್ರಂ ವ್ರತಮನುಸ್ಮರನ್ ।
ಸಂಗ್ರಾಮೇಷ್ವನಿವರ್ತಿತ್ವಂ ಪ್ರಜಾನಾಂ ಪರಿಪಾಲನಮ್ ॥

ಅರಸನು ಕ್ಷತ್ರಿಯ ಧರ್ಮದ ಮೇಲ್ಮೆಯನ್ನು ನೆನೆದು ಎಂದೂ ರಣರಂಗದಿಂದ ಹೆದರಿ ಹಿಂಜರಿಯತಕ್ಕದ್ದಲ್ಲ. ಯುದ್ಧದಿಂದ ಹಿಂದಿರುಗದಿರುವಿಕೆ, ಪ್ರಜಾಪಾಲನೆ ಈ ಎರಡೂ ರಾಜರ ಮುಖ್ಯ ಧರ್ಮಗಳಾಗಿರುತ್ತವೆ.

## ರಾಜರಿಗೆ ಶ್ರೇಯಸ್ಸು

ಶುಶ್ರೂಷಾ ಬ್ರಾಹ್ಮಣಾನಾಂಚ ರಾಜ್ಞಾಂ ನಿಶ್ರೇಯಸಂ ಪರಮ್ ।
ಕೃಪಣಾನಾಮಥ ವೃದ್ಧಾನಾಂ ವಿಧವಾನಾಂ ಚ ಪಾಲನಮ್ ॥

ಬ್ರಾಹ್ಮಣರ ಸೇವೆಯು ಅರ್ಥಾತ್ ಜ್ಞಾನಿಗಳನ್ನು ಆದರಿಸುವದು, ರಾಜರ ಶ್ರೇಯಸ್ಸಿಗೆ ಮುಖ್ಯ ಕಾರಣವಾಗಿರುತ್ತದೆ. ಇದರಂತೆ ದೀನ, ದುಃಖಿತರನ್ನು ಅನಾಥರನ್ನು, ವಿಧವೆಯರನ್ನು, ಮುದುಕರನ್ನು ಪಾಲಿಸುವದು ರಾಜರ ಕರ್ತವ್ಯವಾಗಿರುತ್ತದೆ.

ಯೋಗಕ್ಷೇಮಂ ಚ ವೃತ್ತಿಂ ಚ ತಥೈವ ಪರಿಕಲ್ಪಯೇತ್ ।
ವರ್ಣಾಶ್ರಮ ವ್ಯವಸ್ಥಾನಾಂ ತಥಾ ಕಾರ್ಯಂ ವಿಶೇಷತಃ ॥

ರಾಜರು ಪ್ರಜಾ ಜನರಿಗೆ ಉಪಜೀವನದ ಮಾರ್ಗವನ್ನು ಮಾಡಿಕೊಟ್ಟು, ಎಲ್ಲ ವರ್ಣ, ಆಶ್ರಮದವರು ತಮ್ಮ ತಮ್ಮ ವರ್ಣಾಶ್ರಮಕ್ಕೆ ಉಚಿತವಾದ ಧರ್ಮ ಕರ್ಮಗಳನ್ನು ಆಚರಿಸುವ ಏರ್ಪಾಡು ಮಾಡಿ, ಎಲ್ಲರ ಯೋಗಕ್ಷೇಮ ನೋಡಿಕೊಳ್ಳಬೇಕು.

## ಧರ್ಮ ಸ್ಥಾಪನೆ

ಸ್ವಧರ್ಮ ಪ್ರಚ್ಯುತಾನ್ ರಾಜಾ ಸ್ವಧರ್ಮೇ ಸ್ಥಾಪಯೇತ್ತಥಾ ।
ಆಶ್ರಮೇಷು ತಥಾ ಕಾರ್ಯಮನ್ನಂ ತೈಲಂ ಚ ಭಾಜನಮ್ ॥

ಸ್ವಯಮೇವಾನಯೇದ್ರಾಜಾ ಸತ್ಕೃತಾನ್ನಾವಮಾನಯೇತ್ ।
ತಾಪಸೇ ಸರ್ವಕಾರ್ಯಾಣಿ ರಾಜ್ಯಮಾತ್ಮಾನಮೇವಚ
ನಿವೇದಯೇತ್ ಪ್ರಯತ್ನೇನ ದೇವವಚ್ಚಿರಮರ್ಚಯೇತ್ ॥

ತಮ್ಮ ತಮ್ಮ ಧರ್ಮ, ಜಾತಿಗಳನ್ನು ಬಿಟ್ಟು ನಡೆದ ಜನರನ್ನು ಶಿಕ್ಷಿಸಿ ಮತ್ತೆ ಅವರವರ ಧರ್ಮದಲ್ಲಿ ರಾಜರಾದವರು ಸ್ಥಾಪಿಸಬೇಕು. ಇದರಂತೆ ಆಶ್ರಮ ಧರ್ಮವನ್ನು ತ್ಯಜಿಸಿದವರನ್ನು ದಂಡಿಸಿ ತಮ್ಮ ಆಶ್ರಮೋಚಿತ ಕಾರ್ಯ ಮಾಡುವಂತೆ ಏರ್ಪಡಿಸಬೇಕು. ಪ್ರಜೆಗಳಿಗೆಲ್ಲ ಅದರಲ್ಲಿಯೂ ಸ್ವಧರ್ಮ ಪಾಲಿಸುವ ಜನರಿಗೆ ಅನ್ನ ಪಾತ್ರೆ ಎಣ್ಣೆ ಮೊದಲಾದವುಗಳನ್ನು ರಾಜರೇ ಒದಗಿಸಬೇಕು. ಯೋಗ್ಯರೆಂದು ಸತ್ಕರಿಸಿದವರನ್ನು ಅವಮಾನಿಸಬಾರದು. ತಪಸ್ವಿಗಳಾದ ಸಜ್ಜನರಿಗೆ ತನ್ನ ಸಕಲ ರಾಜ್ಯವನ್ನು, ವ್ಯವಹಾರವನ್ನು ಸಮರ್ಪಿಸಿ ತನ್ನನ್ನೇ ಅವರ ಸೇವೆಗೆ ಮೀಸಲಿಡಬೇಕು. ಅಂತಹ ಮಹಾಪುರುಷರನ್ನು ದೇವರಂತೆ ಪೂಜಿಸಬೇಕು.

**ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ।**
**ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿ ವಿಶ್ವಸೇತ್ ॥**

ಆಮೆಯು ತನ್ನ ಅವಯವಗಳನ್ನು ಒಳಗೆ ಎಳೆದುಕೊಳ್ಳುವಂತೆ ರಾಜನು ತನ್ನ ರಾಜ್ಯಾಂಗದ ವಿಷಯಗಳನ್ನು ಗುಪ್ತವಾಗಿ ಇಡಬೇಕು. ತನ್ನಲ್ಲಿರುವ ಲೋಪದೋಷಗಳು ಜನರಿಗೆ ಕಾಣದಂತೆ ಜಾಗರೂಕನಾಗಿರಬೇಕು. ತನ್ನ ಮೇಲೆ ವಿಶ್ವಾಸ ಇಲ್ಲದಿರುವವರ ಮೇಲೆ ತಾನು ಎಂದೂ ವಿಶ್ವಾಸ ಇಡಬಾರದು. ತನ್ನ ವಿಶ್ವಾಸಕ್ಕೆ ಪಾತ್ರನಾದ ಮನುಷ್ಯನ ಮೇಲೆ ಕೂಡ ಅತಿ ನಂಬುಗೆ ಇಡಬಾರದು.

**ವಿಶ್ವಾಸಾದ್ಭಯಮುತ್ಪನ್ನಂ ಮೂಲಾದಪಿ ನಿಕೃಂತತಿ ।**
**ವಿಶ್ವಾಸಯೇಚ್ಚಾಪ್ಯಪರಂ ತತ್ವ ಭೂತೇನ ಹೇತುನಾ ॥**

ವಿಶ್ವಾಸಿಕ ಮನುಷ್ಯನಿಂದ ಉತ್ಪನ್ನವಾದ ಅಪಾಯವು ಸಮೂಲನಾಶಕ್ಕೆ ಕಾರಣವಾಗುತ್ತದೆ. ಪರಕೀಯರಲ್ಲಿ ಕೂಡ, ನಿಜವಾದ ಕಾರಣ ತೋರಿಸಿ, ತನ್ನ ಬಗ್ಗೆ ವಿಶ್ವಾಸಮೂಡುವಂತೆ ಮಾಡಬೇಕು.

## ಪಶುಪಕ್ಷಿಗಳಿಂದ ಕಲಿಯಬೇಕು

**ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇ ।**
**ವೃಕವಚ್ಚಾಪಿ ಲುಂಪೇತ ಶಶವಚ್ಚ ವಿನಿಕ್ಷಿಪೇತ್ ॥**

ಯಾವುದಾದರೂ ಒಂದು ವಿಷಯವನ್ನು ಆಲೋಚನೆಮಾಡುವಾಗ ಬಕಪಕ್ಷಿಯಂತೆ ಏಕಾಗ್ರ ಮನಸ್ಸಿನಿಂದ ವಿಚಾರ ಮಾಡಬೇಕು. ಪರರ ಮೇಲೆ ಆಕ್ರಮಣ ಮಾಡುವಾಗ ಸಿಂಹದಂತೆ ಶೌರ್ಯದಿಂದ ಎರಗಬೇಕು. ತೋಳದಂತೆ ವೈರಿಗಳನ್ನು ಲೂಟಿ ಮಾಡಬೇಕು. ಮೊಲಗಳಂತೆ ಅವರನ್ನು ಹೊಡೆಯಬೇಕು.

**ದೃಢ ಪ್ರಹಾರೀ ಚ ಭವೇತ್ ತಥಾ ಶೂಕರವನ್ನೃಪಃ ।**
**ಚಿತ್ರಕಾರಶ್ಚ ಶಿಖಿವದ್ ದೃಢ ಭಕ್ತಸ್ತಥಾ ಶ್ವವತ್ ॥**

ಹಂದಿಯಂತೆ ಜೋರಾಗಿ ವೈರಿಗೆ ಬಲವಾದ ಪೆಟ್ಟನ್ನು ಕೊಡಬೇಕು. ನವಿಲಿನಂತೆ ಬಗೆ ಬಗೆಯ ಆಕಾರವನ್ನು ತಾಳಿ ವೈರಿಗಳನ್ನು ಮರುಳುಗೊಳಿಸಬೇಕು. ನಾಯಿಯಂತೆ ನಂಬಿದವರ ಮೇಲೆ ದೃಢವಾದ ವಿಶ್ವಾಸ ಇಡಬೇಕು.

**ತಥಾ ಚ ಮಧುರಾಭಾಷೀ ಭವೇತ್ಕೋಕಿಲವನ್ನೃಪಃ ।**
**ಕಾಕಶಂಕೀ ಭವೇನ್ನಿತ್ಯಮಜ್ಞಾತಂ ವಸತಿಂ ವಸೇತ್ ॥**

ಇದರಂತೆ ಅರಸನು ಕೋಗಿಲೆಯಂತೆ ಮಧುರವಾಗಿ ಮಾತನಾಡಬೇಕು. ಕಾಗೆಯಂತೆ ಎಲ್ಲ ಕಡೆಗೂ ಸಂಶಯ ದೃಷ್ಟಿಯಿಂದ ನೋಡಬೇಕು. ಯಾರಿಗೂ ಗೊತ್ತಾಗದ ಅಜ್ಞಾತದ ಸ್ಥಳದಲ್ಲಿ ವಾಸಮಾಡಬೇಕು.

## ಪರೀಕ್ಷಿಸದೇ ಸ್ಪರ್ಶಿಸಬೇಡ

**ನಾಽಪರೀಕ್ಷಿತ ಪೂರ್ವಂ ಚ ಭೋಜನಂ ಶಯನಂ ವ್ರಜೇತ್ ।**
**ವಸ್ತ್ರಂ ಪುಷ್ಪಮಲಂಕಾರಂ ಯಚ್ಚಾನ್ಯನ್ಮನುಜೋತ್ತಮ ॥**

ಮೊದಲು ಪರೀಕ್ಷೆಮಾಡಿನೋಡದೆ, ಊಟವನ್ನು ಮಾಡಬಾರದು. ಪರೀಕ್ಷಿಸದ ಹಾಸಿಗೆಯ ಮೇಲೆ ಮಲಗಬಾರದು. ಇದರಂತೆ ಪರೀಕ್ಷಿಸದ ವಸ್ತ್ರ ಹೂ ಅಲಂಕಾರಗಳನ್ನು ರಾಜರು ಮುಟ್ಟತಕ್ಕದ್ದಲ್ಲ.

**ನ ಗಾಹೇಜ್ಜನಸಂಬಾಧಂ ನ ಚಾಜ್ಞಾತ ಜಲಾಶಯಮ್ ।**
**ಅಪರೀಕ್ಷಿತ ಪೂರ್ವಂ ಚ ಪುರುಷೈರಾಪ್ತಕಾರಿಭಿಃ ॥**

ತನ್ನ ಅತ್ಯಂತ ಆಪ್ತರೂ, ಹಿತಕಾರಿಗಳೂ, ಪೂರ್ವ ಪರೀಕ್ಷೆ ಮಾಡದಿರುವಾಗ, ಅಥವಾ ತಕ್ಕ ಏರ್ಪಾಡನ್ನು ಮಾಡದೇ ಇರುವಾಗ ಜನರ ಗುಂಪಿನಲ್ಲಿ ರಾಜರು ಸೇರಬಾರದು. ನೀರಿನ ಆಳ ತಿಳಿಯದ ನದಿ, ಸರೋವರಗಳಲ್ಲಿ ಇಳಿಯಬಾರದು.

## ರಾಜರು ಆನೆ ಕುದುರೆ ಹೆಣ್ಣಿನಿಂದ ದೂರ ಇರಬೇಕು

**ನಾಽರೋಹೇತ್ಕುಂಜರಂ ವಾಲ್ಯಂ ನಾಽದಾಂತಂ ತುರಗಂ ತಥಾ ।**
**ನಾಽವಿಜ್ಞಾತಾಂ ಸ್ತ್ರಿಯಂ ಗಚ್ಛೇನ್ನೈವ ದೇವೋತ್ಸವೇ ವಸೇತ್**
**ನರೇಂದ್ರ ಲಕ್ಷ್ಮ್ಯಾ ಧರ್ಮಜ್ಞ ತ್ರಾತಾ ಯತ್ತೋ ಭವೇನ್ನೃಪಃ ।**
**ಸದ್ಭೃತ್ಯಾಶ್ಚ ತಥಾ ಪುಷ್ಟಾಃ ಸತತಂ ಪ್ರತಿಮಾನಿತಾಃ**

## ರಾಜರ ಆಯ್ಕೆ

**ರಾಜ್ಞಾ ಸಹಾಯಾಃ ಕರ್ತವ್ಯಾಃ ಪೃಥಿವೀಂ ಜೇತುಮಿಚ್ಛತಾ ।**
**ಯಥಾರ್ಹಂ ಚಾಪ್ಯಸುಭೃತೋ ರಾಜಾ ಕರ್ಮ ಸುಯೋಜಯೇತ್॥**

ಸರಿಯಾಗಿ ವಶವಾಗದ ಆನೆಯನ್ನು ಏರಬಾರದು. ಪಳಗಿಸದ ಕುದುರೆಯನ್ನು ಹತ್ತಬಾರದು. ಗೊತ್ತಿಲ್ಲದ ಸ್ತ್ರೀಯೊಡನೆ ಸಹವಾಸ ಮಾಡಬಾರದು. ದೇವರ

ಉತ್ಸವಗಳಲ್ಲಿ ವಸತಿ ಇರಬಾರದು. ರಾಜನು ಪ್ರಯತ್ನ ಪೂರ್ವಕವಾಗಿ ತನ್ನ ರಾಜ್ಯಲಕ್ಷ್ಮಿಯ ರಕ್ಷಣ ಕಾರ್ಯದಲ್ಲಿ ಜಾಗರೂಕನಾಗಿರಬೇಕು. ಸಮಗ್ರ ಭೂಮಂಡಲವನ್ನು ಗೆಲ್ಲಬಯಸುವ ಮಹಾರಾಜರು ಒಳ್ಳೊಳ್ಳೆ ಸೇವಕರನ್ನು ಗೌರವಿಸಿ, ಅವರು ಬಯಸ್ಸಿದ್ದನ್ನೆಲ್ಲ ಪೂರೈಸಿ, ಅವರ ಸಂಸಾರದ ಭಾರವನ್ನು ತಾನೇ ನಿರ್ವಹಿಸಿ, ತನ್ನ ಸಹಾಯಕರನ್ನಾಗಿ ಮಾಡಿಕೊಳ್ಳಬೇಕು. ಅವರನ್ನು ಯೋಗ್ಯ ಕಾರ್ಯಗಳಿಗೆ ನಿಯಮಿಸಬೇಕು.

**ಸ್ತ್ರೀಷು ಷಂಡಂ ನಿಯುಂಜೀತ ತೀಕ್ಷ್ಣಂ ದಾರುಣ ಕರ್ಮಸು ।**
**ಧರ್ಮೇ ಚಾರ್ಥೇ ಚ ಕಾಮೇ ಚ ನಯೇ ಚ ರವಿ ನಂದನ ॥**

ಸ್ತ್ರೀಯರ ಬಳಿಯಲ್ಲಿ ಕೆಲಸವಿದ್ದಾಗ ಷಂಡರನ್ನು ಕಳಿಸಬೇಕು. ಘೋರ ಕಾರ್ಯಗಳಲ್ಲಿ ಕ್ರೂರ ಸ್ವಭಾವದವರನ್ನು ನಿಯಮಿಸಬೇಕು. ಇದರಂತೆ ಧರ್ಮ, ಅರ್ಥ ಕಾಮ ಮುಂತಾದ ಕಾರ್ಯಗಳಲ್ಲಿ ರಾಜರು ಯೋಗ್ಯರನ್ನು ನಿಯೋಜಿಸಬೇಕು.

**ಸರ್ವಥಾ ನೇಷ್ಯತೇ ರಾಜ್ಞಸ್ತ್ರೀಕ್ಷ್ಣೋಪಕರಣಕ್ರಮಃ ।**
**ಕರ್ಮಾಣಿ ಪಾಪಸಾಧ್ಯಾನಿ ಯಾನಿ ರಾಜ್ಞೋ ನರಾಧಿಪ ।**
**ಸಂತಸ್ತಾನಿ ನ ಕುರ್ವಂತಿ ತಸ್ಮಾತ್ತಾನಿ ತ್ಯಜೇನ್ನೃಪಃ ।**
**ನೇಷ್ಯತೇ ಪೃಥಿವೀಶಾನಾಂ ತೀಕ್ಷ್ಣೋಪಕರಣ ಕ್ರಿಯಾ ।**
**ಯಸ್ಮಿನ್ ಕರ್ಮಣಿ ಯಸ್ಯ ಸ್ಯಾದ್ವಿಶೇಷೇಣ ಚ ಕೌಶಲಮ್ ।**
**ತಸ್ಮಿನ್ ಕರ್ಮಣಿ ತಂ ರಾಜಾ ಪರೀಕ್ಷ್ಯ ಚ ನಿವೇಶಯೇತ್ ॥**

ರಾಜರು ಯಾವದೇ ಕಾರ್ಯ ಮಾಡಲಿ, ಅದಕ್ಕೆ ಅತಿ ಉಗ್ರ ಉಪಾಯ ಯೋಜಿಸಬಾರದು. ಅನ್ಯಾಯ ಅಥವಾ ಅತ್ಯಾಚಾರಗಳಿಂದ ರಾಜರು ಯಾವ ಕಾರ್ಯಗಳನ್ನು ಸಾಧಿಸಲಿಕ್ಕೂ ಪ್ರಯತ್ನಿಸಬಾರದು. ಸಜ್ಜನರು ಪಾಪಕಾರ್ಯಗಳನ್ನೂ ಪಾಪಸಾಧ್ಯಕಾರ್ಯಗಳನ್ನೂ ಎಂದೂ ಮಾಡುವದಿಲ್ಲ. ಆದುದರಿಂದ ರಾಜರು ಕ್ರೌರ್ಯ, ಮೋಸ, ವಂಚನೆ, ಮಿಥ್ಯಾ, ಬಲಾತ್ಕಾರ ಮುಂತಾದವುಗಳಿಂದ ಯಾವ ಕಾರ್ಯವನ್ನೂ ಮಾಡಲು ಹವಣಿಸತಕ್ಕದ್ದಲ್ಲ. ಯಾವ ಕಾರ್ಯದಲ್ಲಿ ಯಾವನಿಗೆ ವಿಶೇಷವಾದ ಗತಿ ಕೌಶಲ್ಯ ಇರುವದೋ ಅದನ್ನು ಪರೀಕ್ಷಿಸಿ, ಅವರನ್ನು ಅಂತಹ ಕಾರ್ಯದಲ್ಲಿಯೇ ನಿಯಮಿಸಬೇಕು.

## ರಾಜರ ಹೊಸ ಕಣ್ಣು

**ಗುಣಿನಾಂ ಪೂಜನಂ ಕುರ್ಯಾತ್ ನಿರ್ಗುಣಾನಾಂ ಚ ಶಾಸನಮ್।**
**ಕಥಿತಾಃ ಸತತಂ ರಾಜನ್ ರಾಜಾನಶ್ಚಾರ ಚಕ್ಷುಷಃ ॥**
**ಸ್ವಕೇ ದೇಶೇ ಪರೇ ದೇಶೇ ಜ್ಞಾನಶೀಲಾನ್ ವಿಚಕ್ಷಣಾನ್ ।**
**ಅನಾಹಾರ್ಯಾನ್ ಕ್ಲೇಶಸಹಾನ್ನಿಯುಂಜೀತ ತಥಾ ಚರಾನ್ ॥**

ಸದ್ಗುಣ ಉಳ್ಳವರನ್ನು ಗೌರವಿಸಬೇಕು. ದುರ್ಗುಣಿಗಳನ್ನು ಶಾಸನಮಾಡಬೇಕು. ಈ ಗುಣಾಗುಣಗಳನ್ನು ಗುಪ್ತಚಾರರ ಮುಖಾಂತರ ತಿಳಿದುಕೊಳ್ಳಬೇಕು. ಗುಪ್ತಚಾರರು

ರಾಜರ ಕಣ್ಣುಗಳಿದ್ದಂತೆ, ತನ್ನ ದೇಶದಲ್ಲಿಯೂ ಪರದೇಶದಲ್ಲಿಯೂ ಒಳ್ಳೇಜ್ಞಾನವಂತರೂ ಚಾಣಾಕ್ಷರೂ, ಆಮಿಷಕ್ಕೆ ಒಳಗಾಗದವರೂ ಆದ ಕಷ್ಟ ಸಹಿಷ್ಣು ಗುಪ್ತಚಾರರನ್ನು ನಿಯಮಿಸಬೇಕು.

## ಬೇಹುಗಾರರ ಬಹುರೂಪ

**ಜನಸ್ಯಾऽವಿದಿತಾನ್ ಸೌಮ್ಯಾನ್ ತಥಾ ಜ್ಞಾತಾನ್ ಪರಸ್ಪರಮ್ ।**
**ವಣಿಜೋ ಮಂತ್ರಕುಶಲಾನ್ ಸಾಂವತ್ಸರ ಚಿಕಿತ್ಸಕಾನ್ ॥**

ಜನರಿಗೆಲ್ಲ ಪರಿಚಯವಿರದ ಸೌಮ್ಯಸ್ವಭಾವದ ಇಲ್ಲದೆ ಪರಸ್ಪರ ಚಾರರ ಪರಿಚಯ ಇರುವ ಗುಪ್ತಚಾರರನ್ನು ನಿಯಮಿಸಬೇಕು. ಗುಪ್ತಚಾರರು ವ್ಯಾಪಾರಿ, ಯಾಜ್ಞಿಕ, ಜ್ಯೋತಿಷಿ , ಸನ್ಯಾಸಿ ಮುಂತಾದ ವೇಷಗಳನ್ನು ತಳೆದಿರಬೇಕು.

**ತಥಾ ಪ್ರವ್ರಾಜಿತಾಕಾರಾಂಶ್ಚಾರಾನ್ ರಾಜಾ ನಿಯೋಜಯೇತ್ ।**
**ನೈಕಸ್ಯ ರಾಜಾ ಶ್ರದ್ದಧ್ಯಾತ್ ಚಾರಸ್ಯಾಪಿ ಸುಭಾಷಿತಮ್ ॥**

ಬೈರಾಗಿ ಮುಂತಾದ ಬಗೆಬಗೆಯ ಆಕಾರದ ಚಾರರನ್ನು ರಾಜರು ಗೊತ್ತುಪಡಿಸಿ ಅವರೆಲ್ಲರ ಮಾತುಗಳನ್ನು ಲಕ್ಷ್ಯವಿಟ್ಟು ಕೇಳಿಕೊಳ್ಳಬೇಕು. ಬೇಹುಗಾರರು ಹೇಳಿದ್ದನ್ನೆಲ್ಲ ರಾಜರು ನಂಬಬಾರದು. ಒಬ್ಬನೇ ಚಾರನ ಒಳ್ಳೆ ಮಾತಿನ ಮೇಲೆ ಎಂದೂ ವಿಶ್ವಾಸ ಇಡಬಾರದು.

## ಚಾರರನ್ನು ಯಾವಾಗ ನಂಬಬೇಕು

**ದ್ವಯೋಃ ಸಂಬಂಧಮಾಜ್ಞಾಯ ಶ್ರದ್ಧದ್ಯಾನ್ನೃಪತಿಸ್ತದಾ ।**
**ಪರಸ್ಪರಸ್ಯಾऽ ವಿದಿತೌ ಯದಿ ಸ್ಯಾತಾಂ ಚ ತಾವುಭೌ ॥**

ಇಬ್ಬರು ಚಾರರು ಒಂದೇ ಬಗೆಯ ಸುದ್ದಿ ಸಮಾಚರ ತಿಳಿಸಿದರೆ ಅವರಿಬ್ಬರ ಸಂಬಂಧವನ್ನು ಮೊದಲು ಪರೀಕ್ಷಿಸಬೇಕು. ಅನಂತರ ವಿಶ್ವಾಸಾರ್ಹ ಅನಿಸಿದರೆ ಮಾತ್ರ ನಂಬಬೇಕು. ಪರಸ್ಪರ ಗೊತ್ತಿಲ್ಲದೆ ಅಪರಿಚಿತರಾದ ಇಬ್ಬರು ಬೇಹುಗಾರರು ಒಂದೇ ವಿಷಯವನ್ನು ಬಂದು ಹೇಳಿದರೆ ನಂಬಬೇಕು.

## ಚಾರ-ಸಮಾಚಾರ

**ತಸ್ಮಾದ್ರಾಜಾ ಪ್ರಯತ್ನೇನ ಗೂಢಾಂಶ್ಚಾರಾನ್ನಿಯೋಜಯೇತ್ ।**
**ರಾಗಾಪರಾಗೌ ಭೃತ್ಯಾನಾಂ ಜನಸ್ಯ ಚ ಗುಣಾಗುಣಾನ್ ।**
**ಸರ್ವಂ ರಾಜ್ಞಾಂ ಚರಾಯತ್ತಂ ತೇಷು ಯತ್ನಪರೋ ಭವೇತ್ ॥**

ಆದುದರಿಂದ ರಾಜರು ತನ್ನ ಬೇಹುಗಾರರನ್ನು ಜನರ ಸದ್ಗುಣ ದುರ್ಗುಣ ತಿಳಿಯಲಿಕ್ಕೂ ಮತ್ತು ತನ್ನ ಸೇವಕರ ರಾಗದ್ವೇಷ ತಿಳಿಯಲಿಕ್ಕೂ, ವೈರಿಗಳ ವಿಜಯಗಳನ್ನು ಅರಿಯಲಿಕ್ಕೂ ದಕ್ಷರಾದ ಗೂಢಚಾರರನ್ನು ಪ್ರಯತ್ನಪೂರ್ವಕವಾಗಿ

ನೇಮಿಸತಕ್ಕದ್ದು. ರಾಜರ ಸರ್ವಕಾರ್ಯಗಳ ಯಶಾಪಯಶಗಳು ಗುಪ್ತಚಾರರ ಮೇಲೆ ಅವಲಂಬಿಸಿರುತ್ತವೆ. ಆದುದರಿಂದ ಸಮರ್ಥ ಬೇಹುಗಾರರ ಪಡೆಯನ್ನು ರಾಜರು ಪ್ರಯತ್ನಪೂರ್ವಕ ನಿಯಮಿಸಬೇಕು.

### ತಿಳಿದು ಮಾಡುವದೇನು ?

**ಕರ್ಮಣಾ ಕೇನ ಮೇ ಲೋಕೇ ಜನ ಸರ್ವೋಽಪಿರಜ್ಯತೆ ।**
**ವಿರಜ್ಯತೇ ಕೇನ ತಥಾ ವಿಜ್ಞೇಯಂ ತನ್ಮಹೀಕ್ಷಿತಾ ।**
**ವಿರಾಗಜನಕಂ ಲೋಕೇ ವರ್ಜನೀಯಂ ವಿಶೇಷತಃ ॥**

ಯಾವ ಕಾರ್ಯದಿಂದ ಜನರಿಗೆ ತನ್ನ ಮೇಲೆ ಪ್ರೀತಿ ಉಂಟಾಗುವದು, ಯಾವ ಕಾರ್ಯದಿಂದ ಜನರಿಗೆ ಅಪ್ರೀತಿ ತನ್ನ ಮೇಲೆ ಉಂಟಾಗುವದು ಎಂಬುದನ್ನು ರಾಜರು ಸೂಕ್ಷ್ಮವಾಗಿ ಅರಿತು ಪ್ರಜೆಗಳಿಗೆ ಅಪ್ರೀತಿಯನ್ನುಂಟುಮಾಡುವ ಕಾರ್ಯಗಳನ್ನು ಬಿಡಬೇಕು. ಅನುರಾಗವು ಉಂಟಾಗುವ ಕಾರ್ಯಗಳನ್ನು ಮಾತ್ರ ಪ್ರಯತ್ನದಿಂದ ಮಾಡಬೇಕು.

### ಅನುರಾಗದ ಕೂಸು ಲಕ್ಷ್ಮಿ

**ತಥಾ ಚ ರಾಗ ಪ್ರಭವಾ ಹಿ ಲಕ್ಷ್ಮ್ಯೋ ರಾಜ್ಞಾಂ ಮತಾ ಭಾಸ್ಕರವಂಶಚಂದ್ರ ।**
**ತಸ್ಮಾತ್ಪ್ರಯತ್ನೇನ ನರೇಂದ್ರಮುಖ್ಯೈಃ ಕಾರ್ಯೋಽನುರಾಗೋ ಭುವಿ ಮಾನವೇಷು ॥**

ಸೂರ್ಯವಂಶಕ್ಕೆ ಚಂದ್ರನಂತಿರುವ ಮನು ಮಹಾರಾಜನೆ, ಸಂಪತ್ತು ಜನಾನುರಾಗದಿಂದಲೆ ಹುಟ್ಟುವದು. ಆದುದರಿಂದ ರಾಜರು ಜನರ ಅನುರಾಗವನ್ನು ಸಂಪಾದಿಸಲಿಕ್ಕಾಗಿ ಸರ್ವ ರೀತಿಯಿಂದಲೂ ಪ್ರಯತ್ನಮಾಡಿ ಪ್ರಜಾಕೋಟಿಯ ಮನಸ್ಸಿನಲ್ಲಿ ತನ್ನ ಪ್ರೇಮಾನುರಾಗಗಳು ಉತ್ಪನ್ನವಾಗುವಂತೆ ಮಾಡಬೇಕು.

### ರಾಜಸೇವಕರಿಗೆ ಕಿವಿಮಾತು

**ರಾಜಾಽ ಯತ್ತೋ ವದೇದ್ವಾಕ್ಯಂ ಶ್ರೋತವ್ಯಂ ತತ್ಪ್ರಯತ್ನತಃ ।**
**ಆಕ್ಷಿಪ್ಯ ವಚನಂ ತಸ್ಯ ನ ವಕ್ತವ್ಯಂ ತಥಾ ವಚಃ**
**ದುಷ್ಕೃತಾನಿ ನರೇಂದ್ರಸ್ಯ ನ ತು ಸಂಕೀರ್ತಯೇತ್ ಕ್ವಚಿತ್ ।**
**ಔದಾರ್ಯೇಣ ನ ತದ್ದೇಯಮನ್ಯಸ್ಮೈ ಭೂತಿಮಿಚ್ಛತಾ ॥**
**ವಸ್ತ್ರಮಸ್ತ್ರಮಲಂಕಾರಂ ರಾಜ್ಞಾ ದತ್ತಂ ತು ಧಾರಯೇತ್ ॥**

ರಾಜರು ನುಡಿದ ವಚನವನ್ನು ಲಕ್ಷ್ಯವಿಟ್ಟು ಕೇಳಬೇಕು. ಅವರ ಮಾತನ್ನು ಆಕ್ಷೇಪಿಸಿ ಎಂದೂ ಪ್ರತಿವಾಕ್ಯವನ್ನು ನುಡಿಯಬಾರದು. ರಾಜರು ಮಾಡಿದ ದುಷ್ಟಕಾರ್ಯಗಳನ್ನು ಉಚ್ಚರಿಸಬಾರದು. ವಸ್ತ್ರ, ಶಸ್ತ್ರ, ಅಲಂಕಾರ ಮುಂತಾದವುಗಳನ್ನು ರಾಜರು ಕೊಟ್ಟರೆ ಗೌರವದಿಂದ ತಾನೇ ಧರಿಸಬೇಕು. ಔದಾರ್ಯದಿಂದ ರಾಜದತ್ತವಾದ ವಸ್ತ್ರಾಲಂಕಾರಗಳನ್ನು ಬೇರೆಯವರಿಗೆ ಕೊಡಕೂಡದು.

ನಾಽನಿರ್ದಿಷ್ಟೇ ತಥಾ ದ್ವಾರೇ ಪ್ರವಿಶೇತ್ತು ಕಥಂಚನ ।
ನ ಚ ಪಶ್ಯೇತ್ತು ರಾಜಾನಮಯೋಗ್ಯಾಸು ಚ ಭೂಮಿಷು ॥

ಮೊದಲು ಹೇಳಿ, ಭೇಟಿಗೆ ಅವರಿಂದ ಅಪ್ಪಣೆ ಪಡೆಯದೆ ಅರಮನೆಯ ಬಾಗಿಲಿಗೆ ಪ್ರವೇಶಮಾಡಬಾರದು. ರಾಜರು ದರ್ಶನಕ್ಕೆ ಅಯೋಗ್ಯ ಸ್ಥಳದಲ್ಲಿದ್ದಾಗ ಅವರನ್ನು ಕಾಣಬಾರದು.

## ಏಕಾಂತದಲ್ಲಿ ಹೀಗೆ, ಲೋಕಾಂತದಲ್ಲಿ ಹಾಗೆ

ಅನುಕೂಲಂ ಪ್ರಿಯಂ ತಸ್ಯ ವಕ್ತವ್ಯಂ ಜನಸಂಸದಿ ।
ರಹೋಗತಸ್ಯ ವಕ್ತವ್ಯಮಪ್ರಿಯಂ ಯದ್ಧಿತಂ ಭವೇತ್ ॥

ಜನರ ಮಧ್ಯದಲ್ಲಿ ಇದ್ದಾಗ ರಾಜರಿಗೆ ಅನುಕೂಲವಾಗಿಯೇ ಸವಿನುಡಿಗಳನ್ನು ಆಡಬೇಕು. ಅವರಿಗೆ ಅಪ್ರಿಯವಾದ ಪ್ರತಿಕೂಲವೆನಿಸುವ ಹಿತವಾದವನ್ನು ಹೇಳುವದಿದ್ದರೆ, ಅವರನ್ನು ಏಕಾಂತದಲ್ಲಿ ಭೇಟಿಮಾಡಿ ಹೇಳಬೇಕು.

## ಈ ಆರರಿಂದ ದೂರ ಇರಬೇಕು

ಶಾಠ್ಯಂ ಲೌಲ್ಯಂ ಚ ಪೈಶೂನ್ಯಂ ನಾಸ್ತಿಕ್ಯಂ ಕ್ಷುದ್ರತಾ ತಥಾ ।
ಚಾಪಲ್ಯಂ ಚ ಪರಿತ್ಯಾಜ್ಯಂ ನಿತ್ಯಂ ರಾಜ್ಞೋಽನುಜೀವಿಭಿಃ ॥

ರಾಜರನ್ನು ಉಪಜೀವಿಸಿ ಇರುವವರು, ಶಾಠ್ಯ, ಲೋಲುಪತೆ, ಆಸೆ, ಚಾಡಿಕೋರತನ, ನಾಸ್ತಿಕತೆ, ಕ್ಷುದ್ರಬುದ್ಧಿ, ಚಂಚಲತೆ ಮುಂತಾದವುಗಳನ್ನು ಸಂಪೂರ್ಣವಾಗಿ ಬಿಟ್ಟು ಬಿಡಬೇಕು.

ಅಪೃಷ್ಟಶ್ಚಾಸ್ಯ ನ ಬ್ರೂಯಾತ್ ಕಾಮಂ ಬ್ರೂಯಾತ್ತಥಾ ಯದಿ ।
ಹಿತಂ ತಥ್ಯಂ ಚ ವಚನಂ ಹಿತೈಸ್ಸಹ ಸುನಿಶ್ಚಿತಮ್ ॥

ಕೇಳದೆ ರಾಜರಿಗೆ ಯಾವ ಮಾತನ್ನೂ ಹೇಳಬಾರದು. ಒಂದು ವೇಳೆ ಕೇಳದೇ ಹೇಳುವ ಪ್ರಸಂಗ ಬಂದರೆ ಅದು ಸತ್ಯ ಹಾಗೂ ಹಿತಕರವಾಗಿರಬೇಕು. ಅದನ್ನು ಕೂಡ ಅವನಿಗೆ ಬೇಕಾದ ಆಪ್ತಜನರೊಂದಿಗೆ ಕೂಡಿಕೊಂಡು ನಿಶ್ಚಿತವಾಗಿ ಹೇಳಬೇಕು.

## ಇವರು ಊರಲ್ಲಿ ಇರಲು ಅಯೋಗ್ಯರು

ಭೀತಾನ್ ಪ್ರಮತ್ತಾನ್ ಕುಪಿತಾಂಸ್ತಥೈವ ಚ ವಿಮಾನಿತಾನ್ ।
ಕುಭೃತ್ಯಾನ್ ಪಾಪಶೀಲಾಂಶ್ಚ ನ ರಾಜಾ ವಾಸಯೇತ್ಪುರೇ ॥

ಅಂಜುಬುರಕ, ತಲೆಕೆಟ್ಟವ, ಶೀಘ್ರಕೋಪಿ, ಅಪಮಾನಿತ, ಮತ್ತು ದುರಾಚಾರಿ, ದುಶ್ಶೀಲರಾದ ದುಷ್ಟಸೇವಕರನ್ನು ರಾಜನು ತನ್ನ ಪಟ್ಟಣದಲ್ಲಿ ಇರಗೊಡಬಾರದು.

## ತ್ಯಜಿಸಬೇಕಾದ ತ್ರಿದೋಷ

ಮೃಗಯಾ ಪಾನಮಕ್ಷಾಂಶ್ಚ ವರ್ಜಯೇತ್ ಪೃಥಿವೀ ಪತಿಃ ।
ಏತಾನ್ಯಾಽಸೇವಮಾನಾಸ್ತು ವಿನಷ್ಟಾಃ ಪೃಥಿವೀಕ್ಷಿತಃ ॥

ಬಹವೋ ನರಶಾರ್ದೂಲ ತೇಷಾಂ ಸಂಖ್ಯಾ ನ ವಿದ್ಯತೆ ।
ದಿವಾ ಸ್ವಾಪಂ ಕ್ಷಿತೀಶಸ್ತು ವಿಶೇಷೇಣ ವಿವರ್ಜಯೇತ್ ॥
ವಾಕ್‌ಪಾರುಷ್ಯಂ ನ ಕರ್ತವ್ಯಂ ದಂಡಪಾರುಷ್ಯಮೇವ ಚ ।
ಪರೋಕ್ಷನಿಂದಾ ಚ ತಥಾ ವರ್ಜನೀಯಾ ಮಹೀಕ್ಷಿತಾ ॥

ಬೇಟೆ, ಕುಡಿತ, ಜೂಜು, ಮುಂತಾದವುಗಳನ್ನು ರಾಜರು ಬಿಟ್ಟುಬಿಡಬೇಕು. ಇಂತಹ ದುಶ್ಚಟಗಳಿಗೆ ಒಳಗಾಗಿ ನಾಶಹೊಂದಿದ ರಾಜರಿಗೆ ಲೆಕ್ಕವಿಲ್ಲ. ರಾಜರು ಹಗಲು ಹೊತ್ತು ಮಲಗಬಾರದು, ಬಿರುನುಡಿ ಆಡಬಾರದು. ಉಗ್ರದಂಡ ವಿಧಿಸಬಾರದು. ಬೆನ್ನಹಿಂದೆ ನಿಂದಿಸಬಾರದು.

## ಇಬ್ಬಗೆಯ ಅರ್ಥದೂಷಣ

ಅರ್ಥಸ್ಯ ದೂಷಣಂ ರಾಜಾ ದ್ವಿಪ್ರಕಾರಂ ವಿವರ್ಜಯೇತ್ ।
ಅರ್ಥಾನಾಂ ದೂಷಣಂ ಚೈಕಂ ತಥಾರ್ಥೇಷು ಚ ದೂಷಣಮ್ ॥
ಪ್ರಾಕಾರಾಣಾಂ ಸಮುಚ್ಛೇದೊ ದುರ್ಗಾದೀನಾಮಸತ್ಕ್ರಿಯಾ ।
ಅರ್ಥಾನಾಂ ದೂಷಣಂ ಪ್ರೋಕ್ತಂ ವಿಪ್ರಕೀರ್ಣತ್ವಮೇವ ಚ ॥

ರಾಜರು, ಎರಡು ವಿಧವಾದ ಅರ್ಥದ ದೂಷಣೆಯನ್ನು ಸರ್ವಥಾ ಮಾಡಬಾರದು. ದುರ್ಗ, ಕೋಟೆ, ಕೊತ್ತಳ, ಮುಂತಾದವುಗಳನ್ನು ಸರಿಯಾಗಿ ಇಡದೇ ಹಾಳುಮಾಡುವದು ಒಂದು ತರಹದ ಅರ್ಥದೂಷಣೆ ಅನಿಸುತ್ತದೆ. ರಾಜರು ಮಾಡುವ ದುಷ್ಕಾರ್ಯಗಳೆಲ್ಲವೂ ಈ ಮೊದಲನೆಯ ಅರ್ಥದೂಷಣದಲ್ಲಿಯೇ ಸೇರಿದೆ.

ಅದೇಶಕಾಲೇ ಯದ್ದಾನಮಪಾತ್ರೇ ದಾನಮೇವ ಚ ।
ಅರ್ಥೇಷು ದೂಷಣಂ ಪ್ರೋಕ್ತಮಸತ್ ಕರ್ಮ ಪ್ರವರ್ತನಮ್ ॥

ಅಕಾಲದಲ್ಲಿ, ಅಪಾತ್ರದಲ್ಲಿ, ಅಸ್ಥಾನದಲ್ಲಿ ದಾನ ಕೊಡುವದು, ದುಷ್ಕಾರ್ಯಗಳಿಗೆ ಪ್ರೋತ್ಸಾಹನೆ ನೀಡುವದು, ಎರಡನೆಯ ಬಗೆಯ ಅರ್ಥದೂಷಣ ಅನಿಸುವದು.

## ರಾಜರ ಷಡ್ರಿಪುಗಳು

ಕಾಮಃ ಕ್ರೋಧೋ ಮದೋ ಮಾನೋ ಲೋಭೋ
ಹರ್ಷಸ್ತಥೈವ ಚ ॥
ಏತೇ ವರ್ಜ್ಯಾಃ ಪ್ರಯತ್ನೇನ ಸಾದರಂ ಪೃಥಿವೀಕ್ಷಿತಾ ॥

ಕಾಮ, ಸಿಟ್ಟು, ಅಹಂಕಾರ, ದುರಭಿಮಾನ, ಲೋಭ, ಹರ್ಷೋದ್ರೇಕ ಮುಂತಾದ ಗುಣಗಳನ್ನೆಲ್ಲ ರಾಜರಾದವರು ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು.

## ಆಲಸ್ಯ ಇಲ್ಲಿ ದೋಷ

ಅದೀರ್ಘಸೂತ್ರಶ್ಚ ಭವೇತ್ ಸರ್ವಕರ್ಮಸು ಪಾರ್ಥಿವಃ ।
ದೀರ್ಘಸೂತ್ರಸ್ಯ ನೃಪತೇಃ ಕರ್ಮಹಾನಿರ್ಧ್ರುವಂ ಭವೇತ್ ॥

ರಾಜರು ಎಲ್ಲ ಕರ್ಮಗಳಲ್ಲಿಯೂ ತ್ವರಿತ ನಿರ್ಣಯ ಉಳ್ಳವರಾಗಬೇಕು. ದೀರ್ಘ ಸೂತ್ರಿ ಎಂದರೆ ಆಲಸಿಯು ಆಗಿರಬಾರದು. ಆಲಸಿಯಾದ ರಾಜನ ಎಲ್ಲ ಕೆಲಸಗಳೂ ಕೆಟ್ಟುಹೋಗುತ್ತವೆ.

## ಆಲಸ್ಯ ಇಲ್ಲಿ ಗುಣ

**"ರಾಗೇ ದರ್ಪೇ ಚ ಮಾನೇ ಚ ದ್ರೋಹೇ ಪಾಪೇ ಚ ಕರ್ಮಣಿ।**
**ಅಪ್ರಿಯೇ ಚೈವ ಕರ್ತವ್ಯೇ ದೀರ್ಘಸೂತ್ರಃ ಪ್ರಶಸ್ಯತೇ ॥**

ಆದರೆ ಪ್ರೇಮ ಮಾಡುವಾಗಲೂ, ಮದವನ್ನು ತಾಳುವಾಗಲೂ, ಪ್ರತಿಷ್ಠೆ ಬಯಸುವಾಗಲೂ, ಇನ್ನೊಬ್ಬರ ದ್ರೋಹವನ್ನು ಕೈಕೊಳ್ಳುವಾಗಲೂ, ಯಾವುದಾದರೂ ಪಾಪಕಾರ್ಯದಲ್ಲಿ ಪ್ರವರ್ತಿಸುವಾಗಲೂ, ಅಪ್ರಿಯಕಾರ್ಯ ಎಸಗುವಾಗಲೂ ಆಲಸ್ಯ ಮಾಡಿದಷ್ಟು ಒಳ್ಳೆಯದು.

## ಗುಟ್ಟು ರಟ್ಟಾದರೆ

**ರಾಜ್ಞಾ ಸಂವೃತ ಮಂತ್ರೇಣ ಸದಾ ಭಾವ್ಯಂ ನೃಪೋತ್ತಮ ।**
**ತಸ್ಮಾऽ ಸಂವೃತ ಮಂತ್ರಸ್ಯ ರಾಜ್ಞಃ ಸರ್ವಾಪದೋ ಧ್ರುವಮ್ ॥**

**ಕೃತಾನ್ಯೇವ ತು ಕಾರ್ಯಾಣಿ ಜ್ಞಾಯಂತೇ ಯಸ್ಯ ಭೂಪತೇಃ**
**ನಾರಬ್ಧಾನಿ ಮಹಾಭಾಗ ತಸ್ಯ ಸ್ಯಾದ್ವಸುಧಾ ವಶೇ ॥**

ರಾಜರು ತಮ್ಮ ವಿಚಾರಗಳನ್ನೆಲ್ಲ ಗೌಪ್ಯ ಇಟ್ಟಿರಬೇಕು. ರಾಜಕೀಯ ವಿಷಯಗಳ ಗುಟ್ಟುರಟ್ಟಾದರೆ ಎಲ್ಲವಿಧವಾದ ಅನರ್ಥಗಳು ಒದಗುವದು ಖಂಡಿತ.

ಯಾವ ರಾಜನು ಯಾವದೇ ಯೋಜನೆ ಕೈಕೊಂಡಾಗ, ಪ್ರಾರಂಭವು ಯಾರಿಗೂ ಗೊತ್ತಾಗದೆ ಅದು ಮುಗಿದ ಬಳಿಕ ಮಾತ್ರ ಕೃತ ಕಾರ್ಯವು ತಿಳಿಯುವದೋ ಅಂಥ ರಾಜನಿಗೆ ಇಡೀ ಭೂಮಂಡಲವು ಕೈವಶವಾಗುವದು.

**ಮಂತ್ರಮೂಲಂ ಸದಾ ರಾಜ್ಯಂ ತಸ್ಮಾನ್ಮಂತ್ರಃ ಸುರಕ್ಷಿತಃ ।**
**ಕರ್ತವ್ಯಃ ಪೃಥಿವೀಪಾಲೈರ್ಮಂತ್ರ ಭೇದಭಯಾತ್ಸದಾ ॥**

**ಮಂತ್ರವಿತ್ಸಾಧಿತೋ ಮಂತ್ರಃ ಸಂಪತ್ತೀನಾಂ ಸುಖಾವಹಃ ।**
**ಮಂತ್ರಚ್ಛಲೇನ ಬಹವೋ ವಿನಷ್ಟಾಃ ಪೃಥಿವೀಕ್ಷಿತಃ ॥**

ರಾಜ್ಯದ ಭದ್ರತೆಯು ರಾಜರ ಮಂತ್ರಮೂಲವಾಗಿದೆ. ರಹಸ್ಯವಾದ ರಾಜಕೀಯ ವಿಷಯಗಳನ್ನು ಗುಪ್ತವಾಗಿ ಇಡುವದರ ಮೇಲೆಯೇ ರಾಷ್ಟ್ರದ ಭದ್ರತೆಯು ಅವಲಂಬಿಸಿರುತ್ತದೆ. ಆದುದರಿಂದ ಮಹತ್ವದ ವಿಷಯಗಳನ್ನೆಲ್ಲ ರಾಜರು ಜಾಗರೂಕರಾಗಿ ಗುಟ್ಟಾಗಿ ಇಟ್ಟಿರಬೇಕು. ದೂರದೃಷ್ಟಿಯಿಂದ ವಿಚಾರಶೀಲನಾದ

ರಾಜನೂ ಮಂತ್ರಿಗಳೂ ಮುಂದಾಲೋಚನೆಮಾಡಿ, ರಹಸ್ಯವಾಗಿ ಕೈಕೊಂಡ ಗುಪ್ತಯೋಜನೆಗಳು ಪ್ರಜಾಜನರಿಗೆ ಸಂಪತ್ತು, ಸುಖಗಳನ್ನು ತಂದುಕೊಡುತ್ತವೆ. ರಾಜರಹಸ್ಯಗಳು ಬಯಲಾಗಿ ಎಷ್ಟೋ ಅರಸರು ನಾಶಹೊಂದಿದ್ದಾರೆ.

## ಕರ ಹೇರಬಾರದು, ಜನರನ್ನು ಹೀರಬಾರದು

**ಯಥಾ ನ ಸ್ಯಾತ್ ಕೃಶೀಭಾವಃ ಪ್ರಜಾನಾಮನವೇಕ್ಷಯಾ ।**
**ತಥಾ ರಾಜ್ಞಾ ಪ್ರಕರ್ತವ್ಯಂ ಸ್ವಂ ರಾಷ್ಟ್ರಂ ಪರಿರಕ್ಷತಾ ॥**

ಪ್ರಜರ ಉದಾಸೀನತೆಯಿಂದ ಅರ್ಥಾತ್ ರಾಜರ ಅನಾದರದಿಂದ ಮಂತ್ರಿಗಳು ಹೇರಿದ ಕರಭಾರದಿಂದ ಪ್ರಜಾಜನರು ಕ್ಷೀಣರಾಗಿ ಹೋಗದಂತೆ ಎಚ್ಚರಿಕೆ ವಹಿಸಬೇಕು. ಇದರಿಂದ ರಾಷ್ಟ್ರದ ರಕ್ಷಣೆಯಾಗುವದು.

**ಮೋಹಾದ್ರಾಜಾ ಸ್ವರಾಷ್ಟ್ರಂ ಯಃ ಕರ್ಷಯತ್ಯನವೇಕ್ಷಯಾ ।**
**ಸೋಽಚಿರಾದ್ ಭ್ರಶ್ಯತೇ ರಾಜ್ಯಾಜ್ಜೀವಿತಾಚ್ಚ ಸಬಾಂಧವಃ ॥**

ಯಾವ ರಾಜರು ಲೋಭದಿಂದ ಮೋಹದಿಂದ ತನ್ನ ರಾಷ್ಟ್ರದ ಜನರನ್ನೆಲ್ಲ ಶೋಷಣೆ ಮಾಡುವನೋ ಅವನು ಕೆಲವೇ ದಿನಗಳಲ್ಲಿ ರಾಜ್ಯಭ್ರಷ್ಟನಾಗುವನು. ಮತ್ತು ಬಂಧು ಬಾಂಧವರೊಂದಿಗೆ ಮರಣ ಹೊಂದುವನು.

## ಕರುವಿನಂತೆ ಬೆಳೆಸು, ಎತ್ತಿನಂತೆ ದುಡಿಸು

**ಭೃತೋ ವತ್ಸೋ ಜಾತಫಲಃ ಕರ್ಮಯೋಗ್ಯೋ ಯಥಾ ಭವೇತ್।**
**ತಥಾ ರಾಷ್ಟ್ರಂ ಮಹಾಭಾಗ! ಭೃತಂ ಕರ್ಮಸಹಂ ಭವೇತ್ ।**
**ಯೋ ರಾಷ್ಟ್ರಮನುಗೃಹ್ಣಾತಿ ರಾಜ್ಯಂ ಸ ಪರಿರಕ್ಷತಿ ॥**

ಎಳೆಕರುವು ಸರಿಯಾಗಿ ಪೋಷಣೆಮಾಡಿದರೆ ದೊಡ್ಡದಾಗಿ ಬೇಕಾದಂತಹ ಭಾರಹೊರಲು ಸಮರ್ಥವಾಗುವುದು. ಅದರಂತೆಯೇ ರಾಷ್ಟ್ರದಲ್ಲಿಯ ಜನರನ್ನು ಸರಿಯಾಗಿ ಪಾಲನಪೋಷಣಮಾಡಿ ಬೆಳೆಸಿದರೆ ಅವರು ಮುಂದೆ ಬೇಕಾದಂತಹ ಕಾರ್ಯಮಾಡಲು ಸಮರ್ಥರಾಗುವರು. ಯಾವನು ರಾಷ್ಟ್ರವನ್ನೆಲ್ಲ ಪ್ರೇಮದಿಂದ ಅನುಗ್ರಹಿಸುತ್ತಾನೋ ಅವನೇ ರಾಜ್ಯವನ್ನು ಸರಿಯಾಗಿ ಪರಿಪಾಲಿಸುತ್ತಾನೆ.

## ದೈವ ಪೌರುಷಗಳಲ್ಲಿ ಯಾವುದು ಶ್ರೇಷ್ಠ ?

**ಸ್ವಮೇವ ಕರ್ಮ ದೈವಾಖ್ಯಂ ವಿದ್ಧಿ ದೇಹಾಂತರಾಽರ್ಜಿತಮ್ ।**
**ತಸ್ಮಾತ್ಪೌರುಷಮೇವೇಹ ಶ್ರೇಷ್ಠಮಾಹುರ್ಮನೀಷಿಣಃ ॥**

ದೇಹಾಂತರದಲ್ಲಿ ತಾನು ಮಾಡಿದ ಕರ್ಮವೇದೈವ ಅನಿಸಿಕೊಳ್ಳುತ್ತಿದೆ. ಆದುದರಿಂದ ಮನುಷ್ಯನ ಕರ್ಮ ಅಥವಾ ಪ್ರಯತ್ನವೇ ಶ್ರೇಷ್ಠವೆಂದು ಜ್ಞಾನಿಗಳು ಹೇಳುತ್ತಾರೆ.

## ಪ್ರತಿಕೂಲ ದೈವ ಪ್ರಯತ್ನದಿಂದ ಅನುಕೂಲ

**ಪ್ರತಿಕೂಲಂ ತಥಾ ದೈವಂ ಪೌರುಷೇಣ ವಿಹನ್ಯತೆ ।**
**ಮಂಗಲಾऽಚಾರ ಯುಕ್ತಾನಾಂ ನಿತ್ಯಮುತ್ಥಾನಶಾಲಿನಾಮ್ ॥**

ಒಳ್ಳೇ ಸದಾಚಾರದಿಂದ ಒಡಗೂಡಿ ಯಾವಾಗಲೂ, ಉನ್ನತಿ ಹೊಂದಲು ಪ್ರಯತ್ನಮಾಡುತ್ತಿರುವ ಜನರ ಪೌರುಷದಿಂದ ದೈವವು ಪ್ರತಿಕೂಲವಾಗಿದ್ದರೂ ಶಾಂತವಾಗಿ ಅನುಕೂಲವಾಗುತ್ತದೆ.

**ಯೇಷಾಂ ಪೂರ್ವಕೃತಂ ಕರ್ಮ ಸಾತ್ವಿಕಂ ಮನುಜೋತ್ತಮ ।**
**ಪೌರುಷೇಣ ವಿನಾ ತೇಷಾಂ ಕೇಷಾಂಚಿದ್ ದೃಶ್ಯತೇ ಫಲಮ್ ॥**

ಯಾರು ಪೂರ್ವ ಜನ್ಮದಲ್ಲಿ ಸಾತ್ವಿಕಕರ್ಮಹೆಚ್ಚಾಗಿ ಮಾಡಿರುವರೋ ಅವರಿಗೆ ಈ ಜನ್ಮದಲ್ಲಿ ಪೌರುಷ ಇಲ್ಲದೆಯೂ ಒಮ್ಮೊಮ್ಮೆ ಒಳ್ಳೆ ಫಲವು ದೊರಕುವದು ಕಂಡುಬರುವದು.

## ದೈವ ಹೇಡಿಗಳ ಸಮಾಧಾನ

**ಪೌರುಷೇಣಾಪ್ಯತೇ ರಾಜನ್ ಪ್ರಾರ್ಥಿತವ್ಯಂ ಫಲಂ ನರೈಃ ।**
**ದೈವಮೇವ ವಿಜಾನಂತಿ ನರಾಃ ಪೌರುಷ ವರ್ಜಿತಾಃ ॥**

ಮನುಷ್ಯರಿಗೆ ಬಯಸಿದ ಫಲವೆಲ್ಲವೂ ಪೌರುಷ ಅಥವಾ ಪ್ರಯತ್ನದಿಂದ ದೊರಕುವದು. ಪೌರುಷ ಶೂನ್ಯರಾದ ಜನರು ದೈವದಿಂದಲೇ ತಮಗೆ ಫಲ ಬರುವದೆಂದು ತಿಳಿಯುತ್ತಾರೆ.

## ಫಲ ನೀಡುವ ತ್ರಿಕೂಟ

**ದೈವಂ ಪುರುಷಕಾರಶ್ಚ ಕಾಲಶ್ಚ ಪುರುಷೋತ್ತಮ ।**
**ತ್ರಯಮೇತನ್ಮನುಷ್ಯಸ್ಯ ಪಿಂಡಿತಂ ಸ್ಯಾತ್ ಫಲಾವಹಮ್ ॥**

ದೈವ, ಪ್ರಯತ್ನ, ಮತ್ತು ಅನುಕೂಲವಾದ ಕಾಲ ಈ ಮೂರು ಕೂಡಿಯೇ ಮನುಷ್ಯನಿಗೆ ಒಟ್ಟು ಫಲವನ್ನು ಕೊಡುತ್ತವೆ.

## ಪ್ರಯತ್ನದಿಂದ ಧರ್ಮಮಾಡಿ ಫಲ ಪಡೆಯಿರಿ

**ನಾಲಸಾಃ ಪ್ರಾಪ್ನುವಂತ್ಯರ್ಥಾನ್ ನ ಚ ದೈವ ಪರಾಯಣಾಃ ।**
**ತಸ್ಮಾತ್ಸರ್ವಪ್ರಯತ್ನೇನ ಆಚರೇದ್ಧರ್ಮಮುತ್ತಮಮ್ ॥**

ಬರೀ ದೈವವನ್ನು ನಂಬಿ ಕುಳಿತ ಆಲಸಿ ಜನರಿಗೆ ಯಾವ ಫಲವೂ ದೊರಕಲಾರದು. ಬರಿ ದೈವವನ್ನು ನಂಬಿ ಕುಳಿತವರಿಗೂ ಫಲವು ದೊರಕಲಾರದು. ಆದುದರಿಂದ ಸರ್ವಪ್ರಯತ್ನ ಮಾಡಿ ಉತ್ತಮವಾದ ಧರ್ಮವನ್ನು ಆಚರಿಸಬೇಕು.

## ಸಾಹಸಿಗಳೊಂದಿಗೆ ಲಕ್ಷ್ಮಿಯ ಸ್ವಯಂವರ

**ತ್ಯಕ್ತ್ವಾऽಲಸಾನ್ ದೈವಪರಾನ್ ಮನುಷ್ಯಾನುತ್ಥಾನಯುಕ್ತಾನ್**
**ಪುರುಷಾನ್ ಹಿ ಲಕ್ಷ್ಮೀಃ ।**

**ಅನ್ವಿಷ್ಯ ಯತ್ನಾದ್ ವೃಣುಯಾನ್ನೃಪೇಂದ್ರ!**
**ತಸ್ಮಾತ್ಸದೋತ್ಥಾನವತಾ ಹಿ ಭಾವ್ಯಮ್ ॥**

ಭಾಗ್ಯಲಕ್ಷ್ಮಿಯು 'ದೈವ ದೈವ' ಎಂದು ಕುಳಿತ, ಕೈಲಾಗದ ಆಲಸಿ ಮಾನವರನ್ನು ಬಿಟ್ಟು, ಪ್ರಯತ್ನಶೀಲರಾದ, ತಮ್ಮ ಬಾಹುಬಲದಿಂದಲೇ ತಮ್ಮ ಕಾಲಮೇಲೆಯೇ ಎದ್ದು ನಿಲ್ಲಲು ಹವಣಿಸುವ ಪೌರುಷವುಳ್ಳ ಪುರುಷರನ್ನು ಹುಡುಕಿಕೊಂಡು ಹೋಗುತ್ತಾಳೆ. ಆದುದರಿಂದ ಮನುಷ್ಯನು ಯಾವಾಗಲೂ ಪ್ರಯತ್ನಶೀಲನಾಗಬೇಕು.

## ಭೇದೋಪಾಯ

**ಭಿನ್ನಾ ಹಿ ಶಕ್ಯಾ ರಿಪವಃ ಪ್ರಭೂತಾಃ ಸ್ವಲ್ಪೇನ ಸೈನ್ಯೇನ**
**ನಿಹಂತುಮಾಜೌ ।**
**ಸುಸಂಹತಾನಾಂ ಹಿ ತತಸ್ತು ಭೇದಃ ಕಾರ್ಯೋ ರಿಪೂಣಾಂ**
**ನಯಶಾಸ್ತ್ರವಿದ್ಭಿಃ ॥**

ವೈರಿಗಳು ಬಹಳಷ್ಟು ಇದ್ದರೂ, ಅವರಲ್ಲಿ ಪರಸ್ಪರ ಒಡಕನ್ನು ಹುಟ್ಟಿಸಿದರೆ, ಸ್ವಲ್ಪೇ ಸೈನ್ಯದಿಂದ ಅವರನ್ನು ಕೊಲ್ಲಬಹುದು. ಆದುದರಿಂದ ಸಂಘಟಿತವಾದ ಶತ್ರುಸೈನ್ಯದಲ್ಲಿ ಭೇದ ಬುದ್ಧಿಯನ್ನು ನೀತಿಶಾಸ್ತ್ರವಿಶಾರದರು ಮೊದಲು ಹುಟ್ಟಿಸಬೇಕು.

## ದಂಡೋಪಾಯ

**ನ ಶಕ್ಯಾ ಯೇ ವಶೇ ಕರ್ತುಮುಪಾಯತ್ರಿತಯೇನ ತು ।**
**ದಂಡೇನ ತಾನ್ ವಶೀಕುರ್ಯಾತ್ ದಂಡೋ ಹಿ ವಶಕೃನ್ನೃಣಾಮ್॥**

ಸಾಮ, ದಾನ, ಭೇದ ಈ ಮೂರು ಉಪಾಯಗಳಿಂದ ಯಾರನ್ನು ವಶಪಡಿಸಿಕೊಳ್ಳುವದು ಸಾಧ್ಯವಿಲ್ಲವೋ ಅವರನ್ನು ದಂಡೋಪಾಯದಿಂದಲೇ ಮಣಿಸಬೇಕು. ದಂಡವು ಎಲ್ಲರನ್ನು ವಶದಲ್ಲಿ ಇಟ್ಟುಕೊಳ್ಳಲು ಮುಖ್ಯ ಉಪಾಯವಾಗಿದೆ.

## ಎಲ್ಲವೂ ದಂಡವನ್ನೇ ಅವಲಂಬಿಸಿದೆ

**ಸ್ವದೇಶೇ ಪರದೇಶೇ ವಾ ಧರ್ಮಶಾಸ್ತ್ರವಿಶಾರದಾನ್ ।**
**ಸಮೀಕ್ಷ್ಯ ಪ್ರಣಯೇದ್ದಂಡಂ ಸರ್ವಂ ದಂಡೇ ಪ್ರತಿಷ್ಠಿತಮ್ ॥**

ತನ್ನ ದೇಶದಲ್ಲಿಯಾಗಲೀ, ಪರದೇಶದಲ್ಲಿ ಆಗಲಿ, ದಂಡವನ್ನು ಧರ್ಮಶಾಸ್ತ್ರ ಬಲ್ಲವರನ್ನು ವಿಚಾರಿಸಿ ವಿಧಿಸಬೇಕು. ಯಾಕೆಂದರೆ, ಎಲ್ಲವೂ ದಂಡೋಪಾಯದ ಮೇಲೆಯೇ ರಾಜ್ಯದ ವ್ಯವಸ್ಥೆಯು ಅವಲಂಬಿಸಿದೆ.

## ದಂಡಕ್ಕೆ ಅವರಿವರೆಂದಿಲ್ಲ

**ಆಶ್ರಮೀ ಯದಿ ವಾ ವರ್ಣೀ ಪೂಜ್ಯೋ ವಾಽಥ ಗುರುರ್ಮಹಾನ್।**
**ನಾಽದಂಡ್ಯೋ ನಾಮ ರಾಜ್ಞೋಽಸ್ತಿ ಯಃ ಸ್ವಧರ್ಮೇ ನ ತಿಷ್ಠತಿ॥**

ಬ್ರಹ್ಮಚಾರಿಯೇ ಇರಲಿ ಸನ್ಯಾಸಿಯೇ ಇರಲಿ, ಅಥವಾ ಪೂಜ್ಯಗುರುಗಳೇ ಇರಲಿ, ಸ್ವಧರ್ಮದಿಂದ ಭ್ರಷ್ಟರಾಗಿ ಅಪರಾಧ ಎಸಗಿದರೆ ಅವರೆಲ್ಲರಿಗೂ ರಾಜನು ದಂಡ ವಿಧಿಸಲೇಬೇಕು. ರಾಜರಿಗೆ ಅದಂಡ್ಯ ಅಂದರೆ ದಂಡನೀಯ ರಾಗದವರು ಯಾರೂ ಇಲ್ಲ.

## ದಂಡ ವ್ಯತ್ಯಾಸವಾದರೆ ರಾಜರ ತಲೆದಂಡ

**ಅದಂಡ್ಯಾನ್ ದಂಡಯನ್ ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್ ।**
**ಇಹ ರಾಜ್ಯಾತ್ಪರಿಭ್ರಷ್ಟೋ ನರಕಂ ಚ ಪ್ರಪದ್ಯತೆ ॥**

ದಂಡಕ್ಕೆ ಅರ್ಹರಾದವರನ್ನು ದಂಡಿಸದೇ ಇದ್ದ ರಾಜನು, ಅಥವಾ ದಂಡಕ್ಕೆ ಅನರ್ಹರಾದ ನಿರಪರಾಧಿಗಳಾದವರನ್ನು ದಂಡಿಸಿದ ರಾಜನು ರಾಜ್ಯವನ್ನು ಕಳೆದುಕೊಳ್ಳುತ್ತಾನೆ, ಮುಂದೆ ನರಕವನ್ನು ಹೊಂದುತ್ತಾನೆ.

## ದಂಡವಿಲ್ಲದಿದ್ದರೆ ಗಂಡಾಂತರ

**ತಸ್ಮಾದ್ರಾಜ್ಞಾ ವಿನೀತೇನ ಧರ್ಮಶಾಸ್ತ್ರಾನುಸಾರತಃ ।**
**ದಂಡಪ್ರಣಯನಂ ಕಾರ್ಯಂ ಲೋಕಾನುಗ್ರಹಕಾಮ್ಯಯಾ ॥**

**ಬಾಲ ವೃದ್ಧಾSತುರ ಯತಿ ದ್ವಿಜ ಸ್ತ್ರೀವಿಧವಾ ಯತಿಃ ।**
**ಮಾತ್ಸ್ಯನ್ಯಾಯೇನ ಭಕ್ಷ್ಯೇರನ್ ಯದಿ ದಂಡಂ ನ ಪಾತಯೇತ್ ॥**

ಆದುದರಿಂದ ರಾಜನು ವಿನಯದಿಂದಲೇ ಧರ್ಮಶಾಸ್ತ್ರಕ್ಕೆ ಅನುಸರಿಸಿ, ದಂಡ ಶಿಕ್ಷೆಗೆ ಅರ್ಹರಾದವರಿಗೆ ದಂಡ, ಶಿಕ್ಷೆ ವಿಧಿಸಬೇಕು. ಆದುದರಿಂದಲೇ ಜನರಿಗೆಲ್ಲ ಕ್ಷೇಮ ಉಂಟಾಗುವದು. ಲೋಕಕ್ಕೆ ಕ್ಷೇಮವಾಗಬೇಕೆಂದಿದ್ದರೆ ರಾಜ್ಯದಲ್ಲಿ ರಾಜರು ಸರಿಯಾದ ದಂಡದ ವ್ಯವಸ್ಥೆ ಏರ್ಪಡಿಸಬೇಕು. ಇಲ್ಲದಿದ್ದರೆ ಮಕ್ಕಳು, ಮುದುಕರು, ರೋಗಿಗಳು, ಸನ್ಯಾಸಿ, ಬ್ರಾಹ್ಮಣ, ಅಬಲೆ, ವಿಧವೆ ಮುಂತಾದ ದುರ್ಬಲರನ್ನು ಪ್ರಬಲರಾದ ಜನರು ತಿಕ್ಕಿಮುಕ್ಕಿ ನಾಶಮಾಡಿಬಿಡುವರು. ದೊಡ್ಡ ಮೀನವು ಸಣ್ಣ ಮೀನವನ್ನು ನುಂಗುವಂತೆ ದಂಡದ ಭಯವಿಲ್ಲದಿದ್ದರೆ, ಪ್ರಬಲರು ದುರ್ಬಲರನ್ನು ನಾಶಿಸುವರು.

## ದೇವತೆಗಳಿಗೆ ದಂಡ

**ದೇವ ದೈತ್ಯೋರಗಗಣಾಃ ಸರ್ವೇ ಭೂತ ಪತತ್ರಿಣಃ ।**
**ಉತ್ಕ್ರಾಮಯೇಯುರ್ಮರ್ಯಾದಾಂ ಯದಿ ದಂಡಂ ನ ಪಾತಯೇತ್॥**

ಶ್ರೀಹರಿಯ ದಂಡನೆಯ ಭೀತಿ ಇಲ್ಲದಿದ್ದರೆ, ದೇವ, ದೈತ್ಯ, ಸರ್ಪ, ಪಂಚ ಮಹಾಭೂತ, ಪಶು, ಪಕ್ಷಿ ಎಲ್ಲವೂ ತಮ್ಮ ಸೀಮೆಯನ್ನು ಮೀರಿ ಜಗತ್ತನ್ನೇ ನಾಶಪಡಿಸುತ್ತಿದ್ದವು.

**ಪೂಜ್ಯಂತೆ ದಂಡಿನೊ ದೇವಾಃ ನ ಪೂಜ್ಯಂತೆ ತ್ವದಂಡಿನಃ ।**
**ನ ಬ್ರಹ್ಮಾಣಂ ವಿಧಾತಾರಂ ನ ಪೂಷಾರ್ಯಮಣಾವಪಿ ॥**

ದೇವತೆಗಳಲ್ಲಿಯೂ ದಂಡವನ್ನು ವಿಧಿಸುವ ಉಗ್ರದೇವತೆಗಳನ್ನೇ ಜನರು ಪೂಜಿಸುತ್ತಾರೆ. ಯಾರನ್ನೂ ದಂಡಿಸದ ಸೌಮ್ಯ ದೇವತೆಗಳನ್ನು ಯಾರೂ ಪೂಜಿಸುವುದಿಲ್ಲ. ಬ್ರಹ್ಮದೇವರನ್ನಾಗಲಿ ಪೂಷಾಆರ್ಯಮಾ ಮೊದಲಾದ ದೇವತೆಗಳನ್ನು ಯಾರೂ ಪೂಜಿಸುವುದಿಲ್ಲ.

## ದಂಡಿಸುವ ದೇವರಿಗೇ ಭಯದಿಂದ ಪೂಜೆ

**ಯಜಂತೇ ಮಾನವಾಃ ಸರ್ವೇ ಪ್ರಶಾಂತಾಃ ಸರ್ವಕರ್ಮಸು ।**
**ರುದ್ರಮಗ್ನಿಂ ಚ ಶಕ್ರಂ ಚ ಸೂರ್ಯಾಚಂದ್ರಮಸೌ ತಥಾ**
**ವಿಷ್ಣುಂ ದೇವಗಣಾಂಶ್ಚಾನ್ಯಾನ್ ದಂಡಿನಃ ಪೂಜಯಂತಿ ಚ ।**

ಸರ್ವಕರ್ಮಗಳಲ್ಲಿ ಪ್ರಶಾಂತರಾದ ಮಾನವರೂ ಕೂಡ ದಂಡಮಾಡುವ ಉಗ್ರದೇವತೆಗಳಾದ ರುದ್ರ, ಅಗ್ನಿ, ಇಂದ್ರ, ಸೂರ್ಯ, ಚಂದ್ರ, ವಿಷ್ಣು ಮುಂತಾದ ದೇವತೆಗಳನ್ನು ಮಾತ್ರ ಪೂಜಿಸುತ್ತಾರೆ. ಇಲ್ಲದಿದ್ದರೆ ಮಳೆ, ಬೆಳೆ, ಬೆಂಕಿ, ಬೆಳಕು ವೃಕ್ಷ ವನಸ್ಪತಿ ಮುಂತಾದವುಗಳು ದೊರಕಲಿಕ್ಕಿಲ್ಲ ಎಂಬ ಭೀತಿಯಿಂದಲೂ, ಯಾವುದಾದರೂ ರೀತಿಯಿಂದ ಕಾಡುವದೆಂಬ ಹೆದರಿಕೆಯಿಂದಲೂ ಕೆಲವೇ ಜನ ದೇವತೆಗಳನ್ನು ಮಾತ್ರ ಜನರು ಪೂಜಿಸುತ್ತಾರೆ.

## ದಂಡವೇ ಧರ್ಮ

**ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾऽಭಿರಕ್ಷತಿ ।**
**ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ।**
**ರಾಜದಂಡಭಯಾದೇವ ಪಾಪಾಃ ಪಾಪಂ ನ ಕುರ್ವತೆ ॥**

ಪ್ರಜರೆಲ್ಲರನ್ನು ದಂಡವೇ ಶಾಸನಮಾಡುತ್ತದೆ. ದಂಡವೇ ಎಲ್ಲರನ್ನು ರಕ್ಷಿಸುತ್ತದೆ. ಮಲಗಿದವರನ್ನು ಎಬ್ಬಿಸುವದು ದಂಡ. ದಾರಿ ತಪ್ಪಿದವರನ್ನು ಸನ್ಮಾರ್ಗಕ್ಕೆ ಹಚ್ಚುವದು ದಂಡ. ರಾಜದಂಡ ಭಯದಿಂದಲೇ ಪಾಪಿಗಳು ಕೆಟ್ಟಕೆಲಸ ಮಾಡುವದಿಲ್ಲ. ಆದುದರಿಂದ ದಂಡವೇ ಧರ್ಮವೆಂದು ಪಂಡಿತರು ತಿಳಿಯುತ್ತಾರೆ.

## ಯಮದಂಡದಿಂದ ಲೋಕಮರ್ಯಾದೆ

**ಯಮದಂಡ ಭಯಾದೇಕೇ ಪರಸ್ಪರ ಭಯಾದಪಿ ।**
**ಏವಂ ಸಾಂಸಿದ್ಧಿಕೇ ಲೋಕೇ ಸರ್ವಂ ದಂಡೇ ಪ್ರತಿಷ್ಠಿತಮ್ ॥**

ಕೆಲವರು ಯಮದಂಡದ ಭಯದಿಂದಲೂ, ಮತ್ತೆ ಉಳಿದವರು ಪರಸ್ಪರ ದಂಡನೆಯ ಭೀತಿಯಿಂದಲೂ, ದುಷ್ಟ ಕಾರ್ಯವನ್ನು, ಅತ್ಯಾಚಾರ, ಪಾಪಾಚಾರಗಳನ್ನು ಮಾಡುವುದಿಲ್ಲ. ಹೆದರಿಕೆಯಿಂದಲೇ, ಈ ಜಗತ್ತು ನಿಯಂತ್ರಿಸಲ್ಪಡುತ್ತದೆ. ಈ ಪ್ರಪಂಚದ ನೀತಿ, ಧರ್ಮ, ಸುವ್ಯವಸ್ಥೆಗಳೆಲ್ಲವೂ ದಂಡಕ್ರಮವನ್ನೇ ಅವಲಂಬಿಸಿರುತ್ತದೆ.

**ಅಂಧೇ ತಮಸಿ ಮಜ್ಜೇಯುರ್ಯದಿ ದಂಡಂ ನ ಪಾತಯೇತ್ ।**
**ಯಸ್ಮಾದ್ದಂಡೋ ದಂಡಯತಿ ಅದಂಡಾನ್ ದಮಯತ್ಯಪಿ**
**ದಮನಾದ್ದಂಡನಾಚ್ಚೈವ ತಸ್ಮಾದ್ದಂಡಂ ವಿದುರ್ಬುಧಾಃ ॥**

ಅಪರಾಧಿಗಳಿಗೆ ದಂಡವಿಧಿಸುವ ಕ್ರಮವಿಲ್ಲದಿದ್ದರೆ, ಜನರೆಲ್ಲರೂ ಘೋರವಾದ ದುಃಖದ ಕಗ್ಗತ್ತಲೆಯಲ್ಲಿ ಮುಳುಗಿಬಿಡುತ್ತಿದ್ದರು. ತಪ್ಪು ಮಾಡಿದ ಪಾಪಿಗಳನ್ನು ನಿಗ್ರಹಿಸಿ, ದಂಡಿಸುವುದರಿಂದ ಈ ಶಿಕ್ಷೆಗೆ 'ದಂಡ', ದಂಡ' ಎಂದು ಹೆಸರನ್ನು ಪಂಡಿತರು ಇಟ್ಟಿದ್ದಾರೆ.

## ದಂಡದ ಭೀತಿ, ದೇವತೆಗಳ ನೀತಿ

**ದಂಡಸ್ಯ ಭೀತೇ ಸ್ತ್ರಿದಶೈಸ್ಸಮೇತ್ಯೈರ್ಭಾಗೋಧೃತಃ ಶೂಲಧರಸ್ಯ ಯಜ್ಞೇ।**
**ದತ್ತಂ ಕುಮಾರೇ ಧ್ವಜನೀಪತಿತ್ವಂ ವರಂ ಶಿಶೂನಾಂ ಚ**
**ಭಯಾದ್ ಬಲಸ್ಯ ॥**

ಹಿಂದೆ ಪೂರ್ವಕಾಲದಲ್ಲಿ ಪರಮೇಶ್ವರನ ಯಜ್ಞದಲ್ಲಿ ಅವನು ವಿಧಿಸುವ ದಂಡಕ್ಕಾಗಿಯೇ ಹವಿಸ್ಸುಗಳನ್ನು ದೇವತೆಗಳು ಸ್ವೀಕರಿಸಿದರು ಮತ್ತು ಕುಮಾರನಿಗೆ ಸೇನಾಪತಿತ್ವನ್ನು ಶಿಶುಗಳಿಗೆ ವರವನ್ನು ದಯಪಾಲಿಸಿದರು.

**ದಂಡಪ್ರಣಯನಾರ್ಥಾಯ ರಾಜಾ ಸೃಷ್ಟಃ ಸ್ವಯಂಭುವಾ ।**
**ದೇವಭಾಗಾನುಪಾದಾಯ ಸರ್ವಭೂತಾದಿಗುಪ್ತಯೇ ॥**

ಬ್ರಹ್ಮದೇವರು ದೇವತೆಗಳಲ್ಲಿರುವ ಒಂದೊಂದು ಸತ್ವಭಾಗ ತೆಗೆದುಕೊಂಡು ದಂಡ ವಿಧಿಸಲಿಕ್ಕಾಗಿಯೇ ರಾಜ ಎಂಬ ವ್ಯಕ್ತಿಯನ್ನು ಸರ್ವಪ್ರಾಣಿಗಳ ಸಂರಕ್ಷಣೆಯ ಉದ್ದೇಶದಿಂದ ನಿರ್ಮಿಸಿದ್ದಾನೆ.

**ಶ್ಲಾಘ್ಯ ಏವ ಹಿ ವೀರಾಣಾಂ ದಾನಾದಾಪತ್ಸಮಾಗಮಃ ।**
**ನ ಬಾಧಕಾರಿ ಯದ್ದಾನಂ ತದಂಗಮಲವತ್ ಸ್ಮೃತಮ್ಃ ॥**

ವೀರರಿಗೆ ದಾನ ನೀಡುವುದರಿಂದ ಏನಾದರೂ ಅಪಾಯ ಅಥವಾ ಆಪತ್ತು ಬಂದರೆ ಅದು ಶ್ಲಾಘನೀಯವೇ ಸರಿ. ಏನೂ ಬಾಧಕಮಾಡದ ದಾನವು ಅಮಂಗಲವೆನಿಸುತ್ತದೆ. ಎಷ್ಟೇ ಬಾಧಕ ಬಂದರೂ ಅದನ್ನೆಲ್ಲ ಸಹಿಸಿಕೊಂಡು ನೀಡಿದ ದಾನವೇ ಶ್ರೇಷ್ಠವಾದ ದಾನವು.

## ದಾನೋಪಾಯವೇ ಶ್ರೇಷ್ಠ

**ಸರ್ವೇಷಾಮಪ್ಯುಪಾಯಾನಾಂ ದಾನಂ ಶ್ರೇಷ್ಠತಮಂ ಮತಮ್ ।**
**ಸುದತ್ತೇನೇಹ ಭವತಿ ದಾನೇನೋಭಯ ಲೋಕಜಿತ್ ॥**

ಎಲ್ಲ ಉಪಾಯಗಳಲ್ಲಿ ದಾನೋಪಾಯವೇ ಶ್ರೇಷ್ಠವಾದದ್ದು, ಸರಿಯಾಗಿ ದಾನವನ್ನು ಕೊಟ್ಟರೆ ಈ ಲೋಕ, ಪರಲೋಕ ಎರಡನ್ನೂ ಗೆಲ್ಲಬಹುದು.

## ದಾನದಿಂದ ದೇವತೆಗಳೂ ವಶ

**ನ ಸೋಽಸ್ತಿ ರಾಜನ್! ದಾನೇನ ವಶಗೋ ಯೋ ನ ಜಾಯತೇ ।**
**ದಾನೇನ ವಶಗಾ ದೇವಾ ಭವಂತೀಹ ಸದಾ ನೃಣಾಮ್ ॥**

ದಾನದಿಂದ ವಶನಾಗದ ಮನುಷ್ಯನು ಇಲ್ಲಿ ಯಾರೂ ಇಲ್ಲ. ಮಾನವರು ನೀಡಿದ ದಾನದಿಂದ ದೇವತೆಗಳೂ ಕೂಡ ವಶರಾಗುತ್ತಾರೆ.

## ಭೇದೋಪಾಯಕ್ಕೂ ದಾನೋಪಾಯವೇ ಮೂಲ

**ದಾನಮೇವೋಪಜೀವಂತಿ ಪ್ರಜಾಃ ಸರ್ವಾ ನೃಪೋತ್ತಮ ।**
**ಪ್ರಿಯೋ ಹಿ ದಾನವಾನ್ ಲೋಕೇ ಸರ್ವಸ್ಯೈವೋಪಜಾಯತೇ ॥**

**ದಾನವಾನಚಿರೇಣೈವ ತಥಾ ರಾಜಾ ಪರಾನ್ ಜಯೇತ್ ।**
**ದಾನವಾನೇವ ಶಕ್ನೋತಿ ಸಂಹತಾನ್ ಭೇದಿತುಂ ಪರಾನ್ ॥**

ಎಲ್ಲ ಪ್ರಜೆಗಳು ರಾಜರ ಔದಾರ್ಯವನ್ನೇ ಉಪಜೀವಿಸಿ ಬದುಕುತ್ತಾರೆ. ದಾನನೀಡುವ ಅರಸನು ಎಲ್ಲ ಜನರ ಪ್ರೀತಿಗೆ ಪಾತ್ರನಾಗುತ್ತಾನೆ. ಮುಕ್ತಹಸ್ತದಿಂದ ದಾನನೀಡುವ ಕೊಡುಗೈ ದೊರೆಯು ಬೇಗನೇ ವೈರಿಗಳನ್ನು ಗೆಲ್ಲುತ್ತಾನೆ. ಮತ್ತು ದಾನದ ಪ್ರಭಾವದಿಂದಲೇ ವೈರಿಗಳನ್ನು ಭೇದಿಸಲು ಅವನಿಗೆ ಸಾಧ್ಯವಾಗುತ್ತದೆ.

## ಯಮನಿಗೆ ಸಾವಿತ್ರಿ ಹೇಳಿದ ಸೂಕ್ತಿಗಳು

**ಧರ್ಮಾರ್ಜನೇ ಸುರಶ್ರೇಷ್ಠ ಕುತೋ ಗ್ಲಾನಿಃ ಕ್ಲಮಸ್ತಥಾ ।**
**ತ್ವತ್ಪಾದ ಮೂಲ ಸೇವಾನಃ ಪರಮಂ ಧರ್ಮಕಾರಣಂ ॥**

ದೇವಶ್ರೇಷ್ಠನೇ, ಧರ್ಮವನ್ನು ಸಂಪಾದಿಸಲು ಹೊರಟವರಿಗೆ ಶ್ರಮವೆಲ್ಲಿ? ನಿನ್ನಂತಹ ದೊಡ್ಡ ಮನುಷ್ಯರ ಪಾದಸೇವನೆಯು ಧರ್ಮಕ್ಕೆ ಮುಖ್ಯಕಾರಣವಾಗಿರುತ್ತದೆ.

## ಧರ್ಮದ ಮೇಲ್ಮೆ

**ಧರ್ಮಾರ್ಜನಂ ತಥಾ ಕಾರ್ಯಂ ಪುರುಷೇಣ ವಿಜಾನತಾ ।**
**ತಲ್ಲಾಭಃ ಸರ್ವಲಾಭೇಭ್ಯೋ ಯದಾ ದೇವ ವಿಶಿಷ್ಯತೇ ॥**

ತಿಳುವಳಿಕೆಯುಳ್ಳ ಮನುಷ್ಯನು ಮುಖ್ಯವಾಗಿ ಧರ್ಮವನ್ನು ಸಂಪಾದಿಸಬೇಕು. ಎಲ್ಲ ಲಾಭಕ್ಕಿಂತಲೂ ಧರ್ಮಲಾಭವು ಮಿಗಿಲಾದದ್ದು.

## ಬಂಜೆಯ ಮಕ್ಕಳಂತೆ

**ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗೋ ಜನ್ಮನಃ ಫಲಮ್ ।**
**ಧರ್ಮಹೀನಸ್ಯ ಕಾಮಾರ್ಥೌ ವಂಧ್ಯಾ ಸುತ ಸಮೌ ಪ್ರಭೋ ॥**

ಮನುಷ್ಯಜನ್ಮದ ಮುಖ್ಯಫಲಗಳು ಧರ್ಮ, ಅರ್ಥ, ಕಾಮ. ಧರ್ಮವಿಲ್ಲದಿದ್ದರೆ ಕಾಮ ಅರ್ಥ ಎರಡೂ ಬಂಜೆಯ ಮಗುವಿನಂತೆ ಅಲಭ್ಯವಾಗಿರುತ್ತವೆ.

### ಹೋದಲ್ಲೆಲ್ಲ ಹಿಂಬಾಲಿಸುವುದು ಒಂದೇ

**ಧರ್ಮಾದರ್ಥಸ್ತಥಾ ಕಾಮೊ ಧರ್ಮಾಲ್ಲೋಕದ್ವಯಂ ತಥಾ ।**
**ಧರ್ಮ ಏಕೋಽನುಯಾತ್ಯೇನಂ ಯತ್ರ ಕ್ವಚನ ಗಾಮಿನಮ್ ॥**

ಧರ್ಮದಿಂದಲೇ ಅರ್ಥವು ಮತ್ತು ಕಾಮವು ದೊರಕುತ್ತದೆ. ಧರ್ಮದಿಂದ ಈ ಲೋಕದಲ್ಲಿ ಸುಸ್ಥಿತಿ. ಪರಲೋಕದಲ್ಲಿ ಸದ್ಗತಿ ಲಭ್ಯವಾಗುತ್ತವೆ. ಮನುಷ್ಯನು ಎಲ್ಲಿಯೇ ಹೋಗಲಿ, ಧರ್ಮವೊಂದೇ ಅವನನ್ನು ಅನುಸರಿಸುವದು.

### ಹುಟ್ಟುಸಾವುಗಳಲ್ಲಿ ಏಕರೂಪತೆ

**ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ।**
**ಏಕೋ ಹಿ ಜಾಯತೇ ಜಂತುರೇಕ ಏವ ವಿಪದ್ಯತೆ ॥**

ಶರೀರದೊಡನೆ ಮಾನವನ ಸರ್ವವೂ ನಾಶವಾಗಿ ಹೋಗುತ್ತದೆ. ಹುಟ್ಟುವಾಗ ಮನುಷ್ಯನು ಒಬ್ಬನೇ ಹುಟ್ಟುತ್ತಾನೆ. ಸಾಯುವಾಗಲೂ ಒಬ್ಬನೇ ಸಾಯುತ್ತಾನೆ.

### ಬಂಧುಮಿತ್ರರು ಬರುವದಿಲ್ಲ. ಧರ್ಮವು ಬಿಡುವುದಿಲ್ಲ

**ಧರ್ಮಸ್ತಮನುಯಾತ್ಯೇಕೋ ನ ಸುಹೃನ್ನ ಚ ಬಾಂಧವಾಃ ।**
**ಕ್ರಿಯಾ ಸೌಭಾಗ್ಯ ಲಾವಣ್ಯಂ ಸರ್ವಂ ಧರ್ಮೇಣ ಲಭ್ಯತೇ ॥**

ಮರಣಹೊಂದಿದ ಮನುಷ್ಯನನ್ನು ಅವನ ಬಂಧುಗಳಾಗಲಿ, ಮಿತ್ರರಾಗಲಿ ಹಿಂಬಾಲಿಸಿ ಹೋಗುವುದಿಲ್ಲ. ಮೃತ ಮನುಷ್ಯನನ್ನು ಬೆಂಬಲಿಸಿ ಹೋಗುವದು ಧರ್ಮ ಒಂದೇ. ಮನುಷ್ಯನಿಗೆ ಸತ್ಕರ್ಮ, ಸೌಭಾಗ್ಯ, ಸೌಂದರ್ಯ ಮುಂತಾದ ಎಲ್ಲವೂ ಧರ್ಮದಿಂದಲೇ ಲಭಿಸುತ್ತವೆ.

### ಧರ್ಮದಿಂದ ದೇವಲೋಕ

**ಬ್ರಹ್ಮೇಂದ್ರೋಪೇಂದ್ರ ಶರ್ವೇಂದ್ರ ಯಮಾಽರ್ಕಾಗ್ನ್ಯನಿಲಾಂಭಸಾಮ್।**
**ಮನೋಹರಾಣಿ ದ್ವೀಪಾನಿ ವರ್ಷಾಣಿ ಸಸುಖಾನಿ ಚ ॥**

**ಧರ್ಮೇಣ ತಾನವಾಪ್ನೋತಿ ಪುರುಷಃ ಪುರುಕ್ಷೇಪ್ಸಿತಾನ್**
**ಕ್ರಿಯಾ ಸೌಭಾಗ್ಯ ಲಾವಣ್ಯಂ ಸರ್ವಂ ಧರ್ಮೇಣ ಲಭ್ಯತೆ ॥**

ಬ್ರಹ್ಮ, ಇಂದ್ರ, ವಿಷ್ಣು, ಶಿವ, ಚಂದ್ರ, ಯಮ, ಸೂರ್ಯ, ಅಗ್ನಿ, ವಾಯು, ವರುಣ, ವಸು,ಅಶ್ವಿನಿ, ಕುಬೇರ ಮುಂತಾದ ದೇವತೆಗಳ ಸರ್ವಾಭೀಷ್ಟಗಳನ್ನು ಪೂರೈಸುವ ದಿವ್ಯಲೋಕಗಳನ್ನೂ, ಮನೋಹರವಾದ ದ್ವೀಪಗಳನ್ನೂ, ಸಕಲ ವಿಧ ಸುಖ ಸೌಂದರ್ಯ, ಸೌಭಾಗ್ಯಗಳನ್ನೂ ನರರು ಧರ್ಮದಿಂದ ಸುಲಭವಾಗಿ ಹೊಂದುತ್ತಾರೆ.

## ನಂದನ ವನಕ್ಕೆ ಒಳದಾರಿ

ಪ್ರಯಾಂತಿ ಧರ್ಮೇಣ ನರಾಸ್ತಥೈವ ಹರಿಪೂಜನಾತ್ ।
ನಂದನಾದೀನಿ ಮುಖ್ಯಾನಿ ದೇವೋದ್ಯಾನಾನಿ ಯಾನಿ ಚ ॥

ಮನುಷ್ಯರು ಧರ್ಮದಿಂದಲೇ ಮಾನವರಿಗೆ ದುರ್ಲಭವಾದ ನಂದನವನವೇ ಮೊದಲಾದ ದೇವೋದ್ಯಾನಗಳನ್ನು ಹೊಂದುತ್ತಾರೆ. ಶ್ರೀಹರಿಯ ಪೂಜೆಯಿಂದ ಪ್ರಧಾನವಾದ ಸುಖ ಸೌಭಾಗ್ಯಗಳೆಲ್ಲವೂ ದೊರಕುತ್ತವೆ.

## ಪುಣ್ಯದ ಹಣ್ಣು, ಸ್ವರ್ಗದ ಹೆಣ್ಣು

ತಾನಿ ಪುಣ್ಯೇನ ಲಭ್ಯಂತೆ ನಾಕಪೃಷ್ಠಂ ತಥಾ ನರೈಃ ।
ವಿಮಾನಾನಿ ವಿಚಿತ್ರಾಣಿ ತಥೈವಾಪ್ಸರಸಃ ಶುಭಾಃ ।
ತೈಜಸಾನಿ ಶರೀರಾಣಿ ಸದಾ ಪುಣ್ಯವತಾಂ ಫಲಮ್ ॥

ಮನುಷ್ಯರು ಸ್ವರ್ಗವನ್ನೂ ವಿಚಿತ್ರವಾದ ದೇವವಿಮಾನಗಳನ್ನೂ, ಸುಂದರಿಯರಾದ ಅಪ್ಸರಾಸ್ತ್ರೀಯರನ್ನೂ ಪುಣ್ಯಪುರುಷರು ಹೊಂದಲು ಅರ್ಹವಾದ ತೇಜೋಮಯ ಶರೀರಗಳನ್ನೂ ಧರ್ಮದಿಂದ ಹೊಂದುತ್ತಾರೆ.

## ಪುಣ್ಯಯೋಗ ರಾಜಭೋಗ

ರಾಜ್ಯಂ ನೃಪತಿ ಪೂಜಾ ಚ ಕಾಮ ಸಿದ್ಧಿಸ್ತಥೇಪ್ಸಿತಾ ।
ಸಂಸ್ಕಾರಾಣಿ ಚ ಮುಖ್ಯಾನಿ ಫಲಂ ಪುಣ್ಯಸ್ಯ ದೃಶ್ಯತೇ ।
ರುಕ್ಮ ವೈಢೂರ್ಯ ದಂಡಾನಿ ಚಂಡಾಂಶು ಸದೃಶಾನಿ ಚ ।
ಚಾಮರಾಣಿ ಸುರಾಧ್ಯಕ್ಷ ಭವಂತಿ ಶುಭ ಕರ್ಮಣಾ ॥

ರಾಜ್ಯವೂ, ರಾಜರಿಂದ ಪೂಜೆಯೂ, ಅಭೀಷ್ಟ ಕಾಮಸಿದ್ಧಿಯೂ, ಪಟ್ಟಾಭಿಷೇಕ ಮೊದಲಾದ ಸಂಸ್ಕಾರಗಳೂ ಬಹುಪುಣ್ಯದ ಫಲವಾಗಿ ಮಾನವರಿಗೆ ದೊರಕುತ್ತವೆ. ಬಂಗಾರದ ಹಿಡಿಕೆ, ವೈಢೂರ್ಯದ ದಂಡವುಳ್ಳ ಸೂರ್ಯನಂತೆ ಹೊಳೆಯುವ ಚಾಮರಗಳು ಛತ್ರಗಳು ಪುಣ್ಯಕರ್ಮಮಾಡಿದವರಿಗೆ ಮಾತ್ರ ಲಭಿಸುತ್ತವೆ.

ಜಯ ಶಂಖ ಸ್ವರೌಘೇಣ ಸೂತ ಮಾಗಧನಿಃಸ್ವನೈಃ ।
ವರಾಪನಂ ಸಭೃಂಗಾರಂ ಫಲಂ ಪುಣ್ಯಸ್ಯ ಕರ್ಮಣಃ ॥

ಶಂಖಧ್ವನಿಯಂತೆ ಇರುವ ಕಂಚಿನ ಕಂಠದಿಂದ ಬಂದಿವೈತಾಲಿಕರ, ಜಯಘೋಷ, ಶ್ರೇಷ್ಠವಾದ ಆಸನ ಮುಂತಾದವುಗಳೆಲ್ಲ ಸತ್ಕರ್ಮಗಳ ಫಲರೂಪವಾಗಿರುತ್ತವೆ.

## ಸುಖಸಂಭಾರ ಪುಣ್ಯದ ಉಪಹಾರ

ವರಾನ್ನಪಾನಂ ಪೀತಂ ಚ ಭೃತ್ಯ ಮಾಲ್ಯಾನುಲೇಪನಂ ।
ರತ್ನವಸ್ತ್ರಾಣಿ ಮುಖ್ಯಾನಿ ಫಲಂ ಪುಣ್ಯಸ್ಯ ಕರ್ಮಣಃ ॥

ಉತ್ತಮವಾದ ಆಹಾರ, ರುಚಿಕರ ಪಾನೀಯ, ಮಧುರ ಸಂಗೀತ, ವಿನೀತರಾದ

ಆಳುಗಳು, ಸುಗಂಧಿ ಮಾಲೆಗಳು, ಪರಿಮಳ ಲೇಪನ, ರತ್ನದ ಆಭರಣ, ಬೆಲೆಬಾಳುವ ಬಟ್ಟೆ ಮುಂತಾದವುಗಳು ಮಾನವನಿಗೆ ಅವನು ಹಿಂದೆ ಮಾಡಿದ ಪುಣ್ಯಕರ್ಮದ ಫಲರೂಪವಾಗಿ ಪ್ರಾಪ್ತವಾಗುತ್ತಿವೆ.

**ರೂಪೌದಾರ್ಯ ಗುಣೋಪೇತಾ ಸ್ತ್ರಿಯಶ್ಚಾತಿ ಮನೋಹರಾಃ ।**
**ವಾಸಃ ಪ್ರಾಸಾದ ಪೃಷ್ಠೇಷು ಭವಂತಿ ಶುಭ ಕರ್ಮಿಣಃ ॥**

ರೂಪದಿಂದ ಚೆಲುವರೂ ಔದಾರ್ಯದಿಂದ ದೊಡ್ಡ ಮನಸ್ಸಿನವರು, ಗುಣಗಳಿಗೆಲ್ಲ ಖಣಿಗಳಂತೆ ಇರುವವರೂ ಆದ ಸುಂದರ ಸ್ತ್ರೀಯರೂ, ಭವ್ಯದಿವ್ಯವಾದ ಮನೆಗಳಲ್ಲಿ ವಾಸವೂ ಜನ್ಮಾಂತರದಲ್ಲಿ ಶುಭಕರ್ಮ ಮಾಡಿದವರಿಗೆ ಮಾತ್ರ ದೊರಕುತ್ತವೆ.

**ಸುವರ್ಣ ಕಿಂಕಿಣೀ ಮಿಶ್ರ ಚಾಮರಾऽಪೀಡ ಧಾರಿಣಃ ।**
**ವಹಂತಿ ತುರಗಾ ದೇವ ನರಂ ಪುಣ್ಯೇನ ಕರ್ಮಣಾ ॥**

ಬಂಗಾರದ ಕಿರುಗೆಜ್ಜೆಗಳುಳ್ಳ ಚಾಮರಗಳನ್ನು ತಲೆಯ ಮೇಲೆ ಸಿಕ್ಕಿಸಿದ ಕುದುರೆಗಳನ್ನು ಹೂಡಿದ ರಥದಲ್ಲಿ ಪುಣ್ಯಕರ್ಮ ಮಾಡಿದ ಮನುಷ್ಯನು ಪ್ರಯಾಣ ಮಾಡುತ್ತಾನೆ.

## ಪುಣ್ಯದ ದ್ವಾರಗಳು

**ತಸ್ಯ ದ್ವಾರಾಣಿ ಯಜನಂ ತಪೋ ದಾನಂ ದಮಃ ಕ್ಷಮಾ ।**
**ಬ್ರಹ್ಮಚರ್ಯಂ ತಥಾ ಸತ್ಯಂ ತೀರ್ಥಾನುಮರಣಂ ಶುಭಂ ॥**
**ಸ್ವಾಧ್ಯಾಯ ಸೇವಾ ಸಾಧೂನಾಂ ಸಹವಾಸಃ ಸುರಾರ್ಚನಮ್ ॥**
**ಗುರೂಣಾಂ ಚೈವ ಶುಶ್ರೂಷಾ ಬ್ರಾಹ್ಮಣಾನಾಂ ಚ ಪೂಜನಂ ।**
**ಇಂದ್ರಿಯಾಣಾಂ ಜಯಶ್ಚೈವ ಬ್ರಹ್ಮಚರ್ಯಮಮತ್ಸರಮ್ ॥**

ಈ ಪುಣ್ಯಕರ್ಮಗಳನ್ನು ಇಲ್ಲಿ ಮುಂದೆ ಹೇಳುವ ಸತ್ಕಾರ್ಯಗಳ ದ್ವಾರದಿಂದ ಸಾಧಿಸಿಕೊಳ್ಳಬೇಕು. ಯಜ್ಞ, ತಪಸ್ಸು, ದಾನ, ಇಂದ್ರಿಯನಿಗ್ರಹ, ಕ್ಷಮಾ, ಬ್ರಹ್ಮಚರ್ಯ, ತೀರ್ಥಕ್ಷೇತ್ರಯಾತ್ರೆ, ಪುಣ್ಯತೀರ್ಥಗಳಲ್ಲಿ ಮರಣ, ಸತ್ಯ, ಸ್ವಾಧ್ಯಾಯ, ಅಧ್ಯಯನ, ಸಾಧುಗಳ ಸೇವೆ, ದೊಡ್ಡವರ ಸಹವಾಸ, ದೇವತಾಪೂಜನ, ಗುರುಗಳ ಶುಶ್ರೂಷೆ, ಬ್ರಾಹ್ಮಣರ ಆರಾಧನೆ, ಇಂದ್ರಿಯಗಳ ನಿಗ್ರಹ, ಮಾತ್ಸರ್ಯಾದಿ ರಾಹಿತ್ಯ ಇವುಗಳಿಂದ ಪುಣ್ಯಸಂಪಾದಿಸಿ, ಮೇಲೆ ಹೇಳಿದ ಭೋಗ ಭಾಗ್ಯಗಳನ್ನು ಮಾನವರು ಪಡೆಯುವರು.

**ತಸ್ಮಾದ್ಧರ್ಮಃ ಸದಾ ಕಾರ್ಯೋ ನಿತ್ಯಮೇವ ವಿಜಾನತಾ ।**
**ನ ಹಿ ಪ್ರೇಕ್ಷತೇ ಮೃತ್ಯುಃ ಕೃತಮಸ್ಯ ನ ವಾ ಕೃತಮ್ ॥**

ಆದುದರಿಂದ ಬುದ್ಧಿವಂತ ಮನುಷ್ಯನು ಯಾವಾಗಲೂ ಒಳ್ಳೆಯ ಧರ್ಮವನ್ನೇ ಮಾಡಬೇಕು. ಮೃತ್ಯುವು ಇವನು ಇತರ ಕಾರ್ಯಗಳನ್ನು ಮಾಡಿದ್ದನ್ನು, ಬಿಟ್ಟಿದ್ದನ್ನು ನೋಡುವುದಿಲ್ಲ.

## ಎಳಮೆಯಲ್ಲಿಯೇ ಧರ್ಮ ಮಾಡಬೇಕು

ಬಾಲಕನಿರುವಾಗಲೇ ಧರ್ಮವನ್ನು ಆಚರಿಸಬೇಕು. ಯಾಕೆಂದರೆ ಈ ಜೀವನವು ಚಂಚಲವಾಗಿರುತ್ತದೆ. ಯಾರಿಗೆ ಗೊತ್ತು? ಮೃತ್ಯು ಯಾವನ ಮೇಲೆ ಎಂದು ಬಂದು ಎರಗುವದೆಂದು!

## ಸಾವಿನ ಮುಂಚೆ ಮೃತ್ಯುಂಜಯನಂತೆ ಲೀಲೆ

**ಪಶ್ಯತೋಽಪ್ಯಸ್ಯ ಲೋಕಸ್ಯ ಮರಣಂ ಪುರತಃ ಸ್ಥಿತಮ್ ।**
**ಅಮರಸ್ಯೇವ ಚರಿತಮತ್ಯಾಶ್ಚರ್ಯಂ ಸುರೋತ್ತಮ ॥**

ಕಣ್ಣೆದುರಿಗೆ ಮೃತ್ಯುವು ಬಾಯಿ ತೆರೆದು ನಿಂತಿದ್ದರೂ ಮಾನವನು ತನಗೆ ಸಾವೇ ಇಲ್ಲ ನಾನು ಅಮರ ಎನ್ನುವಂತೆ ನಡೆಯುತ್ತಿರುತ್ತಾನೆ. ಇದು ನಿಜವಾಗಿಯೂ ಆಶ್ಚರ್ಯದ ಮಾತಾಗಿದೆ.

**ಯುವತ್ವಾಽಪೇಕ್ಷಯಾ ಬಾಲೋ ವೃದ್ಧತ್ವಾಽಪೇಕ್ಷಯಾ ಯುವಾ ।**
**ಮೃತ್ಯೋರುತ್ಸಂಗಮಾರೂಢಃ ಸ್ಥವಿರಃ ಕಿಮಪೇಕ್ಷತೆ ॥**

ಬಾಲಕನು ಯುವಕನಾಗಬೇಕೆಂದು, ಯುವಕನು ಹಿರಿಯನಾಗಬೇಕೆಂದು, ಕ್ರಮವಾಗಿ ಮೃತ್ಯುವಿನ ತೊಡೆಯನ್ನುಏರುತ್ತಾರೆ. ಆದರೆ ಮುದುಕನು ಮಾತ್ರ ಯಾವ ಅಪೇಕ್ಷೆಯಿಲ್ಲದೆ ಮೃತ್ಯುವಿನ ತೊಡೆಯ ಮೇಲೆ ಕುಳಿತಿರುತ್ತಾನೆ.

## ಪ್ರಾಣಿಗಳಿಗೆ ಅಭಯವೆಂಬುದೇ ಇಲ್ಲ

**ತತ್ರಾಪಿ ಏಂದತಸ್ತ್ರಾಣಂ ಮೃತ್ಯುನಾ ತಸ್ಯ ಕಾ ಗತಿಃ ।**
**ನ ಭಯಂ ಮರಣಂ ಚೈವ ಪ್ರಾಣಿನಾಮಭಯಂ ಕ್ವಚಿತ್ ।**
**ತತ್ರಾಪಿ ನಿರ್ಭಯಾಃ ಸಂತಃ ಸದಾ ಸುಕೃತ ಕಾರಿಣಃ ॥**

ಈ ಮುಪ್ಪಿನ ಕಾಲದಲ್ಲಿಯೂ ಕೆಲವು ದಿನ ಬದುಕಿದ್ದ ಮನುಷ್ಯನಿಗೆ ಮುಂದೆ ಏನು ಗತಿ? ಭಯ-ಮರಣ ಇವೆರಡರ ಹೊರತು ಅವನಿಗೆ ಬಿಡುಗಡೆಯಿಲ್ಲ. ಒಟ್ಟಾರೆ ಪ್ರಾಣಿಗಳಿಗೆ ಅಭಯ ಎನ್ನುವದೇ ಇಲ್ಲ. ಇಂತಹ ಮುಪ್ಪು, ಸಾವು, ಬಂದಾಗಲೂ ನಿರ್ಭಯರಾಗಿ ಇರುವ ಪುಣ್ಯಾತ್ಮರೆಂದರೆ ಯಾವಾಗಲೂ ಧರ್ಮಕಾರ್ಯ ಮಾಡುತ್ತಿರುವ ಸಜ್ಜನರು ಮಾತ್ರ. ಅವರಿಗೆ ಮುಪ್ಪಿನ ಅಥವಾ ಮರಣದ ಭಯವಿಲ್ಲ.

## ಸುಭಾಷಿತಗಳು

## ಮಹಾದಾನಗಳು

**ಯಸ್ಮಾದ್ವಿಷಸಹಸ್ರೇಣ ಮಹಾದಾನಾನಿ ಸರ್ವದಾ ।**
**ರಕ್ಷಂತೇ ದೇವತಾಃ ಸರ್ವಾ ಏಕೈಕಮಪಿ ಭೂತಲೇ ॥**
**ಏಷಾಮನ್ಯತಮಂ ಕುರ್ಯಾದ್ವಾಸುದೇವ ಪ್ರಸಾದತಃ ।**
**ನ ಶಕ್ಯಮನ್ಯಥಾ ಕರ್ತುಮಸಿ ಶಕ್ರೇಣ ಭೂತಲೇ ॥**

ಈ ಮಹಾದಾನಗಳು ಸುಲಭವಾಗಿ ನೆರವೇರದಂತೆ ದೇವತೆಗಳು ಸಾವಿರಾರು ವಿಘ್ನಗಳನ್ನು ತಂದೊಡ್ಡುವರು. ಇವುಗಳಲ್ಲಿ ಒಂದು ದಾನಮಾಡುವವರಿದ್ದರೂ ವಾಸುದೇವನ ಅನುಗ್ರಹ ಬೇಕು. ಅದಿಲ್ಲದಿದ್ದರೆ ದೇವೇಂದ್ರನೇ ಆಗಲಿ, ಭೂಲೋಕದಲ್ಲಿ ಅವುಗಳನ್ನು ನಡೆಸಲಾರನು.

**ತಸ್ಮಾದಾರಾಧ್ಯ ಗೋವಿಂದಮುಮಾಪತಿ ವಿನಾಯಕೌ ।**
**ಮಹಾ ದಾನ ಮುಖಂ ಕುರ್ಯಾದ್ವಿಪ್ರೈಶ್ಚೈವಾನುಮೋದಿತಃ ॥**

ಆದಕಾರಣ ಗೋವಿಂದನನ್ನೂ, ಪರಮೇಶ್ವರನನ್ನೂ, ಗಣಪತಿಯನ್ನೂ, ಮೊದಲು ಪೂಜಿಸಿ, ಬ್ರಾಹ್ಮಣರ ಅನುಗ್ರಹ ಪಡೆದು ಈ ಮಹಾದಾನ ಯಜ್ಞ ಮಾಡಬೇಕು.

## ದಾನ ಮಾಡುವದು ಎಲ್ಲಿ, ಯಾವಾಗ?

**'ದ್ರವ್ಯ ಬ್ರಾಹ್ಮಣ ಲಾಭೇ ವಾ ಶ್ರದ್ಧಾ ವಾ ಯತ್ರ ಜಾಯತೇ ।**
**ತೀರ್ಥೇ ವಾಽಽಯತನೇ ಗೋಷ್ಠೇ ಕೂಪಾಽರಾಮಽಸರಿತ್ಸು ಚ ॥**

ಸಂಪತ್ತು ಹಾಗೂ ಸದ್ಬ್ರಾಹ್ಮಣರು ದೊರೆತಾಗಲೂ ಈ ದಾನಗಳನ್ನು ಕೊಡಬಹುದು. ಪುಣ್ಯತೀರ್ಥಗಳು, ದೇವಸ್ಥಾನ, ದನದ ಕೊಟ್ಟಿಗೆ, ಬಾವಿ, ನದಿತೀರ, ತೋಟ ಮುಂತಾದ ಸ್ಥಾನಗಳು ದಾನ ಕೊಡಲಿಕ್ಕೆ ಯೋಗ್ಯವಾದವು.

**ಗೃಹೇ ವಾಯತನೇ ವಾಪಿ ತಡಾಗೇ ರುಚಿರೇ ತಥಾ ।**
**ಮಹಾದಾನಾನಿ ದೇಯಾನಿ ಸಂಸಾರ ಭಯ ಭೀರುಣಾ ॥**

ದೇವಸ್ಥಾನ, ಮನೆ ಅಥವಾ ಮನೋಹರವಾದ ಕೆರೆಯ ದಡ ಇತ್ಯಾದಿ ಸ್ಥಳಗಳು ಈ ಮಹಾದಾನ ಸಮಾರಂಭಗಳಿಗೆ ಯೋಗ್ಯವಾದವುಗಳು.

## ಮೃತ್ಯು ಕತ್ತಿಗೆ ಕೈಹಾಕಿದೆ

**''ಅನಿತ್ಯಂ ಜೀವಿತಂ ಯಸ್ಮಾದ್ವಸು ಚಾತೀವ ಚಂಚಲಂ ।**
**ಕೇಶೇಷ್ವಿವ ಗೃಹೀತಃ ಸನ್ ಮೃತ್ಯುನಾ ಧರ್ಮಮಾಚರೇತ್ ॥''**

ಮನುಷ್ಯ ಜೀವನವು ಶಾಶ್ವತವಲ್ಲ. ಹಣವು ಒಂದೇ ಕಡೆ ಸ್ಥಿರವಾಗಿ ನಿಲ್ಲತಕ್ಕದ್ದೂ ಅಲ್ಲ. ಆದುದರಿಂದ ಮೃತ್ಯು ಯಾವಾಗಲೂ ನಮ್ಮ ಜುಟ್ಟನ್ನು ಹಿಡಿದು ಕೊಂಡಿರುವದೆಂದೇ ನಂಬಿಕೊಂಡು ತಡಮಾಡದೆ ಧರ್ಮಕಾರ್ಯವನ್ನು ಮಾಡಬೇಕು.

## ಆಚಾರ್ಯನ ಲಕ್ಷಣ

**''ವಿಧಾನದಕ್ಷಾಃ ಪಟವೋಽನುಕೂಲಾ ।**
**ಯೇ ಚಾಽಽರ್ಯ ದೇಶ ಪ್ರಭವಾ ದ್ವಿಜೇಂದ್ರಾಃ ।**

ಪುಣ್ಯಭೂಮಿಯಲ್ಲಿ ಹುಟ್ಟಿದ ಮತ್ತು ಧರ್ಮಕಾರ್ಯ ಮಾಡಿಸುವಲ್ಲಿ ಪರಿಣತರಾದವರು ಯೋಗ್ಯ ಬ್ರಾಹ್ಮಣರೆನಿಸುವರು.

**ಗುರುಶ್ಚ ವೇದಾಂತವಿದಾರ್ಯವಂಶ**
**ಸಮುದ್ಭವಃ ಶೀಲಕುಲಾಧಿರೂಪಃ ॥**

ಆಚಾರ್ಯನು ವೇದಾಂತವಿಶಾರದ ಹಾಗೂ ಆರ್ಯವಂಶ ಸಂಭೂತನಾಗಿ ಕುಲಶೀಲ ರೂಪಗಳಲ್ಲಿ ಶ್ರೇಷ್ಠನಾಗಿರಬೇಕು.

**ಕೇಯೂರ ಕಂಠಾಭರಣಾಭಿರಾಮಃ ।**
**ಪ್ರಸನ್ನ ಗಂಭೀರ ಸ್ವರ ಪ್ರತೀಕಃ ।**
**ಪೀತಾಂಬರಃ ಕುಂಡಲೀ ಹೇಮ ಸೂತ್ರಃ ॥**
**ಪುರಾಣ ಶಾಸ್ತ್ರಾಽಭಿರತೋಽತಿದಕ್ಷಃ ।**

ಆಚಾರ್ಯನು ಕಾರ್ಯಗಳಲ್ಲಿ ಬಹು ಸಮರ್ಥನಾಗಿದ್ದು, ಪ್ರಸನ್ನ ಹಾಗೂ ಗಂಭೀರ ವಚನ ಉಳ್ಳವನಾಗಿರಬೇಕು. ಪುರಾಣಶಾಸ್ತ್ರಗಳಲ್ಲಿ ಆತನಿಗೆ ಅಭಿರುಚಿಯಿರಬೇಕು. ಶುಭ್ರವಸ್ತ್ರ ಧರಿಸಿ, ಚಿನ್ನದ ಉಡದಾರ, ತೋಳುಬಳೆ ಧರಿಸಿರಬೇಕು.

## ಪಾಖಂಡಿಯಿಂದ ಕುಲನಾಶ ಖಂಡಿತ

**''ಪಾಷಂಡಿನಂ ಯಸ್ತು ಕರೋತಿ ಭಕ್ತ್ಯಾ ।**
**ವಿಹಾಯ ವಿಪ್ರಾನ್ ಶ್ರುತಿ ಧರ್ಮ ಯುಕ್ತಾನ್ ।**
**ಗುರುಂ ಪ್ರತಿಷ್ಠಾದಿಷು ತತ್ರ ನೂನಂ ।**
**ಕುಲಕ್ಷಯಃ ಸ್ಯಾದಚಿರಾದಪೂಜ್ಯಃ ॥**

ವೇದಧರ್ಮ ನಿರತರಾದ ಬ್ರಾಹ್ಮಣರನ್ನು ಬಿಟ್ಟು, ಅಪದ್ಧಶಾಸ್ತ್ರಗಳಲ್ಲಿ ನಿಷ್ಠೆಯಿಟ್ಟವನನ್ನು ಭಕ್ತಿಯಿಂದ ಪ್ರತಿಷ್ಠಾದಿ ಕಾರ್ಯಗಳಲ್ಲಿ ಆಚಾರ್ಯನನ್ನಾಗಿ ಯಾವನು ಮಾಡುವನೋ ಅವನ ವಂಶ ನಾಶವಾಗುವದು. ಮತ್ತು ಅವನು ಮನ್ನಣೆ ಕಳೆದುಕೊಳ್ಳುವನು.

## ಯೋಗ್ಯರಿಂದಾದರೆ ಶ್ಲಾಘ್ಯತೆ

**''ಸ್ಥಾನಂ ಪಿಶಾಚೈಃ ಪರಿಗೃಹ್ಯತೇ ವಾ ।**
**ಅಪೂಜ್ಯತಾಂ ಯಾತ್ಯಚಿರೇಣ ಲೋಕೇ ।**
**ವಿಪ್ರೈಃ ಕೃತಂ ಯಚ್ಛುಭದಂ ಕುಲೇ ಸ್ಯಾತ್ ।**
**ಪ್ರಪೂಜ್ಯತಾಂ ಯಾತಿ ಚಿರಂ ಚ ಕಾಲಂ ॥''**

ದೊಡ್ಡವರಿಂದ ದೇವರ ಸ್ಥಾಪನೆ ಇಲ್ಲದ ದೇವಾಲಯವನ್ನು ಪಿಶಾಚಗಳು ಆಕ್ರಮಿಸುತ್ತವೆ. ಅದು ಬೇಗನೇ ಜಗತ್ತಿನಲ್ಲಿ ಅಪೂಜ್ಯವೆನಿಸುವದು. ವೇದಪಾರಂಗತ ಬ್ರಾಹ್ಮಣರಿಂದ ಪ್ರತಿಷ್ಠಿತವಾದರೆ ಯಜಮಾನನ ವಂಶದ ಏಳಿಗೆಯಾಗುವದು ಮತ್ತು ಚಿರಕಾಲದವರೆಗೂ ಪ್ರಖ್ಯಾತಿ ಪಡೆಯುವದು.

ಇತಿ ಸಂಪೂರ್ಣ ಸರ್ವೇಜನಾಃ ಸುಖಿನೋ ಭವಂತು
ಓಂ ಶಾಂತಿಃ ಶಾಂತಿಃ ಶಾಂತಿಃ



